# ಇತಿಹಾಸ ದರ್ಶನ

## ಸಂಪುಟ ೨೩/೨೦೦೮

೨೦೦೭ರ ಸೆಪ್ಟೆಂಬರ್ ೮ ರಿಂದ ೧೦ರವರೆಗೆ ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿಯ ರಾಮನಗರದ
ಶ್ರೀ ಕನ್ನಿಕಾ ಪರಮೇಶ್ವರಿ ಕಲ್ಯಾಣ ಮಂಟಪದಲ್ಲಿ ಸಮಾವೇಶಗೊಂಡಿದ್ದ ಕರ್ನಾಟಕ ಇತಿಹಾಸ ಅಕಾದೆಮಿಯ
ಇಪ್ಪತ್ತೊಂದನೆಯ ವಾರ್ಷಿಕ ಸಮ್ಮೇಳನದಲ್ಲಿ ಅಕಾದೆಮಿಯ ಸದಸ್ಯರು ಮಂಡಿಸಿದ
ವಿದ್ವತ್ ಪ್ರಬಂಧಗಳ ಸಂಪುಟ

ಸಂಪಾದಕರು

ಡಾ॥ ಎಂ.ಜಿ. ನಾಗರಾಜ್

ಡಾ॥ ಪಿ.ವಿ. ಕೃಷ್ಣಮೂರ್ತಿ



ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು

# ITIHĀSA DARŚANA

The Volume of the Scholarly papers presented and the General body
Proceedings of the 21th Annual Conference of
**The Karnataka Ithihasa Academy** (Regd.,)
held at Ramanagara, Hagaribomannahalli, Ballari District
on 8th, 9th & 10th September 2007

**Volume 23 / 2008**

Pages : **448 + xLviii**

Edited by : **Dr. M. G. Nagaraj**
**Dr. P. V. Krishna murthy**

Published by : Karnataka Itihasa Academy (Regd.)
B.M. Shri Kalabhavana premises
3rd Main, Narasimharaja Colony
Bangalore - 560 019

Price : **Rs. 360/-**

ಬೆಲೆ : ರೂ. ೩೬೦/-

ಪುಟಗಳು : ೪೪೮ + xLvii



### ಪ್ರಬಂಧಕಾರರ ಗಮನಕ್ಕೆ

೧. ಈ ಸಂಪುಟದ ಯಾವುದೇ ಲೇಖನದಲ್ಲಿ ಮತ್ತು ಟಿಪ್ಪಣಿಗಳಲ್ಲಿ ವ್ಯಕ್ತಪಡಿಸಿರುವ **ಅಭಿಪ್ರಾಯಗಳಿಗೆ ಆಯಾ ಲೇಖಕರೇ ಹೊಣೆ.** ಅವು ಅಕಾದೆಮಿಯ ಪರವಾಗಿ ವ್ಯಕ್ತಪಡಿಸಿದ ಅಭಿಪ್ರಾಯಗಳಲ್ಲ.

೨. ಕರ್ನಾಟಕ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲುವ ಬರಹಗಳಿಗೆ 'ಇತಿಹಾಸ ದರ್ಶನ' ಮೀಸಲಾಗಿದೆ.

೩. ಲೇಖನಗಳು **ಹಸ್ತಲಿಖಿತ** ೧೦ ಪುಟಗಳ ಪರಿಮಿತಿಯಲ್ಲಿ ಇರುವುದು ಸೂಕ್ತ. ಲೇಖನಗಳನ್ನು ಹಾಳೆಯ ಒಂದೇ ಮಗ್ಗುಲಲ್ಲಿ ಸ್ಫುಟವಾದ ಅಕ್ಷರಗಳಲ್ಲಿ ಬರೆದಿರಬೇಕು. ಬೆರಳಚ್ಚು ಮಾಡಿಸಿದ್ದರೆ ಅಗತ್ಯವಿರುವೆಡೆ ತಿದ್ದುಪಡಿ ಮಾಡಿರಬೇಕು. ಅಡಿಟಿಪ್ಪಣಿಗಳನ್ನು, ಗ್ರಂಥಲೇಖನಾಧಾರ ವಿವರಗಳನ್ನು ಈಗಾಗಲೇ ಸಂಶೋಧನ ಬರಹಗಳಲ್ಲಿ ವ್ಯಾಪಕವಾಗಿ ಬಳಕೆಯಲ್ಲಿರುವ ಕ್ರಮದಲ್ಲಿ ನೀಡುವುದು ಉತ್ತಮ.

೪. ಲೇಖನಕ್ಕೆ ಸಂಬಂಧಿಸಿದ ಛಾಯಾಚಿತ್ರಗಳನ್ನು ಕಳುಹಿಸುವಲ್ಲಿ, ಚಿತ್ರದ ಹಿಂಬದಿಯಲ್ಲಿ ಚಿತ್ರದ ಶೀರ್ಷಿಕೆ ಮತ್ತು ಲೇಖಕರ ಹೆಸರನ್ನು ಬರೆಯಬೇಕು. ಬರೆಯದೆ ಹೋದರೆ ಚಿತ್ರಗಳ ಪ್ರಕಟಣೆ ಕಷ್ಟವಾಗುತ್ತದೆ.

೫. ಈಗಿನ ೨೦ನೇ ಸಮ್ಮೇಳನದಲ್ಲಿ ಮಂಡಿತ ಪ್ರಬಂಧಗಳನ್ನು ಅನಿವಾರ್ಯ ಕಾರಣಗಳಿಂದ ಅಲ್ಲಿಯೇ ಕೊಡಲಾಗದಿರುವ ಅಕಾದೆಮಿಯ ಸದಸ್ಯ ಲೇಖಕರು, ದಯಮಾಡಿ ತಮ್ಮ ಪೂರ್ಣ ವಿಳಾಸದೊಡನೆ ಸಮ್ಮೇಳನ ಮುಗಿದ ಎರಡು ತಿಂಗಳ ಒಳಗಾಗಿ, **ಸಂಪಾದಕರು, ಇತಿಹಾಸ ದರ್ಶನ,** ಕರ್ನಾಟಕ ಇತಿಹಾಸ ಅಕಾದೆಮಿ, ಬಿ.ಎಂ.ಶ್ರೀ. ಕಲಾಭವನ ಆವರಣ, ೩ನೇ ಮುಖ್ಯರಸ್ತೆ, ನರಸಿಂಹರಾಜ ಕಾಲೋನಿ, ಬೆಂಗಳೂರು-೫೬೦ ೦೧೯, ಈ ವಿಳಾಸಕ್ಕೆ ಕಳುಹಿಸಬೇಕಾಗಿ ಕೋರಿದೆ.

೬. ಪ್ರಬಂಧದ ಲೇಖನದ ನಕಲು ಅಥವಾ ಜೆರಾಕ್ಸ್ ಪ್ರತಿಯ ಬದಲು ಮೂಲಪ್ರತಿಯನ್ನೆ ದಯವಿಟ್ಟು ಕಳುಹಿಸಿ. ಹಾಗೆಯೇ ಲೇಖನಗಳಲ್ಲಿ **ಲೇಖಕರು ತಮ್ಮ ಈಚಿನ ಸರಿಯಾದ ವಿಳಾಸವನ್ನು ದಾಖಲಿಸಲು ದಯವಿಟ್ಟು ಮರೆಯಬಾರದೆಂದು ಪ್ರಾರ್ಥಿಸಿದೆ.**

೭. ಸಮ್ಮೇಳನದಲ್ಲಿ ಮಂಡಿಸಿದ ಲೇಖನಗಳನ್ನು ಬೇರೆಡೆ ಪ್ರಕಟ ಮಾಡಿದ್ದರೆ ಅಥವಾ ಬೇರೆಡೆ ಪ್ರಕಟನೆಗೆ ಕಳುಹಿಸಿದ್ದರೆ ದಯವಿಟ್ಟು ತಿಳಿಸಬೇಕೆಂದು ವಿನಂತಿ. ಮಂಡಿತ ಪ್ರಬಂಧಗಳು ಮೊದಲಿಗೆ ಅಕಾದೆಮಿಗೆ ಮೀಸಲು ಕಾಣಿಕೆ ಅಲ್ಲವೆ !

ಲಕ್ಷ್ಮೀ ಮುದ್ರಣಾಲಯ
LAKSHMI MUDRANALAYA
ISO 9001-2000
ಚಾಮರಾಜಪೇಟೆ, ಬೆಂಗಳೂರು-೧೮
ದೂರವಾಣಿ : ೨೬೬೧ ೩೧೨೩, ೨೬೬೧ ೮೭೫೨



## ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಸಂಸ್ಥಾನ ಪೀಠ

ಬಾಳೇಹೊನ್ನೂರು–೫೭೭ ೧೧೨ ಚಿಕ್ಕಮಗಳೂರು ಜಿಲ್ಲೆ

**ಶ್ರೀಮದ್ ರಂಭಾಪುರಿ ವೀರಸಿಂಹಸನಾಧೀಶ್ವರ ಶ್ರೀ ಶ್ರೀ ಶ್ರೀ ೧೦೦೮ ಜಗದ್ಗುರು ಪ್ರಸನ್ನ ರೇಣುಕ ವೀರಸೋಮೇಶ್ವರ ರಾಜದೇಶಿಕೇಂದ್ರ ಶಿವಾಚಾರ್ಯ ಭಗವತ್ಪಾದರು**

ದಿನಾಂಕ : ೮–೯–೦೮

ವಾಸ್ತವ್ಯ : ಬೆಂಗಳೂರು

### ಶುಭಾಶೀರ್ವಾದ ಸಂದೇಶ

ಜಗತ್ತನ್ನು ಬೆಳಗಲು ಸೂರ್ಯ ಬೇಕು. ಬದುಕನ್ನು ಬೆಳಗಲು ಅಮೂಲ್ಯ ಪುಸ್ತಕಗಳು ಬೇಕು. ಮಾನವನ ಉಸಿರಾಟಕ್ಕೆ ಪುಪ್ಪಸಗಳು ಎಷ್ಟು ಅವಶ್ಯಕವೋ ಅಷ್ಟೇ ಈ ದೇಶದ ಜೀವಂತಿಕೆಗೆ ಪ್ರಾಚೀನ ಇತಿಹಾಸ ಮತ್ತು ಪರಂಪರೆ ಅಷ್ಟೇ ಮುಖ್ಯ. ಮನುಷ್ಯನಲ್ಲಿ ವೈಚಾರಿಕ ಪ್ರಜ್ಞೆ ಬೆಳೆಯಲಿ ಆದರೆ ನಾಸ್ತಿಕ ಮನೋಭಾವ ಬೆಳೆಯಬಾರದು. ಜಗತ್ತಿನ ಒಳಿತಿಗೆ ಹಿಂದಿನ ಇತಿಹಾಸ ದಿಕ್ಸೂಚಿ ಮತ್ತು ದಾರಿದೀಪ.

ಸತ್ಯ–ಶಾಂತಿ ಧರ್ಮದ ಎರಡು ಕಣ್ಣು. ಸಂಸ್ಕೃತಿ ಮತ್ತು ಪರಂಪರೆ ಇತಿಹಾಸದ ಸಂಕೇತ. ಬೆಳೆಯುತ್ತಿರುವ ಯುವಜನಾಂಗಕ್ಕೆ ಇತಿಹಾಸದ ಪ್ರಜ್ಞೆ ಮತ್ತು ಅರಿವನ್ನು ಮೂಡಿಸುವ ಅಗತ್ಯವಿದೆ. ಧರ್ಮ, ಸಾಹಿತ್ಯ, ಸಂಸ್ಕೃತಿ, ಪರಂಪರೆ, ಸೌಜನ್ಯತೆ ಮತ್ತು ಸಾಮರಸ್ಯ ಸದ್ಭಾವನೆಗಳನ್ನು ಎಲ್ಲರ್ಲೂ ಬೆಳೆಸಬೇಕಾಗಿದೆ. ಮನದ ಶಾಂತಿಗೆ ನೆಮ್ಮದಿಯ ಬದುಕಿಗೆ ಪೂರ್ವಾಚಾರ್ಯರ, ಋಷಿಮುನಿಗಳ ಮತ್ತು ಸಜ್ಜನ ಸಂತರ ಮಾರ್ಗದರ್ಶನ ಅಗತ್ಯವಾಗಿದೆ. ಮನುಷ್ಯ ಧರ್ಮದ ಮಾರ್ಗದಲ್ಲಿ ನಡೆಯಲು ಶಾಸ್ತ್ರ ಭೀತಿಯಾದರೂ ಇರಬೇಕು; ಇಲ್ಲದೇ ಹೋದರೆ ಶಸ್ತ್ರದ ಭೀತಿಯಾದರೂ ಇರಬೇಕಂತೆ. ಇವೆರಡೂ ಇಲ್ಲದೇ ಹೋದರೆ ಸಮಾಜದ ಸ್ವಾಸ್ಥ್ಯ ನಾಶವಾಗುತ್ತದೆ.

ಮನುಷ್ಯ ಸುಖದುಃಖ, ನೋವು ನಲಿವು, ಬಡತನ ಸಿರಿತನ, ಹುಟ್ಟು ಸಾವು ಮತ್ತು ಹಸಿವು ತೃಷೆ ಯಾವಾಗಲೂ ಅನುಭವಿಸುತ್ತಲೆ ಬಂದಿದ್ದಾನೆ. ಸುಖಾಪೇಕ್ಷಿಯಾದ ಮನುಷ್ಯ ಮಾತು ಕೃತಿ ಮತ್ತು ಮನದಲ್ಲಿ ಒಂದಾಗಿ ಕಾರ್ಯ ಮಾಡಬೇಕಾಗಿದೆ. ಧರ್ಮಪ್ರಜ್ಞೆ, ರಾಷ್ಟ್ರಾಭಿಮಾನ, ಕಾಯಕನಿಷ್ಠೆ ಮತ್ತು ಪರಧರ್ಮ ಸಹಿಷ್ಣುತೆ ಎಲ್ಲರಲ್ಲೂ ಜಾಗೃತಗೊಳ್ಳಬೇಕಾಗಿದೆ. ಸಜ್ಜನರಿಗೆ ಬರುವ ಆಪತ್ತು, ದುಷ್ಟರಿಗೆ ಬರುವ ಸಂಪತ್ತು ಬಹಳ ದಿನ ಇರುವುದಿಲ್ಲ. ಸಜ್ಜನರಿಗೆ ಆಪತ್ತು ಬರುವುದು ಕೀರ್ತಿಗಾಗಿ; ದುಷ್ಟರಿಗೆ ಸಂಪತ್ತು ಬರುವುದು ವಿನಾಶಕ್ಕಾಗಿ ಎಂಬುದನ್ನು ಯಾರೂ ಮರೆಯಬಾರದು. ಕರ್ನಾಟಕ ಇತಿಹಾಸ ಅಕಾದೆಮಿ ಅತ್ಯುತ್ತಮ ಕಾರ್ಯ ಕೈಕೊಂಡಿದೆ. ನಾಡಿನ ಇತಿಹಾಸ ಮತ್ತು ಪರಂಪರೆಯ ಅವಶೇಷಗಳ ಬಗೆಗೆ ಬೆಳಕು ಮೂಡಿಸುತ್ತಾ ಬಂದಿದೆ. ಅಕಾದೆಮಿ ಅಧ್ಯಕ್ಷರಾದ ಡಾ॥ ಸೂರ್ಯನಾಥ ಕಾಮತ್ ಅವರ ಮುಂದಾಳತ್ವದಲ್ಲಿ ಎಲ್ಲ ಸದಸ್ಯರು ಪ್ರತಿವರುಷ ವಾರ್ಷಿಕ ಸಮ್ಮೇಳನ ಏರ್ಪಡಿಸಿ ಇತಿಹಾಸಕ್ಕೆ ಹೊಸ ಆಯಾಮ ತರುತ್ತಿರುವುದು ಸಂತಸವನ್ನುಂಟು ಮಾಡಿದೆ. ಇತಿಹಾಸ ದರ್ಶನದ ಸಂಚಿಕೆಯ ಸಂಪಾದಕರಾದ ಡಾ॥ ಎಂ.ಜಿ. ನಾಗರಾಜ್ ಮತ್ತು ಡಾ॥ ಪಿ.ವಿ. ಕೃಷ್ಣಮೂರ್ತಿಯವರು ಪರಿಶ್ರಮ ವಹಿಸಿ ಆದರ್ಶ ಕೃತಿಯನ್ನು ಹೊರತಂದಿದ್ದಾರೆ. ೨೨ನೆಯ ಕರ್ನಾಟಕ ಇತಿಹಾಸ ಅಕಾದೆಮಿ ವಾರ್ಷಿಕೋತ್ಸವ ಸಮಾರಂಭ ಸೆಪ್ಟೆಂಬರ್ ೧೮ರಿಂದ ೨೧ರವರೆಗೆ ಧರ್ಮಸ್ಥಳ ಪುಣ್ಯಕ್ಷೇತ್ರದಲ್ಲಿ ಜರುಗುತ್ತಿರುವುದು ಹೆಮ್ಮೆಯ ಸಂಗತಿ. ಕಳೆದ ಮೂರು ವರುಷದಿಂದ ಬಾಳೆಹೊನ್ನೂರು ಶ್ರೀ ಜಗದ್ಗುರು ರಂಭಾಪುರೀ ವೀರಸಿಂಹಾಸನ ಮಹಾಪೀಠದಿಂದ ಆಶೀರ್ವಾದ ಅನುಗ್ರಹಿಸಿದಂತೆ ಈ ವರುಷವೂ ಸಹ ೨೫೦೦೦/– (ಇಪ್ಪತ್ತೈದು ಸಾವಿರ) ರೂಪಾಯಿಗಳನ್ನು ಆಶೀರ್ವಾದ ರೂಪದಲ್ಲಿ ಕೊಡುತ್ತಿದ್ದೇವೆ. ಇದಕ್ಕಾಗಿ ಶ್ರಮಿಸಿದ ಅಕಾದೆಮಿ ಸದಸ್ಯರಿಗೂ ಹಾಗೂ ಸಂಪಾದಕ ಮಂಡಳಿಗೂ ಶುಭಹಾರೈಕೆಗಳು. ಪರಮ ದಯಾಳು ಶ್ರೀ ಪಾರ್ವತಿ ಪರಮೇಶ್ವರರು ಹಾಗೂ ಶ್ರೀ ಜಗದ್ಗುರು ರೇಣುಕಾಚಾರ್ಯರು ಸರ್ವರಿಗೂ ಮಂಗಲ ಪರಂಪರೆಯನ್ನು ಅನುಗ್ರಹಿಸಲಿ.

**ಇತ್ಯನಂತಶಿವಾಶಿಷಃ**

**‘ಇತಿಹಾಸದರ್ಶನ’ ಪ್ರಕಟಣೆಗೆ ಆಶೀರ್ವದಿತ ಪ್ರಪ್ರಥಮ ನಿರಂತರ ವಾರ್ಷಿಕ ನಿಧಿ ಕೊಡುಗೆ ರೂ. ೨೫,೦೦೦**

★ ಪ್ರತಿ ವಾರ್ಷಿಕನಿಧಿ ಕೊಡುಗೆ ಆರಂಭಿಸಿದ ವರ್ಷ : ೨೦೦೫ ★

ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿಯ ರಾಮನಗರದಲ್ಲಿ ನಡೆದ
ಇಪ್ಪತ್ತೊಂದನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷರು



ಪ್ರೊ. ಲಕ್ಷ್ಮಣ್ ತೆಲಗಾವಿ

ಪ್ರೊ॥ ಕೆ. ಅಭಿಶಂಕರ್
ಅವರ ಸ್ಮರಣಾರ್ಥ
ಸಮ್ಮೇಳನಾಧ್ಯಕ್ಷರಿಗೆ
ನೀಡುವ ನೆನಪಿನ ಶಿಲ್ಪ ಕಾಣಿಕೆ.
ಪ್ರತಿವರ್ಷ ಇತಿಹಾಸ
ಅಕಾದೆಮಿಯ ವಾರ್ಷಿಕ
ಸಮ್ಮೇಳನಾಧ್ಯಕ್ಷರಿಗೆ ಈ
ಕಾಣಿಕೆ ನೀಡಲು
ಶ್ರೀಮತಿ ವಿಶಾಲಕ್ಷಿ ಆಭಿಶಂಕರ್
ಅವರು ಪುದುವಟ್ಟು ಇಟ್ಟಿದ್ದಾರೆ.
(ಶಿಲ್ಪ ಕಲಾವಿದೆ : ಶ್ರೀಮತಿ ಕನಕಮೂ


ಕರ್ನಾಟಕ ಇತಿಹಾಸ ಅಕಾದೆಮಿ (ರಿ.)


ಐತಿಹಾಸಿಕ ಪರಂಪರೆ ಉಳಿಸಿ

ಸುವರ್ಣ ಕರ್ನಾಟಕ ವಿಶೇಷ ಕಾರ್ಯಕ್ರಮ







ಕರ್ನಾಟಕದ ಈ ಭವ್ಯ ಶಿಲ್ಪಕಲಾ ಪರಂಪರೆ ರಕ್ಷಿಸಿ




ಕರ್ನಾಟಕ ಇತಿಹಾಸ ಅಕಾದೆಮಿಯ ೨೧ನೇ ವಾರ್ಷಿಕ ಸಮ್ಮೇಳನಾಧ್ಯಕ್ಷರ ಮೆರವಣಿಗೆ




ಇತಿಹಾಸ ಅಕಾದೆಮಿಯ ಅಧ್ಯಕ್ಷ ಡಾ. ಸೂರ್ಯನಾಥ ಕಾಮತ್ ಅವರಿಂದ ಪ್ರಾಸ್ತಾವಿಕ ಭಾಷಣ



ಮಾನ್ಯ ಸಚಿವ ಶ್ರೀ ಎಂ.ಪಿ. ಪ್ರಕಾಶ್ ಅವರಿಂದ ೨೧ನೇ ವಾರ್ಷಿಕ ಸಮ್ಮೇಳನದ ಉದ್ಘಾಟನೆ




೨೧ನೇ ವಾರ್ಷಿಕ ಸಮ್ಮೇಳನದಲ್ಲಿ **ಇತಿಹಾಸ ದರ್ಶನ**ದ ೨೨ನೇ ಸಂಪುಟದ ಬಿಡುಗಡೆ
ಚಿತ್ರದಲ್ಲಿ : ಡಾ. ಎಸ್.ವಿ. ವೆಂಕಟೇಶಯ್ಯ, ಡಾ. ಸೂರ್ಯನಾಥ ಕಾಮತ್, ಪ್ರೊ. ಲಕ್ಷ್ಮಣ್ ತೆಲಗಾವಿ, ಮಾನ್ಯ ಶ್ರೀ ಎಂ.ಪಿ. ಪ್ರಕಾಶ್, ಶ್ರೀ ಗುರುಮೂರ್ತಿ ಪೆಂಡಕೂರು, ಸಂಪಾದಕದ್ವಯರಾದ ಡಾ. ಎಂ.ಜಿ. ನಾಗರಾಜ್ ಮತ್ತು ಡಾ. ಪಿ.ವಿ. ಕೃಷ್ಣಮೂರ್ತಿ




ಸಮ್ಮೇಳನಾಧ್ಯಕ್ಷ ಪ್ರೊ. ಲಕ್ಷ್ಮಣ್ ತೆಲಗಾವಿಯವರಿಗೆ ಮಾನ್ಯ ಸಚಿವ ಶ್ರೀ ಎಂ.ಪಿ. ಪ್ರಕಾಶ್ ಅವರಿಂದ ಸನ್ಮಾನ
ಚಿತ್ರದಲ್ಲಿ : ಡಾ. ಎಸ್.ವಿ. ವೆಂಕಟೇಶಯ್ಯ, ಡಾ. ಸೂರ್ಯನಾಥ ಕಾಮತ್, ಶ್ರೀ ಗುರುಮೂರ್ತಿ ಪೆಂಡಕೂರು.



ಕರ್ನಾಟಕ ಇತಿಹಾಸ ಅಕಾದೆಮಿಯ ೨೧ನೇ ವಾರ್ಷಿಕ ಸಮ್ಮೇಳನಾಧ್ಯಕ್ಷ
ಪ್ರೊ. ಲಕ್ಷ್ಮಣ್ ತೆಲಗಾವಿಯವರಿಂದ ಭಾಷಣ.



ಸಮ್ಮೇಳನದ ವಿಚಾರಗೋಷ್ಠಿಯಲ್ಲಿ ಡಾ. ಚೆನ್ನಕ್ಕ ಪಾವಟೆ ಅವರಿಂದ ಪ್ರಬಂಧ ಮಂಡನೆ
ಚಿತ್ರದಲ್ಲಿ : ಗೋಷ್ಠಿ ಅಧ್ಯಕ್ಷೆ ಡಾ. ಜ್ಯೋತ್ಸ್ನಾ ಕಾಮತ್, ಡಾ. ಕೆ. ವಸಂತಲಕ್ಷ್ಮಿ, ಡಾ. ದೇವರಕೊಂಡಾರೆಡ್ಡಿ



ಕರ್ನಾಟಕ ಇತಿಹಾಸ ಅಕಾದೆಮಿಯ ೨೧ನೇ ವಾರ್ಷಿಕ ಸಮ್ಮೇಳನದಲ್ಲಿ ಸಭಿಕರು



೨೧ನೇ ವಾರ್ಷಿಕ ಸಮ್ಮೇಳನದಲ್ಲಿ ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆಯಿಂದ
ಐತಿಹಾಸಿಕ ಸ್ಮಾರಕಗಳ ಭಾವಚಿತ್ರಗಳ ಪ್ರದರ್ಶನ



ರಾಮನಗರದ ಜಿ.ವಿ.ಪಿ.ಪಿ. ಸರ್ಕಾರಿ ಪ್ರಥಮ ದರ್ಜೆ ಕಾಲೇಜಿನಲ್ಲಿ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮದಲ್ಲಿ
ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಶಾಸನ ವಿಭಾಗದ ಮುಖ್ಯಸ್ಥ ಡಾ. ಡಿ.ವಿ. ಪರಮಶಿವಮೂರ್ತಿ ಅವರಿಂದ ಉದ್ಘಾಟನಾ ಭಾಷಣ
ಚಿತ್ರದಲ್ಲಿ : ಸರ್ವಶ್ರೀ ಜಿ.ವಿ. ಪೆಂಡಕೂರು, ಪಿ. ಬಸವರಾಜ್, ಟಿ. ರಾಮಲಿಂಗಪ್ಪ, ಡಾ. ಕೆ. ಸತೀಶ್




ಗದಗ ತಾಲ್ಲೂಕು ಹುಲುಕೋಟಿ ಗ್ರಾಮದಲ್ಲಿ ನಡೆದ 'ಐತಿಹಾಸಿಕ ಪರಂಪರೆ ಉಳಿಸಿ' ಕಾರ್ಯಕ್ರಮದಲ್ಲಿ
ಅತಿಥಿ ಪ್ರೊ. ರವೀಂದ್ರ ಕೊಪ್ಪರ ಛೇರಮನ್, ಶ್ರೀ ಡಿ.ಬಿ. ಓದುಗೌಡ ಪ್ರಾಚಾರ್ಯ, ವಿ.ವೈ. ಹರ್ಲಾಪುರ, ಉಪನ್ಯಾಸಕ ಪ್ರೊ. ಕೆ.ಎಂ. ಗೇರ

ಐತಿಹಾಸಿಕ ಪರಂಪರೆ ಉಳಿಸಿ

ಸುವರ್ಣ ಕರ್ನಾಟಕ ವಿಶೇಷ ಕಾರ್ಯಕ್ರಮ

ಕರ್ನಾಟಕದ ಈ ಭವ್ಯ ಶಿಲ್ಪಕಲಾ ಪರಂಪರೆ ರಕ್ಷಿಸಿ

# ಅಧ್ಯಕ್ಷರ ನುಡಿ

ರಾಜ್ಯದ ಈಶಾನ್ಯಕ್ಕಿರುವ ಹಗರಿಬೊಮ್ಮನಹಳ್ಳಿಯಲ್ಲಿ ನಡೆದ ಯಶಸ್ವೀ ಸಮ್ಮೇಳನದ ನಂತರ ರಾಜ್ಯದ ನೈಋತ್ಯಕ್ಕಿರುವ ಶ್ರೀ ಕ್ಷೇತ್ರ ಧರ್ಮಸ್ಥಳದಲ್ಲಿ ೨೨ನೇ ವಾರ್ಷಿಕ ಸಮ್ಮೇಳನವ ನಡೆಯುತ್ತಿದೆ. ಮಾನ್ಯರಾದ ಡಾ. ವೀರೇಂದ್ರ ಹೆಗ್ಗಡೆಯವರ ತೆರೆದ ಹೃದಯದ ಸ್ವಾಗತ ಇದನ್ನು ಸಾಧ್ಯವಾಗಿಸಿದೆ.

**ಇತಿಹಾಸ ಪರಂಪರೆ ಉಳಿಸಿ** ಎಂದು ನಾವು ಆರಂಭಿಸಿದ ಕಾರ್ಯಕ್ರಮ ಜನರಲ್ಲಿ, ಸರಕಾರದಲ್ಲಿ ತೀವ್ರ ಜಾಗೃತಿ ಮೂಡಿಸಿದೆ. ಶಾಲೆ ಕಾಲೇಜುಗಳ ಎನ್.ಎಸ್.ಎಸ್.ಗಳ ಮೂಲಕ ಇಂಥ ಜಾಗೃತಿ ಕಾರ್ಯ ನಡೆಸಿ ಯುಜಿಸಿ ಕೂಡ ಎಲ್ಲ ವಿಶ್ವವಿದ್ಯಾಲಯಗಳ ಎನ್.ಎಸ್.ಎಸ್.ಗಳ ಮೂಲಕ ಸ್ಮಾರಕಗಳ ಸ್ವಚ್ಛತೆ, ರಕ್ಷಣೆಗಳ ಬಗ್ಗೆ ಪುರಾತತ್ವ ಇಲಾಖೆಗಳ ನೆರವಿನಿಂದ ಕಾರ್ಯಶೀಲವಾಗಿದೆ. ರಾಜ್ಯ ಸರಕಾರವು ಪರಿಸರ ರಕ್ಷಣೆಗೆ ರಾಜ್ಯ ಪುರಾತತ್ತ್ವ ಇಲಾಖೆಯಲ್ಲಿ ಒಂದು ವಿಭಾಗ ತೆರೆದು ಎಲ್ಲೆಡೆ 'ಹೆರಿಟೇಜ್' ಕ್ಲಬ್‌ಗಳ ಮೂಲಕ ಕಾರ್ಯಾರಂಭ ಮಾಡಿದೆ. ಇದು ತೀರ ಸಂತಸದ ವಿಷಯ.

ಆದರೆ ಇಂಥ ಕ್ಲಬ್‌ಗಳು ಪಟ್ಟಭದ್ರರ ಕೈಸೇರಬಾರದು. ಸರಕಾರ ಯಾವುದೇ ಚಟುವಟಿಕೆ–ಸಾಕ್ಷರತಾ ಅಂದೋಲನ ಇತ್ಯಾದಿಗಳು ಪಟ್ಟಭದ್ರರ ಕೈಸೇರಿದ ಲಕ್ಷಣಗಳಿವೆ. ಹಾಗಾಗದಂತೆ ನಮ್ಮ ಅಕಾದೆಮಿಯ ಸದಸ್ಯರು ಗಮನಹರಿಸಬೇಕು. ಇಂಥ ಕ್ಲಬ್‌ಗಳಲ್ಲಿ ಪಾಲುಗೊಂಡು ಸೂಕ್ತ ಸಾಧನೆ ಆಗುವಂತೆ ಯತ್ನಿಸಬೇಕು.

ಎರಡು ವರ್ಷಗಳಿಂದ ನಮ್ಮ ಸದಸ್ಯರು ಇಂಥ ಚಟುವಟಿಕೆ ನಡೆಸಿ ಈ ಕಾರ್ಯಕ್ರಮದ ಉದ್ದೇಶವೇನೆಂದು ಅರಿತಿದ್ದಾರೆ. ಪರಂಪರೆ ಉಳಿಸಲು ಸ್ವಯಂ ಸ್ಫೂರ್ತಿಯಿಂದ ದುಡಿಯುವ ಪ್ರಾಜ್ಞರ ತಂಡಗಳು ತಯಾರಾಗಬೇಕು. ಪುರಾತತ್ವ ಇಲಾಖೆಯ ಗಮನಕ್ಕೆ ಬಾರದೆ ಯಾವುದೇ ಸ್ಮಾರಕದ ದುರಸ್ತಿ ಕಾರ್ಯ ಕೈಕೊಳ್ಳಬಾರದು. ಇಂಥ ಚಟುವಟಿಕೆಗಳು ದಾರಿ ತಪ್ಪಿದರೆ ಆ ಬಗ್ಗೆ ಧ್ವನಿ ಎತ್ತಬೇಕು. ಪತ್ರಿಕೆಗಳಿಗೆ, ಅಧಿಕಾರಿಗಳಿಗೆ ಬರೆದು ಎಚ್ಚರಿಸಬೇಕು.

ಹಂಪೆಯಲ್ಲಿನ ಕೆಲವು ಸ್ಮಾರಕಗಳು ದುರುಪಯೋಗವಾಗಿ ಮತೀಯ, ಸಾಮಾಜಿಕ ಸಾಮರಸ್ಯ ಕದಡುವ ವಾತಾವರಣವಿದೆ. ಸರಕಾರ ಈ ಕಡೆ ತೀವ್ರ ಗಮನ ಕೊಡಬೇಕು. ಆಗಬಹುದಾದ ದುರಂತಗಳನ್ನು ತಪ್ಪಿಸಬೇಕು.

ಕರ್ನಾಟಕ ಸುವರ್ಣ ವರ್ಷದಲ್ಲಿ ಅಕಾದೆಮಿಯು ಪ್ರಕಟಿಸಿದ 'ಕರ್ನಾಟಕ ಕೈಗನ್ನಡಿ' ಎಂಬ ಕರ್ನಾಟಕದ ಪರಿಚಯ ನೀಡುವ ಕಿರು ಪುಸ್ತಕಕ್ಕೆ ಕರ್ನಾಟಕ ಸರಕಾರದ ಕನ್ನಡ ಮತ್ತು ಸಂಸ್ಕೃತಿ ಇಲಾಖೆ ಒಂದು ಲಕ್ಷ ರೂ. ಅನುದಾನ ನೀಡಿ ನಮ್ಮ ಕೃತಜ್ಞತೆಗೆ ಪಾತ್ರವಾಗಿದೆ. ಈ ಪುಸ್ತಕ, ಸುವರ್ಣ ವರ್ಷಕ್ಕೆ ಅಕಾದೆಮಿ ನೀಡಿದ ಕಾಣಿಕೆಯೆಂದು ಹೇಳಲು ಹೆಮ್ಮೆ ಎನಿಸುತ್ತದೆ.

**ಸೂರ್ಯನಾಥ ಕಾಮತ್**

# ಸಂಪಾದಕೀಯ

ಮಂಗಳೂರು ಪ್ರದೇಶದ ಧರ್ಮಸ್ಥಳ ಕ್ಷೇತ್ರ ಧರ್ಮ ಪರಿಪಾಲನೆಯ ನೆಲೆ. ಬಾದಾಮಿ ಚಾಲುಕ್ಯರ ಕಾಲದಲ್ಲಿಯೇ ಮಾರಟೂರಯ ಶಾಸನ ರೀತ್ಯಾ (ಕ್ರಿ.ಶ. ೭ನೇ ಶತಮಾನ) ವಿನಯಾದಿತ್ಯನಿಂದ ಆಳುಕರಾಜ (ಆಳುಪ ಅರಸ !) ಮಂಗಲಪುರದ ಅಧಿಕಾರಕ್ಕೆ ನೇಮಿತನಾದ ಎನ್ನುವುದಿದೆ. ಈ ಮುನ್ನವೂ ಅಶೋಕನ ಶಾಸನದಲ್ಲಿ ಉಕ್ತವಿರುವ 'ಸತಿಯಪುತ' ಪ್ರದೇಶದಲ್ಲಿ ಮಂಗಳೂರು ಕರಾವಳಿ ಸೇರಿತ್ತು ; ಹಾಗೂ ಕದಂಬರ ಕಾಲದಲ್ಲಿ ದಲಿತ ವರ್ಗದ ಹಬಶಿಕ ದೊರೆ ಇಲ್ಲಿ ಆಳಿದನೆಂಬ ಜಾನಪದ ಸಂಪ್ರದಾಯದ ಕತೆಗಳೂ ಇವೆ.

ಉದ್ಯಾವರದ ಕ್ರಿ.ಶ. ೮ನೇ ಶತಮಾನದ ಶಾಸನೋಕ್ತ 'ಮಜ್ಗಲಪುರ'ದ ಹೆಸರು ಕಾಲಾಂತರದಲ್ಲಿ (ಕ್ರಿ.ಶ. ಸು. ೧೦ನೆಯ ಶತಮಾನ) ನಾಥಪಂಥದ ವಿರಾಗಿಣಿ ಮಂಗಳೆಗೆ ಅನ್ವಯವಾಗಿಸಿರುವ ಪರಂಪರೆಯೂ ಇದೆ. ಈ ಹಿನ್ನೆಲೆಯಲ್ಲಿಯೂ 'ಶಿವ' ಎಂಬ ಶಬ್ದಕ್ಕೆ 'ಮಂಗಳ' ಎಂಬ ಅರ್ಥವಿರುವಲ್ಲಿ ಮಂಗಳೂರು ಪ್ರದೇಶದಲ್ಲಿಯೂ ಶಿವಕ್ಷೇತ್ರವಿದೆ ಎಂದಾಗುತ್ತದೆ. ತಾಂತ್ರಿಕ ಬೌದ್ಧಮತವು (ಬೌದ್ಧ ಸಿದ್ಧರು) ವಜ್ರಯಾನದ ತಾಂತ್ರಿಕ ಶೈವರೂಪಕ್ಕೆ ಪರಿವರ್ತನೆಗೊಂಡಾಗ ನಾಥಪಂಥದ ಪ್ರಚಾರವಾಯಿತು. ಶಿವಸಮುದಾಯದ ಬಲುಮೆ ಬೆಳೆಯಿತು.

ನಾಥಪಂಥದ ಪ್ರವರ್ತಕ 'ಮತ್ಸೇಂದ್ರನಾಥ'ನ ಹೆಸರು ರೂಪಾಂತರಗೊಂಡು 'ಮಂಜುನಾಥ' ಎಂಬ ಹೆಸರಿನಲ್ಲಿ ಜನಪ್ರಿಯವಾಗಿರಬಹುದು, ಎಂಬುದು ಡಾ. ಪಿ. ಗುರುರಾಜಭಟ್ಟರ ಅಭಿಪ್ರಾಯ. ಹಿಂದೂ ಪುರಾಣಗಳಲ್ಲಿ ಶಿವನನ್ನು 'ಮಂಜುನಾಥ' ಎಂದು ಕರೆದಿಲ್ಲವಾಗಿ ಅದಕ್ಕೆ ಬೌದ್ಧಮೂಲದ 'ಮಂಜುಶ್ರೀ'–ವಜ್ರಯಾನ ದೇವತೆಯಾಗಿ ನಾಥಪಂಥದ ಆದಿಗುರುಗಳಿಂದ 'ಸಮೀಕರಿಸಲ್ಪಟ್ಟ ಕಾರಣ ಈ ಹೆಸರಿನ ರೂಪ ಒದಗಿರಬಹುದೆಂಬ ಅಭಿಪ್ರಾಯವೂ ಅವರದಾಗಿದೆ. ಹೈಮಾಚಲ–ಹಿಮಶೃಂಗವಾಸಿ ಶಿವನಾಗಿರುವ ಕಾರಣ 'ಮಂಜು' ಎಂಬ ಪರಿಸರ ಶಬ್ದಾನ್ವಯವನ್ನು ಪರಿಭಾವಿಸಲು ಸಾಧ್ಯತೆ ಇರಬಹುದೆ ! ಬೌದ್ಧಸಿದ್ಧರು ವಜ್ರಯಾನದ ಮೂಲಕವೇ ಶೈವೀಕೃತಗೊಂಡು ಅವಧೂತರಾದರು ಎಂಬುದು ಧಾರ್ಮಿಕ ಇತಿಹಾಸದಲ್ಲಿ ಪ್ರಚಲಿತ, ಹೀಗಾಗಿ ಶಿವಾರಾಧನೆಯೂ ಒಂದು ಪ್ರಬಲ ಅಸ್ತಿತ್ವವನ್ನು ಇಲ್ಲಿ ಕಂಡುಕೊಂಡಿದೆ; ಎಂಬುದು ಗಮನಾರ್ಹ. ಹಾಗೆಯೇ ಈ ಪ್ರದೇಶವು ಹರ–ಹರಿ–ಜಿನ ಸಮನ್ವಯ ಕ್ಷೇತ್ರವಾಗಿ ಬೆಳೆದದ್ದು ಕಾಣಬರುತ್ತದೆ. ಈ ದೃಷ್ಟಿಯಿಂದ ಧರ್ಮಸ್ಥಳಕ್ಕೆ ವಿಶೇಷ ಮಹತ್ವ. ಅದು ಜನಪದ ಜಾಡಿನಲ್ಲಿ ಉದ್ಭವಿಸಿ ಶೈವ ವೈಷ್ಣವ ಜಿನ ಸಮಯತ್ರಯಗಳ ಸಾಮರಸ್ಯದ ಸಾಂಸ್ಕೃತಿಕ ಕ್ಷೇತ್ರವಾಗಿ ವಿಕಸಿಸಿದೆ.

ವಿಶೇಷ ಧರ್ಮದೇವತೆಗಳೊಡನೆ–ಪೆರ್ಗ್ಗಡೆ ಮನೆತನಕ್ಕೆ ಸುಮಾರು ಆರುನೂರು ವರ್ಷಕ್ಕೂ ಮೀರಿದ ಐತಿಹಾಸಿಕ ಮತ್ತು ಜಾನಪದ ಸಾಮರಸ್ಯ ಸಂಬಂಧ. ಈ ಮನೆತನಕ್ಕೆ 'ಕುಡುಮ'ವೆನಿಸಿದ್ದ ಧರ್ಮಸ್ಥಳಕ್ಕೆ ಒದಗಿದ ನಂಟು, ಒಂದು ಪವಿತ್ರ ಪಲ್ಲವ. ಬೆಳ್ತಂಗಡಿಯ ಗ್ರಾಮ ಮಲ್ಲಮಾಡಿಯಲ್ಲಿದ್ದ ಕುಡುಮದ ನೆಲೆಗೆ ನಾಯಕರು ಬಿರ್ಮಣ್ಣ ಪೆರ್ಗ್ಗಡೆಯೆ; ಅವರ ಧರ್ಮಪತ್ನಿ ಅಮ್ಮುಬಲ್ಲಾಳ್ತಿ–ನೆಲ್ಯಾಡಿಬೀಡಿನ ಒಡೆಯ ದಂಪತಿಗಳು. ಐತಿಹ್ಯದ ರೀತ್ಯಾ ಧರ್ಮದೇವತೆ (ದೈವ)ಗಳಾದ ಕಾಳರಾಹು, ಕಾಲಾರ್ಕಯಿ, ಕುಮಾರಸ್ವಾಮಿ, ಕನ್ಯಾಕುಮಾರಿ ಅವರುಗಳು ಮಾನವ ರೂಪು ತಳೆದು ಪೆರ್ಗ್ಗಡೆಯವರ ಬೀಡಿನಲ್ಲಿ ಧರ್ಮಾಚಾರ ನೋಡಿ ದೈವಾತಿಥ್ಯ ಪಡೆದು ಸುಪ್ರೀತರಾಗಿ ಸಾಗಿದರು. ರಾತ್ರಿ ಪೆರ್ಗ್ಗಡೆಯವರ ಕನಸಿನಲ್ಲಿ ಒಂದು ಬೀಡನ್ನು ಧರ್ಮದೇವತೆಗಳ ಪೂಜೆಗೆ ಬಿಟ್ಟುಕೊಡಲು ನೀಡಿದ ಆದೇಶವನ್ನು ಪೆರ್ಗ್ಗಡೆಯವರು ಪಾಲಿಸಿದರು. ಈ ದೇವತೆಗಳ ಪಾತ್ರವನ್ನು ನಿರ್ವಹಿಸಲು ಅರ್ಹ ವ್ಯಕ್ತಿಯನ್ನು ಆಯ್ಕೆ ಮಾಡಲೂ ಆದೇಶವಾಯಿತು. ಇದಕ್ಕೆಲ್ಲ ಪ್ರತಿಫಲವಾಗಿ ಪೆರ್ಗ್ಗಡೆಯವರ ಕೆಲಸ ಕಾರ್ಯಗಳಿಗೆ ನೆರವಾಗಿ, ಕುಟುಂಬಕ್ಕೂ ರಕ್ಷಣೆ ಮಾಡುವುದಾಗಿ ಆಶೀರ್ವಾದವಾಯಿತು. ಪೆರ್ಗ್ಗಡೆಯವರು ಬ್ರಾಹ್ಮಣ ಅರ್ಚಕರನ್ನು ದೇವತೆಗಳ ಪೂಜೆಗೆ ಕರೆತಂದು ನಿಲ್ಲಿಸಿದರು. ಆ ಅರ್ಚಕರು ಶಿವಲಿಂಗವನ್ನು ಈ ನೆಲೆಯಲ್ಲಿ ಸ್ಥಾಪಿಸಲು ಹೇಳಿದರು. ಆಗ ದೈವಗಳ ಭಂಟ ಅಣ್ಣಪ್ಪಸ್ವಾಮಿಯನ್ನು ನಾಥಪಂಥದ ಶಿವನೆಲೆ ಕದ್ರಿಯಿಂದ ಶಿವಲಿಂಗವನ್ನು

[illegible] ಕದ್ರಿಯಲ್ಲಿ ಮತ್ಸ್ಯೇಂದ್ರನಾಥರು ಮಂಜು ಕವಿದಿದ್ದ ನೆಲೆಯ ಗಂಗೆಯಲ್ಲಿ ಶಿವಧ್ಯಾನ ಮಾಡುತ್ತ ಮುಳುಗಿ ಏಳುವಲ್ಲಿ ಉದ್ಭವಲಿಂಗದ ದರ್ಶನವಾಯಿತು. ಆದರೆ ತಮ್ಮ ಆಣತಿಯಂತೆ ಶಿಷ್ಯ [illegible]ಗೋರಕ್ಷನಾಥರು ಕಾಶಿಯಿಂದ ತಂದ ಲಿಂಗವನ್ನು ಉದ್ಭವಲಿಂಗದ ಉತ್ತರಕ್ಕೆ ಹರಿವ ಗಂಗೆಯ ನಡುವೆ ಇರಿಸಿದರು. 'ಮಂಜುನಾಥ'ರೆಂದು ಲಿಂಗಗಳಿಗೆ ಹೆಸರಿಟ್ಟರು.

ಕಾಶಿಯಿಂದ ತಂದ ಲಿಂಗವನ್ನೆ ಅಣ್ಣಪ್ಪಸ್ವಾಮಿಯು ಕೋರಿಕೊಂಡು ಧರ್ಮಸ್ಥಳಕ್ಕೆ ತರಲಾಗಿ, ಅಲ್ಲಿ ಪ್ರತಿಷ್ಠೆ ಮಾಡಲಾಯಿತು. ಶ್ರೀ ವಾದಿರಾಜರನ್ನು ಪೆರ್ಗ್ಗಡೆಯವರು ಆಹ್ವಾನಿಸಲಾಗಿ, ಸಂತೋಷದಿಂದ ಬಂದರು. ಆ ಶಿವಲಿಂಗವನ್ನು ವೈದಿಕೋಕ್ತವಾಗಿ ಪುನರ್ ಪ್ರತಿಷ್ಠೆ ಮಾಡಿದ ಮೇಲೆ ಭಿಕ್ಷೆ ಸ್ವೀಕರಿಸಿದರು. ಈ ದೇವನೆಲೆ 'ಕುಡುಮ'ಕ್ಕೆ 'ಧರ್ಮಸ್ಥಳ'ವೆಂದು ಹೆಸರಿಟ್ಟರು. ಹೆಸರಿಗನುಗುಣವಾಗಿ ಧರ್ಮಾಚರಣೆ, ಧರ್ಮಪ್ರಸಾದ ವ್ಯವಸ್ಥೆಗಳು ನಿರಂತರವಾದುವು.

ಕೊಡಗಿನ ಹೆಗ್ಗಡೆಹಳ್ಳಿಯ ಹಾಲೇರಿ ವಂಶದರಸ ಸಿರಿಬಾಯಿ ದೊಡ್ಡವೀರಪ್ಪನ ಕಾಲದ ಕ್ರಿ.ಶ. ೧೬೩೦ರ ಶಾಸನವು '**ಕುಡುಮ**'ದ ಮಂಜುನಾಥನಿಗೆ ದೇವತಾಸೇವೆ ನಡೆಯಲು ಹೆಗ್ಗಡಹಳ್ಳಿ ಸಿರಂಗಾಲ ಗಡಿಗೆ ಸಲ್ಲುವ ೨೯ ಉಪಗ್ರಾಮಗಳನ್ನು ದಾನ ನೀಡಿದ ಬಗ್ಗೆ ಹೇಳಿದೆ; **ಕುಡುಮದ ಮಂಜುನಾಥನ ಸಂಕೇತ** ಎಂದು ಮಂಜುನಾಥನ ಸಾಕ್ಷಿ ದೇಗುಲದ ಬಳಿ ಶಾಸನೋಕ್ತವಾಗಿ ಹೇಳಿ 'ಡಮರುವಿನ ಕೆಳಗೆ ತ್ರಿಶೂಲ'ವಿರುವಂಥ ರೇಖಾ ಶಿಲ್ಪವನ್ನು ಸೂಚಿಸಿದೆ; (ಶಾಸನದ ಪಾಠವನ್ನು ಮುಂದೆ ನೀಡಿದೆ).

ಹೀಗೆಯೇ ಕುಡುಮದ ದೈವಗಳಿಗೆ ಕ್ರಿ.ಶ. ೧೬೭೨ರ ಹಾಲೇರಿ ವಂಶದರಸ ದೇವಪ್ಪರಾಜನು ಬೆಳ್ಳಾರೆ ಮಾಗಣೆಯ ಕಾಂಜೋಡು ಗ್ರಾಮವನ್ನು ದಾನ ನೀಡಿರುವುದು ಶ್ರೀ ಉಮಾನಾಥ ಶೆಣೈ ಕಂಡುಹಿಡಿದಿರುವ ಅಲ್ಲಿಯ ಕುಡುಮ ಮಂಜುನಾಥನ ಕುರಿತ ಶಾಸನ ಸಂಪುಟದಲ್ಲಿ ಅಪ್ರಕಟಿತವಾದ ಹೊಸ ಶಾಸನದಿಂದ ತಿಳಿಯುತ್ತದೆ.

ಕಾಂಜೋಡು ಮತ್ತು ಹೆಗ್ಗಡೆಹಳ್ಳಿ ಮಧ್ಯಂತರದಲ್ಲಿ ಸೂರ್ಲಬಿನಾಡಿನ ಮುಟ್ಲು ಗ್ರಾಮದ ಮಂಜುನಾಥನಿದ್ದಾನೆ. ಜನಪದವು ಕುಡುಮದ ಮಂಜುನಾಥನನ್ನು ಕೊಡಗಿಗೆ ಕರೆದುಕೊಂಡು ಬಂದ ಹಾದಿ ಇದಾಗಿರುವಂತಿದೆ. ಅಂದರೆ 'ಕುಡುಮ'ದ ಮಂಜುನಾಥ ಹಾಗೂ ದೈವಗಳ ಬಗ್ಗೆ ಇದ್ದ ರಾಜಮಾನ್ಯತೆ, ಜನಪ್ರಿಯತೆಯ ಸ್ವರೂಪ, ಉಚ್ಚಾರ ಇತ್ಯಾದಿಗಳು ಈ ದಾನದ ಮೂಲಕ ತಿಳಿಯುತ್ತದೆ. ಜಾನಪದ ಜಾಡಿನಲ್ಲಿ ಉಕ್ಕಿಬಂದ ದೇವತೆ ಮಂಜುನಾಥ, ತಾಂತ್ರಿಕ–ವೈದಿಕ ಸಮನ್ವಯಾಚಾರಗಳಿಂದ, ವೈಷ್ಣವರಿಂದ ಅರ್ಚನೆಗೊಳ್ಳುತ್ತ ಜಿನಸಮಯಿ ಪೆರ್ಗ್ಗಡೆಯ ವಂಶಿಕರ ಧರ್ಮಾಧಿಕಾರದಲ್ಲಿ ಆರಾಧಿತ ಶೋಭಿತನಾಗಿ ನೇತ್ರಾವತಿಯ ತಿಳಿ ಜಲದ ಜುಳು ಜುಳು ಹರಿವ ಪರಿಸರಕ್ಕೆ ಪವಿತ್ರ ಪುಳಕ ತಂದಿದ್ದಾನೆ. ಪೆರ್ಗ್ಗಡೆಯವರ ಹಾಗೂ ದೈವಗಳ ಮೂಲಸ್ಥಾನ ನೆಲ್ಯಾಡಿಬೀಡು, ಚಂದ್ರನಾಥ ಬಸದಿ, ರತ್ನಗಿರಿ ಬೆಟ್ಟದ ಕಾಯೋತ್ಸರ್ಗ ಭಂಗಿಯ ಬಾಹುಬಲಿಮೂರ್ತಿ ಇವರೆಲ್ಲ ಇಲ್ಲಿ ಸಮ್ಮಿಲಿತರಾಗಿದ್ದಾರೆ; ದೈವಶೋಭೆ ತಂದಿದ್ದಾರೆ.

ಇಂಥ ಸಾಂಸ್ಕೃತಿಕ ನೆಲೆಯಲ್ಲಿ ಶ್ರೀ ಧರ್ಮೋತ್ಥಾನ ಟ್ರಸ್ಟ್‌ನ ಆಶ್ರಯದಲ್ಲಿ ಶ್ರೀಕ್ಷೇತ್ರ ಧರ್ಮಸ್ಥಳದ ಸುವರ್ಣ ಮಹೋತ್ಸವ ಭವನದಲ್ಲಿ ೧೮–೯–೨೦೦೮ರ ಸಂಜೆಯಿಂದ ೨೧–೯–೨೦೦೮ರವರೆಗೆ ನಡೆಯುವ ಅಕಾದೆಮಿಯ ೨೨ನೆಯ ವಾರ್ಷಿಕ ಸಮ್ಮೇಳನದ ಅಧ್ಯಕ್ಷೆಯಾಗಿ, ಆಯ್ಕೆಗೊಂಡಿರುವ, ವಿಜಯನಗರ ಇತಿಹಾಸ ಪರಿಣತೆ ಹಾಗೂ ಖ್ಯಾತ ಇತಿಹಾಸ ತಜ್ಞೆಯೂ ಆಗಿರುವ ಡಾ. ಶ್ರೀಮತಿ ವಸುಂಧರಾ ಫಿಲಿಯೋಜಾ ಅವರಿಗೆ ; ಈ ಬಾರಿ ಡಾ. ಬಾ.ರಾ. ಗೋಪಾಲ್ ಶಾಸನ ಪ್ರಶಸ್ತಿಗೆ ಭಾಜನರಾಗಿರುವ ಶಾಸನತಜ್ಞ ಡಾ. ಪಿ.ಎನ್. ನರಸಿಂಹಮೂರ್ತಿ ಅವರಿಗೆ ನಮ್ಮ ಹಾರ್ದಿಕ ಅಭಿನಂದನೆಗಳು.

ಕಳೆದ ವರ್ಷ ರಾಮನಗರ ಹಗರಿಬೊಮ್ಮನಹಳ್ಳಿಯಲ್ಲಿ ಅಕಾದೆಮಿಯ ೨೧ನೆಯ ವಾರ್ಷಿಕ ಸಮ್ಮೇಳನದಲ್ಲಿ ೨೦೦೭ರ ಸೆಪ್ಟೆಂಬರ್ ೮ ರಿಂದ ೧೧ರವರೆಗೆ ಮಂಡಿತವಾದ ಪ್ರಬಂಧಗಳ ಪೈಕಿ (೮೫ + ೨) ಪ್ರಬಂಧಗಳನ್ನು ಸದ್ಯ '**ಇತಿಹಾಸ ದರ್ಶನ**'ದ ೨೩ನೇ ಸಂಪುಟದಲ್ಲಿ ಪ್ರಕಟಿಸಲಾಗಿದೆ. ಈ ಸಂದರ್ಭದಲ್ಲಿ ನಮ್ಮ ಪ್ರೀತಿಯ ಸದಸ್ಯ

ಪ್ರಬಂಧಕಾರರಲ್ಲಿ ವಿನಂತಿ ಎಂದರೆ : ದಯವಿಟ್ಟು, ಸಂಶೋಧನ ಪ್ರಬಂಧಕ್ರಮದಲ್ಲಿ, ಆಧಾರಸೂಚಿಯನ್ನು ಪೂರ್ಣ ಮಾಹಿತಿಯೊಡನೆ ನೀಡಬೇಕು ಹಾಗೂ ವಿಳಾಸವನ್ನು ಮರೆಯದೆ ನಮೂದಿಸಬೇಕು.

ಇತಿಹಾಸ ದರ್ಶನದ ಮುದ್ರಣಕ್ಕೆ ೨೦೦೫ನೇ ಸಾಲಿನಿಂದ ೨೫ ಸಾವಿರ ರೂ.ಗಳ ನಿಧಿ ನೆರವನ್ನು ನಿರಂತರ ಆಶೀರ್ವದಿಸುತ್ತಿರುವ ಶ್ರೀಮದ್ರಂಭಾಪುರಿ ವೀರಸಿಂಹಾಸನಾಧೀಶ್ವರ ಜಃ ಶ್ರೀ ಶ್ರೀ ಪ್ರಸನ್ನ ರೇಣುಕ ವೀರ ಸೋಮೇಶ್ವರ ರಾಜ ದೇಶಿಕೇಂದ್ರ ಶಿವಾಚಾರ್ಯ ಮಹಾಸನ್ನಿಧಿಯವರಲ್ಲಿ ನಮ್ಮ ವಿನಮ್ರ ಪ್ರಣಾಮಗಳಿವೆ. ರಾಜ್ಯ ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹ ನಿರ್ದೇಶನಾಲಯದ ನಿರ್ದೇಶಕರಾದ ಡಾ. ಆರ್. ಗೋಪಾಲ್ ಅವರು ಇಲಾಖೆಯ ವತಿಯಿಂದ 'ಇತಿಹಾಸ ಪರಂಪರೆ ಉಳಿಸಿ' ಕಾರ್ಯಕ್ರಮ ಹಾಗೂ 'ಇತಿಹಾಸ ದರ್ಶನ' ಸಂಪುಟದ ಪ್ರಕಟನೆಗೆ ಕೊಡುಗೆ ನಿಧಿಯನ್ನು ನೀಡುತ್ತಿರುವುದಕ್ಕೆ ನಾವು ಆಭಾರಿ.

ಈ ಬಾರಿಯ ಸಮ್ಮೇಳನವನ್ನು ಧರ್ಮಸ್ಥಳದ ಧರ್ಮಾಧಿಕಾರಿಗಳಾದ ರಾಜರ್ಷಿ ಡಾ. ವೀರೇಂದ್ರ ಹೆಗ್ಗಡೆಯವರು ಉದ್ಘಾಟಿಸುತ್ತಿರುವುದು ಒಂದು ಸಾಂಸ್ಕೃತಿಕ ಸೌಭಾಗ್ಯ. 'ಇತಿಹಾಸ ದರ್ಶನ'ದ ೨೩ನೇ ಸಂಪುಟವನ್ನು ಹಂಪಿ ಕನ್ನಡ ವಿಶ್ವವಿದ್ಯಾಲಯದ ಚರಿತ್ರೆ ವಿಭಾಗದ ವಿಶ್ರಾಂತ ಪ್ರಾಧ್ಯಾಪಕರು, ಅಕಾದೆಮಿಯ ಆರಂಭದ ವರ್ಷಗಳಲ್ಲಿ '**ಇತಿಹಾಸ ದರ್ಶನ**'ದ ಸಂಪಾದಕರೂ ಆಗಿದ್ದ ಪ್ರೊ. ಲಕ್ಷ್ಮಣ್ ತೆಲಗಾವಿ ಅವರು ಬಿಡುಗಡೆ ಮಾಡುತ್ತಿರುವುದಕ್ಕೆ ನಮ್ಮ ಹೃದಯ ತುಂಬಿದ ಸಂತೋಷವಿದೆ.

ನಮ್ಮ ಕಾರ್ಯದಲ್ಲಿ ಸಹಕಾರ ನೀಡುತ್ತಿರುವ ಅಕಾದೆಮಿಯ ಅಧ್ಯಕ್ಷರಾದಿಯಾಗಿ ಕಾರ್ಯಕಾರಿ ಸಮಿತಿ ಹಾಗೂ ಸರ್ವ ಸದಸ್ಯರಿಗೂ ನಮ್ಮ ಕೃತಜ್ಞತೆಗಳು. '**ಇತಿಹಾಸ ದರ್ಶನ**' ದ ಕೆಲವು ಪ್ರಬಂಧಗಳನ್ನು ಸಂಪಾದನೆ ಮಾಡಿ, ಕರಡು ತಿದ್ದಿಕೊಟ್ಟ 'ಕರ್ನಾಟಕ ಗ್ಯಾಸೆಟಿಯರ್'ನ ಸಂಪಾದಕರಲ್ಲೊಬ್ಬರಾದ ಶ್ರೀ ಶಿ. ರಾಜೇಂದ್ರಪ್ಪ ಅವರಿಗೆ ನಮ್ಮ ಅಭಿಮಾನಗಳಿವೆ.

ಸಂಪುಟವನ್ನು ಅಚ್ಚುಕಟ್ಟಾಗಿ ಮುದ್ರಿಸಿಕೊಟ್ಟಿರುವ ಲಕ್ಷ್ಮೀ ಮುದ್ರಣಾಲಯದ ಮಾಲೀಕರಾದ ಶ್ರೀ ಅಶೋಕ್‌ಕುಮಾರ್, ಅಕ್ಷರ ಜೋಡಣೆ ಮಾಡಿದ ಡಿಟಿಪಿ ಸಿಬ್ಬಂದಿ ವರ್ಗದವರಾದ ಪಿ.ಎಸ್. ಸುಬ್ರಮಣಿ, ಎಂ. ನಂದಕುಮಾರ್, ವಿ.ಎಸ್. ಪ್ರಸನ್ನಕುಮಾರ್ ಹಾಗೂ ರಘುನಾಥ್ ಅವರಿಗೆ ನಮ್ಮ ಹಾರೈಕೆಗಳಿವೆ. ಹೀಗೆಯೇ ನೆರವಾಗುತ್ತಿರುವ ಜಿ.ಜೆ. ಕಾವೇರಿಗೌಡ ಅವರಿಗೂ ನಮ್ಮ ಅಭಿಮಾನಗಳಿವೆ.

ಬೆಂಗಳೂರು : ೧೫.೯.೨೦೦೮; ಸರ್ವಧಾರಿ ಸಂವತ್ಸರ
ಭಾದ್ರಪದ ಶುದ್ಧ ಶತಭಿಷ ಸೋಮವಾರ

**ಡಾ॥ ಎಂ.ಜಿ. ನಾಗರಾಜ್**
**ಡಾ॥ ಪಿ.ವಿ. ಕೃಷ್ಣಮೂರ್ತಿ**

೧ ಶ್ರೀ ಸ್ವಸ್ತಿ ಶ್ರೀ ವಿಜಯಾಭ್ಯು
೨ ದೆಯ ಶಾಲಿವಾಹನ ಶಕದ ವರು
೩ ಷ ೧೬೫೨ ನೆಯ ಸಾಧಾರಣ ಸಂವತ್ಸರದ
೪ ಮಾಘ ಭ ೨ ಬಾರ್ಗವಾವಾರ
೫ ದಲ್ಲು **ಕುಡುಮದ ಮಂಜುನಾಥಸ್ವಾಮಿ**
೬ ಯವರ ಸಂನಿಧಿಯಲ್ಲು ನಡವ ದೇವತ ಸೇವೆ
೭ ಬಗ್ಯೆ ಹಾಲೇರಿ ವೀರಪ್ಪೊಡೆಯ। ಸರ್ವಮಂನ್ಯ
೮ ಸಂಕೇತವಾಗಿ ಬಿಟ್ಟ ಹೆಗ್ಗಡಹಳ್ಳಿ ಸಿರಂಗಾಲ॥
೯ ಉಭಯ ಗಡಿಗೆ ಸಲುವ ಉಪಗ್ರಾಮ ೫ನು ಸಿಲಾ
೧೦ ಸ್ತಾಪಿತ ಮಾಡಿಸಿ ಬಿಟ್ಟುಕೊಟ್ಟದು
[ಆಕರ : ಎ.ಕ. ಸಂ ೧ (ಹೊಸತು)., ಕೊಡಗು ೪೦, ಹೆಗ್ಗಡಹಳ್ಳಿ; ಸೋಮವಾರಪೇಟೆ ತಾಲ್ಲೂಕು, ಕಾಲ ಕ್ರಿ.ಶ. ೧೭೩೦]



**ಸಂಕೇತ ಶಾಸನದ ಪಡಿಯಚ್ಚು**

ಎ.ಕ. ಸಂ ೧ (ಹೊಸತು), ಕೊಡಗು ೪೧, ಹೆಗ್ಗಡಹಳ್ಳಿ; ಕಾಲ ಕ್ರಿ.ಶ. ೧೭೩೦

೧ **ಶ್ರೀ ಕುಡುಮದ ಮಂ**
೨ **ಜುನಾಥ ಶ್ವಾಮಿಯ**
೩ **ವರ ಸಂಕೆಥ ಶ್ರೀ**
(ಡಮರುಗದ ಕೆಳಗೆ ತ್ರಿಶೂಲದ ಆಕೃತಿ ಇದೆ.)
ಇದು ವಿಶೇಷ ಸಂಕೇತ

**ಇವೆರಡೂ ಶಾಸನಗಳು ಕೊಡಗಿನ ಹೆಗ್ಗಡಹಳ್ಳಿಯಲ್ಲಿರುವ ಕುಡುಮದ ಮಂಜುನಾಥಸ್ವಾಮಿಯ ಸಾಕ್ಷಿ ದೇಗುಲದ ಬಳಿ ಇರುವ ಹಾಲೇರಿ ವಂಶದ ಅರಸರ ಕಾಲದ ಶಾಸನಗಳು**

# ಕರ್ನಾಟಕ ಇತಿಹಾಸ ಅಕಾದೆಮಿ (ರಿ.)

ಬೆಂಗಳೂರು

# ಪರಿವಿಡಿ

# ಈವರೆಗೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಅಧಿವೇಶನಗಳ ಸರ್ವಾಧ್ಯಕ್ಷರು ಹಾಗೂ ಇತರ ವಿವರಗಳು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೧. | ೧೫-೧೭ ಮೇ ೧೯೮೭ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ॥ ಎಂ. ಚಿದಾನಂದಮೂರ್ತಿ |
| ೨. | ೨೩-೨೪ ಅಕ್ಟೋಬರ್ ೧೯೮೮ | ತುಮಕೂರು | ಸಿದ್ಧಗಂಗಾಕ್ಷೇತ್ರ : ಡಾ। ಶಿವಕುಮಾರ ಸ್ವಾಮಿಗಳು ಮತ್ತು ತುಮಕೂರು ಜಿಲ್ಲಾ ಇತಿಹಾಸ ಪರಿಷತ್ತು | ಡಾ॥ ಜಿ. ಎಸ್. ಗಾಯಿ |
| ೩. | ೧೦-೧೧ ಜೂನ್ ೧೯೮೯ | ಗದಗ | ಶ್ರೀ ಮ. ನಿ. ಪ್ರ. ಜ॥ ಡಾ॥ ತೋಂಟದ ಸಿದ್ಧಲಿಂಗ ಮಹಾಸ್ವಾಮಿಗಳು, ಶ್ರೀ ತೋಂಟದಾರ್ಯ ಮಠದ ವೀರಶೈವ ಅಧ್ಯಯನ ಸಂಸ್ಥೆ, ಗದಗ | ಡಾ॥ ಶ್ರೀನಿವಾಸ ರಿತ್ತಿ |
| ೪. | ೨೧-೨೨ ಜುಲೈ ೧೯೯೦ | ದಾವಣಗೆರೆ | ಡಾ॥ ಸದ್ಯೋಜಾತ ಶಿವಾಚಾರ್ಯ ಸ್ವಾಮೀಜಿ, ಹಿರೇಮಠ, ದಾವಣಗೆರೆ | ಡಾ॥ ಎಸ್. ಆರ್. ರಾವ್ |
| ೫. | ೧೨-೧೪ ಜುಲೈ ೧೯೯೧ | ಚಿತ್ರದುರ್ಗ | ಚಿನ್ಮೂಲಾದ್ರಿ ಶ್ರೀ ಮುರುಘ ರಾಜೇಂದ್ರ ಬೃಹನ್ಮಠ, ಚಿತ್ರದುರ್ಗ | ಡಾ॥ ಬಾ. ರಾ. ಗೋಪಾಲ್ |
| ೬. | ೧೧-೧೩ ಜುಲೈ ೧೯೯೨ | ರಾಯಚೂರು | ಪಂಡಿತ್ ತಾರಾನಾಥ ಶಿಕ್ಷಣ ಸಂಸ್ಥೆ ರಾಯಚೂರು | ಡಾ॥ ಕೆ. ವಿ. ರಮೇಶ್ |
| ೭. | ೨೩-೨೫ ಜುಲೈ ೧೯೯೩ | ಮೈಸೂರು | ಸುತ್ತೂರು ಮಠದ ಶ್ರೀ ಶ್ರೀ ಶಿವರಾತ್ರಿ ದೇಶಿಕೇಂದ್ರ ಮಹಾಸ್ವಾಮಿಗಳು ಜೆ. ಎಸ್. ಎಸ್. ಸಂಸ್ಥೆ, ಮೈಸೂರು | ಡಾ॥ ಅ. ಸುಂದರ |
| ೮. | ೯-೧೦ ಜುಲೈ ೧೯೯೪ | ಸೊಂಡೂರು | ಶ್ರೀ ಎಂ. ವೈ. ಘೋರ್ಪಡೆ ಕರ್ನಾಟಕ ಸೇವಾ ಸಂಘ, ಸೊಂಡೂರು | ಡಾ॥ ಎಂ. ಎಂ. ಕಲಬುರ್ಗಿ |

| [illegible] | [illegible] | [illegible] | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೯. | ೯-೧೧ ಸೆಪ್ಟೆಂಬರ್ ೧೯೯೫ | ಬೆಳಗಾವಿ | ಶ್ರೀ ಮ. ನಿ. ಪ್ರ. ಸಿದ್ಧರಾಮ ಮಹಾಸ್ವಾಮಿಗಳು - ಶ್ರೀ ನಾಗನೂರು ರುದ್ರಾಕ್ಷಿಮಠದ ವೀರಶೈವ ಅಧ್ಯಯನ ಅಕಾದೆಮಿ, ಬೆಳಗಾವಿ | ಡಾ|| ಎ.ವಿ. ನರಸಿಂಹಮೂರ್ತಿ |
| ೧೦. | ೭-೯ ಜೂನ್ ೧೯೯೬ | ಧಾರವಾಡ | ಕರ್ನಾಟಕ ವಿಶ್ವವಿದ್ಯಾಲಯ ಮತ್ತು ಶ್ರೀ ಮ. ನಿ. ಪ್ರ. ಶಿವಯೋಗಿ ಮಹಾಸ್ವಾಮಿಗಳು ಶ್ರೀ ಮುರುಘಾಮಠ ಧಾರವಾಡ | ಡಾ|| ಜಿ. ಎಸ್. ದೀಕ್ಷಿತ್ |
| ೧೧. | ೨೫-೨೭ ಅಕ್ಟೋಬರ್ ೧೯೯೭ | ಸಿರಸಿ | ಶ್ರೀ ಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನ ಮಠ ಹಾಗೂ ಸರ್ವಜ್ಞೇಂದ್ರ ಸರಸ್ವತೀ ಪ್ರತಿಷ್ಠಾನ, ಸಿರಸಿ | ಪ್ರೊ|| ಕೆ. ಅಭಿಶಂಕರ್ |
| ೧೨. | ೧೪-೧೬ ನವೆಂಬರ್ ೧೯೯೮ | ಬೆಂಗಳೂರು | ಕರ್ನಾಟಕ ಇತಿಹಾಸ ಅಕಾದೆಮಿ | ಡಾ|| ಎಸ್. ನಾಗರಾಜು |
| ೧೩. | ೧೧-೧೩ ಜೂನ್ ೧೯೯೯ | ಹರಪನಹಳ್ಳಿ | ಮಾನ್ಯ ಸಚಿವ ಶ್ರೀ ಡಿ. ನಾರಾಯಣದಾಸ್ ಮತ್ತು ಆಯೋಜಕರಾದ ಶ್ರೀ ಕುಂ. ಬಾ. ಸದಾಶಿವಪ್ಪ, ಸ್ವಾಗತ ಸಮಿತಿ, ಹರಪನಹಳ್ಳಿ | ಡಾ|| ಶ್ರೀನಿವಾಸ ಹಾವನೂರ |
| ೧೪. | ೮-೧೦ ಜುಲೈ ೨೦೦೦ | ಹಂಪಿ | ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ | ಶ್ರೀ ಸಿ. ಟಿ. ಎಂ. ಕೊಟ್ರಯ್ಯ |
| ೧೫. | ೧೩-೧೫ ಅಕ್ಟೋಬರ್ ೨೦೦೧ | ಉಡುಪಿ | ಪೂಜ್ಯ ಶ್ರೀ ವಿಶ್ವೇಶ್ವರ ತೀರ್ಥ ಪಾದಂಗಳು ಪೇಜಾವರ ಮಠಾಧೀಶರು, ಉಡುಪಿ | ಡಾ|| ಜ್ಯೋತ್ಸ್ನಾ ಕಾಮತ್ |
| ೧೬. | ೨೨-೨೪ ಸೆಪ್ಟೆಂಬರ್ ೨೦೦೨ | ಹೊಸನಗರ | ಪೂಜ್ಯಶ್ರೀ ರಾಘವೇಶ್ವರ ಭಾರತೀ ಸ್ವಾಮಿಗಳು ಶ್ರೀ ರಾಮಚಂದ್ರಾಪುರ ಮಠ | ಡಾ. ಎ.ಕೆ. ಶಾಸ್ತ್ರಿ |
| ೧೭. | ೧೩-೧೫ ಸೆಪ್ಟೆಂಬರ್ ೨೦೦೩ | ಬಾದಾಮಿ | ವಿಶ್ವಚೇತನ ಸಂಸ್ಥೆ ಬಾದಾಮಿ | ಡಾ. ಎಸ್. ರಾಜಶೇಖರ್ |

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಆಶ್ರಯ/ಸಹಯೋಗ | ಸರ್ವಾಧ್ಯಕ್ಷರು |
|---|---|---|---|---|
| ೧೮. | ೨೪-೨೬ ಸೆಪ್ಟೆಂಬರ್ ೨೦೦೪ | ಹೊನ್ನಾಳಿ | ಶ್ರೀ ಚನ್ನಪ್ಪಸ್ವಾಮಿ ವಿದ್ಯಾಪೀಠ ಚನ್ನ-ಚೇತನ ಪ್ರಕಾಶನ ಮತ್ತು ಹಿರೇಕಲ್ಮಠ | ಶ್ರೀ ಕೆಳದಿ ಗುಂಡಾ ಜೋಯಿಸ್ |
| ೧೯. | ೧೧-೧೩ ಸೆಪ್ಟೆಂಬರ್ ೨೦೦೫ | ಸೇಡಂ | ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆ | ಡಾ. ಬಿ.ವ್ಹಿ. ಶಿರೂರ |
| ೨೦. | ೯-೧೧ ಸೆಪ್ಟೆಂಬರ್ ೨೦೦೬ | ನಂಜನಗೂಡು | ಶ್ರೀ ರಾಘವೇಂದ್ರ ಸ್ವಾಮಿಗಳ ಮಠ | ಡಾ. ಸೂರ್ಯನಾಥ ಕಾಮತ್ |

## ಡಾ|| ಬಾ.ರಾ. ಗೋಪಾಲ್ ಶಾಸನ ದತ್ತಿ ಪ್ರಶಸ್ತಿ ಸನ್ಮಾನಿತರು

| ಸಂಖ್ಯೆ | ದಿನಾಂಕ-ವರ್ಷ | ಸ್ಥಳ | ಸನ್ಮಾನಿತರು |
|---|---|---|---|
| ೧ | ೧೫ನೇ ವಾರ್ಷಿಕ ಸಮ್ಮೇಳನ ಅಕ್ಟೋಬರ್ ೨೦೦೧ | ಉಡುಪಿ | ಡಾ. ಕೆ.ವಿ. ರಮೇಶ |
| ೨ | ೧೬ನೇ ವಾರ್ಷಿಕ ಸಮ್ಮೇಳನ ಸೆಪ್ಟಂಬರ್ ೨೦೦೨ | ಹೊಸನಗರ | ಡಾ. ಶ್ರೀನಿವಾಸ ರಿತ್ತಿ |

## ಡಾ|| ಬಾ.ರಾ. ಗೋಪಾಲ್ ಶಾಸನ ದತ್ತಿ ಪ್ರಶಸ್ತಿ ಸನ್ಮಾನಿತರು

| | | | | |
|---|---|---|---|---|
| ೩ | ೧೭ನೇ ಸಮ್ಮೇಳನದ<br>ಸೆಪ್ಟಂಬರ್ ೨೦೦೩ | ಬಾದಾಮಿ | ಡಾ. ದೇವರಕೊಂಡಾರೆಡ್ಡಿ |  |
| ೪ | ೧೮ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೪ | ಹೊನ್ನಾಳಿ | ಡಾ. ಬಿ. ರಾಜಶೇಖರಪ್ಪ |  |
| ೫ | ೧೯ನೇ ಸಮ್ಮೇಳನ<br>ಸೆಪ್ಟಂಬರ್ ೨೦೦೫ | ಸೇಡಂ | ಡಾ. ಕೆ.ಆರ್. ಗಣೇಶ್ |  |
| ೬ | ೨೦ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೬ | ನಂಜನಗೂಡು | ಡಾ. ಎಂ.ಜಿ. ನಾಗರಾಜ್ |  |
| ೭ | ೨೧ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೭ | ಹಗರಿಬೊಮ್ಮನಹಳ್ಳಿ | ಡಾ. ಎಚ್.ಎಸ್. ಗೋಪಾಲರಾವ್ |  |
| ೮ | ೨೨ನೇ ಸಮ್ಮೇಳನ<br>ಸೆಪ್ಟೆಂಬರ್ ೨೦೦೮ | ಧರ್ಮಸ್ಥಳ | ಡಾ. ಪಿ.ಎನ್. ನರಸಿಂಹಮೂರ್ತಿ |  |

# ಕರ್ನಾಟಕ ಇತಿಹಾಸ ಅಕಾದೆಮಿ ೨೧ನೆಯ ವಾರ್ಷಿಕ ಸಮ್ಮೇಳನ

## ರಾಮನಗರ, ಹಗರಿಬೊಮ್ಮನಹಳ್ಳಿ : ದಿನಾಂಕ ೮ ಸೆಪ್ಟೆಂಬರ್ ೨೦೦೭

ಸಮ್ಮೇಳನಾಧ್ಯಕ್ಷರು : **ಪ್ರೊ. ಲಕ್ಷ್ಮಣ್ ತೆಲಗಾವಿ***

## ಅಧ್ಯಕ್ಷ ಭಾಷಣ

ಕರ್ನಾಟಕ ಇತಿಹಾಸ ಅಕಾದೆಮಿಯ ೨೧ನೇ ವಾರ್ಷಿಕ ಅಧಿವೇಶನವು ವಾಣಿಜ್ಯ ನಗರಿ ಹಗರಿಬೊಮ್ಮನಹಳ್ಳಿಯಲ್ಲಿ ಸಮಾವೇಶಗೊಂಡಿರುವ ಈ ಶುಭ ಸಂದರ್ಭದಲ್ಲಿ, ಇದರಲ್ಲಿ ಪಾಲ್ಗೊಂಡಿರುವ ಎಲ್ಲರಿಗೂ ನನ್ನ ಆತ್ಮೀಯ ನಮಸ್ಕಾರಗಳು.

ತಮ್ಮ ಒಟ್ಟು ಜೀವಿತಾವಧಿಯನ್ನು, ತಮ್ಮ ಅಮೂಲ್ಯ ಬೌದ್ಧಿಕ ಸಂಪತ್ತನ್ನು ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿಗಳ ಶೋಧಕ್ಕೆ ಮುಡುಪಿಟ್ಟು, ವಿಶಾಲ ತಳಹದಿಯ ಮೇಲೆ ಇತಿಹಾಸ ಸೌಧವನ್ನು ನಿರ್ಮಿಸಿಕೊಟ್ಟಿರುವ ಹಿರಿಯ ತಲೆಮಾರಿನ ಹಲವಾರು ಪ್ರತಿಷ್ಠಿತ ವಿದ್ವಾಂಸರ ಔದಾರ್ಯದಲ್ಲಿ ನಮ್ಮ ಬೌದ್ಧಿಕ ಭವಿಷ್ಯವನ್ನು ರೂಪಿಸಿಕೊಳ್ಳುತ್ತಿರುವ ನಾವು, ಅವರಿಗೆ ಎಷ್ಟು ಋಣಿಯಾಗಿದ್ದರೂ ತೀರದು. ಈ ಎಲ್ಲ ಆದ್ಯರಿಗೆ ಈ ಪವಿತ್ರ ವೇದಿಕೆಯ ಮೂಲಕ ನಮನಗಳನ್ನು ಸಲ್ಲಿಸುವುದರ ಜೊತೆಗೆ, ಅವರು ಸೃಷ್ಟಿಸಿರುವ ಹಾದಿಯಲ್ಲಿ ಯಥಾಮತಿ, ಯಥಾಶಕ್ತಿ ನಾವೂ ಮುಂದುವರೆದು ಅವರ ಋಣವನ್ನು ತೀರಿಸಬೇಕೆಂಬುದು ನನ್ನ ವಿನಮ್ರ ಕೋರಿಕೆ. ಈ ನಿಟ್ಟಿನಲ್ಲಿ, ಕೇವಲ ಪಂಡಿತವರ್ಗವಷ್ಟೇ ಅಲ್ಲ, ಜನಸಾಮಾನ್ಯರೂ ವಿದ್ಯಾರ್ಥಿಗಳೂ ನಮ್ಮ ಕರ್ನಾಟಕ ಇತಿಹಾಸ ಅಕಾದೆಮಿಯ ಮೂಲಕ ಇಂಥಾ ಯೋಗ್ಯ ಕಾರ್ಯದಲ್ಲಿ ಸಕ್ರಿಯರಾಗಿದ್ದುಕೊಂಡು ಸೇವೆ ಸಲ್ಲಿಸುತ್ತಿರುವುದು ಶ್ಲಾಘನೀಯ ಸಂಗತಿ. ಕರ್ನಾಟಕ ಇತಿಹಾಸ ಮತ್ತು ಸಂಸ್ಕೃತಿ ಕ್ಷೇತ್ರಗಳನ್ನು ಹಲವು ಮಗ್ಗುಲಗಳಿಂದ ಬೆಳೆಸುತ್ತಿರುವ ಈ ಎಲ್ಲರೂ ಅಭಿನಂದನಾರ್ಹರು. ಕರ್ನಾಟಕದ ಸಮಗ್ರ ಇತಿಹಾಸ ನಿರ್ಮಾಣದಲ್ಲಿ ಹೊಯ್ಕಯ್ ಆಗಿ ದುಡಿಯುವ ಅಗತ್ಯ ಈಗ ಮೊದಲಿಗಿಂತಲೂ ಹೆಚ್ಚಿದೆ.

ನಮ್ಮ ಸಮಾಜ ರೂಪುಗೊಂಡಿರುವುದು ಮಾನವನ ಸುದೀರ್ಘ ಆಲೋಚನೆಗಳಿಂದ. ಇದರ ವ್ಯವಸ್ಥಿತ ಅಧ್ಯಯನವೇ ಇತಿಹಾಸ. ಮಾನವನ ಉಗಮಕಾಲದಿಂದಲೇ ಈ ಆಲೋಚನೆಯ ಸರಣಿ ಮುಂದುವರೆದುಕೊಂಡು ಬಂದಿರುವುದು ಸರಿಯಷ್ಟೆ. ಸೃಜನನೆಲೆಯಲ್ಲಿ ಹುಟ್ಟುವ ಆಲೋಚನೆಗಳಿಗೆ ಒಂದು ನಿರ್ದಿಷ್ಟ ಕಾಲಮಾನವನ್ನು ನಿಖರವಾಗಿ ಗುರುತಿಸಬಹುದಾದರೆ ಅದು ಚರಿತ್ರಾರಂಭ ಕಾಲದಿಂದ ಎನ್ನಬಹುದೇನೊ. ಪ್ರಾಕ್ಚಾರಿತ್ರಿಕ ಮಾನವನ ಬದುಕನ್ನೂ ಚಿಂತನೆಗಳನ್ನೂ ಗ್ರಹಿಸುವ ದೃಷ್ಟಿಯಿಂದ ಇನ್ನೂ ಹಿಂದಕ್ಕೆ ಹೋಗಬಹುದು. ಆದರೆ ಆದಿಹಳೇಶಿಲಾಯುಗ ಮಾನವನ, ಅಂದರೆ ಹತ್ತುಸಾವಿರ ವರುಷಗಳಿಗೂ ಹಿಂದಿನ ನಮ್ಮ ಮಾನವಜನಾಂಗದ ಚಹರೆಯನ್ನು ಗುರುತಿಸುವುದು ಹೇಗೆ ? ಈ ಕಾಲಾವಧಿಯ ಅವನ ಸೃಜನನೆಲೆಯನ್ನು, ಚಿಂತನ-ಮಂಥನ ಸ್ವರೂಪವನ್ನು, ಅಭಿರುಚಿಯನ್ನು, ಧೈರ್ಯೋತ್ಸಾಹವನ್ನು, ಸಾಹಸಕಾರ್ಯವನ್ನು, ಪ್ರಾಕೃತಿಕ ವಿಕೋಪಗಳ ವಿರುದ್ಧ ಹೋರಾಡುವ ಎದೆಗಾರಿಕೆಯನ್ನು, ಅವುಗಳಿಂದ ರಕ್ಷಿಸಿಕೊಳ್ಳುವ ಉಪಾಯವನ್ನು; ದಣಿವಿಲ್ಲದೆ, ಸೋಲಿಲ್ಲದೆ ಮಾನವ ಸಮಾಜವನ್ನು ಉಳಿಸಿಕೊಂಡು ಬಂದ ಅವನ ಜೀವಂತಿಕೆಯನ್ನು ನಿಖರವಾಗಿ ತೋರಿಸಲು ಸಾಧ್ಯವೇ?

ನಾಗರಿಕ ಯುಗದ ಅಥವಾ ಸಮಾಜದ ಇತಿವೃತ್ತ ಎಲ್ಲರೂ ಕಂಡಂತೆಯೇ ಇದೆ. ಇದಕ್ಕೂ ಪೂರ್ವದ ಯುಗವನ್ನು ಕತ್ತಲಯುಗವೆಂದು, ಆಗಿನ ಸಮಾಜವನ್ನು ಅನಾಗರಿಕ ಸಮಾಜವೆಂದು ಚಿತ್ರಿಸುವ ಪರಿಪಾಟವಿದ್ದು, ಇದನ್ನು ಪ್ರಶ್ನಿಸುವ ಹಾಗೂ ಪರಿಶೀಲಿಸುವ ಕೆಲಸ ನಮ್ಮ ಪುರಾತತ್ವಜ್ಞರಿಂದ ನಡೆದುದು ಕಂಡುಬರುವುದಿಲ್ಲ. ಇಂಥಾ ಪ್ರಯತ್ನ ಅಲ್ಲೊ ಇಲ್ಲೊ ಒಬ್ಬಿಬ್ಬರಿಂದ ಕ್ವಚಿತ್ತಾಗಿ ನಡೆದುಂಟು. ನಾಗರಿಕಯುಗದ ಐತಿಹಾಸಿಕ ಅಧ್ಯಯನಗಳಲ್ಲಿ ಅನಾಗರಿಕ ಯುಗದ ಉಲ್ಲೇಖಗಳನ್ನು ಕೊಡುತ್ತಲೇ ಇದಕ್ಕೆ ಆಧಾರಪ್ರಾಯವಾಗಿದ್ದ ಆ ಯುಗದ ಘಟನೆಗಳ ಮಾಹಿತಿ ಅನುಪಲಬ್ಧವೆಂಬ ಕಾರಣಕ್ಕಾಗಿ ಮೌನವಹಿಸಿ ಮುಂದುವರೆಯುವುದು ಸರಿಯೆನಿಸಲಾರದು. ನಾಗರಿಕಯುಗದ ಎಲ್ಲ ವಿವರಗಳಿಗೆ ಹಿನ್ನೆಲೆಯಾಗಿ ಕಾಣಿಸಿಕೊಳ್ಳುವುದು ಈ ಅನಾಗರಿಕಯುಗವೇ.

ಈ ಅನಾಗರಿಕಯುಗದ ತಕ್ಕಮಟ್ಟಿನ ಅರಿವಿಲ್ಲದೆ, ಇತಿಹಾಸದ ಚೈತನ್ಯಪೂರ್ಣ ಸ್ವರೂಪವನ್ನು ವೈಜ್ಞಾನಿಕ ವಿಧಾನದಲ್ಲಿ ಕಲ್ಪಿಸಿಕೊಳ್ಳಲೂ ಸಾಧ್ಯವಾಗಲಾರದು. ಅಲ್ಲದೆ,

* ವಿಶ್ರಾಂತ ಪ್ರಾಧ್ಯಾಪಕರು, ಚರಿತ್ರೆ ವಿಭಾಗ, ಹಂಪಿ ಕನ್ನಡ ವಿಶ್ವವಿದ್ಯಾಲಯ, ವಿದ್ಯಾರಣ್ಯ, ಹೊಸಪೇಟೆ ತಾಲ್ಲೂಕು, ಬಳ್ಳಾರಿ ಜಿಲ್ಲೆ.

ಈ ಎರಡೂ ಯುಗಗಳು ಅಥವಾ ರೂಪಗಳು ಅಭಿನ್ನವಾಗಿದ್ದು, ಮಾನವಸಮಾಜದ ಪರಿಪೂರ್ಣ ಇತಿಹಾಸ ರಚನೆಗೆ ನೆರವಾಗಬಲ್ಲಂಥವೆಂಬುದನ್ನು ನಿರಾಕರಿಸಲಾಗದು. ಕಗ್ಗತ್ತಲಿನಲ್ಲಿ ಹುದುಗಿರುವಂತೆ ಭಾಸವಾಗುವ ನಮ್ಮ ಅತಿ ಪ್ರಾಚೀನಯುಗದಲ್ಲಿ ಜೀವಿಸಿದ್ದ ಜನಸಮುದಾಯಗಳು ಸರಿಯಾಗಿ ದಾಖಲಾಗದೆ ಹೋದುದಕ್ಕೆ ಅಥವಾ ಹೇಳಹೆಸರಿಲ್ಲದಂತೆ ಮಾಯವಾದುದಕ್ಕೆ ನಿಗೂಢ ಕಾರಣಗಳೇನೂ ಇಲ್ಲ. ಆದ್ದರಿಂದ ಇಂಥಾ ಸಮುಚ್ಛಿನ್ನ ಸಮಾಜಗಳ ಮರುಶೋಧಕ್ಕೆ ಪ್ರಯತ್ನವಂತೂ ನಡೆಯಲೇಬೇಕು.

ಅನಾಗರಿಕ ಯುಗವನ್ನು ಶ್ರಮದ ಯುಗವೆಂತಲೂ ವ್ಯಾಖ್ಯಾನಿಸಲಾಗುತ್ತಿದ್ದು, ಚಾರಿತ್ರಿಕ ಯುಗದ ಮಾನವ ಸಂಸ್ಕೃತಿಯ ಬೆಳವಣಿಗೆಗೆ ಕಾರಣವಾದುದು ಪ್ರಾಚೀನ ಮಾನವನ ಶ್ರಮಸಂಸ್ಕೃತಿ ಎಂಬುದರಲ್ಲಿ ಲವಲೇಶವೂ ಅನುಮಾನವಿಲ್ಲ. ತನ್ನದೇ ಸಂಸ್ಕೃತಿ ನಿರ್ಮಾಣ ಕಾರ್ಯದಲ್ಲಿ ಈ ಅನಾಗರಿಕ ಮಾನವನೂ ಸಕ್ರಿಯನಾಗಿದ್ದುದು ಸಹಾ ವಾಸ್ತವ. ಇಂಥಾ ಶ್ರಮಿಕ ಸಮುದಾಯಗಳನ್ನು ಗುರುತಿಸುವ ನಿಟ್ಟಿನಲ್ಲಿ ಎಲ್ಲರೂ ಶ್ರಮಿಸಬೇಕಿದೆ. ಕರ್ನಾಟಕದ ಮಟ್ಟಿಗಾದರೂ ಇಂಥಾ ಪ್ರಯತ್ನ ನಡೆಯಬೇಕಾದುದು ಇಂದಿನ ಅಗತ್ಯವಾಗಿದೆ.

* * *

ಮೌರ್ಯರ ಆಡಳಿತದಿಂದ ವಿಜಯನಗರದವರೆಗೆ ಏಕಸ್ರೋತವಾಗಿ ಬಂದಿರುವ ಇತಿಹಾಸವಾಹಿನಿಯನ್ನು ಕುರಿತು ಇಲ್ಲಿ ಹೇಳುವುದು ಉಚಿತವಲ್ಲ ! ಏಕೆಂದರೆ ವಿದ್ವಾಂಸರ ಪಡೆಯಿಂದ ರಚಿಸಲ್ಪಟ್ಟಿರುವ ನೂರಾರು ಕೃತಿಗಳು, ಬರಹಗಳು ಎದುರಿನಲ್ಲೇ ಇವೆ; ಹಾಗೂ ಈ ಇತಿಹಾಸ ಶೃಂಖಲೆಯ ಮುರಿಯದ ಕೊಂಡಿಗಳಂತೆ ಇವು ಪರಸ್ಪರ ಬೆಸೆದುಕೊಂಡಿವೆ ! ಆದರೆ ಭಾನುವಿನ ಸಾಮರ್ಥ್ಯದ ಎದುರಿನಲ್ಲಿ ಮಿಂಚುಬುಳುವಿಂಗೆಲ್ಲಿಯ ಬೆಲೆ ? ರಾಜಾಧಿ ರಾಜರು, ಅಧಿಕಾರಿಗಳು, ಶ್ರೀಮಂತರು, ಪುರೋಹಿತರು, ವಣಿಕರು ಮೊದಲಾದ ಪ್ರತಿಷ್ಠಿತರ ಇತಿಹಾಸ ಪ್ರಭೆಯಲ್ಲಿ ಸಮಾಜಕ್ಕೆ ಆಧಾರವಾದ, ಇವರೆಲ್ಲರ ಅಟ್ಟಹಾಸಗಳೊಡನೆ ಅನುಬಂಧಿಗಳಾಗಿರುವ ಜನಸಾಮಾನ್ಯರಿಗೆಲ್ಲಿಯ ಸ್ಥಾನ–ಮಾನ ? ದಾಖಲೆಗಳ ಯಾವ ಮೂಲೆ–ಮೊಡಕುಗಳನ್ನು ತಡಕಾಡಿದರೂ ಅವರ ಸುಳಿವೇ ಇಲ್ಲವಲ್ಲ ! ಜನಸಾಮಾನ್ಯರಿಗಾಗಿ ರಚನೆಗೊಳ್ಳುತ್ತಿರುವ ಸಾಹಿತ್ಯದ ಸಾಲಿನಲ್ಲಿ ಜನಇತಿಹಾಸವೂ ನಿಲ್ಲಬೇಡವೆ? ಅಲಕ್ಷಿತ ಜನಸಮುದಾಯಗಳ ಚಹರೆ–ಚಳಕಗಳನ್ನು ಹುಡುಕುವ ಪ್ರಯತ್ನವಂತೂ ತೀರಾ ಪ್ರಾಥಮಿಕ ಹಂತದಲ್ಲಿದೆ. ನಾವು ತಿಳಿಯಬೇಕಾದ್ದು, ಎಲ್ಲ ಕಾಲದ ಎಲ್ಲ ನಿರ್ಲಕ್ಷಿತ ಜನಸಮುದಾಯಗಳಿಗೂ ಒಂದು ಹಿನ್ನೆಲೆ, ಮಾರ್ಗ, ಪರಂಪರೆ ಇರುತ್ತದೆ. ಆದರೆ ನಮ್ಮ ಆಸಕ್ತಿಯನ್ನು ಕೇಂದ್ರೀಕರಿಸದೆ ಇಂಥಾ ಮರೆಯಾದವರ ಇತಿಹಾಸ ರಚಿಸಲು ಸಾಧ್ಯವಾಗುವುದಿಲ್ಲ. ಇತಿಹಾಸವೆಂಬುದು ಮಹಾಸಾಗರದಂತೆ; ಇದರಲ್ಲಿ ಮುಳುಗುಹಾಕಲು ಧೀರರಾದ ಸಂಶೋಧಕ–ಇತಿಹಾಸಕಾರರು ಬೇಕಷ್ಟೆ !

ಮಹಾನ್ ಸಾಮ್ರಾಟರ ಇತಿಹಾಸಕ್ಕೆ ಆಕರಗಳೆಂದರೆ ಅವರೇ ಸೃಷ್ಟಿಸಿದ ಅಥವಾ ಅವರ ನಿರ್ದೇಶನದಲ್ಲಿ ಇತರರಿಂದ ಸೃಷ್ಟಿಯಾದ ಶಾಸನ, ಗ್ರಂಥ, ವಂಶಾವಳಿಗಳಂಥಾ ದಾಖಲೆಗಳು. ಅನ್ಯ ಆಕರಗಳ ಪ್ರಸ್ತಾಪ ವಿರಳವೆಂದರೂ ಸರಿಯೇ. ಈ ಆಕರಗಳ ವಸ್ತುನಿಷ್ಠತೆ, ವಿಶ್ವಸನೀಯತೆ ಕುರಿತು ಈವರೆಗೆ ಸರಿಯಾದ ಚರ್ಚೆ ನಡೆದಿಲ್ಲ. ಕೆಲವು ಸ್ಥಳೀಯ ದಾಖಲೆಗಳ ವಿನಾ ಇಂಥಾ ಪ್ರತಿಷ್ಠಿತ ಆಕರಗಳು ಸಮಕಾಲೀನ ಸಮಾಜದ ಸಮಗ್ರಚಿತ್ರ ಕೊಡುವಲ್ಲಿ ಹಿಂದೆ ಬೀಳುವುದುಂಟು. ನಮ್ಮ ವಿದ್ವಾಂಸರು ಇವುಗಳನ್ನು ಶ್ರಮಪೂರ್ವಕ ಅಧ್ಯಯನ ಮಾಡಿ ಪುಸ್ತಕಗಳನ್ನು ಸಾಲಾಗಿ ಹೊರತಂದನಂತರವೂ ಅನೂಚಾನವಾಗಿ ಬಂದ 'ಸ್ಥಾಪಿತ ಸತ್ಯ'ಗಳೇ ಮತ್ತೆ ಮತ್ತೆ ಪ್ರಕಟಗೊಳ್ಳುತ್ತಿರುವುದೂ ವಾಸ್ತವ ಸಂಗತಿ. ಈ ಎಲ್ಲ ಕೃತಿಗಳ ಮಟ್ಟಿಗೂ ಈ ಮಾತು ನಿಜ. ಸಾಮಾನ್ಯವಾಗಿ ಹೆಚ್ಚುವರಿ ಆಕರಗಳಿಂದ ವಿಷಯ ವಿಸ್ತಾರಗೊಳ್ಳಬಲ್ಲುದೇ ವಿನಾ ಬದಲಾದ ಚಿತ್ರವನ್ನು ಕೊಡಲಾರದು. ಆದ್ದರಿಂದ ಸಮಕಾಲೀನ ಜನಪದಗಳು ಕಂಡುಂಡ ಅಂದಿನ ಸಾಮ್ರಾಟರ, ಆಳರಸರ ವೈಭವ–ಕೀರ್ತಿಗಳನ್ನು, ಹೋರಾಟಗಳನ್ನು, ತ್ಯಾಗ–ಆದರ್ಶಗಳನ್ನು, ಸೊಗಸು–ಹೊಲಸುಗಳನ್ನು ಅವರು ವ್ಯಕ್ತಪಡಿಸಿರುವಂತೆಯೇ ಹಿಡಿದಿಡುವ, ತಮ್ಮ ಬರಹಗಳಲ್ಲಿ ಬಳಸಿಕೊಳ್ಳುವ ಮೂಲಕ, ಏಕರೂಪಿ ಇತಿಹಾಸ ಮಾದರಿಯನ್ನು ಪರಿಷ್ಕರಿಸುವ ಜವಾಬ್ದಾರಿ ನಮ್ಮೆಲ್ಲರ ಮೇಲಿದೆ. ಈಚಿನ ಚರಿತ್ರಕಾರರಲ್ಲಿ ಅನೇಕರು ಈ ಕೆಲಸವನ್ನು ಮಾಡಲು ತೊಡಗಿರುವುದು ಸ್ವಾಗತಾರ್ಹ ಬೆಳವಣಿಗೆ. ಆದರೆ ಇವರಲ್ಲಿ ಕೆಲವರು ಅನುಸರಿಸುವ ಮಾದಿರಗಳು ದೇಸೀ ದೃಷ್ಟಿಕೋನದಿಂದ ದೂರ ಉಳಿದುಕೊಂಡಂತೆ ಕಾಣುವುದೊಂದು ವಿಪರ್ಯಾಸ. ಇತಿಹಾಸದ ವಸ್ತುವಿಶ್ಲೇಷಣೆಗೆ ವಿಶ್ವದ ಯಾವ ಮಾದರಿಯನ್ನು ಅಳವಡಿಸಿಕೊಂಡರೂ ಸರಿಯೇ ; ಆದರೆ ಆಯಾ ಪ್ರಾಂತೀಯ ಆಡಳಿತಗಳನ್ನು ಅಧ್ಯಯನಿಸುವಾಗ ಸ್ಥಳೀಯ ಮಾಹಿತಿ ಹಾಗೂ ವಿಶ್ಲೇಷಣ ವಿಧಾನಗಳು ಹೆಚ್ಚು ಉಪಯುಕ್ತ. ಇದನ್ನು ನಾವು ಪ್ರಾದೇಶಿಕವಾಗಿ ಪ್ರಚಲಿತವಿರುವ ಮೌಖಿಕ ಸಾಹಿತ್ಯ, ಆಚರಣೆ, ನಂಬಿಕೆ, ಭಾಷೆಗಳ ಮೂಲಕ ಸ್ಥೂಲವಾಗಿಯಾದರೂ ಗ್ರಹಿಸಬಹುದು.

ಅಭಿಜಾತ ಸಾಹಿತ್ಯಾಕರಗಳು ಚಿತ್ರಿಸುವ ಇತಿಹಾಸವೇ ಒಂದು ಪರಿಯದಾದರೆ, ಜನಪದಸಾಹಿತ್ಯ ಒದಗಿಸುವ ಮಾಹಿತಿಯೇ ಇನ್ನೊಂದು ಪರಿಯದು. ಇವುಗಳ ನಡುವೆ ಪರಸ್ಪರ ವೈರುಧ್ಯಗಳಿಂದ ಕೂಡಿರುವ ಎಷ್ಟೋ ಸಂಗತಿಗಳನ್ನು ಗುರುತಿಸಬಹುದು. ಪ್ರಾಚೀನ ಜನಪದಸಾಹಿತ್ಯ ಉಳಿದು ಬಂದಿಲ್ಲವೆಂಬುದು ನಿಜ. ಆದರೆ ಜನಪದರ ನೆನಪುಗಳು ಹೇಗಾದರೂ ಎಲ್ಲಿಯಾದರೂ ಜೀವಂತವಿರುತ್ತವೆಂಬುದರ ಬಗೆಗೆ ವಿಶ್ವಾಸವಿರಿಸಿಕೊಳ್ಳಬೇಕು. ಪ್ರಾಚೀನ ಬುಡಕಟ್ಟುಗಳು, ಕಾಡು–ಮೇಡುಗಳಲ್ಲಿ ನೆಲೆಸಿರುವ ಜನಾಂಗಗಳತ್ತ ಒಂದು ದೃಷ್ಟಿ ಹಾಯಿಸುವುದಾದರೆ ಇದು ಕಷ್ಟವೇನಲ್ಲ. ಅಲ್ಲದೆ, ಅಭಿಜಾತಸಾಹಿತ್ಯ ಮತ್ತು ಜನಪದಸಾಹಿತ್ಯ – ಇವೆರಡೂ ಆಕರಗಳನ್ನು ಬಳಸಿಕೊಳ್ಳುವಲ್ಲಿ ಇತಿಹಾಸಕಾರರು ಪಕ್ಷಪಾತ ವಹಿಸದೆ ನಿರ್ದುಷ್ಟತೆಯನ್ನು ಉಳಿಸಿಕೊಂಡರೆ ಸಾಕು. ಸಾಮ್ರಾಟರ ಜೊತೆಜೊತೆಗೆ ಅವರ ಒಡನಾಡಿಗಳಾಗಿದ್ದ ಸಾಮಾನ್ಯಪ್ರಜೆಗಳನ್ನೂ ಉದಾರವಾಗಿ ಗುರುತಿಸುವುದರ ಇತಿಹಾಸಕ್ಕೆ ಮೆರುಗು ಬರುತ್ತದೆ ; ಸತ್ವ ಹೆಚ್ಚುತ್ತದೆ ; ಸ್ವಾರಸ್ಯ ಉಳಿಯುತ್ತದೆ ; ಹಾಗೂ ಅದು ಜನಪರವೂ ಜನಪ್ರಿಯವೂ ಆಗುತ್ತದೆ. ಸ್ಥಳೀಯ ಚರಿತ್ರೆ ಶೋಧದಲ್ಲಿ ತೊಡಗಿರುವ ಕಿರಿಯ ತಲೆಮಾರಿನವರಲ್ಲಿ ಈ ಪ್ರವೃತ್ತಿ ಹೆಚ್ಚುತ್ತಿರುವುದು ಸಂತೋಷದ ಸಂಗತಿ.

ಮೌಖಿಕ ಆಕರದ ಬಗೆಗೆ ಒಂದು ಮಾತು. ಮೌಖಿಕತೆಯೆಂದರೆ ಸ್ಮರಣಾಂತರ್ಗತ ಘಟನೆಗಳ, ಸಂಗತಿಗಳ ವಿಭಿನ್ನ ನಿರೂಪಣಾ ವಿಧಾನ. ಲಿಖಿತ ಇತಿಹಾಸದ ವಿವರಗಳಲ್ಲಿ ಹಿನ್ನೆಲೆಯಾಗಿ, ಅಗೋಚರರೂಪದಲ್ಲಿ ಇದು ಹುದುಗಿಕೊಂಡಿರುತ್ತದೆ. ಜಸಸಮುದಾಯಗಳ ನೆನಪುಗಳಲ್ಲಿ ಸಂಕೀರ್ಣರೂಪದಲ್ಲಿ, ಸಾಂಕೇತಿಕ ರೂಪದಲ್ಲಿ ಇದು ಅಭಿವ್ಯಕ್ತಗೊಳ್ಳುತ್ತಿರುತ್ತದೆ. ಲಿಖಿತಮಾಹಿತಿ ಮೌನವಹಿಸುವ ಹಂತದಲ್ಲಿ ಮೌಖಿಕತೆ ಸಂವಾದವನ್ನಾರಂಭಿಸುವುದೇ ಇಲ್ಲಿಯ ವಿಶೇಷ. ಇತಿಹಾಸಧಾರೆಯ ನಿರಂತತೆಯನ್ನು ಕಾಯ್ದು ಕೊಳ್ಳಲು ಇಂಥಾ ಮಾಹಿತಿ ಪ್ರಯೋಜನಕಾರಿ. ಮರುವ್ಯಾಖ್ಯಾನ ಕ್ಕೊಳಪಡಿಸಿ ಸಂಸ್ಕರಿಸಿದ ಮಾಹಿತಿಯನ್ನೊಳಗೊಂಡ ಮೌಖಿಕ ಇತಿಹಾಸವು ದಾಖಲೆಯಾಧಾರಿತ ಇತಿಹಾಸದಷ್ಟೆ ಮೌಲಿಕವಾದುದು. ಪಾರಂಪರಿಕ ಲಿಖಿತ ಇತಿಹಾಸಕ್ಕೆ ಸಂವಾದಿಯಾಗಿ ಮೌಖಿಕ ಇತಿಹಾಸ ಇಂದು ತನ್ನ ನೆಲೆಯನ್ನು ಕಂಡುಕೊಳ್ಳುತ್ತಿದೆ. ನನ್ನ ಮಟ್ಟಿಗೆ, ದೀರ್ಘಾನುಭವ ಹಾಗೂ ಆಳ ಅಧ್ಯಯನಗಳ ನೆರವಿನಿಂದ ಇಂಥಾ ಮಾಹಿತಿಯನ್ನು ಕ್ರೋಢೀಕರಿಸಿ ವಿಶ್ಲೇಷಿಸಬೇಕಾಗುತ್ತದೆ. ಪ್ರಸ್ತುತ ಇತಿಹಾಸ ರಚನಾ ಸಂದರ್ಭದಲ್ಲಿ ಇಂಥಾ ಮಾಹಿತಿಗೆ ಮಹತ್ವವಿದೆ. ಸ್ಥಳೀಯ ಚರಿತ್ರೆಯ ಅಧ್ಯಯನ ತೀವ್ರಗತಿಯಲ್ಲಿದ್ದು, ಇಲ್ಲೆಲ್ಲ ಮೌಖಿಕ ಮಾಹಿತಿಯು ಪರಿಣಾಮಕಾರಿಯಾಗಿ ಉಪಯೋಗ ಕ್ಕೊಳಪಡುತ್ತಿರುವುದನ್ನು ನೋಡಬಹುದು.

*  *  *

ವಿಜಯನಗರ ಕಾಲಾವಧಿ ಮತ್ತು ಆ ನಂತರದ ಇತಿಹಾಸದ ಸ್ವರೂಪ ಕುರಿತು ಇಲ್ಲಿ ಪ್ರಸ್ತಾಪಿಸಬೇಕು. ಹನ್ನೆರಡನೆಯೇ ಶತಮಾನದಲ್ಲಿ ಆಂಧ್ರದಲ್ಲಿ ಅಸ್ತಿತ್ವಕ್ಕೆ ಬಂದ ಕಾಕತೀಯ ಸಾಮ್ರಾಜ್ಯವು ಹುಟ್ಟುಹಾಕಿದ ನಾಯಕರ ಒಕ್ಕೂಟವು (Naayka Confederacy) ದಕ್ಷಿಣಭಾರತದ ಇತಿಹಾಸದಲ್ಲಿ ಹಿಂದೂ ಸಾಮ್ರಾಜ್ಯಶಾಹಿಯು ಇಟ್ಟ ಮಹತ್ವದ ಹೆಜ್ಜೆಯೆನ್ನಬಹುದು. ಈ ನಾಯಕರ ಪದ್ಧತಿಯು ವಿಜಯನಗರ ಸಾಮ್ರಾಜ್ಯ ಸ್ಥಾಪನೆಯ ಹಿನ್ನೆಲೆಯಲ್ಲಿಯೂ ಪರಿಣಾಮಕಾರಿ ಪಾತ್ರ ನಿರ್ವಹಿಸಿತು. ಈ ಒಕ್ಕೂಟದಲ್ಲಿದ್ದ ಕಮ್ಮರೆಡ್ಡಿ, ಬೋಯ ಅಥವಾ ಬೇಡ, ಬಲಿಜವರ್ಗಗಳ ನಾಯಕರು, ತಮ್ಮ ಒಡನಾಡಿಗಳು ಹಾಗೂ ಬಂಧುಗಳೇ ಆಗಿದ್ದ ವಿಜಯನಗರ ಅರಸರ ಅಧೀನದ ನಾಯುಕರ ವ್ಯವಸ್ಥೆಯನ್ನು ಒಪ್ಪಿಕೊಂಡರಲ್ಲದೆ, ಹಂಪಿ–ವಿಜಯನಗರದ ಪಟ್ಟಣ ಮತ್ತು ಕೋಟೆಗಳ ನಿರ್ಮಾಣಕಾರ್ಯದಲ್ಲಿಯೂ ತಮ್ಮ ಸಹಕಾರವನ್ನಿತ್ತರು. ಇದರಿಂದ ತೆಲುಗು ಪ್ರದೇಶಗಳು ಮಾತ್ರವಲ್ಲದೆ, ತಮಿಳುನಾಡು, ಕರ್ನಾಟಕದ ಕೋಲಾರ ಮತ್ತಿತರ ಪ್ರದೇಶಗಳು ವಿಜಯನಗರ ಆಧಿಪತ್ಯಕ್ಕೆ ಒಳಪಟ್ಟು ವಿಶಾಲ ಸಾಮ್ರಾಜ್ಯ ನಿರ್ಮಾಣಗೊಂಡಿತು. ಕರ್ನಾಟಕದ ವ್ಯಾಪ್ತಿಯಲ್ಲಿ ಪ್ರಧಾನ ಪಾತ್ರವಹಿಸಿದವರು ಬೇಡನಾಯಕರು. ವಿಜಯನಗರ ಇತಿಹಾಸದ ಮಟ್ಟಿಗೆ, ಆರಂಭದಲ್ಲಿದ್ದ ಬಹುಪಾಲು ನಾಯಕರು ಕನ್ನಡಿಗರು; ಆ ನಂತರ ತೆಲುಗುಮೂಲದ ನಾಯಕರು ಕಾಣಿಸಿಕೊಂಡರೆಂದು ತಿಳಿಯುತ್ತದೆ. ವಿಜಯನಗರವು ಅಳವಡಿಸಿಕೊಂಡ ನಾಯಂಕರ ಪದ್ಧತಿಯನ್ನು ಕನ್ನಡ ಮತ್ತು ತಮಿಳು ಭಾಷೆಗಳಲ್ಲಿ ನಾಯಕತನ–ನಾಯಕತಮ್ (>ನಾಯಕಟ್ಟನಮ್) ಎಂದು ಕರೆದಿದ್ದರೆ, ತೆಲುಗಿನಲ್ಲಿ ಇದನ್ನು ನಾಯಂಕರವ್ ಎನ್ನಲಾಯಿತು. ಈ ನಾಯಕ–ನಾಯಂಕರ ವ್ಯವಸ್ಥೆಯು ಪೂರ್ಣಪ್ರಮಾಣದಲ್ಲಿ ರೂಪುಗೊಂಡುದು ಕೃಷ್ಣದೇವರಾಯನ ಕಾಲದಲ್ಲಿ.

ದಕ್ಷಿಣಭಾರತದಲ್ಲಿ ಪ್ರಬಲಶಕ್ತಿಯಾಗಿ ಹೊರಹೊಮ್ಮಿದ ವಿಜಯನಗರ ಸಾಮ್ರಾಜ್ಯದ ಕೀರ್ತಿಪ್ರಭೆ ಹರಡಲು ಕಾರಣರಾದವರು ಅದರ ಅಧೀನದಲ್ಲಿದ್ದ ನೂರಾರು ನಾಯಕ ಪಾಳೆಯಗಾರರು ವಿಜಯನಗರವೆಂಬ ಜ್ಯೋತಿಗೆ ತೈಲವಾದವರಿವರು. ಸಾಮ್ರಾಟರ ಪರವಾಗಿ ಸಮರ್ಥ ಯೋಧರಾಗಿ, ನಿಷ್ಠಾವಂತ ಪ್ರಾಂತಾಧಿಕಾರಿಗಳಾಗಿ ಸೇವೆ ಸಲ್ಲಿಸಿದವರು. ನಾಯಂಕರ ವ್ಯವಸ್ಥೆಯಾಚೆಗಿನ ವಿಜಯನಗರದ

ಅಸ್ತಿತ್ವವನ್ನು ಕಲ್ಪಿಸಿಕೊಳ್ಳಲು ಸಾಧ್ಯವಿಲ್ಲ. ವಿಜಯನಗರ ದೇಹವಾಗಿದ್ದರೆ, ಅದರ ಪ್ರಾಣದಂತಿದ್ದವರು ನಾಯಕ ಪಾಳೆಯಗಾರರು. ಸಾಮಂತ, ನಾಯಕ, ಪಾಳೆಯಗಾರ, ದಂಡನಾಯಕ, ಮಂಡಲೇಶ್ವರ, ರಾಜ, ಮಹಾರಾಜ, ಅರಸ, ಒಡೆಯ, ದೊರೆ ಇತ್ಯಾದಿಯಾಗಿ ಕರೆಸಿಕೊಳ್ಳುತ್ತಿದ್ದವರೆಲ್ಲರೂ ನಾಯಕ ಪಾಳೆಯಗಾರರೇ. ನಾಯಕ (ಬೇಡ), ಮೊರಸು ಒಕ್ಕಲಿಗ, ತೆಲುಗು ಬಣಜಿಗ, ಹಂಡೆ ಕುರುಬ, ವೀರಶೈವ, ಗೊಲ್ಲ, ಚೋಳಶೈವ, ಯರೇಗೊಲ್ಲ ಜನಾಂಗ ಇತ್ಯಾದಿ ಜಾತಿವರ್ಗಗಳಿಗೆ ಸಂಬಂಧಿಸಿದವರು ಇವರು. ತಮಿಳುನಾಡಿನ ಶಾಸನಗಳನ್ನು ಅಧ್ಯಯನಿಸಿದ ನೊಬೊರು ಕರಾಷಿಮಾ ಅವರ ಪ್ರಕಾರ, ತಮಿಳುನಾಡು ಒಂದರಲ್ಲೆ ವಿಜಯನಗರ ಕಾಲೀನ ನಾಯಕ ಪಾಳೆಯಗಾರರ ಸಂಖ್ಯೆ ೩೦೦ನ್ನು ಮೀರುತ್ತದೆ. ಚೆಂಗಲ್‌ಪಟ್ಟು ಪ್ರದೇಶವೊಂದರಲ್ಲೆ ೧೫೯ ನಾಯಕ ಪಾಳೆಯಗಾರರಿದ್ದುದನ್ನು ಗುರುತಿಸಲಾಗಿದೆ. ವೈ. ಸುಬ್ಬರಾಯಲು ಹೇಳುವಂತೆ, ಕೃಷ್ಣದೇವರಾಯನ ಆಳ್ವಿಕೆಯಲ್ಲಿ ಆಂಧ್ರಪ್ರದೇಶದಲ್ಲಿದ್ದ ಪ್ರಮುಖ ಅಮರನಾಯಕರ ಸಂಖ್ಯೆ ೩೭. ಅಚ್ಯುತರಾಯನ ಕಾಲದಲ್ಲಿ ಈ ನಾಯಕ ಪಾಳೆಯಗಾರರ ಸಂಖ್ಯೆ ೨೦೦ಕ್ಕೇರಿತು. ಆದರೆ ಇವರಲ್ಲಿ ಎಷ್ಟೋ ನಾಯಕರು ವಿಜಯನಗರದ ಅಧೀನದಲ್ಲಿದ್ದರೂ ಭಾಗಶಃ ಸ್ವಾತಂತ್ರ್ಯ ಪಡೆದ ಆಡಳಿತಗಾರರಾಗಿದ್ದರೆನ್ನುವುದನ್ನು ಗಮನಿಸಬೇಕು.

ವಿಜಯನಗರವು ಪತನವಾದ ನಂತರ ಈ ನಾಯಕ ಪಾಳೆಯಗಾರರ ಸಂಖ್ಯೆ ಇಳಿಮುಖವಾಗತೊಡಗಿತೆನ್ನುವುದು ವಾಸ್ತವ. ಆದರೆ 'ಹೈದರ್‌ನಾಮಾ' ದಾಖಲೆಯ ಪ್ರಕಾರ, ಹೈದರ್‌ಅಲಿಯ ಸಮಕಾಲೀನ ನಾಯಕ ಪಾಳೆಯಗಾರರ ಸಂಖ್ಯೆ ೨೫೦ ರಿಂದ ೩೦೦. ದಕ್ಷಿಣ ಕರ್ನಾಟಕ ಪ್ರದೇಶದಲ್ಲಿಯೇ ಒಂದುನೂರಕ್ಕೂ ಹೆಚ್ಚು ನಾಯಕ ಪಾಳೆಯಗಾರರಿದ್ದರು. ಪ್ರಸ್ತುತ ಪರಿಸ್ಥಿತಿ ಏನೆಂದರೆ, ಈಚಿನ ಸಮೀಕ್ಷೆಯ ಪ್ರಕಾರ, ಕರ್ನಾಟಕದ ಮಟ್ಟಿಗೆ ಸುಮಾರು ೧೮೦ ನಾಯಕ ಪಾಳೆಯಗಾರರು ಅಸ್ತಿತ್ವದಲ್ಲಿದ್ದುದು ಖಚಿತಪಡುತ್ತದೆ. ಇವುಗಳ ಪೈಕಿ ಇಂದಿಗೂ ಜೀವಂತವಿರುವ ಸಂಸ್ಥಾನಗಳು ಸುಮಾರು ೨೫. ಇಲ್ಲಿ ಉತ್ತರ ಕರ್ನಾಟಕದ ದೇಸಾಯಿ ಮನೆತನಗಳನ್ನು ಲೆಕ್ಕಕ್ಕೆ ಹಿಡಿದಿಲ್ಲ.

ದಕ್ಷಿಣ ಭಾರತದ ನಾಯಕ ಪಾಳೆಯಗಾರರನ್ನು ಕುರಿತು ಈವರೆಗೆ ಅಧ್ಯಯನ ನಡೆಸಿದವರಲ್ಲಿ ಆರ್. ಸತ್ಯನಾಥ್ ಅಯ್ಯರ್, ಟಿ.ವಿ. ಮಹಾಲಿಂಗಂ, ಕೆ. ರಾಜಯ್ಯನ್, ಜೆ.ಸಿ. ಮಿಶ್ರಾ, ಸಿ.ಎಸ್. ಶ್ರೀನಿವಾಸಾಚಾರಿ, ಪಿ.ಜಿ. ರಾಮಚಂದ್ರರಾವ್, ಬಿ. ಕೇಶವನಾರಾಯಣ, ಕೆ. ವಿಶ್ವನಾಥ, ಸೇತುಮಾಧವರಾವ್ ಪಗಡಿ, ಎಂ.ಎಚ್. ರಾಮಶರ್ಮ, ಕೆ.ಡಿ. ಸ್ವಾಮಿನಾಥನ್, ವೈ. ಸುಬ್ಬರಾಯಲು, ನೊಬೊರು ಕರಾಷಿಮಾ ಮೊದಲಾದವರು ಪ್ರಮುಖರು. ಪಾಳೆಯಗಾರಶಾಹಿ ಕುರಿತು ಪಕ್ಷಪಾತಿಗಳಾದ ದೇಶೀ ಚರಿತ್ರಕಾರರ ದೃಷ್ಟಿ-ಧೋರಣೆಗಳನ್ನು ತಿದ್ದುವಲ್ಲಿ ಈ ಕೆಲವು ವಿದ್ವಾಂಸರು ಕಾರಣರಾಗಿದ್ದರೆನ್ನುವುದು ಇಲ್ಲಿ ಮುಖ್ಯ. ಕರ್ನಾಟಕದ ಮಟ್ಟಿಗೆ, ಎಂ.ಎಸ್. ಪುಟ್ಟಣ್ಣ, ಹುಲ್ಲೂರು ಶ್ರೀನಿವಾಸ ಜೋಯಿಸ, ಕಪಟರಾಳ ಕೃಷ್ಣರಾವ್, ಕೆ.ಎನ್. ಚಿಟ್ನೀಸ್, ಜಿ.ಎಸ್. ದೀಕ್ಷಿತ್ ಮೊದಲಾದವರನ್ನು ಉಲ್ಲೇಖಿಸಬಹುದು. ಈಚಿನವರಲ್ಲಿ ಸುಮಾರು ೬೦-೭೦ ಮಂದಿ ಸಂಶೋಧಕರು ಈ ಕಾರ್ಯದಲ್ಲಿ ಸಕ್ರಿಯರಾಗಿದ್ದಾರೆ.

ಕೇವಲ ನಾಯಕ ಪಾಳೆಯಗಾರರ ರಾಜಕೀಯ ಇತಿಹಾಸ ಮತ್ತು ದಾಖಲೆಗಳಿಗಷ್ಟೆ ಸೀಮಿತರಾಗದೆ, ವಾಸ್ತು, ಶಿಲ್ಪ, ಕಲೆ ಮೊದಲಾದ ಸಂಸ್ಕೃತಿಸಂಬಂಧಿ ಅಂಶಗಳನ್ನು ಅಧ್ಯಯನಿಸಿದವರೂ ಇದ್ದಾರೆ. ಹಾಗೆಯೇ, ಪಾಳೆಯಗಾರ ಶಾಹಿ ಕುರಿತು ಭಿನ್ನನೆಲೆಯಲ್ಲಿ ವ್ಯಾಖ್ಯಾನಿಸಿರುವವರಲ್ಲಿ ಕೆಲವರನ್ನಾದರೂ ಗುರುತಿಸಬಹುದು. ಆದರೆ ಒಮ್ಮೊಮ್ಮೆ ಪಾಳೆಯಗಾರಶಾಹಿಯನ್ನು, ಬ್ರಿಟಿಷ್ ವಸಾಹತುಶಾಹಿ ನೆಲೆಯಲ್ಲಿ ಹಾಗೂ ಮುಖ್ಯವಾಗಿ, ವಸಾಹತುಪರವಾದ ಬ್ರಿಟಿಷ್ ಇತಿಹಾಸಕಾರರ ಏಕಮುಖವಾದ ಅಧಿಕಾರಶಾಹಿ ಧೋರಣೆ-ದರ್ಪ-ಧಿಮಾಕುಗಳ ನೆಲೆಯಲ್ಲಿ ರಚಿತವಾದ ಕೃತಿಗಳು ಹಾಗೂ ಅವರ ಸಾಮ್ರಾಜ್ಯನಿಷ್ಠ ವಿಚಾರಗಳ ಹಿನ್ನೆಲೆಯಲ್ಲಿ ಚಿತ್ರಿಸಿರುವುದು, ವಿಶ್ಲೇಷಿಸಿರುವುದು ಕಂಡುಬರುತ್ತದೆ. ವಸಾಹತುಪೂರ್ವಕಾಲೀನ ಇತಿಹಾಸ ರಚನೆಯಲ್ಲಿ, ಅಂದರೆ ಭಾರತೀಯ ಆಳರಸರನ್ನು ಕುರಿತ ಬರವಣಿಗೆಗಳಲ್ಲಿ ಕಂಡುಬರುವ ಧೋರಣೆ ವಸಾಹತು ಕಾಲದಲ್ಲಿ ಮತ್ತು ಆ ನಂತರದಲ್ಲಿ ಬದಲಾದುದು ಸ್ಪಷ್ಟ. ಬ್ರಿಟಿಷ್ ಮತ್ತು ಐರೋಪ್ಯ ವಿದ್ವಾಂಸರ ಪ್ರಭಾವ ನಮ್ಮ ಮೇಲೆ ಎಷ್ಟಾಗಿದೆಯೆಂದರೆ ನಮ್ಮನ್ನೆ ನಾವು ಪ್ರಶ್ನಿಸಿಕೊಳ್ಳುವಷ್ಟು; ನಮ್ಮದೆಲ್ಲವನ್ನೂ ಮರೆಯುವಷ್ಟು, ಇದರ ಪ್ರಭಾವ-ಪರಿಣಾಮ, ಒಳಿತು-ಕೆಡುಕುಗಳೇನೇ ಇರಲಿ, ವಿಜಯನಗರೋತ್ತರಕಾಲೀನ ಇತಿಹಾಸದ ಮಟ್ಟಿಗೆ ಇದು ತನ್ನ ಕುದೃಷ್ಟಿಯನ್ನು ಬೀರಿದುದಂತೂ ನಿಜ. ಇಂಥಾ ಕಿಡುನೋಟಕ್ಕೆ ನೇರವಾಗಿ ಗುರಿಯಾದವರು ನಾಯಕ ಪಾಳೆಯಗಾರರೇ.

ಭಾರತೀಯ ಪಾಳೆಯಗಾರಶಾಹಿಯು ಬ್ರಿಟಿಷ್ ವಸಾಹತುಶಾಹಿಯೊಡನೆ ಮುಖಾಮುಖಿಯಾಗಲು ರಾಜಕೀಯ ಕಾರಣವಲ್ಲದೆ, ಆರ್ಥಿಕ ಕಾರಣವೂ ಪ್ರಧಾನವಾಗಿದ್ದಿತು. ಇದು ಏನೆ ಇದ್ದರೂ ತಮ್ಮ ಆಡಳಿತಶಾಹಿ ದೃಷ್ಟಿಕೋನದಿಂದ ಪಾಳೆಯಗಾರಶಾಹಿಯನ್ನು ಅರ್ಥೈಸಲು ಪ್ರಯತ್ನಿಸಿದ ಬ್ರಿಟಿಷರು, ಪಾಳೆಯಗಾರರೆಲ್ಲರೂ ಕೊಳ್ಳೆಕೋರರು, ನಿಷ್ಕರುಣಿಗಳು, ಜೀವವಿರೋಧಿಗಳು,

ತಂಟೆಕೋರರು ಇತ್ಯಾದಿಯಾಗಿ ವಿಕೃತವಾಗಿ ಚಿತ್ರಿಸಿದರು. ಕೆಲವು ದೇಸೀ ಚರಿತ್ರಕಾರರು ಸಹಾ ಬ್ರಿಟಿಷ್ ಅಧಿಕಾರಿಗಳು ಮತ್ತು ಗ್ರಂಥಕರ್ತರ ಅಭಿಪ್ರಾಯಗಳನ್ನೆ ತಮ್ಮ ಬರವಣಿಗೆಗಳಲ್ಲಿ ಎತ್ತಿ ಹೇಳುತ್ತಾ ಪಾಳೆಯಗಾರರ ವೃತ್ತಾಂತವನ್ನು ಇನ್ನಷ್ಟು ಹದಗೆಡಿಸಿರುವುದು ಕಟುವಾಸ್ತವ.

ಈ ಹಿನ್ನೆಲೆಯಲ್ಲಿ, ಇಲ್ಲಿ ನಾನು ಎತ್ತಲಿಚ್ಛಿಸುವ ಪ್ರಶ್ನೆಗಳೆಂದರೆ, ನಾಯಕ ಪಾಳೆಯಗಾರರೆಂದರೆ ಹಿಂದೂ ಸಾಮಂತವರ್ಗಕ್ಕೆ ಸೇರಿದ ಸಾಹಸಿಗಳೆಂದು, ನಿಸ್ಸೀಮ ದೈವಭಕ್ತರೆಂದು, ಸನಾತನ ಧರ್ಮರಕ್ಷಕರೆಂದು, ಗುಡಿ-ದೇಗುಲ-ಮಠ-ಮಾನ್ಯಗಳ ನಿಸ್ಪೃಹ ಸೇವಕರೆಂದು ಧರ್ಮ-ಸಂಸ್ಕೃತಿಗಳ ಮಹಾಪೋಷಕರೆಂದು, ಮಹಾಪ್ರಭುಗಳ ನಿಷ್ಠಾವಂತ ಅನುಯಾಯಿಗಳೆಂದು ಕೊಂಡಾಡುವ ನಮ್ಮ ದೇಸೀ ಇತಿಹಾಸಕಾರರೇ ಬ್ರಿಟಿಷರಂತೆ ವಿಕೃತ ಚಿತ್ರಣ ನೀಡಲು ಮುಂದಾದುದು ಹೇಗೆ? ನಾಯಕ ಪಾಳೆಯಗಾರರ ವೃತ್ತಾಂತವನ್ನು ಭೀಭತ್ಸರೀತಿಯಲ್ಲಿ ನಿರೂಪಿಸುವುದರೊಡನೆ ಜನಸಾಮಾನ್ಯರಲ್ಲೂ ಅಂಥಾ ಭಾವನೆ ಸ್ಥಿರಗೊಳ್ಳುವಂತೆ ಮಾಡಿರುವಂಥಾ ಇತಿಹಾಸಕಾರರು ಪಡೆದ ಸಾರ್ಥಕತೆ ಎಂಥದು ? ಕರ್ನಾಟಕ ವ್ಯಾಪ್ತಿಯ ನೂರಾರು ಪಾಳೆಯಗಾರರನ್ನು ಕುರಿತು ಈವರೆಗೆ ಸಮಗ್ರವಾಗಿ ಚಿತ್ರಿಸಲು ಬಹುಪಾಲು ಇತಿಹಾಸಕಾರರು ಮುಂದೆ ಬಾರದಿರಲು, ಈ ನಾಯಕ ಪಾಳೆಯಗಾರರು ತಮ್ಮ ಪ್ರದೇಶದ ಆಡಳಿತ ವ್ಯವಸ್ಥೆಯಲ್ಲಿ ನಿರ್ವಹಿಸುತ್ತಿದ್ದ ಜವಾಬ್ದಾರಿಯ ಸ್ವರೂಪ ಇವರಿಗೆ ಸರಿಯಾಗಿ ಅರ್ಥವಾಗದಿರುವುದೂ ಕಾರಣವೇ? ಅಗತ್ಯ ಮಾಹಿತಿಯ ಕೊರತೆಯ ಕಾರಣವಾಗಿ ನಾಯಕ ಪಾಳೆಯಗಾರರನ್ನು ಕುರಿತು ಬರೆಯುವಲ್ಲಿ ಗೊಂದಲಕ್ಕೊಳಗಾಗುವ ಪರಿಸ್ಥಿತಿಯಿದೆಯೆ? ಸಮಗ್ರ ಅಧ್ಯಯನದ ಕೊರತೆ ಹಾಗೂ ನಿರ್ದಿಷ್ಟ ತಿಳಿವಳಿಕೆಯ ಅಭಾವಗಳಿಂದಾಗಿ ಇತಿಹಾಸಕಾರರು ನಾಯಕ ಪಾಳೆಯಗಾರರ ಬಗೆಗೆ ದ್ವಂದ್ವ ನಿಲುವು ತಳೆಯಲು ಕಾರಣವಾಗಿದೆಯೆ?

ವಿಜಯನಗರ ಅಧೀನದಲ್ಲಿದ್ದ ನಾಯಕ ಪಾಳೆಯಗಾರರು ಅದರ ಪತನಾನಂತರ, ಅಂದರೆ ೧೫೬೫ರ ನಂತರ, ಕನಿಷ್ಠ ಒಂದು ಶತಮಾನ ಕಾಲ ತಮ್ಮ ಆಡಳಿತ ಕ್ರಮದಲ್ಲಿ ಸಂಪೂರ್ಣ ಸ್ವಾಯತ್ತತೆಯನ್ನು ಅನುಭವಿಸಿದವರು. ನೈಜ ಪಾಳೆಯಗಾರಶಾಹಿ ಸ್ವರೂಪ ಕುರಿತ ಅಧ್ಯಯನದ ದೃಷ್ಟಿಯಿಂದ ಈ ಅವಧಿ ಅರ್ಥಪೂರ್ಣವಾದುದು. ನಾಯಕ ಪಾಳೆಯಗಾರರು ತಮ್ಮ ಆಳ್ವಿಕೆಯ ಅನುಭವ ಮತ್ತು ಸಾಮರ್ಥ್ಯಗಳನ್ನು ಪೂರ್ಣಪ್ರಮಾಣದಲ್ಲಿ ತೋರಿಸಿಕೊಳ್ಳಲು ಸಾಧ್ಯವಾದುದೇ ಈ ಕಾಲಾವಧಿಯಲ್ಲಿ. ಆದರೆ ಈ ಸ್ಥಿತ್ಯಂತರ ಅವಧಿಯ ಅಧ್ಯಯನ ಸಮರ್ಪಕವಾಗಿ ನಡೆದಿಲ್ಲ. ಅಲ್ಲದೆ, ನಾಯಕ ಪಾಳೆಯಗಾರರ ಸಮಗ್ರ ಇತಿಹಾಸ ರಚಿಸುವ ಉತ್ಸಾಹವಂತೂ ಈಚೀಚೆಗೆ ಇನ್ನೂ ತಗ್ಗುತ್ತಿರುವಂತೆ ತೋರುತ್ತಿದೆ. ಜಾಗತಿಕ ಇತಿಹಾಸವನ್ನು ಅರಿಯುವ ಭರಾಟೆಯಲ್ಲಿ ನಮ್ಮ ನೆಲದಲ್ಲಿ ಆಳ್ವಿಕೆ ನಡೆಸಿದ ನಮ್ಮವರೇ ಆದ ನಾಯಕ ಪಾಳೆಯಗಾರರನ್ನು, ಅವರ ಸಾಧನೆಗಳನ್ನು, ಅತಿ-ಮಿತಿಗಳನ್ನು ಅಧ್ಯಯನಿಸುವ ಅವಶ್ಯಕತೆ ನಮ್ಮ ಸಂಶೋಧಕರಿಗೆ ಇಲ್ಲದಿರಬಹುದು. ಮೂರು ನೂರು ವರುಷಗಳ ಕಾಲ ದಕಿಣ ಭಾರತದಲ್ಲಿ ಸ್ಥಾನಿಕಪ್ರಭುಗಳಾಗಿ ಅಖಂಡವಾಗಿ ವಿಜೃಂಭಿಸಿದ ನಾಯಕ ಪಾಳೆಯಗಾರರನ್ನು ನಿರ್ಲಕ್ಷಿಸುವುದು ಸರಿಯಲ್ಲ. ನಮ್ಮ ವಿಶ್ವವಿದ್ಯಾಲಯಗಳಲ್ಲೂ ನಾಯಕ ಪಾಳೆಯಗಾರರಿಗೆ ಸಂಬಂಧಿಸಿದ ಸಂಶೋಧನೆಯು 'ವಿಧಿಕೈಂಕರ್ಯ'ದಂತೆ ನಡೆಯತೊಡಗಿದೆ. ಶಾಲಾ - ಕಾಲೇಜುಗಳ ಪಠ್ಯಪುಸ್ತಕಗಳಲ್ಲೂ ಈ ಆಳ್ವಿಕೆಗಾರರು ಸ್ಯಾಂಪಲ್‌ಗಾದರೂ ಪ್ರಸ್ತಾಪಗೊಳ್ಳುವುದಿಲ್ಲ. ಕರ್ನಾಟಕದ ನಾಯಕ ಪಾಳೆಯಗಾರರ ಮಟ್ಟಿಗಾದರೂ ವ್ಯವಸ್ಥಿತ ಅಧ್ಯಯನ ನಡೆಯುವ ಅಗತ್ಯವಿದೆ. ಸಾಹಿತ್ಯ, ಇತಿಹಾಸ, ಭಾಷಾ ಸಮ್ಮೇಳನಗಳಂತೇ ಕರ್ನಾಟಕ ನಾಯಕ ಪಾಳೆಯಗಾರರನ್ನು ಕುರಿತ ಸಮ್ಮೇಳನವೂ ನಡೆಯುವ ಅಗತ್ಯವಿದ್ದು,ಈ ನಿಟ್ಟಿನಲ್ಲಿ ಪ್ರಯತ್ನವೂ ನಡೆದಿದೆ. ಇದಕ್ಕೆ ಸಂಶೋಧಕರ, ವಿದ್ವಾಂಸರ ಬೆಂಬಲ ಬೇಕಷ್ಟೆ.

ಕತ್ತಲಲ್ಲಿ ಮರೆಯಾದಂತಿರುವ ಆದಿಹಳೇಶಿಲಾಯುಗದ ಜನಸಾಮುದಾಯಗಳನ್ನು ಮೊದಲ್ಗೊಂಡು ವಿಜಯನಗರೋತ್ತರ ಕಾಲೀನ ನಾಯಕ ಪಾಳೆಯಗಾರರ ಆಳ್ವಿಕೆಯವರೆಗೆ ಹರಿದುಬಂದಿರುವ ಇತಿಹಾಸದಲ್ಲಿ, ಅಲಕ್ಷಿತ ಸಾಂಸ್ಕೃತಿಕ ಧಾರೆಗಳನ್ನು ಮತ್ತೊಮ್ಮೆ ಗುರುತಿಸುವ ಹಾಗೂ ವ್ಯಾಪಕ ಅಧ್ಯಯನ ಕೈಗೊಳ್ಳುವ ಅಗತ್ಯ ತೋರುತ್ತದೆ. ಇದು ಕೇವಲ ಕೆಲವು ಆಸಕ್ತರಿಗಷ್ಟೆ ಮೀಸಲಾದ ಕ್ಷೇತ್ರವಾಗುಳಿಯದೆ, ಎಲ್ಲ ಇತಿಹಾಸ ಸಂಶೋಧಕರೂ ಪ್ರವೇಶಿಸುವಂಥಾ ಮುಕ್ತಕ್ಷೇತ್ರವೆನಿಸುವುದು ಉಚಿತ. ಅಂಥಾ ಕಾಲ ಬಂದೇ ಬರುತ್ತದೆಂಬ ನಿರೀಕ್ಷೆಯೊಡನೆ, ಇಲ್ಲಿ ಸೇರಿರುವ ಎಲ್ಲರನ್ನೂ ಮತ್ತೊಮ್ಮೆ ವಂದಿಸಿ, ನನ್ನ ಮಾತುಗಳನ್ನು ಕೊನೆಗೊಳಿಸುತ್ತೇನೆ.

॥ ಶರಣು ಶರಣಾರ್ಥಿ ॥

# ಇತಿವೃತ್ತ

**೦೧. ವೈಯಕ್ತಿಕ**

| | | |
|---|---|---|
| ೧.೧. ಹುಟ್ಟಿದ ತೇದಿ | : | ೧ ಜನವರಿ ೧೯೪೭ |
| ೧.೨. ಹುಟ್ಟಿದ ಸ್ಥಳ | : | ಚಿತ್ರದುರ್ಗ |
| ೧.೩. ತಂದೆ-ತಾಯಿ | : | ಡಿ. ಪರಸಪ್ಪ ತೆಲಗಾವಿ-ಚಂದ್ರಮ್ಮ |

**೦೨. ಶೈಕ್ಷಣಿಕ**

| | | |
|---|---|---|
| ೨.೧. ಬಿ.ಎ. | : | ೧೯೭೦: ಸರ್ಕಾರಿ ಕಾಲೇಜು, ಚಿತ್ರದುರ್ಗ |
| ೨.೨. ಎಂ.ಎ. | : | ೧೯೭೨: ಚರಿತ್ರೆಶಾಸ್ತ್ರ, ಮೈಸೂರು ವಿಶ್ವವಿದ್ಯಾನಿಲಯ |
| ೨.೩. ಸಂಶೋಧಕ | : | ೧೯೭೨-೧೯೭೫: ಮೈಸೂರು ವಿಶ್ವವಿದ್ಯಾನಿಲಯದ ಸಂಶೋಧನ ವಿದ್ಯಾರ್ಥಿ ವೇತ ಪಡೆದು ಪ್ರೊ.ಬಿ.ಷೇಕ್‌ಅಲಿ ಅವರ ಮಾರ್ಗದರ್ಶನದಲ್ಲಿ 'ಚಿತ್ರದುರ್ಗ ನಾಯ ಅರಸರು' ವಿಷಯ ಕುರಿತು ಸಂಶೋಧನೆ. |

**೦೩. ವೃತ್ತಿಪರ**

| | | |
|---|---|---|
| ೩.೧. ಅಧ್ಯಾಪಕ | : | ೩.೧.೧. ೧೯೭೫-೧೯೭೯: ಚರಿತ್ರೆ ವಿಭಾಗ, ಮಹಾರಾಜ ಕಾಲೇಜು, ಮೈಸೂರು<br>೩.೧.೨. ಮಾನಸಗಂಗೋತ್ರಿಯಲ್ಲಿ ಎಂ.ಎ. ವಿದ್ಯಾರ್ಥಿಗಳಿಗೂ ಬೋಧಕ<br>೩.೧.೩. ೧೯೮೦-೧೯೯೨: ಶಾಸನಶಾಸ್ತ್ರ ತರಗತಿಗಳು, ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು |
| ೩.೨. ಸಂಪಾದಕ | : | ೧೯೮೭-೧೯೯೩: ಕರ್ನಾಟಕ ಗ್ಯಾಸೆಟಿಯರ್ ಇಲಾಖೆ, ಬೆಂಗಳೂರು |
| ೩.೩. ಪ್ರವಾಚಕ | : | ೧೯೯೩ ಜನವರಿ: ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ |
| ೩.೪. ಪ್ರಾಧ್ಯಾಪಕ | : | ೧೯೯೪ ಸೆಪ್ಟೆಂಬರ್-೨೦೦೭ ಡಿಸೆಂಬರ್: ಕವಿಹಂ. |
| ೩.೫. ಡೀನ್ | : | ೧೯೯೮-೨೦೦೧: ಸಮಾಜವಿಜ್ಞಾನಗಳ ನಿಕಾಯ, ಕವಿಹಂ. |
| ೩.೬. ಸಂದರ್ಶಕ ಪ್ರಾಧ್ಯಾಪಕ | : | ೨೦೦೭: ಚರಿತ್ರೆ ವಿಭಾಗ, ಕವಿಹಂ. |

**೦೪. ಮಾರ್ಗದರ್ಶನ**

**೪.೧. ಎಂ.ಫಿಲ್. :**

೪.೧.೧. ೧೯೯೪: ಹಂಪಿಯ ಬಜಾರುಗಳು
(ಸಂಶೋಧಕರು: ಎಸ್.ವೈ.ಸೋಮಶೇಖರ)

೪.೧.೨. ೧೯೯೪: ವಿಜಯನಗರ ಕಾಲದ ಸಾಮಾಜಿಕ ಪರಿಸ್ಥಿತಿ: ಕೆಲವು ಅನಿಷ್ಟ ಪದ್ಧತಿಗಳು
(ಸಂಶೋಧಕರು: ಬಸವರಾಜಯ್ಯ ಮಠದ)

೪.೧.೩. ೧೯೯೫: ಶಿವಮೊಗ್ಗ ಜಿಲ್ಲೆಯಲ್ಲಿ ಸಮಾಜವಾದಿ ಚಳವಳಿಗಳು
(ಸಂಶೋಧಕರು: ಜಿ.ಎನ್.ಕೀರ್ತಿನಾಥ)

೪.೧.೪. ೨೦೦೩: ಚಿತ್ರದುರ್ಗ ಜಿಲ್ಲೆಯಲ್ಲಿ ಅಮೃತಮಹಲ್ ತಳಿ ಸಂವರ್ಧನೆ: ಚಾರಿತ್ರಿಕ ಅಧ್ಯಯನ
(ಸಂಶೋಧಕರು: ಕೆ.ಪಿ.ನಾಗೇಂದ್ರಸ್ವಾಮಿ)

೪.೧.೫. ೨೦೦೫: ಹೆಚ್.ವಿ.ವೀರನಾಯಕ 'ಹರತಿ': ಬದುಕು-ಬರಹ
(ಸಂಶೋಧಕರು : ಡಿ.ರಾಮಕೃಷ್ಣ)

**೪.೨. ಪಿಎಚ್.ಡಿ. :**

೪.೨.೧. ೨೦೦೦: ಮಧ್ಯಕಾಲೀನ ಕನ್ನಡಕಾವ್ಯಗಳಲ್ಲಿ ನಿರೂಪಿತವಾ ಬೇಟೆ ಮತ್ತು ಬೇಡರ ಸಂದರ್ಭಗಳು: ಚಾರಿತ್ರಿ ವಿವೇಚನೆ
(ಸಂಶೋಧಕರು: ವಿರೂಪಾಕ್ಷಿ ಪೂಜಾರಹಳ್ಳಿ)

೪.೨.೨. ೨೦೦೩: ಸ್ವಾತಂತ್ರ್ಯೋತ್ತರ ಕರ್ನಾಟಕದಲ್ಲಿ ಮಾದಿಗರು ಚಾರಿತ್ರಿಕ ವಿವೇಚನೆ
(ಸಂಶೋಧಕರು:ಕೆ.ಆರ್.ಜೆ.ರಾಜ್‌ಕುಮಾರ್)

೪.೨.೩. ೨೦೦೩: ವಿಜಯನಗರೋತ್ತರಕಾಲೀನ ಬೇಡ ಜನಾಂ ದಲ್ಲಾದ ಸ್ಥಿತ್ಯಂತರಗಳು: ಚಾರಿತ್ರಿಕ ಅಧ್ಯಯನ (೧೫೬೫-೧೮೦೦)
(ಸಂಶೋಧಕರು: ಎಂ.ಕೆ.ದುರುಗಪ್ಪ)

೪.೨.೪. ೨೦೦೬: ಕರ್ನಾಟಕ ನಾಯಕ ಅರಸರ ಸಾಂಸ್ಕೃತಿಕ ಚರಣೆಗಳು: ಚಾರಿತ್ರಿಕ ಅಧ್ಯಯನ
(ಸಂಶೋಧಕರು: ಅಮರೇಶ ಯತಗಲ್)

೪.೨.೫. ೨೦೦೮: ಕರ್ನಾಟಕದಲ್ಲಿ ಮರುಳಸಿದ್ಧರ ನೆಲೆಗಳು ಮತ್ತು ಸ್ಮಾರಕಗಳು: ಚಾರಿತ್ರಿಕ ಅಧ್ಯಯನ (ಸಂಶೋಧಕರು: ಎಮ್.ಎಚ್.ವಿಜಯಕುಮಾರ್)

**೦೫. ಕೃತಿಗಳು-ಬರಹಗಳು**

***೫.೧. ಸ್ವತಂತ್ರ ಕೃತಿಗಳು :***

೫.೧.೧. ೧೯೮೦: ಚಿತ್ರದುರ್ಗ ದರ್ಶಿನಿ (ಇತರರೊಡನೆ)

೫.೧.೨. ೧೯೮೭: ಜನಪದ ವೀರಸಾಹಿತ್ಯ: ಚಾರಿತ್ರಿಕ ವಿವೇಚನೆ

೫.೧.೩. ೧೯೯೭, ೧೯೯೯: ಇದು ಚಿತ್ರದುರ್ಗ!

೫.೧.೪. ೧೯೯೭: Chitradurga: An Insight

೫.೧.೫. ೧೯೯೯: ಬುರುಗು (ಚಿಂತನಲೇಖನ ಸಂಕಲನ)

೫.೧.೬. ೧೯೯೯: ಕರ್ನಾಟಕದ ಹಿಂದುಳಿದವರ್ಗಗಳ ಮತ್ತು ದಲಿತ ಚಳವಳಿಗಳು

೫.೧.೭. ೨೦೦೪: ಚಿತ್ರದುರ್ಗ ಜಿಲ್ಲಾ ಇತಿಹಾಸ ಅಧ್ಯಯನದ ವ್ಯಾಪಕತೆ ಮತ್ತು ಸಾಧ್ಯತೆ: ಒಂದು ಶತಮಾನ

೫.೧.೮. ೨೦೦೪: ಮೌರ್ಯ ಮತ್ತು ಶಾತವಾಹನ ಯುಗ (ಕ್ರಿ.ಪೂ.೩-ಕ್ರಿ.ಶ. ೩)

೫.೧.೯. ೨೦೦೪, ೨೦೦೮: ಇತಿಹಾಸಕಾರ ಹೆಚ್.ವಿ.ವೀರನಾಯಕ 'ಹರತಿ'- ಜೀವನಚಿತ್ರ

***೫.೨. ಸಂಪಾದಿತ ಕೃತಿಗಳು :***

೫.೨.೧. ೧೯೭೬: ಚಂದ್ರವಳ್ಳಿ (ಚಿತ್ರದುರ್ಗ ಜಿಲ್ಲೆ ಇತಿಹಾಸ ಕುರಿತ ಲೇಖನಗಳು)

೫.೨.೨. ೧೯೭೬: ಹುಲ್ಲೂರು ಶ್ರೀನಿವಾಸ ಜೋಯಿಸರ ಐತಿಹಾಸಿಕ ಲೇಖನಗಳು

೫.೨.೩. ೧೯೮೦: ಐತಿಹಾಸಿಕ ಚಿತ್ರದುರ್ಗ

೫.೨.೪. ೧೯೮೭: ಹರತಿಸಿರಿ (ಹೆಚ್.ವಿ.ವೀರನಾಯಕ 'ಹರತಿ' ನೆನಪಿನ ಸಂಪುಟ)

೫.೨.೫. ೧೯೯೧: ಸಂಶೋಧನ (ಡಾ.ಎಂ.ಚಿದಾನಂದಮೂರ್ತಿ ಗೌರವ ಗ್ರಂಥ)

೫.೨.೬. ೧೯೯೫: ಹುಲ್ಲೂರು ಶ್ರೀನಿವಾಸ ಜೋಯಿಸರ ಸಂಶೋಧನ ಲೇಖನಗಳು

೫.೨.೭. ೨೦೦೪: ಸ್ಥಳೀಯ ಚರಿತ್ರೆ: ಅಧ್ಯಯನದ ಸ್ವರೂಪ ಮತ್ತು ತಾತ್ವಿಕತೆ

೫.೨.೮. ೨೦೦೪: ಡಾ.ಎಚ್.ಆರ್.ರಘುನಾಥಭಟ್ಟ: ಸ್ಮರಣೆ

೫.೨.೯. ೨೦೦೬: ಜೀರ್ಣವಿಜಯನಗರಾದರ್ಶಂ (ಹಂಪಿ ಕುರಿತ ಪ್ರಥಮ ಕೈಪಿಡಿ)

೫.೨.೧೦. ೨೦೦೮: ಕರ್ನಾಟಕ ಪಾಳೆಯಗಾರರ ನ್ಯಾಯಾಡಳಿತ (ಜಿ.ಹೆಚ್. ಪ್ರಸಾದ್ ಅಭಿನಂದನ ಸಂಪುಟ)

**೫.೩. ಸಂದರ್ಭಸಂಚಿಕೆ-ನಿಯತಕಾಲಿಕೆಗಳು:**

೫.೩.೧. ೧೯೭೨: **ಇತಿಹಾಸ** (ವಾರ್ಷಿಕಸಂಚಿಕೆ, ಇತಿಹಾಸ ಅಧ್ಯಯನ ವಿಭಾಗ, ಮಾನಸಗಂಗೋತ್ರಿ, ಮೈಸೂರು)

೫.೩.೨. ೧೯೭೪: **ಚಿತ್ರಕಲ್ಲು** (ಸ್ಮರಣಸಂಚಿಕೆ, ಜಿಲ್ಲಾ ಇತಿಹಾಸ ಪ್ರದರ್ಶನ, ಚಿತ್ರದುರ್ಗ)

೫.೩.೩. ೧೯೭೮: **ಚಿನ್ಮೂಲಾದ್ರಿ** (ವಾರ್ಷಿಕಸಂಚಿಕೆ, ಮದಕರಿ ಬಳಗ, ಮೈಸೂರು)

೫.೩.೪. ೧೯೮೧-೧೯೮೫: **ಕನ್ನಡ ಸಾಹಿತ್ಯ ಪರಿಷತ್ಪತ್ರಿಕೆ** (ಅರ್ಧವಾರ್ಷಿಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು)

೫.೩.೫. ೧೯೮೨: **ಶ್ರೀಲಿಪಿ** (ಸ್ಮರಣಸಂಚಿಕೆ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು)

೫.೩.೬. ೧೯೮೩: **ಮಿರ್ಜಿ ಅಣ್ಣಾರಾಯರು ಜೀವನ-ಕೃತಿಗಳು:** ಪಕ್ಷಿನೋಟ (ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು)

೫.೩.೭. ೧೯೮೬-೧೯೯೦: **ಇತಿಹಾಸ ದರ್ಶನ** (ವಾರ್ಷಿಕಸಂಚಿಕೆ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು)

೫.೩.೮. ೨೦೦೫-೨೦೦೬: **ಚರಿತ್ರೆ ಅಧ್ಯಯನ** (ಅರ್ಧವಾರ್ಷಿಕ, ಕನ್ನಡ ವಿಶ್ವವಿದ್ಯಾಲಯ, ಹಂಪಿ)

**೦೬. ಬರಹಗಳು** : ೨೦೦ಕ್ಕೂ ಹೆಚ್ಚು ಲೇಖನ-ಸಂಪ್ರಬಂಧಗಳು

**೦೭. ಸಂಯೋಜನೆ**

೭.೧. ೧೯೯೩-೧೯೯೮: **ಕರ್ನಾಟಕ ಚರಿತ್ರೆ-೭** ಸಂಪುಟಗಳು, ಕನ್ನಡ ವಿಶ್ವವಿದ್ಯಾಲಯ, ಹಂಪಿ

೭.೨. ೧೯೯೩-೧೯೯೪: **ಹೊಸಪೇಟೆ ತಾಲ್ಲೂಕು ದರ್ಶನ,** ಕನ್ನಡ ವಿಶ್ವವಿದ್ಯಾಲಯ, ಹಂಪಿ

**೦೮. ಚಾರಿತ್ರಿಕ ದಾಖಲೆಗಳು ಇನ್ನಿತರ ವಸ್ತುಗಳ ಸಂಗ್ರಹಣೆ ಮತ್ತು ಅಧ್ಯಯನ** :

೮.೧. ಶಿಲಾಶಾಸನ-ತಾಮ್ರಪತ್ರಗಳು : ಹೊಯ್ಸಳ, ನೊಳಂಬ, ವಿಜಯನಗರ, ಚಿತ್ರದುರ್ಗ, ನಿಡುಗಲ್ಲು, ಹರತಿ-ನಿಡುಗಲ್ಲು ಮೊದಲಾದ ವಂಶಜರ ೫೦ಕ್ಕೂ ಹೆಚ್ಚು ಶಿಲಾ ಹಾಗೂ ತಾಮ್ರ ಪತ್ರಗಳ ಶೋಧನೆ.

೮.೨. ಕಾಗದ-ಪತ್ರಗಳು : ಚಿತ್ರದುರ್ಗ, ನಾಯಕನಹಟ್ಟಿ, ಜರಿಮಲೆ, ನಿಡುಗಲ್ಲು, ಹರ್ತಿಕೋಟೆ ಮೊದಲಾದ ಮನೆತನಗಳಿಗೆ ಸಂಬಂಧಿಸಿದ ಕಾಗದ-ಪತ್ರ, ವಂಶಾವಳಿ, ಕೈಫಿಯತ್ತುಗಳು; ಚಿತ್ರಹಳ್ಳಿಮಠದ ಕಾಗದ-ಪತ್ರಗಳು, ಚಿತ್ರದುರ್ಗದ ಮುರಿಗಾಮಠದ ಕಾಗದ-ಪತ್ರಗಳ ಸಂಗ್ರಹಣೆ.

೮.೩. ಹಿತ್ತಾಳೆಪಟಗಳು : ಚಿತ್ರಹಳ್ಳಿಸೀಮೆಸ್ಥಳದ ಶಾನುಭೋಗತನದ ವಂಶಾವಳಿ ಕುರಿತ ೯ ಹಿತ್ತಾಳೆಪಟಗಳ ಪ್ರತಿಗಳ ಅಧ್ಯಯನ.

೮.೪. ನಾಣ್ಯಗಳು : ಶಾತವಾಹನ, ವಿಜಯನಗರ, ಮೊಘಲ್, ಮೈಸೂರು, ಶ್ರೀರಂಗಪಟ್ಟಣ ಮುಂತಾದ ಸಂಸ್ಥಾನಿಕರ ಸೀಸ, ಬಂಗಾರ, ಬೆಳ್ಳಿ ಮತ್ತು ತಾಮ್ರಲೋಹಗಳ ನಾಣ್ಯಗಳ ಸಂಗ್ರಹಣೆ ಮತ್ತು ಅಧ್ಯಯನ.

೮.೫. ಇತರೆ ವಸ್ತುಗಳು : ಶಿಲೆ, ಲೋಹ ಮತ್ತು ಮಣ್ಣಿನಿಂದ ತಯಾರಿಸಿದ ಆಯುಧ, ಕೊಡಲಿ, ಬಾಣದ ಮೊನೆ, ಚಿತ್ರಿತ ಮಡಕೆ-ಕುಡಿಕೆ, ಮಣಿ, ಬಳೆ ಇತ್ಯಾದಿ ಚರಿತ್ರ ಪೂರ್ವ ಮತ್ತು ನಂತರದ ಕಾಲಾವಧಿಯ ವಸ್ತುಗಳ ಸಂಗ್ರಹಣೆ.

**೦೯. ಪ್ರಮುಖ ಶೋಧಗಳು ಹಾಗೂ ಅಧ್ಯಯನಗಳು :**

೯.೧. ಚಿತ್ರದುರ್ಗ ಪರಿಸರ (ಸಮಗ್ರ ಅಧ್ಯಯನ)

೯.೨. ಜರಿಮಲೆ-ಕೂಡ್ಲಿಗಿ ತಾಲ್ಲೂಕು (ಸಮಗ್ರ ಅಧ್ಯಯನ)

೯.೩. ಬ್ರಹ್ಮಗಿರಿ-ಮೊಳಕಾಲ್ಮೂರು ತಾಲ್ಲೂಕು (ಸಮಗ್ರ ಅಧ್ಯಯನ)

೯.೪. ಹಳೇನೆಲ್ಲುಡಿ-ಬಳ್ಳಾರಿ ತಾಲ್ಲೂಕು (ಸಮಗ್ರ ಅಧ್ಯಯನ)

೯.೫. ನಿಡುಗಲ್ಲು-ಪಾವಗಡ ತಾಲ್ಲೂಕು (ಸಮಗ್ರ ಅಧ್ಯಯನ)

೯.೬. ಘಟ್ಟಿಹೊಸಹಳ್ಳಿ-ಹೊಳಲ್ಕೆರೆ ತಾಲ್ಲೂಕು (ಸಮಗ್ರ ಅಧ್ಯಯನ)

೯.೭. ಕೆಂಚಮ್ಮನಹಳ್ಳಿ-ಪಾವಗಡ ತಾಲ್ಲೂಕು (ಸಮಗ್ರ ಅಧ್ಯಯನ)

೯.೮. ಮಾಯಕೊಂಡ-ದಾವಣಗೆರೆ ತಾಲ್ಲೂಕು (ಸಮಗ್ರ ಅಧ್ಯಯನ)

೯.೯. ಹಳೇದೊಡ್ಡೇರಿ-ರಣದೊಡ್ಡೇರಿ-ಚಳ್ಳಕೆರೆ ತಾಲ್ಲೂಕು (ಸಮಗ್ರ ಅಧ್ಯಯನ)

೯.೧೦. ಎರಡುಕೆರೆ-ರಾಯದುರ್ಗ ತಾಲ್ಲೂಕು (ಸಮಗ್ರ ಅಧ್ಯಯನ)

೯.೧೧. ರಾಯದುರ್ಗ-ಆಂಧ್ರ (ವ್ಯಾಪಕ ಕ್ಷೇತ್ರಕಾರ್ಯ)

೯.೧೨. ಹರ್ತಿಕೋಟೆ - ಹಿರಿಯೂರು ತಾಲ್ಲೂಕು (ಸಮಗ್ರ ಅಧ್ಯಯನ)

೯.೧೩. ಅಂಬಲಿಗೆರೆ- ಹಿರಿಯೂರು ತಾಲ್ಲೂಕು (ಸಮಗ್ರ ಅಧ್ಯಯನ)

೯.೧೪. ತೊರೆಓಬೇನಹಳ್ಳಿ- ಹಿರಿಯೂರು ತಾಲ್ಲೂಕು (ಶಾತವಾಹನ ನಾಣ್ಯಗಳ ಶೋಧ)

೯.೧೫. ನನ್ನಿವಾಳ-ಚಳ್ಳಕೆರೆ ತಾಲ್ಲೂಕು (ಸಮಗ್ರ ಅಧ್ಯಯನ)

೯.೧೬. ನೇರಲಗುಂಟೆ-ಚಳ್ಳಕೆರೆ ತಾಲ್ಲೂಕು (ಬಯಲುಬಂಡೆ ರೇಖಾ ಕೃತಿಗಳಿರುವ ಪರಿಸರ)

೯.೧೭. ಕಣಕುಪ್ಪೆ-ಜಗಲೂರು ತಾಲ್ಲೂಕು (ಸಮಗ್ರ ಅಧ್ಯಯನ)

೯.೧೮. ಗೌರೀಪುರ-ಚಳ್ಳಕೆರೆ ತಾಲ್ಲೂಕು (ವ್ಯಾಪಕ ಕ್ಷೇತ್ರಕಾರ್ಯ)

೯.೧೯. ಭರಮಸಾಗರ-ಚಿತ್ರದುರ್ಗ ತಾಲ್ಲೂಕು (ಸಮಗ್ರ ಅಧ್ಯಯನ)

೯.೨೦. ಹೊಸಗುಡ್ಡ-ಚಳ್ಳಕೆರೆ ತಾಲ್ಲೂಕು (ಸಮಗ್ರ ಅಧ್ಯಯನ)

೯.೨೧. ಬಾಗೂರು-ಹೊಸದುರ್ಗ ತಾಲ್ಲೂಕು (ಸಮಗ್ರ ಅಧ್ಯಯನ)

೯.೨೨. ಎದ್ದುಲುಬಂಡೆ-ಬೆಳಗಟ್ಟ-ಚಿತ್ರದುರ್ಗ ತಾಲ್ಲೂಕು (ಬಯಲುಬಂಡೆ ರೇಖಾಕೃತಿಗಳ ಅಧ್ಯಯನ)

೯.೨೩. ಕುಂಚಿನಗನಹಾಳು-ಚಿತ್ರದುರ್ಗ ಕಸಬಾ (ಬಯಲುಬಂಡೆ ರೇಖಾಕೃತಿಗಳ ಅಧ್ಯಯನ)

೯.೨೪. ಸಂಗೇನಹಳ್ಳಿಕೆರೆ-ಚಿತ್ರದುರ್ಗ ತಾಲ್ಲೂಕು (ಬಯಲುಬಂಡೆ ರೇಖಾಕೃತಿ ಮತ್ತು ಬೂದಿದಿಬ್ಬಗಳ ಅಧ್ಯಯನ)

೯.೨೫. ವೇದಾವತಿನದಿತೀರ-ಚಳ್ಳಕೆರೆ ತಾಲ್ಲೂಕು (ಚರಿತ್ರಪೂರ್ವಕಾಲದ ನಿವೇಶನಗಳು)

೯.೨೬. ತಣಿಗೆಕಲ್ಲು-ಹೊಸದುರ್ಗ ತಾಲ್ಲೂಕು (ಚರಿತ್ರಪೂರ್ವಕಾಲದ ನಿವೇಶನಗಳು)

೯.೨೭. ಸೊಂಡೇಕೆರೆ-ಹಿರಿಯೂರು ತಾಲ್ಲೂಕು (ಬಯಲು ಬಂಡೆ ರೇಖಾಕೃತಿಗಳ ನಿವೇಶನ)

೯.೨೮. ತಮಟಕಲ್ಲು-ಚಿತ್ರದುರ್ಗ ಕಸಬಾ (ತಾಮ್ರತಯಾರಿಕಾ ಘಟಕದ ಪರಿಶೀಲನೆ)

೯.೨೯. ಚಿಪ್ಪಿನಕೆರೆ- ಚಿತ್ರದುರ್ಗ ತಾಲ್ಲೂಕು (ಶಾತವಾಹನ ಸಮಕಾಲೀನ ಸಂಸ್ಕೃತಿ ನಿವೇಶನ)

೯.೩೦. ಗುಂಡ್ಲೂರು-ಮೊಳಕಾಲ್ಮೂರು ತಾಲ್ಲೂಕು (ಚರಿತ್ರಪೂರ್ವಕಾಲದ ಸಂಸ್ಕೃತಿ ಅಧ್ಯಯನ)

೯.೩೧. ರಾಮಸಾಗರ-ಹೊಸಪೇಟೆ ತಾಲ್ಲೂಕು (ವ್ಯಾಪಕ ಕ್ಷೇತ್ರಕಾರ್ಯ)

೯.೩೨. ಆನೆಗೊಂದಿ-ಗಂಗಾವತಿ ತಾಲ್ಲೂಕು (ಸಮಗ್ರ ಅಧ್ಯಯನ)

೯.೩೩. ಹಂಪಿ-ಹೊಸಪೇಟೆ ತಾಲ್ಲೂಕು (ವ್ಯಾಪಕ ಕ್ಷೇತ್ರಕಾರ್ಯ)

೯.೩೪. ಗವಿಮಠ-ಕೊಪ್ಪಳ ಕಸಬಾ (ವ್ಯಾಪಕ ಕ್ಷೇತ್ರಕಾರ್ಯ)

೯.೩೫. ಸಂತೆಬೆನ್ನೂರು-ದಾವಣಗೆರೆ ಜಿಲ್ಲೆ (ವ್ಯಾಪಕ ಕ್ಷೇತ್ರಕಾರ್ಯ)

೯.೩೬. ಆಯಿತೋಳು-ಚಿತ್ರದುರ್ಗ ತಾಲ್ಲೂಕು (ವ್ಯಾಪಕ ಕ್ಷೇತ್ರಕಾರ್ಯ)

೯.೩೭. ಹೊದಿಗ್ಗೆರೆ-ಚನ್ನಗಿರಿ ತಾಲ್ಲೂಕು (ವ್ಯಾಪಕ ಕ್ಷೇತ್ರಕಾರ್ಯ)

೯.೩೮. ಹರಪನಹಳ್ಳಿ-ದಾವಣಗೆರೆ ಜಿಲ್ಲೆ (ವ್ಯಾಪಕ ಕ್ಷೇತ್ರಕಾರ್ಯ) ಹಾಗೂ ಇನ್ನಿತರ ನೂರಾರು ನಿವೇಶನಗಳು.

**೧೦. ವಿಶೇಷ ಅಧ್ಯಯನ :**

೧೦.೧. ಚಿತ್ರದುರ್ಗ ನಾಯಕ ಅರಸರನ್ನು ಕುರಿತು ಸಂಶೋಧನೆ

೧೦.೨. ಚಿತ್ರದುರ್ಗ ಜಿಲ್ಲೆಯ ಬಯಲುಬಂಡೆ ರೇಖಾಕೃತಿಗಳು ಹಾಗೂ ಗವಿವರ್ಣಚಿತ್ರಗಳ ವ್ಯಾಪಕ ಅಧ್ಯಯನ

**೧೧. ಸೇವಾನುಭವ ಮತ್ತು ಆಡಳಿತಾನುಭವ :**

೧೧.೧. ೧೯೭೦: ಸಂಘಟಕ, ಚಿತ್ರದುರ್ಗ ಸಂಶೋಧನ ತಂಡ

೧೧.೨. ೧೯೭೬-೧೯೮೯: ಉಪಾಧ್ಯಕ್ಷ, ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ

೧೧.೩. ೧೯೭೮-೧೯೭೯: ಅಧ್ಯಾಪಕ ಕಾರ್ಯದರ್ಶಿ, ಮಹಾರಾಜ ಕಾಲೇಜು ವಿದ್ಯಾರ್ಥಿ ಸಂಘ, ಮೈಸೂರು

೧೧.೪. ೧೯೭೮-೧೯೭೯: ಕಾರ್ಯಕಾರಿ ಸಮಿತಿ ಸದಸ್ಯ, ಮೈಸೂರು ವಿಶ್ವವಿದ್ಯಾನಿಲಯದ ಛಾಯಾಚಿತ್ರ ಗ್ರಾಹಕರ ಕೂಟ(MUPC)

೧೧.೫. ೧೯೭೯-೧೯೮೫: ಗೌರವ ಕಾರ್ಯದರ್ಶಿ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೧೧.೬. ೧೯೮೬-೧೯೮೮: ಪ್ರಧಾನಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

೧೧.೭. ೧೯೯೨-೧೯೯೫: ಸದಸ್ಯ, ಕರ್ನಾಟಕ ಸಾಹಿತ್ಯ ಅಕಾಡೆಮಿ, ಬೆಂಗಳೂರು

೧೧.೮. ೧೯೯೪-೧೯೯೭: ಸದಸ್ಯ, ಅಧ್ಯಯನ ಮಂಡಲಿ, ಇತಿಹಾಸ ಮತ್ತು ಪ್ರಾಕ್ತನಶಾಸ್ತ್ರ ವಿಭಾಗ, ಕುವೆಂಪು ವಿಶ್ವವಿದ್ಯಾನಿಲಯ

೧೧.೯. ೧೯೯೭-೨೦೦೧: ಸದಸ್ಯ, ಕರ್ನಾಟಕ ಗ್ಯಾಸೆಟಿಯರ್ ಸಲಹಾ ಸಮಿತಿ, ಬೆಂಗಳೂರು.

೧೧.೧೦. ೧೯೯೮-೨೦೦೦: ಉಪಾಧ್ಯಕ್ಷ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

೧೧.೧೧. ೧೯೯೮-೧೯೯೯: ಸದಸ್ಯ, ಕಲಾ ನಿಕಾಯ, ಕುವೆಂಪು ವಿಶ್ವವಿದ್ಯಾನಿಲಯ

೧೧.೧೨. ೧೯೯೮-೨೦೦೦: ಸದಸ್ಯ, ಕರ್ನಾಟಕ ಹಿಸ್ಟರಿ ಕಾಂಗ್ರೆಸ್‌ನ ಕಾರ್ಯಕಾರಿ ಸಮಿತಿ.

೧೧.೧೩. ೧೯೯೮: ಗೌರವ ಅಧ್ಯಕ್ಷ, ಚಿತ್ರಕಲ್ಲು ಪ್ರಕಾಶನ, ಚಿತ್ರದುರ್ಗ

೧೧.೧೪. ೨೦೦೨: ಉಪಾಧ್ಯಕ್ಷ, ಪಿ.ಮಲೆಸಿದ್ದಪ್ಪ ಸ್ಮರಣ ಸಂಪುಟ ಸಮಿತಿ, ಚಿತ್ರದುರ್ಗ

೧೧.೧೫. ೨೦೦೪-೨೦೦೫: ಸದಸ್ಯ, ರಾಜ್ಯ ಪತ್ರಾಗಾರ ಇಲಾಖೆಯ ಸಲಹಾ ಸಮಿತಿ, ಬೆಂಗಳೂರು.

೧೧.೧೬. ೨೦೦೪-೨೦೦೬: ಸದಸ್ಯ, ಅಧ್ಯಯನ ಮಂಡಲಿ, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಇತ್ಯಾದಿ.

**೧೨. ವಿಶೇಷ ತರಬೇತಿ**

೧೯೮೦: ವಯಸ್ಕರ ಶಿಕ್ಷಣ ಅಧಿಕಾರಿ ತರಬೇತಿ, ಎನ್.ಸಿ.ಇ. ಆರ್.ಟಿ., ದೆಹಲಿ

**೧೩. ಗೌರವ- ಸನ್ಮಾನಗಳು**

೧೩.೧. ೧೯೭೫: ಶ್ರೀಜಗದ್ಗುರು ಜಯದೇವ ಶತಮಾನೋತ್ಸವ ಸನ್ಮಾನ, ಶ್ರೀಮುರಿಗಾಮಠ, ಚಿತ್ರದುರ್ಗ.

೧೩.೨. ೧೯೮೯: ಕನ್ನಡ ರಾಜ್ಯೋತ್ಸವ ಸನ್ಮಾನ, ಕರ್ನಾಟಕ ಸಂಘ, ವಿರಾಜಪೇಟೆ

೧೩.೩. ೧೯೯೫: ೪ನೇ ಜಿಲ್ಲಾ ಕನ್ನಡ ರಾಜ್ಯೋತ್ಸವ ಸಮಿತಿ ಸನ್ಮಾನ, ಚಿತ್ರದುರ್ಗ

೧೩.೪. ೧೯೯೭: ರಾಜಾ ವೀರಮದಕರಿನಾಯಕರ ಕಂಚಿನಪ್ರತಿಮೆ ಪ್ರತಿಷ್ಠಾಪನಾ ಮಹೋತ್ಸವ ಸನ್ಮಾನ, ಚಿತ್ರದುರ್ಗ

೧೩.೫. ೧೯೯೮: ಚಿತ್ರದುರ್ಗ ತಾಲ್ಲೂಕು ಪ್ರಥಮ ಕನ್ನಡ ಸಾಹಿತ್ಯ ಸಮ್ಮೇಳನ ಸನ್ಮಾನ, ಹೊಸದುರ್ಗ

೧೩.೬. ೧೯೯೯: ಚಿತ್ರದುರ್ಗ ಜಿಲ್ಲಾ ೮ನೇ ಕನ್ನಡ ಸಾಹಿತ್ಯ ಸಮ್ಮೇಳನ ಸನ್ಮಾನ, ಹೊಸದುರ್ಗ

೧೩.೭. ೧೯೯೯: ಪುರಸಭೆಯಿಂದ ಪೌರಸನ್ಮಾನ, ಚಿತ್ರದುರ್ಗ

೧೩.೮. ೧೯೯೯: ಡಾ.ಬಿ.ಆರ್.ಅಂಬೇಡ್ಕರ್ ರಾಷ್ಟ್ರೀಯ ಫೆಲೋಷಿಪ್, ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ, ದೆಹಲಿ

೧೩.೯. ೨೦೦೩: ಶ್ರೀಗುರು ರವಿದಾಸ ರತ್ನ ರಾಷ್ಟ್ರೀಯ ಪುರಸ್ಕಾರ, ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ, ದೆಹಲಿ

೧೩.೧೦. ೨೦೦೫: ಮಹಾತ್ಮಾ ಜ್ಯೋತಿಬಾ ಫುಲೆ ರಾಷ್ಟ್ರೀಯ ಪುರಸ್ಕಾರ, ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ, ದೆಹಲಿ

೧೩.೧೧. ೨೦೦೫: ಸುಭದ್ರಕುಮಾರಿ ಚೌಹಾನ್ ಜನ್ಮಶತಾಬ್ದಿ ರಾಷ್ಟ್ರೀಯ ಪುರಸ್ಕಾರ, ಜೈಮಿನಿ ಅಕಾಡೆಮಿ, ಪಾಣಿಪತ್-ಹರ್‍ಯಾಣ

೧೩.೧೨. ೨೦೦೬: ಚಿತ್ರದುರ್ಗ ಉತ್ಸವ ಸನ್ಮಾನ, ಚಿತ್ರದುರ್ಗ

೧೩.೧೩. ೨೦೦೬: ಡಾ.ಬಿ.ಆರ್.ಅಂಬೇಡ್ಕರ್ ರಾಷ್ಟ್ರೀಯ ಪ್ರಶಸ್ತಿ, ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ, ದೆಹಲಿ ಹಾಗೂ ಇನ್ನೂ ಐವತ್ತಕ್ಕೂ ಹೆಚ್ಚು ಇತರೆ ಸನ್ಮಾನಗಳು.

**೧೪. ಪ್ರಶಸ್ತಿಗಳು**

೧೪.೧. ೧೯೯೯: 'ಸಂಶೋಧನ ನಿಧಿ', ಶ್ರೀಮುರಿಗಾಮಠ, ಚಿತ್ರದುರ್ಗ

೧೪.೨. ೨೦೦೩: 'ಶ್ರೀ ಗುರು ರವಿದಾಸ ರತ್ನ', ಭಾರತೀಯ ದಲಿತ ಸಾಹಿತ್ಯ ಅಕಾಡೆಮಿ, ದೆಹಲಿ

೧೪.೩. ೨೦೦೭: 'ಇತಿಹಾಸ ಭೂಷಣ', ಶ್ರೀ ಏಕನಾಥೇಶ್ವರಿ ಸಂಗೀತ ವಿದ್ಯಾಲಯ, ಹಿರಿಯೂರು

**೧೫. ಸರ್ವಾಧ್ಯಕ್ಷತೆ**

೧೫.೧. ೨೦೦೩: ವಿಜಯನಗರ ವಿಚಾರಸಂಕಿರಣ, ಹಂಪಿ ಉತ್ಸವ

೧೫.೨. ೨೦೦೭: ಕರ್ನಾಟಕ ಬೇಡ ಸಮುದಾಯದ ಇತಿಹಾಸ ಮತ್ತು ಸಂಸ್ಕೃತಿ ವಿಚಾರಸಂಕಿರಣ, ಚಿತ್ರದುರ್ಗ

೧೫.೩. ೨೦೦೭: ಕರ್ನಾಟಕ ಇತಿಹಾಸ ಅಕಾದೆಮಿಯ ೨೧ನೇ ಅಧಿವೇಶನ, ಹಗರಿಬೊಮ್ಮನಹಳ್ಳಿ

೧೫.೪. ೨೦೦೮: ಕರ್ನಾಟಕ ಇತಿಹಾಸ ಕಾಂಗ್ರೆಸ್‌ನ ೧೯ನೇ ಸಮ್ಮೇಳನ, ತುಮಕೂರು

**೧೬. ಟೆಲಿ- ಸಾಕ್ಷ್ಯಚಿತ್ರಗಳ ಪ್ರಾಯೋಜನೆ**

೧೬.೧. ೧೯೯೨: ಚಿತ್ರದುರ್ಗ (ನಿರೂಪಣಾಸಾಹಿತ್ಯ ಹಾಗೂ ಮಾರ್ಗದರ್ಶನ), ರಾಜ್ಯ ಪ್ರವಾಸೋದ್ಯಮ ಇಲಾಖೆ, ಬೆಂಗಳೂರು.

೧೬.೨. ೧೯೯೪: ಐತಿಹಾಸಿಕ ಚಿತ್ರದುರ್ಗ (೨ ಪ್ರಕರಣಗಳು; ನಿರೂಪಣಾಸಾಹಿತ್ಯ ಹಾಗೂ ಮಾರ್ಗದರ್ಶನ), ಅನುರಾಗ್ ಕ್ರಿಯೇಷನ್ಸ್, ಬೆಂಗಳೂರು

೧೬.೩. ೧೯೯೮-೧೯೯೯: ಚಿರಸ್ಮರಣೆ (ಮೊದಲ ೨೬ ಪ್ರಕರಣಗಳು; ಮಾರ್ಗದರ್ಶನ ಹಾಗೂ ಸಹಕಾರ), ವಾಗೀಶ್ ವಿಜನ್ಸ್, ಬೆಂಗಳೂರು.

೧೬.೪. ೨೦೦೬: ಚಿತ್ರಕಲ್ಲುದುರ್ಗ ಮತ್ತು ಒನಕೆ ಓಬವ್ವ (೨ ಪ್ರಕರಣಗಳು; ಎಜುಸ್ಯಾಟ್ ಕಾರ್ಯಕ್ರಮಕ್ಕಾಗಿ ತಯಾರಿಸಲಾದುದು; ನಿರೂಪಣಾಸಾಹಿತ್ಯ ಮತ್ತು ಮಾರ್ಗದರ್ಶನ), ಆರ್.ಬಿ.ಮೀಡಿಯಾ, ಬೆಂಗಳೂರು.

**೧೭. ಆಜೀವ ಸದಸ್ಯತ್ವ ಪಡೆದುಕೊಂಡಿರುವ ಕೆಲವು ಪ್ರತಿಷ್ಠಿತ ಸಂಘ-ಸಂಸ್ಥೆಗಳು :**

೧೭.೧. ಕನ್ನಡ ಸಾಹಿತ್ಯ ಪರಿಷತ್ತು

೧೭.೨. ಇಂಡಿಯನ್ ಹಿಸ್ಟರಿ ಕಾಂಗ್ರೆಸ್

೧೭.೩. ಕರ್ನಾಟಕ ಹಿಸ್ಟರಿ ಕಾಂಗ್ರೆಸ್

೧೭.೪. ಕರ್ನಾಟಕ ಇತಿಹಾಸ ಅಕಾದೆಮಿ

೧೭.೫. ರಾಕ್‌ಆರ್ಟ್ ಸೊಸೈಟಿ ಆಫ್ ಇಂಡಿಯಾ (RASI), ಇತ್ಯಾದಿ.



# ೨೦೦೭ರ ಡಾ. ಬಾ.ರಾ. ಗೋಪಾಲ್ ಪ್ರಶಸ್ತಿ ಸ್ವೀಕರಿಸಿದ ಸಂದರ್ಭದಲ್ಲಿ ಮಾಡಿದ ಭಾಷಣ

ಡಾ. ಎಚ್.ಎಸ್. ಗೋಪಾಲರಾವ್*

## ಶಾಸನ ಶಾಸ್ತ್ರಾಧ್ಯಯನ : ಹಿನ್ನೋಟ ಮತ್ತು ಮುನ್ನೋಟ

ಈ ಪ್ರಶಸ್ತಿಯ ಸ್ಥಾಪನೆಯ ಹಿನ್ನೆಲೆಯಲ್ಲಿ ನಾನೂ ಇರುವುದರಿಂದ ಇದನ್ನು ಒತ್ತಾಯದ ಒತ್ತಡದ ಮೇಲೆ ಮುಜುಗರದಿಂದಲೇ ಸ್ವೀಕರಿಸುತ್ತಿದ್ದೇನೆ ಎಂದು ನಮ್ರವಾಗಿ ವಿನಂತಿಸಬಯಸುತ್ತೇನೆ. ಈವರೆಗೆ ಈ ಪ್ರಶಸ್ತಿಯನ್ನು ಸ್ವೀಕರಿಸಿದ ಯಾರಿಗೂ ಇಂತಹ ಪರಿಸ್ಥಿತಿ ಒದಗಿರಲಿಲ್ಲ. ನನ್ನ ಪಿಎಚ್.ಡಿ. ಅಧ್ಯಯನಕ್ಕೆ ಮಾರ್ಗದರ್ಶಿಯಾಗಿದ್ದ ಪೂಜ್ಯ ಡಾ॥ ಬಾ.ರಾ. ಗೋಪಾಲ್ ನಾನು ಪಿಎಚ್.ಡಿ. ಪದವಿಯನ್ನು ಪಡೆದ ನಂತರವೂ ನನ್ನ ಮಾರ್ಗದರ್ಶಿಗಳಾಗೇ ಇದ್ದರು ಮಾತ್ರವಲ್ಲ ನನ್ನ ಹಿತಚಿಂತಕರಾಗಿ ಎಷ್ಟೋ ಸಂದರ್ಭಗಳಲ್ಲಿ ನನಗೆ ಬಲ ನೀಡಿದರು. ಈ ಪ್ರಶಸ್ತಿಯ ಸ್ಥಾಪನೆಗೆ ಕಾರಣರಾಗಿರುವ ಡಾ॥ ಬಾ.ರಾ. ಗೋಪಾಲ್ ಅವರ ಕುಟುಂಬ ವರ್ಗಕ್ಕೆ ಮತ್ತು ಇದನ್ನು ಬಲವಂತವಾಗಿ ನನಗೆ ನೀಡಿದ ಅಕಾದೆಮಿಯ ಕಾರ್ಯಕಾರೀ ಸಮಿತಿಯ ಸದಸ್ಯರಿಗೆ ಧನ್ಯವಾದಗಳನ್ನು ಸಲ್ಲಿಸುತ್ತೇನೆ. ಈ ಪ್ರಶಸ್ತಿಯನ್ನು ಡಾ॥ ಬಾ.ರಾ. ಗೋಪಾಲ್ ಅವರ ಆಶೀರ್ವಾದ ಎಂದೇ ನಾನು ಸ್ವೀಕರಿಸಿದ್ದೇನೆ.

ಈ ಪ್ರಶಸ್ತಿಯು ನನ್ನ ಜವಾಬ್ದಾರಿಯನ್ನು ಹೆಚ್ಚಿಸಿದೆ. ವಿಲಿಯಂ ಜೋನ್ಸ್‌ನಿಂದ ಆರಂಭಗೊಂಡ ಶಾಸನಾಧ್ಯಯನ ಈವರೆಗೆ ನಿರಂತರವಾಗಿ ಮುಂದುವರಿದುಕೊಂಡೇ ಬಂದಿದೆ. ಈವರೆಗೆ ಶಾಸನಶೋಧ ಮಾಡಿರುವ ಬಹುತೇಕರು ಇತಿಹಾಸದ ಪ್ರಾಧ್ಯಾಪಕರಾಗಿರಲಿಲ್ಲ. ಡಾ॥ ಶ್ರೀನಿವಾಸ ರಿತ್ತಿ, ಡಾ॥ ಕೆ.ವಿ. ರಮೇಶ್, ಶ್ರೀ ಮಾಧವ ನಾ. ಕಟ್ಟಿ ಇತ್ಯಾದಿ ಶಾಸನತಜ್ಞರು ಮೂಲತಃ ಇತಿಹಾಸದ ವಿದ್ಯಾರ್ಥಿಗಳಲ್ಲ. ಅವರಲ್ಲಿ ಬಹುತೇಕರು ಭಾಷಾತಜ್ಞರು. ಡಾ॥ ಬಾ.ರಾ. ಗೋಪಾಲ್ ಅವರು ಇತಿಹಾಸದ ಪ್ರಾಧ್ಯಾಪಕರಾಗಿದ್ದರೂ ಹ ಭಾಷೆಯ ವಿಷಯದಲ್ಲಿ ಅವರಿಗೆ ಪರಿಣತಿ ಇತ್ತು. ಭಾಷಾಶಾಸ್ತ್ರದಲ್ಲಿ ಪರಿಣತರಾಗಿದ್ದು, ಶಾಸನಶಾಸ್ತ್ರಕ್ಷೇತ್ರವನ್ನು ಬಲುಸು ಮಾಡಿದವರ ಸಂಖ್ಯೆ ಹೆಚ್ಚು. ಶಾಸನಶೋಧವನ್ನು ಯಾರು ಬೇಕಾದರೂ ಮಾಡಬಹುದು. ಇತಿಹಾಸ ಬಲ್ಲವರೇ ಆಗಬೇಕೆಂಬ ನಿಬಂಧನೆ ಇಲ್ಲ. ಪ್ರಾಚೀನ ಲಿಪಿಯನ್ನು ಓದಲು ಮತ್ತು ಭಾಷೆಯ ಬಗ್ಗೆ ತಿಳುವಳಿಕೆ ಇರುವ ಯಾವುದೇ ವ್ಯಕ್ತಿ ಶಾಸನಶೋಧವನ್ನು ಮಾಡಬಹುದು. ಇಂತಹ ಮಹನೀಯರುಗಳ ಶೋಧದ ಫಲವಾಗಿ ಕರ್ನಾಟಕದಲ್ಲೇ ಸುಮಾರು ಇಪ್ಪತ್ತೈದು ಸಾವಿರಕ್ಕೂ ಹೆಚ್ಚು ಶಾಸನಗಳು ಪ್ರಕಟಗೊಂಡಿವೆ. ನಾನು ನನ್ನ ಮಾತುಗಳನ್ನು ಕರ್ನಾಟಕಕ್ಕಷ್ಟೇ ಮಿತಿಗೊಳಿಸಿಕೊಂಡಿದ್ದೇನೆ. ಕರ್ನಾಟಕಕ್ಕಿಂತ ಹೆಚ್ಚು ಶಾಸನಗಳು ತಮಿಳುನಾಡಿನಲ್ಲಿ ಪ್ರಕಟಗೊಂಡಿವೆ. ಶಾಸನ ಮತ್ತು ಇತಿಹಾಸಕ್ಕೆ ಅವಿನಾಭಾವ ಸಂಬಂಧವಿದೆ. ಪ್ರಾಚೀನ ಮತ್ತು ಮಧ್ಯಕಾಲೀನ ಇತಿಹಾಸಕ್ಕೆ ಸಂಬಂಧಿಸಿದಂತೆ ಖಚಿತವಾಗಿ ತಿಳಿಯಲು ಶಾಸನಗಳಿಗೇ ಮೊರೆ ಹೋಗಬೇಕು ಎಲ್ಲಾ ಶಾಸನಗಳೂ ಖಚಿತವಾದ ಮಾಹಿತಿಗಳನ್ನೇ ನೀಡುತ್ತವೆ ಎಂದು ಭ್ರಮಿಸಬೇಕಾಗಿಲ್ಲ. ಕೆಲವು ಶಾಸನಗಳು ದಾರಿ ತಪ್ಪಿಸುತ್ತವೆ. ಅಂತಹ ಶಾಸನಗಳನ್ನು ಪತ್ತೆ ಮಾಡಲೂ ಸಾಧ್ಯವಿದೆ; ಅದಕ್ಕೆ ಸಲಕರಣೆಗಳಿವೆ.

ಶಾಸನಗಳು ಪ್ರಿಯವಾಗುವುದು ಅವು ರಾಜಕೀಯ ಇತಿಹಾಸಕ್ಕೆ ಸಂಬಂಧಿಸಿದ ಮಾಹಿತಿಯನ್ನು ಒದಗಿಸುತ್ತವೆ ಎಂಬ ಒಂದೇ ಕಾರಣಕ್ಕಾಗಿ ಅಲ್ಲ. ಅವು ಪ್ರಾಚೀನ ಸಾಮಾಜಿಕ ಬದುಕನ್ನು ತಿಳಿಯಲು ಸಾಧನವಾಗುತ್ತವೆ. ವಿಜಯನಗರದ ಕೃಷ್ಣದೇವರಾಯನಾಗಲೀ, ಬಾದಾಮಿ ಚಲುಕ್ಯ ವಂಶದ ಎರಡನೆಯ ಪೊಲೆಕೇಶಿಯಾಗಲೀ ಮುಖ್ಯರಾಗದಿರಬಹುದು; ಆದರೆ, ಅವರ ಕಾಲದ ಬದುಕು ಮುಖ್ಯ. ಅಂತಹ ಬದುಕನ್ನು ತಿಳಿಯಲು ಶಾಸನಗಳು ನೆರವಾಗುತ್ತವೆ. ಪ್ರಾಚೀನ ಇತಿಹಾಸವನ್ನು ತಿಳಿಯಲು ನಮಗೆ ಶಾಸನಗಳಷ್ಟೇ ಆಧಾರ. ಆಗ ಇನ್ನೂ ಕಾವ್ಯ ಇರಲಿಲ್ಲ. ಕವಿರಾಜಮಾರ್ಗಕ್ಕೆ ಮೊದಲು ಕಾವ್ಯ/ಸಾಹಿತ್ಯಕ್ಕಿಂತ ಶಾಸನಗಳಷ್ಟೇ ಪ್ರಮುಖ ಆಕರಗಳು. ಈ ಆಕರಗಳಿಂದ ಕರ್ನಾಟಕದ ಸಮಗ್ರ ಇತಿಹಾಸ ತಿಳಿದಿದೆ

* 'ಸ್ವಸ್ತಿಶ್ರೀಸ್ಕಂದ', ಅರಸಿನಕುಂಟೆ, ನೆಲಮಂಗಲ ತಾಲ್ಲೂಕು, ಬೆಂಗಳೂರು ಗ್ರಾಮಾಂತರ ಜಿಲ್ಲೆ – ೫೬೭ ೧೨೩.

ಎಂದು ಭಾವಿಸುವಂತಿಲ್ಲ. ನಮಗೆ ತಿಳಿದಿರುವುದು ಶೇ. ೭೫ ರಿಂದ ೭೦ ಭಾಗದಷ್ಟು ಇತಿಹಾಸ ಮಾತ್ರ ; ಇನ್ನೂ ತಿಳಿಯಬೇಕಾದ ಅನೇಕ ವಿಚಾರಗಳಿವೆ. ಪ್ರಾಚೀನ ಕಾಲದ ಅಂತಹ ವಿಷಯಗಳನ್ನು ತಿಳಿಯಲು ಮತ್ತು ತಿಳಿದಿರುವ ಎಷ್ಟೋ ವಿಷಯಗಳನ್ನು ಸ್ಪಷ್ಟಪಡಿಸಿಕೊಳ್ಳಲು ಶಾಸನಗಳಿಗೇ ಮೊರೆ ಹೋಗಬೇಕಾಗಿದೆ. ಏಕೆಂದರೆ ಆ ಕಾಲದ ಮತ್ತಾವುದೇ ಬರಹದ ದಾಖಲೆ ಸಧ್ಯಕ್ಕೆ ನಮಗೆ ಲಭ್ಯವಿಲ್ಲ. ಶೋಧಗೊಂಡು ಪ್ರಕಟವಾಗಿರುವ ಶಾಸನಗಳ ಪರಿಶೀಲನೆ ಈವರೆಗೆ ಚೆನ್ನಾಗಿಯೇ ಆಗಿದೆ. ಅದಕ್ಕೆ ಒಂದು ಒಳ್ಳೆಯ ಉದಾಹರಣೆ ಆರ್.ಎಸ್. ಪಂಚಮುಖಿ ಮತ್ತು ನೆಲಮಂಗಲ ಲಕ್ಷ್ಮೀನಾರಾಯಣರಾಯರ 'ಕರ್ನಾಟಕದ ಅರಸು ಮನೆತನಗಳು'. ಅದನ್ನು outdated ಎಂದರೂ ಸಹ, ಅಲ್ಲಿನ ಪರಿಶೀಲನೆ ಮತ್ತು ವಿಶ್ಲೇಷಣಾ ಕ್ರಮ ಇಂದಿಗೂ ಒಂದು ಮಾದರಿಯಾಗಿದೆ.

ಶಾಸನಗಳು ಹೊಸದಾಗಿ ದೊರೆಯುತ್ತಲೇ ಇರುತ್ತವೆ. ಶಾಸನಶೋಧ ನಿರಂತರ ಪ್ರಕ್ರಿಯೆ. ಹೊಸ ಶಾಸನಗಳು ಸಿಕ್ಕಾಗ ಹೊಸ ವಿಷಯಗಳು ಲಭ್ಯವಾಗುತ್ತವೆ. ಅದು ಬಿಟ್ಟುಹೋದ ಇತಿಹಾಸದ ಒಂದು ಕೊಂಡಿ ಆಗಿರಬಹುದು. ವಿಜಯನಗರದ ಹಂಪಿಯಲ್ಲಿ, ಇನ್ನೂ ಹೊಸ ಶಾಸನಗಳು ದೊರೆಯುತ್ತಿವೆ. ಕೆಲವು ವರ್ಷಗಳ ಹಿಂದೆ ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನದಲ್ಲಿ ಕೊಪ್ಪಳದ ಸು. ೮೮ ವರ್ಷ ವಯಸ್ಸಿನ ಹಿರಿಯರಾದ ಶ್ರೀ ಬಿ.ಸಿ. ಪಾಟೀಲರು ಅತ್ತಿಮಬ್ಬೆಗೆ ಸಂಬಂಧಿಸಿದ ಒಂದು ಹೊಸ ಶಾಸನವನ್ನು ಪ್ರಕಟಿಸಿದರು. ಸಾಮಾನ್ಯವಾಗಿ ಅತ್ತಿಮಬ್ಬೆ ಎಂದರೆ ದಾನಚಿಂತಾಮಣಿ, ಜಿನಧರ್ಮ ಪತಾಕೆ ಅತ್ತಿಮಬ್ಬೆಯ ಚಿತ್ರ ಕಣ್ಣಮುಂದೆ ನಿಲ್ಲುತ್ತದೆ. ಶ್ರೀ ಬಿ.ಸಿ. ಪಾಟೀಲ್ ಪ್ರಕಟಿಸಿದ ಶಾಸನವು ಅತ್ತಿಮಬ್ಬೆಯ ಮಗ ಒಂದು ಶಿವಾಲಯವನ್ನು ಕಟ್ಟಿಸಿದ ವಿಷಯವನ್ನು ದಾಖಲಿಸಿದೆ. ಅತ್ತಿಮಬ್ಬೆಯ ವಂಶಸ್ಥರು ಎಲ್ಲ ಧರ್ಮಗಳನ್ನು ಸಮಾನವಾಗಿ ಕಂಡ ವಿಷಯವು ಈ ಶಾಸನದಿಂದ ಸ್ಪಷ್ಟವಾಗುತ್ತದೆ. ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಂಚಿಕೆ ಇತಿಹಾಸ ದರ್ಶನದ ಸಂಪುಟಗಳಲ್ಲೇ ೧೫೦ಕ್ಕೂ ಹೆಚ್ಚು ಹೊಸ ಶಾಸನಗಳು ಪ್ರಕಟವಾಗಿವೆ ಎಂಬ ಒಂದು ಅಂದಾಜಿದೆ. ಕ್ಷೇತ್ರಕಾರ್ಯದ ಮೂಲಕ ನಮ್ಮ ಅನೇಕ ತರುಣ ಸಂಶೋಧಕರು ಅದೆಷ್ಟೋ ಹೊಸ ಶಾಸನಗಳನ್ನು ಬೆಳಕಿಗೆ ತರುತ್ತಿದ್ದಾರೆ. ಇವುಗಳ ವಿಶ್ಲೇಷಣೆಯೂ ಆಗುತ್ತಿದೆ. ಈಗಾಗಲೇ ಪ್ರಕಟವಾಗಿರುವ ಶಾಸನಗಳ ಪುನರ್ಪರಿಶೀಲನೆಯ ಕೆಲಸವೂ ಆಗುತ್ತಿದೆ. ನಮ್ಮ ಸ್ನೇಹಿತರಾದ ಡಾ॥ ಟಿ.ವಿ. ನಾಗರಾಜ್ ಕೆರೆಗಳನ್ನು ಕುರಿತು ಒಳ್ಳೆಯ ಸಂಶೋಧನೆ ಮಾಡಿದ್ದಾರೆ. ಇದರ ಫಲಿತಗಳನ್ನು ನಮ್ಮ ಸರ್ಕಾರ ಮಾಡಿಕೊಳ್ಳಬೇಕು. ಈಗ ನಮಗೆ ಅನ್ವಯಿಕ ಸಂಶೋಧನೆಗಳ ಅವಶ್ಯಕತೆ ಹೆಚ್ಚಾಗಿದೆ. ಒಂದು ಕೆರೆಯ ನಿರ್ಮಾಣಕ್ಕೆ ಹೇಗೆ ಸಿದ್ಧತೆಗಳಾಗುತ್ತಿದ್ದವು, ಕೆರೆಯ ನೀರಿನ ಬಳಕೆ ಹೇಗಾಗುತ್ತಿತ್ತು, ಕೆರೆಯ ನಿರ್ವಹಣೆ ಹೇಗಾಗುತ್ತಿತ್ತು ಇತ್ಯಾದಿ ವಿವರಗಳ ಅಧ್ಯಯನವು ಮುಂದೆ ನಮ್ಮ ಕೆರೆಗಳ ನೀರಿನ ಬಳಕೆಗೆ ಅವಕಾಶ ಮಾಡಿಕೊಡಬಲ್ಲದು. ಕೆರೆಗಳ ನಿರ್ಮಾಣದ ಹಿಂದಿನ ಮುನ್ನೋಟವನ್ನು ತಿಳಿಯುವ ಅವಶ್ಯಕತೆ ಈಗಂತೂ ಹೆಚ್ಚಿದೆ. ಕುಡಿಯುವ ನೀರಿಗೂ ಪರದಾಡುತ್ತಿರುವ ಸಂದರ್ಭದಲ್ಲಿ ನೀರಿನ ಸಂಗ್ರಹಣೆ ಮತ್ತು ಅದರ ಸದ್ಬಳಕೆಯ ಅರಿವು ಅವಶ್ಯಕ.

ಶಾಸನಗಳು ರಾಜಕೀಯ ಇತಿಹಾಸಕ್ಕೆ ಮಾತ್ರ ಪ್ರಾಥಮಿಕ ಆಕರಗಳಲ್ಲ ; ಸಾಂಸ್ಕೃತಿಕ ಮತ್ತು ಸಾಮಾಜಿಕ ಇತಿಹಾಸಗಳ ಅಧ್ಯಯನಕ್ಕೂ, ಅದರಲ್ಲೂ ಪ್ರಾಚೀನ ಮತ್ತು ಮಧ್ಯಕಾಲೀನ ಸಮಾಜ ಮತ್ತು ಸಂಸ್ಕೃತಿಗಳ ಬಗ್ಗೆ ತಿಳಿಯಲೂ ಸಹ ಇವು ಮಹತ್ವದ ಆಕರಗಳು ಎಂಬ ಬಗ್ಗೆ ಮೊದಲು ದಾರಿ ತೋರಿದವರು ಡಾ॥ ಎಂ. ಚಿದಾನಂದಮೂರ್ತಿ. ಅವರ ಪಿಎಚ್.ಡಿ., ಮಹಾಪ್ರಬಂಧವಾದ 'ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ'ವು ಇನ್ನೂ ಅನೇಕ ವರ್ಷಗಳ ಕಾಲ ಒಂದು ಮಾದರಿಯಾಗಿಯೇ ಇರುತ್ತದೆ. ಈ ಮಾದರಿಯನ್ನು ಅನುಸರಿಸಿ ಅನೇಕ ಮಹಾಪ್ರಬಂಧಗಳು ಪ್ರಕಟವಾಗಿವೆ. ಶಾಸನಗಳಿಂದ ಸಾಹಿತ್ಯಾಭ್ಯಾಸಿಗಳಿಗೂ ಹೆಚ್ಚಿನ ಉಪಯೋಗ ಆಗಿದೆ. ಪಂಪನ ಬಗ್ಗೆ ತಿಳಿಯಲು ಅವನ ಕಾವ್ಯಗಳ ಜೊತೆಗೇ, ಅವನ ತಮ್ಮ ಜಿನವಲ್ಲಭ ಹಾಕಿಸಿದ್ದ ಕುರಿಕ್ಯಾಲಂನ ಶಾಸನವೂ ಸಹ ವಿಶೇಷ ಆಕರವಾಗಿದೆ. ಅದನ್ನು ಹೊರತುಪಡಿಸಿ ಪಂಪನ ಬಗ್ಗೆ ಸಮಗ್ರವಾಗಿ ತಿಳಿಯಲು ಸಾಧ್ಯವಿಲ್ಲ. ಕುರಿಕ್ಯಾಲಂ ಶಾಸನದಂತೆಯೇ ಇನ್ನೂ ಅನೇಕ ಶಾಸನಗಳು ಪ್ರಾಚೀನ ಕನ್ನಡ ಸಾಹಿತ್ಯವನ್ನು ಅರ್ಥ ಮಾಡಿಕೊಳ್ಳಲು ಸಹಾಯಕ ವಾಗಿವೆ. ಈಗಾಗಲೇ ನಾನು ಪ್ರಸ್ತಾಪಿಸಿರುವಂತೆ ಕವಿರಾಜ ಮಾರ್ಗಪೂರ್ವ ಕನ್ನಡ ಸಾಹಿತ್ಯವನ್ನು ತಿಳಿಯಲು ಶಾಸನ ಗಳಷ್ಟೇ ಆಕರಗಳು. ಅದಕ್ಕೊಂದು ಉತ್ತಮ ಉದಾಹರಣೆ ಎಂದರೆ ಶ್ರವಣಬೆಳಗೊಳದ ಕ್ರಿ.ಶ. ಸು. ೭೦೦ರ ಒಂದು ಶಾಸನ.

**ಸುರಚಾಪಂಬೊಲೆ ವಿದ್ಯುಲ್ಲತೆಗಳ ತೆಱವೋಲ್ಮಂಜು**
**ವೋಲ್ತೋಱಿ ಬೇಗಂ**
**ಪಿರಿಗುಂ ಶ್ರೀರೂಪಲೀಲಾಧನವಿಭವ ಮಹಾರಾಶಿ**
**ಗಳ್ನಿಲ್ಲವಾರ್ಗ್ಗಂ ।**
**ಪರಮಾರ್ತ್ಥಂ ಮೆಚ್ಚೆನಾನೀಧರಣಿಯುಳಿರವಾನೆನ್ದು**
**ಸನ್ಯಾಸನಂಗೆ**
**ಯ್ದುರುಸತ್ವನ್ನನ್ದಿಸೇನ ಪ್ರವರಮುನಿವರನ್ದೇವ ಲೋಕಕ್ಕೆ**
**ಸನ್ದಾನ್ ॥**

ಇದೇ ಕಾಲಕ್ಕೆ ಸರಿಹೊಂದುವ ಬಾದಾಮಿಯ ಕಪ್ಪೆ ಅರಭಟ್ಟನ ಶಾಸನವು ಕನ್ನಡದಲ್ಲಿ ಅಂಶ ತ್ರಿಪದಿಯ ಮೊದಲ ಸುಳಿವನ್ನು ನೀಡಿದೆ. ಜೊತೆಗೆ ಆ ಹೊತ್ತಿಗೆ ಕನ್ನಡದ ಜೊತೆಗೇ ಬೆರೆತುಹೋಗಿದ್ದ ಸಂಸ್ಕೃತ ಭಾಷೆಯ ಪರಿಚಯವನ್ನೂ ಮಾಡಿಕೊಡುತ್ತದೆ.

**ವರನ್ತೇಜಸ್ವಿನೋಮೃತ್ತ್ಯು [ತ್ಯು] ರ್ನತು**
**ಮಾನಾವಖಣ್ಡನಮ್**
**ಮೃತ್ತ್ಯು [ತ್ಯು] ಸ್ತತ್ಕ್ಷಣಿಕೋ ದುಃಖಮ್ಮಾನಭಂಗನ್ದಿನೇ**
**ದಿನೇ ॥**
**ಸಾಧುಗೆ ಸಾಧು ಮಾದೂ [ಧು] ರ್ಯ್ಯಂಗ್ಗೆ [ಜ್ಗೆ] ಮಾಧೂ**
**[ಧು] ರ್ಯ್ಯಂ ಬಾದಿಪ್ಪ**
**ಕಲಿಗೆ ಕಲಿಯುಗ ವಿಪರೀತನ್ಮಾಧವನೀತನ್ಪೆಱನಲ್ಲ ॥**

ಕನ್ನಡ ಸಾಹಿತ್ಯದ ಆರಂಭಿಕ ಹಂತಗಳನ್ನು ಇಂತಹ ಶಾಸನಗಳು ತಿಳಿಸುತ್ತವೆ. ಇದು ಸದ್ಯದ ಮಾತು. ಕವಿರಾಜ ಮಾರ್ಗಕ್ಕಿಂತ ಮೊದಲಿನ ಕಾವ್ಯ ದೊರೆಯಬಾರದೆಂದೇನಿಲ್ಲ. ಅವರಿಗೆ ಕನ್ನಡ ಸಾಹಿತ್ಯದ ಅಭ್ಯಾಸಕ್ಕೆ ಶಾಸನಗಳೇ ಪ್ರಮುಖ ಆಧಾರ. ಸದ್ಯಕ್ಕೆ ದೊರೆತಿರುವ ಕನ್ನಡ ಭಾಷೆಯ ಮೊದಲ ಶಾಸನ ಕ್ರಿ.ಶ. ೪೫೦ರ ಹಲ್ಮಿಡಿಯದು. ಈ ಶಾಸನದಲ್ಲೂ ಕನ್ನಡದ ಭಾಗ ಕಡಿಮೆ ಎಂದೇ ಒಪ್ಪಿಕೊಳ್ಳಬೇಕು. ಸಂಸ್ಕೃತದ ಪ್ರಭಾವ ಕನ್ನಡ ಭಾಷೆಯ ಮೇಲೆ ಹೆಚ್ಚಾಗಿಯೇ ಇದ್ದುದನ್ನು ಹಲ್ಮಿಡಿ ಶಾಸನದ ಮೂಲಕ ತಿಳಿಯಬಹುದು.

ಕನ್ನಡ ಭಾಷೆಯ ಲಿಖಿತ ದಾಖಲೆ ಹಲ್ಮಿಡಿ ಶಾಸನದ ಮೂಲಕವಾದರೂ ಕನ್ನಡ ಲಿಪಿ ಅದಕ್ಕೂ ಪ್ರಾಚೀನ. ಇದನ್ನು ನಿರಾಕರಿಸಲು ಸಾಧ್ಯವಿಲ್ಲ. ತಾಳಗುಂದ ಅಥವಾ ಗುಡ್ನಾಪುರದ ಸ್ತಂಭ ಶಾಸನಗಳ ಭಾಷೆ ಸಂಸ್ಕೃತವಾದರೂ ಲಿಪಿ ಮಾತ್ರ ಕನ್ನಡವೇ ; ಹಲ್ಮಿಡಿ ಶಾಸನಕ್ಕೂ ಹಿಂದಿನ ಗಂಗ ವಂಶದ ಹಲವು ತಾಮ್ರಶಾಸನಗಳ ಭಾಷೆ ಸಂಸ್ಕೃತವಾದರೂ ಲಿಪಿ ಕನ್ನಡವೇ ; ದಾನದ ವಿವರವಂತೂ ದೇಶಭಾಷಾಯಾಂ ಲಿಖ್ಯತೇ ಎಂಬ ಒಕ್ಕಣೆಯೊಂದಿಗೆ ಕನ್ನಡ ಭಾಷೆಯಲ್ಲೇ ಇರುತ್ತದೆ. ಅಂದರೆ ಆ ಹೊತ್ತಿಗೆ ಶಾಸನ ಪ್ರಕಟಗೊಂಡ ಸ್ಥಳದ ದೇಶಭಾಷೆ ಕನ್ನಡವೇ ಆಗಿತ್ತು ಎನ್ನುವುದು ಸ್ಪಷ್ಟ. ಜನರ ಭಾಷೆ ಕನ್ನಡವೇ ಆಗಿತ್ತಾದರೂ, ಈಗಿನಂತೆಯೇ ಆಡಳಿತ ಭಾಷೆ ಮಾತ್ರ ಸಂಸ್ಕೃತವೇ ಆಗಿತ್ತು ಅಥವಾ ರಾಜಾದೇಶಗಳು ಸಂಸ್ಕೃತ ಭಾಷೆಯಲ್ಲಿರುತ್ತಿದ್ದವು. ಕರ್ನಾಟಕದ ಆರಂಭ ಕಾಲದ ಸಂಸ್ಕೃತ ಶಾಸನಗಳು ಕನ್ನಡ ಲಿಪಿಯಲ್ಲೇ ಇರುವುದರಿಂದ ಲಿಪಿಗೂ ಮೊದಲು ಭಾಷೆ ಇರುತ್ತದೆ ಎಂಬ ಸಾರ್ವತ್ರಿಕ ತಿಳುವಳಿಕೆಯ ಕಾರಣದಿಂದ ಕನ್ನಡ ಭಾಷೆಯ ಕಾಲವನ್ನು ಕ್ರಿ.ಪೂ.ದ ಕಾಲಕ್ಕೇ ನಿರ್ಧರಿಸಬೇಕಾಗುತ್ತದೆ. ಕನ್ನಡ ಭಾಷೆಯು ಕ್ರಿ.ಪೂ.ದ ಕಾಲಕ್ಕಾಗಲೇ ಇದ್ದ ವಿಷಯವನ್ನು ಬ್ರಹ್ಮಗಿರಿ ಮತ್ತು ಸಿದ್ದಾಪುರ ಶಾಸನಗಳ ಇಸಿಲ ಶಬ್ದದ ಮೂಲಕ ತಿಳಿದಿದ್ದೇವೆ. ಈ ವಿಷಯದ ಬಗ್ಗೆ ಗಂಭೀರವಾಗಿ ಆಲೋಚಿಸ ಬೇಕಾಗಿದೆ. ಯಾವುದಾದರೂ ಒಂದು ದಿನ ಹಲ್ಮಿಡಿಗೂ ಹಿಂದಿನ ಕನ್ನಡ ಶಾಸನ ದೊರೆತರೆ ಆಶ್ಚರ್ಯಪಡಬೇಕಾಗಿಲ್ಲ.

ಈವರೆಗೆ ಶಾಸನಗಳನ್ನು ಬಳಸಿಕೊಂಡು ವಿಸ್ತೃತ ಅಧ್ಯಯನ ಆಗಿದೆ. ಆದರೆ, ಇನ್ನೂ ಬೇಕಾದಷ್ಟು ಕೆಲಸ ಬಾಕಿ ಉಳಿದಿದೆ. ಇತಿಹಾಸದ ಪ್ರಾಧ್ಯಾಪಕರು ಶಾಸನಗಳಿಗೆ ಸಂಬಂಧಿಸಿದ ವಿಷಯಗಳತ್ತ ಹೆಚ್ಚು ಗಮನಹರಿಸಬೇಕು. ಈ ನಿಟ್ಟಿನಲ್ಲಿ ತಮ್ಮ ವಿದ್ಯಾರ್ಥಿಗಳನ್ನು ತೊಡಗಿಸಬೇಕು. ಶಾಸನ ಶಾಸ್ತ್ರದ ಅಧ್ಯಯನ ಮಾಡಲು ಲಿಪಿ ಶಾಸ್ತ್ರದ ಪರಿಚಯ ಇರಬೇಕು ; ಲಿಪಿಶಾಸ್ತ್ರ ಗೊತ್ತಿದ್ದು, ಭಾಷೆಯ ಬಗ್ಗೆ ಚೆನ್ನಾದ ತಿಳುವಳಿಕೆ ಇದ್ದರೆ, ಶಾಸನಗಳ ಓದು ಮತ್ತು ಅವುಗಳ ವಿಶ್ಲೇಷಣೆ ಕಷ್ಟವಲ್ಲ; ಇತಿಹಾಸದ ಬೋಧಕರಿಗೆ ಇತಿಹಾಸದ ವಿಷಯಗಳೂ ಚೆನ್ನಾಗಿ ತಿಳಿದಿರುವುದರಿಂದ ಶಾಸನಗಳನ್ನು ಬಳಸಿಕೊಂಡು ಖಚಿತವಾದ ಇತಿಹಾಸವನ್ನು ತಿಳಿಯಲು ಮತ್ತು ತಿಳಿಸಲು ಸಾಧ್ಯವಾಗುತ್ತದೆ. ಈವರೆಗೆ ಶಾಸನಗಳನ್ನು ಆಧರಿಸಿ ಕನ್ನಡ ವಿಭಾಗಗಳೇ ಹೆಚ್ಚು ಕೆಲಸಗಳನ್ನು ಮಾಡಿವೆ ಎಂಬುದು ಉತ್ಪ್ರೇಕ್ಷೆಯ ಮಾತಲ್ಲ. ಜೊತೆಗೆ ಇತಿಹಾಸ ವಿಭಾಗವೂ ಸೇರಿದರೆ, ಮತ್ತಷ್ಟು ಖಚಿತವಾದ ವಿಚಾರಗಳನ್ನು ಅನಾವರಣಗೊಳಿಸಲು ಸಾಧ್ಯವಾಗುತ್ತದೆ.

ಮಣ್ಣಯ ಪ್ರಾಚೀನ ದೇವಾಲಯಗಳ ತಳಪಾಯ ಸುಟ್ಟ ಇಟ್ಟಿಗೆಯದು. ಗಂಗರ ಅನೇಕ ದೇವಾಲಯಗಳ

ತಳಪಾಯಗಳು ಸುಟ್ಟ ಇಟ್ಟಿಗೆಯವು ಎಂದು ಈಗಾಗಲೇ ತಿಳಿದಿದೆ. ಇದಕ್ಕೆ ಕಾರಣಗಳೇನು ಎಂದು ತಿಳಿಯಲೂ ಶಾಸನಗಳು ನೆರವಾಗುತ್ತವೆ. ಇದಕ್ಕೆ ಭೌಗೋಳಿಕ ಕಾರಣಗಳು ಮುಖ್ಯ. ಎಲ್ಲಿ ಭೂಕಂಪದ ಸಾಧ್ಯತೆಗಳು ಹೆಚ್ಚಾಗಿರುತ್ತದೆಯೋ ಅಲ್ಲಿ ತಳಪಾಯ ಇಟ್ಟಿಗೆಯದಾಗಿರುತ್ತದೆ ಎಂದು ಊಹಿಸಲಾಗಿದೆ. ಮಣ್ಣೆಯ ಆಸುಪಾಸಿನಲ್ಲಿ ಭೂಕಂಪದ ಸಾಧ್ಯತೆಗಳು ಹೆಚ್ಚಾಗಿತ್ತು. ಇದಕ್ಕೆ ಮಣ್ಣೆಯ ಸಮೀಪದ ಜಿಲ್ಲಿನಕೋಟೆಯ ಶಾಸನ ಮಹತ್ವದ ಉದಾಹರಣೆಯಾಗಿದೆ. ಈ ವಿಚಾರಗಳನ್ನು ಅನ್ವಯ ಮಾಡಿಕೊಂಡು ಆ ಭಾಗದಲ್ಲಿ ಕಟ್ಟಡಗಳ ನಿರ್ಮಾಣ ಆದರೆ ಕಟ್ಟಡಗಳು ದೀರ್ಘಕಾಲ ಉಳಿಯುವ ಸಾಧ್ಯತೆಗಳಿರುತ್ತವೆ.

**ಕೆಱೆಯಂ ಕಟ್ಟಿಸು ಭಾವಿಯಂ ಸವೆಸು ದೇವಾಗಾರಮಂ ಮಾಡಿ**
**ಸಜ್ಜೆಱೆಯೊಳ್ಸಿಲ್ಕಿದನಾಥರಂ ಬಿಡಿಸು ಮಿತ್ರರ್ಗ್ಗಿಂಬುಗೆ ಯಿನಂಬಿದ ।**
**ಗ್ಗ್ೞಱೆಪೆಟ್ಟಾಗಿರು ಶಿಷ್ಟರಂ ಪೊರೆಯೆನುತ್ತಿಂತೆಲ್ಲವಂ ಪಿಂದೆ ತಾ**
**ಯೆಱದಳ್ವಾಲೆಱೆಪಂದು ತೊಟ್ಟು ಕಿವಿಯೊಳ್ ಲಕ್ಷ್ಮೀಧರಾ ಮಾತ್ಯನಾ ॥**

ಲಕ್ಷ್ಮೀಧರ ದೇವರಾಯನ ಆಸ್ಥಾನದಲ್ಲಿ ಮಂತ್ರಿಯಾಗಿದ್ದ. ಅವನು ತಾಯಿಯ ತೊಡೆಯ ಮೇಲಿದ್ದಾಗಲೇ ಕೆರೆ ಕಟ್ಟಿಸುವ ಭಾವಿ ತೋಡಿಸುವ, ದೇವಾಲಯವನ್ನು ಕಟ್ಟಿಸುವ, ಕಷ್ಟಗಳಲ್ಲಿ ಸಿಕ್ಕಿರುವ ಅನಾಥರನ್ನು ಬಿಡಿಸುವ, ಮಿತ್ರರಿಗೆ ಆಸರೆ ನೀಡುವ, ನಂಬಿದವರಿಗೆ ಆಶ್ರಯ ನೀಡುವ, ಶಿಷ್ಟರನ್ನು ಸಲಹುವ ಕಿವಿಮಾತುಗಳನ್ನು ಕೇಳಿದ್ದ. ಇದು ಆಗಿನ ಸಾಮಾಜಿಕ ಬದುಕು. ಇದು ಎಲ್ಲ ಕಾಲಕ್ಕೂ ಅನ್ವಯಿಸುವ ಮಾತು. ಸಿಂಗಾಯಭಟ್ಟ ಎನ್ನುವ ಒಬ್ಬ ಜಲತಂತ್ರಜ್ಞನನ್ನು ಕುರಿತ ಒಂದು ಶಾಸನ ಗೌರಿಬಿದನೂರು ತಾಲ್ಲೂಕಿನಲ್ಲಿ ದೊರೆತಿದೆ. ಅದನ್ನು ಪ್ರಕಟಿಸಿದವರು ಶ್ರೀ ತಿ.ತಾ. ಶರ್ಮ. ಈಗ ಆ ಶಾಸನ ಗೌರಿಬಿದನೂರಿನ ನ್ಯಾಷನಲ್ ಹೈಸ್ಕೂಲಿನ ಆವರಣದಲ್ಲಿದೆ. ಇದರಲ್ಲಿ ಸಿಂಗಾಯಭಟ್ಟ ಕಟ್ಟಿಸಿದ ಕೆರೆಗಳು, ನಿರ್ಮಿಸಿದ ಕಾಲುವೆಗಳು ಇತ್ಯಾದಿಗಳ ಪ್ರಸ್ತಾಪ ಆಗಿದೆ. ಇಂತಹ ಶಾಸನಗಳ ಅಧ್ಯಯನದಿಂದ ಆ ಕಾಲದಲ್ಲಿ ಕೆರೆಗಳ ನಿರ್ಮಾಣಕ್ಕೆ ಸ್ಥಳದ ಆಯ್ಕೆ, ಅನುಸರಿಸುತ್ತಿದ್ದ ಕ್ರಮ, ನೀರಿನ ಬಳಕೆಗೆ ಅನುಸರಿಸುತ್ತಿದ್ದ ಪದ್ಧತಿ ಇತ್ಯಾದಿಗಳ ಬಗ್ಗೆ ತಿಳಿಯುತ್ತದೆ. ಆ ಪ್ರಾಚೀನ ಜ್ಞಾನವನ್ನು ಅನ್ವಯ ಮಾಡಿಕೊಂಡರೆ ಅನುಕೂಲವಾಗಬಹುದು ಎಂಬ ನಂಬಿಕೆ ನನ್ನದು. ಅದಕ್ಕಾಗಿಯೇ ಅನ್ವಯಿಕ ಸಂಶೋಧನೆ ಹೆಚ್ಚು ಆಗಬೇಕು. ಅನ್ವಯಿಕ ಸಂಶೋಧನೆಗಳ ಫಲವನ್ನು ಸರ್ಕಾರಗಳು ತಿಳಿದು, ಅದನ್ನು ಬಳಸಿಕೊಂಡರೆ ಅನುಕೂಲ ಆದೀತು.

ಮೊದಲೇ ಹೇಳಿದಂತೆ ಶಾಸನಗಳನ್ನು ಆಧರಿಸಿದ ವ್ಯಾಪಕ ಅಧ್ಯಯನ ಆಗಿದೆ. ಈಗ ಆಗಬೇಕಾಗಿರುವುದು ಸೂಕ್ಷ್ಮಾಧ್ಯಯನ. ಕ್ರಿ.ಶ. ೧೦೬೮ರಲ್ಲಿ ಒಂದನೆಯ ಸೋಮೇಶ್ವರ ಕುರುವತ್ತಿಯ ಬಳಿ ತುಂಗಭದ್ರಾ ನದಿಯಲ್ಲಿ ಮುಳುಗಿ ಸತ್ತ ಎಂಬ ವಿಷಯ ಶಾಸನದಿಂದ ತಿಳಿದಿದೆ. ಶಾಸನದ ಮೂಲಕ ತಿಳಿಯುವ ವಿಷಯ ಸೋಮೇಶ್ವರನಿಗೆ ತೀವ್ರವಾದ ಜ್ವರ ಬಾಧೆ ಇತ್ತು. ಅದಕ್ಕಾಗಿ ಅವನು ನೀರಿನಲ್ಲಿ ಮುಳುಗಿ ಆತ್ಮಹತ್ಯೆ ಮಾಡಿಕೊಂಡ. ಜ್ವರ ಬಂದರೆ ಆತ್ಮಹತ್ಯೆ ಮಾಡಿಕೊಳ್ಳುತ್ತಾರೆಯೆ ? ಆತ್ಮಹತ್ಯೆಗೆ ಬೇರೇನೋ ಕಾರಣ ಇರಬಹುದು. ಆ ಕಾರಣವನ್ನು ತಿಳಿಯುವ ಸೂಕ್ಷ್ಮಾಧ್ಯಯನ ಆಗಬೇಕು. ಇಂತಹ ಎಷ್ಟೋ ವಿಷಯಗಳ ಬಗ್ಗೆ ಸೂಕ್ಷ್ಮಾಧ್ಯಯನದ ಅವಶ್ಯಕತೆ ಇದೆ. ಇದರಿಂದ ಸಮಗ್ರ ಮತ್ತು ಸ್ಪಷ್ಟ ಇತಿಹಾಸವನ್ನು ತಿಳಿಯಲು ಮತ್ತು ತಿಳಿಸಲು ಸಾಧ್ಯವಾಗುತ್ತದೆ. ಈಗ ಕೆಳಸ್ತರದ ಅಧ್ಯಯನ/ಸಬಾಲ್ಟರ್ನ್ ಸ್ಟಡೀಸ್ ಆಗುತ್ತಿದೆ. ಇದು ಎಲ್ಲ ಜನಾಂಗದ, ಎಲ್ಲ ಪ್ರದೇಶಗಳ ಎಲ್ಲ ಕಾಲದ ಸಮಗ್ರ ಅಧ್ಯಯನಕ್ಕೆ ದಾರಿ ಮಾಡಿಕೊಡುತ್ತದೆ. ಇಂತಹ ಕೆಲಸಗಳು ಆಗಿಯೇ ಇಲ್ಲ ಎಂದಲ್ಲ. ಡಾ॥ ಕೆ.ವಿ. ರಮೇಶ್, ಡಾ॥ ನೊಬೂರು ಕರಾಶಿಮಾ, ಡಾ॥ ಸುಬ್ಬರಾಯಲು ಇತ್ಯಾದಿ ಶಾಸನತಜ್ಞರು ಶಾಸನಗಳನ್ನು ಆಧರಿಸಿಯೇ ಸೂಕ್ಷ್ಮಾಧ್ಯಯನಗಳನ್ನು ಮಾಡಿದ್ದಾರೆ. ಅಂತಹ ಅಧ್ಯಯನಗಳು ಇನ್ನೂ ಹೆಚ್ಚು ಪ್ರಮಾಣದಲ್ಲಿ ಆಗಬೇಕಾಗಿದೆ.

ನಮ್ಮಲ್ಲಿ ಪಾಶ್ಚಾತ್ಯ ವಿದ್ವಾಂಸರಿಗೆ ಮೊದಲು ಶಾಸನತಜ್ಞರೇ ಇರಲಿಲ್ಲವೆ ? ಶಾಸನಾಧ್ಯಯನಕ್ಕೆ ವಿಲಿಯಂ ಜೋನ್ಸ್, ಬಿ.ಎಲ್. ರೈಸ್, ಜೆ.ಎಫ್. ಫ್ಲೀಟ್ ಇತ್ಯಾದಿ ವಿದ್ವಾಂಸರು ಬರುವವರೆಗೆ ಕಾಯಬೇಕಾದ ಪರಿಸ್ಥಿತಿ ಇತ್ತೆ ಎಂಬ ಪ್ರಶ್ನೆ ನನ್ನನ್ನು ಆಗಾಗ ಕಾಡಿದೆ. ನಮ್ಮಲ್ಲಿಯೇ ಶಾಸನತಜ್ಞರಿದ್ದರು ಎಂಬ ಬಲವಾದ ನಂಬಿಕೆ ನನ್ನದು. ಈಗ ಕರ್ನಾಟಕದಲ್ಲಿ, ಈಗಿನ ಜನಸಂಖ್ಯೆಯ ಪ್ರಮಾಣಕ್ಕೆ ತಕ್ಕಂತೆ ಎಷ್ಟು ಶಾಸನತಜ್ಞರು ಇದ್ದಾರೆಯೋ, ಹಾಗೆಯೇ

ಆಗಿನ ಜನಸಂಖ್ಯೆಯ ಪ್ರಮಾಣಕ್ಕೆ ತಕ್ಕಂತೆ ಶಾಸನತಜ್ಞರಿದ್ದರು ಎಂಬ ನಂಬಿಕೆ ನನ್ನದು. ಕೆಲವು ಗ್ರಂಥಗಳಲ್ಲಿ ಉಲ್ಲೇಖಗೊಂಡಿರುವಂತೆ, ಹಿಂದೆಯೂ ಹಲವು ಲಿಪಿಗಳನ್ನು ತಿಳಿದಿದ್ದ ಜನ ಇದ್ದರು. ಅಂತಹ ಎಲ್ಲರಿಗೂ ಶಾಸನಗಳನ್ನು ಓದಬಲ್ಲ ಶಕ್ತಿ ಇತ್ತು ಎನ್ನುವ ನಂಬಿಕೆ ನನ್ನದು. ಕರ್ನಲ್ ಮೆಕೆಂಜಿಗೆ ಶ್ರವಣಬೆಳಗೊಳದ ಬುಕ್ಕರಾಯನ ಶಾಸನದ ಬಗ್ಗೆ ತಿಳಿಸಿದವನು ಮಲೆಯೂರಿನ ದೇವಚಂದ್ರ ಎಂಬ ಕವಿ. ಅವನ ರಾಜಾವಳೀ ಕಥೆ ಪ್ರಕಟವಾಗಿದೆ. ಅದನ್ನು ಕಾವ್ಯವಾಗಿ ಓದುವುದರ ಜೊತೆಗೆ ಅದನ್ನು ಐತಿಹಾಸಿಕ ದಾಖಲೆಗಳಿರುವ ಗ್ರಂಥ ಎಂದು ಓದಿದರೆ ಇತಿಹಾಸದ ಅಧ್ಯಯನಕ್ಕೆ ಹೆಚ್ಚಿನ ನೆರವು ದೊರೆಯುವ ಸಾಧ್ಯತೆಗಳಿವೆ. ಕರ್ನಲ್ ಮೆಕೆಂಜಿಯಂತಹ ಪಾಶ್ಚಾತ್ಯ ವಿದ್ವಾಂಸರಿಗೆ ಭಾರತೀಯ ವಿಚಾರಗಳನ್ನು ತಿಳಿಸುವಲ್ಲಿ ದೇವಚಂದ್ರ, ಕವೆಲ್ಲಿ ಬೋರಯ್ಯ ಸಹೋದರರು ಇತ್ಯಾದಿ ಸ್ಥಳೀಯ ವಿದ್ವಾಂಸರು ಕಾರಣರಾಗಿದ್ದಾರೆ. ಅಂತಹ ಸ್ಥಳೀಯ ವಿದ್ವಾಂಸರನ್ನು ಕುರಿತೂ ತಿಳಿಯುವ ಮತ್ತು ತಿಳಿಸುವ ಕೆಲಸ ಆಗಬೇಕಾಗಿದೆ.

ಭಾರತದಲ್ಲಿ ಇತಿಹಾಸವಿದೆ. ಕರ್ನಾಟಕದಲ್ಲೂ ಇತಿಹಾಸವಿದೆ. ಇವುಗಳನ್ನು ತಿಳಿಯಲು ಏಷ್ಯಾಟಿಕ್ ರಿಸರ್ಚಸ್, ಎಪಿಗ್ರಾಫಿಯಾ ಕರ್ನಾಟಿಕಾ, ಎಪಿಗ್ರಾಫಿಯಾ ಇಂಡಿಕಾ, ಇಂಡಿಯನ್ ಆಂಟಿಕ್ವೆರಿ ಇತ್ಯಾದಿ ಸಂಪುಟಗಳು ಮತ್ತು ಅನೇಕ ನಿಯತಕಾಲಿಕೆಗಳಲ್ಲಿ ಶಾಸನಗಳ ಪ್ರಕಟಣೆ ಮತ್ತು ವಿಶ್ಲೇಷಣೆ ಚೆನ್ನಾಗಿಯೇ ಆಗಿದೆ. ಭಾರತೀಯ ಪುರಾತತ್ವ ಇಲಾಖೆಯಲ್ಲಿ ಶಾಸನಶಾಸ್ತ್ರ ವಿಭಾಗವೇ ಪ್ರತ್ಯೇಕವಾಗಿದೆ. ಇದನ್ನು ಶ್ರೀ ಹೊಸಕೋಟೆ ಕೃಷ್ಣಶಾಸ್ತ್ರಿ, ಶ್ರೀ ನೆಲಮಂಗಲ ಲಕ್ಷ್ಮೀನಾರಾಯಣರಾವ್, ಶ್ರೀ ಡಿ.ಸಿ. ಸರ್ಕಾರ್, ಡಾ॥ ಜಿ.ಎಸ್. ಗಾಯಿ, ಡಾ॥ ಕೆ.ಜಿ. ಕೃಷ್ಣನ್, ಡಾ॥ ಕೆ.ವಿ. ರಮೇಶ್, ಶ್ರೀ ಮಾಧವ ನಾ. ಕಟ್ಟಿ ಇತ್ಯಾದಿ ವಿದ್ವಾಂಸರು ತಮ್ಮ ಕಾರ್ಯಗಳಿಂದಾಗಿ ಬಲಪಡಿಸಿದ್ದಾರೆ. ಇವರೆಲ್ಲರ ಶ್ರಮದ ಪೂರ್ಣ ಪ್ರಯೋಜನವನ್ನು ಯುವಪೀಳಿಗೆ ಪಡೆಯಬೇಕಾಗಿದೆ. ಇವರ ಜೊತೆಗೇ ಶಾಸನಶಾಸ್ತ್ರ ಕ್ಷೇತ್ರವನ್ನು ಹುಲುಸುಗೊಳಿಸಿರುವವರಲ್ಲಿ ಡಾ॥ ಆರ್.ಎಸ್. ಪಂಚಮುಖಿ, ಶ್ರೀ ತಿ.ತಾ. ಶರ್ಮ, ಡಾ॥ ಪಾಂಡುರಂಗ ದೇಸಾಯಿ, ಶ್ರೀ ಎ.ಎಂ. ಅಣ್ಣಿಗೇರಿ, ಶ್ರೀ ಮೇವುಂಡಿ ಮಲ್ಲಾರಿ, ಡಾ॥ ಬಾ.ರಾ. ಗೋಪಾಲ್, ಡಾ॥ ಶ್ರೀನಿವಾಸ ರಿತ್ತಿ ಇತ್ಯಾದಿ ಹಿರಿಯರು ಸೇರುತ್ತಾರೆ.

ಅಚ್ಚಾದ ಕನ್ನಡದ ಮೊಟ್ಟಮೊದಲ ಶಾಸನ ಸಂಬಂಧೀ ಲೇಖನ A Royal grant of land in carnata. ಕ್ರಿ.ಶ. ೧೭೭೯ರಲ್ಲೇ ಈ ಶಾಸನ ಏಷ್ಯಾಟಿಕ್ ರಿಸರ್ಚಸ್ ನಿಯತಕಾಲಿಕೆಯಲ್ಲಿ ಪ್ರಕಟಗೊಂಡಿದೆ. ಹಲವು ಮಹತ್ವದ ನಿಯತಕಾಲಿಕೆಗಳು ಮೊದಲೂ ಇದ್ದವು ಮತ್ತು ಈಗಲೂ ಇವೆ. ಅವುಗಳಲ್ಲಿ ಶಾಸನಶೋಧ, ಪರಿಷ್ಕರಣೆ ಮತ್ತು ಪರಿಶೀಲನೆಯ ಕೆಲಸ ನಿರಂತರವಾಗಿ ಆಗುತ್ತಿದೆ.

ಕರ್ನಾಟಕದ ಇತಿಹಾಸ ಮತ್ತು ಸಂಸ್ಕೃತಿಯ ಅಧ್ಯಯನಕ್ಕೆ ಪ್ರಮುಖ ಆಕರ ಗ್ರಂಥವಾದ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳ ಪ್ರಕಟಣೆಯನ್ನು ರಾಜ್ಯ ಪುರಾತತ್ವ ಇಲಾಖೆ ಯಾವ ಕಾರಣದಿಂದಲೋ ನಿಲ್ಲಿಸಿತು. ಅದರ ಪರಿಷ್ಕರಣ ಕಾರ್ಯವನ್ನು ಮೈಸೂರು ವಿಶ್ವವಿದ್ಯಾಲಯ ಮುಂದುವರೆಸಿದೆ. ಡಾ॥ ಬಿ.ಎಲ್. ರೈಸ್ ಆರಂಭಿಸಿದ ಕೆಲಸವನ್ನು ರಾವ್‌ಬಹದ್ದೂರ್ ಆರ್. ನರಸಿಂಹಾಚಾರ್, ಡಾ॥ ಎಂ.ಎಚ್. ಕೃಷ್ಣ, ಡಾ॥ ಕೆ.ಎ. ನೀಲಕಂಠಶಾಸ್ತ್ರಿ, ಡಾ॥ ಎಂ. ಶೇಷಾದ್ರಿ ಮುಂದುವರಿಸಿದರು.

ಹಿಂದಿನ ಶಾಸನತಜ್ಞರ ಕೆಲಸದಲ್ಲಿ ಸಂಯಮ ಇತ್ತು. ಅದಕ್ಕೊಂದು ಉದಾಹರಣೆ ನಾನು ನನ್ನ ಸಂಬಂಧಿ ನೆಲಮಂಗಲ ಲಕ್ಷ್ಮೀನಾರಾಯಣರಾಯರನ್ನು ಅವರು ಹೆಚ್ಚು ಲೇಖನಗಳನ್ನು ಏಕೆ ಬರೆಯಲಿಲ್ಲ ಎಂದು ಪ್ರಶ್ನಿಸಿದಾಗ ಅವರು ನೀಡಿದ್ದ 'ನನಗೆ perfect ಎನಿಸುವವರೆಗೆ ನಾನು ಏನನ್ನೂ ಬರೆಯುವುದಿಲ್ಲ. ಒಮ್ಮೆ ನಾನು ಬರೆದ ಲೇಖನದ ಬಗ್ಗೆ ಹೆಚ್ಚಿನ ಪ್ರಶ್ನೆಗಳು ಬರಬಾರದು' ಎಂಬ ಉತ್ತರ ನಮಗೆಲ್ಲಾ ಒಂದು ಎಚ್ಚರಿಕೆಯ ಮಾತಾಗಿದೆ. ಬಹುತೇಕ ಆ ಕಾಲದ ವಿದ್ವಾಂಸರೆಲ್ಲಾ ಈ ಕಟ್ಟುಪಾಡನ್ನು ಅನುಸರಿಸುತ್ತಿದ್ದರು. ಈಗ ಕೇಂದ್ರ ಸರ್ಕಾರದ ಶಾಸನ ಇಲಾಖೆಯಲ್ಲೇ ಶಾಸನತಜ್ಞರ ಕೊರತೆ ಇದೆ ಎಂಬ ಮಾತಿದೆ. ಇದರ ನಿವಾರಣೆ ಆಗಬೇಕು.

ಕನ್ನಡದ ಭಾಷೆಯ ಪ್ರಾಚೀನತೆಯ ಬಗ್ಗೆ ಈಗಂತೂ ಚರ್ಚೆಗಳು ಹೆಚ್ಚಿವೆ. ಶಾಸ್ತ್ರೀಯ ಭಾಷೆಯ ಸ್ಥಾನದ ಬಗೆಗಿನ ಚರ್ಚೆ ಕಾವೇರಿದೆ. ಕನ್ನಡ ಭಾಷೆಯ ಪ್ರಾಚೀನತೆಯ ಬಗ್ಗೆ ಚರ್ಚಿಸುವಾಗ ಅಶೋಕನ ಬ್ರಹ್ಮಗಿರಿ ಮತ್ತು ಸಿದ್ದಾಪುರ ಶಾಸನಗಳಲ್ಲಿ ಉಕ್ತಗೊಂಡಿರುವ ಇಸಿಲ ಶಬ್ದವನ್ನು ಆಧರಿಸಿಯಷ್ಟೇ ಚರ್ಚಿಸುತ್ತಿದ್ದೇವೆ. ಈ ಬಗ್ಗೆ ಇನ್ನೂ ಹೆಚ್ಚಿನ

ಪರಿಶೀಲನೆಯ ಅಗತ್ಯವಿದೆ. ಶಾಸನಗಳು ರಾಜಕೀಯ ಇತಿಹಾಸಕ್ಕಷ್ಟೇ ಸೀಮಿತವಲ್ಲ. ಬಿಲ್ಲಿನಕೋಟೆಯ ಒಂದು ಸಣ್ಣ ಶಾಸನ ೧೫೦೭ರ ಜುಲೈ ೭ನೆಯ ತಾರೀಕು ಸಂಭವಿಸಿದ ಭೂಕಂಪದ ಬಗ್ಗೆ ದಾಖಲಿಸಿದೆ. ಶಾಸನ ಚಿಕ್ಕದಾದರೂ ಅದರಲ್ಲಿರುವ ವಿಷಯ ಬಹಳ ಮಹತ್ವದ್ದು. ಶಾಸನಗಳಲ್ಲಿ ಅಡಗಿರುವ ಅಮೂಲ್ಯ ವಿಷಯಗಳನ್ನು ಅನಾವರಣ ಮಾಡಿ ಸಮಗ್ರ ಇತಿಹಾಸವನ್ನು ತಿಳಿಯುವ ಮತ್ತು ತಿಳಿಸುವ ಕೆಲಸ ಆಗಬೇಕಾಗಿದೆ. ಮೆಳೇಕೋಟೆಯ ಎರಡನೆಯ ಮಾಧವನ ತಾಮ್ರಶಾಸನದಲ್ಲಿ ಉಲ್ಲೇಖ ಗೊಂಡಿರುವ ಬೌದ್ಧ ಸ್ತೂಪ ಮತ್ತು ರಕ್ತ ತಟಾಕವನ್ನು ಡಾ॥ ಎಂ.ಜಿ. ಮಂಜುನಾಥ್ ಪತ್ತೆ ಮಾಡಿದ್ದಾರೆ. ಪ್ರಾಚೀನ ಕರ್ನಾಟಕದ ನಾಡುಗಳನ್ನು ಕುರಿತು ಗೆಳೆಯ ಡಾ॥ ಪಿ.ವಿ. ಕೃಷ್ಣಮೂರ್ತಿ ಅಧ್ಯಯನ ಮಾಡಿದ್ದಾರೆ.

ಶಾಸನತಜ್ಞರ ಕೊರತೆ ಇದೆ ಎಂಬ ವಿಷಯವನ್ನು ಒಪ್ಪಲು ಸಾಧ್ಯವಿಲ್ಲ. ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯದ ಪ್ರಾಚೀನ ಭಾರತೀಯ ಮತ್ತು ಶಾಸನ ವಿಜ್ಞಾನ ವಿಭಾಗದಲ್ಲಿ ಶಾಸನಗಳನ್ನು ಓದುವುದನ್ನು ಕಲಿಸುವ ಕೆಲಸ ಆಗುತ್ತಿದೆ. ಹಂಪಿಯ ಕನ್ನಡ ವಿಶ್ವವಿದ್ಯಾಲಯದಲ್ಲೂ ಶಾಸನ ಶಾಸ್ತ್ರ ವಿಭಾಗ ಪ್ರತ್ಯೇಕವಾಗಿದೆ. ಮೈಸೂರು ಮತ್ತು ಬೆಂಗಳೂರು ವಿಶ್ವವಿದ್ಯಾಲಯಗಳ ಕನ್ನಡ ವಿಭಾಗದಲ್ಲಿ ಶಾಸನ ಶಾಸ್ತ್ರವನ್ನು ಒಂದು ವಿಷಯವಾಗಿ ಕಲಿಸುವ ಕೆಲಸ ಆಗುತ್ತಿದೆ. ಮೈಸೂರು ವಿಶ್ವವಿದ್ಯಾನಿಲಯದ ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗದಲ್ಲೂ ಶಾಸನಶಾಸ್ತ್ರವನ್ನು ಕಲಿಸುವ ಕೆಲಸ ಆಗುತ್ತಿದೆ ಎಂದು ಕೇಳಿ ಬಲ್ಲೆ ; ಕನ್ನಡ ಸಾಹಿತ್ಯ ಪರಿಷತ್ತಿನಲ್ಲಿ ಸುಮಾರು ೩೦ ವರ್ಷಗಳಿಂದ ನಿರಂತರವಾಗಿ ಶಾಸನ ಶಾಸ್ತ್ರ ಬೋಧನೆ ಆಗುತ್ತಿದೆ. ಪ್ರತಿ ವರ್ಷ ಕೆಲವರಾದರೂ ಶಾಸನ ತಜ್ಞರು ಈ ವಿಭಾಗಗಳಿಂದ ಹೊರಬರುತ್ತಿದ್ದಾರೆ. ಶಾಸನ ಶಾಸ್ತ್ರವನ್ನು ಎಲ್ಲೇ ಕಲಿಸಲಿ ಅಲ್ಲಿ ಲಿಪಿಶಾಸ್ತ್ರವನ್ನು ಕಲಿಸುವ ಕೆಲಸ ಆಗಲೇಬೇಕು ಎಂಬ ಒತ್ತಾಯ ನನ್ನದು.

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಶಾಸನ ಶಾಸ್ತ್ರ ವಿಭಾಗವು ಮುಂಬಯಿ ಕರ್ನಾಟಕ, ಹೈದರಾಬಾದ್ ಕರ್ನಾಟಕ ಮತ್ತು ಮದ್ರಾಸ್ ಆಧಿಪತ್ಯಕ್ಕೆ ಸೇರಿದ್ದ ಕನ್ನಡ ಪ್ರದೇಶಗಳ ಜಿಲ್ಲಾವಾರು ಶಾಸನ ಸಂಪುಟಗಳನ್ನು ಪ್ರಕಟಿಸುತ್ತಿದೆ. ಜೊತೆಗೆ ಕರ್ನಾಟಕದ ಹೊರಗಿನ ಮಹಾರಾಷ್ಟ್ರ, ಆಂಧ್ರ ಮತ್ತು ತಮಿಳುನಾಡಿನ ಕನ್ನಡ ಶಾಸನ ಸಂಪುಟಗಳನ್ನು ಪ್ರಕಟಿಸಿದೆ. ಇದು ಎಲ್ಲರ ಮೆಚ್ಚುಗೆ ಪಡೆದಿದೆ. ಮೈಸೂರು ವಿಶ್ವವಿದ್ಯಾನಿಲಯದ ಕುವೆಂಪು ಕನ್ನಡ ಅಧ್ಯಯನ ಸಂಸ್ಥೆಯು ಹಮ್ಮಿಕೊಂಡಿರುವ ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟಗಳ ಪರಿಷ್ಕರಣ ಕಾರ್ಯ ಮುಂದುವರಿದಿದೆ. ಕೆಲವು ಹವ್ಯಾಸಿ ಶಾಸನ ತಜ್ಞರು ಖಾಸಗಿಯಾಗಿ ತಾಲ್ಲೂಕು/ಜಿಲ್ಲಾವಾರು ಶಾಸನ ಸಂಪುಟಗಳನ್ನು ಪ್ರಕಟಿಸುತ್ತಿದ್ದಾರೆ. ರಾಜರು/ರಾಜ ವಂಶಗಳಿಗೆ ಸಂಬಂಧಿಸಿದ ಪ್ರತ್ಯೇಕ ಶಾಸನ ಸಂಪುಟಗಳ ಪ್ರಕಟಣೆಯೂ ಆಗುತ್ತಿದೆ. ಕೆಲವು ವಿಶ್ವವಿದ್ಯಾಲಯಗಳು, ಕನ್ನಡ ಸಾಹಿತ್ಯ ಪರಿಷತ್ತು ಇತ್ಯಾದಿ ಸಂಸ್ಥೆಗಳು ಪ್ರಕಟಿಸುವ ನಿಯತಕಾಲಿಕೆಗಳಲ್ಲಿ ಶಾಸನ ಶೋಧ ಮತ್ತು ಪರಿಶೀಲನೆಯ ಕುರಿತು ಲೇಖನಗಳು ಪ್ರಕಟವಾಗುತ್ತಿವೆ.

ಭಾರತೀಯ ಎಪಿಗ್ರಫಿಕಲ್ ಸೊಸೈಟಿ, ಕರ್ನಾಟಕ ಇತಿಹಾಸ ಅಕಾದೆಮಿಗಳು ಶಾಸನ ತಜ್ಞರ ಬೆಳವಣಿಗೆಗೆ ಅವಕಾಶ ನೀಡುತ್ತಿವೆ. ಈ ಎರಡೂ ಸಂಸ್ಥೆಗಳು ತಪ್ಪದೆ ನಡೆಸುವ ವಾರ್ಷಿಕ ಸಮ್ಮೇಳನಗಳು ಅನೇಕ ಸಂಶೋಧಕರಿಗೆ ಪ್ರೋತ್ಸಾಹ ನೀಡುತ್ತಿವೆ. ಈ ಸಂಸ್ಥೆಗಳ ವಾರ್ಷಿಕ ಸಮ್ಮೇಳನಗಳಲ್ಲಿ ಮಂಡಿತವಾಗುವ ಸಂಪ್ರಬಂಧಗಳು ಆಯಾ ಸಂಸ್ಥೆಯ ವಾರ್ಷಿಕ ನಿಯತಕಾಲಿಕೆಗಳಲ್ಲಿ ಪ್ರಕಟಗೊಳ್ಳುತ್ತಿವೆ. ಜೊತೆಗೆ ಮಿಥಿಕ್ ಸೊಸೈಟಿಯ ತ್ರೈಮಾಸಿಕ ನಿಯತಕಾಲಿಕೆಯಲ್ಲೂ ಶಾಸನ ಸಂಬಂಧೀ ಲೇಖನಗಳು ಪ್ರಕಟಗೊಳ್ಳುತ್ತವೆ. ಈ ಮೂರೂ ಸಂಸ್ಥೆಗಳು ನನ್ನನ್ನು ಬೆಳೆಸಿವೆ. ಆದ್ದರಿಂದ ಜೋಳವಾಳಿ ಎಂಬಂತೆ ನಾನು ಮೂರೂ ಸಂಸ್ಥೆಗಳಿಗೆ ಋಣಿಯಾಗಿದ್ದೇನೆ.

ಜಲಗಾರದಿಬ್ಬದ ಶಾಸನವನ್ನು ನಾನು ಪ್ರಕಟಿಸಿದಾಗ, ಅದರ ಪಾಠವನ್ನು ಒಪ್ಪಿ ಕಾಲ ನಿರ್ಣಯದ ಬಗ್ಗೆ ಮಾತ್ರ ಡಾ॥ ಗೋಪಾಲ್ ಭಿನ್ನಾಭಿಪ್ರಾಯ ವ್ಯಕ್ತಪಡಿಸಿದ್ದರು. ಆಗಿನ್ನೂ ನಾನು ಅವರ ವಿದ್ಯಾರ್ಥಿ ಆಗಿರಲಿಲ್ಲ. ನನಗೆ ಪಿಎಚ್.ಡಿ ಪದವಿ ಬಂದ ನಂತರ ನಾವು ಆ ಶಾಸನವನ್ನು ಒಟ್ಟಿಗೇ ನೋಡಿ ಚರ್ಚಿಸಿದೆವು. ಆಗ ಡಾ॥ ಗೋಪಾಲ್ ಹೇಳಿದ ಮಾತು ಅವರ ವಿಶಾಲ ಗುಣಕ್ಕೆ ಸಾಕ್ಷಿ. ಅವರು ಹೇಳಿದ್ದು 'ನನ್ನ ಅಭಿಪ್ರಾಯದಲ್ಲಿ ಬದಲಾವಣೆ ಇಲ್ಲ ; ನೀವೂ ನಿಮ್ಮ ಮೊದಲ ಅಭಿಪ್ರಾಯವನ್ನೇ ಮುಂದುವರಿಸುವು ದಾದರೆ ನನ್ನ ಅಭ್ಯಂತರವಿಲ್ಲ'.

ಡಾ॥ ಬಾ.ರಾ. ಗೋಪಾಲ್ ಅವರು ಆಶಾವಾದಿ. ಶಾಸನ ಶಾಸ್ತ್ರದ ಅಧ್ಯಯನ ಪ್ರಕಟನೆ ಇತ್ಯಾದಿ ಕೆಲಸಗಳ

ಬಗ್ಗೆ ಅವರಿಗೆ ಅಪಾರ ಆಸಕ್ತಿ. ವಿಜಯನಗರದ ಸಮಗ್ರ ಶಾಸನಗಳ ಸಾರಾಂಶಗಳ ಸಂಪುಟಗಳನ್ನು ಪ್ರಕಟಿಸುವ, ತಮಿಳುನಾಡಿನ ಕನ್ನಡ ಶಾಸನಗಳನ್ನು ಪ್ರಕಟಿಸುವ, ನೆಲಮಂಗಲ ಲಕ್ಷ್ಮೀನಾರಾಯಣರಾಯರ ಸಮಗ್ರ ಲೇಖನಗಳ ಸಂಪುಟವನ್ನು ಪ್ರಕಟಿಸುವ, ಕನ್ನಡ ಶಾಸನ ಪದಕೋಶವನ್ನು ಸಿದ್ಧಗೊಳಿಸುವ ಮತ್ತು ಇನ್ನೂ ಅನೇಕ ಕೆಲಸಗಳನ್ನು ಮಾಡುವ ಇರಾದೆ ಅವರಿಗಿತ್ತು. ಆ ಕೆಲಸಗಳ ಪೈಕಿ ತಮಿಳುನಾಡಿನ ಶಾಸನ ಸಂಪುಟ ಪ್ರಕಟವಾಗಿದೆ. ನೆಲಮಂಗಲ ಲಕ್ಷ್ಮೀನಾರಾಯಣರಾಯರ ಲೇಖನಗಳ ಎಪಿಗ್ರಫಿಕಲ್ ಸ್ಟಡೀಸ್ ಪ್ರಕಟಗೊಂಡಿದೆ. ವಿಜಯನಗರದ ಸಮಗ್ರ ಶಾಸನಗಳ ಸಾರಾಂಶಗಳ ಸಂಪುಟಗಳ ನಾಲ್ಕು ಸಂಪುಟಗಳು ಪ್ರಕಟವಾಗಿವೆ. ಅಚ್ಚಿಗೆ ಹೋಗಿದ್ದ ಐದನೆಯ ಸಂಪುಟದ ಬಗ್ಗೆ ಸರಿಯಾದ ಮಾಹಿತಿ ಇಲ್ಲ. ಇನ್ನೂ ಮೂರು ಸಂಪುಟಗಳ ಬೆರಳಚ್ಚಾದ ಹಸ್ತಪ್ರತಿ ನನ್ನ ಬಳಿ ಇದೆ. ಶಾಸನ ಪದಕೋಶಕ್ಕೆ ಸಂಬಂಧಿಸಿದ ಕೆಲಸ ಮುಂದುವರಿದಿಲ್ಲ. ಅವರ ಎಲ್ಲ ಕೆಲಸಗಳನ್ನು ಮುಂದುವರಿಸಿ, ಮುಗಿಸುವ ಆಸೆ ನನಗಿದೆ., ಅವರಂತೆಯೇ ನಾನೂ ಆಶಾವಾದಿ. ಅಂತಹ ಆಶಾವಾದಿ ಕರ್ಮಯೋಗಿಯ ಹೆಸರಿನಲ್ಲಿ ಸ್ಥಾಪಿತವಾಗಿರುವ ಪ್ರಶಸ್ತಿಯನ್ನು ಸ್ವೀಕರಿಸಿ ನಾನು ಧನ್ಯನಾಗಿದ್ದೇನೆ.

ಸಾಮಾನ್ಯವಾಗಿ ಈ ಪ್ರಶಸ್ತಿಯನ್ನು ಹಿರಿಯ ಶಾಸನ ತಜ್ಞರಿಗೆ ನೀಡಲಾಗುತ್ತದೆ. ನನಗೆ ತರುಣ ಸಂಶೋಧಕರ ಬಗ್ಗೆ ವಿಶ್ವಾಸವಿದೆ. ಅವರ ಕೆಲಸಕ್ಕೆ, ಶ್ರಮಕ್ಕೆ ಕೂಡಾ ಸರಿಯಾದ ಒಂದು ಪುರಸ್ಕಾರ ಲಭಿಸಬೇಕು ಎಂಬ ಆಸೆಯಿಂದ ಈ ಪ್ರಶಸ್ತಿಯ ಹಣವನ್ನು ಕರ್ನಾಟಕ ಇತಿಹಾಸ ಅಕಾದೆಮಿಗೇ ನೀಡಿ, ಇದರಿಂದ ಬರುವ ಬಡ್ಡಿಯಿಂದ ಪ್ರತಿ ವರ್ಷ ಇತಿಹಾಸ ದರ್ಶನದಲ್ಲಿ ಪ್ರಕಟವಾಗುವ ಒಂದು ಅಥವಾ ಎರಡು ಹೊಸ ಶಾಸನ ಶೋಧಗಳಿಗೆ ಬಹುಮಾನವಾಗಿ ನನ್ನ ತಂದೆ ಮತ್ತು ತಾಯಿಯ ಹೆಸರಿನಲ್ಲಿ ನೀಡಬೇಕೆಂದು ವಿನಂತಿ ಮಾಡುತ್ತೇನೆ. ಈ ಬಗ್ಗೆ ವಿವರವಾದ ಸೂಚನೆಗಳನ್ನು ಹಣವನ್ನು ನೀಡುವ ಸಂದರ್ಭದಲ್ಲಿ ನೀಡಲಿದ್ದೇನೆ.

ನನ್ನನ್ನು ಬೆಳೆಸಿದ ಸಂಸ್ಥೆಗಳು ಮಿಥಿಕ್ ಸೊಸೈಟಿ ಮತ್ತು ಕರ್ನಾಟಕ ಇತಿಹಾಸ ಅಕಾದೆಮಿ. ಕರ್ನಾಟಕ ಇತಿಹಾಸ ಅಕಾದೆಮಿ ನೀಡುತ್ತಿರುವ ಪ್ರಶಸ್ತಿಯನ್ನು ಮಿಥಿಕ್ ಸೊಸೈಟಿಯ ಸಭಾಂಗಣದಲ್ಲಿ ಸ್ವೀಕರಿಸುತ್ತಿರುವುದು ನನಗೆ ತುಂಬಾ ಸಂತೋಷದ ಮತ್ತು ಹೆಮ್ಮೆಯ ವಿಷಯ. ಶಾಸನಶಾಸ್ತ್ರಕ್ಕೆ ಒಳ್ಳೆಯ ಭವಿಷ್ಯವಿದೆ ; ಭವಿಷ್ಯವನ್ನು ಸುಭದ್ರಗೊಳಿಸಲು ನಮ್ಮ ವಿದ್ಯಾರ್ಥಿಗಳ ಪಡೆ ಇದೆ ಎಂಬ ಆಶಾಭಾವನೆ ನನ್ನದು.

# ಇತಿವೃತ್ತ

ಜನನ : ೧೮-೧೧-೧೯೪೬, ನೆಲಮಂಗಲ

ಹಿರಿಯರ ಊರು : ಹುಲ್ಲೇಗೌಡನಹಳ್ಳಿ, ಮೊದಲಿಗೆ ನೆಲಮಂಗಲ ತಾಲ್ಲೂಕು, ಈಗ ಬೆಂಗಳೂರು ಉತ್ತರ ತಾಲ್ಲೂಕು

ತಂದೆ : ಶ್ರೀ ಎಚ್.ಎನ್. ಸೂರ್ಯನಾರಾಯಣರಾವ್, ಪ್ರಾಥಮಿಕ ಶಾಲಾ ಶಿಕ್ಷಕರು

ತಾಯಿ : ಶ್ರೀಮತಿ ಮಹಾಲಕ್ಷ್ಮಮ್ಮ, ಗೃಹಿಣಿ

ವಿದ್ಯಾರ್ಹತೆ :
೧. ಡಿಪ್ಲೊಮಾ (ಎಲೆಕ್ಟ್ರಿಕಲ್ ಎಂಜಿನಿಯರಿಂಗ್) – ೧೯೬೬
೨. ಶಾಸನಶಾಸ್ತ್ರ – ಪ್ರೌಢ (ಕನ್ನಡ ಸಾಹಿತ್ಯ ಪರಿಷತ್) – ೧೯೭೫
೩. ಎಂ.ಎ., ಕನ್ನಡ (ಮೈಸೂರು ವಿಶ್ವವಿದ್ಯಾನಿಲಯ) – ೧೯೮೪ (ಎರಡು ಚಿನ್ನದ ಪದಕಗಳೊಂದಿಗೆ)
೪. ಪಿಎಚ್.ಡಿ., (ಮೈಸೂರು ವಿಶ್ವವಿದ್ಯಾನಿಲಯ) – ೧೯೯೧ (ಒಂದು ಚಿನ್ನದ ಪದಕದೊಂದಿಗೆ)

ಉದ್ಯೋಗ : ಸ.ಕಾ.ನಿ. ಎಂಜಿನಿಯರ್ (ವಿ.,) / ಕನ್ನಡ ಸಮನ್ವಯಾಧಿಕಾರಿ (ನಿವೃತ್ತ), ಕನ್ನಡ ಘಟಕ, ನಿಗಮದ ಕಾರ್ಯಾಲಯ, ಕ.ವಿ.ಪ್ರ.ನಿ.ನಿ., ಬೆಂಗಳೂರು

ಗೌರವ ಹುದ್ದೆ :
೧. ಪ್ರಧಾನ ಕಾರ್ಯದರ್ಶಿ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು
೨. ಶಾಸನ ಶಾಸ್ತ್ರ ಬೋಧಕ, ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು

ಗೌರವ :
೧. ೧೪-೪-೨೦೦೧ರಂದು ಶಿವಗಂಗೆಯಲ್ಲಿ ನಡೆದ ಎರಡನೆಯ ನೆಲಮಂಗಲ ತಾಲ್ಲೂಕು ಸಾಹಿತ್ಯ ಸಮ್ಮೇಳನದ ಅಧ್ಯಕ್ಷತೆ
೨. ಕನ್ನಡ ಗೆಳೆಯರ ಬಳಗದಿಂದ ಶಂ.ಬಾ. ಸಂಶೋಧಕ ಪ್ರಶಸ್ತಿ – ೨೦೦೭ (೪-೨-೨೦೦೭)
೩. ಡಾ. ಬಾ.ರಾ. ಗೋಪಾಲ್ ದತ್ತಿ ಪ್ರಶಸ್ತಿ – ೨೦೦೭ (೨೦-೧೧-೨೦೦೭)

**ಸಾಧನೆಗಳು – ಪ್ರಕಟಣೆಗಳು**

**ಕಾದಂಬರಿಗಳು** :
೧. ಜೇನು ನಂಜು (ಎರಡು ಮುದ್ರಣಗಳು) ೧೯೭೫, ೨೦೦೨
೨. ಗತಿ (ಎರಡು ಮುದ್ರಣಗಳು) ೧೯೭೬, ೨೦೦೨
೩. ಬಿನ್ನ (ಎರಡು ಮುದ್ರಣಗಳು) ೧೯೭೮, ೨೦೦೨
೪. ಪರಿಗ್ರಹಣ (ಎರಡು ಮುದ್ರಣಗಳು) ೧೯೭೯, ೨೦೦೨

**ಮಕ್ಕಳ ನಾಟಕ** :
೧. ಗುಲ್ಲುಟ್ಟಿ ಮುನ್ನುಟ್ಟಿ (ಎರಡು ಮುದ್ರಣಗಳು) ೧೯೮೦, ೧೯೮೨
**(೧೯೭೮ ರಲ್ಲಿ ನಡೆದ ರಾಜ್ಯ ಮಟ್ಟದ ಮಕ್ಕಳ ನಾಟಕ ರಚನಾ ಸ್ಪರ್ಧೆಯಲ್ಲಿ ಮೊದಲ ಬಹುಮಾನ ಪಡೆದಿದೆ. ೧೯೯೬ರಲ್ಲಿ ತೆಲುಗಿಗೆ ಅನುವಾದಗೊಂಡಿದೆ.)**

**ಸಂಕೀರ್ಣ** :
೧. ನಮ್ಮ ನಾಡು ಕರ್ನಾಟಕ (ನಾಲ್ಕು ಮುದ್ರಣಗಳು) ೧೯೯೩, ೧೯೯೫, ೧೯೯೬, ೧೯೯೭, ೨೦೦೭
೨. ಬಾದಾಮಿ, ಐಹೊಳೆ, ಪಟ್ಟದಕಲ್ಲು (ನವ ಸಾಕ್ಷರರಿಗಾಗಿ) ೧೯೯೫
೩. ಉಡುಪಿ (ನವ ಸಾಕ್ಷರರಿಗಾಗಿ) ೧೯೯೫
೪. ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು : ಒಂದು ಸಾಂಸ್ಕೃತಿಕ ಅಧ್ಯಯನ (ಪಿಎಚ್.ಡಿ., ಮಹಾಪ್ರಬಂಧ) ೧೯೯೩

೫. ಕರ್ನಾಟಕ ಏಕೀಕರಣ ಇತಿಹಾಸ (೧೯೯೬ರಲ್ಲಿ **ಕರ್ನಾಟಕ ಸಾಹಿತ್ಯ ಅಕಾದೆಮಿ ಬಹುಮಾನ**) ೧೯೯೬, ೨೦೦೫, ೨೦೦೮

೬. ಇತಿಹಾಸದ ಅಧ್ಯಯನ – ಅಂದು ಇಂದು ೧೯೯೭

೭. ಗೋದಾವರಿಯ ಆಸುಪಾಸಿನಲ್ಲಿ (ಮಹಾರಾಷ್ಟ್ರದ ಪ್ರವಾಸ ಕಥನ) ೧೯೯೯

೮. ಚಂಗಾಳ್ವರು ೨೦೦೦

೯. ರಾ.ಶಿ. ೨೦೦೨, ೨೦೦೫

೧೦. ಶಾಸನ ಸಂಕಲನ ೨೦೦೨

೧೧. ಭಾರತೀಯ ಬಹುಮುಖೀ ಸಂಸ್ಕೃತಿ (ಬಿ.ಎಸ್. ಉಪಾಧ್ಯಾಯರ Feeders of Indian cultureನ ಅನುವಾದ)–೨೦೦೫

೧೨. ಇದು ನಮ್ಮ ಕರ್ನಾಟಕ (ನವಸಾಕ್ಷರಿಗಾಗಿ) – ೨೦೦೬

೧೩. ಒಂದುಗೂಡಿದ ಕರ್ನಾಟಕ (ನವಸಾಕ್ಷರಿಗಾಗಿ) – ೨೦೦೬

೧೪. ಇತಿಹಾಸದ ಇಣುಕು ನೋಟ – ೨೦೦೮

೧೫. ರಾಷ್ಟ್ರಕೂಟರ ಶಿಲ್ಪಕಲೆ – ೨೦೦೮

**ಅಚ್ಚಿನಲ್ಲಿ** :

೧. ಕರ್ನಾಟಕ ಏಕೀಕರಣಕ್ಕೆ ದುಡಿದ ಮಹನೀಯರು (ಸಂಪಾದನೆ)

೨. ವಕೀಲ ರಾಮಪ್ಪನ ಕೈಫಿಯತ್ತು (ಸಂಪಾದನೆ)

೩. ಸಂಸ್ಥಾನಕ ಪ್ರಕರಣವು (ನಾಟಕ)

**ಸದ್ಯದ ಕೆಲಸಗಳು** :

೧. ಎಪಿಗ್ರಾಫಿಯಾ ಕರ್ನಾಟಿಕಾ ಸಂಪುಟ – ೨೫ (ತುಮಕೂರು ಜಿಲ್ಲೆ)

೨. ಕರ್ನಾಟಕ ದರ್ಶನ

೩. ಕನ್ನಡ ಶಾಸನ ಪದಕೋಶ

೪. ಕರ್ನಾಟಕ ಜನ ಇತಿಹಾಸ

**ಪ್ರಕಟಿತ ಲೇಖನಗಳು** :

ಸುಮಾರು ೧೫೦ ಕನ್ನಡದಲ್ಲಿ ಮತ್ತು ಸುಮಾರು ೫೦ ಇಂಗ್ಲಿಷ್‌ನಲ್ಲಿ ಬಹುತೇಕ ಲೇಖನಗಳು ಭಾರತೀಯ ಶಾಸನ ತಜ್ಞರ ವಾರ್ಷಿಕ ಸಮ್ಮೇಳನ, ಕರ್ನಾಟಕ ಇತಿಹಾಸ ಅಕಾದೆಮಿಯ ವಾರ್ಷಿಕ ಸಮ್ಮೇಳನ ಮತ್ತು ಇತರ ವಿಚಾರ ಗೋಷ್ಠಿಗಳಲ್ಲಿ ಮಂಡಿತವಾಗಿರುವ ಹಾಗೂ ಹಲವಾರು ಅಭಿನಂದನ ಗ್ರಂಥಗಳು ಹಾಗೂ ಪತ್ರಿಕೆಗಳಲ್ಲಿ ಪ್ರಕಟವಾಗಿವೆ.

**ಕರ್ಮವೀರ ವಾರಪತ್ರಿಕೆಯಲ್ಲಿ ೫೩ ವಾರಗಳು 'ನಮ್ಮದಿದು ಇತಿಹಾಸ' ಅಂಕಣ ಬರಹ – ೨೦೦೬**



ಬುರುಡೇಕಟ್ಟೆ ಮಂಜಪ್ಪ*

# ಬುರುಡೇಕಟ್ಟೆ ಪರಿಸರದ ಗವಿ ವರ್ಣಚಿತ್ರಗಳು - ಪ್ರಾಗೈತಿಹಾಸಿಕ ಕುರುಹುಗಳು

ಆದಿಮಾನವ ನಿಸರ್ಗದೊಂದಿಗೆ ಬೆರೆತು ಅವನ ಮನಸ್ಸಿನ ಸೌಂದರ್ಯ ಪ್ರಜ್ಞೆ ಬೆಳೆದು ಅದರಿಂದ ಒದಗಿದ ಸಂತೋಷದಲ್ಲಿ ಉಂಟಾದ ಕಲೆಯ ಅಭಿವ್ಯಕ್ತಿಯೇ ಕಲಾಸೃಷ್ಟಿಗೆ ನಾಂದಿಯಾಗಿರಬೇಕು. ಕಲ್ಲಾಸರೆಯ ಬಂಡೆಗುಹೆಗಳ ಗೋಡೆಯ ಮೇಲೋ ಅಥವಾ ಮೇಲ್ಚಾವಣಿಯಲ್ಲೋ ಸಹಜವಾಗಿ ದೊರೆಯುವ ಬಿಳಿ, ಕೆಂಪು, ಹಸಿರು, ಹಳದಿ ಬಣ್ಣದ ಮಣ್ಣಿನ ಗಟ್ಟಿಗಳಿಂದ ಹಾಗೂ ಗಿಡಮೂಲಿಕೆಗಳಿಂದ ತಯಾರಿಸಿದ ಬಣ್ಣದಿಂದ ಗಿಡದ ಟೊಂಗೆ ಅಥವಾ ಕೂದಲಿಂದ ತಯಾರಿಸಿದ ಬ್ರಶ್ ಅಥವಾ ಕೈಬೆರಳುಗಳಿಂದ ಅವನು ಚಿತ್ರಗಳನ್ನು ಬಿಡಿಸಿದ್ದಾನೆ. ಇಂತಹ ಗವಿವರ್ಣ ಚಿತ್ರಗಳ ಶೋಧನೆ ಕರ್ನಾಟಕದಲ್ಲಿ ೧೯೩೫ರಲ್ಲಿ **ಲಿಯೋ ನಾರ್ಡೋಮನ್** ಎಂಬ ಸಂಶೋಧಕರು ಹಿರೇಬೆನಕಲ್ ಗುಡ್ಡದಲ್ಲಿ ಸ್ವಾರಸ್ಯಕರವಾದ ಗವಿವರ್ಣ ಚಿತ್ರಗಳನ್ನು ಶೋಧಿಸಿದರು.

ಹೊಸದುರ್ಗ ತಾಲ್ಲೂಕಿನ ಪಶ್ಚಿಮಕ್ಕೆ ೧೮ ಕಿ.ಮೀ. ದೂರವಿರುವ ಗಡಿಗ್ರಾಮ ಬುರುಡೇಕಟ್ಟೆಯಲ್ಲಿರುವ ಬೆಟ್ಟದಲ್ಲಿ ೩ ಗವಿಗಳಿದ್ದು ಪೂರ್ವದ ಗವಿಯನ್ನು **ಅಡುಗೆಗವಿ**ಯೆಂದು ದಕ್ಷಿಣದ ಗವಿಯನ್ನು **ಸೂಳೆಗವಿ**ಯೆಂತಲೂ ಪಶ್ಚಿಮಕ್ಕಿರುವ ಗವಿಯನ್ನು **ಕರಡಿಗವಿ** ಅಥವಾ **ಸಿದ್ಧರಗವಿ** ಎಂತಲೂ ಕರೆಯುತ್ತಾರೆ.

ದಕ್ಷಿಣ ದಿಕ್ಕಿನ ಸೂಳೆಗವಿಯನ್ನು ಇಳಿಯಲು ವೃತ್ತಾಕಾರವಾಗಿ ರಚಿತವಾದ ಮೆಟ್ಟಲು ಮಾರ್ಗವಿದ್ದು ಆಗಿನ ಕಾಲದ ಜನ ಸುಳಿ ಗವಿಯೆಂದು ಕರೆಯುತ್ತಿದ್ದು ಕಾಲಕ್ರಮೇಣ ಸೂಳೆಗವಿಯಾಗಿ ಬದಲಾಗಿರಬೇಕು. ಈ ಗವಿಯಲ್ಲಿ ಎರಡು ಕೋಣೆಗಳನ್ನು ಮುಚ್ಚಿದ್ದು ಮುಂದಿನ ಗವಿಯನ್ನು ಹಾಗೆಯೇ ಬಿಟ್ಟಿದ್ದಾರೆ. ಇತ್ತೀಚೆಗೆ ಕರಡಿಗಳು ಅಪಾಯ ಮಾಡಿದ್ದರಿಂದ ಅವುಗಳನ್ನು ಮುಚ್ಚಿದ್ದಾರೆ. ಇದು ಬೃಹತ್ ಬಂಡೆಯ ಕೆಳಗೆ ಸ್ವಾಭಾವಿಕವಾಗಿ ರಚಿತವಾದ ಗವಿ ೧೦ x ೧೫ ಅಡಿ ವಿಸ್ತೀರ್ಣವಿರುವ ಗವಿಯ ಮೇಲ್ಚಾವಣಿಯ ಬಂಡೆಯಲ್ಲಿ ವರ್ಣಚಿತ್ರಗಳಿವೆ.

**೧. ಇಬ್ಬರು ಬೇಟೆಗಾರರು, ನಡುವೆ ಸೂರ್ಯ**

**೨. ಬೇಟೆಗಾರನ ಎದುರಿಗೆ ಮಂಡಲ**

**೩. ಮನುಷ್ಯನ ಆಕೃತಿ ಕೆಳಗಡೆ ಪಕ್ಷಿ**

೧) ಬೇಟೆಗಾರರಿಬ್ಬರ ಚಿತ್ರಗಳು ಬಿಳಿ ಬಣ್ಣದಿಂದ ರಚಿಸಲ್ಪಟ್ಟಿದ್ದು ೮ ಅಂಗುಲ ಎತ್ತರ ೬ ಅಂಗುಲ ಅಗಲವಿದ್ದು ಎಡಕೈಯಲ್ಲಿ ಬಿಲ್ಲು ಬಲಕೈಯಲ್ಲಿ ಬಾಣ ಹಿಡಿದಿದ್ದಾನೆ. ಮೊಣಕಾಲಿನ ಕೆಳಮಟ್ಟದಲ್ಲಿ ತುಸುಕೆಂಪು ಬಣ್ಣದ ಸೂರ್ಯನ ಚಿತ್ರ ರಚಿಸಿದ್ದಾನೆ.

೨) ಮಂಡಲದ ಎದುರಿಗಿರುವ ಬೇಟೆಗಾರನದು ವಿಶಿಷ್ಟ ಶೈಲಿ, ತನ್ನ ಎಡಕೈಯಲ್ಲಿ ಬಿಲ್ಲು ಬಲಕೈಯಲ್ಲಿ ಬಾಣ ಹಿಡಿದಿದ್ದು ಬಿಳಿ ಬಣ್ಣದಿಂದ ರಚಿಸಿದ್ದು ತನ್ನೆರಡು ಪಕ್ಕದಲ್ಲಿ ವಸ್ತ್ರ ಇಳಿಬಿಟ್ಟಂತಿದ್ದು ಇದು ಶಂಕೆಗೆ ಕಾರಣವಾಗಿದ್ದು ೭ ಅಂಗುಲ ಅಗಲ ೧೦ ಅಂಗುಲ ಎತ್ತರವಿದೆ. ಮಂಡಲ ೬ x ೬ ಅಂಗುಲದ ಅಗಲದಲ್ಲಿದೆ.

೩) ಮನುಷ್ಯನಾಕೃತಿ : ಇದು ಬಿಳಿಬಣ್ಣದಿಂದ ರಚಿಸಿದ್ದು ೭ ಅಂಗುಲ ಎತ್ತರ ೪ ಅಂಗುಲ ಅಗಲವಿದ್ದು ಎದುರಿಗೆ ಕೆಳಭಾಗದಲ್ಲಿ ಪಕ್ಷಿಯಿದ್ದು ಬಿಳಿ ಬಣ್ಣದಿಂದ ರಚಿತವಾಗಿದೆ.

ವರ್ಣ ಚಿತ್ರಗಳಿರುವ ಬಂಡೆಯ ಮೇಲಿನಿಂದ ಮಳೆಗಾಲದಲ್ಲಿ ನೀರು ವರ್ಣ ಚಿತ್ರಗಳ ಮೇಲೆ ಹರಿದು ವರ್ಣ ಚಿತ್ರಗಳು ಮೊಬ್ಬಾಗಿದೆ. ವರ್ಣ ಬಿಳಿದಾದರೂ ನೀರಿನ ಹರಿಯುವಿಕೆಯ ಗುರ್ತಿನಿಂದ ಬಣ್ಣ ಮಸುಕಾಗಿದೆ. ಈ ಚಿತ್ರಗಳ ರಚನಾ ಶೈಲಿ ಗಮನಿಸಿದರೆ **ಚರಿತ್ರೆಕಾಲದ** ಚಿತ್ರಗಳಂತೆ ಗೋಚರಿಸುತ್ತವೆ. **ವಿಜಯನಗರದ ಕಾಲದಲ್ಲಿ** ರಚಿತವಾದ ಇಂತಹವುಗಳನ್ನೇ ಹೋಲುವ ಚಿತ್ರಗಳು ಈಗಾಗಲೇ ಹಿರಿಯ ಸಂಶೋಧಕರಿಂದ ಶೋಧಿಸಲ್ಪಟ್ಟಿವೆ.

* 'ಕುಂಭಶ್ರೀ' ೭೮೯/೧೧, ಜಯನಗರ, 'ಎ' ಬ್ಲಾಕ್, ನಿಟ್ಟುವಳ್ಳಿ ಬಡಾವಣೆ, ದಾವಣಗೆರೆ

ಈ ವರ್ಣ ಚಿತ್ರಗಳಿರುವ ಗವಿಗೆ ಕೆಳಗಡೆ ಬೆಟ್ಟದ ತಪ್ಪಲಿನಲ್ಲಿರುವ ಸಿದ್ಧರಗವಿ ಅಥವಾ ಗುಹೆಯಿಂದ ಕಾಡು ಮೆಟ್ಟಿಲುಗಳಿದ್ದು ಇದು ಬಹುಶಃ ಸಿದ್ಧಪುರುಷರು ಇಲ್ಲಿ ವಾಸಿಸಿದ್ದರೆಂದು ಭಾಸವಾಗುತ್ತದೆ. ಇಲ್ಲಿನ ಬೃಹತ್ ಬಂಡೆಯೊಂದಕ್ಕೆ ಸಿದ್ಧರಬಂಡೆಯೆಂದು ಕರೆಯುತ್ತಿದ್ದು ಇದರ ಕೆಳಗಡೆ ಶಿಲಾಯುಧಗಳು ದೊರೆತಿವೆ. ಈ ಬೆಟ್ಟದಿಂದ ೨ ಕಿ.ಮೀ. ದೂರದ ಉತ್ತರ ದಿಕ್ಕಿನಲ್ಲಿರುವ **ದೊನ್ನೆಕಲ್ ಗುಡ್ಡದ** ಮೇಲೆ **ಉಬ್ಬು ರೇಖಾಚಿತ್ರ**ಗಳಿವೆ. ಕಾಡಿನ ಚಿತ್ರ ಬಿಡಿಸಿ ಸುತ್ತಲೂ ಕುಟ್ಟಿ ರೇಖೆಗಳಷ್ಟೇ ಉಬ್ಬಿರುವಂತೆ ರಚಿಸಲಾಗಿದೆ. ಈ ಗವಿಯಿಂದ ಎದುರಿಗೆ ಕಾಣುವ **ಚೌಡೀಗುಡ್ಡದ** ಗವಿಯೊಂದರಲ್ಲಿ **ಖಡ್ಗ ಹಾಗೂ ಪಾನಪಾತ್ರೆ ಹಿಡಿದಿರುವ ಪಾರ್ವತಿ ಪರಮೇಶ್ವರ**ರಂತೆ ರಚಿಸಿರುವ ಪುರಾತನ ಕಾಲದ ಎರಡು ಶಿಲ್ಪಗಳಿವೆ.

ಗವಿವರ್ಣಚಿತ್ರಗಳಿರುವ ಬೆಟ್ಟದ ತಪ್ಪಲಿನಲ್ಲಿ ಇತ್ತೀಚೆಗೆ ಗುಂಡಿ ಅಗೆಯುತ್ತಿದ್ದಾಗ ೯ ಅಡಿ ಆಳದಲ್ಲಿ ಸುರಕ್ಷಿತ ಬಂಡೆಯೊಂದರ ಕೆಳಗೆ ಎತ್ತರದ ಮನುಷ್ಯನ ಮೂಳೆಗಳು (ಎಲ್ಲಾ ಭಾಗಗಳ) ತುಂಬಿರುವ **ಮೃತ್‌ಪಾತ್ರೆಯ** ಮಡಕೆ ದೊರೆತಿದ್ದು ಇದರಲ್ಲಿ ಪ್ರತ್ಯೇಕ **ಕುಡಿಕೆ**ಯಲ್ಲಿ ಇದ್ದಿಲು ಚೂರನ್ನು ತುಂಬಿಡಲಾಗಿತ್ತು. ತೆಗೆಯುವಾಗ ಮಡಕೆ ಹಾಳಾಗಿದ್ದು, ಮಡಕೆಯ ಭಾಗ ಹಾಗೂ ಅಸ್ಥಿಗಳನ್ನು ಸಂರಕ್ಷಿಸಿಡಲಾಗಿದೆ.

(ಈ ಸಂಶೋಧನಾ ಕಾರ್ಯದಲ್ಲಿ ನೆರವು ಮತ್ತು ಮಾರ್ಗದರ್ಶನ ಮಾಡಿದ ಡಾ॥ ಬಿ. ರಾಜಶೇಖರಪ್ಪ ಖ್ಯಾತ ಶಾಸನ ತಜ್ಞರು, ಚಿತ್ರದುರ್ಗ ಹಾಗೂ ಹಂಪಿ ಕನ್ನಡ ವಿಶ್ವವಿದ್ಯಾನಿಲಯದ ಖ್ಯಾತ ಸಂಶೋಧಕರಾದ ಪ್ರೊ. ಲಕ್ಷ್ಮಣ್ ತೆಲಗಾವಿಯವರಿಗೆ ಹಾಗೂ ಸ್ನೇಹಿತ ಹಿ.ಗೂ. ದುಂಡ್ಯಪ್ಪನವರಿಗೆ ಕೃತಜ್ಞತೆಗಳು)



## ಆಧಾರ ಸೂಚಿ


೧. **ಇತಿಹಾಸ ದರ್ಶನ,** ಸಂಪುಟಗಳು.

೨. **ಭಾರತದ ಗೆಜೆಟಿಯರ್** ಭಾಗ – ೧.

ಡಾ|| ಎಸ್.ಜಿ. ರಾಮದಾಸರೆಡ್ಡಿ*

# ಹರ್ತಿಕೋಟೆಯ ಪ್ರಾಕ್ಚಾರಿತ್ರಿಕ ಅವಶೇಷಗಳು

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕು, ಐಮಂಗಳ ಹೋಬಳಿಯ ಗ್ರಾಮವೇ "ಹರ್ತಿಕೋಟೆ". ಹಿಂದೆ ಹರತಿಕೋಟೆ, ಅರ್ತಿಕೋಟೆ ಎಂದಿದ್ದು ಇಂದು ಹರ್ತಿಕೋಟೆ ಎಂದಾಗಿದೆ. ಹರ್ತಿಕೋಟೆಯು ಹಿರಿಯೂರು-ಚಳ್ಳಕೆರೆ ಮಾರ್ಗದಲ್ಲಿದ್ದು, ತಾಲ್ಲೂಕಿನಲ್ಲಿ ಪ್ರಾಗಿತಿಹಾಸ ಕಾಲದಿಂದ ಪಾಳೇಗಾರರ ಕಾಲದವರೆಗೆ ಐತಿಹಾಸಿಕವಾಗಿ ಮಹತ್ವ ಪಡೆದಿರುವ ಗ್ರಾಮವಾಗಿದೆ. ಗ್ರಾಮದ ಉತ್ತರಕ್ಕೆ ಚಳ್ಳಕೆರೆ ತಾಲ್ಲೂಕು, ದಕ್ಷಿಣಕ್ಕೆ ಹಿರಿಯೂರು ತಾಲ್ಲೂಕು, ಪಶ್ಚಿಮಕ್ಕೆ ಚಿತ್ರದುರ್ಗ ತಾಲ್ಲೂಕು, ಪೂರ್ವಕ್ಕೆ ತುಮಕೂರು ಜಿಲ್ಲೆಯ ಪಾವಗಡ ತಾಲೂಕು ಹಾಗೂ ಅನಂತಪುರ ಜಿಲ್ಲೆಯ (ಎ.ಪಿ) ಕಲ್ಯಾಣದುರ್ಗ ತಾಲ್ಲೂಕುಗಳಿಂದ ಸುತ್ತುವರಿದಿದೆ.

ಗ್ರಾಮದ ಪಶ್ಚಿಮದಲ್ಲಿ ಮಾರಿಕಣಿವೆ ಬೆಟ್ಟ ಇದ್ದು ಇದರಲ್ಲಿ ಹಿಂದಸಕಟ್ಟೆ ಸಾಲಿನ ಬೆಟ್ಟಗಳು ಮುಖ್ಯವಾಗಿವೆ. ಗ್ರಾಮವು ಸಮತಟ್ಟಾದ ಭೂಭಾಗವಾಗಿದ್ದು ಯಾವುದೇ ಬೆಟ್ಟಗುಡ್ಡಗಳಿಲ್ಲದೆ ಅಲ್ಲಲ್ಲಿ ಕಮರ, ಹಲಸು, ಬೇವು, ಹುಣಸೆ, ಮಾವು, ಹೊಂಗೆ, ಬೋರೆ, ಜಾಲಿ ಮೊದಲಾದ ಗಿಡಮರಗಳಿಂದ ಆವರಿಸಿದೆ. ಉತ್ತರ ಮತ್ತು ದಕ್ಷಿಣ ದಿಕ್ಕಿನಲ್ಲಿ ವೇದಾವತಿ ನದಿಗೆ ಹರಿದು ಹೋಗುವ ಎರಡು ಹಳ್ಳಗಳಿದ್ದು, ಹಳ್ಳಗಳ ದಂಡೆಗಳ ಮಧ್ಯೆ ಗ್ರಾಮ ಹಾಗೂ ಎರಡು ಕೆರೆಗಳಿವೆ. ಬೂದಿ, ಕೆಂಪು, ಬಿಳಿ, ಕಪ್ಪು ಮಣ್ಣಿನಿಂದ ಕೂಡಿದ ಭೂಮಿ ಮತ್ತು ಕಲ್ನಾರು, ಕ್ಯಾಲ್ಸೈಟ್, ಸೀಸದ ಅದಿರು ಹಾಗೂ ಕಬ್ಬಿಣದ ಅದಿರುಗಳು ಕಡಿಮೆ ಪ್ರಮಾಣದಲ್ಲಿ ದೊರೆಯುವ ಭೂಪ್ರದೇಶವಾಗಿದ್ದು, "ಧಾರವಾಡ ಶಿಲಾಸ್ತೋಮ ಮತ್ತು ಕ್ಲೋಸ್‌ಪೇಟೆ ಶಿಲಾಸ್ತೋಮದಡಿಯಲ್ಲಿ ವಾರ್ಷಿಕವಾಗಿ ೨೦-೩೦ ಸೆಂ.ಮೀ. ಮಳೆ ಬೀಳುವ ದಕ್ಷಿಣ ಭಾರತದ ಪರ್ಯಾಯ ದ್ವೀಪದ ಮಳೆಯ ನೆರಳಿನ ಭೂಭಾಗವಾಗಿದ್ದು, ಥಾರ್ ಮರುಭೂಮಿಯನ್ನು ಬಿಟ್ಟರೆ ಈ ಭಾಗವೇ ಅತಿ ಶುಷ್ಕವಾಗಿರುತ್ತದೆ." ಉಷ್ಣಾಂಶವು ೩೫° ಸೆಂಟಿಗ್ರೇಡಿನಿಂದ ೪೦° ಸೆಂಟಿಗ್ರೇಡ್‌ವರೆಗೂ ಇರುತ್ತದೆ.

ಇತಿಹಾಸ ಪ್ರಸಿದ್ಧವಾದ ಚಂದ್ರವಳ್ಳಿಯಿಂದ ೪೦ಕಿ.ಮೀ. ಮತ್ತು ಬ್ರಹ್ಮಗಿರಿಯಿಂದ ಸುಮಾರು ೭೦ ಕಿ.ಮೀ ದೂರದಲ್ಲಿರುವ ಗ್ರಾಮದ ಪೂರ್ವ ಮತ್ತು ಉತ್ತರದಿಕ್ಕಿಗೆ ಗ್ರಾಮದ ಪಕ್ಕದಲ್ಲೇ ಸುಮಾರು ೩ ಹೆಕ್ಟೇರು ವಿಸ್ತೀರ್ಣದ ನೆಲೆಯಲ್ಲಿ ನವಶಿಲಾಯುಗ ಬೃಹತ್ ಶಿಲಾಯುಗ ಹಾಗೂ ಇತಿಹಾಸ ಆರಂಭಕಾಲದ ಅವಶೇಷಗಳು ದೊರಕಿವೆ ಪ್ರಾಚೀನ ದೇವಾಲಯ, ವೀರಮಾಸ್ತಿಗಲ್ಲು, ಲಿಂಗಮುದ್ರೆ ಕಲ್ಲು ಮುಂತಾದ ಪ್ರಾಚೀನ ಸ್ಮಾರಕಗಳು ಹೇರಳವಾಗಿ ಈ ಗ್ರಾಮದಲ್ಲಿವೆ.

**ನವಶಿಲಾಯುಗ ಸಂಸ್ಕೃತಿ** : ನವಶಿಲಾಯುಗ ಸಂಸ್ಕೃತಿಯ ಬೂದುಬಣ್ಣದ, ಬೂದುಮಿಶ್ರಿತ ಕಪ್ಪು-ಕೆಂಪು ಬಣ್ಣದ ಮಡಕೆಯ ತುಣುಕುಗಳು, ಧಾನ್ಯ ತುಂಬುವ ಕಣಜಗಳ ದೊಡ್ಡ ಮಡಕೆ ಭಾಗಗಳು, ಕವಣೆಕಲ್ಲು, ಅರೆಯುವ ಕಲ್ಲುಗಳು, ಕುಟ್ಟುವ ಕಲ್ಲು, ಕಲ್ಲಿನ ಒನಕೆಯಾಕಾರದ ಆಯುಧ, ಅಲಂಕಾರ ಚಿತ್ರಿತ ಮಡಕೆ ಚೂರುಗಳು, ದುಂಡಾದ ೪ ಚದುರ ಬಿಲ್ಲೆಗಳು, ಬೂದಿಮಣ್ಣು ಹಾಗೂ ೨ ಚಿಕ್ಕ ಮುರಿದ ಕಲ್ಲಿನ ಕೊಡಲಿಗಳು ದೊರಕಿವೆ. ಈ ತರಹದ ಕೊಡಲಿಗಳು ತಾಲ್ಲೂಕಿನ ಜೋಡಿ ಚಿಕ್ಕೇನಹಳ್ಳಿ ನೆಲೆಯಲ್ಲಿ ದೊರಕಿವೆ. ಇಲ್ಲಿ ಸಿಕ್ಕಿರುವ ದಿನನಿತ್ಯ ಬಳಕೆಯ ಅವಶೇಷಗಳ ಆಧಾರದ ಮೇಲೆ ಈ ನೆಲೆಯು ವಾಸದ ನೆಲೆಯಾಗಿದ್ದು ಚಂದ್ರವಳ್ಳಿ, ಬ್ರಹ್ಮಗಿರಿ, ಸಂಗನಕಲ್ಲು ಅವಶೇಷಗಳೊಂದಿಗೆ ಇದು ತಾಳೆಯಾಗುತ್ತದೆ ಹಾಗೂ ದೊಡ್ಡೇರಿ, ರಂಗನಾಥಪುರ, ಕೂಡ್ಲಹಳ್ಳಿ, ಚಿತಗನಹಳ್ಳಿ, ಗಂಜಿಗುಂಟೆ ಇನ್ನಿತರೆ ವೇದಾವತಿ ನದಿ ತೀರದ ನೆಲೆಗಳ ಅವಶೇಷಗಳೊಂದಿಗೂ ಸಾಮ್ಯತೆ ಹೊಂದಿದೆ.

**ಬೃಹತ್ ಶಿಲಾಯುಗ ಸಂಸ್ಕೃತಿ** : ಇಲ್ಲಿನ ನೆಲೆಯಲ್ಲಿ ಈ ಸಂಸ್ಕೃತಿಯ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಕೆ ಚೂರುಗಳು, ಮಡಕೆಯ ಕಂಠದ ಭಾಗಗಳು ಹಾಗೂ ವಿವಿಧ ನಮೂನೆ ಮಡಕೆ ತುಂಡುಗಳ ಮೇಲೆ ವಿವಿಧ ರೀತಿಯ ಅಲಂಕಾರ ಚಿತ್ರಿತವಾಗಿರುವುವು. ಕಬ್ಬಿಣ ಕರಗಿಸಿದ

*ಆಯ್ಕೆ ಶ್ರೇಣಿ ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಪಾಂಡವಪುರ, ಮಂಡ್ಯ ಜಿಲ್ಲೆ.



ನಂತರ ಉಳಿಯುವ ಕಿಟ್ಟ, ಹೂಜಿಯ ಮೂತಿ, ಚಿಕ್ಕ ಕುಡಕೆಯ ತಳಭಾಗ, ಕೆಂಪು ಬಣ್ಣದ ಪೂರ್ಣ ಪ್ರಮಾಣದ ಚಿಕ್ಕ ಕುಡಕೆ, ೪ ಕೆಂಪು ಬಣ್ಣದ ಚದುರ ಬಿಲ್ಲೆಗಳು, ಸಮಾಧಿಗಳಲ್ಲಿ ಬಳಸುವ ಕಲ್ಲುಗಳು, ಮಡಕೆಯ ತುಂಡುಗಳು, ಮೂಳೆ ತುಂಡುಗಳು, ಹಾಳಾದ ಸಮಾಧಿಗಳು ಹಾಗೂ ಸುಸ್ಥಿತಿಯಲ್ಲಿರುವ ಒಂದು ಶಿಲಾ ವೃತ್ತ ಸಮಾಧಿಯಿದೆ. ಈ ನೆಲೆಯ ಅವಶೇಷಗಳು ವೇದಾವತಿ ನದಿ ತೀರದ ನೆಲೆಗಳ ಅವಶೇಷಗಳೊಂದಿಗೆ ತಾಳೆಯಾಗುತ್ತದೆ. ಸಮಾಧಿಯು ನದಿ ತೀರದ ಪಿ. ಮಹದೇವಪುರ ಪರಿಸರದ ಸಮಾಧಿಗಳ ಹಾಗೆ, ಹಾಗೂ ಚಂದ್ರವಳ್ಳಿ, ಬ್ರಹ್ಮಗಿರಿ ಸೇರಿದಂತೆ ಕರ್ನಾಟಕದ ಇತರೆ ನೆಲೆಗಳ ಸಮಾಧಿಗಳೊಂದಿಗೆ ಸಾಮ್ಯತೆ ಹೊಂದಿದೆ.

**ಇತಿಹಾಸ ಆರಂಭ ಕಾಲದ ಅವಶೇಷಗಳು:** ಈ ನೆಲೆಯಲ್ಲಿ ಕೆಂಪು, ಕಪ್ಪು, ಕೆಂಪು ಮತ್ತು ಕಪ್ಪು ಬಣ್ಣದ ಮಡಕೆಯ ತುಣುಕುಗಳ ಜೊತೆಗೆ, ಅಲಂಕಾರ ಚಿತ್ರಿತ ಮಡಕೆ ತುಂಡುಗಳು, ಕ್ಯಾವಲೀನ್ ಪೇಂಟೆಡ್ ರಸ್ಸೆಟ್ ಲೇಪಿತ ಮಡಕೆ ಚೂರುಗಳು, ನಯವಾದ ಹೆಂಚಿನ ಭಾಗಗಳು, ಕೆಂಪುಬಣ್ಣದ ಬಣ್ಣ ಹಚ್ಚುವ ಕಲ್ಲುಗಳು, ನೀರಿನ ಹೂಜಿಯ ಮೂತಿ, ಮುರಿದ ದುಂಡಾದ ಬಿಲ್ಲೆಗಳು, ಚಿಕ್ಕ, ದೊಡ್ಡ ಕಲ್ಲಿನ ಬಿಲ್ಲೆಗಳು, ದುಂಡಾದ ರಂಧ್ರವಿರುವ ಕಲ್ಲಿನ ಮಣಿ, ರಂಧ್ರವಿರುವ ಚಿಕ್ಕ ಶಂಖು, ರಂಧ್ರವಿರುವ ಕವಡೆ (ಹಳದಿ ಮತ್ತು ಕೆಂಪು ಬಣ್ಣದ ಲೇಪನ ಮಾಡಿದೆ) ಮುರಿದ ದಂತದ ಬಳೆ ತುಂಡು, ಕಪ್ಪೆಚಿಪ್ಪಿನ ತುಂಡು, ೪ ಚಿಕ್ಕ ಲಿಂಗ, ಸುಟ್ಟ ಮಣ್ಣಿನ ಇಟ್ಟಿಗೆ, ಹವಳದ ಮಣಿ, ಬಿಳಿ ಮಣಿ ಹಾಗೂ ಇನ್ನಿತರೆ ಅವಶೇಷಗಳು ಹೇರಳವಾಗಿ ದೊರಕಿವೆ.

**ನಯವಾದ ಹೆಂಚಿನ ಭಾಗಗಳು :** ಮುರಿದ ಹೆಂಚಿನ ಭಾಗಗಳು ದೊರಕಿದ್ದು, ಹೆಂಚಿನ ಕೆಳ ಮತ್ತು ಮೇಲ್ಭಾಗ ನಯವಾಗಿದ್ದು ವೇದಾವತಿ ನದಿ ತೀರದ ನೆಲೆಗಳಾದ ದೊಡ್ಡೇರಿ, ಅನುವನಹಳ್ಳಿ, ಅಸಂಧಿ, ನಾಗಗೊಂಡನಹಳ್ಳಿ, ಮತ್ತಿತರೆ ನೆಲೆಗಳಲ್ಲಿ ಹಾಗೂ ಉತ್ಖನನಗೊಂಡ ಚಂದ್ರವಳ್ಳಿ, ತಲಕಾಡು ಹಾಗೂ ಕರ್ನಾಟಕದ ಇತರ ನೆಲೆಗಳಲ್ಲಿಯೂ ಸಹ ಈ ತರಹದ ಹೆಂಚಿನ ಭಾಗಗಳು ದೊರಕಿವೆ. ಈ ಹೆಂಚಿನ ಭಾಗಗಳನ್ನು ಮನೆಯಲ್ಲಿ ನೆಲಕ್ಕೆ ಹಾಸಲು ಇಲ್ಲವೆ. ಮನೆ ಮೇಲ್ಛಾವಣಿಗೆ ಬಳಸಿರಬಹುದು.

**ಕ್ಯಾವಲೀನ್ ಪೇಂಟೆಡ್ ರಸ್ಸೆಟ್ ಲೇಪಿತ ಮಡಕೆ ಚೂರುಗಳು :** ಈ ನೆಲೆಯ ಮಡಕೆ ತುಣುಕುಗಳ ಹಾಗೆ ವೇದಾವತಿ ನದಿ ತೀರದ ನೆಲೆಗಳಾದ ನಾಗಪ್ಪನಹಳ್ಳಿ, ದೊಡ್ಡೇರಿ, ಅನುವನಹಳ್ಳಿ ಹಾಗೂ ಚಂದ್ರವಳ್ಳಿ, ಬ್ರಹ್ಮಗಿರಿ ಉತ್ಖನನ ನೆಲೆಗಳಲ್ಲಿಯೂ ಸಹ ಈ ತರಹದ ಮಡಕೆಯ ಭಾಗಗಳು ದೊರಕಿವೆ. ಈ ಮಡಕೆ ತುಂಡುಗಳ ಆಧಾರದ ಮೇಲೆ ಈ ನೆಲೆ ಪ್ರಮುಖ ವಾಸನೆಲೆಯಾಗಿತ್ತೆಂದು ಹೇಳಬಹುದು.

**ರಂಧ್ರವಿರುವ ಕಲ್ಲಿನ ಮಣಿ :** ದುಂಡಾಗಿ ನಯಗೊಳಿಸಿದ ರಂಧ್ರವಿರುವ ಕಲ್ಲಿನ ಮಣಿ ಅಪರೂಪವಾಗಿ



ಈ ನೆಲೆಯಲ್ಲಿ ದೊರಕಿದ್ದು ಮಣಿಯೂ ಗೋಲಾಕಾರ ವಾಗಿದ್ದು, ರಂಧ್ರವನ್ನು ನೋಡಿದರೆ ಬಳಸಿದ ಮಣಿಯ ಹಾಗೆ ಇದೆ. ಈ ತರಹದ ಮಣಿಗಳು ದೊಡ್ಡೇರಿ, ತಲಕಾಡು ನೆಲೆಗಳಲ್ಲಿ ದೊರಕಿವೆ. ಈ ಮಣಿಗಳನ್ನು ಜನರು ಕೊರಳಿಗೆ ಅಲಂಕಾರಕ್ಕಾಗಿ ಧರಿಸಿರಬಹುದು.



**ರಂಧ್ರವಿರುವ ಕವಡೆ** (Cowrise) : ರಂಧ್ರ ವಿರುವ ಕವಡೆ ದೊರಕಿದ್ದು ೨.೨ ಸೆಂ.ಮೀ. ಉದ್ದ, ೧.೬ ಸೆಂ.ಮೀ ಅಗಲ ಇದೆ. ಕವಡೆಯು ಮೇಲ್ಭಾಗದ ಮೇಲ್ತುದಿಯಲ್ಲಿ ೦.೪ ಸೆಂ.ಮೀ. ರಂಧ್ರವಿದೆ. ಒಳಭಾಗದಲ್ಲಿ ಎರಡು ಕಡೆ ಸಮವಾಗಿ ೧೨ ಹಲ್ಲಿನ ಗೆರೆಗಳು ಸ್ಪಷ್ಟವಾಗಿ ಕಂಡು ಬರುತ್ತವೆ. ಈ ಕವಡೆ ಮಣಿಯ ಮೇಲೆ ಕೆಂಪು ಮತ್ತು ಹಳದಿ ಬಣ್ಣವನ್ನು ಲೇಪನ ಮಾಡಿದ್ದು, ರಂಧ್ರದ ಮೂಲಕ ಕೊರಳಿಗೆ ಪದಕ/ಆಭರಣವಾಗಿ ಬಳಸಿರಬಹುದು. ಈ ತರಹದ ಕವಡೆ ಮಣಿಗಳು ಚಾನ್ಹುದಾರೋ, ವಡಗಾಂವ್ ಮಾಧವಪುರ, ನೇವಾಸ, ತಲಕಾಡು ಉತ್ಖನನಗಳಲ್ಲಿ ಹಾಗೂ ದೊಡ್ಡೇರಿ ಕ್ಷೇತ್ರಕಾರ್ಯದಲ್ಲಿಯೂ ಬಹಳ ಹಿಂದೆಯೇ ದೊರಕಿವೆ.

**ರಂಧ್ರವಿರುವ ಚಿಕ್ಕ ಶಂಖು** : ಈ ನೆಲೆಯಲ್ಲಿ ವಿಶೇಷವಾಗಿ ರಂಧ್ರವಿರುವ ಚಿಕ್ಕ ಶಂಖ ದೊರಕಿದ್ದು ಈ ತರಹದ ಶಂಖು ತಕ್ಷಶಿಲೆ ನೆಲೆಯಲ್ಲಿ ದೊರಕಿದೆ. ರಂಧ್ರವಿರುವ ಶಂಖವನ್ನು ಕೊರಳಿಗೆ ಆಭರಣವಾಗಿ ಬಳಸಿರಬಹುದು.



**ಕಲ್ಲಿನ ಚಿಕ್ಕ ಲಿಂಗಗಳು** : ಈ ನೆಲೆಯಲ್ಲಿ ಅಲಂಕಾರಗೊಂಡ ೪ ಚಿಕ್ಕ ಲಿಂಗಗಳು ದೊರಕಿವೆ. ಲಿಂಗವು ಯೋನಿ ಪೀಠದ ಮೇಲೆ ಇದ್ದು, ಕಪ್ಪು ಬಣ್ಣದ, ಚಿಕ್ಕಗೆರೆಗಳಿಂದ ಅಲಂಕಾರ ಗೊಂಡಿರುವ ಲಿಂಗಗಳಾಗಿವೆ. ಉದ್ದ ೧$^{1}/_{4}$ ಸೆಂ.ಮೀ. ಮೇಲ್ಭಾಗ ೩ ಸೆಂ.ಮೀ ಅಗಲವಿದೆ. ಇದೇ



ತರಹದ ೨೫ ಲಿಂಗಗಳು ಆ ಹೊಲದ ಒಡೆಯರಾದ ನರಸಿಂಹಮೂರ್ತಿ ಯವರೂ ಮನೆಯಲ್ಲಿವೆ. ಅವರನ್ನು ಕೇಳಿದಾಗ ನಾವು ನೇಗಿಲು ಒಡೆಯುವಾಗ ಈ ತರಹದ ಲಿಂಗ, ಗಣೇಶಮೂರ್ತಿ, ವಿವಿಧ ನಮೂನೆ ಮಣಿಗಳು ಹೇರಳವಾಗಿ ಭೂಮಿಯ ಮೇಲೆ ಬರುತ್ತವೆ ಎಂದು ಅಭಿಪ್ರಾಯಪಡುತ್ತಾರೆ. ಈ ತರಹದ ಲಿಂಗಗಳು ಯಲ್ಲೇಶ್ವರಮ್, ನೇವಾಸ ಇತ್ಯಾದಿ ಉತ್ಖನನ ನೆಲೆಗಳಲ್ಲಿ ದೊರಕಿವೆ ಹಾಗೂ ಕ್ಷೇತ್ರ ಕಾರ್ಯದಲ್ಲಿ ದೊಡ್ಡೇರಿ ನೆಲೆಯಲ್ಲಿಯೂ ಸಹ ದೊರಕಿವೆ. ಇಲ್ಲಿ ಲಿಂಗಗಳು ಹೇರಳವಾಗಿ ದೊರಕುತ್ತಿರುವುದರಿಂದ ಈ ನೆಲೆಯು ಲಿಂಗಗಳನ್ನು ತಯಾರಿಸುವ ಪ್ರಧಾನ ಕೇಂದ್ರವಾಗಿತ್ತೆಂದು ಅಥವಾ ನಿರ್ದಿಷ್ಟ ಜನಾಂಗೀಯ ಆಚರಣೆಯ ಸಂಕೇತವಾಗಿಯೂ ಇದ್ದಿರಬಹುದೆಂದು ತರ್ಕಿಸಬಹುದಾಗಿದೆ. ನೆಲೆಯನ್ನು ಭೂಸಂಶೋಧನೆಗೆ ಒಳಪಡಿಸಿದರೆ ಸ್ಪಷ್ಟವಾದ ಮಾಹಿತಿ ತಿಳಿಯಯಹುದು.

**ಸುಟ್ಟ ಮಣ್ಣಿನ ಇಟ್ಟಿಗೆ** : ಈ ನೆಲೆಯಲ್ಲಿ ೨೦ ಸೆಂ.ಮೀ ಅಗಲ, ೨೭ ಸೆಂ.ಮೀ (ಮುರಿದ) ಉದ್ದ, ೮ ಸೆಂ.ಮೀ. ದಪ್ಪವಿರುವ ಇಟ್ಟಿಗೆ ದೊರಕಿದೆ. ಹೊಲದ ಒಡೆಯರಾದ ಮಲ್ಲಿಕಾರ್ಜುನ ಅವರು ನೇಗಿಲು ಹೊಡೆಯುವಾಗ ಸುಮಾರು ೩ ರಿಂದ ೫ ಅಡಿ ಆಳದಲ್ಲಿ ಇದಕ್ಕಿಂತಲೂ ಚೆನ್ನಾಗಿರುವ ಸುಟ್ಟ ಇಟ್ಟಿಗೆಗಳು ಮೇಲಕ್ಕೆ ಬರುತ್ತವೆ ಎಂದೂ ಒಳಭಾಗದಲ್ಲಿ ಇಟ್ಟಿಗೆ ಗೋಡೆಯಿದೆ ಎಂದು ಅಭಿಪ್ರಾಯ ಪಟ್ಟರು. ಇದೇ ತರಹದ ಇಟ್ಟಿಗೆ ಗೋಡೆ ವೇದಾವತಿ ನದಿ ತೀರದ ದೊಡ್ಡೇರಿ ನೆಲೆಯ ಕ್ಷೇತ್ರ ಕಾರ್ಯದಲ್ಲಿ ದೊರಕಿದೆ. ಈ ತರಹ ಇಟ್ಟಿಗೆ ಗೋಡೆಗಳು, ಇಟ್ಟಿಗೆಗಳು ಚಂದ್ರವಳ್ಳಿ, ಬ್ರಹ್ಮಗಿರಿ ನೆಲೆಗಳಲ್ಲಿ ಮಾರ್ಟಿಮರ್ ವ್ಹೀಲರ್ ಅವರು, ಎಸ್.ಆರ್.ರಾವ್ ಅವರು ಪಟ್ಟದಕಲ್ಲಿನಲ್ಲಿ, ಸುಂದರ. ಅ. ಅವರು ವಡಗಾಂವ್ ಮಾಧವಪುರದಲ್ಲಿ, ಎ.ವಿ. ನರಸಿಂಹಮೂರ್ತಿ ಮತ್ತು ಇತರರು ತಲಕಾಡು ನೆಲೆಯಲ್ಲಿ ಪತ್ತೆ ಹಚ್ಚಿದ್ದಾರೆ. ಆ ಹಿನ್ನಲೆಯಲ್ಲಿ ಈ ನೆಲೆಯನ್ನು ಮತ್ತು

ದೊಡ್ಡೇರಿ ನೆಲೆಯನ್ನು ಭೂಸಂಶೋಧನೆಗೆ ಒಳಪಡಿಸಿದರೆ ಮೇಲಿನ ನೆಲೆಗಳ ಹಾಗೆ ಸ್ಪಷ್ಟವಾದ ಮಾಹಿತಿ ಹೊರಬಿದ್ದು ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಬಹುದು.

**ಕೆಂಪುಮಣಿ (ಜಾಸ್ಪರ್ ಮಣಿ)** : ಈ ನೆಲೆಯಲ್ಲಿ ೬೧/೨ ಸೆಂ.ಮೀ. ಸುತ್ತಳತೆಯ, ೨ ಸೆಂ.ಮೀ. ಉದ್ದದ ಸ್ಪಷ್ಟವಾಗಿ ಕಾಣುವ ಚಿಕ್ಕ ರಂಧ್ರವಿರುವ ತುಂಬಾ ನಯವಾದ ಕೆಂಪು ಜಾಸ್ಪರ್ ದೊರೆತಿದ್ದು ಅದನ್ನು ಆಭರಣವಾಗಿ ಧರಿಸಿರಬಹುದು. ಈ ತರಹದ ನೂರಾರು ಮಣಿಗಳು ನೆಲೆಯಲ್ಲಿ ದಿನನಿತ್ಯವೂ ದೊರೆಯುತ್ತಿರುತ್ತವೆ ಎಂದು ಹೊಲದ ಒಡೆಯರು ಅಭಿಪ್ರಾಯಪಟ್ಟರು. ಈ ತರಹದ ಮಣಿಗಳು ಕ್ಷೇತ್ರಕಾರ್ಯದಲ್ಲಿ ದೊಡ್ಡೇರಿ, ಯಾದಲಗಟ್ಟೆ ನೆಲೆಗಳಲ್ಲಿ ದೊರಕಿದ್ದರೆ, ಉತ್ಖನನ ನೆಲೆಗಳಾದ ತಲಕಾಡು, ಸನ್ನತಿ ನೆಲೆಗಳಲ್ಲೂ ಸಹ ಹಿಂದೆಯೇ ದೊರಕಿದೆ.

**ಬಿಳಿಮಣಿಗಳು** : ಚಿಕ್ಕ ಬಿಳಿ ರಂಧ್ರವಿರುವ ಮಣಿ ದೊರಕಿದೆ. ಈ ಮಣಿಯು ನಯವಾಗಿದ್ದು ಮಧ್ಯ ರಂಧ್ರ ಸ್ಪಷ್ಟವಾಗಿದೆ. ಈ ತರಹದ ಮಣಿಯು ತಲಕಾಡು ಉತ್ಖನನದಲ್ಲಿ ದೊರಕಿದ್ದು ಕೊರಳಿಗೆ ಅಲಂಕಾರಕ್ಕಾಗಿ ಬಳಸಿರಬಹುದು.

ಈ ನೆಲೆಯಲ್ಲಿ ವೀರಗಲ್ಲು, ಮಾಸ್ತಿಕಲ್ಲುಗಳು ದೊರಕಿದ್ದು, ಅವು ೧೬–೧೭ನೇ ಶತಮಾನಕ್ಕೆ ಸೇರಿದವಾಗಿವೆ. ಪಾಳೇಗಾರರ ಕಾಲದ ಪುಷ್ಕರಣಿ, ವಿವಿಧ ನಮೂನೆ ಕಟ್ಟಡದ ಭಾಗ, ಲಿಂಗಮುದ್ರೆಕಲ್ಲು, ಆಂಜನೇಯ, ವೀರಭದ್ರ ಮುಂತಾದ ದೇವಾಲಯಗಳು ಇಲ್ಲಿವೆ.

ಒಟ್ಟಾರೆ ಈ ನೆಲೆಯಲ್ಲಿ ಸಿಕ್ಕಿರುವ ಅವಶೇಷಗಳು ವೇದಾವತಿ ನದಿ ತೀರದ ನೆಲೆಗಳ ಅವಶೇಷಗಳ ಹಾಗೆ ಹಾಗೂ ಕರ್ನಾಟಕ ಹಾಗೂ ನೆರೆ ರಾಜ್ಯಗಳ ಉತ್ಖನನ ನೆಲೆಗಳ ಅವಶೇಷಗಳಿಗೆ ಹೋಲಿಕೆಯಾಗುತ್ತಿದ್ದು, ಈ ಉತ್ಖನನಕ್ಕೆ ನೆಲೆಯನ್ನು ಒಳಪಡಿಸಿದರೆ ಸ್ಪಷ್ಟವಾದ ಮಾಹಿತಿ ಹೊರಬಿದ್ದು ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಬಹುದಾಗಿದೆ.

(ಗ್ರಾಮದ ನೆಲೆಗೆ ಹೋಗಿ ಕ್ಷೇತ್ರಕಾರ್ಯ ಮಾಡಲು ಪ್ರೋತ್ಸಾಹಿಸಿದ ಪ್ರೊ. ಲಕ್ಷ್ಮಣ್ ತೆಲಗಾವಿಯವರಿಗೂ, ಅಲ್ಲಿಗೆ ಹೋಗಲು ಸಹಕರಿಸಿದ ಯಾದಲಗಟ್ಟೆ ಜಗನ್ನಾಥ್, ಚಿತ್ರಯ್ಯ ಅವರಿಗೂ, ಮಾಹಿತಿ ನೀಡಿ ಸಹಕರಿಸಿದ ನರಸಿಂಹಮೂರ್ತಿ, ಮಲ್ಲಿಕಾರ್ಜುನ ಹಾಗೂ ಊರಿನ ಇತರೆ ಗೆಳೆಯರಿಗೂ ವಂದನೆಗಳನ್ನು ಅರ್ಪಿಸುತ್ತೇನೆ.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ದಿವಾಕರ ಆರ್.ಆರ್., **ಕರ್ನಾಟಕದ ಪರಂಪರೆ**, ಭಾಗ–೧.

೨. ಸುಂದರ ಅ., ೧೯೭೫, **ದಿ ಅರ್ಲಿ ಛೇಂಬರ್ಸ್ ಟೂಲ್ಸ್ ಆಫ್ ಸೌತ್ ಇಂಡಿಯಾ.**

೩. ಕೃಷ್ಣ ಎಂ.ಎಚ್., ೧೯೩೧, **ಎಕ್ಸ್‌ಕವೇಷನ್ ಅಟ್ ಚಂದ್ರವಳ್ಳಿ**, ಬೆಂಗಳೂರು.

೪. ಶೇಷಾದ್ರಿ ಎಂ., ೧೯೫೬, **ಸ್ಟೋನ್ ಯೂಸಿಂಗ್ ಆಫ್ ಫ್ರೀ ಅಂಡ್ ಪ್ರೋಟೋ ಹಿಸ್ಟಾರಿಕ್ ಮೈಸೂರು**, ಲಂಡನ್.

೫. ಗುರುರಾಜರಾವ್ ಬಿ.ಕೆ., ೧೯೭೨, **ಮೆಗಲಿಥಿಕ್ ಕಲ್ಚರ್ ಆಫ್ ಸೌತ್ ಇಂಡಿಯಾ.**

೬ ಬ್ರಿಡ್ಜೆಟ್ ಅಂಡ್ ರೈಮಂಡ್ ಆಲ್ಚಿನ್., ೧೯೬೮, **ದಿ ರೈಸ್ ಆಫ್ ಸಿವಿಲೈಜೇಶನ್ ಇನ್ ಇಂಡಿಯಾ ಅಂಡ್ ಪಾಕಿಸ್ತಾನ್.**

೭ ಮುಜುಂದಾರ್ ಜಿ.ಜಿ. ರಾಜಗುರು., ೧೯೬೬, **ಆಶ್‌ಮೌಂಡ್ ಎಕ್ಸ್‌ಕವೇಷನ್ ಅಟ್ ಕುಪ್ಪಗಲ್ಲು.**

೮. ನರಸಿಂಹಮೂರ್ತಿ ಎ. ವಿ. ಮತ್ತು ಇತರರು., ೧೯೯೭, **ಎಕ್ಸ್‌ಕವೇಷನ್ ಅಟ್ ಬನವಾಸಿ.**

೯. ಮಾರ್ಗಬಂಧು ಸಿ. : **ಆರ್ಕಿಯಾಲಜಿ ಆಫ್ ದಿ ಶಾತವಾಹನ ಕಾತ್ರಪ ಟೈಮ್ಸ್**, ಡೆಲ್ಲಿ.

೧೦. ದೇವರಾಜ್ ಡಿ.ವಿ. ಮತ್ತು ಇತರರು., ೧೯೯೬, **ಎಕ್ಸ್‌ಕವೇಷನ್ ಅಟ್ ತೆಲಕಾಡು.**

೧೧. ದೀಕ್ಷಿತ್ ಎಂ.ಜಿ., ೧೯೪೯, **ಈಟಾಚ್ಡ್ ಬಿಡ್ಸ್ ಇನ್ ಇಂಡಿಯಾ**, ಪೂನಾ.

೧೨. ಅನ್ಸಾರಿ ಜಡ್.ಡಿ, ನಾಗರಾಜರಾವ್. ಎಂ.ಎಸ್., ೧೯೬೪–೬೫, **ಎಕ್ಸ್‌ಕವೇಶನ್ ಅಟ್ ಸಂಗನಕಲ್ಲು.**

೧೩. ರಾವ್ ಎಸ್.ಆರ್. : **ರೀಸೆಂಟ್ ಡಿಸ್ಕವರೀಸ್ ಇನ್ ಪಟ್ಟದಕಲ್ಲು ಅಂಡ್ ಐಹೊಳೆ ಇನ್ ಶ್ರೀ ಕಂಟಿಕ.**

೧೪. ಸುಂದರ ಅ., **ಕರ್ನಾಟಕ ಚರಿತ್ರೆ**

೧೫. ರಂಗರಾಜು ಎನ್.ಎಸ್. ಅವರಿಂದ ಮಾಹಿತಿ.

೧೬. **ಹರತಿಸಿರಿ.**, (ಸಂ.) ಪ್ರೊ|| ಲಕ್ಷ್ಮಣ್ ತೆಲಗಾವಿ.

೧೭. ಗಿರಿಜಾ ಟಿ. **ಚಿತ್ರದುರ್ಗ ಜಿಲ್ಲಾದರ್ಶಿನಿ.**

೧೮. ಮುಕುಂದರೆಡ್ಡಿ, **ಹಿರಿಯೂರು ತಾಲ್ಲೂಕು ದರ್ಶಿನಿ.**

೧೯. ಚಿತ್ರದುರ್ಗ ಜಿಲ್ಲಾ ಜನಗಣತಿ ಅಂಕಿ ಅಂಶ ಇಲಾಖೆ ಕರ್ನಾಟಕ ಸರ್ಕಾರ.

೨೦. ರಾಮದಾಸರೆಡ್ಡಿ ಎಸ್.ಜಿ., **ವೇದಾವತಿ ನದಿಯ ತೀರದ ಒಂದು ಸಾಂಸ್ಕೃತಿಕ ಅಧ್ಯಯನ** (ಅಪ್ರಕಟಿತ) ಮಹಾಪ್ರಬಂಧ ೨೦೦೬.

ಮುತ್ತುರಾಜು*

# ಬೆಂಗಳೂರು ನಗರ ಮತ್ತು ರಾಮನಗರ ಜಿಲ್ಲೆಯ ಕೆಲವು ನವಶೋಧಿತ ಪ್ರಾಚ್ಯಾವಶೇಷಗಳು

ಬೆಂಗಳೂರು ನಗರ ಮತ್ತು ರಾಮನಗರ ಜಿಲ್ಲೆಗಳಲ್ಲಿ ಇತ್ತೀಚೆಗೆ ನಾನು ನಡೆಸಿದ ಅನ್ವೇಷಣಾ ವೇಳೆಯಲ್ಲಿ ಕ್ರಿಪೂ.೨೫೦೦ರಿಂದ ೧೪೦೦ರವರೆಗಿನ ಪ್ರಾಚ್ಯಾವಶೇಷಗಳು ಬೆಳಕಿಗೆ ಬಂದಿವೆ.

ನಗರದ 'ಹುಳಿಮಾವು'ವಿನಲ್ಲಿರುವ ನೈಸರ್ಗಿಕ ಕಲ್ಲಾಸರೆ ಸುಮಾರು ೧೦೦ ಅಡಿ ಉದ್ದ ಮತ್ತು ೨೦೦ ಅಡಿ ಅಗಲವಿದ್ದು, ಪ್ರಾಚೀನ ಕಾಲದಿಂದಲೂ ಧಾರ್ಮಿಕ ಪರಂಪರೆಯನ್ನು ಬೆಳೆಸಿಕೊಂಡು ಮುಂದುವರೆಯುತ್ತಿದೆ. ಪ್ರಾಕ್ತನ ಶಾಸ್ತ್ರಜ್ಞರು ಈ ಕಲ್ಲಾಸರೆಯನ್ನು ಪ್ರಾಗೈತಿಹಾಸಿಕ ಕಾಲದ ಮಾನವನ ವಾಸಸ್ಥಾನವಾಗಿದ್ದಿರಬೇಕೆಂದು ಊಹಿಸಿದ್ದರೂ, ಆಧಾರವಾಗಿ ಯಾವ ಸಾಕ್ಷ್ಯಾಧಾರಗಳೂ ಲಭ್ಯವಾಗಿರಲಿಲ್ಲ. ಈ ಕಲ್ಲಾಸರೆಯೊಳಗೆ ಒಂದು ಶಿಲಾ ಸಮಾಧಿ ಇದ್ದು ಅದನ್ನು ಸ್ಥಳೀಯರು ಕ್ರಿಸ್ತಪೂರ್ವದ ಸಮಾಧಿ ಎಂದು ನಂಬಿದ್ದಾರೆ ಕಲ್ಲಾಸರೆಯೊಳಗೆ ಇರುವ ಈ ಸಮಾಧಿ ಪ್ರಾಯಶಃ ಇಲ್ಲಿ ನೆಲೆಸಿ ದೈವಾಧೀನವಾಗಿರುವ ಋಷಿಯೋರ್ವನ ಸಮಾಧಿ ಎಂದು ಸದ್ಯಕ್ಕೆ ಹೇಳಬಹುದು. ಹೆಚ್ಚಿನ ವಿವರಗಳಿಗೆ ಆಧಾರಗಳಾವುವೂ ಇಲ್ಲ. ಪ್ರಸ್ತುತ ಪ್ರಾಚೀನ ಚಿತ್ರಕಲೆಗಳಾವುವೂ ಇಲ್ಲದ ಈ ಕಲ್ಲಾಸರೆಯಲ್ಲಿ ಆದಿಚುಂಚನಗಿರಿ ಮಠದವರು ಶ್ರೀರಾಮಲಿಂಗೇಶ್ವರ ಸ್ವಾಮಿಯ ಮೂರ್ತಿ ಇರಿಸಿ ಅಭಿವೃದ್ಧಿ ಪಡಿಸುತ್ತಿದ್ದಾರೆ. ಕಲ್ಲಾಸರೆ ಇರುವ ಈ ಪರಿಸರವು ಪ್ರಾಗೈತಿಹಾಸಿಕ ಸ್ಥಳದ ಆಗರವಾಗಿರುವ ಬನ್ನೇರುಘಟ್ಟಕ್ಕೆ ಕೇವಲ ಏಳು ಕಿ.ಮೀ. ದೂರದಲ್ಲಿರುವುದು ಗಮನಾರ್ಹ. ಇಲ್ಲಿನ ಮುತ್ತುರಾಯಸ್ವಾಮಿ ದೇವಾಲಯದ ಬಳಿ ೧೫ ಅಂಗುಲ ಎತ್ತರ ೬ ಅಂಗುಲ ಅಗಲದ ಕಪ್ಪುಬಣ್ಣದ ಶಿಲಾಕೈಗೊಡಲಿ ದೊರೆತಿದೆ. ಈ ಆಯುಧವನ್ನು ಇದೇ ದೇವಾಲಯದ ನಾಗರಕಲ್ಲಿನ ಜೊತೆಯಲ್ಲಿ ಇರಿಸಿ ಪೂಜಿಸಲಾಗುತ್ತಿದೆ. ಈ ಆಧಾರದಿಂದಾಗಿ ಈ ಪರಿಸರದಲ್ಲಿ ನವಶಿಲಾಯುಗ (ಕಾಲ ಕ್ರಿಪೂ. ೩೦೦೦ ದಿಂದ ಕ್ರಿಪೂ. ೮೦೦) ದಿಂದಲೂ ಮಾನವನ ಕಾರ್ಯ ಚಟುವಟಿಕೆಗಳು ಜರುಗುತ್ತಿದ್ದು, ಅದಕ್ಕೂ ಮೊದಲು ಆದಿಶಿಲಾಯುಗದ ಮಾನವರು ಈ ಕಲ್ಲಾಸರೆಯನ್ನು ತಮ್ಮ ವಾಸಸ್ಥಾನವನ್ನಾಗಿ ಮಾಡಿಕೊಂಡಿದ್ದರು ಎಂದು ನಿರ್ಧರಿಸಬಹುದಾಗಿದೆ.



ಕುಮಾರಸ್ವಾಮಿ ಬಡಾವಣೆ ೨ನೇ ಹಂತದ ಅಣ್ಣಯ್ಯಪ್ಪನ ಕೆರೆ ಬಳಿ ಈಗ ನಿರ್ಮಿಸಿರುವ ಬಿ.ಡಿ.ಎ. ಹಂಚಿಕೆಯ ನಿವೇಶನ ಒಂದರಲ್ಲಿ ಮೂರು ಶಿಲಾವೃತ್ತ ಗೋರಿಗಳು ಲಭ್ಯವಾಗಿದೆ. ೧೫ ಅಡಿ ವ್ಯಾಸದಲ್ಲಿ ದುಂಡುಕಲ್ಲು ಮತ್ತು ಕಲ್ಲುಚಪ್ಪಡಿಗಳ ಸಹಾಯದಿಂದ ರಚಿಸಲಾಗಿದ್ದರೂ ಮಧ್ಯದಲ್ಲಿರುವ ಸಮಾಧಿಗಳ ಮೇಲಿರುವ ಗುರುತು ರಚನೆಗಳು ಮೂರರಲ್ಲೂ ವಿಭಿನ್ನವಾಗಿವೆ. ಎರಡು ತುಂಡು ಕಲ್ಲುಗಳ ಮೇಲೆ ಒಂದು ಅಡ್ಡಕಲ್ಲನ್ನು ಇರಿಸಿರುವ ರಚನೆಯ ಎಡಮಗ್ಗುಲಿನಲ್ಲಿಯೇ ಅರ್ಧನಕ್ಷಾತ್ರಾಕಾರದ ಜೋಡಿಸಿರುವ ಶಿಲಾರಚನೆ ಇದೆ ಈ ಸಮಾಧಿಯ ಸುತ್ತಲೂ ತುಂಡು ಕಲ್ಲುಗಳ ಆಸರೆ ನೀಡಲಾಗಿದೆ.

ಬಳಿಯಲ್ಲಿಯ ಶಿಲಾವೃತ್ತ ಸಮಾಧಿ ಮಧ್ಯೆ ಎರಡು ಅಡ್ಡಕಲ್ಲಿನ ಮೇಲೆ ಮತ್ತೊಂದು ಕಲ್ಲನ್ನು ಇಟ್ಟು ಗುರುತಿಸಲಾಗಿದೆ. ಶಿಲಾವೃತ್ತದ ತುಂಬ ಪುಟ್ಟ ಪುಟ್ಟ ಕಲ್ಲುಗಳಿನ್ನು ಹಾಕಿ ರಚಿಸಲಾಗಿದೆ. ಇಲ್ಲಿಯ ಮೂರನೇ ಶಿಲಾವೃತ್ತದ

* ಕನ್ನಡ ಅಧ್ಯಾಪಕರು, ಜವಾಹರ್ ನವೋದಯ ವಿದ್ಯಾಲಯ, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ, ಉಡುವಳ್ಳಿ - ೫೭೭ ೧೪೩.

ಮಧ್ಯೆ ಎರಡೆರಡು ಅಕ್ಕಪಕ್ಕದ ಕಲ್ಲುಗಳ ಮೇಲೆ ತುಂಡು ಕಲ್ಲನ್ನು ಇಡಲಾಗಿದೆ. ಇಲ್ಲಿಯ ಸಮಾಧಿಯ ಮೇಲೆಲ್ಲಾ ಪುಟ್ಟ ಪುಟ್ಟ ಕಲ್ಲುಗಳನ್ನು ಹಾಕಲಾಗಿದೆ. ಈ ಮೂರು ಸಮಾಧಿಗಳು ಪ್ರಸ್ತುತ್ತ ಲಭ್ಯವಿಲ್ಲದಾಗಿದ್ದು ಅವುಗಳ ಮೇಲೆ ಮನೆಗಳನ್ನು ನಿರ್ಮಿಸಿಕೊಂಡಿದ್ದಾರೆ. ಈ ಸಮಾಧಿಗಳೆಲ್ಲಾ ಬೃಹತ್ ಶಿಲಾಯುಗದ (ಕಾಲ ಸು.ಕ್ರಿ.ಪೂ ೮೦೦) ಕಾಲಮಾನಕ್ಕೆ ಸೇರಿದವುಗಳಾಗಿದ್ದು ಅದಕ್ಕೂ ಮೊದಲಿನ ಅವಶೇಷದ ಸಾಕ್ಷಿಯಾಗಿ ಇಲ್ಲಿ ಮೋರಿಗಾಗಿ ಹಳ್ಳ ತೆಗೆಯುವ ವೇಳೆಯಲ್ಲಿ ನವಶಿಲಾಯುಗದ ಮತ್ತು ಸೂಕ್ಷ್ಮಶಿಲಾಯುಗದ ನಡುವಿನ· ಸಮಯದ ಒಂದು ಶಿಲಾಕೈಗೊಡಲಿಯೊಂದು ದೊರೆತಿದೆ. ೧೪ ಅಂಗುಲ ಉದ್ದ ಮತ್ತು ೭ ಅಂಗುಲ ಅಗಲದ ತ್ರಿಕೋನಾಕಾರದ ಈ ಕೈಗೊಡಲಿಯು ಕೆಂಪು ಕಲ್ಲಿನಿಂದ ತಯಾರಿಸಲ್ಪಟ್ಟಿದೆ. ಕಲ್ಲಿನ ಬದಿಗಳಲ್ಲಿ ಚೆಕ್ಕೆಗಳನ್ನು ಎಬ್ಬಿಸಿಕೊಂಡಿದ್ದು. ತ್ರಿಕೋನದ ತುದಿಯ ಬಳಿ ಆಯುಧವನ್ನು ಬಳಸಿರುವ ಭಾಗವು ಸವೆದು ಹೋಗಿರುವ ಗುರುತನ್ನು ಪತ್ತೆಹಚ್ಚಬಹುದಾಗಿದೆ. ಇದರ ಕಾಲಮಾನವೂ ಸುಮಾರು ಕ್ರಿ.ಪೂ. ೩,೫೦೦ ಎಂದು ನಿರ್ಧರಿಸಬಹುದು. ಆ ಸಮಯದಿಂದಲೇ ಮಾನವನು ತನ್ನ ಕೃಷಿ ಮತ್ತು ಬೇಟೆಯ ಚಟುವಟಿಕೆಗಳನ್ನು ಇಲ್ಲಿ ನಡೆಸಿಕೊಂಡು ಬರುತ್ತಿದ್ದನೆಂದು ನಿರ್ಧರಿಸಬಹುದು. ಬಳಿಯಲ್ಲಿಯ ವಸಂತಪುರದಲ್ಲಿ ಪುಟ್ಟ ಕಲ್ಲಾಸರೆ ಇರುವುದರಿಂದ ಪ್ರಾಗೈತಿಹಾಸಿಕ ಕಾಲದ ಮಾನವರು ಇಲ್ಲಿ ಆಸರೆಯನ್ನು ಪಡೆಯುತ್ತಿದ್ದರೆಂದು ತಿಳಿಯಬಹುದಾಗಿದೆ.

ಕುಮಾರಸ್ವಾಮಿ ಬಡಾವಣೆಯಿಂದ ಕೇವಲ ಒಂದು ಫರ್ಲಾಂಗು ದೂರದಲ್ಲಿರುವ ಬಿಕಾಸಿಪುರ ಎಂಬ ಸ್ಥಳದಲ್ಲಿ ಯಲಚೇನಹಳ್ಳಿ ಇಸ್ರೋ ಲೇಔಟ್ ಮುಖ್ಯರಸ್ತೆಯ ಬಳಿ ಕಾಂಪೌಂಡ್ ಒಂದರಲ್ಲಿ ಮೂರು ದುಂಡುಕಟ್ಟೆ ಶಿಲಾವೃತ್ತಗಳು ಕಂಡು ಬಂದಿವೆ. ೨೫ಅಡಿ ವ್ಯಾಸದಷ್ಟು ದೊಡ್ಡದಾದ ಈ ಸಮಾಧಿಗಳ ಸುತ್ತಲೂ ದುಂಡು ಕಲ್ಲುಗಳನ್ನು ಇಟ್ಟು ವ್ಯಾಸದ ರಚನೆ ಮಾಡಲಾಗಿದೆ. ಇವು ಕಾಂಪೌಂಡ್ ಒಳಗೆ ಇದ್ದು ಅಧ್ಯಯನಕ್ಕೆ ಗಿಡಗಳ ಅಡಚಣೆ ಆಗಿದೆ. ಆದುದರಿಂದ ತಲೆಗಲ್ಲು ಕಾಣದಾಗಿದೆ. ಆದರೂ ಚೌಕಾಕಾರದ ಸಮಾಧಿಯ ಒಳಗೆ ಶವ ಮತ್ತು ಅಸ್ತಿಯನ್ನು ಇರಿಸಿಮುಚ್ಚಲಾಗಿದೆ ಎಂದು ಅರಿಯಬಹುದಾಗಿದೆ. ಅಳಿವಿನ ಅಂಚಿನಲ್ಲಿರುವ ಈ ಕುರುಹುಗಳ ರಚನೆಗಳಿಂದಾಗಿ ಒಂದೇ ಪ್ರದೇಶದಲ್ಲಿ ವಿಭಿನ್ನ ರಚನೆಯ ಸಮಾಧಿಗಳು ರಚಿತವಾಗುತ್ತಿದ್ದವು ಎಂಬುದನ್ನು ತಿಳಿಯಬಹುದು. ಇವುಗಳ ಕಾಲಮಾನವು ಬೃಹತ್ ಶಿಲಾಯುಗದ ಕಾಲವಾದ ಸುಮಾರು ಕ್ರಿ.ಪೂ.೮೦೦ ಆಗಿದೆ.

ಕನಕಪುರ ರಸ್ತೆಯ ರಾವುಗೋಡ್ಲುವಿನ ಬಳಿಯ ಗುಂಡಾಂಜನೇಯ ದೇವಾಲಯದ ಬಳಿ ಒಟ್ಟು ೭ ಬೃಹತ್ ಶಿಲಾಯುಗದ ಶಿಲಾಸಮಾಧಿಗಳು ಲಭ್ಯವಾಗಿವೆ. ಆಂಜನೇಯ ದೇವಾಲಯದ ಮುಂದಿನ ಕಲ್ಯಾಣಿಯ ಬಲಭಾಗಕ್ಕೆ ಇರುವ ಕೆರೆಯ ಬಳಿ ಮೂರು ಶಿಲಾಸಮಾಧಿಗಳು ಉಳಿದು ಬಂದಿವೆ. ಇನ್ನೂ ಹಲವಾರು ರಚನೆಗಳು ಇಲ್ಲಿದ್ದು ಕಲ್ಲು ಮಾರಾಟಗಾರರಿಂದ ನಾಶವಾಗಿವೆ. ಇಲ್ಲಿಯ ದುಂಡುಕಟ್ಟೆಯ ಮಧ್ಯೆ ತಲೆಗಲ್ಲನ್ನು ಮಾತ್ರವೇ ಇಟ್ಟು ಆಸರೆಗಾಗಿ ತುಂಡು ಕಲ್ಲುಗಳನ್ನು ನೀಡಿರುವ ಒಂದು ಸಮಾಧಿ ಇದ್ದು ಇದು ೧೮ ಅಡಿ ವ್ಯಾಸವನ್ನು ಹೊಂದಿದೆ. ಬಳಿಯಲ್ಲಿಯೇ ಗ್ರಾನೈಟ್ ಬೆಟ್ಟವಿದ್ದರೂ ಸಹ ಪಾರ್ಶ್ವಗಳಲ್ಲಿರಬೇಕಾದ ಚೌಕಾಕಾರದ ಕಲ್ಲುಗಳನ್ನು ಬಳಸದೇ ಕೇವಲ ತಲೆಗಲ್ಲಿಗೆ ಮಾತ್ರ ಚಪ್ಪಡಿ ಕಲ್ಲನ್ನು ಬಳಸಿ ಒಳಗೆಲ್ಲಾ ತುಂಡುಕಲ್ಲುಗಳ ಆಸರೆ ನೀಡಿರುವುದು ವಿಶಿಷ್ಟವಾಗಿದೆ. ಇನ್ನುಳಿದ ಎರಡು ಸಮಾಧಿಗಳು ಭಾಗಶಃ ನಾಶವಾಗಿವೆ.

ಗುಂಡಾಂಜನೇಯ ದೇವಾಲಯದ ಎಡಭಾಗದಲ್ಲಿ ನಾಲ್ಕು ಶಿಲಾಸಮಾಧಿಗಳು ಲಭ್ಯವಾಗಿದ್ದು ಇವುಗಳು ೧೫ ಅಡಿ ವ್ಯಾಸದಲ್ಲಿ ಶಿಲಾಗುಂಡುಗಳನ್ನು ಹೊಂದಿವೆ. ಒಳಗೆ ನಾಲ್ಕು ಕಡೆಯ ಚಪ್ಪಡಿಗಳ ಮೇಲೆ ತಲೆಗಲ್ಲುಗಳನ್ನು ಇಡಲಾಗಿದೆ. ಅತ್ಯಂತ ಹೀನಾಯ ಸ್ಥಿತಿಯಲ್ಲಿರುವ ಇವುಗಳ ಉತ್ಖನನ ಅತಿ ಶೀಘ್ರವಾಗಿ ಆಗಲೇಬೇಕಾಗಿದೆ. ದೇವಾಲಯದ ಆವರಣದಲ್ಲಿ ಕಲ್ಲುಚಪ್ಪಡಿಗಳ ಮೇಲೆ ಕೆತ್ತಿರುವ ಅಸಂಖ್ಯಾತ ನಮಸ್ಕಾರ ಆಸನದ ರೇಖಾಚಿತ್ರಗಳ ಕೆತ್ತನೆಗಳು ವಿವಿಧ ಬಗೆಗಳಲ್ಲಿ ಕಂಡುಬರುತ್ತವೆ. ಆದರೂ ಇವೆಲ್ಲಾ ಆಧುನಿಕ ಕಾಲಕ್ಕೆ ಸೇರ್ಪಡೆಯಾಗುತ್ತವೆ.

ನಗರದ ಕೋರಮಂಗಲದ ವೆಂಕಟರಮಣ ದೇವಾಲಯದ ಆವರಣದ ನಾಗರಕಟ್ಟೆಯ ಬಳಿ ಎರಡೂವರೆ ಅಡಿ ಎತ್ತರ ಮತ್ತು ಎರಡು ಅಡಿ ಅಗಲದ ಗ್ರಾನೈಟ್ ಕಲ್ಲಿನ ವೀರಮಾಸ್ತಿಕಲ್ಲೊಂದು ಕಂಡು ಬಂದಿದೆ. ಕಲ್ಲಿನ ಎಡಭಾಗದಲ್ಲಿ ಸತಿಹೋದ ಸ್ತ್ರೀ ಬಲಪಾರ್ಶ್ವಮುಖಿಯಾಗಿ ಮಡಿದ ತನ್ನ ಪತಿಯನ್ನು ದೃಷ್ಟಿಸುತ್ತಿದ್ದಾಳೆ. ಬಲಗೈಯಲ್ಲಿ ನಿಂಬೆಹಣ್ಣನ್ನು ಹಿಡಿದಿದ್ದಾಳೆ. ಹಿರಿದಾದ ತುರುಬ ವಸ್ತ್ರಗಳ ಅಲಂಕಾರ ಈಕೆಗಿದೆ. ಕಲ್ಲಿನ ಬಲಪಾರ್ಶ್ವದಲ್ಲಿ ವೀರನು ಬಲಗೈಯಲ್ಲಿ ಖಡ್ಗ ಮತ್ತು ಎಡಗೈಯಲ್ಲಿ ಗುರಾಣಿ ಹಿಡಿದು ವೀರಭಂಗಿಯಲ್ಲಿ ನಿಂತಿದ್ದಾನೆ. ಈ ಸತಿಪತಿಯರ ಮಧ್ಯ ಒಂದು ಸ್ಪಷ್ಟ ರೇಖಾ ವಿಭಜನೆಯನ್ನು ಮೂಡಿಸಿ ಯುದ್ಧ ಮತ್ತು ತ್ಯಾಗವನ್ನು ಸ್ಪಷ್ಟವಾಗಿ ವಿಭಾಗಮಾಡಿ ತೋರಿದ್ದಾರೆ. ಈ ಸ್ಮಾರಕದ ಎರಡನೇ ಹಂತದಲ್ಲಿ ನಂದಿ ಮತ್ತು ಶಿವಲಿಂಗಗಳ ಚಿತ್ರಗಳಿವೆ. ವೀರನು ಶತ್ರುಗಳ ಜೊತೆ ಹೋರಾಡಿ ಮಡಿದಿದ್ದಾನೆ. ಕಾರಣ ಸ್ಪಷ್ಟವಾಗಿಲ್ಲ. ಸತಿಯು ಚಿತೆ ಏರಿ ಸಹಗಮನ ಮಾಡಿದ್ದಾಳೆ. ಇದರಿಂದ ನಗರದ ಕೋರಮಂಗಲದಲ್ಲಿ ಮತ್ತೊಂದು

ಪ್ರಾಚೀನ ವೀರ ಮತ್ತು ಬಲಿದಾನದ ಸ್ಮಾರಕ ದೊರೆತಂತಾಗಿದೆ. ಈ ಸ್ಮಾರಕದ ಕಾಲಮಾನವನ್ನು ಸುಮಾರು ಕ್ರಿಸ್ತಶಕ ೧೫ನೆಯ ಶತಮಾನವೆಂದು ಹೇಳಬಹುದಾಗಿದೆ.

ಬೆಂಗಳೂರು ಉತ್ತರ ತಾಲ್ಲೂಕಿನ ಹೊನ್ನೇನಹಳ್ಳಿ ಹೊಲ ಒಂದರಲ್ಲಿ ಆಯುಧಧಾರಿಣಿಯಾದ ಚತುರ್ಭುಜೆ ದುರ್ಗಿಯ ಮೂರ್ತಿ ಮಣ್ಣಿನಲ್ಲಿ ದೊರೆತಿದೆ. ಇದು ಎರಡು ಅಡಿ ಎತ್ತರ ಮತ್ತು ಒಂದು ಅಡಿ ಅಗಲವಾಗಿದ್ದು ಗ್ರಾನೈಟ್ ಕಲ್ಲಿನಿಂದ ಮಾಡಿದುದಾಗಿದೆ. ಸಮಭಂಗಿಗಳಲ್ಲಿ ನಿಂತಿರುವ ದೇವಿಯ ಈ ಮೂರ್ತಿಯಲ್ಲಿ ಅಭಯಮುದ್ರಾಂಕಿತ ಬಲಕೈ ಒಡೆದು ಹೋಗಿದೆ. ಚಕ್ರ ಶಂಖಗಳನ್ನು ಹಿಡಿದಿರುವ ಮೇಲಿನ ಕೈಗಳು ಕಟಿಹಸ್ತವಾಗುಳ್ಳ ಎಡದ ಕೈ ಉಳಿದು ಬಂದಿದೆ. ಶಿರದಲ್ಲಿ ಕಿರೀಟ, ಇದನ್ನು ಅನುಸರಿಸಿ ಪ್ರಭಾವಳಿ ಕೊರಳಲ್ಲಿ ಆಭರಣ, ತೋಳುಬಂದಿ ಮುಂಗೈನಲ್ಲಿ ಕಡಗವಿದ್ದು ವಸ್ತ್ರಧಾರಿಣಿಯಾಗಿದ್ದು ಸಮಪ್ರಮಾಣದ ಅಂಗಾಂಗ ರಚನೆಗಳ ಕೆತ್ತನೆ, ಆಕರ್ಷಕವಾಗಿವೆ. ಶಿಲ್ಪದ ದೃಷ್ಟಿಯಿಂದ ಗಂಗರಕಾಲದ ಮೂರ್ತಿ ಲಕ್ಷಣಗಳನ್ನು ಕಾಣಬಹುದಾದ್ದರಿಂದ ಈ ಮೂರ್ತಿಯ ಕಾಲಮಾನವನ್ನು ಕ್ರಿ.ಶ. ಸುಮಾರು ೧೧ನೆಯ ಶತಮಾನವೆಂದು ನಿರ್ಧರಿಸಬಹುದು

ಬಳಿಯಲ್ಲಿಯೇ ಇರುವ ರಾಜಾನುಕುಂಟೆಯ ಹತ್ತಿರದ ಕೆರೆಯ ಸಮೀಪದಲ್ಲಿ ಪ್ರಾಚೀನವಾದ ಮೂರು ಅಡಿ ಎತ್ತರದ ಶಿವಲಿಂಗ ಮತ್ತು ಪೀಠವಿದ್ದು ಸ್ಥಳೀಯವಾಗಿ ಗ್ರಂಥಲಿಪಿಯ ಶಾಸನ ಲಭಿಸಿರುವುದುದರಿಂದ ಮತ್ತು ಶಿವಲಿಂಗಕ್ಕೆ ಬಳಸಿರುವ ಶಿಲೆಯ ಮಾದರಿಯನ್ನು ಅನುಸರಿಸಿ ಈ ಶಿವಲಿಂಗದ ಕಾಲಮಾನದ ಕ್ರಿ.ಶ. ಸುಮಾರು ೧೨ನೇ ಶತಮಾನದಲ್ಲಿ ನಿರ್ಮಿಸಿದ್ದಾಗಿದೆ ಎಂದು ನಿರ್ಧರಿಸಬಹುದು.

ಈಗ ರಾಮನಗರ ಜಿಲ್ಲೆಗೆ ಸೇರಿರುವ ಕನಕಪುರದಲ್ಲಿನ ರಂಗನಾಥ ದೇವಾಲಯದ ಮುಂದೆ ಇರುವ ಅರಳೀಮರದ ಬುಡದ ಬಳಿ ಅತ್ಯಂತ ಪುಟ್ಟ ವೀರಗಲ್ಲೊಂದನ್ನು ಇರಿಸಲಾಗಿದೆ. ವೀರ ಮತ್ತು ಸತಿಯ ಚಿತ್ರಣಗಳನ್ನು ಮಾತ್ರವೆ ಹೊಂದಿರುವ ಇವರ ಅಳತೆ ಒಂದು ಅಡಿ ಎತ್ತರ ಮತ್ತು ಮುಕ್ಕಾಲು ಅಡಿ ಅಗಲದ ಕೆಂಪು ಗ್ರಾನೈಟ್‌ನದ್ದಾಗಿದೆ.

ಸಾತನೂರು ಬಳಿಯ ಭೂಹಳ್ಳಿಗೆ ಸೇರುವ ಸೋಮನಕೆರೆಯ ಆಂಜನೇಯ ಗುಡಿ ಮುಂಭಾಗದಲ್ಲಿ ಇಂತಹುದೇ ಪುಟ್ಟ ವೀರಗಲ್ಲೊಂದನ್ನು ಇರಿಸಿದ್ದು ಇದೂ ಸಹ ಒಂದು ಅಡಿ ಎತ್ತರ, ಒಂದು ಅಡಿ ಅಗಲವನ್ನು ಹೊಂದಿದೆ ಸತಿಪತಿಯರ ಚಿತ್ರಣವಿದ್ದು ವೀರನು ಖಡ್ಗ ಮತ್ತು ಗುರಾಣಿ ಹಿಡಿದಿದ್ದಾನೆ. ಮೇಲಿನ ಎರಡೂ ಪುಟ್ಟ ವೀರಗಲ್ಲುಗಳ ಕಾಲವನ್ನು ಸುಮಾರು ಕ್ರಿ.ಶ. ೧೫ನೇ ಶತಮಾನ ವೆಂದು ಹೇಳಬಹುದಾಗಿದೆ.

ಇದೇ ಸಾತನೂರಿನ ಬಳಿಯ ಸಂಬೇಗೌಡನ ದೊಡ್ಡಿಯ ಬಳಿ ಪ್ರಾಚೀನ ನಿಲುವುಗಲ್ಲು ಹಾಗೂ ಬೃಹತ್ ಶಿಲಾಯುಗದ ಸಮಾಧಿಗಳು ಪತ್ತೆ ಆಗಿದ್ದವು. ಆದರೇ ಪ್ರಾಗೈತಿಹಾಸಿಕ ಕಾಲದ ಆಯುಧ ಲಭ್ಯವಾಗಿರಲಿಲ್ಲ. ಇತ್ತೀಚೆಗೆ ನಾನು ನಡೆಸಿದ ಅನ್ವೇಷಣೆಯ ವೇಳೆಯಲ್ಲಿ ಸಾತನೂರಿಗೆ ಹೋಗುವ ಮಾರ್ಗದ ಹಳ್ಳವೊಂದರಲ್ಲಿ ನವಶಿಲಾಯುಗಕ್ಕೆ ಸೇರುವ ತ್ರಿಕೋನಾಕಾರದ ಕರಿಯ ಕಲ್ಲಿನ ಆಯುಧವೊಂದು ದೊರಕಿತು. ಇದರ ಉದ್ದ ೧೨ ಅಂಗುಲ ಮತ್ತು ಅಗಲ ೪ ಅಂಗುಲವುಳ್ಳದ್ದಾಗಿದೆ. ಆದುದರಿಂದ ಈ ಭಾಗದಲ್ಲಿನ ಪ್ರಾಚೀನ ಮಾನವನ ಜೀವನದ ಚಟುವಟಿಕೆಯು ನವಶಿಲಾಯುಗ (ಕಾಲ ಕ್ರಿ.ಪೂ. ೩,೦೦೦)ದಿಂದಲೇ ಆರಂಭವಾಗಿತ್ತೆಂದು ನಿರ್ಧರಿಸಬಹುದು.

ಸಾತನೂರಿಗೆ ಸಮೀಪದಲ್ಲೆ ಇರುವ ಹರಿಹರ ಗ್ರಾಮವು ಯುದ್ಧ ಮತ್ತು ತ್ಯಾಗದ ಆಗರವಾಗಿತ್ತೆಂಬುದಕ್ಕೆ ಅಲ್ಲಿ ಲಭ್ಯವಾಗಿರುವ ೧೬ ವೀರ ಮತ್ತು ಮಾಸ್ತಿಕಲ್ಲುಗಳೇ ಸಾಕ್ಷಿಯಾಗಿವೆ. ಇವುಗಳಲ್ಲಿ ಎರಡು ವೀರಗಲ್ಲುಗಳ ಉಲ್ಲೇಖ ಮಾತ್ರ ನನ್ನ ಹಿಂದಿನ ಲೇಖನದಲ್ಲಿ ಪ್ರಸ್ತಾಪಿಸಿದ್ದೇನೆ. ಆದರೇ ಅತ್ಯಂತ ರೋಚಕವಾದ ಘಟನೆಗಳ ಸ್ಮಾರಕವಾದ ಇವುಗಳ ದಾಖಲೆ ಇಲ್ಲಿ ಅಗತ್ಯವಾಗಿದೆ. ಇಲ್ಲಿನ ಬಸವೇಶ್ವರ ದೇವಾಲಯದ ಮುಂದೆ ಪೂರ್ವದಿಕ್ಕಿಗೆ ಮುಖ ಮಾಡಿರುವ ಒಂದು ವೀರಗಲ್ಲು ಏಳುವರೆ ಅಡಿ ಎತ್ತರ ಮತ್ತು ಆರೂವರೆ ಅಡಿ ಅಗಲದ್ದಾಗಿದ್ದು ಗ್ರಾನೈಟ್ ಕಲ್ಲಿನಲ್ಲಿ ನಾಲ್ಕು ಹಂತಗಳಲ್ಲಿ ಚಿತ್ರಿಸಲಾಗಿದೆ. ಅರ್ಧಅಡಿ ದಪ್ಪವಿರುವ ಈ ಸ್ಮಾರಕದ ಕೆಳ ಹಂತದಲ್ಲಿ ಯುದ್ಧಕ್ಕೆ ಹೊರಡುವಾಗಿನ ಮೆರವಣಿಗೆ ಚಿತ್ರಣವಿದೆ. ಕಲ್ಲಿನ ಬಲಭಾಗದಲ್ಲಿ ಯೋಧನೊಬ್ಬ ತನ್ನ ಹೆಗಲಮೇಲೆ ದೊಣ್ಣೆಯೊಂದರ ಸಹಾಯದಿಂದ ಭಾರವಾದ ವಸ್ತುವನ್ನು ತನ್ನ ಎರಡೂ ತುದಿಗಳಲ್ಲೂ ಬರುವಂತೆ ಹಿಡಿದು ನಡೆಯುತ್ತಿದ್ದಾನೆ. ಇವನ ಮುಂದೆ ಯೊಧನೋರ್ವ ಕುದುರೆಯನ್ನು ಹಿಡಿದುಕೊಂಡು ಸಾಗುತ್ತಿದ್ದಾನೆ. ಇನ್ನೋರ್ವ ಯೋಧ ಮತ್ತೊಂದು ಕುದುರೆಯನ್ನು ಹಿಡಿದುಸಾಗುತ್ತಿದ್ದಾನೆ. ಮುಂದೆ ಛತ್ರಿಯೊಂದನ್ನು ಹಿಡಿದ ಯೋಧನ ಚಿತ್ರವಿದೆ. ಇವನ ಮುಂದೆ ಇಬ್ಬರು ಯೋಧರು ತಮ್ಮ ಭುಜಗಳ ಮೇಲೆ ಪಲ್ಲಕಿಯಲ್ಲಿ ವೀರನನ್ನು ಎತ್ತಿಕೊಂಡು ಹೋಗುತ್ತಿರುವ ಚಿತ್ರಣವಿದೆ. ಮುಂದೆ ಇಬ್ಬರು ದೊಡ್ಡದಾದ ತಮಟೆಗಳನ್ನು ಮತ್ತೊಬ್ಬ ಚಿಕ್ಕ ತಮಟೆಯನ್ನು ಮೇಲೆ ಎತ್ತಿ ಹಿಡಿದು ಬಡಿಯುತ್ತಿರುವ ಚಿತ್ರವಿದೆ. ಮತ್ತೊಬ್ಬ ಮೃದಂಗವನ್ನು ಹಿಡಿದಿದ್ದರೆ ಇನಿಬ್ಬರು ಕಹಳೆಯನ್ನು ಊದುತ್ತಿದ್ದಾರೆ. ಎರಡನೆಯ ಹಂತಕ್ಕೆ ಮೊದಲು ಅಲಂಕಾರವನ್ನು ಬಿಡಿಸಲಾಗಿದೆ.



ಎರಡನೆಯ ಹಂತದಲ್ಲಿ ಯುದ್ಧದ ಚಿತ್ರಣವಿದೆ. ಶಿಲ್ಪದ ಬಲದ ಕಡೆಯಿಂದ ಮೂವರು ಯೋಧರು ಕುದುರೆಗಳ ಮೇಲೆ ಕುಳಿತು ಯುದ್ಧ ಮಾಡುತ್ತಿರುವ ಚಿತ್ರಣವಿದೆ. ಮೂರು ಕುದುರೆಗಳ ಮುಂಗಾಲುಗಳನ್ನು ಮೇಲೆ ಎತ್ತಿದಂತಿದ್ದರೆ ಕೆಳಗೆ ಮಡಿದ ಮೂವರು ಯೋಧರ ಚಿತ್ರಣಗಳು ವಿಬಿನ್ನ ಮಾದರಿಯಲ್ಲಿದೆ. ಕುದುರೆಗಳ ಮೇಲೆ ಕುಳಿತಿರುವ ವೀರರು ಬಲಕೈಗಳಲ್ಲಿ ಕುದುರೆಯ ಜೀನ್ ಅನ್ನು ಹಿಡಿದಿದ್ದರೇ ತಮ್ಮ ಎಡದ ಕೈಗಳಲ್ಲಿ ಖಡ್ಗಗಳನ್ನು ಇಬ್ಬರು ಹಿಡಿದಿದ್ದಾರೆ. ಇನ್ನೋರ್ವನ ಚಿತ್ರಣ ವಿಬಿನ್ನವಾಗಿದ್ದು ಈತನು ಉದ್ದನೆಯ ಗಡ್ಡವನ್ನು ಹೊಂದಿದ್ದು, ಕೈನಲ್ಲಿ ಉದ್ದನೆಯ ಈಟಿಯನ್ನು ಹಿಡಿದಿದ್ದಾನೆ. ಮಧ್ಯೆ ಹಾರಿ ಹೋಗಿರುವ ಶತ್ರುಗಳ ಶಿರಗಳ ಚಿತ್ರಣಗಳಿವೆ.

ಮುಂದೆ ಓರ್ವ ಪ್ರಧಾನ ವೀರನು ದುಂಡನೆಯ ಗುರಾಣಿಯನ್ನು ಬೆರಳುಗಳಲ್ಲಿ ಹಿಮ್ಮುಖವಾಗಿ ಹಿಡಿದಿದ್ದಾನೆ. ತನ್ನ ಬಲದ ಕೈನಿಂದ ಖಡ್ಗವನ್ನು ಮೇಲೆ ಎತ್ತಿ ಹಿಡಿದಿದ್ದಾನೆ. ಬಲಿಷ್ಠದೇಹದೊಂದಿಗೆ ಉಡುಗೆ ತೊಡುಗೆಗಳನ್ನು ಉಳ್ಳವನಾಗಿದ್ದಾನೆ. ಬಿಚ್ಚುಗತ್ತಿ ನಡುವಿನಲ್ಲಿ ಇದೆ. ಎಡದ ಕಾಲಿನಲ್ಲಿ ಕಡಗ ಇಲ್ಲದಿರುವುದು ಗಮನಾರ್ಹ ಮುಂಗೈ ಆಭರಣ ಕೊರಳಸರ ಇದೆ. ಈತನ ಮುಂದೆ ಚಿಕ್ಕದಾದ ಒಬ್ಬನ ಚಿತ್ರಣವಿದ್ದು ಈತ ತನ್ನ ಭುಜದ ಮೇಲೆ ಭಾರವಾದ ಹೊರೆಯನ್ನು ಹೊತ್ತಿದ್ದಾನೆ. ಈ ಯೋಧರ ಎದುರಾಗಿ ಶತ್ರುಒಬ್ಬ ದುಂಡನೆಯ ಗುರಾಣಿಯನ್ನು ಹಿಡಿದು ಖಡ್ಗವನ್ನು ಬಲದಕೈನಲ್ಲಿ ಹಿಡಿದು ಹೋರಾಡುತ್ತಿದ್ದಾನೆ. ಬಳಿಯಲ್ಲಿಯೇ ಹಿಮ್ಮುಖವಾಗಿ ಬೆನ್ನನ್ನು ತೋರಿಸುತ್ತಾ ಬಲವಾಗಿ ಎಳೆದ ಬಿಲ್ಲಿನಿಂದ ಬಾಣ ಹೂಡಿ ಯುದ್ಧ ಮಾಡುತ್ತಿರುವ ಯೋಧನ ಚಿತ್ರಣವಿದೆ. ಮುಂದಿನ ಹಂತಕ್ಕೆ ಮಧ್ಯದಲ್ಲಿ ಅಲಂಕಾರವಿದ್ದು ಮಡಿದ ವೀರರನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಚಾಮರಧಾರಿ ಸ್ತ್ರೀ ಮುಂದೆ ಪುರುಷ ಮತ್ತು ಮಹಿಳೆಯರು ಅವರ ಮುಂದೆ ಮತ್ತೆ ಚಾಮರಧಾರಿಗಳಾದ ಇಬ್ಬರ ಚಿತ್ರಗಳು ನಂತರ ಪುರುಷನೊಬ್ಬನ ಜೊತೆ ಇಬ್ಬರು ಸ್ತ್ರೀಯರ ಚಿತ್ರ ನಂತರ ವಿಮಾನದಲ್ಲಿ ಅದೇ ಚಾಮರಧಾರಿಣಿಯರ ಚಿತ್ರಗಳ ಜೊತೆಗೆ ಕುಳಿತಿರುವ ಪುರುಷ ಮತ್ತು ನಿಂತ ಮಹಿಳೆಯ ಚಿತ್ರ ಮತ್ತೇ ಚಾಮರಧಾರಿಣಿಯ ಚಿತ್ರಣವಿದೆ. ನಾಲ್ಕನೇ ಹಂತದಲ್ಲಿ ಮಧ್ಯದಲ್ಲಿ ಪುಷ್ಪಗಳ ಅಲಂಕಾರವಿದೆ. ವಿವಿಧ ಮಾದರಿಯ ಕಂಸಗಳ ಸಹಾಯದಲ್ಲಿ ಮೂಡಿಸಿರುವ ಈ ಚಿತ್ರಗಳು ಗಮನಾರ್ಹ.

ನಾಲ್ಕನೆ ಹಂತಕ್ಕೆ ಬಲಭಾಗದಲ್ಲಿ ಸ್ವರ್ಗದಲ್ಲಿ ನಾಲ್ಕು ಜನ ಸ್ತ್ರೀಯರು ಕೈ ಮುಗಿದು ನಿಂತಿದ್ದಾರೆ. ಕೆಳಗೆ ಹೊರಾಡಿದ ಮೂವರು ಯೋಧರು ಕೈಮುಗಿದು ನಿಂತಿದ್ದಾರೆ. ಇವರ ಎಡಭಾಗದಲ್ಲಿ ಮೊಲೆ ಹಿಡಿದು ಕೊಂಡಿರುವ ಯತಿಯೊಬ್ಬನ ಚಿತ್ರ ಮುಂದೆ ಗಾಯಕಿ ನರ್ತಕಿಯರ ಚಿತ್ರಣಗಳಿವೆ. ಮುಂದೆ ನಂದಿ ಮತ್ತು ಶಿವಲಿಂಗ ಚಿತ್ರಣಗಳಿದ್ದು ಗಣಗಳಿಬ್ಬರು ಪೂಜಿಸುವ ಚಿತ್ರಣವಿದೆ.

ಈ ವೀರಗಲ್ಲಿನ ಚಿತ್ರವನ್ನು ಗಮನಿಸಿದರೆ ಬಾರಿ ಪ್ರಮಾಣದ ಯುದ್ಧವೊಂದು ಇಲ್ಲಿ ಘಟಿಸಿರುವುದನ್ನು ತಿಳಿಯಬಹುದಾಗಿದೆ. ಖಡ್ಗ, ಗುರಾಣಿ, ಬಿಲ್ಲು, ಬಾಣ, ಈಟಿಯಂತಹ ಆಯುಧಗಳ ಜೊತೆಗೆ ಅಶ್ವಗಳನ್ನು ಯುದ್ಧದ ಸಾಧನವನ್ನಾಗಿ ಇಲ್ಲಿ ಬಳಸಲಾಗಿದೆ.. ಮಡಿದ ವೀರಪತಿಗಳನ್ನನುಸರಿಸಿ ಅವರ ಪತ್ನಿಯರು ಚಿತೆ ಏರಿದ ತ್ಯಾಗವೂ ಇಲ್ಲಿ ನಡೆದಿದೆ. ಕಾಲಮಾನದ ದೃಷ್ಟಿಯಿಂದ ಈ ವೀರಗಲ್ಲನ್ನು ಕ್ರಿ.ಶ.ಸುಮಾರು ೧೩ನೇ ಶತಮಾನವೆಂದು ನಿರ್ಧರಿಸಬಹುದಾಗಿದೆ.

ಈ ಮೇಲಿನ ವೀರಗಲ್ಲಿನ ಮುಂಭಾಗದಲ್ಲಿಯೇ ಎರಡು ವೀರಗಲ್ಲುಗಳಿದ್ದು ಒಂದು ಎರಡೂವರೆ ಅಡಿ ಎತ್ತರ ಮತ್ತು ಎರಡು ಅಡಿ ಅಗಲವಾಗಿದ್ದು ಹೋರಾಡುತ್ತಿರುವ ವೀರನು ತನ್ನ ಎಡದ ಕೈನಲ್ಲಿ ಗುರಾಣಿಯನ್ನು ಹಿಡಿದುಕೊಂಡಿದ್ದರೆ.

ಬಲದಕೈನಲ್ಲಿ ಖಡ್ಗವನ್ನು ಹಿಡಿದಿದ್ದಾನೆ. ಉಡುಗೆ ತೊಡುಗೆ ಸಾಧಾರಣವಾಗಿದ್ದು ಈತನ ಹಿಂದೆ ಮತ್ತೊರ್ವನು ತನ್ನ ಬಲದಕೈನಲ್ಲಿ ಖಡ್ಗವೊಂದನ್ನು ಹಿಡಿದು ಎಡದ ಕೈಯನ್ನು ಮೇಲೆತ್ತಿ ನಿಂತಿರುವ ಚಿತ್ರಣವಿದೆ. ಈ ಇಬ್ಬರಿಗೂ ಯಾವುದೇ ಕಾರಣಕ್ಕಾಗಿ ಜಗಳ ನಡೆದಿದೆ. ಇವರಲ್ಲಿ ಓರ್ವ ಹತನಾಗಿದ್ದಾನೆ. ಈ ವೀರಗಲ್ಲಿನ ಬದಿಯಲ್ಲಿಯೇ ಒಂದೂವರೆ ಅಡಿ ಅಗಲ ಒಂದು ಅಡಿ ಎತ್ತರದ ವೀರಗಲ್ಲಿನಲ್ಲಿ ಖಡ್ಗ ಹಿಡಿದ ವೀರನ ಚಿತ್ರಣ ಮಾತ್ರವೇ ಇದೆ. ಅಂದರೆ ಈತನೂ ಸಹ ತನ್ನ ಶತ್ರು ಜೊತೆಗೆ ಹೋರಾಡಿ ಸಾವನ್ನ ಅಪ್ಪಿದ್ದಾನೆ. ಕ್ರಿ.ಶ. ಹದಿಮೂರನೇ ಶತಮಾನಕ್ಕೆ ಸರಿಹೊಂದುವ ಈ ಮೇಲಿನ ವೀರಗಲ್ಲುಗಳು ಸಹ ಸಮಕಾಲಿನ ಘಟನೆಯ ದಾಖಲೆಗಳಾಗಿವೆ.

ಈ ವೀರಗಲ್ಲುಗಳ ಬಲಬದಿಯಲ್ಲಿ ಮತ್ತೊಂದು ಶಾಸನೋಕ್ತ ವೀರಗಲ್ಲು ಇದ್ದು ಇದು ಐದು ಅಡಿ ಉದ್ದ ಮತ್ತು ಐದು ಅಡಿ ಅಗಲವನ್ನು ಉಳ್ಳದ್ದಾಗಿದೆ. ಏಳು ಸಾಲಿನ ಲಿಪಿ ಇರುವ ಶಾಸನವು ಇದೆ. ಓರ್ವನು ಪೀಠವೊಂದರ ಮೇಲೆ ಕುಳಿತಿದ್ದು ಇವನ ಕೆಳಗೆ ಗಂಡುಹೆಣ್ಣುಗಳು ಕೈ ಮುಗಿದು ಕುಳಿತಿರುವ ಎರಡು ಚಿತ್ರಣಗಳಿವೆ. ಮೇಲೆ ಒಬ್ಬನು ಕೈ ಮುಗಿದು ಕುಳಿತಿರುವ ಚಿತ್ರಣವಿದ್ದರೇ ಇದರ ಎಡಬದಿಯಲ್ಲಿ ಇಬ್ಬರು ಮಹಿಳೆಯರು ಇಬ್ಬರು ಪುರುಷರು ಕೈಮುಗಿದು ಕುಳಿತಿರುವ ಚಿತ್ರಣವಿದೆ. ಕಲ್ಲಿನ ಮಧ್ಯಭಾಗದಲ್ಲಿ ವೀರನು ತನ್ನ ಬಲದ ಕೈನಲ್ಲಿ ಬಿಲ್ಲನ್ನು ಹಿಡಿದಿದ್ದರೇ ಎಡದ ಕೈನಲ್ಲಿ ತನ್ನ ಶರೀರದ ನಡುಪಿನಲ್ಲಿರುವ ಚಿಚ್ಚುಗತ್ತಿಯನ್ನು ಹಿಡಿದಿದ್ದಾನೆ. ಅಂದವಾದ ವೇಷ ಭೂಷಣಗಳು ಇವನ ಅಲಂಕಾರಗಳಾಗಿವೆ. ಇಲ್ಲಿಯೂ ಸಹ ವೀರರು ಯುದ್ಧದಲ್ಲಿ ಮಡಿಯಲಾಗಿ ಇವರ ಸತಿಯರು ಚಿತೆಗೆ ಏರಿದ್ದಾರೆ. ಇದು ಸಹ ಕ್ರಿ.ಶ. ಸುಮಾರು ೧೩ನೇಯ ಶತಮಾನಕ್ಕೆ ಸರಿಹೊಂದುವ ವೀರಗಲ್ಲಾಗಿದೆ.

ಇಲ್ಲಿಯೇ ಎರಡು ಹೋಳಾಗಿರುವ ವೀರಗಲ್ಲೊಂದು ಇದ್ದು ಇದು ಐದು ಅಡಿ ಎತ್ತರ ಮತ್ತು ನಾಲ್ಕು ಅಡಿ ಅಗಲವಿದೆ. ಐವರು ವ್ಯಕ್ತಿಗಳ ಹೋರಾಟದ ಚಿತ್ರಣಗಳು ಇಲ್ಲಿದ್ದು ವಿಭಿನ್ನ ಮಾದರಿಯ ಖಡ್ಗ, ಭರ್ಜಿ ಮತ್ತು ಈಟಿಗಳನ್ನು ಹಿಡಿದುಕೊಂಡು ಹೋರಾಡುತ್ತಿದ್ದಾರೆ. ಎರಡನೇ ಹಂತದಲ್ಲಿ ಮಡಿದ ವೀರನ ಕೈಹಿಡಿದು ಮೂರು ಜನ ಅಪ್ಸರೆಯರು ಚಾಮರಗಳನ್ನು ಬೀಸುತ್ತಾ ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಮೂರು ಜನ ಅಪ್ಸರೆಯರ ಜೊತೆಗೆ ಕೈ ಮುಗಿದು ಕುಳಿತಿದ್ದು ಇನ್ನೊಂದು ಬದಿಯಲ್ಲಿ ಶಿವಲಿಂಗ ನಂದಿ ಮತ್ತು ಯತಿಯೊರ್ವನ ಚಿತ್ರಣವಿದೆ. ಐವರು ವ್ಯಕ್ತಿಗಳ ನಡುವೆ



ಯುದ್ಧವಾಗಿ ಓರ್ವವೀರನು ಮರಣವನ್ನು ಹೊಂದಿ ಸ್ವರ್ಗಸ್ಥನಾಗಿದ್ದಾನೆ ಎಂದು ಈ ವೀರಗಲ್ಲಿನ ಚಿತ್ರಣವು ತಿಳಿಸುತ್ತದೆ. ಈ ಸ್ಮಾರಕದ ಕಾಲಮಾನವನ್ನು ಕ್ರಿ.ಶ.ಸುಮಾರು ೧೨ನೇ ಶತಮಾನವೆಂದು ಹೇಳಬಹುದಾಗಿದೆ.

ಈ ವೀರಗಲ್ಲಿನ ಬದಿಯಲ್ಲಿಯೇ ಇರುವ ಮತ್ತೊಂದು ವೀರಗಲ್ಲು ೨ ಹಂತಗಳಲ್ಲಿ ಚಿತ್ರಿತವಾಗಿದ್ದು ಎರಡೂಮುಕ್ಕಾಲು ಅಡಿ ಎತ್ತರ ಒಂದು ಮುಕ್ಕಾಲು ಅಡಿ ಅಗಲವನ್ನು ಹೊಂದಿದೆ. ವೀರನೊಬ್ಬನು ತನ್ನ ಬಲದ ಕೈನಿಂದ ಶತ್ರುವನ್ನು ಕೊಲ್ಲಲ್ಲು ಹವಣಿಸುತ್ತಿದ್ದರೇ ಶತ್ರುವು ತನ್ನ ಖಡ್ಗದಿಂದ ಈತನನ್ನು ಹಿಡಿದು ಇರಿಯುತ್ತಿದ್ದಾನೆ. ಹಿಂಬದಿಯಲ್ಲಿ ವೀರನ ಮಡದಿಯ ಚಿತ್ರಣವಿದ್ದು ಈಕೆಯು ತನ್ನ ಕೈಯನ್ನು ಮೇಲೆ ಎತ್ತಿ ಹಿಡಿದಿದ್ದಾಳೆ. ವೀರ ಮತ್ತು ಶತ್ರುವಿನ ನಡುವೆ ನಡೆದ ಕಾಳಗದಲ್ಲಿ ಶತ್ರುವಿನಿಂದ ವೀರನು ಮಡಿಯಲಾಗಿ ಈತನ ಸತಿಯು ಚಿತೆ ಏರಿ ಸಹಗಮನ ಮಾಡಿದ್ದಾಳೆ. ಈ ಸ್ಮಾರಕದ ಕಾಲಮಾನ ಸುಮಾರು ಕ್ರಿ.ಶ.೧೪ನೆಯ ಶತಮಾವಾಗಿದೆ.

ಈ ವೀರಗಲ್ಲಿನ ಹಿಂಬದಿಯಲ್ಲಿ ಮತ್ತೊಂದು ವೀರಗಲ್ಲು ಇದ್ದು ೨ ಅಡಿ ಎತ್ತರ ಒಂದೂವರೆ ಅಡಿ ಅಗಲವಾಗಿದೆ. ಒಬ್ಬ ಖಡ್ಗ ಗುರಾಣಿ ಹಿಡಿದಿದ್ದರೆ ಮತ್ತೊಬ್ಬ ಖಡ್ಗವನ್ನು ಮಾತ್ರ ಹಿಡಿದಿದ್ದಾನೆ ಇವರಿಬ್ಬರೂ ಹೋರಾಡಿ ಓರ್ವ ಮಡಿದಿದ್ದಾನೆ. ಈ ಸ್ಮಾರಕದ ಕಾಲಮಾನವನ್ನು ಕ್ರಿ.ಶ.ಸುಮಾರು ೧೫ನೇ ಶತಮಾನವೆಂದು ಹೇಳಬಹುದು.

ಇದರ ಹಿಂಬದಿಯಲ್ಲಿ ಮಾಸ್ತಿ ಸ್ಮಾರಕ ಕಲ್ಲೊಂದು ಇದ್ದು ಮೂರು ಅಡಿ ಎತ್ತರ ಒಂದೂವರೆ ಅಡಿ ಅಗಲವನ್ನು ಹೊಂದಿದೆ. ಕಂಬವೊಂದರಿಂದ ಹೊರಬಂದಿರುವ ಕೈ ಮೇಲೆ ವೀರನ ಜೊತೆ ಸತಿಯ ಚಿತ್ರಣವಿದೆ. ವೀರನು ಯುದ್ಧದಲ್ಲಿ ಮಡಿಯಲಾಗಿ ಸತಿಯು ಚಿತೆ ಏರಿದ್ದಾಳೆ ಕ್ರಿ.ಶ.ಸುಮಾರು ೧೫ನೆಯ ಶತಮಾನಕ್ಕೆ ಈ ವೀರಗಲ್ಲು ಸೇರುತ್ತದೆನ್ನಬೇಕು.

ಬಸವೇಶ್ವರ ದೇವಾಲಯದ ಎದುರಿಗೆ ತುಸು ದೂರದಲ್ಲಿ ಎರಡೂವರೆ ಅಡಿ ಎತ್ತರ ಮತ್ತು ಒಂದೂವರೆ

ಅಡಿ ಅಗಲದ ಗ್ರಾನೈಟ್‌ನ ವೀರಗಲ್ಲಿನ ಸ್ಮಾರಕವಿದ್ದು ವೀರನ ಚಿತ್ರಣ ಮಧ್ಯದಲ್ಲಿದೆ. ವೀರನು ತನ್ನ ಎಡದ ಕೈನಲ್ಲಿ ಗುರಾಣಿಯನ್ನು ಎತ್ತಿ ಶರೀರದ ಮೇಲೆ ಬರುವಂತೆ ಹಿಡಿದಿದ್ದು ಬಲದಕೈನಲ್ಲಿ ಖಡ್ಗ ಹಿಡಿದಿದ್ದಾನೆ ಹೋರಾಟ ಯಾರ ಜೊತೆ ನಡೆದಿದೆ ಎಂಬುದು ಸ್ಪಷ್ಟವಿಲ್ಲ ಇದೂ ಸಹ ಕ್ರಿ.ಶ. ಸುಮಾರು ೧೫ನೇ ಶತಮಾನದ ಕಾಲಕ್ಕೆ ಸೇರಿದುದಾಗಿದೆ.

ಬಸವೇಶ್ವರ ದೇವಾಲಯಕ್ಕೆ ಉತ್ತರದಲ್ಲಿನ ಬಸವೇಶ್ವರನ ಹಳ್ಳ ಎಂಬ ಸ್ಥಳದಲ್ಲಿ ಇರುವ ವೀರಗಲ್ಲಿನಲ್ಲಿ ವೀರನು ಕುದುರೆಯ ಮೇಲೆ ಕುಳಿತು ಬಲದ ಕೈನಲ್ಲಿ ಖಡ್ಗ ಹಿಡಿದಿದ್ದು ಎಡದ ಕೈನಲ್ಲಿ ಕುದುರೆಯ ಜೀನನ್ನು ಹಿಡಿದಿದ್ದಾನೆ. ಸ್ಮಾರಕದ ಬಹುತೇಕ ಭಾಗ ಭೂಮಿಯಲ್ಲಿ ಹುದುಗಿ ಹೋಗಿದ್ದು ಹೆಚ್ಚಿನ ವಿವರಣೆಗೆ ಅಡಚಣೆಯಾಗಿದೆ. ಬಳಿಯಲ್ಲಿಯೇ ಇರುವ ಕುಪ್ಪೆದೊಡ್ಡಿ ಎಂಬ ಹೊಲದಲ್ಲಿ ಐದು ವಿಬಿನ್ನವಾದ ವೀರಗಲ್ಲುಗಳಿವೆ. ಐದು ಅಡಿ ಎತ್ತರ ಮೂರುವರೆ ಅಡಿ ಎತ್ತರದ ಹುಲಿಬೇಟೆ ವೀರಗಲ್ಲೊಂದರಲ್ಲಿ ತುರುವನ್ನು ರಕ್ಷಿಸಿ ಹುಲಿಯನ್ನು ಇರಿಯುತ್ತಿರುವ ಚಿತ್ರಣವುಳ್ಳ ವೀರಗಲ್ಲಿದೆ. ಹುಲಿಯನ್ನೂ ಕೊಂದು ತಾನೂ ಹತನಾದ ವೀರನನ್ನು ವೀರಗಲ್ಲಿನ ಎರಡನೆಯ ಹಂತದಲ್ಲಿ ಅಪ್ಸರೆಯರು ಕೈಹಿಡಿದು ಚಾಮರ ಬೀಸುತ್ತಾ ಸ್ವರ್ಗಕ್ಕೆ ಕೊಂಡೊಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಸ್ವರ್ಗದಲ್ಲಿ ಕೈಮುಗಿದುಕೊಂಡು ಕುಳಿತಿದ್ದಾನೆ. ನಂದಿ ಚಿತ್ರದ ನಂತರ ಶಿವಲಿಂಗವನ್ನು ಪೂಜಿಸುವ ಯತಿಯೋರ್ವನ ಚಿತ್ರವಿದೆ. ವೀರಗಲ್ಲಿನ ಮೇಲೆ ಸೂರ್ಯ–ಚಂದ್ರರ ಚಿತ್ರಣವಿದೆ. ಕಾಲಮಾನದ ದೃಷ್ಟಿಯಿಂದ ಈ ವೀರಗಲ್ಲು ಸಹ ಕ್ರಿಸ್ತಶಕ ೧೩ನೆಯ ಶತಮಾನಕ್ಕೆ ಸೇರಿದುದಾಗಿದೆ.

ಬಳಿಯಲ್ಲಿಯೇ ನಾಲ್ಕೂವರೆ ಅಡಿ ಎತ್ತರ ಮೂರೂವರೆ ಅಡಿ ಅಗಲವುಳ್ಳ ವೀರಗಲ್ಲಿನಲ್ಲಿ ವೀರನು ಬಲ ಭಾಗಕ್ಕೆ ಮುಖಮಾಡಿ ವೀರತನದಿಂದ ಖಡ್ಗ ಗುರಾಣಿಗಳನ್ನು ಹಿಡಿದಿದ್ದಾನೆ. ಯುದ್ಧಯಾರ ನಡುವೆ ಸಂಭವಿಸಿದೆ ಎಂದು ಸ್ಪಷ್ಟವಿಲ್ಲ. ಈತ ಮಡಿದಿದ್ದಾನೆ. ಪಲ್ಲಕಿಯಲ್ಲಿ ಕುಳಿತ ಇವನನ್ನು ಸ್ವರ್ಗಕ್ಕೆ ಅಪ್ಸರೆಯರು ಕೊಂಡೊಯ್ಯುತ್ತಿದ್ದಾರೆ. ಪ್ರಾಚೀನತೆಯಲ್ಲಿ ಇದು ಕ್ರಿ.ಶ. ಸುಮಾರು ೧೪ನೆಯ ಶತಮಾನದ ವೀರಗಲ್ಲು ಆಗಿದೆ.

ಇಲ್ಲಿಯೇ ಇರುವ ಭೂಮಿಯಲ್ಲಿ ಬಹುತೇಕ ಹುದುಗಿ ಹೋಗಿರುವ ಇನ್ನೊಂದು ವೀರಗಲ್ಲಿನ ಪ್ರಥಮ ಹಂತದಲ್ಲಿ ವೀರನು ಎಡಮುಖನಾಗಿ ನಿಂತಿದ್ದು ಗುರಾಣಿ ಮತ್ತು ಖಡ್ಗ ಹಿಡಿದಿದ್ದಾನೆ. ಮಡಿದ ಈತನನ್ನು ಅಪ್ಸರೆಯರು ಸ್ವರ್ಗಕ್ಕೆ ಕೊಂಡೊಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ಸ್ವರ್ಗದಲ್ಲಿ ವೀರನು ಕುಳಿತಿದ್ದಾನೆ. ಈ ವೀರಗಲ್ಲು ಕ್ರಿಸ್ತಶಕ ಸುಮಾರು ೧೪ನೇ ಶತಮಾನಕ್ಕೇ ಸೇರಿದುದಾಗಿದೆ.

ಇಲ್ಲಿಯೇ ಇರುವ ಐದು ಅಡಿ ಎತ್ತರ ಮೂರೂವರೆ ಅಡಿ ಅಗಲದ ವೀರಗಲ್ಲಿನ ತಳಭಾಗ ಭೂಮಿಯಲ್ಲಿ ಹುದುಗಿ ಹೋಗಿರುವುದರಿಂದ ಹೆಚ್ಚಿನ ವಿವರ ಅಲಭ್ಯವಾಗಿದೆ. ಎರಡನೆಯ ಹಂತದಲ್ಲಿ ಚಾಮರ ಬೀಸುತ್ತಾ ಅಪ್ಸರೆಯರು ಇವನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಸ್ವರ್ಗದಲ್ಲಿ ಕುಳಿತ್ತಿದ್ದಾನೆ. ಕ್ರಿಸ್ತಶಕ ೧೪ನೇ ಶತಮಾನಕ್ಕೆ ಈ ವೀರಗಲ್ಲು ಸೇರಿದುದಾಗಿದೆ.

ಭೂಮಿಯಲ್ಲಿ ಬಹುತೇಕ ಹುದುಗಿಹೋಗಿರುವ ಮತ್ತೊಂದು ವೀರಗಲ್ಲಿನಲ್ಲಿ ವೀರನು ಬಲಮುಖನಾಗಿ ನಿಂತು ಕೈಗಳಲ್ಲಿ ಖಡ್ಗ ಮತ್ತು ಗುರಾಣಿಗಳನ್ನು ಹಿಡಿದಿದ್ದಾನೆ. ಎರಡನೆಯ ಹಂತದಲ್ಲಿ ಮಡಿದ ಇವನನ್ನು ಅಪ್ಸರೆಯರು ಗಾಯನ ನರ್ತನಗಳ ಜೊತೆ ಸ್ವರ್ಗಕ್ಕೆ ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ಕೊಂಡೊಯ್ಯುತ್ತಿದ್ದಾರೆ. ಮೂರನೆಯ ಹಂತದಲ್ಲಿ ವೀರನು ಅಪ್ಸರೆಯರ ಜೊತೆ ಸ್ವರ್ಗದಲ್ಲಿ ಕುಳಿತಿದ್ದಾನೆ. ಬದಿಯಲ್ಲಿ ಶಿವಲಿಂಗ ಪೂಜಿಸುವ ಶಿವಶರಣರ ಚಿತ್ರವಿದೆ. ಇದೂ ಸಹ ಕ್ರಿಸ್ತಶಕ ೧೪ನೆಯ ಶತಮಾನಕ್ಕೆ ಸೇರುವ ಸ್ಮಾರಕವಾಗಿದ್ದು ಇಲ್ಲಿನ ಎಲ್ಲಾವೀರಗಲ್ಲುಗಳಲ್ಲೂ ಪ್ರಥಮ ಹಂತದ ವೀರನ ಚಿತ್ರಣವನ್ನು ಪ್ರಧಾನವಾದ ಉಬ್ಬುಶಿಲ್ಪವಾಗಿ ಬಿಡಿಸಿರುವುದು ಗಮನಾರ್ಹ. ಒಂದೇ ಪರಂಪರೆಯ ಶಿಲ್ಪಿಗಳಿಂದ ಇವು ಮೂಡಿಬಂದಿರುವುವಾಗಿವೆ.

ಈ ಎಲ್ಲಾ ಆಧಾರಗಳು ಎರಡೂ ಜಿಲ್ಲೆಗಳ ಪ್ರಾಚ್ಯಾವಶೇಷಗಳ ಸಾಲಿಗೆ ಹೊಸ ವಿಷಯಗಳನ್ನು ತಿಳಿಸಿಕೊಡುವಂತವುಗಳಾಗಿವೆ.



ಡಾ. ಎಸ್.ವೈ. ಸೋಮಶೇಖರ*
ಡಾ. ಎಸ್. ತಿಪ್ಪೇಸ್ವಾಮಿ**

## ಚಿತ್ರದುರ್ಗ ತಾಲೂಕು ನೆರೇನಾಳು ಪರಿಸರದ
# ಬೃಹತ್ ಶಿಲಾಯುಗ ಸಮಾಧಿ ನೆಲೆಗಳ ಶೋಧ

ನೆರೇನಾಳು ಗ್ರಾಮವು ಚಿತ್ರದುರ್ಗದಿಂದ ಪೂರ್ವಕ್ಕೆ ಹದಿನೆಂಟು ಕಿ.ಮೀ. ದೂರದಲ್ಲಿದೆ. ಇದರ ಹೆಸರೇ ಸೂಚಿಸುವಂತೆ ಇದೊಂದು ಪ್ರಾಗಿತಿಹಾಸ ಕಾಲದ ಪ್ರಸಿದ್ಧ ಎಡೆಯಾಗಿದೆ. ಇಲ್ಲಿ ನವಶಿಲಾಯುಗದ ಅವಶೇಷಗಳಲ್ಲದೆ ಬೃಹತ್ ಶಿಲಾಯುಗದ ಎರಡು ವಸತಿ ನೆಲೆಗಳು ಹಾಗೂ ಅದೇ ಕಾಲಕ್ಕೆ ಸೇರಿದ ಮೂರು ಬೃಹತ್ ಶಿಲಾಸಮಾಧಿ ನೆಲೆಗಳು ಒಂದೇ ಪರಿಸರದಲ್ಲಿ ತ್ರಿಕೋನಾಕಾರವಾಗಿ ಮೂರು ದಿಕ್ಕುಗಳಲ್ಲಿ ಕಂಡುಬಂದಿವೆ.

ಚಿತ್ರದುರ್ಗ ಜಿಲ್ಲೆಯ ಮಟ್ಟಿಗೆ ಹೇಳುವುದಾದರೆ ಮೂರು ಸಮಾಧಿ ನೆಲೆಗಳು ಹಾಗೂ ಎರಡು ವಸತಿ ನೆಲೆಗಳು ಒಂದೇ ಪರಿಸರದಲ್ಲಿ ಕಂಡುಬಂದಿರುವುದು ಇಲ್ಲಿಯೇ ಎಂಬುದು ಗಮನಾರ್ಹ.

**ನೆಲೆಗಳು :** ಇಲ್ಲಿ ಕಂಡುಬಂದಿರುವ ನೆಲೆಗಳಲ್ಲಿ ಒಂದು ಬೃಹತ್ ಶಿಲಾಯುಗದ ಮಾನವ ತಾನು ಬದುಕುವುದಕ್ಕಾಗಿ ವಾಸ್ತವ್ಯ ಹೂಡಿದ ವಸತಿ ನೆಲೆ; ಇನ್ನೊಂದು ತನ್ನ ಹಿರಿಯರು ಸತ್ತ ಬಳಿಕ ಅವರನ್ನು ಒಂದೆಡೆ ಹೂತು ಸ್ಮಾರಕವಾಗಿ ಕಟ್ಟಿದ ಸಮಾಧಿ ನೆಲೆಗಳು.

**ವಸತಿ ನೆಲೆ :** ಈ ಪರಿಸರದಲ್ಲಿ ಎರಡು ವಸತಿ ನೆಲೆಗಳಿದ್ದು ಅವುಗಳಲ್ಲಿ ಈಗಿನ ನೆರೇನಾಳು ಗ್ರಾಮವು ಒಂದು ನೆಲೆಯಾದರೆ, ಇಲ್ಲಿನ ದೊಡ್ಡಮರಡಿಯ ಬಳಿ ಇನ್ನೊಂದು ವಸತಿ ನೆಲೆಯಿದೆ. ಈ ನೆಲೆಯನ್ನು ಸದ್ಯ ನಡೆಯುತ್ತಿರುವ ರಾಷ್ಟ್ರೀಯ ಹೆದ್ದಾರಿಗೆ ಬೇಕಾದ ಪುಡಿಗಲ್ಲಿನ ಕ್ವಾರಿಯಾಗಿ ಬಳಸಿದ್ದಾರೆ. ಇದರಿಂದ ಪ್ರಾಚೀನ ನೆಲೆಯೊಂದು ಇಂದಿನ ಆಧುನಿಕ ಜಗತ್ತಿನ ದಾಳಿಗೆ ನಲುಗಿ ವಿನಾಶಗೊಳ್ಳುತ್ತಿರುವುದು ದುರದೃಷ್ಟಕರ ಸಂಗತಿಯಾಗಿದೆ.

ನೆರೇನಾಳು ವಸತಿ ನೆಲೆಯಲ್ಲಿ ಬೃಹತ್ ಶಿಲಾಯುಗದ ಅವಶೇಷಗಳಲ್ಲದೆ ನವಶಿಲಾಯುಗ ಕಾಲದ ಮಡಕೆ ಕುಡಿಕೆಗಳು, ಕವಣಿಕಲ್ಲು ಮೊದಲಾದವು ಕಂಡುಬಂದಿವೆ. ಕ್ವಾರಿಯ ದಾಳಿಗೆ ಸಿಕ್ಕು ಹಾಳಾಗುತ್ತಿರುವ ದೊಡ್ಡ ಮರಡಿಯ ನೆಲೆಯಲ್ಲಿ ಬೃಹತ್ ಶಿಲಾಯುಗದ ವಸತಿಯ ಅವಶೇಷಗಳು ಮಡಕೆ ಕುಡಿಕೆಗಳು ಹಾಗೂ ನಂತರ ಕಾಲದ ಶಾತವಾಹನ ಅಥವಾ ಆದಿಚಾರಿತ್ರಿಕ ಕಾಲದ ಅವಶೇಷಗಳು ದೊರೆತಿದ್ದು, ಇದರಿಂದ ಆವರೆಗೂ ಇದು ಮಾನವನ ವಸತಿ ನೆಲೆಯಾಗಿ ಮುಂದುವರಿದಿರುವುದು ವಿಶೇಷ. ಹಾಗೆಯೇ ಇಲ್ಲಿ ಶಾಸನೋಕ್ತ ವೀರಗಲ್ಲೊಂದು ದೊರೆತಿದೆ. ಇದರಿಂದ ಈ ನೆಲೆಯಲ್ಲಿ ಮಾನವನ ವಾಸ್ತವ್ಯವು ಮಧ್ಯಯುಗದವರೆಗೂ ಮುಂದುವರಿದಿದ್ದುದನ್ನು ಗಮನಿಸಬಹುದು.

**ಸಮಾಧಿ ನೆಲೆಗಳು :** ನೆರೇನಾಳು ಪರಿಸರದಲ್ಲಿ ಒಟ್ಟು ಮೂರು ಬೃಹತ್ ಶಿಲಾಸಮಾಧಿ ನೆಲೆಗಳು ಕಂಡುಬಂದಿವೆ. ಇವುಗಳಲ್ಲಿ ನೆರೇನಾಳು ಗ್ರಾಮದ ಈಶಾನ್ಯಕ್ಕೆ ಒಂದು ನೆಲೆಯಿದ್ದರೆ, ದೊಡ್ಡ ಮರಡಿಯ ಬುಡದಲ್ಲಿ ಇನ್ನೊಂದು ಸಮಾಧಿ ನೆಲೆಯಿದೆ. ಮೂರನೆಯ ಸಮಾಧಿ ನೆಲೆಯು ಗ್ರಾಮದ ದಕ್ಷಿಣಕ್ಕೆ ಪಿಲ್ಲೊಲಾವಾ ಶಿಲೆಗೆ ಹೆಸರಾದ ಮರಡಿಹಳ್ಳಿ ರಸ್ತೆಯಲ್ಲಿ ಬರುವ ಹಿರೇಹಳ್ಳದ ಬಲದಂಡೆಯ ಮೇಲಿದೆ. ಈ ನೆಲೆಗಳಲ್ಲಿ ತಲಾ ಐವತ್ತರಿಂದ ಎಪ್ಪತ್ತೈದು ಶಿಲಾ ಸಮಾಧಿಗಳು ಕಂಡುಬರುತ್ತವೆ. ಮೂರು ನೆಲೆಗಳಲ್ಲಿ ಕಂಡುಬರುವ ಶಿಲಾ ಸಮಾಧಿಗಳು ಒಂದೇ ಪ್ರಕಾರದವು. ಇವುಗಳನ್ನು ಶಿಲಾವೃತ್ತ ಮಾದರಿಗಳೆಂದು ಗುರುತಿಸಬಹುದು. ಇವುಗಳನ್ನು ಸ್ಥಳೀಯವಾಗಿ ದೊರೆಯುವ ಚಪ್ಪಡಿಕಲ್ಲು, ಕರಿಕಲ್ಲುಗಳನ್ನು ಬಳಸಿ ನಿರ್ಮಿಸಲಾಗಿದೆ. ಈ ಸಮಾಧಿಗಳನ್ನು ಸ್ಥಳೀಯರು ಪಾಂಡವರಗುತ್ತಿ, ಪಾಂಡವರ ಮಟ್ಟಿ ಹಾಗೂ ಕಲ್ಲುಗುಚ್ಚಿಗಳೆಂದೇ ಕರೆಯುತ್ತಾರೆ.

ಈ ಸಮಾಧಿಗಳ ವ್ಯಾಸ ಸಾಮಾನ್ಯವಾಗಿ ಒಂದೇ ಆಗಿರುವುದು ವಿಶೇಷ. ೧೦೦ ಅಡಿ ವ್ಯಾಸ ಹಾಗೂ ೫೦ ಅಡಿ ಅಗಲವಾಗಿರುವ ಈ ಸಮಾಧಿಗಳಿಗೆ ನಾಲ್ಕೈದು ಅಡಿ ಉದ್ದ, ಮೂರ್‍ನಾಲ್ಕು ಅಡಿ ದಪ್ಪವಾದ ಕಲ್ಲುಗುಂಡುಗಳನ್ನು ಬಳಸಿದ್ದಾರೆ.

* ಅಧ್ಯಾಪಕ, ಪ್ರಾಚೀನ ಇತಿಹಾಸ ಮತ್ತು ಪುರಾತತ್ವ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.
** ಶಾಖಾಧಿಕಾರಿ, ಪದವಿ ಪೂರ್ವ ಶಿಕ್ಷಣ ಇಲಾಖೆ, ಸಂಪಿಗೆ ರಸ್ತೆ, ಮಲ್ಲೇಶ್ವರಂ ೧೮ನೇ ತಿರುವು, ಬೆಂಗಳೂರು.

ಆದರೆ ಇಲ್ಲಿನ ಸಮಾಧಿಗಳಲ್ಲಿ ಕಂಡುಬರುವ ಪ್ರಮುಖ ಅಂಶವೆಂದರೆ ಅತಿ ಚಿಕ್ಕ ಆಳತೆಯಲ್ಲಿರುವ ಸಮಾಧಿಗಳು. ಇವು ಕೇವಲ ೪.೨ ಅಡಿ ವ್ಯಾಸ ಹಾಗೂ ೧೪ ಅಡಿ ಅಗಲವಾಗಿರುವುದು. ಈ ಅಂಶವನ್ನು ಗಮನಿಸಿದರೆ ಇವು ಅಕಾಲಿಕ್ಕೆ ತುತ್ತಾಗಿ ಮರಣ ಹೊಂದಿದ ಮಕ್ಕಳ ಸಮಾಧಿಗಳಿರಬಹುದೆಂಬುದು ಗೊತ್ತಾಗುತ್ತದೆ. ಹಾಗೆಯೇ ಇಲ್ಲಿನ ಸಮಾಧಿಗಳಲ್ಲಿ ಕಂಡುಬರುವ ಇನ್ನೊಂದು ವಿಶಿಷ್ಟ ಸಂಗತಿಯೆಂದರೆ ಓರೇಹಳ್ಳದ ಬಲದಂಡೆಯ ಮೇಲಿರುವ, ತ್ರಿಕೋನಾಕಾರದಲ್ಲಿ ಜೋಡಿಸಿ ನಿರ್ಮಿಸಿದ ಶಿಲಾಸಮಾಧಿಗಳು. ಈ ಬಗೆಯಲ್ಲಿ ಮೂರು ಸಮಾಧಿಗಳನ್ನು ಒಂದೇ ಕಡೆ ತ್ರಿಕೋನಾಕಾರದಲ್ಲಿ ಜೋಡಿಸಿರುವುದು ಅಪರೂಪವೇ ಸರಿ. ಈ ಮೂರು ಸಮಾಧಿಗಳ ಲಕ್ಷಣಗಳನ್ನು ಗಮನಿಸಿದರೆ ಇವು ಅಂದಿನ ಒಂದು ಪ್ರಮುಖ ಕುಟುಂಬದ ಸದಸ್ಯರ ಸಮಾಧಿಗಳಾಗಿಯೂ ಹಾಗೂ ಒಂದೇ ಮನೆತನಕ್ಕೆ ಸೇರಿದ ಸಮಾಧಿಗಳಾಗಿಯೂ ಇರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ.

ತ್ರಿಕೋನಾಕಾರದಲ್ಲಿರುವ ಈ ಸಮಾಧಿಗಳನ್ನು ಗಮನಿಸಿದಾಗ ಕಂಡುಬರುವ ಮತ್ತೊಂದು ಅಂಶ. ಇಲ್ಲಿ ಕಂಡುಬರುವ ಮೂರು ಸಮಾಧಿ ನೆಲೆಗಳು ತ್ರಿಕೋನಾಕಾರದಲ್ಲಿ ಜೋಡಿಸಿದ ಶಿಲಾಸಮಾಧಿಗಳಂತೆ ಮೂರು ದಿಕ್ಕುಗಳಲ್ಲಿರುವುದು ವಿಶಿಷ್ಟವೂ ಕಾಕತಾಳೀಯವೂ ಆಗಿದೆ.

**ಮಡಕೆಯ ಲಕ್ಷಣಗಳು :** ನೆರೇನಾಳು ನೆಲೆಗಳಲ್ಲಿ ಕಂಡುಬಂದಿರುವ ಮಡಕೆ-ಕುಡಿಕೆಗಳು ಕರ್ನಾಟಕದ ಇತರ ಬೃಹತ್ ಶಿಲಾಸಮಾಧಿ ನೆಲೆಗಳಲ್ಲಿ ಕಂಡುಬಂದಿರುವಂತೆ ಕೆಂಪು ಬಣ್ಣದ, ಕಪ್ಪು ಬಣ್ಣದ, ಕಪ್ಪು-ಕೆಂಪು ಬಣ್ಣದ ಮಡಕೆಗಳು ದೊರಕಿವೆ. ಅವುಗಳಲ್ಲಿ ಶವಪಾತ್ರೆಗಳು, ಬೋಗುಣಿಗಳು, ಹೂಜಿ ಮಾದರಿಯ ಪಾತ್ರೆಗಳು, ಮೂರು ಕಾಲಿನ ಮೃಣ್ಮಯ ಪಾತ್ರೆಗಳು ನೀರಿನ ಗುಡಾಣಗಳು ಮೊದಲಾದವು ಇವೆ. ಇವುಗಳಲ್ಲಿ ಅಪರೂಪವೆನ್ನುವಂತೆ ಹಿಡಿಕೆಯುಳ್ಳ ಧೂಪ, ಅಥವಾ ಎಣ್ಣೆ ಹಾಕುವ ಚಮಚದಂತಿರುವ ಒಳಭಾಗ ಕಪ್ಪು ಹಾಗೂ ಹೊರಭಾಗ ಕೆಂಪು ಬಣ್ಣದಿಂದ ಮಾಡಿರುವ ಈ ಮಡಕೆಯು ತುಂಬಾ ವಿಶೇಷವೇ ಹೌದು. ಆದರೆ ಇದು ಏನು ? ಇದರ ಬಳಕೆ ಹೇಗೆಂಬುದನ್ನು ಅರ್ಥ



ಮಾಡಿಕೊಳ್ಳಬೇಕಾಗಿದೆ. ಹಾಗಿದ್ದೂ ಈ ಚಮಚದಂತಿರುವ ಮಡಕೆಯು ಸಮಾಧಿಯಲ್ಲಿ ಗೋಚರಿಸಿರುವುದರಿಂದ ವಿಶೇಷ ಧಾರ್ಮಿಕ ಆಚರಣೆಗಳಿಗೆ ಬಳಸಿರುವ ಸಾಧ್ಯತೆಯನ್ನು ತಳ್ಳಿಹಾಕುವಂತಿಲ್ಲ. ಅದೇನೇ ಇದ್ದರೂ ಈ ಬಗ್ಗೆ ಹೆಚ್ಚಿನ ಸಂಶೋಧನೆ ಅಗತ್ಯವಾಗಿದೆ.

ಒಟ್ಟಿನಲ್ಲಿ ನೆರೇನಾಳು ಪರಿಸರದಲ್ಲಿ ಕಂಡುಬರುವ ಬೃಹತ್ ಶಿಲಾಯುಗದ ಜನರ ವಾಸ್ತವ್ಯ ಹಾಗೂ ಸಮಾಧಿ ನೆಲೆಗಳಿಂದ ಈ ಪರಿಸರದ ಅಂದಿನ ಜನಜೀವನವನ್ನು ಅರಿಯಲು ಸಾಧ್ಯವಾಗಿದೆ. ಹಾಗೆಯೇ ಇದುವರೆಗೆ ಸಮಾಧಿ ನೆಲೆಗಳು ಹೆಚ್ಚಾಗಿ ಕರ್ನಾಟಕದಾದ್ಯಂತ ಗೋಚರಿಸಿವೆ. ಆದರೆ ವಸತಿ ನೆಲೆಗಳು ತುಂಬಾ ವಿರಳ ಹಾಗೂ ಅಪರೂಪ ವೆನ್ನುವಂತೆ ಕಂಡುಬಂದಿವೆ. ಈ ಹಿನ್ನೆಲೆಯಲ್ಲಿ ಸಮಾಧಿ ಮತ್ತು ವಸತಿ ನೆಲೆಗಳು ಒಂದೇ ಕಡೆ ಅದರಲ್ಲೂ ಎರಡು ವಸತಿ ನೆಲೆಗಳು, ಮೂರು ಸಮಾಧಿ ನೆಲೆಗಳು ಒಂದೇ ಪರಿಸರದಲ್ಲಿ ಕಂಡುಬರುವುದರಿಂದ ಬೃಹತ್ ಶಿಲಾಯುಗದ ಮಾನವನ ಚಲನವಲನ, ಜನಜೀವನ, ಜೀವನಕ್ರಮ, ನಂಬಿಕೆ, ಆಚರಣೆ ಹಾಗೂ ತಂತ್ರಜ್ಞಾನವನ್ನು ಅರಿಯಲು ಹೆಚ್ಚಿನ ಅವಕಾಶ ಒದಗಿಸಿದಂತಾಗಿದೆ. ಹಾಗೆಯೇ ತ್ರಿಕೋನಾಕಾರದಲ್ಲಿ ಜೋಡಿಸಿ ನಿರ್ಮಿಸಿರುವ ಸಮಾಧಿಗಳು, ತ್ರಿಕೋನಾಕಾರದಲ್ಲಿ ಮೂರು ದಿಕ್ಕುಗಳಲ್ಲಿರುವ ಸಮಾಧಿ ನೆಲೆಗಳು ಹಾಗೂ ಅಕಾಲಕ್ಕೆ ತುತ್ತಾಗಿ ಸತ್ತ ಮಕ್ಕಳಿಗಾಗಿಯೇ ಕಟ್ಟಲಾದ ಚಿಕ್ಕ ಚಿಕ್ಕ ಸಮಾಧಿಗಳು ಸ್ಪಷ್ಟವಾಗಿ ಗೋಚರಿಸುತ್ತಿರುವುದು ನೆರೇನಾಳು ಪರಿಸರದ ವೈಶಿಷ್ಟ್ಯವಾಗಿದೆ.



ಅಶೋಕ ಕಂದಗಲ್ಲ*

# ಬೇವೂರ ಗ್ರಾಮದ ಪ್ರಾಚ್ಯಾವಶೇಷಗಳು

ಶಾಸನೋಕ್ತ ಪ್ರಾಚೀನ ಕಿರಿಯಬೇವೂರ ಗ್ರಾಮ ಬಾಗಲಕೋಟೆಯಿಂದ ೨೫ ಕಿ.ಮೀ. ದೂರದಲ್ಲಿರುವ ಬೇವೂರು ಎನಿಸಿದೆ. ಈ ಗ್ರಾಮ ಈಗಾಗಲೇ ಪ್ರಕಟಿತ ೨ ಶಾಸನಗಳನ್ನು ಹೊಂದಿದ್ದು, ಮೊದಲನೆಯದು ಕಲ್ಯಾಣ ಚಾಲುಕ್ಯ ದೊರೆ ಮೊದಲನೇ ಸೋಮೇಶ್ವರ ಕಾಲದ್ದು, ಇದರಲ್ಲಿ ಮಹಾಮಂಡಳೇಶ್ವರ ನೊಳಂಬಾಧಿರಾಜನಿಂದ ಕಿರಿಯ ಬೇವೂರ ದೇವಾಲಯಕ್ಕೆ ಭೂಮಿಯನ್ನು ದಾನ ಬಿಟ್ಟ ವಿಷಯುವಿದೆ.[೧] ಎರಡನೆಯದು ವೀರಗಲ್ಲು ಶಾಸನವಾಗಿದ್ದು ಲಿಪಿಗಳ ಆಧಾರದ ಮೇಲೆ ಕ್ರಿ.ಶ. ಹದಿನಾಲ್ಕನೇ ಶತಮಾನದಾಗಿದ್ದು, ಇದರಲ್ಲಿ ನಾರಣ್ಣನ ಮರಣ ಮತ್ತು ಅವನ ಸ್ಮರಣಾರ್ಥವಾಗಿ ನಿಲ್ಲಿಸಿದ ಸ್ಮಾರಕ ಶಿಲೆಯಾಗಿದೆ.[೨] ಈ ಗ್ರಾಮದಲ್ಲಿ ಸಂಗಮೇಶ್ವರ ದೇವಾಲಯ, ಕಾಳಿಕಾ ದೇವಾಲಯ, ಶಿವದೇವಾಲಯಗಳು ಸುಸ್ಥಿಯಲ್ಲಿದ್ದು ಇವುಗಳು ಕಲ್ಯಾಣ ಚಾಲುಕ್ಯರ ದೇವಾಲಯಗಳ ಲಕ್ಷಣವನ್ನು ಹೊಂದಿವೆ.[೩]

ಈ ಮೂರು ವೀರಗಲ್ಲು, ಎರಡು ಮಹಿಷಾಸುರ ಮರ್ದಿನಿ ಶಿಲ್ಪ, ಎರಡು ನಂದಿ ವಿಗ್ರಹಗಳು, ಗಣೇಶ, ಶಿವಲಿಂಗಗಳು, ಭೈರವನ ಶಿಲ್ಪ, ತ್ರಿಶೂಲದ ಕಲ್ಲು ಅನೇಕ ನಾಗಶಿಲ್ಪಗಳಿದ್ದು ಇವುಗಳು ಕ್ರಿ.ಶ. ಹತ್ತನೇ ಶತಮಾನದಿಂದ ಹದಿನಾಲ್ಕನೇ ಶತಮಾನದಲ್ಲಿ ಅವು ರಚನೆಯಾದವುಗಳಾಗಿವೆ.



## ಮಾಸ್ತಿ ಕಲ್ಲು

ಈಶ್ವರ ದೇವಾಲಯದ ಪಕ್ಕದಲ್ಲಿರುವ ಈ ಮಾಸ್ತಿ ಕಲ್ಲು ನಾಲ್ಕು ಅಡಿ ಎತ್ತರ ಎರಡು ಅಡಿ ಅಗಲವಾಗಿದ್ದು, ಎರಡು ಪಟ್ಟಿಕೆಯನ್ನು ಹೊಂದಿದೆ. ಮೊದಲನೇ ಪಟ್ಟಿಕೆಯಲ್ಲಿ ಮಧ್ಯದಲ್ಲಿ ವೀರ ನಿಂತಿದ್ದು ಆತನ ಎಡ ಮತ್ತು ಬಲ ಇಬ್ಬರು ಸತಿಯರು ನಿಂತಿದ್ದಾರೆ. ಇಂತಹ ಮಾಸ್ತಿ ಕಲ್ಲುಗಳಲ್ಲಿ ವೀರನ ಜೊತೆ ಪ್ರಾಣತ್ಯಾಗ ಮಾಡಿದ ಅವನ ಇಬ್ಬರೂ ಸತಿಯರನ್ನು ಚಿತ್ತಿಸುತ್ತಾರೆ.[೪] ಮಧ್ಯದಲ್ಲಿ ನಿಂತ ವೀರನು ಟೊಂಕದಲ್ಲಿ ಖಡ್ಗವನ್ನು ಧರಿಸಿದ್ದು ಬಲಗೈಯನ್ನು ಅದೇ ಖಡ್ಗದ ಮೇಲೆ ಇಟ್ಟಿದ್ದಾನೆ. ವೀರನು ಕೊರಳಹಾರ, ಕಿವಿಯೋಲೆ, ತೋಳ್ಬಂದಿ ಕೈಕಡಗವನ್ನು ಧರಿಸಿದ್ದು ಕೇಶವಿನ್ಯಾಸಗೊಳಿಸಿ ತಲೆಗಟ್ಟನ್ನು ಕಟ್ಟಿದ್ದಾನೆ. ಇಬ್ಬರೂ ಸತಿಯರು ತಮ್ಮ ಬಲಗೈಯನ್ನು ಮೇಲಕ್ಕೆತ್ತಿ ಎತ್ತಿದ್ದು, ವೀರನನ್ನು ಸತಿಯರ ಸರಿಸಮಾನಾಗಿಯೇ ಚಿತ್ರಿಸಲಾಗಿದೆ. ಇಬ್ಬರೂ ಸತಿಯರ ವೇಷ ಭೂಷಣಗಳು ಒಂದೇ ರೀತಿಯಲ್ಲಿದ್ದು, ಒಬ್ಬಳು ಕೂದಲ ಗಂಟನ್ನು ಎಡಭಾಗಕ್ಕೆ ಬರುವಂತೆ ಕಟ್ಟಿದ್ದರೆ, ಇನ್ನೊಬ್ಬಳು ಬಲಭಾಗಕ್ಕೆ ಬರುವಂತ ಕಟ್ಟಿದ್ದಾಳೆ. ಒಬ್ಬ ಸ್ತ್ರೀ ಎಡಗೈಯಲ್ಲಿ ಲಿಂಬೆ ಹಣ್ಣನ್ನು ಹಿಡಿದಿದ್ದು

* ಇತಿಹಾಸ ಉಪನ್ಯಾಸಕರು, ಶಂಕ್ರಪ್ಪ ಸಕ್ರಿ ಪದವಿ ಪೂರ್ವ ಮಹಾವಿದ್ಯಾಲಯ, ಬಾಗಲಕೋಟ.

ಮತ್ತೊಬ್ಬನ ಕೈ ತ್ರುಟಿತಗೊಂಡಿದೆ. ಇಬ್ಬರೂ ಸತಿಯರು ಸಮಾನವಾದ ಆಭರಣಗಳನ್ನು ಧರಿಸಿದ್ದು ಕಿವಿಯೋಲೆ, ಕೊರಳಹಾರ, ಬಳೆ, ತೋಳ್ಬಂದಿಯನ್ನು ಧರಿಸಿದ್ದಾರೆ.

ಮೇಲ್ಭಾಗದ ಪಟ್ಟಿಕೆಯ ಮಧ್ಯದಲ್ಲಿ ಶಿವಲಿಂಗವಿದ್ದು, ಶಿವಲಿಂಗುವಿನ ಹಿಂದೆ ಮತ್ತು ಮುಂದೆ ತಲೆಗೆ ಪೇಟ ಧರಿಸಿದ ವ್ಯಕ್ತಿಗಳು ಕೈ ಮುಗಿದು ನಿಂತಿದ್ದು ಒಬ್ಬನ ಹಿಂದೆ ಕರುವಿಗೆ ಹಾಲುಣಿಸುತ್ತಿರುವ ಪಸುವನ್ನು ಕಾಣುತ್ತೇವೆ. ಮೇಲ್ಭಾಗದ ಎಡ ಬಲದಲ್ಲಿ ಸೂರ್ಯ-ಚಂದ್ರರನ್ನು ಕಾಣಬಹುದು.

ಇದೇ ಮಾಸ್ತಿಕಲ್ಲಿನ ಪಟ್ಟಿಕೆಯಲ್ಲಿ ಕ್ರಿ.ಶ. ಹನ್ನೆರಡನೇ ಶತಮಾನಕ್ಕೆ ಸಂಬಂಧಿಸಿದ ಲಿಪಿಯಿದ್ದು ತ್ರುಟಿತಗೊಂಡಿದೆ. ಒಂದು ಸಾಲು ಮಾತ್ರ ತಿಳಿಯುತ್ತದೆ. ಇದು ಅಪ್ರಕಟಿತವಾಗಿದ್ದು, ಈ ಶಾಸನದ ಪಡಿಯಚ್ಚನ್ನು ತಯಾರಿಸಿದ್ದು ಸಾಲು ಹೀಗಿದೆ:



(ನ)ಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರ..

ಇದು ಕಲ್ಯಾಣ ಚಾಲುಕ್ಯರ ಕಾಲದಿಂದಲೂ ಶಾಸನಗಳಲ್ಲಿನ ಆರಂಭಿಕ ಶ್ಲೋಕವಾಗಿದೆ. ಒಟ್ಟಾರೆ ಈ



ಮಾಸ್ತಿಶಿಲ್ಪವು ಹನ್ನೆರಡನೇ ಶತಮಾನಕ್ಕೆ ಸಂಬಂಧಿಸಿದ್ದಾಗಿದ್ದು ಇದರ ಲಿಪಿಯ ಭಾಗ ತ್ರುಟಿತವಾಗಿರುವದರಿಂದ ಹೆಚ್ಚಿನ ಮಾಹಿತಿ ಲಭ್ಯವಾಗುವದಿಲ್ಲ.

## ವೀರಗಲ್ಲುಗಳು

ಇಲ್ಲಿ ಮೂರು ವೀರಗಲ್ಲುಗಳಿದ್ದು, ಪರ್ವತಪ್ಪನ ದೇವಾಲಯದ ಗೋಡೆಯಲ್ಲಿರುವ ವೀರಗಲ್ಲು ಶಾಸನವಿದ್ದು, ಇದು ಹದಿನಾಲ್ಕನೇ ಶತಮಾನದ ಲಿಪಿಯನ್ನು ಹೊಂದಿದೆ. ಮೂರು ಅಡಿ ಎತ್ತರದ ಕಪ್ಪು ಕಲ್ಲಿನಲ್ಲಿ ಕಂಡರಿಸಲಾಗಿದೆ. ವೀರನು ಬಿಲ್ಲಿನ ಮೂಲಕ ಬಾಣವನ್ನು ಬಿಡುತ್ತಿರುವ ದೃಶ್ಯವಿದೆ. ವೀರನು ವಿವಿಧ ಆಭರಣಗಳನ್ನು ಧರಿಸಿದ್ದು, ಶಿಲ್ಪಕ್ಕೆ ಎಣ್ಣೆಯನ್ನು ಹಾಕುತ್ತಿರುವದರಿಂದ ಸ್ಪಷ್ಟವಾಗಿ ಗೋಚರಿಸುವದಿಲ್ಲ.

## ದುರ್ಗಾ ದೇವಾಲಯದ ಮುಂಭಾಗದ ವೀರಗಲ್ಲು

ಇದು ಕಪ್ಪು ಮಿಶ್ರಿತ ನೀಲಿ ಛಾಯೆಯ ಕಲ್ಲಿನಲ್ಲಿ ಕಂಡಿರಿಸಿದ್ದು ನಾಲ್ಕು ಅಡಿ ಎತ್ತದಲ್ಲಿದೆ. ಇದು ತುರುಗೋಳ್



ಶಿಲ್ಪವಾಗಿದ್ದು, ಶತ್ರುಗಳು ದನಗಳನ್ನು ಅಪಹರಿಸಿದಾಗ ಆ ದನಗಳನ್ನು ರಕ್ಷಿಸಲು ವೀರರು ಪ್ರಾಣವನ್ನು ಲೆಕ್ಕಿಸದೆ ಹೋರಾಡುತ್ತಿದ್ದರು. ಅಂತಹ ದನಗಳನ್ನು ರಕ್ಷಿಸಿ ವೀರಮರಣವನ್ನಪ್ಪಿದ ವೀರನ ಸ್ಮರಣಾರ್ಥವಾಗಿ ನಿಲ್ಲಿಸಿದ ಸ್ಮಾರಕ ಶಿಲೆ ಇದಾಗಿದೆ. ಇದು ಮೂರು ಪಟ್ಟಿಕೆಯನ್ನು ಹೊಂದಿದ್ದು ಮೊದಲನೇ ಪಟ್ಟಿಕೆಯಲ್ಲಿ ವೀರನು ಶತ್ರುಗಳೊಂದಿಗೆ ಹೋರಾಡುತ್ತಿದ್ದು, ಆತನ ಹಿಂದೆ ದನಗಳ ಚಿತ್ರವನ್ನು ಬಿಡಿಸಲಾಗಿದೆ. ವೀರನ ಕಾಲ ಅಡಿಯಲ್ಲಿ ಸತ್ತು ಬಿದ್ದ ವೈರಿಯನ್ನು ಕಾಣಬಹುದು. ಎರಡನೇ ಪಟ್ಟಿಕೆಯಲ್ಲಿ ವೀರನು ಮಂಟಪದಲ್ಲಿ ಕುಳಿತಿದ್ದು, ದೇವಲೋಕದ ಅಪ್ಸರೆಯರು ಚಾಮರವನ್ನು ಬೀಸುತ್ತಾ ಆತನನ್ನು ಸ್ವರ್ಗಕ್ಕೆ ಕೊಂಡೊಯ್ಯುತ್ತಿರುವ ದೃಶ್ಯವಿದೆ. ಮೂರನೇ ಪಟ್ಟಿಕೆಯಲ್ಲಿ ಶಿವಲಿಂಗವಿದ್ದು ವೀರನು ಶಿವಲಿಂಗದ ಬಳಿ ಕುಳಿತಿದ್ದಾನೆ. ಮತ್ತೊಬ್ಬನು ಶಿವಲಿಂಗದ ಮುಂಭಾಗದಲ್ಲಿ ನಿಂತಿದ್ದು ಕೆಳಭಾಗದಲ್ಲಿ ನಂದಿ ಇದೆ. ಮೇಲ್ಭಾಗದಲ್ಲಿ ಸೂರ್ಯ-ಚಂದ್ರರನ್ನು ಚಿತ್ರಿಸಿದ್ದಾರೆ. ಒಟ್ಟಿನಲ್ಲಿ ಇದು ತುರುಗೋಳ್ ವೀರಗಲ್ಲಾಗಿದ್ದು, ವೀರನು ದನಗಳನ್ನು ರಕ್ಷಿಸುವದಕ್ಕಾಗಿ ತನ್ನ ಪ್ರಾಣವನ್ನು ಲೆಕ್ಕಿಸದೆ ಹೋರಾಡಿ ವೀರಮರಣವನ್ನಪ್ಪಿದ ಘಟನೆಯನ್ನು ಉಬ್ಬುಶಿಲ್ಪಗಳ ಮೂಲಕ ಬಿಂಬಿಸಲಾಗಿದೆ.

**ಮಲ್ಲಿಕಾರ್ಜುನ ದೇವಾಲಯದ ಮುಂಭಾಗದ ವೀರಗಲ್ಲು**

ಇದೇ ಗ್ರಾಮದಲ್ಲಿರುವ ಮಲ್ಲಿಕಾರ್ಜುನ ದೇವಾಲಯವು ಹೊಸದಾಗಿ ನಿರ್ಮಿಸಲಾಗಿದ್ದು, ಗರ್ಭಗೃಹದಲ್ಲಿ ಮೂರು ಅಡಿ ಎತ್ತರ ಎರಡು ಅಡಿ ಅಗಲವಾದ ಕಲ್ಲಿನಲ್ಲಿ ತ್ರಿಶೂಲವನ್ನು ಚಿತ್ರಿಸಿದ್ದು, ತ್ರಿಶೂಲದ ಅಡಿಯಲ್ಲಿ ಪುಷ್ಪಗಳ ದಳಗಳನ್ನು ಕಾಣುತ್ತೇವೆ. ಇದು ಕೆಂಪು ಮಿಶ್ರಿತ ಉಸುಕು ಕಲ್ಲಿನಲ್ಲಿದೆ.

ಇದೇ ದೇವಾಲಯದ ಮುಂಭಾಗದ ಕಟ್ಟೆಯ ಮೇಲೆ ತ್ರುಟಿತವಾದ ವೀರಗಲ್ಲಿದ್ದು, ಸ್ಥಳೀಯರು ಇದನ್ನು ಲವ-ಕುಶರ ಕಲ್ಲು ಎಂದು ಕರೆಯುತ್ತಾರೆ. ಇದರ ಮೇಲ್ಭಾಗ ತ್ರುಟಿತವಾಗಿದ್ದು, ವೀರನ ಎರಡು ಪಾದಗಳು ಮಾತ್ರ ಕಾಣುತ್ತವೆ. ಕೆಳಪಟ್ಟಿಕೆಯಲ್ಲಿ ಕುದುರೆ ಮತ್ತು ಎರಡು ಜನ ವೀರರನ್ನು ಕಾಣುತ್ತೇವೆ. ಕುದುರೆ ಮುಂದಿನ ಎಡಗಾಲನ್ನು ಎತ್ತಿದ್ದು ಒಬ್ಬ ವೀರನು ಕುದುರೆ ಎದುರಿಗೆ ಬಿಲ್ಲನ್ನು ಹಿಡಿದು ನಿಂತಿದ್ದಾನೆ. ಕುದುರೆ ಯುದ್ಧಕ್ಕೆ ಸನ್ನದ್ಧವಾದ ರೀತಿಯಲ್ಲಿದೆ. ಆ ವೀರನ ಮುಂಭಾಗದಲ್ಲಿ ಮತ್ತೊಬ್ಬ ವೀರ ನಿಂತಿದ್ದು ಎಡಗೈಯಲ್ಲಿ ಬಿಲ್ಲನ್ನು ಹಿಡಿದಿದ್ದರೆ, ಟೊಂಕದಲ್ಲಿ ಖಡ್ಗವನ್ನು ಧರಿಸಿದ್ದು ಬಲಗೈಯನ್ನು ಅದರ ಮೇಲೆ ಇಟ್ಟಿದ್ದಾನೆ. ಬಳಪದ ಕಲ್ಲಿನಲ್ಲಿ ಇದು ರಚನೆಯಾಗಿದ್ದು ತ್ರುಟಿತವಾಗಿರುವುದರಿಂದ ಸ್ಪಷ್ಟ ಮಾಹಿತಿ ಲಭ್ಯವಾಗುವದಿಲ್ಲ.



ಒಟ್ಟಾರೆ ಇಲ್ಲಿನ ಮೂರು ವೀರಗಲ್ಲು, ಒಂದು ಮಾಸ್ತಿಕಲ್ಲು ಈ ಗ್ರಾಮ ವೀರರ ನೆಲೆವಿಡಾಗಿತ್ತೆಂಬ ಮಾಹಿತಿಯನ್ನು ತಿಳಿಸುತ್ತದೆ.

**ಗಣಪತಿ**

ರುದ್ರನ ಆಕಾಶಭಾಗದ ಸಂಕೇತವಾದ ಗಣಪತಿಯು ದ್ವಿಭಂಗಿಯಲ್ಲಿದ್ದು, ಸುಮಾರು ಮೂರು ಅಡಿ ಎತ್ತರವಿದ್ದಾನೆ. ಕೈಗಳಲ್ಲಿ ತ್ರಿಶೂಲ, ಅಂಕುಶ, ಮೋದಕವನ್ನು ಹಿಡಿದಿದ್ದಾನೆ. ಶಿಲ್ಪ ತ್ರುಟಿತವಾಗಿರುವದರಿಂದ ಯಜ್ಞೋಪವೀತ ಉದರಬಂಧ



ಕಾಣಿಸುವದಿಲ್ಲ. ಕಿರೀಟ ಮುಕುಟವನ್ನು ಧರಿಸಿದ್ದು ಇದು ಕೆಂಪು ಮಿಶ್ರಿತ ಉಸುಕು ಶಿಲೆಯಲ್ಲಿ ರಚನೆಯಾಗಿರುವದರಿಂದ ಹೆಚ್ಚಿನ ಅಲಂಕರಣೆಯನ್ನು ಕಾಣುವದಿಲ್ಲ. ಇದು ಹತ್ತನೇ ಶತಮಾನದ್ದಾಗಿದೆ.

## ನಾಗಶಿಲ್ಪ

ನಾಗ ಆರಾಧನೆ ಸಾಕಷ್ಟು ಪ್ರಾಚೀನತೆಯನ್ನು ಹೊಂದಿದ್ದು, ಈ ನಾಗನನ್ನು ಶೈವ, ವೈಷ್ಣವ, ಜೈನ ಮತ್ತು ಬೌದ್ಧ ಧರ್ಮದೊಂದಿಗೆ ಕಾಣುತ್ತೇವೆ. ಈ ಗ್ರಾಮದಲ್ಲಿ ಅನೇಕ ನಾಗಶಿಲ್ಪಗಳಿದ್ದು, ಅವುಗಳಲ್ಲಿ ಒಂದು ನಾಗ ಹೆಡೆ ಬಿಚ್ಚಿ ನಿಂತಿದ್ದು, ಏಳು ಹೆಡೆಗಳನ್ನು ಕಾಣುತ್ತೇವೆ. ಇದು ಮೂರು ಅಡಿ ಎತ್ತರವಾಗಿದ್ದು, ಕೆಂಪು ಉಸುಕು ಮಿಶ್ರಿತ ಕಲ್ಲಿನದ್ದಾಗಿದೆ. ಇಲ್ಲಿ ಇನ್ನು ಅನೇಕ ನಾಗಶಿಲ್ಪಗಳಿದ್ದು, ಒಂದು ಮತ್ತು ಎರಡು ಹೆಡೆಗಳನ್ನು ಹೊಂದಿದ್ದು, ಎರಡು ನಾಗಗಳು ಒಂದಕ್ಕೊಂದು ತಳಕು ಹಾಕಿದ ರೀತಿಯಲ್ಲಿ ಕಂಡರಿಸಲಾಗಿದೆ.

## ನಂದಿ ವಿಗ್ರಹಗಳು

ದೇವಾಲಯಗಳಲ್ಲಿ ನಂದಿಯನ್ನು ಲಿಂಗದ ಮುಂಭಾಗ ದಲ್ಲಿ, ಅಂತರಾಳ ಅಥವಾ ನವರಂಗದಲ್ಲಿ ಪ್ರತಿಷ್ಠಾಪಿಸುತ್ತಾರೆ. ಪ್ರತ್ಯೇಕ ಮಂಟಪಗಳನ್ನು ಸ್ಥಾಪಿಸಿ ನಂದಿಯನ್ನು ಪ್ರತಿಷ್ಠಾಪಿಸಿದ್ದನ್ನು ಕಾಣುತ್ತೇವೆ. ಈ ಗ್ರಾಮದಲ್ಲಿ ಐದಕ್ಕೂ ಹೆಚ್ಚು ನಂದಿ ವಿಗ್ರಹಗಳಿದ್ದು, ಅವು ಕೆಂಪು ಉಸುಕು ಮಿಶ್ರಿತ ಕಲ್ಲು ಮತ್ತು ಕಪ್ಪು ಮಿಶ್ರಿತ ನೀಲಿ ಛಾಯೆಯ ಕಲ್ಲಿನಲ್ಲಿವೆ. ಇವು ತ್ರುಟಿತಗೊಂಡಿದ್ದು, ಕೊರಳಲ್ಲಿ ಗಂಟೆಯ ಸರ



ಮುಂತಾದ ಅಲಂಕಾರವನ್ನು ಹೊಂದಿದೆ. ಒಂದು ನಂದಿಯು ಗಂಟೆಯ ಸರ ಮತ್ತು ಹಣೆಪಟ್ಟಿಯ ಅಲಂಕರಣೆಯನ್ನು ಹೊಂದಿದ್ದು, ಇವು ಹತ್ತು ಮತ್ತು ಹನ್ನೆರಡನೇ ಶತಮಾನಕ್ಕೆ ಸೇರಿವೆ.

## ಲಿಂಗು

ಈಶ್ವರನ ಪ್ರತಿರೂಪವಾದ ಲಿಂಗುವನ್ನು ಗರ್ಭಗೃಹದಲ್ಲಿ ಪಾಣಿ ಪೀಠದಲ್ಲಿ ಪ್ರತಿಷ್ಠಾಪಿಸಿದ್ದು, ಪೀಠ ಸೇರಿದಂತೆ ಸುಮಾರು ನಾಲ್ಕು ಅಡಿ ಎತ್ತರವಾಗಿವೆ. ಇವು ಕಪ್ಪು ಮಿಶ್ರಿತ ನೀಲಿ



ಛಾಯೆಯ ಕಲ್ಲಿನಲ್ಲಿ ರಚನೆಯಾಗಿದ್ದು, ಅಷ್ಟಬಂಧವನ್ನು ಹೊಂದಿವೆ. ಈ ಗ್ರಾಮದಲ್ಲಿ ಐದು ಲಿಂಗುಗಳನ್ನು ಕಾಣುತ್ತಿದ್ದು, ಸ್ಥಳೀಯರು ಇಲ್ಲಿ ಪಂಚ ಲಿಂಗುಗಳನ್ನು ಪ್ರತಿಷ್ಠಾಪಿಸಲಾಗಿತ್ತೆಂದು ಹೇಳುತ್ತಾರೆ.

## ಮಹಿಷಾಸುರ ಮರ್ದಿನಿ ಶಿಲ್ಪಗಳು

ಈ ಗ್ರಾಮದಲ್ಲಿ ಮೂರು ಮಹಿಷಾಸುರ ಮರ್ದಿನಿಯರ ಶಿಲ್ಪಗಳಿದ್ದು, ಒಂದು ಸಂಗಮೇಶ್ವರ ದೇವಾಲಯದ ನವರಂಗದಲ್ಲಿದೆ. ಇನ್ನೊಂದು ಕಾಳಿಕಾ ದೇವಾಲಯದ ಮುಂಭಾಗದ ಮನೆಯ ಹಿಂಭಾಗದಲ್ಲಿ ಆ ಕಲ್ಲು ಬಿದ್ದಿದ್ದು, ಅದು ಕಪ್ಪು ಮಿಶ್ರಿತ ನೀಲಿ ಛಾಯೆಯದಾಗಿದೆ. ದೇವಿಯು ಎಂಟು ಕೈಗಳನ್ನು ಹೊಂದಿದ್ದು, ಎಡಗಾಲನ್ನು ನೆಲಕ್ಕೂರಿ ಬಲಗಾಲಿನಿಂದ ಕೋಣದ ರುಂಡವನ್ನು ತುಳಿದು ತ್ರಿಶೂಲದಿಂದ ತಿವಿಯುತ್ತಿದ್ದಾಳೆ. ದೇವಿಯು ಕೈಗಳಲ್ಲಿ ಶಂಖ, ಚಕ್ರ, ಬಿಲ್ಲು, ಖಡ್ಗಗಳನ್ನು ಹಿಡಿದಿದ್ದಾಳೆ. ಇನ್ನೆರಡು ಕೈಗಳು ಅಸ್ಪಷ್ಟವಾಗಿವೆ. ಇನ್ನೊಂದು ಶಿಲ್ಪವು ಊರಿನ ಮಧ್ಯಭಾಗದ ರಸ್ತೆಯ ಬದಿಗಿದ್ದು, ಅದು ಕಚ್ಚಾ ಕೆತ್ತನೆಯನ್ನು ಹೊಂದಿದ್ದು, ದೇವಿಯು ಕೋಣ (ಮಹಿಷ)ವನ್ನು ಕಾಲಿನಿಂದಲ್ಲದೆ, ಕೈಯಲ್ಲಿನ ತ್ರಿಶೂಲದಿಂದಲೂ ತಿವಿಯುತ್ತಿದ್ದಾಳೆ. ಇದು

ನಂತರದ ಕಾಲದ ಶಿಲ್ಪವಾಗಿದ್ದು, ಅಷ್ಟೊಂದು ಅಲಂಕರಣೆಯನ್ನು ಹೊಂದಿರುವದಿಲ್ಲ.

## ಭೈರವನ ಶಿಲ್ಪ

ಇದೇ ಗ್ರಾಮದ ಪರ್ವತಪ್ಪನ ದೇವಾಲಯದ ಮುಂಭಾಗದ ಕಟ್ಟೆಯ ಮೇಲಿರುವ ಭೈರವನ ಶಿಲ್ಪವು



ಒಂದೂವರೆ ಅಡಿ ಎತ್ತರದಲ್ಲಿದ್ದು, ಕೆಂಪು ಮಿಶ್ರಿತ ಉಸುಕು ಶಿಲೆಯಲ್ಲಿ ರಚನೆಯಾಗಿದ್ದು, ತ್ರುಟಿತಗೊಂಡಿದೆ. ಭೈರವನು ಕೈಯಲ್ಲಿ ಢಮರು, ತ್ರಿಶೂಲ ಮುಂತಾದ ಆಭರಣಗಳನ್ನು ಹಿಡಿದಿದ್ದು, ತ್ರುಟಿತಗೊಂಡಿರುವದರಿಂದ ಹೆಚ್ಚಿನ ಅಲಂಕರಣೆ ಕಾಣುವದಿಲ್ಲ.

## ಪ್ರಾಚೀನ ಭಾವಿ

ಈ ಗ್ರಾಮದ ದೇಗುಲದ ಎಡಭಾಗದಲ್ಲಿ ಪ್ರಾಚೀನ ಭಾವಿ ಒಂದಿದ್ದು, ಸುಮಾರು ನಲವತ್ತು ಅಡಿ ಆಳದಲ್ಲಿದೆ.



ಕೆಂಪು ಕಲ್ಲಿನಿಂದ ಭಾವಿಯ ಸುತ್ತಲೂ ಗೋಡೆಯನ್ನು ಕಟ್ಟಲಾಗಿದ್ದು, ಆಯತಾಕಾರದಲ್ಲಿದೆ. ಇಂದು ಹೂಳು ತುಂಬಿದ್ದು, ಸ್ಥಳೀಯರು ಕಸವನ್ನು ಚಲ್ಲುತ್ತಾ ನಿರ್ಲಕ್ಷಿಸಿದ್ದಾರೆ. ಭಾವಿಯಲ್ಲಿ ಇಳಿದು ನೀರು ತುಂಬಲು ಮೆಟ್ಟಿಲುಗಳನ್ನು ಕಾಣುತ್ತೇವೆ.

ಒಟ್ಟಿನಲ್ಲಿ ಈ ಗ್ರಾಮವು ಹತ್ತರಿಂದ ಹದಿನಾಲ್ಕನೇ ಶತಮಾನದ ಕಾಲದಲ್ಲಿ ಒಂದು ಪ್ರಸಿದ್ಧ ಊರಾಗಿತ್ತು, ಇಲ್ಲಿ ಅನೇಕ ದೇವಾಲಯಗಳ ಮತ್ತು ಮೂರ್ತಿಶಿಲ್ಪಗಳ ನಿರ್ಮಾಣವನ್ನು ಕಾಣುತ್ತೇವೆ.

(ಕ್ಷೇತ್ರ ಕಾರ್ಯದಲ್ಲಿ ಸಹಾಯ ಮಾಡಿದ ಸ್ನೇಹಿತರಾದ ಡಾ. ಜಿ.ಐ. ನಂದಿಕೋಲುಮಠ, ಪ್ರೊ. ಎಸ್.ಎಸ್. ಆದಾಪೂರ, ಬಸವರಾಜ, ಹೇರಕಲ್ಲ, ಪ್ರೊ. ಆರ್.ಐ. ಗೌಡರ ಇವರಿಗೆ ವಂದನೆಗಳನ್ನು ಸಲ್ಲಿಸುತ್ತೇನೆ)



## ಆಧಾರಸೂಚಿ


೧. **ಸೌಥ್ ಇಂಡಿಯನ್ ಇನ್ಸ್ಕ್ರಿಪ್ಷನ್ಸ್**, ಸಂ. ೧೧-೧ ಪು. ೧೦೫

೨. ಅದೇ, ಸಂ. ೧೫, ಪು. ೬೫೪

೩. **ವಿಜಾಪೂರ ಜಿಲ್ಲಾ ಗ್ಯಾಜೆಟಿಯರ್**

೪. ಡಾ. ಡಿ.ವ್ಹಿ. ಪರಮಶಿವಮೂರ್ತಿ., **ಕನ್ನಡ ಶಾಸನಶಿಲ್ಪ** ; ಪು. ೧೪೬

ಡಾ॥ ವಿರೂಪಾಕ್ಷಿ ಪೂಜಾರಹಳ್ಳಿ*

# ಕೋನಸಾಗರ ಗ್ರಾಮ ಪರಿಸರದ ಪುರಾತತ್ವ ಮತ್ತು ಚರಿತ್ರೆ

'ಕೋನಸಾಗರ' ಎಂಬ ಗ್ರಾಮ ಚಿತ್ರದುರ್ಗ ಜಿಲ್ಲೆಯ ಮೊಳಕಾಲ್ಮುರು ತಾಲೂಕಿನಲ್ಲಿದೆ; ತಾಲೂಕು ಕೇಂದ್ರವಾದ ಮೊಳಕಾಲ್ಮುರುವಿನಿಂದ ದಕ್ಷಿಣಕ್ಕೆ ೧೦ ಕಿ.ಮೀ. ದೂರದಲ್ಲಿದೆ. ಗ್ರಾಮ ಪಂಚಾಯ್ತಿ ಕೇಂದ್ರವಾದ (ಎ. ಗ್ರೇಡ್) ಇದು, ಎರಡು ಸಾವಿರ ಮನೆ ಮತ್ತು ಎಂಟು ಸಾವಿರ ಜನಸಂಖ್ಯೆಯನ್ನು ಹೊಂದಿದೆ. ಪೂರ್ವಕ್ಕೆ ಒಬಣ್ಣನಹಳ್ಳಿ, ದಕ್ಷಿಣಕ್ಕೆ ಹನುಮಂತನಹಳ್ಳಿ, ಪಶ್ಚಿಮಕ್ಕೆ ನೇತ್ರನಹಳ್ಳಿ ಮತ್ತು ಕೊಂಡ್ಲಹಳ್ಳಿಗಳಿವೆ.

ಪ್ರಾಚೀನ ಗ್ರಾಮವಾದ ಕೋನಸಾಗರಕ್ಕೆ ಪೂರ್ವದ ಹೆಸರು ನಾಯಿಹಳ್ಳಿ (ಕುಕ್ಕಲಪಲ್ಲಿ). ಕೆಲವೇ ಶತಮಾನಗಳ ಹಿಂದೆ ಕೋನಸಾಗರ ಎಂದು ಹೊಸ ಹೆಸರು ಬಂದಿದೆ. ಇದಕ್ಕೆ ಸ್ಪಷ್ಟವಾದ ಕಾರಣಗಳು ತಿಳಿದುಬಂದಿಲ್ಲವಾದರೂ, ರಾಜಪ್ರಭುತ್ವ ಆಳ್ವಿಕೆಯುಲ್ಲಾದ ಪಲ್ಲಟಗಳನ್ನು ಅಲ್ಲಗಳೆಯುವಂತಿಲ್ಲ. ಮೌರ್ಯ, ಶಾತವಾಹನ, ಕದಂಬ, ಚಾಲುಕ್ಯ, ನೊಳಂಬರು ಮತ್ತು ಕುಮ್ಮಟದುರ್ಗದ ಅರಸರ ಆಳ್ವಿಕೆಯನ್ನು ಇಲ್ಲಿ ಗುರುತಿಸಬಹುದಾಗಿದೆ. ಹಾಗೆಯೇ ಹೊಯ್ಸಳ, ವಿಜಯನಗರ ಸಾಮ್ರಾಜ್ಯಗಳಲ್ಲದೆ, ಸ್ಥಳೀಯ ಪಾಳೆಯಪಟ್ಟುಗಳಾದ ರಾಯದುರ್ಗ, ಮೊಳಕಾಲ್ಮುರು, ನಾಯಕನಹಟ್ಟಿ, ದೊಡ್ಡೇರಿ, ಹರತಿಕೋಟೆ ಮೊದಲಾದವು ರಾಜ್ಯಾಳ್ವಿಕೆ ನಡೆಸಿವೆ. ಹೀಗೆ ಪಾಳೆಯಗಾರರು ಆಳ್ವಿಕೆ ನಡೆಸುವಾಗ ಹೈದರ್ ಅಲಿ ಮತ್ತು ಟಿಪ್ಪುಸುಲ್ತಾನರ ದಂಡೆಯಾತ್ರೆಗೆ ಕೆಲವು ಪ್ರದೇಶಗಳು ತುತ್ತಾಗುತ್ತವೆ. ಚಿತ್ರದುರ್ಗದ ಕಾಮಗೇತಿ ನಾಯಕ ಅರಸರ ಆಳ್ವಿಕೆಯ ಕುರುಹುಗಳು ಈ ಪರಿಸರದಲ್ಲಿ ಕಂಡುಬರುತ್ತವೆ (ಪಿ.ಕೆ. ದೊಡ್ಡಿ ಮದ್ದುಗುಂಡುಗಳನ್ನು ತಯಾರಿಸುವ ಸ್ಥಳ ಗೊಲ್ಲಹಳ್ಳಿ ಸಮೀಪ ಇದೆ). ಅದೇ ರೀತಿ ಮೊಳಕಾಲ್ಮುರುವಿನ ಬೊಮ್ಮನಾಯಕ, ನಾಯಕನಹಟ್ಟಿಯ ಮಲ್ಲಪ್ಪನಾಯಕ, ನಿಡಗಲ್ಲಿನ ಕಾಮನಾಯಕ, ರಾಯದುರ್ಗ, ಕುಂದುರ್ಪಿ, ವೈ.ಎನ್. ಹೊಸಕೋಟೆ ಮೊದಲಾದ ಪಾಳೆಯಗಾರರ ಆಳ್ವಿಕೆಯ ಪ್ರಭಾವ ಈ ಪ್ರದೇಶದ ಮೇಲಿತ್ತು.

ಈ ಭಾಗದಲ್ಲಿ ಮೌಖಿಕ ಚರಿತ್ರೆಯನ್ನು ಸಂಗ್ರಹಿಸಿದಾಗ ಕೊಡಗಲು ಬೊಮ್ಮನಾಯಕ, ಯರಮಂಚಿನಾಯಕ, ಗಾಜನಾಯುಕ, ದಡ್ಡಿ ಸೂರನಾಯುಕ, ಪೆದ್ದಯ್ಯ ಮೊದಲಾದವರು ಹೋರಾಡಿ ಹುತಾತ್ಮರಾಗಿರುವುದು ಸ್ಮರಣೀಯ. ಇವರು ಬೇಟೆ, ಪಶುಪಾಲನೆ ಮತ್ತು ಕೃಷಿ ವ್ಯವಸ್ಥೆಗಳಲ್ಲಿ ತೊಡಗಿದ್ದು ಈ ಭಾಗದಲ್ಲಿ ಹೆಚ್ಚಿನ ನಂಟು ಹೊಂದಿದ್ದರು. ದರ್ಪಿಷ್ಠ ದೊರೆ ಕೊಡಗಲು ಬೊಮ್ಮಯ್ಯನ ನೆಲೆ ಇದೇ ಪರಿಸರದಲ್ಲಿದ್ದು ಅದಕ್ಕೆ ಕಮರಕಾವಲಿನ ಊಟವಂಕ ಮತ್ತು ವಡಕಟ್ಟೆ ಎಂದು ಹೆಸರು ಮುತ್ತಿಗಾರಹಳ್ಳಿ, ರಾವಲಕುಂಟೆ ಪರಿಸರದಲ್ಲಿ ಈತ ನೆಲಸಿದ್ದು, ಕೋನಸಾಗರ ಸಮೀಪ ರೇಪುಪಲ್ಲಿ, ಮಾಪೆಲ್ಲಿ, ಎನ್ನಮುದ್ದಲುಪೆಲ್ಲಿ ಎಂಬ ಗ್ರಾಮಗಳನ್ನು ಕಟ್ಟಿದನು. ಇಂದು ಆ ವಾಸಸ್ಥಾನಗಳು ಬೇಚರಾಕ್ ಗ್ರಾಮಗಳಾಗಿವೆ. (ಪ್ರಾಚೀನ ಸ್ಮಾರಕಗಳಷ್ಟೆ ಕಂಡುಬರುತ್ತವೆ) ಈತ ಬೇಟೆ ಆಡುವಾಗ ತಂಗಿಯನ್ನೇ ಕೊಂದು, ಮ್ಯಾಸನಾಯಕ ಬುಡಕಟ್ಟಿನ ವೀರನಾಗಿ ದರ್ಪಿಷ್ಠ ಪ್ರಭುವಾಗಿ ದುರಂತ ಸಾವನ್ನಪ್ಪುತ್ತಾನೆ. ಈ ಭಾಗದಲ್ಲಿ ಮೌಖಿಕ ವಿವರಗಳು ಇವನ ಬಗ್ಗೆ ಲಭ್ಯ ಇವೆ. ದಡ್ಡಿಸೂರನಾಯಕ ಎಂಬ ಪಶುಪಾಲಕ ತಾನು ಕುರಿ ಮಂದೆಯನ್ನು ಕಟ್ಟಿಕೊಂಡು ಈ ಪರಿಸರದಲ್ಲಿ ನೆಲಸಿದ್ದಾಗ ರಾತ್ರಿ ತನ್ನನ್ನು ಅರಸಿ ಬಂದ ಪ್ರೇಯಸಿಯನ್ನು ಬಿಲ್ಲಿನಿಂದ ಬಾಣ ಬಿಟ್ಟು ಸಾಯಿಸಿ, ವಿರೋಧಿ ನಾಯಕ ಗಾಜನಾಯಕನೊಂದಿಗೆ ಹೋರಾಡಿ ಮಡಿಯುತ್ತಾನೆ. ಗಾಜನಾಯಕನು ಕೋನಸಾಗರ ಪಕ್ಕದ ಗಲಗಲ್ಲು ಎಂಬ ಗ್ರಾಮದಲ್ಲಿ ಸಮಾಧಿಯಾಗಿದ್ದಾನೆ. ಆತನ ತಂಗಿ ದೇವಮ್ಮನ ದೇವಾಲಯವು ಇಲ್ಲಿದೆ. ಕೋನಸಾಗರದ ಆಗ್ನೇಯಕ್ಕೆ ನಾಯಕಾಚಾರ್ಯ, ದೊರೆ ಯರಮಂಜಿ ನಾಯಕನ ಜೀವೈಕ್ಯ ಸಮಾಧಿಯಿದೆ. ಪಶುಪಾಲನೆಗೆ ಸಂಬಂಧಿಸಿದಂತೆ ಇಲ್ಲಿ ಹೆಚ್ಚಾಗಿ ನೆಲಸಿರುವವರು ಮ್ಯಾಸನಾಯಕರು. ಇವರು ತಮ್ಮ ಪಶುಪಾಲನೆಯ ಜೊತೆಗೆ ಕೃಷಿಯನ್ನು ಅಳವಡಿಸಿಕೊಂಡಾಗ ಇಂಥಾ ಚಾರಿತ್ರಿಕ

* ರೀಡರ್, ಚರಿತ್ರೆ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ-೫೮೩ ೨೭೬.

ಘಟನೆಗಳನ್ನು ಎದುರಿಸಿದ್ದಾರೆ. ಭೂಮಾಲಿಕತ್ವವನ್ನು ಪಡೆದ ಮೇಲೆ ಚಾರಿತ್ರಿಕವಾಗಿ ಹೊಸ ಪರಿವರ್ತನೆಯಾದುದ್ದನ್ನು ಗುರುತಿಸಲಾಗಿದೆ. ಇಲ್ಲಿರುವ ಕಂಪಳ ದೇವರಹಟ್ಟಿ, ಕೈಲಾಸಕೊಂಡ, ಗೌರಸಮುದ್ರ ಮೊದಲಾದ ಪ್ರದೇಶಗಳು ಚಾರಿತ್ರಿಕವಾಗಿ ಗಮನಾರ್ಹವಾದ ನೆಲೆಗಳು. ಕಳೆದ ಒಂದು ಶತಮಾನದ ಆರಂಭದಲ್ಲಿ ಕೋನಸಾಗರ ಗ್ರಾಮದ ಪಕ್ಕದಲ್ಲಿರುವ ಯರಮಂಚಯ್ಯನ ಮಗ ಪೆದ್ದಯ್ಯ ಎನ್ನುವ ವೀರ ಕುರಿಮಂದೆಗೆ ದಾಳಿ ಮಾಡಿದ ಚಿರತೆಯನ್ನು ಕೊಂದು ತಾನು ಮಡಿದ ವಿಷಯದ ಬಗ್ಗೆ ಇಲ್ಲಿರುವ ವೀರಗಲ್ಲು ಶಾಸನ ಬೆಳಕು ಚೆಲ್ಲುತ್ತದೆ. ಜನಿಗೆಹಳ್ಳ (ಚಿನ್ನಹಗರಿ ನದಿ) ಮತ್ತು ವೇದಾವತೀ ನದಿ ನಡುವೆ ಇರುವ ಈ ಪ್ರದೇಶವನ್ನು ಬುಡಕಟ್ಟು ಜನರ ನೆಲೆಯಾಗಿ, ಚಾರಿತ್ರಿಕವಾಗಿ ಆದಿಯಿಂದಲೂ ಗುರುತಿಸಲಾಗುತ್ತದೆ.

ಕೋನಸಾಗರ ಗ್ರಾಮ ಪರಿಸರದಲ್ಲಿ ಅನೇಕ ಸ್ಮಾರಕಗಳು, ನಿವೇಶನ, ಬಾವಿ, ಕೆರೆ, ಹಳ್ಳ, ಬೆಟ್ಟ-ಗುಡ್ಡ, ದೇವಾಲಯ, ಚಾವಡಿಗಳು ಕಂಡುಬರುತ್ತವೆ. ಕಳೆದ ಐವತ್ತು ವರ್ಷಗಳ ಹಿಂದೆ ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಊರ ಗೌಡನನ್ನು ಕೊಂದ ಬಗ್ಗೆ ರೋಮಾಂಚನಕಾರಿ ಕಥೆ, ಜಾನಪದ ಗೀತೆಗಳು ಪ್ರಚಲಿತದಲ್ಲಿವೆ. ಇದೇ ಗ್ರಾಮದಲ್ಲಿ ಬೊಮ್ಮದೇವರು, ಚೌಡಮ್ಮ, ಕೊಲ್ಲಾರಮ್ಮ, ಮಾರಮ್ಮ, ಅಕ್ಕಮ್ಮ, ಓಬಳದೇವರು, ಬಲ್ಲನಾರು, ತಿಮ್ಮಪ್ಪ, ಕುರುಮಾಮ ಇತರ ದೇವಾಲಯಗಳಿವೆ. ಇವುಗಳ ಸಾಲಿಗೆ ಸೇರಿರುವ ಮೂರು ಶತಮಾನಗಳ ಹಿಂದಿನ ಚಾವಡಿ ಪಾಳೆಯಗಾರರ ಚರಿತ್ರೆಯನ್ನು ನೆನಪಿಗೆ ತರುತ್ತದೆ.

ಇಂದು ಚಾರಿತ್ರಿಕವಾಗಿ, ಸಾಂಸ್ಕೃತಿಕವಾಗಿ ಈ ಗ್ರಾಮ ವಿಶಿಷ್ಟತೆ ಪಡೆದಿದೆ. ವಿವಿಧ ಸಮುದಾಯಗಳ ಸಾಮರಸ್ಯ, ಸಹಬಾಳ್ವೆ ಇಲ್ಲಿ ಕಂಡುಬರುತ್ತದೆ. ಗುರಿಕಾರ (ಮಾರನಾಯಕ), ಕೋಲಕಾರ (ಕುರುಬರು), ತಳವಾರ (ನಾಯಕ ಬುಟ್ಟುಗಲು), ಪಟೇಲ, ಗೌಡ (ಸೂರನಾಯಕ-ಪಾಪನಾಯಕ) ಮೊದಲಾದವರು ನಿರ್ವಹಿಸುವ ಜವಾಬ್ದಾರಿಗಳು ಗ್ರಾಮಾಭಿವೃದ್ಧಿಗೆ ಪೂರಕವಾಗಿವೆ. ಈ ಮೇಲೆ ತಿಳಿಸಿದ ಸ್ಮಾರಕ-ಇತರ ವಿಷಯಗಳ ವಿವರವನ್ನು ಈ ಕೆಳಗಿನಂತೆ ವಿಶ್ಲೇಷಿಸಲಾಗಿದೆ.

**ಚಾವಡಿ :** ಕೋನಸಾಗರ ಗ್ರಾಮದ ಮಧ್ಯದಲ್ಲಿ ಉತ್ತರಾಭಿಮುಖ ವಾಗಿರುವ ಈ ಚಾವಡಿಯನ್ನು ಚಿತ್ರದುರ್ಗ ಪಾಳೆಯಗಾರರ ಅಧೀನದಲ್ಲಿದ್ದ ಸ್ಥಳೀಯ ಪಟೇಲ(ಗೌಡ)ರು ನಿರ್ಮಿಸಿದ್ದಾರೆ. ಸ್ಥಳೀಯ ನಾಯಕನ ರಾಜಕೀಯ ಚಟುವಟಿಕೆಗಳ ಕೇಂದ್ರ ಚಾವಡಿಗೆ ಸೀಮಿತವಾಗಿತ್ತು. ಮೈಸೂರು ಸಂಸ್ಥಾನಕ್ಕೆ ಸೇರಿದ್ದ ಚಿತ್ರದುರ್ಗ ಪ್ರದೇಶವು,



ಸ್ಥಳೀಯ ಗೌಡನ ಆಳ್ವಿಕೆಯ ಕೋನಸಾಗರವು ಅದರ ಭಾಗವಾಗಿತ್ತು. ಸ್ಥಳೀಯ ಕಚ್ಚಾವಸ್ತುಗಳನ್ನು ಈ ಚಾವಡಿಗೆ ಬಳಸಿದ್ದಾರೆ. ಕಟ್ಟಿಗೆಯ ಕಂಬ, ತೊಲೆ, ಜಂತೆ ಬೋಧಿಗೆಗಳನ್ನು ಅಲಂಕೃತವಾಗಿ ನಿರ್ಮಿಸಿದ್ದಾರೆ. ಚಾವಡಿಯು ಎರಡು ಹಂತಗಳಿಂದ ಕೂಡಿದೆ. ಕೆಳಗಡೆ ನೂರಾರು ಜನ ಕುಳಿತಕೊಳ್ಳಲು ಸಮತಟ್ಟಾಗಿ ಕಲ್ಲನ್ನು ಹಾಸಲಾಗಿದೆ. ಮೇಲ್ಭಾಗದ ಕಟ್ಟೆಯ ಮೇಲೆ ಗೌಡ, ಪಟೇಲ, ಊರಿನ ಯಜಮಾನರು ಕುಳಿತುಕೊಳ್ಳಲು ಸ್ಥಳಾವಕಾಶ ಕಲ್ಪಿಸಿದ್ದಾರೆ. ಚಾವಡಿಯ ಒಳಗೆ ಒಂದು ಚಿಕ್ಕ ಕೋಣೆಯಿದ್ದು ಅಪರಾಧಿಗಳನ್ನು ಇದರಲ್ಲಿ ಬಂಧಿಸುತ್ತಿದ್ದರಂತೆ. ಇತ್ತೀಚೆಗೆ ಈ ಚಾವಡಿಯನ್ನು ಸರ್ಕಾರದ ಅನುದಾನದಿಂದ ಜೀರ್ಣೋದ್ಧಾರ ಮಾಡಿಸಿದ್ದಾರೆ. ಇಂಥ ಚಾವಡಿಗಳು ಒಂದು ಕಾಲಕ್ಕೆ ಗ್ರಾಮೀಣ ನ್ಯಾಯ ಕಟ್ಟೆಗಳಾಗಿದ್ದು ಇಂದು ಮಹತ್ವ ಕಳೆದುಕೊಂಡಿವೆ.

**ಗುಡ್ಡದ ತಿಮ್ಮಪ್ಪ :** ಕೋನಸಾಗರದ ಗ್ರಾಮದ ಉತ್ತರಕ್ಕೆ ಗುಡ್ಡದ ತಿಮ್ಮಪ್ಪನ (ಈಶಾನ್ಯ) ದೇವಾಲಯವಿದೆ. ಇದು ಪ್ರಾಚೀನ ಕಾಲಕ್ಕೆ ಸೇರಿದ್ದು, ಗ್ರಾಮದಿಂದ ೨ ಕಿ.ಮೀ. ಕಾಲುದಾರಿಯಿಂದ ನಡೆದು ಹೋದರೆ, ಗುಡ್ಡದ ಬದಿಯಲ್ಲಿ ಕಂಡುಬರುತ್ತದೆ. ಇಲ್ಲಿ ಒಂದು ಹೆಬ್ಬಂಡೆಯಿದ್ದು, ಅದರ ಕೆಳಗೆ ಉಬ್ಬು ಬಂಡೆಗೆ ತಿಮ್ಮಪ್ಪ ಒಲಿದಿದ್ದಾನೆಂದು ಪೂಜಿಸುತ್ತಾರೆ. ತಿಮ್ಮಪ್ಪನ ತಲೆ ಬಂಡೆಯ ಮೇಲೆ ಒಡೆದು ಮೂಡಿದೆ ಎಂದು ನಂಬಲಾಗಿದೆ. ಇದರ ಎದುರಿಗೆ ಇರುವ ಬಂಡೆಯ ಮೇಲೆ ನಂದಿ ಸೇರಿದಂತೆ ಇತರ ಪ್ರಾಣಿಗಳ ರೇಖಾಚಿತ್ರಗಳಿವೆ. ಈ ತಿಮ್ಮಪ್ಪನ ಐತಿಹಾಸಿಕ ಹಿನ್ನೆಲೆ ಬುಡಕಟ್ಟು ಜನರಾದ ಮ್ಯಾಸಬೇಡರ ವಲಸೆಯಿಂದ ಆರಂಭವಾಗುತ್ತದೆ. ಇದು ಭಕ್ತಿಪೂರ್ವಕವಾಗಿ ಒಲಿದು ಬಂದ ದೇವರೆಂದು ಆರಾಧಿಸುತ್ತಾರೆ. ಪ್ರತಿವರ್ಷ ಶ್ರಾವಣಮಾಸದಲ್ಲಿ ೪-೫ನೇ ಶನಿವಾರ ಎಣ್ಣೆ ಹಾಕಿ ದೀಪ ಹಚ್ಚುವರು. ಕಡಿದಾದ ಬೆಟ್ಟದ ಕಣಿವೆಯ ಇಳಿಜಾರು ಹಂತದಲ್ಲಿ ಈ



ದೇವಾಲಯವಿದೆ. ಇದು ಬೃಹತ್ ಬಂಡೆಗಳಿಂದ ಇರುವುದರಿಂದ ಗವಿಯ ರೂಪವನ್ನು ಹೋಲುತ್ತದೆ. ಒಟ್ಟಾರೆ ವೈಷ್ಣವ ಧರ್ಮದ ಪ್ರಭಾವವನ್ನು ಸ್ಥಳೀಯ ಪಶುಪಾಲಕ ಸಮುದಾಯಗಳ ಮೂಲಕ ತೌಲನಿಕವಾಗಿ ಅಧ್ಯಯನ ಮಾಡಬೇಕಾಗಿದೆ.

**ಬಾವಿ :** ಗುಡ್ಡದ ತಿಮ್ಮಪ್ಪನ ಬೆಟ್ಟದ ಕೆಳಗೆ, ಉಳುಮೆ ಮಾಡುವ ಕೃಷಿ ಭೂಮಿಯಲ್ಲಿ ಹರಿವ ನೀರಿಗಾಗಿ ಗೋಕಟ್ಟೆಯನ್ನು, ಇದರ ಕೆಳಗಡೆ ಚಿಕ್ಕ ಗಾತ್ರದ ವೃತ್ತಾಕಾರದ ಬಾವಿಯನ್ನು ನಿರ್ಮಿಸಲಾಗಿದೆ. ಇದು ೧೦ ಅಡಿ ಆಳ ಇದ್ದು, ಸುತ್ತಲೂ ೧೦ ಅಡಿ ವೃತ್ತಾಕಾರವಾಗಿದೆ. ವಿಶೇಷವೆಂದರೆ, ಈ ಬಾವಿಯಲ್ಲಿ ಯಾವ ಕಾಲಕ್ಕೂ ನೀರು ಇರುತ್ತದೆ. ಬೆಟ್ಟಗಳ ತಪ್ಪಲಿನಲ್ಲಿರುವ ಕಾರಣಕ್ಕೊ ಏನೋ ಜಲವು ಇಲ್ಲಿ ಸಮೃದ್ಧವಾಗಿದೆ. ಬೇಸಿಗೆ ಕಾಲದಲ್ಲಿಯು ಇಲ್ಲಿ ನೀರು ಇರುವುದು ಸೋಜಿಗ. ಕಲ್ಲಿನಿಂದ ಅತೀ ಸುಂದರವಾಗಿ ಒಳಭಾಗದ ಸುತ್ತ ಕಟ್ಟಡವನ್ನು ಕಟ್ಟಲಾಗಿದೆ.

**ಲಿಂಗ :** ಬೆಟ್ಟದ ಪೂರ್ವ ದಿಕ್ಕಿಗೆ ಶಿಥಿಲಗೊಂಡಿರುವ ಈಶ್ವರಲಿಂಗ, ನಂದಿ ವಿಗ್ರಹಗಳಿವೆ. ಇಲ್ಲಿ ರೈತರು ಭೂಮಿಯನ್ನು ಉಳುಮೆ ಮಾಡುವುದರಿಂದ ಜಮೀನು ಒತ್ತುವರಿಯಾಗಿ ಇಂಥ ಅವಶೇಷಗಳನ್ನು ನಿರ್ಲಕ್ಷಿಸಿರುವುದು ತಿಳಿದುಬರುತ್ತದೆ. ಮಧ್ಯಕಾಲೀನ ಸಾಂಸ್ಕೃತಿಕ ಚರಿತ್ರೆಯ ಬಗ್ಗೆ ಇವು ಬೆಳಕು ಚೆಲ್ಲುತ್ತವೆ.

**ಕಣಿವೆ ಮಾರಮ್ಮ – ಚಾಮುಂಡಿ :** ಕೋನಸಾಗರದ ಈಶಾನ್ಯಕ್ಕೆ ಮತ್ತು ತಿಮ್ಮಪ್ಪನ ಬೆಟ್ಟದ ಪೂರ್ವಕ್ಕೆ ಕಣಿವೆ ಮಾರಮ್ಮನ ಕಟ್ಟೆಯಿದೆ. ಪೂರ್ವಾಭಿಮುಖವಾಗಿರುವ ಬೇವಿನಮರದ ಕೆಳಗೆ ಇರುವ ಕಟ್ಟೆಯ ಮೇಲೆ ಚಾಮುಂಡಿಯ ಸುಂದರವಾದ ವಿಗ್ರಹವಿದೆ. ಇದು ಅತೀ ಪ್ರಾಚೀನ ಕಾಲಕ್ಕೆ . ಸೇರಿದೆ. ಚಾಮುಂಡಿಯು ಕೋಣದ ಕೊಂಬನ್ನು ಒಂದು ಕೈಯಲ್ಲಿಟ್ಟುಕೊಂಡು ಇನ್ನೊಂದು ಕೈಯಲ್ಲಿ ಆಯುಧವಿದೆ. ಕಾಳಿ, ದುರ್ಗಿ ಎಂದು ಕರೆಯುವಂತೆ, ಗ್ರಾಮೀಣರು ಚಾಮುಂಡಿಗೆ ಮಾರಮ್ಮನೆಂದು ಕರೆಯುತ್ತಾರೆ. ಸಪ್ತಮಾತೃಕೆಯರಲ್ಲೊಬ್ಬಳಾದ ಚಾಮುಂಡಿಯ ವಿಗ್ರಹ ಈ ಭಾಗದಲ್ಲಿರುವುದು ವಿಶೇಷ. ಚಾಲುಕ್ಯ, ನೊಳಂಬ, ಹೊಯ್ಸಳರ ಕಾಲಕ್ಕೆ ಈ ವಿಗ್ರಹ ನಿರ್ಮಾಣವಾಗಿರುವಂತಿದೆ.

**ಶಿಲಾಯುಧಗಳು :** ಈ ಮೇಲಿನ ಕಣಿವೆ ಮಾರಮ್ಮನ (ಚಾಮುಂಡಿ) ಕಟ್ಟೆಯ ಮೇಲೆ ದೇವಿಯ ಮೂರ್ತಿಯ ಬಳಿ ಶಿಲಾಯುಧಗಳಿವೆ. ಇವು ಉಳಿ, ಬಾಚ್ಚಿ ಮತ್ತು ಕೊಡಲಿಯಾಕಾರದಲ್ಲಿವೆ. ಎರಡು ಆಯುಧಗಳ ಕಾಲಮಾನ ಬೇರೆ ಬೇರೆ. ಇವುಗಳ ಲಕ್ಷಣಗಳು ಸಹಾ ಅಷ್ಟೆ. ನವಶಿಲಾಯುಗಕ್ಕೆ ಸೇರಿವೆ ಎಂದು ಹೇಳಬಹುದು.

**ಮೊರೆಕಲ್ಲು (ಕಣಿವೆ) ಬೇಚರಾಕ್ ಗ್ರಾಮ :** ಕೋನಸಾಗರ ಉತ್ತರಕ್ಕಿರುವ ಎರಡು ಬೃಹತ್ ಬೆಟ್ಟಗಳ ನಡುವೆ ಕಣಿವೆ ಇದೆ. ಎರಡು ಬೆಟ್ಟಗಳಿಂದ ಹರಿದು ಬರುವ ಹಳ್ಳಕ್ಕೆ ಸಮೀಪವಿದ್ದು, ಮರಳಲ್ಲಿ, ಬೆಟ್ಟದ ತಪ್ಪಲಲ್ಲಿ, ನಿವೇಶನಗಳನ್ನು ನಿರ್ಮಿಸಿದ್ದರು. ಈ ಕಣಿವೆ ಪ್ರದೇಶಕ್ಕೆ ಮೊರೆಕಲ್ಲು ಎನ್ನುತ್ತಾರೆ. ಪಶ್ಚಿಮಾಭಿಮುಖವಾಗಿ ಪ್ರವೇಶಿಸುವಾಗ ಆರಂಭದಲ್ಲಿ ಬೃಹತ್ ಗುಂಡುಗಳು ಅದರಲ್ಲಿನ ಆಂಜನೇಯನ ಶಿಲ್ಪ, ಊರು ಬಾಗಿಲು ಕಂಡುಬರುತ್ತವೆ. ಒಂದು ಕಾಲಕ್ಕೆ ಇಲ್ಲಿ ಜನವಸತಿ ಇದ್ದದ್ದು ಸ್ಪಷ್ಟ. ಕಲ್ಲಿನ ಬಂಡೆಗಳ (ಅಳತೆ ೪ x೬ ಚ. ಅಡಿ)ನ್ನು ನೆಲದಲ್ಲಿ ಹೂಳಿಸಿದ್ದ ನಾಲ್ಕು ಕಡೆಯಿದ್ದರೆ, ಮೇಲ್ಭಾಗದಲ್ಲಿ ಮುಚ್ಚಲು ತೆಗೆಯಲು ಬಂಡೆಗಳಿವೆ. ತೆಲುಗಿನಲ್ಲಿ ಮರೆರಾಡ್ಲು ಎನ್ನುತ್ತಾರೆ. ಮೊಳಕಾಲ್ಮುರು ತಾಲೂಕಿನ ಭಟ್ಟರಹಳ್ಳಿಯಲ್ಲಿ ಇದೇ ಬಗೆಯ ಕಲ್ಲುಗಳಿವೆ. ನಂದ, ಮೌರ್ಯರ ಕಾಲದಲ್ಲಿ ಗಿಡ್ಡ ಅಥವಾ ಕುಳ್ಳ ಜನರು ಇಂಥ ಚಿಕ್ಕ ಚಿಕ್ಕ ಮನೆಗಳಲ್ಲಿ ವಾಸಿಸಿರಬೇಕು. ಸು. ೧೦ ಎಕರೆ ಪ್ರದೇಶದಲ್ಲಿ ೪ x೬ ಚ. ಅಡಿ ಗಾತ್ರದ ಕಲ್ಲು ಗೋರಿಗಳಿವೆ. ಭೂಮಿಯ ಮೇಲ್ಭಾಗದಲ್ಲಿ ಅತೀ ಹೆಚ್ಚು ಕಲ್ಲು ಕಾಣುವುದಿಲ್ಲ. ಭೂಮಿಯ ಒಳಗೆ ಜಾಸ್ತಿ ಇರುವುದರಿಂದ ಹೂತು ಹೋಗಿರುವ ಸಾಧ್ಯತೆಯಿದೆ. ಇಲ್ಲದೆ ಹೋದರೆ, ಬಂಡೆಗಳು ಮೊದಲಿಂದಲೂ ಅದೇ ಸ್ವರೂಪದಲ್ಲಿದ್ದರೆ ಅವು ಸಮಾಧಿಗಳಾಗುತ್ತವೆ. ಬೃಹತ್ ಶಿಲಾಸಂಸ್ಕೃತಿಗೆ ಸೇರುತ್ತವೆ (Megalithic Culture) ಈ ಬಗ್ಗೆ ಇನ್ನು ಶೋಧನೆ ಆಗಬೇಕಿದೆ. ನಿಧಿಶೋಧಕರು ಈ ನಿವೇಶನಗಳನ್ನು ಅಗೆದಿರುವುದರಿಂದ ಇವುಗಳ ಆಳ ಒಬ್ಬ ಮನುಷ್ಯನ ಆಳವನ್ನು ಒಳಗೊಂಡಿರುತ್ತದೆ.

**ಊರ ಹೊರವು :** ಈ ಎರಡು ಬೆಟ್ಟಗಳ ಕಣಿವೆ ಪ್ರದೇಶದ ಹಿಂದೆ, ಪಶ್ಚಿಮಕ್ಕೆ 'ಊರ ಹೊರವು' ಎಂಬ ಬೆಚರಾಕ್ ಗ್ರಾಮವಿತ್ತು. ಇಲ್ಲಿ ಕೋಟೆ, ದೋಣಿ (ಹೊಂಡ)ಗಳಿದ್ದು, (ನೀರಿನ ಅರವಟ್ಟಿಗೆ) ಜನರು ವಾಸಿಸಿದ್ದ

ಬಗ್ಗೆ ಅನೇಕ ಕುರುಹುಗಳಿವೆ. ಇದು ತುಂಬಾ ಎತ್ತರವಾದ ಪ್ರದೇಶ. ಈ ಬೆಟ್ಟವನ್ನು ಹತ್ತಿದ್ದರೆ ಕೋನಸಾಗರ, ನೇತ್ರನಹಳ್ಳಿ, ಮೊಳಕಾಲ್ಮೂರು ಪ್ರದೇಶಗಳು ಕಾಣಿಸುತ್ತವೆ. ವಿವಿಧ ಚಾರಿತ್ರಿಕ ಕಾಲ ಘಟ್ಟಗಳ ಅವಧಿಯಲ್ಲಿ ಬುಡಕಟ್ಟು ಜನರು ಇಲ್ಲಿ ನೆಲಸಿದ್ದು, ಯಾವುದೋ ಮಾರಕ ರೋಗಗಳಿಗೆ ಬಲಿಯಾಗಿ ಸ್ಥಳಾಂತರಗೊಂಡಿರಬೇಕು. ಹೆಸರೇ ಹೇಳುವಂತೆ ಊರ ಹೊರವು-ಊರನ್ನು ಬಿಟ್ಟು ಹೊರಗಡೆ ನಿರ್ಮಾಣಗೊಂಡ ಪ್ರತ್ಯೇಕ ವಾಸಸ್ಥಳ. ಉನ್ನತ ವರ್ಗ ಇಲ್ಲವೆ ಅಲಕ್ಷಿತ ವರ್ಗದ ಜನರು ಇಲ್ಲಿ ನೆಲಸಿರಬೇಕು. ಇಲ್ಲಿ ಪ್ರಾಚೀನ ಕಾಲಕ್ಕೆ ಸೇರಿದ ಅನೇಕ ಅವಶೇಷಗಳಿವೆ.

**ಕೋನಸಾಗರದ ಗೌಡ :** ಸ್ವಾತಂತ್ರ್ಯ ಹೋರಾಟದ ಸಂದರ್ಭದಲ್ಲಿ ಪಟೇಲ ಪಾಪನಾಯಕ ಎಂಬುವ ಕೋನಸಾಗರದ ಗೌಡನಾಗಿದ್ದ. ಗ್ರಾಮದ ಯಾವುದೇ ಶುಭ ಕಾರ್ಯಗಳು ಜರುಗಿದರೂ ಗೌಡನ ಅಪ್ಪಣೆಯಂತೆ ನಡೆಯಬೇಕಿತ್ತು. ಒಮ್ಮೆ ಕೋನಸಾಗರದ ಉನ್ನತ ವರ್ಗದವರ ಮದುವೆಯಲ್ಲಿ ಗೌಡನಿಗೆ ಎಲೆ-ಅಡಿಕೆ (ತಾಂಬೂಲ), ಎಡೆ ಕೊಟ್ಟು ಹೋಗದೆ ಧಿಕ್ಕರಿಸಿ ಮದುವೆ ಮಾಡಿದ್ದು ಗೌಡನ ಸಿಟ್ಟಿಗೆ ಕಾರಣವಾಯಿತು. ಹಿಂದಿನ ಸಂಪ್ರದಾಯದಂತೆ ಇದು ನಡೆಯಲಿಲ್ಲ ಎಂಬುದಕ್ಕೆ ಊರಿನ ಉನ್ನತ ವರ್ಗದವರ ಅಟ್ಟಹಾಸ, ದುರಹಂಕಾರ ಹೆಚ್ಚಾಯಿತು. ಆಗ ಗೌಡ-ಪಟೇಲ ಪಾಪನಾಯಕ ಮದುವೆ ದಿಬ್ಬಣದ ಮುಂದೆ ಬಂದು ಮಡಿವಾಳಿಯಿಂದ ಪಂಜು ಕಿತ್ತುಕೊಂಡು ಪಾಪನಾಯಕ ನೆಲಕ್ಕೆ ಹಾಕಿ ಮೆಟ್ಟಿನಿಂದ ಉಜ್ಜಿದನು. ಹೀಗೆ ನಡೆದ ಘಟನೆ ಊರಿನ ಉನ್ನತ ವರ್ಗ ಭೂಮಾಲಿಕರನ್ನು ಇನ್ನಷ್ಟು ರೊಚ್ಚಿಗೆಬ್ಬಿಸಿತು. ಮದುವೆ ದಿಬ್ಬಣಕ್ಕೆ ಅವಮಾನ ಮಾಡಿದನೆಂದು ಭೂಮಾಲೀಕರು ಚಿತ್ರದುರ್ಗದ ಕೋರ್ಟಿಗೆ ಹಾಕುತ್ತಾರೆ. ಕೋರ್ಟಿನಲ್ಲಿ ಗೌಡ ಗೆದ್ದು ಗ್ರಾಮದವರಿಂದ ಹಾರ ಹಾಕಿಸಿಕೊಂಡು ಮೆರವಣಿಗೆ ಮಾಡಿಸಿಕೊಂಡ. ಇದರಿಂದ ಗ್ರಾಮದ ಮೂರು ಜನ ವಿರೋಧಿಗಳು ನಾಯಕನ ದಬ್ಬಾಳಿಕೆಯನ್ನು ಕೊನೆಗಾಣಿಸಲು, ಕುತಂತ್ರದಿಂದ ಗೌಡನನ್ನು ಕೊಲೆ ಮಾಡುವ ಸಿದ್ಧತೆಗಳು ನಡೆಯುತ್ತವೆ. ರಾಯದುರ್ಗದಿಂದ ರಸಗತ್ತಿಯನ್ನು ಮಾಡಿಸಿಕೊಂಡು ಬರುತ್ತಾರೆ. ಮನೆಯಲ್ಲಿದ್ದ ಪಾಪನಾಯಕನಿಗೆ ನಾಟಕ ಆಡಲು ಆಸಕ್ತರು ಕಾಯುತ್ತಾರೆಂದು, ಆಳೊಬ್ಬ ತಿಳಿಸಿದಾಗ ಆತ ನಾಟಕದ ಮನೆಗೆ ಬಂದಾಗ ಯಾರೂ ಇರಲಿಲ್ಲ. ಅಡಗಿ ಕುಳಿತಿದ್ದ ವ್ಯಕ್ತಿಯೊಬ್ಬ ನಾಯಕನಿಗೆ ಕತ್ತಿ ಬೀಸುತ್ತಾನೆ. ನಾಯಕ ಕೈಯೊಡ್ಡಿ ತಪ್ಪಿಸಿಕೊಳ್ಳುವ ಕೈಬೆರಳು ಕತ್ತರಿಸಿ ಹೋಗುತ್ತವೆ. ಹೊರಗೆ ಬಂದ ಗೌಡ ಕೊಲೆ ಸಂಚು ಅರಿತು ಮೊಳಕಾಲ್ಮೂರು ಆಸ್ಪತ್ರೆಗೆ ಗಾಡಿ ಮೂಲಕ ಹೋಗುತ್ತಾನೆ. ವಿರೊಧಿಗಳಿಗೆ ತಮ್ಮ ಕಾರ್ಯ ಅರ್ಥ ಆಯಿತೆಂದು ಆಸ್ಪತ್ರೆ ವೈದ್ಯನ ಹೆಂಡತಿ ಮೂಲಕ ಗೌಡನಿಗೆ ವಿಷ ಮಾತ್ರೆ, ಮುಲಾಮು ಕೊಟ್ಟು ಸಾಯಿಸಿದರು. ಇಂಥ ದುರಂತ ಈ ಭಾಗದಲ್ಲಿ ನಡೆದಿದ್ದು ಇದೇ ಮೊದಲು. ಇಂದಿಗೂ ಈ ಬಗ್ಗೆ ಜನಪದ ಸಾಹಿತ್ಯ ಪಾಪನಾಯಕನ ಬಗ್ಗೆ ಬೆಳಕು ಚೆಲ್ಲುತ್ತದೆ.

ಒಟ್ಟಾರೆ ಹೇಳುವುದಾದರೆ, ಕೋನಸಾಗರವು ಹಿಂದೆ ಪ್ರಾಚೀನ ನೆಲೆ ಆಗಿತ್ತು. ನಾಯಿಹಳ್ಳಿ, ಕಣಿವೆ, ಊರಹೊರವು, ಮೊರೆಕಲ್ಲು ಎಂಬ ಗ್ರಾಮಗಳಿದ್ದವು. ಮೌರ್ಯರ ಕಾಲದಲ್ಲಿ, ಜನಜೀವನ ನೆಲಸಿದ್ದ ಕಾರಣ ಆಗಿನ ಕಾಲದ ಸಮಾಧಿಗಳನ್ನು ಅಥವಾ ವಾಸಸ್ಥಾನಗಳನ್ನು ಗುಂಪು ಗುಂಪಾಗಿ ಮಾಡಿಕೊಂಡಿರುವ ಸಾಧ್ಯತೆಯಿದೆ. ಇದು ಬೃಹತ್ ಶಿಲಾಯುಗದ ಸಂಸ್ಕೃತಿಯ ನೆಲೆ. ಜಟ್ಟಂಗಿರಾಮೇಶ್ವರ, ಸಿದ್ದಾಪುರ ಉದಯಗೊಳ ಮೊದಲಾದ ನೆಲೆಗಳು ಇಲ್ಲಿ ೩೦-೪೦ ಕಿ.ಮೀ. ವ್ಯಾಪ್ತಿಯಲ್ಲಿರುವುದರಿಂದ ವಿವಿಧ ರಾಜವಂಶಗಳ ಆಳ್ವಿಕೆಗೆ ತುತ್ತಾಗಿದೆ ಎನ್ನಬಹುದು. ಬುಡಕಟ್ಟು ವೀರರು ಆಳ್ವಿಕೆ ನಡೆಸಿದ ಬಗ್ಗೆ ಗೌಡನ ದಿಮಾಕಿನ ಬಗ್ಗೆ ಸ್ಥಳೀಯ ಚರಿತ್ರೆ ಬೆಳಕು ಚೆಲ್ಲುತ್ತದೆ. ಆಧುನಿಕ ಕಾಲಘಟ್ಟದಲ್ಲಿ ಎರಡು ವಿಭಿನ್ನ ಸಮುದಾಯದ ನಡುವೆ ಹೋರಾಟವನ್ನು ಕೋನಸಾಗರದ ಗೌಡನ ಮೂಲಕ ತಿಳಿಯಬೇಕಾಗುತ್ತದೆ. ಒಟ್ಟಾರೆ ಈ ಗ್ರಾಮದ ಪುರಾತತ್ವ ಮತ್ತು ಚರಿತ್ರೆಯ ಮೇಲೆ ಮತ್ತಷ್ಟು ಬೆಳಕು ಚೆಲ್ಲುವ ಅಗತ್ಯವಿದೆ.



## ಆಧಾರಸೂಚಿ


೧. **ಜನಪದ ವೀರ ಗೀತೆಗಳು.,** (ಸಂ.) ಕೃಷ್ಣಮೂರ್ತಿ ಹನೂರು., ೧೯೮೭, ಕನ್ನಡ ಅಧ್ಯಯನ ಸಂಸ್ಥೆ, ಮೈ.ವಿ.ವಿ. ಮೈಸೂರು.
೨. ಪುಟ್ಟಣ್ಣ ಎಂ.ಎಸ್., ೧೯೯೬, **ಚಿತ್ರದುರ್ಗದ ಪಾಳೆಯಗಾರರು,** ಮದಕರಿ ಪ್ರಕಾಶನ, ಚಿತ್ರದುರ್ಗ, (ಮರುಮುದ್ರಣ).
೩. ವಿರೂಪಾಕ್ಷಿ ಪೂಜಾರಹಳ್ಳಿ., ೨೦೦೭, **ಚಿತ್ರದುರ್ಗ ಜಿಲ್ಲೆಯ ಬುಡಕಟ್ಟು ವೀರರು,** ಪ್ರಸಾರಾಂಗ, ಕನ್ನಡ ವಿ.ವಿ. ಹಂಪಿ.
೪. ವಿರೂಪಾಕ್ಷಿ ಪೂಜಾರಹಳ್ಳಿ., ೨೦೦೬, **ಚಿನ್ನಹಗರಿಸಿರಿ,** ಚಿನ್ನಹಗರಿ ಪ್ರಕಾಶನ, ಪೂಜಾರಹಳ್ಳಿ.
೫. *Mysore State Gazetteer, Chitradurga district.,* (Ed.)., B.N. Sri Sathyan, 1967, Govt Press.
೬ ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಮಾಹಿತಿ.

ಡಾ. ಬಿ. ಸುರೇಶ*

# ಬುರುಡಕಟ್ಟೆ ಗ್ರಾಮದ ಪ್ರಾಚ್ಯಾವಶೇಷಗಳು

ಚಿತ್ರದುರ್ಗ ಜಿಲ್ಲೆಯ ಹೊಸದುರ್ಗ ತಾಲ್ಲೂಕಿನ ಬುರಡಕಟ್ಟೆ ಗ್ರಾಮವು ತಾಲ್ಲೂಕು ಸ್ಥಳದಿಂದ ಪೂರ್ವದಿಕ್ಕಿನಲ್ಲಿ ೧೮ ಕಿ.ಮೀ. ದೂರದಲ್ಲಿದೆ. ಪ್ರಸ್ತುತ ಗ್ರಾಮದಲ್ಲಿ, ಮೊಟ್ಟಮೊದಲಿನ ಶಾಸನವೊಂದು ಗೋಚರಿಸಿದೆ. ಈ ಗ್ರಾಮದಲ್ಲಿ ಮೂರು ದೇವಾಲಯಗಳಿವೆ. ಒಂದು ಊರ ಹೊರಗಿರುವ ರಾಮಲಿಂಗೇಶ್ವರ ದೇವಾಲಯ, ಗುಡ್ಡದ ಮೇಲಿರುವ ರಂಗನಾಥ ಮತ್ತು ಗ್ರಾಮದಲ್ಲಿರುವ ಬಸವೇಶ್ವರ ದೇವಾಲಯ.

ಊರ ಹೊರಗಿನ ರಾಮಲಿಂಗೇಶ್ವರ ದೇವಾಲಯ ಸು.ಕ್ರಿ.ಶ. ೧೨ನೇ ಶತಮಾನದ ರಚನೆಯಾಗಿದೆ. ನಂತರ ಕಾಲದಲ್ಲಿ ಇದು ಸಂಪೂರ್ಣ ಮಣ್ಣಲ್ಲಿ ಹೊತ್ತು ಹೋಗಿದ್ದು, ಅದನ್ನು ಹೊಸದುರ್ಗ ಪ್ರಥಮ ದರ್ಜೆ ಕಾಲೇಜಿನ ರಾಷ್ಟ್ರೀಯ ಸ್ವಯಂ ಸೇವಾ ಸಂಘದ ವಿದ್ಯಾರ್ಥಿಗಳಿಂದ ೨೦೦೫ರಲ್ಲಿ ಸ್ವಚ್ಛತಾ ಕಾರ್ಯಕ್ರಮದಡಿ ಬೆಳಕಿಗೆ ತಂದೆವು. ಅಂದರೆ ಅದರ ಸುತ್ತಲಿನ ಮಣ್ಣನ್ನೆಲ್ಲಾ ತೆಗೆಸಿ ದೇವಾಲಯ ಮತ್ತೆ ಗೋಚರಿಸುವಂತೆ ಮಾಡಿದೆವು. ನಂತರ ಇತ್ತೀಚಿಗೆ ಸ್ಥಳೀಕರು ದೇವಾಲಯದ ಜೀರ್ಣೋದ್ಧಾರ ಕಾರ್ಯ ಕೈಗೊಂಡ ಸಂದರ್ಭದಲ್ಲಿ ದೇವಾಲಯದ ಬಲಬದಿಯಲ್ಲಿ ಒಂದು ಶಾಸನ ದೊರೆತಿದೆ. ಶಾಸನ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ್ದಾಗಿದೆ.

ಪೂರ್ವಾಭಿಮುಖವಾಗಿರುವ ದೇವಾಲಯವು ದ್ವಿಕೂಟ ಮಾದರಿಯಲ್ಲಿದೆ ಒಂದು ಗರ್ಭಗೃಹ ಪೂರ್ವಾಭಿಮುಖವಾಗಿ ಮತ್ತೊಂದು ಗರ್ಭಗೃಹ ದಕ್ಷಿಣಮುಖವಾಗಿದೆ. ಪೂರ್ವಾಭಿಮುಖವಾಗಿರುವ ಗರ್ಭ ಗೃಹವೇ ಮುಖ್ಯ ಗರ್ಭಗೃಹವಾಗಿದೆ. ಇದು ಚೌಕಾಕಾರವಾಗಿದ್ದು, ಶಿವಲಿಂಗವನ್ನು ಒಳಗೊಂಡಿದೆ. ಶಿವಲಿಂಗಕ್ಕೆ ಯಾವುದೇ ಪೀಠ, ಪಟ್ಟಿಕೆ, ಜಲಹರಿಗಳಿಲ್ಲ, ಬ್ರಹ್ಮಸೂತ್ರವನ್ನು ಒಳಗೊಂಡಿದೆ. ಗರ್ಭಗೃಹದ ಪ್ರವೇಶದ್ವಾರ ಪಂಚಶಾಖೆಗಳಲ್ಲಿದೆ. ಗರ್ಭಗೃಹಕ್ಕೆ ಹೊಂದಿಕೊಂಡಂತೆ ನಾಲ್ಕು ಮೂಲೆಗಂಬಗಳ



ಮುಚ್ಚಿದ ಅಂತರಾಳವಿದೆ. ಇಲ್ಲಿ ಗರ್ಭಗೃಹದಲ್ಲಿಯ ಶಿವಲಿಂಗಕ್ಕೆ ಅಭಿಮುಖವಾಗಿ ಕುಳಿತ ನಂದಿ ಇದೆ. ಇಲ್ಲಿಯ ಪ್ರವೇಶ ದ್ವಾರ ಸಹ ಪಂಚ ಶಾಖೆಗಳನ್ನು ಹೊಂದಿದೆ.



ದಕ್ಷಿಣಾಭಿಮುಖವಾಗಿರುವ ಗರ್ಭಗೃಹದಲ್ಲಿ ಸ್ಥಾನಕ ವಿಷ್ಣುವಿನ ಶಿಲ್ಪವಿದೆ. ಚತುರ್ಭುಜನಾದ ವಿಷ್ಣುವಿನ ಕೈಗಳಲ್ಲಿ ಪದ್ಮ, ಶಂಖ, ಚಕ್ರ ಮತ್ತು ಗದೆಗಳಿವೆ. ಈ ಆಯುಧಗಳಿಂದ ಕೇಶವನೆಂದು ಗುರುತಿಸಬಹುದು. ಎರಡೂ ಗರ್ಭಗೃಹಗಳಿಗೆ ಹೊಂದಿಕೊಂಡಂತೆ ಒಂದೇ ನವರಂಗವಿದೆ. ನವರಂಗ ನಾಲ್ಕು

* ಉಪನ್ಯಾಸಕರು, ಇತಿಹಾಸ ವಿಭಾಗ, ಸ್ನಾತಕೋತ್ತರ ಕೇಂದ್ರ, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ.

ಕಂಬಗಳನ್ನು ಒಳಗೊಂಡಿದೆ. ಕಂಬಗಳು ಪೀಠ, ಪಾದ, ಬಳೆಗಳಾಕಾರ, ಫಲಕ ಮತ್ತು ಸರಳ ಬೋದಿಗೆಯಲ್ಲಿವೆ, ಇಲ್ಲಿ ಭೈರವ ಮತ್ತು ಮಹಿಷ ಮರ್ದಿನಿ ಶಿಲ್ಪಗಳಿವೆ, (ಭೈರವ ಸಮಕಾಲೀನದ್ದಾಗಿದೆ ಮಹಿಷಿಮರ್ದಿನಿ ನಂತರದ ಕಾಲದ್ದಾಗಿದೆ) ದೇವಾಲಯದ ಪ್ರವೇಶ ಮುಖ್ಯದ್ವಾರ ಪಂಚಶಾಖೆಗಳಲ್ಲಿದೆ. ಇವುಗಳಲ್ಲಿ ಸ್ತಂಭ ಶಾಖೆ, ಲತಾಸುರಳಿ, ಪದ್ಮ, ವಲ್ಲಿಗಳಿವೆ. ಗರ್ಭಗೃಹ ಮತ್ತು ಅಂತರಾಳದ ಪ್ರವೇಶದ್ವಾರಗಳು ಇದೇ ರೀತಿ ಶಾಖೆಗಳನ್ನು ಒಳಗೊಂಡಿವೆ.

ನವರಂಗಕ್ಕೆ ಹೊಂದಿಕೊಂಡಂತೆ ನಾಲ್ಕು ಕಂಬಗಳ ಮುಖಮಂಟಪವಿದೆ. ಇದು ಸರಳವಾಗಿದೆ. (ಜೀರ್ಣೋದ್ಧಾರ) ದೇವಾಲಯದ ಬಾಹ್ಯಭಿತ್ತಿ ಸಂಪೂರ್ಣ ಹಾಳಾಗಿದೆ. ಮೊದಲೇ ತಿಳಿಸಿದಂತೆ ಇದು ಮಣ್ಣಿನಲ್ಲಿ ಹೂತು ಹೋಗಿತ್ತು. ಪ್ರಾಯಶಃ ದೇವಾಲಯದ ಹೊರಭಿತ್ತಿ ಹಾಳಾಗಿದ್ದಕ್ಕಾಗಿಯೇ ಸುತ್ತಲೂ ಮಣ್ಣನ್ನು ಹಾಕಿ, ದೇವಾಲಯ ಹಾಳಾಗದಂತೆ ರಕ್ಷಿಸಿರಬೇಕು. ಇಲ್ಲವೆ, ಶತ್ರುಗಳ ದಾಳಿಯನ್ನು ತಪ್ಪಿಸಲು ಸುತ್ತಲೂ ಮಣ್ಣನ್ನು ಹಾಕಿರಬೇಕು. ಚಿತ್ರದುರ್ಗ ಪರಿಸರದ ಸುಮಾರು ದೇವಾಲಯಗಳು ಇದೇ ರೀತಿಯಾಗಿರುವುದನ್ನು





ಇಲ್ಲಿ ಸ್ಮರಿಸಬಹುದು. ಶಿಖರ ಜೀರ್ಣೋದ್ಧಾರಗೊಂಡಿದೆ. ದೇವಾಲಯದ ದಕ್ಷಿಣಾಭಿಮುಖವಾಗಿರುವ ಗರ್ಭಗೃಹದ ಹಿಂಬದಿಯಲ್ಲಿಯೇ ಹೊಸ ಶಾಸನ ದೊರಕಿರುವುದಾಗಿದೆ.

## ದೇವಾಲಯದಲ್ಲಿರುವ ಶಿಲ್ಪಗಳು

**ವಿಷ್ಣು** : ಚತುರ್ಭುಜನಾದ ವಿಷ್ಣು ಗರುಡ ಪೀಠದ ಮೇಲೆ ಸಮಭಂಗದಲ್ಲಿರುವನು. ಹಿಡಿದಿರುವ ಆಯುಧಗಳಿಂದ ಈತನನ್ನು ಕೇಶವನೆಂದು ಗುರುತಿಸಬಹುದು. ಈತ ಕಿರೀಟಧಾರಿ ಉದ್ದನೆಯ ವೈಜಯಂತಿ, ಹಾರ, ಸರ, ಕುಂಡಲ, ತೋಳಬಂದಿ, ಕಾಲ್ಗಡಗ, ಕೈಗಡಗ ಮುಂತಾದ

ಆಭರಣಗಳಿಂದ ಅಲಂಕೃತಗೊಂಡಿರುವನು. ಶಿಲ್ಪದ ಸುತ್ತಲೂ ಮಕರ ತೋರಣವಿದೆ. ತೋರಣದಲ್ಲಿ ದಶ ಅವತಾರಗಳನ್ನು ತೋರಿಸಲಾಗಿದೆ. ವಿಷ್ಣುವಿನ ಇಕ್ಕೆಲಗಳಲ್ಲಿ ಶ್ರೀದೇವಿ-ಭೂದೇವಿಯರನ್ನು ತೋರಿಸಲಾಗಿದೆ. ಅವರು ತ್ರಿಭಂಗಿಯಲ್ಲಿ ನಿಂತಿರುವರು. ವಸ್ತ್ರಾಭರಣಭೂಷಿತರು, ಕಾಲಮಾನ ಸು. ಕ್ರಿ.ಶ. ೧೨ನೇ ಶಾತವಾಹನ.

**ಭೈರವ :** ಭೈರವನು ಪೀಠದ ಮೇಲೆ ತ್ರಿಭಂಗಿಯಲ್ಲಿರುವನು. ಚತುರ್ಭುಜನಾದ ಈತ ನಗ್ನನಾಗಿರುವನು. ಕೈಗಳಲ್ಲಿ ಕತ್ತಿ, ತ್ರಿಶೂಲ, ಡಮರು ಮತ್ತು ಫಲದೊಂದಿಗೆ ಹಿಡಿದಿರುವನು. ರುಂಡದಿಂದ ಬೀಳುತ್ತಿರುವ ರಕ್ತವನ್ನು ನಾಯಿ ನೆಗೆದು ಕುಡಿಯುತ್ತಿರುವಂತಿದೆ. ನಾಯಿಯನ್ನು ಕಿರಿದಾಗಿ ತೋರಿಸಿರುವರು. ಸಾಮಾನ್ಯವಾಗಿ ನಾಯಿಯನ್ನು ಭೈರವನ ಪೀಠದ ಮೇಲೆ ನಿಂತಿರುವಂತೆ ತೋರಿಸಲಾಗಿರುತ್ತದೆ. ಆದರೆ ಇಲ್ಲಿ ಪೀಠದ ನಾಯಿ ಸುಮಾರು ಅಂತರದಲ್ಲಿದೆ. ನಾಯಿಯ ಕೆಳಭಾಗದಲ್ಲಿ ಒಬ್ಬರ ಮೇಲೆ ಒಬ್ಬರಂತೆ ಪ್ರೇತಗಳು ಭೈರವನ ಕಾಲನ್ನು ಹಿಡಿದಿವೆ. ಭೈರವನ ಬಲಭಾಗದಲ್ಲಿಯೂ ಪ್ರೇತಗಳಿವೆ. ಈತನ ಕೂದಲು ಉಂಡೆ-ಉಂಡೆಯಾಗಿ ಕೆದರಿದಂತಿವೆ. ಹಾರ, ಸರ, ತೋಳಬಂಧಿ, ಸೊಂಟಪಟ್ಟಿ, ಉದ್ದನೆಯ ಹಾರ, ಕಾಲ್ಗಡಗ, ಕಿಂಚಣಿ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿರುವನು. ಶಿಲ್ಪದ ಸುತ್ತಲೂ ಪ್ರಭಾವಳಿ ಇದೆ. ಇದರ ಕಾಲಮಾನ ಕ್ರಿ.ಶ.೧೨ನೇ ಶತಮಾನ.

**ಮಹಿಷಮರ್ದಿನಿ :** ದೇವಿ ಅಷ್ಟಭುಜೆ. ಬಲ ಮುಂದಿನ ಕೈಯಲ್ಲಿ ಉದ್ದನೆಯ ಈಟಿಯನ್ನು ಹಿಡಿದು ಎಡಮುಂದಿನ ಕೈಯಲ್ಲಿ ಹಿಡಿದಿರುವ ಕೋಣಕ್ಕೆ ತಿವಿದಿರುವಳು. ಉಳಿದ ಕೈಗಳಲ್ಲಿ ಕತ್ತಿ, ಗುರಾಣಿ, ಫಲ ಮುಂತಾದವುಗಳನ್ನು ಹಿಡಿದಿರುವಳು, ಕಿವಿಯಲ್ಲಿ ಪತ್ರಕುಂಡಲಗಳಿವೆ. ಕಿರೀಟ, ಕೈ, ಕಾಲ್ಗಡಗ ಕೇಯೂರ ಹಾರ, ಸರ ಮುಂತಾದ ಆಭರಣಗಳಿಂದ ಅಲಂಕೃತಗೊಂಡಿರುವಳು. ಶಿಲ್ಪ ಪ್ರಮಾಣ ಬದ್ಧವಾಗಿ ನಿರೂಪಣೆಗೊಂಡಿಲ್ಲ. ಇದರ ಕಾಲಮಾನ ಸು.ಕ್ರಿ.ಶ. ೧೬-೧೭ನೇ ಶತಮಾನ.

**ಶಾಸನ :** ಶಾಸನ ಒರಟು ಕಲ್ಲಿನಲ್ಲಿ ಎರಡೂ ಕಡೆ ಬರೆಯಲ್ಪಟ್ಟಿದೆ. ಸ್ವಲ್ಪ ಆದಿಕಾಲದ್ದಾಗಿದೆ. ಇಲ್ಲಿ ಆರು ಸಾಲಿನ ಶಾಸನವಿದೆ. ಹಿಂಭಾಗದಲ್ಲಿ ಬರೆಯಲ್ಪಟ್ಟಿರುವುದು ಸ್ವಲ್ಪ ನಂತರ ಕಾಲದ್ದಾಗಿದೆ. ಇಲ್ಲಿ ಐದು ಸಾಲುಗಳ ಶಾಸನವಿದೆ.

**ಪಾಠ**

೧ ಸ್ವಸ್ತಿ ನ್ದಿ ಶಿ ಮ ಪ್ಯ ರು ದು.........

೨ ಪ. ರಾ ಧ್ಯ ಯ ನ ರ ಸಿ.........

೩ ಶ್ರೀ ಮಜ್ಜುಬಿತ ಕೊಂದಿತಲರಸನು

೪ ........ಪೈಗ ಮನಿನೆಲ್ಲವು (ಮೊನಿತಿಲ್ಲಿ) ಪುರ ಕೊಟ್ಟ ಮತ್ತರು

೫ ನಾಲ್ಕು ಮತ್ತರ ತೊಂಟ ಮುವತ್ತು ಮತ್ತರು ಸುರಿದು.

೬ ಈ ಗೊಲ್ಲ ದ ಮಾನ ನೊಯ್ದು

ಶಾಸನವು ಪುರ, ತೋಟ, ೩೦ ಮತ್ತರು, ೧ ಮಾನ ಎಣ್ಣೆಯನ್ನು ದತ್ತಿ ನೀಡಿದ ಬಗ್ಗೆ ತಿಳಿಸಿದೆ. ಈ ಶಾಸನದ ಕಾಲಮಾನ ಸು.ಕ್ರಿ.ಶ. ೧೦ನೇ ಶತಮಾನ.

*ಹಿಂಭಾಗದಲ್ಲಿರುವ ಶಾಸನದ* **ಪಾಠ**

೧ ಸ್ವಸ್ತಿಶ್ರೀ ಪುಜ್ಜದ ಮತ(ಹಾ) ಜನಕೆ ಜ ದು...

೨ ರವರ ಶಖಲ ಮ(ವ)ನ್ಸಿತದ ಮೂರನೂರ ಪುರ ಕೋ

೩ ಗಳಿಯ ಗಾಮುಣ್ಡರ ಅರಸರ ರಾಜ ದುಮ್ಮಣ್ಣ

೪ .........ರಶ..........ಚಟ್ಟರಸರ

೫ ಕೆ....................

ಈ ಶಾಸನದಲ್ಲಿ ಮಹಾಜನ, ಮೂರು ನೂರು ಪುರ ಕೊಗಳಿ, ಗಾವುಂಡರ ಅರಸ ರಾಜ ದುಮ್ಮಣ್ಣ, ಚಟ್ಟರಸ ಮುಂತಾದವರ ಉಲ್ಲೇಖ ನೀಡುತ್ತದೆ. ಇದರ ಕಾಲಮಾನ ಸು.ಕ್ರಿ.ಶ. ೧೧ನೇ ಶತಮಾನದ ಆಧಿಭಾಗ.

(ಈ ಶಾಸನವನ್ನು ಓದಿ ಅರ್ಥೈಸಿಕೊಟ್ಟ ಡಾ. ರು.ಮ. ಷಡಕ್ಷರಯ್ಯ, ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕ.ವಿ.ವಿ., ಧಾರವಾಡ ಅವರಿಗೆ ಧನ್ಯವಾದಗಳು.)



ರಾಕೇಶ್ ಬಿ.ಸಿ.*

# ಹರಿಹರ ತಾಲ್ಲೂಕು ಭೈರನಪಾದದ ಪ್ರಾಚೀನ ಅವಶೇಷಗಳು

ಭೈರನಪಾದವು ದಾವಣಗೇರಿ ಜಿಲ್ಲೆಯ ಹರಿಹರ ತಾಲ್ಲೂಕಿನ ಮಲೆಬೆನ್ನೂರು ಹೋಬಳಿಯ ಒಂದು ಐತಿಹಾಸಿಕ ಸ್ಥಳವಾಗಿದೆ. ಇಲ್ಲಿ ಜನವಸತಿ ಇರುವುದಿಲ್ಲ. ಈ ಸ್ಥಳವು ಪುಣ್ಯಸ್ಥಳ ಮತ್ತು ನೈಸರ್ಗಿಕ ತಾಣವಾಗಿದೆ. ಇಲ್ಲಿ ತುಂಗಾಭದ್ರಾನದಿ ಹರಿಯುತ್ತಿದ್ದು ಪಕ್ಕದಲ್ಲಿ ಗುಡ್ಡವಿದ್ದು ಮೇಲಿಂದ ನೋಡಿದಾಗ ದ್ವೀಪ ಮತ್ತು ನೀರಿನಲ್ಲಿ ಮುಳುಗಿದಂತೆ ಕಾಣುವ ಬಂಡೆಗಳು ಆಕರ್ಷಕವಾಗಿ ಕಂಡುಬರುತ್ತವೆ. ಇದೊಂದು ಪುಣ್ಯಕ್ಷೇತ್ರವಾಗಿದ್ದು ಸಂಕ್ರಮಣದ ಕಾಲದಲ್ಲಿ ಅತೀ ಹೆಚ್ಚಿನ ಭಕ್ತಾದಿಗಳು ಇಲ್ಲಿಗೆ ಆಗಮಿಸುತ್ತಾರೆ. ಈ ಸ್ಥಳವು ನಂದೀಗುಡಿ–ಹೊನ್ನಾಳಿ ಮುಖ್ಯರಸ್ತೆಯಲ್ಲಿ ಗೋವಿನಾಳ ಗ್ರಾಮದಿಂದ ಸುಮಾರು ಒಂದು ಕಿ.ಮೀ. ಅಂತರದಲ್ಲಿ ಮುಖ್ಯರಸ್ತೆಯ ಬಲಭಾಗದ ನದಿಯ ದಂಡೆಯ ಮೇಲೆ ಕಂಡುಬರುತ್ತದೆ. ಈ ದೇವಾಲಯವು ಪಶ್ಚಿಮಕ್ಕೆ ಮುಖ ಮಾಡಿದ್ದು ಎದುರಿಗೆ ತುಂಗಭದ್ರಾನದಿಯು ಹರಿಯುತ್ತದೆ. ನದಿಯ ಎಡದಂಡೆಯಲ್ಲಿ ಬೈರನಪಾದ ಎಂಬ ಐತಿಹಾಸಿಕ ಸ್ಥಳವಿದೆ. ಈ ದೇವಾಲಯವು ಸರಳವಾಗಿದ್ದು ಅಲ್ಲಿರುವ ಶಾಸನದ ಆಧಾರದ ಮೇಲಿಂದ ೧೨ನೇ ಶತಮಾನದಲ್ಲಿ ಸ್ಥಾಪಿಸಿದ್ದು ಎಂದು ಹೇಳಬಹುದು. ಗರ್ಭಗುಡಿಯ ಪೀಠದ ಮೇಲೆ ಮೂರು ಸಾಲುಗಳನ್ನು ಒಳಗೊಂಡ ಶಾಸನ ಕಂಡುಬರುತ್ತದೆ.



* ಸಂಶೋಧನಾ ವಿದ್ಯಾರ್ಥಿ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

೧ ಸರ್ವ್ವಧಾರಿ ಸಂವತ್ಸರ (ಪುಷ್ಯಮಾಸ) ಸುದ್ಧ ೫ ಆದಿವಾರದಲು ಶ್ರೀ
೨ ಕೊಂಲಬ್ಬಸೆಟ್ಟಿಯೆಕಸರನು ಶ್ರೀ ಬೈರವ ದೇವರ ಪಾದ
೩ [ಲೆ]ಡೆಸಿದನು

ಈ ಶಾಸನವು ಸರ್ವ್ವಧಾರಿ ಸಂವತ್ಸರ ಪುಷ್ಯಮಾಸ ಶುದ್ಧ ೫ ಭಾನುವಾರದಲ್ಲಿ ಕೊಲಬ್ಬಸೆಟ್ಟಿಯೆಕರಸ ಎಂಬುವನು ಬೈರನಪಾದವನ್ನು ಪ್ರತಿಷ್ಠಾಪಿಸಿದ್ದನ್ನು ತಿಳಿಸುತ್ತದೆ. ಈ ದೇವಾಲಯವು ತುಂಗಭದ್ರಾನದಿ ದಂಡೆಯ ಮೇಲಿದ್ದು ಮೆಟ್ಟಿಲುಗಳ ಸಹಾಯದಿಂದ ನದಿಗೆ ಇಳಿಯಬಹುದು. ಗರ್ಭಗುಡಿ ಚಚ್ಚೌಕವಾಗಿದ್ದು ಸುಮಾರು ೪' x ೪' ಅಳತೆಯನ್ನು ಹೊಂದಿದೆ. ಮಧ್ಯದಲ್ಲಿ ಒಂದು ಮೀಟರ್ ಅಗಲ ಮತ್ತು ಒಂದು ಮೀಟರ್ ಉದ್ದ ಪೀಠದ ಮೇಲೆ ೨ ಪಾದುಕೆಗಳಿವೆ. ಈ ಪಾದಗಳು ೨ ಇಂಚು ಎತ್ತರ ಒಂದು ಅಡಿ ಉದ್ದವನ್ನು ಹೊಂದಿವೆ. ಪಾದುಕೆಯ ಮೇಲೆ ಉಂಗುಷ್ಠಚಿತ್ರವನ್ನೂ ನಾವು ಕಾಣಬಹುದು. ಈ ಪಾದುಕೆಗಳಿಗೆ ಹೊಂದಿಕೊಂಡತೆ ಏಕಹೆಡೆಯ ನಾಗರಹಾವು ಸುತ್ತಿಕೊಂಡು ಇರುವ ಹಾಗೆ ಕೆತ್ತಲಾಗಿದೆ. ಇದರ ಹೆಡೆಯು ಎರಡೂ ಪಾದಗಳ ಮಧ್ಯ ಇದ್ದು ನೋಡಲು ಸುಂದರವಾಗಿದೆ. ಗರ್ಭಗುಡಿಯ ಗೋಡೆಯು ಸಾದಾ ಇದ್ದು ಭುವನೇಶ್ವರಿಯು ಅರಳಿದ ಕಮಲವನ್ನು ಹೊಂದಿದೆ. ಗರ್ಭಗುಡಿಯ ಬಾಗಿಲ ಲಲಾಟ ಬಿಂಬದಲ್ಲಿ ಶಿವಲಿಂಗವಿದ್ದು ಹಾರದಿಂದ ಅಲಂಕೃತಗೊಂಡಿದೆ.

ಗರ್ಭಗುಡಿಯ ಮುಂದೆ ತೆರೆದ ಮುಖ ಮಂಟಪವಿದ್ದು ೨ ಕಂಬಗಳನ್ನು ಹೊಂದಿದೆ. ಪಕ್ಕದಲ್ಲಿ ಗೋಡೆಯಿಂದ ಆವೃತವಾಗಿದ್ದು ಸಾದಾ ಗೋಡೆಯನ್ನು ಹೊಂದಿದೆ. ಕಂಬಗಳು ಸರಳವಾಗಿದ್ದು ಬೋದಿಗೆಯನ್ನು ಹೊಂದಿದೆ. ಭುವನೇಶ್ವರಿಯು ಸರಳವಾಗಿದ್ದು ತೊಲೆಯಿಂದ ಕೂಡಿದೆ. ಮುಖ ಮಂಟಪಕ್ಕೆ ಹೊಂದಿಕೊಂಡಂತೆ ಮೆಟ್ಟಿಲುಗಳು ಇವೆ. ಮೆಟ್ಟಿಲುಗಳ ಮುಂದೆ ಸಾಗಿದರೆ ಕಲ್ಲಿಂದ ಮಾಡಿದ ಪಾದಪೀಠ ಸರಳವಾಗಿ ಅಲಂಕೃತಗೊಂಡಿದೆ. ಇದನ್ನು ದಾಟಿ ಮುಂದೆ ಸಾಗಿದರೆ ತುಂಗಭದ್ರಾನದಿಯು ಕಂಡುಬರುತ್ತದೆ.

**ಇತರ ಶಿಲ್ಪ ಮತ್ತು ರಚನೆ :** ಈ ದೇವಾಲಯದ ಪಕ್ಕದಲ್ಲಿ ಬೇವಿನ ಮರದ ಕಟ್ಟೆಯಿದ್ದು ಮೂರು ಏಕನಾಗರ ಶಿಲ್ಪಗಳು, ಮೂರು ಜೋಡಿನಾಗರ ಶಿಲ್ಪಗಳು ಜೊತೆಗೆ ಎರಡು ಗುಂಡುಗಳಿವೆ. ಇವುಗಳ ಜೊತೆಗೆ ಭಗ್ನಗೊಂಡ ವಿಷ್ಣುವಿನ ವಿಗ್ರಹವಿದೆ. ಇದು ಸುಂದರವಾಗಿದ್ದು ಪಟ್ಟಿಕೆಗಳಿಂದ ಅಲಂಕೃತಗೊಂಡಿದೆ. ಇದರ ಎರಡೂ ಕೈಯಲ್ಲಿ ಚಕ್ರ ಶಂಖವನ್ನು ಹೊಂದಿದೆ. ಕಿರೀಟದ ಭಾಗವು ಸ್ವಲ್ಪ ಹಾಳಾಗಿದ್ದು ಉಳಿದ ಭಾಗವು ಚೆನ್ನಾಗಿದೆ. ಮುಖಭಾಗವು ಸ್ವಲ್ಪ ಹಾಳಾಗಿದ್ದು



ತಲೆಯ ಹಿಂದಿನ ಭಾಗವು ಅಲಂಕಾರಿಕವಾಗಿದೆ. ಪೂರ್ತಿಯಾಗಿ ಶಿಲ್ಪವು ಹಾರ, ಜನಿವಾರ, ಕಚ್ಚೆಗಳಿಂದ ಅಲಂಕೃತಗೊಂಡಿದೆ. ಈ ಶಿಲ್ಪವು ಮೂಲತಃ ಬೇರೆಡೆ ಇದ್ದು ನಂತರ ಸ್ಥಳಾಂತರಗೊಂಡಿರುವಂತಿದೆ. ಈ ಶಿಲ್ಪವು ಮೂರು ತುಂಡಾಗಿದೆ. ಪಕ್ಕದಲ್ಲಿರುವ ಗುಡ್ಡದ ಮೇಲೆ ಪೂರ್ವಕ್ಕೆ ಮುಖ ಮಾಡಿದ ಪಾದಪೀಠಗಳುಳ್ಳ ಇತ್ತೀಚೆಗೆ ಜೀರ್ಣೋದ್ಧಾರಗೊಂಡ ಚಿಕ್ಕದಾದ ಗುಡಿಯಿದೆ.

ಬೈರನಪಾದದ ದೇವಾಲಯವು ಇತ್ತೀಚೆಗೆ ಜೀರ್ಣೋದ್ಧಾರವಾಗಿದ್ದು ವಂಶಪಾರಂಪರ್ಯವಾಗಿ ರಟ್ಟೆಹಳ್ಳಿ ಸಿದ್ದಪ್ಪನವರು ಪೂಜಾರಿಗಳಾಗಿ ಸೇವೆ ಸಲ್ಲಿಸುತ್ತಾ ಬಂದಿದ್ದಾರೆ. ಇವರು ಗೋವಿನಾಳ ಗ್ರಾಮದಲ್ಲಿ ವಾಸವಾಗಿದ್ದಾರೆ.

(ಇಲ್ಲಿಯ ಛಾಯಾಚಿತ್ರ ಮತ್ತು ಶಾಸನ ಪ್ರತಿಯನ್ನು ತೆಗೆಯಲು ಸಹಕರಿಸಿದ ಗ್ರಾಮ ಆಡಳಿತ ಅಧಿಕಾರಿ ಎಚ್.ಪಿ. ನಾಗರಾಜ ಅವರಿಗೂ ಶಾಸನವನ್ನು ಓದಲು ಸಹಕರಿಸಿದ ಪ್ರೊ. ಪಾಡಿಗಾರ್ ಎಸ್.ವಿ. ರವರಿಗೂ ಪ್ರಬಂಧವನ್ನು ರಚಿಸುವಲ್ಲಿ ಸಹಾಯಕರಿಸಿದ 'ಹನುಮಂತ ಮೇಲಿನಮನಿ' ಮತ್ತು 'ಮಹೇಶ್ ಹುಡೇದ್'ರವರಿಗೆ ಧನ್ಯವಾದಗಳು.)



ಡಾ. ಚನ್ನಕ್ಕ ಪಾವಟೆ*

# ಶಿವಮೊಗ್ಗ ಪರಿಸರದಲ್ಲಿ ಸೂರ್ಯೋಪಾಸನೆ

ಸೂರ್ಯಾರಾಧನೆ ಭಾರತದೇಶದ ಅತ್ಯಂತ ಪ್ರಾಚೀನ ಆರಾಧನೆಯಾಗಿದೆ. ಭಾರತದ ಜನಪದ, ಶಿಷ್ಟ ಧಾರ್ಮಿಕ ಸಾಹಿತ್ಯಗಳಲ್ಲಿ ರಾಮಾಯಣ, ಮಹಾಭಾರತ ಮಹಾಕಾವ್ಯಗಳಲ್ಲಿ ವಾಸ್ತುಶಿಲ್ಪ, ಶಾಸನ, ಜ್ಯೋತಿಷ್ಯ ತಂತ್ರಕರ್ಮಗಳಲ್ಲಿ ಸೂರ್ಯನಿಗೆ ದೊರಕಿದುದು ಅಗ್ರಸ್ಥಾನ. ಸೌರಪಂಥವೆಂಬ ಸೂರ್ಯೋಪಾಸನಾ ಧರ್ಮ, ಶಿವಮೊಗ್ಗ, ಹಾವೇರಿ ಜಿಲ್ಲಾ ಪ್ರದೇಶದ ತಿಳವಳ್ಳಿ, ಮೂಗೂರು, ನಾಗನೂರ, ಬಾಳೂರು, ಮುಗುಳಗೆರೆ, ಬೆಳಗುತ್ತಿ, ಸಂತೆಶಿವರ ಪರಿಸರದಲ್ಲಿ ಪ್ರಮುಖ ಪಂಥವಾಗಿ ಹಬ್ಬಿತ್ತು ಎಂಬುದಕ್ಕೆ ಸಾಕ್ಷಿಯಾಗಿ ಆ ಭಾಗದಲ್ಲಿ ಸೂರ್ಯೋಪಾಸನೆ, ಸೂರ್ಯಕಿರಣ ಮತ್ತು ಸೂರ್ಯ ಆಚರಣೆಗಳು ಜರುಗುತ್ತಿದ್ದುದನ್ನು ಪುಷ್ಟೀಕರಿಸುವ ಅನೇಕ ಆಕರಗಳಿವೆ. ಹಾನಗಲ್ಲದಿಂದ ಶಿವಮೊಗ್ಗೆಯುವರೆಗಿನ ಕೆಲವು ಪ್ರದೇಶಗಳು ಸೌರಪಂಥದ ಆಚರಣೆಯ ಪ್ರಮುಖ ಸ್ಥಳಗಾಳಗಿದ್ದವು.

**ಮೋಕ್ಷ ಸಾಧನೆಯ ಪ್ರಯತ್ನ :** ಬ್ರಹ್ಮನು ಸೂರ್ಯನನ್ನು ಪ್ರತಿನಿಧಿಸುತ್ತಾನೆಂಬ ವಿಷಯ ವೇದಗಳಲ್ಲಿದೆ. ಲೋಕಕ್ಕೆ ಒಡೆಯನಾದ ಸೂರ್ಯನಿಗೆ ಗ್ರಹಣದಿಂದ ಆಪತ್ತು ಒದಗಿದಾಗ ಅದನ್ನು ತಪ್ಪಿಸಲು ಶಾಂತ್ಯಾರ್ಥವಾಗಿಯೇ ಸೂರ್ಯನ ಜೊತೆ ತಾವೂ ಸಾಯುವುದು, ತಮ್ಮ ಜೀವನದ ಪರಮಕರ್ತವ್ಯವೆಂದೋ, ಸೂರ್ಯನು ರಾಹುವಿನ ಬಲೆಗೆ ಸಿಕ್ಕಾಗ ಉಂಟಾಗುವ ದುಃಖದಿಂದಲೋ, ಮೂಲತಃ ಆದಿ ಮಾನವರಲ್ಲಿ ಇದ್ದಿರಬಹುದಾದ ಈ ಆತ್ಮಬಲಿ, ಮುಂದೆ ಧಾರ್ಮಿಕ ಆಯಾಮಗಳನ್ನು ಪಡೆದುಕೊಂಡಿತು. ಆತ್ಮಬಲಿಯ ಉದ್ದೇಶ ಮೋಕ್ಷಸಾಧನೆ ಎಂಬ ಪರಿಕಲ್ಪನೆ ಭಾರತೀಯರಲ್ಲಿ ಪ್ರಬಲವಾಗಿತ್ತು. ಇತಿಹಾಸ ಕಾಲದಲ್ಲಿ ಅಗ್ನಿ ಪ್ರವೇಶವೇ ಮೊದಲ ಪ್ರಚೋದನೆಯಾದರೂ, ಅದು ಆದಿಕಾಲದ ಆಚರಣೆಯೊಂದರ ಅವಶೇಷವಾಗಿರುವ ಸಾಧ್ಯತೆಯೇ ಹೆಚ್ಚು ಎಂಬ ಅಭಿಪ್ರಾಯ ಡಾ. ಚಿದಾನಂದಮೂರ್ತಿಯವರದು.[೧]

ಇದನ್ನು ಕುರಿತು ಕಲಬುರ್ಗಿಯವರು "ಸೂರ್ಯ ಗ್ರಹಣ, ಭಾರತೀಯರ ದೃಷ್ಟಿಯಲ್ಲಿ ಸೂರ್ಯನನ್ನು ರಾಹು ನುಂಗುವ ಸಂದರ್ಭವೆಂದೂ ಪ್ರತೀತಿ ಇದೆ. ರಾಹುವಿನ ಹೊಡೆತಕ್ಕೆ ಸಿಕ್ಕಿ ಸಂಕಟಪಡುತ್ತಿರುವ ಸೂರ್ಯನಿಗಾಗಿ ಚಿತಾಪ್ರವೇಶ ಮಾಡುವ ಮೂಲಕ ಸಹಾನುಭೂತಿಯುಕ್ತ ಧಾರ್ಮಿಕ ಮರಣ ಹೊಂದುವುದರಿಂದ ಮೋಕ್ಷ ಸಿಗುವುದೆಂಬ, ಸೂರ್ಯಲೋಕ ಪ್ರಾಪ್ತವಾಗುವುದೆಂಬ, ಹಿಂದೂಗಳ ಭಾವನೆ ಕರ್ನಾಟಕದಲ್ಲಿ ತುಂಬ ಪ್ರಾಚೀನ" ಎಂಬ ಹೇಳಿಕೆ ಸೂರ್ಯಗ್ರಹಣ ಸಂದರ್ಭದ ಅಗ್ನಿಪ್ರವೇಶದ ಹಿಂದಿನ ಮನೋಭಾವನೆಗೆ ಸೂಚನೆಯೆನಿಸಿದೆ.

ಕರ್ನಾಟಕದಲ್ಲಿ ಅಗ್ನಿಪ್ರವೇಶಕ್ಕೆ ಸಂಬಂಧಿಸಿದಂತೆ ಆತ್ಮಬಲಿಗಳನ್ನು ಸೂಚಿಸುವ ಒಂಭತ್ತು ಶಾಸನಗಳು ಈವರೆಗೆ ಗುರುತಿಸಲ್ಪಟ್ಟಿವೆ. ಸೂರ್ಯಗ್ರಹಣದಂತಹ ದಿನಗಳೇ ಆತ್ಮಬಲಿ ಯಂತಹ ಧಾರ್ಮಿಕ ಕಾರ್ಯಗಳಿಗೆ ಶುಭದಿನಗಳೆಂದೂ, ಅಂದು ಮಡಿದವರಿಗೆ ಸೂರ್ಯಲೋಕವು ಪ್ರಾಪ್ತ ವಾಗುವುದೆಂಬ ನಂಬಿಕೆಯು ಪ್ರಾಚೀನರಲ್ಲಿತ್ತು. ಅವುಗಳನ್ನಿಲ್ಲಿ ಪರಿಶೀಲಿಸಬಹುದಾಗಿದೆ.

**ಹಿರೇಕೆರೂರ ತಾ. ನಾಗವಂದ ದಾಖಲೆ[೨] (ಕ್ರಿ.ಶ. ೧೧೨೦):** "ಸ್ವಸ್ತಿ ಶ್ರೀಮಚಾಳುಕ್ಯ ವಿಕ್ರಮವಂಶ ೪೫ನೆಯ ಸಾರ್ವರಿ ಸಂವತ್ಸರದ ಕಾರ್ತಿಕದಮವಾಸ್ಯೆ ಆದಿವಾರದಂದು ಉಡೆಯಮಗೊಂಡನೂರು ನಾಗಾರ್ಜುನದಲ್ಲಿ ಸೂರ್ಯ ಗ್ರಹಣದಲು ದೇವರ ಬಂಟ ಬೀಚಿಗಂ ಸೂರ್ಯಲೋಕ ಪ್ರಾಪ್ತನಾತನ ಗುರುಗಳು ನಾಗರಾಸಿಪಂಡಿತರು ಕಲ್ಲುಕಂಭಮಂ ನಿಲಿಸಿ ಪಡಿಸಲಿಸುತ್ತಮಿದ್ದರು" ಮಂಗಳ ಮಹಾಶ್ರೀ ಎಂದು ಶಾಸನ ವಿವರಿಸಿದೆ.

ಹಿರೇಕೆರೂರ ತಾಲೂಕಿನ ಉಡೆಯಮಗೊಂಡನೂರು ನಾಗಾರ್ಜುನದಲ್ಲಿ ಬೀಚಿಗನೆಂಬವ ಕ್ರಿ.ಶ. ೧೧೩೦ ಅಕ್ಟೋಬರ ೩೧ರಂದು ಸೂರ್ಯಗ್ರಹಣ ಸಂದರ್ಭದಲ್ಲಿ

* ಪ್ರಾಧ್ಯಾಪಕರು, ಕನ್ನಡ ವಿಭಾಗ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಆತ್ಮಬಲಿಯಾದ ವಿಷಯವಿದು. ದೈವಭಕ್ತನಾದ ಬೀಚಿಗನು ಮೋಕ್ಷಾರ್ಥಿಯಾಗಿ ಆತ್ಮಬಲಿ ಮಾಡಿಕೊಳ್ಳಲು. ಆತನ ಗುರು ನಾಗರಾಶಿಪಂಡಿತರು ಆತನಿಗೆ ಸಮಾಧಿ ಕಲ್ಲನ್ನು ಪ್ರತಿಷ್ಠಿಸಿ ಶಾಸನ ಬರೆಯಿಸಿರುವರು.

**ಸೊರಬ ತಾಲೂಕಿನ ಮೂಗೂರು ದಾಖಲೆ**[೪] **(ಕ್ರಿ.ಶ. ೧೧೨೯):** "ಶ್ರೀಮತು ಭೂಲೋಕಮಲ್ಲ ವರ್ಷದ ಆರನೆಯ ಸೌಮ್ಯ ಸಂವತ್ಸರ ಮಾಘ ಬಹುಳ ಅಮವಾಸೆ ಸೂರ್ಯಗ್ರಹಣದಲು ಕಲಿ ... ತಳೆದ ರಾಚೇಯಜೀಯ ... ಭಟ್ಟ ಅಗ್ನಿಪ್ರವೇಶ ಮಾಡಿ ಸುರಲೋಕ ಪ್ರಾಪ್ತನಾದ. ಅವರಣ್ಣ ನಾರಸಿಂಹ ಕಾಳೇಯ ಕಲಕಟ್ಟಿ".

ಇಲ್ಲಿ ಅಗ್ನಿಪ್ರವೇಶ ಮಾಡಿದವನು ರಾಚೇಯಜೀಯಭಟ್ಟ ಸುರಲೋಕ ಪಡೆದ, ಅವನ ಹೆಸರಿನಲ್ಲಿ ಕಲ್ಲು ನಿಲ್ಲಿಸಿದವ, ಆತನ ಅಣ್ಣ ಬಹುಶಃ ನಾರಸಿಂಹ ಹೆಸರಿನವ.

**ಬಾಳೂರಿನ ಶಾಸನ ದಾಖಲೆ (ಕ್ರಿ.ಶ. ೧೧೩೦)**[೫] : ಸ್ವಸ್ತಿ ಶ್ರೀಮತು ಸಖವರ್ಷದ ೧೦೫೩ನೆಯ ಸಂವತ್ಸರದ ಅಶ್ವಯುಜ ಬಹುಳ ದೀಪಾವಳಿ ಅಮವಾಸೆ... ವಡ್ಡವಾರದಂದು ಶ್ರೀಮತು ಬಾಳೇವೂರ ಬಮ್ಮಗಾವುಂಡನ ಮಗ ಕಾಳಗಾವುಡ ಕೊಟ್ಟ ಕಲು.। ಸಾಹಣಿ ವೊಲ್ಲೆಯನ ಮಗಂ ಚಂಡಂ ಸೂರಿಯಗ್ರಹಣದಲು ಕಿಚ್ಚು ಹಾಯ್ದು ಸ್ವರ್ಗಸ್ತನಾದ.

ಇಲ್ಲಿ ಅಗ್ನಿಪ್ರವೇಶ ಮಾಡಿದವನು ಚಂಡ ಎಂಬವ. ಶಾಸನ ಹಾಕಿಸಿದವನು ಕಾಳಗಾವುಡ. ಶಿಲ್ಪದ ಕೆಳಗಿನ ಹಂತದಲ್ಲಿ ಬಲಗಡೆ ಬೆಂಕಿ ಉರಿಯುತ್ತಿದೆ. ಪಕ್ಕದ ಕಂಬದ ಮೇಲೆ ಚಂಡ ನಿಂತು ಕೈಯಿಂದ ಬೆಂಕಿಗೆ (ಎಣ್ಣೆ ತುಪ್ಪದಂತಹ ತೈಲವ) ಎಣ್ಣೆ ಹೊಯ್ಯುತ್ತಿದ್ದಾನೆ. ಮಧ್ಯದ ಹಂತದಲ್ಲಿ ದೇವತಾಸ್ತ್ರೀಯರು ಅವನನ್ನು ಮೇಲಕ್ಕೆ ಕೊಂಡೊಯ್ಯುತ್ತಿದ್ದಾರೆ. ಮೇಲಿನ ಹಂತದಲ್ಲಿ ಚಂಡ ಸೂರ್ಯಲೋಕದಲ್ಲಿ ಕೈಮುಗಿದು ಕುಳಿತಿದ್ದಾನೆ. ಚಂಡನ ಎಡಕ್ಕೆ ಸರ್ಪರೂಪಿ ರಾಹು ಸೂರ್ಯನನ್ನು ನುಂಗುತ್ತಿರುವುದನ್ನು ಕಾಣಬಹುದಾಗಿದೆ.

**ಬೆಳಗುತ್ತಿ ಶಾಸನ ದಾಖಲೆ (ಕ್ರಿ.ಶ. ೧೧೩೩)**[೬]: ಬೀರಯ್ಯನೆಂಬವ ಶಿವರಾತ್ರಿ ಅಮವಾಸೆಯ ದಿನ ಸೂರ್ಯಗ್ರಹಣ ಸಂದರ್ಭದಲ್ಲಿ ಸುರಲೋಕ ಪ್ರಾಪ್ತವಾಗಿರುವನು.

**ತಿಳವಳ್ಳಿ ಶಾಸನ ದಾಖಲೆ (ಕ್ರಿ.ಶ. ೧೧೪೧)**[೭] : "ಸ್ವಸ್ತಿ ಯಮ ನಿಯಮ ಸ್ವಾಧ್ಯಾಯ ಧಾರಣ ಮೌನಾನುಷ್ಠನ ಜಪಸಮಾಧಿ ಶೀಲ ಗುಣ ಸಂಪನ್ನರಪ್ಪ ಶ್ರೀಮದನಾದಿ ಅಗ್ರಹಾರಂ ತಿಳವಳ್ಳಿಯಶೇಷ ಮಹಾಜನಂಗಳಂ ಕಲ್ಲಂ ಕೊಟ್ಟರು. ಅಯಿನೂರ್ವರ ಪುತ್ರಂ ಕೋಣವತ್ತಿಯ ಕೇತಪ್ಪೆಯ ಮಗ ದೇವಿಸೆಟ್ಟಿಯು ತಮ್ಮ ಬೊಪ್ಪ ರೌದ್ರ ಸಂವತ್ಸರ ಕಾರ್ತಿಕಮವಾಸೆ ಸೋಮವಾರ ಸೂರ್ಯಗ್ರಹಣ ನಿಮಿತ್ತವಾಗಿ ಪ್ರಾಣಮಂ ತ್ಯಾಗ ಮಾಡಿ ಸೂರ್ಯಲೋಕ ಪ್ರಾಪ್ತನಾದ ಇಂತೀ ಕಲ್ಲಂ ಬಂಟ್ಟ ಸಾಸಿರ್ವರ ಧರ್ಮಮಂ ಶ್ರೀ ಬಂಟೇಶ್ವರದೇವರಲ್ಲಿ ನಿಲ್ಲಿಸಿ...ಪ.ರು. ದ್ವಾವಿಮೌ ಪುರುಶೋ ಲೋಕೇ ಸೂರ್ಯಮಂಡಲಂ ಭೇದಿನಃ । ಯೋಗಯುಕ್ತಾಶ್ಚ । ರಣೇಚಾಭಿಮುಖೇಹತಾ"

ಇಲ್ಲಿ ಅಗ್ನಿಪ್ರವೇಶ ಮಾಡಿದವನು ಬೊಪ್ಪ. ಶಾಸನವನ್ನು ನಿಲ್ಲಿಸಿದವರು ಬಂಟ ಸಾಸಿರ್ವರು. ಶಾಸನೋಕ್ತ ಅಗ್ನಿಪ್ರವೇಶ ಶಿಲ್ಪವನ್ನು ಗಮನಿಸಿದರೆ, ಕೆಳಗಿನ ಹಂತದಲ್ಲಿ ಬೊಪ್ಪ ಉರಿಯುವ ಬೆಂಕಿಗೆ ಹಾರುತ್ತಿದ್ದಾನೆ. ಬಲಗಡೆ ಕಮಂಡಲು, ಎಡಗಡೆ ಮಂಗಳ ಚಿಹ್ನೆ ಇದೆ. ಮಧ್ಯದ ಹಂತದಲ್ಲಿ ಅವನನ್ನು ದೇವತಾಸ್ತ್ರೀಯರು ಕೊಂಡೊಯ್ಯುತ್ತಿದ್ದಾರೆ. ಮೇಲಿನ ಸೂರ್ಯಲೋಕದ ಹಂತದಲ್ಲಿ ಬೊಪ್ಪ ಕುಳಿತಿದ್ದಾನೆ. ಬದಿಯಲ್ಲೇ ರೇಖಿಸಿರುವ ಸೂರ್ಯಚಂದ್ರರಲ್ಲಿ ಸೂರ್ಯನನ್ನು ಸರ್ಪರೂಪಿ ರಾಹು ನುಂಗುತ್ತಿದೆ. ಪ್ರಸ್ತುತ ಶಿಲ್ಪದಲ್ಲಿ ಸೂರ್ಯನನ್ನು ರಾಹು ನುಂಗುತ್ತಿರುವ ಉಬ್ಬುಶಿಲ್ಪವಿನ್ಯಾಸಪೂರ್ಣವಾಗಿದೆ.

**ಮುಗಳಗೆರೆ ಶಾಸನ ದಾಖಲೆ ಕ್ರಿ.ಶ. (೧೧೪೧)**[೮] : "ಸ್ವಸ್ತಿ ಶ್ರೀಮತು ಜಗದೇಕಮಲ್ಲದೇವರ...ನೆಯ ದುರ್ಮತಿ ಸಂವತ್ಸರದ ಚೈತ್ರ ಶುದ್ಧ ೧ ಸೋಮವಾರದಂದು ತೆಲುಂಗ ನಾಡೊಳಗಣ ಮಾದವಿಯಕೆರೆಯ ಕೇತಿಸೆಟ್ಟಿಯ ಬಾಗಣಬ್ಬೆಯ ಪುತ್ರ ಗೋತ್ರಪವಿತ್ರಂ ಮಲ್ಲೇಯ ಶ್ರೀಮತು ಮುಳಗೇರಿಯ ಊರೊಡೆಯ ಸೋವಿಮಯ್ಯೆ ಊರದ...ದ್ರಯ್ಯ ಸಮಸ್ತ ಪ್ರಜೆಗಳುಂ ಪಿಳ್ಳು ಕುಡಲು ಮತ್ತಂ॥ ಸುರುಳರು ಬಯ..ಯತ್ತಿರೆ ಜೀಯನಲ್ಲಿ ಸೂರ್ಯಗ್ರಹಣ ದೊರಕೊಳೆ ತೆಲುಂಗದ ಮಲ್ಲಂ ಸುರಗಣಿಕೆಯರನ್ನು ಸೂರ್ಯಲೋಕಕ್ಕೋದ." ಸೂರ್ಯಾಯನಮಃ ರೂವಾರಿ ರಾಮೋಜನ ಕೆಲಸ.

ತೆಲುಗುನಾಡಿನ ಮಲ್ಲೇಯನ ಅಗ್ನಿಪ್ರವೇಶದ ದಾಖಲೆ ಇದು. ತೆಲುಗನಾಡಿನ ಮಾದವಿಯಕೆರೆಯ ಕೇತಿಸೆಟ್ಟಿ ಬಾಗಣಬ್ಬೆಯರ ಪುತ್ರ ಮಲ್ಲೇಯ ಅಗ್ನಿಪ್ರವೇಶಗೈದ ವ್ಯಕ್ತಿ. ಊರಿನ ಪ್ರಜೆಗಳೆಲ್ಲ ಒಟ್ಟುಗೂಡಿ ರೂವಾರಿ ರಾಮೋಜನಿಂದ ಈ ಸೂರ್ಯಗ್ರಹಣ ಸಂದರ್ಭದ ಶಿಲ್ಪ ನಿಲ್ಲಿಸಿರುವರು.

**೭. ಮುಗುಳಗೆರೆ ಶಾಸನ ದಾಖಲೆ (೧೧೪೩)**[೯] : "....೫೬ನೆಯ ವಿರೋಧಿಕ್ರಿ ಸಂವತ್ಸರದ ಅಕ್ಷಯ

ತೃತೀಯುದಲ್ ವಸೆಂಯುದು ಚಟ್ಟನಹಳ್ಳಿಯ ಮಲ್ಲದಳಾರತರಾ ಬಮ್ಮ ಮುಗುಳಗೆರೆಯಲು ಕಲಹಿಡಿದು ಸೂರ್ಯ ಗ್ರಹಣದೊಳು ಸುರಲೋಕ ಪ್ರಾಪ್ತನಾದ"

"ಇಲ್ಲಿ ಆತ್ಮಬಲಿಯಾದವನು ಬಮ್ಮ ಮುಗುಳುಗೆರೆಯಲು ಕಲಹಿಡಿದು ಸೂರ್ಯಗ್ರಹಣದೊಳು ಸುರಲೋಕ ಪ್ರಾಪ್ತನಾದ" ಎಂಬುದು ಇದರ ಒಕ್ಕಣಿಕೆ.

**೮. ಸಂತೆಶಿವರ ಶಾಸನ ದಾಖಲೆ (ಕ್ರಿ.ಶ. ೧೧೮೦)**[೧೦] : ತೊಣ್ಣಗೆಯನೆಂಬವ ಸೂರ್ಯಗ್ರಹಣ ಸಂದರ್ಭದ ಮರಣ ಪ್ರಸ್ತಾಪದ ದಾಖಲೆ ಇದಾಗಿದೆ.

ಈ ನಿದರ್ಶನಗಳಲ್ಲಿ ಜಯನಾಗನ್ ಮಕರಮಾಸದಲ್ಲಿ ಅಂದರೆ ಎಳ್ಳಮವಾಸ್ಯೆಯಂದು ಬೀರಯ್ಯ ಮಾಘ ಬಹುಳ ಅಮವಾಸೆ ಎಂದರೆ, ಶಿವರಾತ್ರಿಯಂದು ಅಗ್ನಿಪ್ರವೇಶ ಮಾಡಿರುವನು. ಬಹುಶಃ ಆಗ ಸೂರ್ಯಗ್ರಹಣವಿರಬೇಕು. ಬೀಚಿಗನು ಕಾರ್ತಿಕದ ಅಮವಾಸ್ಯೆಯಂದು, ರಾಚೇಯಜಿಯನು ಮಾಘ ಬಹು ಅಮವಾಸ್ಯೆಯಂದು, ಚಂಡನು ದೀಪಾವಳಿಯಂದು, ಬೊಪ್ಪನು ತಳಿರಮವಾಸೆಯಂದು, ಅಗ್ನಿಪ್ರವೇಶ ಮಾಡುವಾಗ ಸೂರ್ಯಗ್ರಹಣವಿತ್ತೆಂದೇ ಉಲ್ಲೇಖಿತವಾಗಿದೆ. ಜಯನಾಗನ್ ಮಕರಮಾಸ ಚಿತಾಪ್ರವೇಶ ಮಾಡಿದುದು ಉತ್ತರಾಯಣ ಪುಣ್ಯಕಾಲದ ಭೀಷ್ಮರ ಮರಣವನ್ನು ಧ್ವನಿಸುವಂತಿದೆ. ಇವುಗಳಲ್ಲಿ ತಿಳವಳ್ಳಿ ಶಾಸನದಲ್ಲಿ ರಾಹು ಹಾವಿನರೂಪದಲ್ಲಿ ಸೂರ್ಯನನ್ನು ನುಂಗುತ್ತಿರುವ ಹಾಗೂ ಬೊಪ್ಪನು ಬೆಂಕಿಯಲ್ಲಿ ಹಾರುತ್ತಿರುವ ಶಿಲ್ಪಕೆತ್ತನೆಯಿದೆ. ರೋಣ ತಾಲೂಕಿನ ಕಾಜಗೇರಿಯ, ಸೂರ್ಯಗ್ರಹಣ ಆತ್ಮಾಹುತಿ ಕಲ್ಲು ಸುಮಾರು ೧೨ನೇ ಶತಮಾನಕ್ಕೆ ಸೇರಿದ ಶಾಸನವನ್ನು ಹೊಂದಿದ್ದು, ಶಾಸನಪಾಠ ಅಸ್ಪಷ್ಟವಿದ್ದು ಪ್ರಕಟವಾಗಿಲ್ಲ. ಆದರೆ ಅದರ ಮೇಲಿನ ಉಬ್ಬು ಕೆತ್ತನೆ, ಉರಿ ಉಯ್ಯಾಲೆಯ ದೃಶ್ಯವನ್ನು ಹೊಂದಿದ್ದು, ಮೇಲೆ ಹಾವು ಸೂರ್ಯನನ್ನು ಕೆತ್ತಿರುವಂತೆ ಶಿಲ್ಪಿಸಲಾಗಿದೆ. ಇದೇ ಬಗೆಯ ಶಿಲ್ಪ ಆತ್ಮಾಹುತಿ ಶಿಲ್ಪ ಧಾರವಾಡ ಸಮೀಪದ ನರೇಂದ್ರ ಸೇರಿದಂತೆ ಇನ್ನೂ ಅನೇಕ ಸ್ಥಳಗಳಲ್ಲಿವೆ.

**ಸೂರ್ಯಕಿರಣ** : ಸೂರ್ಯವಿಗ್ರಹಗಳನ್ನು ಪ್ರತಿಷ್ಠಾಪಿಸುವುದು ನೇರ ಸೂರ್ಯಾರಾಧನೆಯಾದರೆ, ದೇವಾಲಯಗಳ ಮುಂದೆ ಕಿರಣ ಸ್ತಂಭಗಳನ್ನು ನಿಲ್ಲಿಸುವುದೂ ಅದರ ಪ್ರತೀಕವೇ ಆಗಿದೆ. ಹಿರೇಮಹುಲ್ಲಾಳದಲ್ಲಿ ಸೂರ್ಯೋಪಾಸನೆಗಾಗಿ ಕಿರಣಸ್ತಂಬಗಳನ್ನು ಸ್ಥಾಪಿಸಿರುವರು. ಇಂಥ ಕಿರಣಸ್ತಂಭಗಳು ಹಿರೇಹುಲ್ಲಾಳದ ಹನುಮಂತದೇವರ ಗುಡಿಯ ಬಳಿ ಇವೆ. ಹರಿಲಸೆಯ ಸ್ತಂಭ ಶಾಸನದ ದೊರೆ ಬಾಣಸಮಯ್ಯ ಎಂಬಾತ ಹರೀಶಿಯ ಕಲ್ಲೇಶ್ವರ ಗುಡಿ ಎದುರಿನ ಸೂರ್ಯಮಂಟಪದಲ್ಲಿ ಆದಿತ್ಯನ ಪ್ರತಿಮೆ ಅಥವಾ ಸ್ತಂಬವನ್ನು ಮಾಡಿಸಿದಂತೆ ಉಲ್ಲೇಖವಿದೆ.[೧೧]

**ಸೂರ್ಯೋಪಾಸನೆ** : ಪ್ರಾಚೀನ ಕರ್ನಾಟಕದಲ್ಲಿ ಸೂರ್ಯಾರಾಧನೆ ಕೆಲಮಟ್ಟಿಗೆ ಪ್ರಬಲವಾಗಿಯೆ ಇತ್ತು. ಸೂರ್ಯನ ವಿಗ್ರಹರಾಧನೆ, ಸೂರ್ಯಪ್ರತಿಷ್ಠೆ, ಅಗ್ನಿಪ್ರವೇಶ, ಸೂರ್ಯಕಿರಣಗಳ ಪ್ರಸ್ತಾಪ ಇಲ್ಲಿ ವಿಶೇಷ ಉಪಾಸನೆ ಎನಿಸಿದೆ. ಸೂರ್ಯನನ್ನು ಮನುಷ್ಯಾಕಾರದಲ್ಲಿ ನಿಲ್ಲಿಸಿ, ಒಂದೇ ಚಕ್ರವಿರುವ ರಥವನ್ನು ಅವನಿಗೆ ಸಲ್ಲಿಸುವ ವಾಡಿಕೆ ಇತ್ತು. ಅರುಣ ಸೂರ್ಯನ ಸಾರಥಿ. ಅವನಿಗೆ ಸೊಂಟದಿಂದ ಕೆಳಗೆ ಶರೀರವಿಲ್ಲ. ಸೂರ್ಯವಿಗ್ರಹಕ್ಕೆ ಎರಡು ಕೈಗಳಿದ್ದು, ಮೇಲಕ್ಕೆ ಎತ್ತಿಹಿಡಿದ ಕೈಗಳಲ್ಲಿ (ಪ್ರಭಾವಳಿ) ಕಂಡರಿಸುವದು ವಾಡಿಕೆ. ತಲೆಯ ಹಿಂಭಾಗದಲ್ಲಿ ಶಿರಶ್ಚಕ್ರವಿರುತ್ತದೆ. ಶಿವಮೊಗ್ಗ ಪರಿಸರದ ಹಲವು ಶೈವ ದೇವಾಲಯಗಳ ದೇವಕೋಷ್ಠಗಳನ್ನು ಸೂರ್ಯವಿಗ್ರಹ ಅಲಂಕರಿಸಿವೆ.

ಬಂಕಾಪುರದ ಪೇಟೆಯ ಎಲ್ಲಮ್ಮ ದೇವರ ವಿಗ್ರಹಪೀಠ ಮೂಲತಃ ಸೂರ್ಯನದು ಅರುಣನ ಪಾದಪೀಠದ ಮೇಲೆ ಸೂರ್ಯನ ಶಿಲ್ಪವಿದೆ. ಅದರಲ್ಲಿ ಸಾರಥಿ ಅರುಣನಿದ್ದು ಏಳು ಕುದುರೆಗಳಿಗೆ ಕಟ್ಟಿಹಿಡಿದ ಹಗ್ಗ ಆದಿಶೇಷ ಅವನ ಕೈಯಲ್ಲಿದೆ. ಈ ಪಾದಪೀಠದ ಮೇಲೆ ಸೂರ್ಯನ ವಿಗ್ರಹವಿದ್ದಿರಬೇಕು. ಆದರೆ, ಕಾಲಾಂತರದಲ್ಲಿ ಅಲ್ಲಿಯ ಸೂರ್ಯವಿಗ್ರಹ ನಾಶವಾಗಲು ಆ ಸ್ಥಳದಲ್ಲಿ ಮೈಲಾರನ ವಿಗ್ರಹ ಪೂಜಿಸಲ್ಪಟ್ಟಿದೆ. ಇದು ಮೂಲತಃ ಸೂರ್ಯದೇವಸ್ಥಾನ ವೆನ್ನಲು ಎಲ್ಲಮ್ಮನ ಗುಡಿಯ ಬೆನ್ನಿಗೆ ಅಂಟಿದ ನಿಂತ ನಿಲುವಿನ ಸುಂದರವಾದ ಗರುಡ ಪಕ್ಷಿಯ ವಿಗ್ರಹ ಸೂರ್ಯದೇವನನ್ನು ಪ್ರತಿನಿಧಿಸುವಂತಿದೆ.[೧೨]

ಹಾವೇರಿಯ ತಾರಕೇಶ್ವರ ದೇವಸ್ಥಾನದ ಸೂರ್ಯವಿಗ್ರಹ ಉದರಬಂಧ ಅವ್ವಂಗಗಳನ್ನು ಧರಿಸಿದೆ. ಕಾಲುಗಳು ಬರಿದಾಗಿವೆ. ರಾಜ್ಞಿ ನಿಕ್ಷುಭೆಯರು ಪಕ್ಕದಲ್ಲಿ ನಿಂತು ಚಾಮರ ಬೀಸುತ್ತಿದ್ದಾರೆ. ಏಳು ಕುದುರೆಗಳು ಕೆತ್ತಲ್ಪಟ್ಟಿವೆ. ಆದರೆ ಇದಕ್ಕೆ ಸಾರಥಿ ಇಲ್ಲ.

ಆಡೂರಿನ ಕಲ್ಮೇಶ್ವರ ಗುಡಿಯ ನವರಂಗದಲ್ಲಿ ಎರಡು ಸೂರ್ಯಬಿಂಬಗಳಿದ್ದು ಒಂದು ರಾಷ್ಟ್ರಕೂಟರ ಕಾಲದ್ದು, ಮತ್ತೊಂದು ಕಲ್ಯಾಣ ಚಾಲುಕ್ಯರ ಕಾಲದ್ದು. ಉಪ್ಪುಣಸಿಯಲ್ಲಿ ಕಲ್ಮೇಶ್ವರ ದೇವಾಲಯದ ಎರಡು ಗರ್ಭಗೃಹಗಳಲೊಂದರಲ್ಲಿ ಶಿವಲಿಂಗವಿದ್ದರೆ, ಇನ್ನೊಂದರಲ್ಲಿ ಆದಿತ್ಯನ ವಿಗ್ರಹವಿದೆ. ಆರಟಾಳದ ಭರಮದೇವರ ಗುಡಿಯಲ್ಲಿ ಸೂರ್ಯನ ವಿಗ್ರಹವಿದೆ. ಕನ್ನವಳ್ಳಿಯ ಭೋಗೇಶ್ವರ ಗುಡಿಯ ನವರಂಗದಲ್ಲಿ ಭಾಗಶಃ ಭಿನ್ನವಾಗಿರುವ ಸೂರ್ಯಶಿಲ್ಪವಿದೆ.

ಕಲಕೇರಿಯ ಕ್ರಿ.ಶ. ೧೨೪೩ರ ಯಾದವ ಸಿಂಘಣನ ಕಾಲದ ಶಾಸನ, ಹಾನಗಲ್ಲ ತೈಲಪೇಶ್ವರ ಗುಡಿಯ ಆಚಾರ್ಯ ರಾಜಗುರು ಅಮರೇಶ್ವರದೇವನು ತನ್ನ ಶಿಷ್ಯ ಮಲ್ಲಿಕಾರ್ಜುನ ಪಂಡಿತದೇವನನ್ನು ಜಯಸಿಂಘೇಶ್ವರ ಗುಡಿಯ ಸ್ಥಾನಾಚಾರ್ಯನನ್ನಾಗಿ ಮಾಡಿ ಭೂದಾನ ನೀಡಿರುವರು. ಅದೇ ಗುಡಿಯ ಆದಿತ್ಯಪೀಠದ ಮೇಲೆ ರೂವಾರಿ ಮಲ್ಲೋಜ ಸೂರ್ಯದೇವರ ಶಿಲ್ಪ ರಚಿಸಿದಂತೆ ಶಾಸನವಿದೆ. ವಿಗ್ರಹವೂ ಇದೆ. ಈಗ ಊರೊಳಗಿರುವ ಸೂರ್ಯನಾರಾಯಣದೇವರ ಗುಡಿಯೇ ಶಾಸನೋಕ್ತ ಜಯಸಿಂಘೇಶ್ವರ ದೇವಾಲಯ. ಗರ್ಭಗೃಹದಲ್ಲಿ ಸುಂದರವಾದ ಆದಿತ್ಯ ಶಿಲ್ಪ ಹಾಗೂ ಶಿವಲಿಂಗಗಳಿದ್ದರೆ, ಉತ್ತರ ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಆದಿತ್ಯನ ಮತ್ತೊಂದು ವಿಗ್ರಹವಿದೆ. ಪೂರ್ವ ಗರ್ಭಗೃಹದಲ್ಲಿರುವ ಸೂರ್ಯಬಿಂಬ ತುಂಬ ಆಕರ್ಷಕವಾಗಿದ್ದು, ಪ್ರಭಾವಳಿಯಲ್ಲಿ ದ್ವಾದಶ ಸೂರ್ಯರನ್ನು ಕಂಡರಿಸಲಾಗಿದೆ. ಇದು "ರೂವಾರಿ ಮಲ್ಲೋಜ"ನ ಕಂಡರಣೆ ಎಂದು ಪೀಠದ ಮೇಲಿನ ಕೆತ್ತನೆ ತಿಳಿಸಿದೆ. ಗುಡಿಯ ಪ್ರವೇಶ ದ್ವಾರದ ಬಲಭಾಗದ ಹೊರಭಿತ್ತಿಯ ಮೇಲೆ ಸುಂದರವಾದ ಸೂರ್ಯ ಚಂದ್ರರ ಶಿಲ್ಪ ಕೆತ್ತನೆ ಇದೆ.

ಹಾವೇರಿ ತಾಲೂಕಿನ ಕೋಳೂರು ಬಸವಣ್ಣನ ಗುಡಿಗೆ ಪೂರ್ವಾಭಿಮುಖವಾಗಿ ಸಾಲಾಗಿ ನಿಲ್ಲಿಸಿದ ಕೇಶವ, ವಿಷ್ಣು, ವೀರಭದ್ರ, ಪಾರ್ವತಿಯರ ಉಬ್ಬುಶಿಲ್ಪಗಳ ಸಾಲಿನಲ್ಲಿ ಸೂರ್ಯನ ವಿಗ್ರಹವಿದೆ. ಕೆಲವರಕೊಪ್ಪದ ರಾಮಲಿಂಗೇಶ್ವರ ದೇವಾಲಯದ ಪರಿವಾರ ದೇವತೆಗಳೊಂದಿಗೆ ಸೂರ್ಯನ ಚಿತ್ರವಿದೆ. ಹಾನಗಲ್ಲ ತಾಲೂಕ ನರೇಗಲ್ಲಿನಲ್ಲಿ ಸರ್ವೇಶ್ವರ ದೇವಾಲಯದ ತೊಲೆಯ ಮೇಲಿನ ಶಾಸನ, ಕ್ರಿ.ಶ. ೧೧೨೮ರಲ್ಲಿ ದಾಸಿಮಯ್ಯನು ಸೂರ್ಯದೇವಾಲಯ ನಿರ್ಮಿಸಿ ದಾನ ಕೊಟ್ಟಿರುವ ವಿಷಯವಿದೆ. ತಾಲೂಕ ನಾಗವಂದದ ಬ್ರಹ್ಮೇಶ್ವರ ದೇವಸ್ಥಾನದ ಎಡಭಾಗದ ಗರ್ಭಗೃಹದಲ್ಲಿರುವ ಗರುಡ ಪೀಠವಿಂದು ಬರಿದಾಗಿದೆ.

ನಿಡಸಿಂಗಿಯ ರಾಮಲಿಂಗಗುಡಿಯ ನವರಂಗದಲ್ಲಿ ನಾಲ್ಕು ದೇವಕೋಷ್ಟಗಳಿದ್ದು ಅವು ಕ್ರಮವಾಗಿ ಸುಮಾರು ೩ ಅಡಿ ಎತ್ತರದ ಸಪ್ತಮಾತ್ರಿಕಾಪಟ್ಟಕೆ, ಕಾರ್ತಿಕೇಯ ಹಾಗೂ ಮಹಿಷಾಸುರಮರ್ದಿನಿ ಮೂರ್ತಿಗಳಿವೆ. ಅಲ್ಲಿಯೇ ಸೂರ್ಯಶಿಲ್ಪವಿದ್ದು, ಪ್ರಭಾವಳಿಯಲ್ಲಿ ಅಷ್ಟಪಿಗ್ರಹಗಳನ್ನು ಬಿಡಿಸಿರುವರು. ಹೊಮ್ಮರಡಿಯಲ್ಲಿ ಪರಮೇಶ್ವರ ಗುಡಿ ದ್ವಿಕೂಟವಾಗಿದ್ದು ಒಂದು ಗರ್ಭಗೃಹದಲ್ಲಿ ಗರುಡಪೀಠದ ಮೇಲೆ ಸಮಭಂಗಿಯಲ್ಲಿ ನಿಂತ ಸೂರ್ಯನ ವಿಗ್ರಹವಿದೆ.

ರಾಣೇಬೆನ್ನೂರು ತಾಲೂಕ, ಹೊನ್ನತ್ತಿಯಲ್ಲಿ ಕೆರೆ ಏರಿಯ ಕೆಳಭಾಗದಲ್ಲಿ ಬಾರಿಕೇರಿಯವರ ಹೊಲದಲ್ಲಿ ನಾಲ್ಕು ಅಡಿ ಎತ್ತರದ ಸುಂದರವಾದ ಆದಿತ್ಯವಿಗ್ರಹವಿದೆ. ಸೂರ್ಯನಿಗಾಗಿಯೆ ದೇವಸ್ಥಾನ ನಿರ್ಮಿಸಿ ದಾನ ನೀಡಿದ, ಹಾವಣಗಿಯ ಆದಿತ್ಯಪೀಠದ ಮೇಲೆ ಸಂಗಿ ವಂಶದ ಬಮ್ಮಿಸೆಟ್ಟಿ ಕ್ರಿ.ಶ. ೧೧೯೯ರಲ್ಲಿ ಸೂರ್ಯದೇವಾಲಯ ನಿರ್ಮಿಸಿದ ದಾಖಲೆಗಳು ಮಹತ್ವಪೂರ್ಣವಾಗಿದೆ. ಅಬ್ಬಲೂರಿನ ಬ್ರಹ್ಮೇಶ್ವರ ದೇವಾಲಯದ ನಂದಿಯ ಹಿಂದೆ ಇರುವ ಸುಮಾರು ೩ ಅಡಿ ಎತ್ತರದ ಪೀಠದ ಮೇಲೆ ನಿಂತಿರುವ ಆದಿತ್ಯ ವಿಗ್ರಹದ ಎತ್ತರ ಸುಮಾರು ೫ ಅಡಿ. ಬಹುಶಃ ಈ ಪರಿಸರದಲ್ಲಿ ಇಷ್ಟು ಎತ್ತರವಾದ ವಿಗ್ರಹ ಮತ್ತೊಂದಿಲ್ಲ.

ಹೀಗೆ ಶಿವಮೊಗ್ಗ ಹಾವೇರಿ ಜಿಲ್ಲಾ ಪರಿಸರದಲ್ಲಿ ಸೂರ್ಯೋಪಾಸನೆಗೆ ಅವಕಾಶವಿತ್ತುದು ಸೂರ್ಯೋಪಾಸಕ ರಾಗಿದ್ದ ಸೌರಪಂಥೀಯರಿಗೆ ಇಲ್ಲಿ ವಾಸಿಸಲು ಅನುಕೂಲವಿತ್ತು ಎಂಬುದನ್ನು ನಂಬಬೇಕಾಗುತ್ತದೆ. ಅಂತೆಯೇ ಕನ್ನಡಕವಿ ಬ್ರಹ್ಮಶಿವ

*ಮೊದಲೋಳ್ ಮುನ್ನಂ ಪೊಡವಡು*
*ವುದು, ಸೂರ್ಯಂಗಿಷ್ಟ ದೇವತಾರಾಧನೆ ಮಾ*
*ಳ್ಪುದು ಬಳಿಕಮೆಂದು ಪೇಳದೆ*
*ದ ದನೀಶನ ಮತದೆ ಶೈವರೆಲ್ಲಂ ನೆಗಳ್ವರ್ ॥*

ಎಂದು ಹೇಳಿದ್ದು ಶೈವ ಸಂಪ್ರದಾಯದಲ್ಲಿ ಸೂರ್ಯೋಪಾಸನೆಗಿತ್ತ ಮಹತ್ವವನ್ನು ಸೂಚಿಸಿದೆ.



## ಆಧಾರಸೂಚಿ


೧. ಚಿದಾನಂದಮೂರ್ತಿ., **ಪೂರ್ಣ ಸೂರ್ಯಗ್ರಹಣ,** ಪು. ೨೮-೨೯.
೨. ಎಂ.ಎಂ. ಕಲಬುರ್ಗಿ., **ಸಮಾಧಿಮರಣ ಆತ್ಮಬಲಿದಾನ,** ಪು. ೧೮.
೩. ಕೆ.ಆಯ್. VI ೧೯ ನಾಗವಂದ ಸೊರಬ (ತಾ) (ಕ್ರಿ.ಶ. ೧೧೩೦)
೪. ಎ.ಕ. VIII, ಸೊರಬ ೩೯೦, ಮೂಗೂರ, (ಕ್ರಿ.ಶ. ೧೧೨೯)
೫. ಕೆ.ಆಯ್. V, ೯೬, ಮೂಗೂರ, ಸೊರಬ (ತಾ), (ಕ್ರಿ.ಶ. ೧೧೩೦)
೬ ಎಂಎಆರ್ ೧೯೪೨-೬೭ ಬೆಳಗುತ್ತಿ ಹೊನ್ನಾಳಿ (ತಾ), (ಕ್ರಿ.ಶ. ೧೧೩೩)
೭. ಕೆ.ಆಯ್. V, ತಿಳವಳ್ಳಿ, ಹಾನಗಲ್ಲ (ತಾ), ಕ್ರಿ.ಶ. ೧೧೪೧).
೮. ಎ.ಕ. VII, ಶಿಕಾರಿಪುರ, ೨೯೦ ಮುಗುಳುಗೆರೆ, (ಕ್ರಿ.ಶ. ೧೧೪೯)
೯. ಎ.ಕ. VII, ಶಿಕಾರಿಪುರ, ೨೮೯, ಮುಗುಳಗೆರೆ (ಕ್ರಿ.ಶ. ೧೧೩೨).
೧೦. ಎ.ಕ. V, ಚೆನ್ನರಾಯಪಟ್ಟಣ (ತಾ), ಸಂತೇಶಿವರ, (ಕ್ರಿ.ಶ. ೧೧೮೦).
೧೧. ರಘುನಾಥ ಭಟ್ಟ ಎಚ್.ಆರ್., **ಕರ್ನಾಟಕ ಶಾಸನ ಕಲೆ,** ೪೧, ೪೭.
೧೨. ಡಾ. ಚನ್ನಕ್ಕ ಎಲಿಗಾರ., ೧೯೯೧, **ಬಂಕಾಪುರ ಶೋಧನ.**

ಡಾ. ಪಿ.ಎನ್. ನರಸಿಂಹಮೂರ್ತಿ*

# ಆಳುಪ ಬಂಕಿದೇವನ ಪ್ರಮುಖ ಐತಿಹಾಸಿಕ ಸುಜೇರು ಸ್ತಂಭಶಾಸನ

ಬಂಟವಾಳ ತಾಲೂಕಿನ ಪುದು ಗ್ರಾಮದ ಸುಜೇರುಪಿಗೆ ತುಳುನಾಡಿನ ಇತಿಹಾಸದಲ್ಲೊಂದು ಪ್ರಮುಖ ಸ್ಥಾನವಿದೆ. ಇದು ಇಲ್ಲಿನ ಗುತ್ತಿನಮನೆಯ – ಶ್ರೀ ಗುಡ್ಡಪ್ಪ ಶೆಟ್ಟರ–ಶ್ರೀನಿಧಿ ಮನೆಯ ಅಂಗಳದಲ್ಲಿ ದೊರೆತಿರುವ ಒಂದು ಪುಟ್ಟ ಶಿಲಾಸ್ತಂಭ ಶಾಸನದಿಂದಾಗಿ. ಈ ಶಾಸನದ ಕರ್ತೃ ಆಳುಪರಾಜ ಇಮ್ಮಡಿ ಬಂಕಿದೇವ. ಈತ ಮಾಡಿದ ಒಂದು ಪ್ರಮುಖ ಕಾರ್ಯದ ಬಗೆಗಿನ ಮಾಹಿತಿಯನ್ನು ಈ ಸ್ತಂಭಶಾಸನ ಕೊಡುತ್ತದೆ.

**ಶಾಸನಕಲ್ಲು :** ಇದೊಂದು ಪುಟ್ಟ ಶಿಲಾಸ್ತಂಭ. ಇದರ ಎತ್ತರ ೬೦ ಸೆಂಟಿಮೀಟರುಗಳು. ಐದು ಮುಖಗಳಿರುವ ಇದರ ಸುತ್ತಳತೆ ೯೪ ಸೆಂಟಿಮೀಟರುಗಳು. ಮುಂಭಾಗದ ನೆತ್ತಿಯಲ್ಲಿ ಶಿವಲಿಂಗ ನಂದಿ ಮತ್ತು ದೀಪಸ್ತಂಭದ ಕೆತ್ತನೆ ಇದೆ. ಇದರಲ್ಲಿ ಒಟ್ಟು ೧೪ ಸಾಲುಗಳ ಬರಹವಿದೆ. ಉದ್ದಕ್ಕೆ ಗೆರೆಹಾಕಿ ಬರೆಯಲಾಗಿದೆ. ಪ್ರಥಮ ನಾಲ್ಕು ಗೆರೆಗಳಲ್ಲಿ ನಾಲ್ಕು ಸಾಲುಗಳ ಬರಹವಿದ್ದರೆ ಮುಂದಿನ ನಾಲ್ಕು ಗೆರೆಗಳಲ್ಲಿ ಪ್ರತಿಯೊಂದರಲ್ಲೂ ಎರಡು ಸಾಲುಗಳ ಬರೆಹವಿದೆ. ಕೊನೆಯಲ್ಲಿ ೧೩ ಮತ್ತು ೧೪ನೆಯ ಸಾಲುಗಳ ಬರಹದ ನಂತರ ಗೆರೆ ಹಾಕಿಲ್ಲ. ಶಾಸನದ ಲಿಪಿ ಮತ್ತು ಭಾಷೆ ಕನ್ನಡ.

**ಶಾಸನದ ಕಾಲ :** ಶಾಸನದ ಐದನೆಯ ಸಾಲಿನಲ್ಲಿ ಇದರ ಕಾಲಕ್ಕೆ ಸಂಬಂಧಿಸಿದಂತೆ ತೇದಿ ವಿವರವನ್ನು ಕೊಡಲಾಗಿದೆ. ಇದು ಶಕವರ್ಷ ೧೨೨೮ನೆಯ ವಿಶ್ವಾವಸು ಸಂವತ್ಸರದ ಸಿಂಹಮಾಸ ೧೮ನೆಯ ಆದಿವಾರಕ್ಕೆ ಸೇರುತ್ತದೆ. ಅಂದರೆ ಕ್ರಿಸ್ತಶಕ ೧೩೦೫ರ ಆಗಸ್ಟ್ ಮಾಹೆ ೧೫ ಆದಿತ್ಯವಾರಕ್ಕೆ ಸರಿಹೊಂದುತ್ತದೆ.

**ಮುಖ್ಯ ಅಂಶಗಳು :** ಶಾಸನದಲ್ಲಿ ರಾಜನನ್ನು ಪಾಂಡ್ಯ ಚಕ್ರವರ್ತಿ ರಾಯಗುಜಾಂಕುಶ ಬಂಕಿದೇವಾಳುಪೇಂದ್ರದೇವ ಎಂದು ಉದ್ಧರಿಸಲಾಗಿದೆ. ಈ ಹೇಳಿಕೆ ಆಳುಪ ರಾಜವಂಶಕ್ಕೆ ಪಾರಂಪರಿಕವಾಗಿ ಬಂದದ್ದು. ಈತ ತನ್ನ ರಾಜಧಾನಿ ಮಂಗಳಾಪುರ (ಈಗಿನ ಮಂಗಳೂರು)ದ ಹಿರಿಯ ಅರಮನೆ ಭುವನಾಶ್ರಯದ ಮೊಗಸಾಲೆಯಲ್ಲಿ ಪೊಡ್ಡೋಲಗದಲ್ಲಿದ್ದಾಗ ತಿಮಿರೇಶ್ವರ ದೇವರಿಗೆ ನಿತ್ಯಪೂಜೆ ಮತ್ತು ನೈವೇದ್ಯಕ್ಕಾಗಿ ನಿರಂತರ ಉತ್ಪತ್ತಿ ಇರುವ ಸುಜೇರಿನ ಮುತ್ತುದಸುಗ್ಗಿ, ತಾಳಿತಿಮುರು, ಮುರುಳುಪಾಡಿ, ವಡ್ಡಿತ್ತಿಲ ಮತ್ತು **ಕಣಂಜಂಬೆಟ್ಟುಗಳಲ್ಲಿನ** ಭೂಮಿಯನ್ನು ದಾನ ಮಾಡಿದ. ರಾಜ ಈ ಹಿಂದೆ ಈ ದೇವರಿಗೆ ಮಾಡಿದ್ದ ದಾನದ ಹೊರತಾಗಿ ಮಾಡಿದ ದಾನ ಇದು. ತಿಮಿರೇಶ್ವರದೇವರಿಗೆ ಶ್ರೀಮದರಸರು ಅನಾವೃಷ್ಟಿಯಲು ಹರಸಿಕೊಂಡು ಮಳೆಯ ಕೊಟ್ಟದಕ್ಕೆ ಗೆಯ್ದ ಧರ್ಮಕಾರ್ಯ ಎಂದು ಶಾಸನ ತಿಳಿಸುತ್ತದೆ. ಅನಂತರ ಭೂಮಿ ವಿವರ, ಅದರ ಉತ್ಪತ್ತಿ ಪ್ರಮಾಣ ಮತ್ತು ಧರ್ಮರಕ್ಷಣಾರ್ಥ ಶಾಪಾಶಯ, ಧರ್ಮ ಮಾಡಿದ ರಾಜನಿಗೆ ಶುಭ ಹಾರೈಕೆ–ಇವು ಶಾಸನದಲ್ಲಿ ಉಕ್ತವಾಗಿವೆ.

ರಾಜ್ಯವು ಅನಾವೃಷ್ಟಿಯಿಂದ ಸಂಕಷ್ಟಕ್ಕೆ ಸಿಲುಕಿದಾಗ ತನ್ನ ಪ್ರಜೆ ಮತ್ತು ಜಾನುವಾರುಗಳನ್ನು ರಕ್ಷಿಸಲು (ಬೇರಾವ ಮಾರ್ಗವೂ ಕಾಣದಿದ್ದಾಗ) ರಾಜ ತಿಮಿರೇಶ್ವರ ದೇವರ ಮೊರೆ ಹೋಗುತ್ತಾನೆ. ರಾಜನ ಕೋರಿಕೆಯನ್ನು ಮನ್ನಿಸಿ ದೇವರು ಮಳೆ ಸುರಿಸಿ ಅನಾವೃಷ್ಟಿ ಕೊನೆಗಾಣಿಸಿದಾಗ ರಾಜ ತನ್ನ ಹರಕೆಯನ್ನು ಪೂರೈಸಿದ. ತಿಮಿರೇಶ್ವರ ದೇವರಿಗೆ ನಿತ್ಯಪೂಜೆ, ನೈವೇದ್ಯಾದಿಗಳು ನಿರಂತರ ಸಲ್ಲುವಂತೆ ಭೂದಾನ ಮಾಡಿದ. ತನ್ನ ಜನ, ಜಾನುವಾರುಗಳ ಕ್ಷೇಮವನ್ನು ಈ ರೀತಿಯಲ್ಲಿ ರಾಜ ಕಾಪಾಡಿಕೊಂಡ.

ಇಲ್ಲಿ ಗಮನಿಸಬೇಕಾದ ಮುಖ್ಯ ಅಂಶವೆಂದರೆ ಸಮೃದ್ಧವಾಗಿ ಮಳೆಯಾಗುವ ಪ್ರದೇಶವೂ ಒಮ್ಮೊಮ್ಮೆ ಅನಾವೃಷ್ಟಿಯ ಪಿಡುಗಿಗೆ ತುತ್ತಾಗುತ್ತದೆ ಎನ್ನುವುದು. ನಿತ್ಯಹರಿದ್ವರ್ಣಾಚ್ಛಾದಿತ ಬೆಟ್ಟಗುಡ್ಡಗಳು, ಕಣಿವೆ, ಬೆಟ್ಟ ಬಯಲುಗಳು, ಅಸಂಖ್ಯ ತೋಡು, ತೊರೆ ಹಾಗೂ ಹಲವು ನದಿಗಳಿರುವ ತುಳುನಾಡು ಕ್ರಿ.ಶ. ೧೩೦೫ಕ್ಕೆ ಮುಂಚೆ ಒಮ್ಮೆ ಪ್ರಕೃತಿ ವಿಕೋಪಕ್ಕೆ ಗುರಿಯಾಗಿತ್ತು ಎಂಬುದು ನಂಬಲಸಾಧ್ಯವಾದ ಸಂಗತಿ. ಆದರೆ ನಂಬಲೇಬೇಕು. ಕಾರಣ

* ಗೋವಿಂದ ಪೈ ಸಂಶೋಧನ ಕೇಂದ್ರ, ಎಂ.ಜಿ.ಎಂ. ಕಾಲೇಜು, ಉಡುಪಿ – ೫೭೬ ೧೦೨.

ರಾಜ ಅದಕ್ಕಾಗಿ ದೇವರಲ್ಲಿ ಮೊರೆಹೋಗಿ ತನ್ನ ಹರಕೆ ತೀರಿಸಿ ಧರ್ಮರಕ್ಷಣೆಗಾಗಿ ಶಾಸನಾಂಕಿತ ಮಾಡಿದ್ದಾನೆ.

ಆಳುಪರದು ತುಳುನಾಡನ್ನು ಸುಮಾರು ಒಂದು ಸಾವಿರಕ್ಕೂ ಹೆಚ್ಚು ವರ್ಷಗಳ ಕಾಲ ಆಳಿದ ಒಂದು ಪ್ರಾಚೀನ ಅರಸು ಮನೆತನ. ಇಷ್ಟು ದೀರ್ಘಕಾಲದಲ್ಲಿ ಪ್ರಕೃತಿ ವಿಕೋಪಗಳಾದ ಅತಿವೃಷ್ಟಿ ಅನಾವೃಷ್ಟಿಗಳು ಆಗಿರಬೇಕು. ಅತಿವೃಷ್ಟಿ ಆಗಿರುವ ಸಾಧ್ಯತೆಗಳು ಹೆಚ್ಚು. ಅಂತೆಯೇ ಕರಾವಳಿಯ ಈ ವಲಯದಲ್ಲಿ ಸಮುದ್ರದ ವಿಕೋಪಗಳೂ ನಿರಂತರ ಘಟಿಸಿರಬಹುದು. ಅಂತಹ ಸಂದರ್ಭಗಳಲ್ಲಿ ರಾಜರು ಹಲವು ಬಗೆಯ ಪ್ರಜಾಹಿತ ಕಾರ್ಯಗಳನ್ನು ಕೈಗೊಂಡಿರಬಹುದು. ಆದರೆ ಇದಾವುದೂ ದಾಖಲಾದಂತೆ ಕಾಣುವುದಿಲ್ಲ. ಇಲ್ಲದಿದ್ದಲ್ಲಿ ಕೆಲವಾದರೂ ಶಾಸನಾಧಾರಿತ ಉದಾಹರಣೆಗಳು ಈ ವೇಳೆಗೆ ದೊರೆತಿರಬೇಕಿತ್ತು. ಇದರಂತೆ ಇಲ್ಲಿ ಪ್ರಾಚೀನ ಕಾಲದಿಂದಲೂ ನಡೆದು ಬಂದಿದ್ದ ಸಾಗರೋತ್ತರ ಚಟುವಟಿಕೆಗಳು. ಅದರಲ್ಲಿ ನಮ್ಮ ಜನರ ಪಾತ್ರ ಇತ್ಯಾದಿಗಳ ಬಗ್ಗೆಯೂ ಆಂತರಿಕ ಮಾಹಿತಿ ಶೂನ್ಯ.

ಇದಕ್ಕೆ ಅಪವಾದವೆಂಬಂತೆ ದೊರೆತಿರುವ ಶಾಸನಗಳು ಎರಡು ಮಾತ್ರ. ೧. ಕ್ರಿ.ಶ. ೮ನೆಯ ಶತಮಾನಕ್ಕೆ ಸೇರುವ ಹಟ್ಟಿಯಂಗಡಿ, ಶ್ರೀ ಲೋಕನಾಥೇಶ್ವರ ದೇವಾಲಯದ ಶಾಸನ. ಇದು ಪುರಿಗೆರೆಯ (ಇಂದಿನ ಧಾರವಾಡ ಜಿಲ್ಲೆಯ ಲಕ್ಷ್ಮೇಶ್ವರ) ವರ್ತಕರಿಗೆ ಸುಂಕವನ್ನು ಅರ್ಧ ಮನ್ನಾ ಮಾಡಿ ಪರಿಹಾರ ಕೊಟ್ಟ ವಿಷಯ ತಿಳಿಸುತ್ತದೆ. ಭಾಗಶಃ ಹಾಳಾಗಿರುವ ಈ ಶಾಸನದಲ್ಲಿ ಪರಿಹಾರಕ್ಕೆ ಕಾರಣ ನೇರವಾಗಿ ಗೊತ್ತಾಗುವುದಿಲ್ಲ. ಪ್ರಾಯಶಃ ಯಾವುದೋ ಜಲಸಂಬಂಧೀ ದುರ್ಘಟನೆ ಇರಬಹುದು. ವಾರಾಹಿ ನದಿ ದಂಡೆಯ ಮೇಲಿರುವ ಹಟ್ಟಿಯಂಗಡಿಯು ಸಮುದ್ರಕ್ಕೆ ತೀರ ಸಮೀಪದಲ್ಲಿದ್ದ ಒಂದು ಪ್ರಾಚೀನ ಬಂದರು ನಗರ.

ಎರಡನೆಯ ದಾಖಲೆ ಸುಜೇರುವಿನ ಶಾಸನ. ಒಂದು ರೀತಿಯಲ್ಲಿ ಇದು ಪರಿಪೂರ್ಣವಾದುದು. ಪ್ರಕೃತಿ ವಿಕೋಪ, ಅದಕ್ಕೆ ರಾಜ ಕೈಗೊಂಡ ಪರಿಹಾರ ಕಾರ್ಯ–ಎರಡರ ಬಗ್ಗೆ ಸ್ಪಷ್ಟ ಮಾಹಿತಿ ಇದೆ. ಹಾಗಾಗಿ ಮಹತ್ವದ ಸ್ಥಾನವೊಂದನ್ನು ಕಾಯ್ದಿರಿಸಿಕೊಂಡಿದೆ.

ಆಳುಪರಾಜ ಇಮ್ಮಡಿ ಬಂಕಿದೇವನು ಮಾಡಿದ ಈ ಧರ್ಮಕಾರ್ಯದಲ್ಲಿ ಗಮನಿಸಬೇಕಾದ ಗುಣಾತ್ಮಕ ಅಂಶವೇನೆಂದರೆ ರಾಜ ಸರ್ವಹಿತ ಪ್ರಜಾಕ್ಷೇಮ ರಕ್ಷಕನಾಗಿ ತನ್ನ ಕರ್ತವ್ಯವನ್ನು ನಿಭಾಯಿಸಿದ್ದು ರಾಜನಾದವ ತನ್ನ ಹಿತವನ್ನೇ ಪ್ರಜೆಗಳ ಮೇಲೆ ಹೇರದೆ ಪ್ರಜೆಗಳ ಹಿತವೇ ತನ್ನ ಹಿತ ಎಂದು ಕಾರ್ಯನಿರ್ವಹಿಸಬೇಕು. ಕೌಟಿಲ್ಯ ತನ್ನ ಅರ್ಥಶಾಸ್ತ್ರದಲ್ಲಿ ಈ ರೀತಿಯಲ್ಲಿ ರಾಜಧರ್ಮವನ್ನು ವಿವರಿಸುತ್ತಾನೆ. ಆಳುಪರಾಜ ಇಮ್ಮಡಿ ಬಂಕದೇವ ಕೌಟಿಲ್ಯನ ಅರ್ಥಶಾಸ್ತ್ರವನ್ನು ಓದಿದ್ದನೊ, ಇಲ್ಲವೊ ಗೊತ್ತಿಲ್ಲ. ಆದರೆ ಅವನ ಕಾರ್ಯ ಮಾತ್ರ ಕೌಟಿಲ್ಯನ ರಾಜಧರ್ಮನೀತಿಗೆ ಅನುಗುಣವಾಗಿದೆ. ಇಲ್ಲಿ ರಾಜನ ಕಾರ್ಯ ಯಾವುದೇ ಒಂದು ಸಮಾಜದ ವರ್ಗಕ್ಕೆ ಸೀಮಿತವಾಗಿಲ್ಲ. ಅನಾವೃಷ್ಟಿಯ ಬವಣೆ ಎಲ್ಲರಿಗೂ ಒಂದೆ. ಅದಕ್ಕೆ ಮಳೆಯೇ ಸೂಕ್ತ ಪರಿಹಾರ. ಮನುಷ್ಯಶಕ್ತಿ ಮತ್ತು ಪ್ರಯತ್ನ ಮೀರಿದ್ದು ಪ್ರಕೃತಿ ವಿಕೋಪ. ದೇವರ ಕರುಣೆಯೇ ಇದಕ್ಕೆ ಸೂಕ್ತ ಪರಿಹಾರ ಎಂಬ ಅರಿವು ರಾಜನಿಗಾದಾಗ ತಡಮಾಡದೆ ದೇವರ ಮೊರೆ ಹೊಕ್ಕು ಹರಕೆ ಹೊತ್ತ. ಶಿವ ಈತನಿಗೆ ಕೃಪೆ ತೋರಿದ. ಮಳೆ ಸುರಿಸಿ ಜನ ಜಾನುವಾರುಗಳ ಬವಣೆಯನ್ನು ನಿವಾರಿಸಿದ. ನಮ್ಮ ನಂಬಿಕೆ, ಭಕ್ತಿ ಮತ್ತು ಶ್ರದ್ಧಾಪೂರ್ವಕ ಕರ್ತವ್ಯ ನಿರ್ವಹಣೆಗೆ ಸೂಕ್ತ ಮನ್ನಣೆ, ಪ್ರತಿಫಲ ಇದೆ ಎನ್ನುವುದು ಇದರಿಂದ ವ್ಯಕ್ತವಾಗುತ್ತದೆ.

*ಆಳುಪ ಬಂಕದೇವನ ಸುಜೇರು ಸ್ತಂಭ ಶಾಸನ*

೧ ಸ್ವಸ್ತಿ (1X)ಶ್ರೀಮತುಪಾಂಡ್ಯ ಚಕ್ರವರ್ತಿರಾಯ

೨ ಗಜಾಂಕುಸ ಬಂಕಿದೇವಾಳುಪೇಂದ್ರ ದೇವರ ವಿಜಯ ರಾಜ್ಯ ಮುತ್ತರೋತ್ತರಾಭಿ–

೩ ವ್ರಿ (ವೃ)ದ್ಧಿ ಪ್ರವರ್ದ್ಧಮಾನ ಮಾಚಂದ್ರಾರ್ಕ್ಕ ತಾರಂ ಬರಂ ದುಷ್ಟ ನಿಗ್ರಹ ಶಿಷ್ಟ ಪ್ರತಿಪಾಳಕರಾ–

೪ ಗಿ ಸುಖಸಂಕಥಾ ವಿನೋದ ದಿಂ ರಾಜ್ಯಂ ಗೆಯ್ಯುತ್ತಮಿರ್ದ್ದು ಸಕನೃಪ ಕಾಲಾತೀತ ಸಂವತ್ಸರ

೫ ದೊಳು ೧೨೨೮ನೆ ವಿಶ್ವಾವಸು ಸಂವತ್ಸರದ ಸಿಂಹ ಮಾಸ ೧೮ನೆ ಆ ಶ್ರೀಮತು ರಾಜಧಾನಿ ಮಂಗಳಾಪುರದ

೬ ಹಿರಿಯರಮನೆಯ ಭುವನಾಶ್ರಯದ ಮೊಕಸಾಲೆ ಯಲು ವೊಡ್ಡೋಲಗಂ ಗೊಟ್ಟಿರಲು ತಿಮೀರೇಶ್ವರ ದೇವ

೭ ರಿಗೆ ಶ್ರೀಮದರಸರು ಅನಾವೃಷ್ಟಿಯಲು ಹರಸಿಕೊಂಡು ಮಳೆಯ ಕೊಟ್ಟದಕ್ಕೆ ಗೆಯ್ದ ಧರ್ಮ ಕಾರ್ಯ ಸೊ–

೮ ಜರಲು ಮುತ್ತುಡ ಸುಗ್ಗಿ ಬಿದೆಕಾರು ಮೂ ೩ ತಿಳ ೨ ತಾಳೆತಿಮರು ಬಿದೆ ಕಾ–

೯ ರು ಮೂ೨ ತಿಳ೨ ಮರುಳುಪಾಡಿ ಬಿದೆಕಾರು ಮೂ ೩ ವಡ್ಡಿತ್ತಿಲ ಬಿದೆಕಾರು ಮೂ ೭ ಕಣಂಜಂ ಬೆಟ್ಟು ಬಿದ ಕಾ–

೧೦ ರು ಮು ೨ ಅಂತು ಬಿದೆಕಾರು ಮೂ ೧೭ ರ ಗೇಣಿ ಬತ್ತು ಮೂ ೪೩ ಕೆ ಶ್ರೀಮದರಸರು ಕೊಡತಿದ್ದ ಮು ೪

೧೧ ಸಲುತ ಎಂದು ಕುಡುತಿಯ ಹಾನೆಯಲು ದೇವರಿಗೆ ನಡಸುವ ನಿವೇದ್ಯ ಅಕ್ಕಿ ಕಾ ೧ ಕು ೧ ನೂ ನಡಸಿ ಬಾಳು–

೧೨ ವುದು ಈ ಧರ್ಮ ಕಾರ್ಯಕ್ಕಾವನೊರ್ಬ್ಬಂ ವಕ್ರಸ್ತನಾಗಿ ಬಂದಾತಂಗೆ ಶ್ರೀ ವಾರಣಾಸಿಯಲು ಸಾವಿರ ಕವಿ–

೧೩ (ಪಿ) ಲೆಯ ವಧ್ಸಿದ ಪಾಪ ಅರಸಿಂಗೆ ದಂಡ ಗ ೧೦೦೦ ವೊಂದು ತಲೆಯೆಂದು ಧರ್ಮ್ಮಕಾರ್ಯ್ಯವ ಮಾಡಿ ಬರಸಿ

೧೪ (ನಿಲಿ)ಸಿ ಕೊಟ್ಟ ಶ್ರೀಮದರಸರಿಗೆ ಮಂಗಳ ಮಹಾಶ್ರೀ (11 X)

ಇಮ್ಮಡಿ ಬಂಕಿದೇವ ಆಳುಪೇಂದ್ರನು ಕ್ರಿ.ಶ. ೧೨೮೫ ರಿಂದ ೧೩೧೫ರವರೆಗೆ ಆಳಿದ ಆಳುಪರಾಜ. ಅಳಿಯ ಸಂತಾನದ ನೆಲೆಯಲ್ಲಿ ಆಳ್ವಿಕೆಗೆ ಬಂದ (ಪ್ರಾಯಶಃ) ಪ್ರಥಮ ರಾಜ ಈತ. ಆಳುಪರಾಜ ವೀರಪಾಂಡ್ಯದೇವನ (ಕ್ರಿ.ಶ. ೧೨೫೦–೧೨೭೫) ಸೋದರಿಯ ಮಗ; ವಲ್ಲಭದೇವ ಇಮ್ಮಡಿ ದತ್ತಾಳುಪ (ಕ್ರಿ.ಶ. ೧೨೩೦–೧೨೫೦)ನ ಮೊಮ್ಮಗ. ಆದರೆ ಬಂಕಿದೇವನ ನಂತರ ಆಳುಪ ಸಿಂಹಾಸನಕ್ಕೆ ಬಂದದ್ದು ಈತನ ಮಗನಾದ ಸೋಯಿದೇವ (ಕ್ರಿ.ಶ. ೧೨೧೫–೧೩೩೫).

ಇಮ್ಮಡಿ ಬಂಕಿದೇವನಿಗೆ ಸಂಬಂಧಿಸಿದಂತೆ ಹಲವು ಶಿಲಾಶಾಸನಗಳು ದೊರೆತಿವೆ. ಉಡುಪಿ ತಾಲೂಕಿನ ಕೆಂಜೂರು ಶಾಸನವು (ಕ್ರಿ.ಶ. ೧೨೮೧ ಅಕ್ಟೋಬರ್ ೪, ಶನಿವಾರ) ಈತನ ಬಗ್ಗೆ ಪ್ರಥಮ ಮಾಹಿತಿ ನೀಡುತ್ತದೆ. ರಾಜಧಾನಿ ಬಾರಹಕನ್ಯಾಪುರ (ಬಾರಕೂರು) ದಿಂದ ಆಳುತ್ತಿದ್ದ ಆಳುಪ ರಾಣಿ ಬಲ್ಲಮಹಾದೇವಿಯ ಆಸ್ಥಾನದಲ್ಲಿದ್ದವರಲ್ಲಿ ಈತನನ್ನು ಪ್ರಮುಖವಾಗಿ ಹೆಸರಿಸಲಾಗಿದೆ. ಅಷ್ಟೆ ಅಲ್ಲ ಈತ ದತ್ತಾಳ್ವರ ಬಳಿಗೆ ಸೇರಿದವನೆಂದೂ ಹೇಳಲಾಗಿದೆ. (ARSIE, 1931-32 ನಂ. ೩೩೬) ಕ್ರಿ.ಶ. ೧೨೮೬ಕ್ಕೆ ಸೇರುವ ಬ್ರಹ್ಮಾವರ ಶಾಸನವೊಂದು ಈತನನ್ನು ಮಹಾಮಂಡಲೇಶ್ವರ, ಪಾಂಡ್ಯಧನಂಜಯ ಎಂದು ಕರೆದಿದೆ (ARSIE, ೧೯೨೮–೨೯ ನಂ. ೪೮೪) ಕ್ರಿ.ಶ. ೧೨೯೬ಕ್ಕೆ ಸೇರುವ ಕುರ್ನಾಡಿನ ಶಾಸನ (ARSIE, ೧೯೨೯–೩೦ ನಂ. ೫೨೭) ಬಂಕಿದೇವನು ಮಂಗಳಾಪುರದ (ಮಂಗಳೂರಿನ) ಹಿರಿಯ ಅರಮನೆಯಿಂದ ಆಳುತ್ತಿದ್ದ ವಿಚಾರ ತಿಳಿಸುತ್ತದೆ. ಕ್ರಿ.ಶ. ೧೩೦೭ಕ್ಕೆ ಸೇರುವ ಮಂಗಳೂರಿನ ಶಾಸನ (SII Vol. VII No. 77) ಈತನನ್ನು ಪಾಂಡ್ಯಚಕ್ರವರ್ತಿ ರಾಯಗಜಾಂಕುಶ ಎಂದು ಸಂಬೋಧಿಸಿ ತನ್ನ ಅಕ್ಕ ಮೋಚಲಮಹಾದೇವಿಯು ಸ್ವರ್ಗಸ್ಥಳಾದಾಗ ಪಿಂಡಪ್ರದಾನ ಮಾಡಿ ನೀರದೇವಾಲಯದ ಬ್ರಹ್ಮ ವಿಷ್ಣು ಮಹೇಶ್ವರ ದೇವರುಗಳಿಗೆ ಮಾಡಿದ ಭೂದಾನವನ್ನು ತಿಳಿಸುತ್ತದೆ. ಬುಕ್ಕಾಣೆ ಎಂಬಾತ ಹೋಳಿ ದೇವರಿಗೆ ಮಾಡಿದ ಭೂದಾನವನ್ನು ತಿಳಿಸುವ ಕುಂಯಂಗಾಡಿದ ಶಾಸನ (ಕ್ರಿ.ಶ. ೧೩೦೪, ARSIE, ೧೯೨೭–೨೮ ನಂ. ೩೭೭). ಬಂಕಿದೇವನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಅಂತೆಯೇ ಕ್ರಿ.ಶ. ೧೩೦೫ಕ್ಕೆ ಸೇರುವ ಪಣಂಬೂರು ಶಾಸನ (ARSIE, ೧೯೪೯–೫೦ ನಂ. ೨೨೭) ಸಹ ಈತನ ಆಳ್ವಿಕೆಯನ್ನು ಉಲ್ಲೇಖಿಸುತ್ತದೆ. ಇದೇ ಕಾಲಕ್ಕೆ ಸೇರುವ ತಾಳಿಪಾಡಿಯ ಶಾಸನ *(ಇತಿಹಾಸ ದರ್ಶನ–ಸಂಪುಟ ೧೬/೨೦೦೧, ಪು. ೫೫–೫೭)* ಇವನ ಆಳ್ವಿಕೆಯನ್ನು ತಿಳಿಸುತ್ತದೆ. ಈ ಶಾಸನಗಳು ಬಹುತೇಕ ದಾನ ಶಾಸನಗಳಾಗಿವೆ. ಈಗಾಗಲೇ ತಿಳಿಸಿರುವಂತೆ ಸುಜೇರಿನ ಶಾಸನ ವಿಶಿಷ್ಟವಾದ್ದು. ಇಲ್ಲಿ ಹೆಸರಿಸಿರುವ ಸೂಜರಲು ಇಂದಿನ ಸುಜೇರು. ಇಲ್ಲಿನ ಮುತ್ತುಡಸುಗ್ಗಿ, ತಾಳಿತಿಮರು, ಮರುಳುಪಾಡಿ, ವಡ್ಡಿತ್ತಿಲ ಮತ್ತು ಕಣಂಜಂಬೆಟ್ಟ ಸ್ಥಳಗಳಲ್ಲಿ ಒಟ್ಟು ಹದಿನೇಳು ಮುಡಿ ಬಿತ್ತುವ ಭೂಮಿಯನ್ನು ತಿಮಿರೇಶ್ವರನಿಗೆ ನಿತ್ಯ ನೈವೇದ್ಯಕ್ಕಾಗಿ ರಾಜ ದಾನ ಮಾಡಿದ.

ಕರ್ನಾಟಕದಲ್ಲಿ ಈಗ ಸತತ ಮೂರು ವರ್ಷಗಳಿಂದ ಬರಗಾಲವಿದೆ. ಜನ, ಜಾನುವಾರುಗಳ ಬವಣೆ ಹೇಳತೀರದು. ಅಸಂಖ್ಯ ದೇವಾಲಯಗಳಲ್ಲಿ ನಿತ್ಯಪೂಜೆ ಇದೆ. ಆದರೆ ಮಳೆ ಇಲ್ಲಿಲ್ಲ. ಇದಕ್ಕೇನು ಕಾರಣ ? ಪ್ರಾಯಶಃ ಜನರ ಮತ್ತು ರಾಜರ (ಸರ್ಕಾರದ) ಶ್ರದ್ಧಾ, ಭಕ್ತಿಪೂರ್ಣ ಪೂಜೆ, ಹರಕೆ ಸಾಲದೇ ? ಇಂದಿನ ವೈಚಾರಿಕ ಯುಗದಲ್ಲಿ ಇಂತಹ ಪ್ರಶ್ನೆ ಅಥವಾ ವಿಚಾರ ಜನರ ಆತ್ಮ ವಿವೇಚನೆಗೆ ಬಿಟ್ಟದ್ದು. ಆದರೆ ರಾಜ ಇಮ್ಮಡಿ ಬಂಕಿದೇವ ಮಾತ್ರ ತನ್ನ ವಿವೇಚನಾಪೂರ್ವಕ ಶ್ರದ್ಧಾಭಕ್ತಿಗಳಿಂದ ಕಾರ್ಯ ನಿರ್ವಹಿಸಿ ತನ್ನ ಪ್ರಜೆಗಳ ಹಿತ ಕಾಪಾಡಿದ.

ಈ ಸುಜೇರುವಿನ ಶಾಸನ (ARSIE, 1930-31, No. 338) ಈಗ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರ, ಉಡುಪಿ ಇದರ ವಸ್ತು ಸಂಗ್ರಹಾಲಯದಲ್ಲಿ ಸಂರಕ್ಷಿಸಲ್ಪಟ್ಟಿದೆ. ಇದನ್ನು ಕೊಡಮಾಡಿದ ಸುಜೇರುಗುತ್ತಿನ ಮನೆಯವರಿಗೆ ಹಾಗೂ ಶಾಸನ ಕಲ್ಲನ್ನು ಗೋವಿಂದ ಪೈ ಸಂಗ್ರಹಾಲಯಕ್ಕೆ ತರಲು ಸಹಕರಿಸಿದ ಡಾ. ಕೆ. ಅಶೋಕ ಆಳ್ವ ಅವರಿಗೆ ಕೇಂದ್ರ ತನ್ನ ಕೃತಜ್ಞತೆಗಳನ್ನು ಸೂಚಿಸುತ್ತದೆ.



ಡಿ.ಎಂ. ನಾಗರಾಜು*

# ಕಲ್ಯಾಣ ಚಾಲುಕ್ಯ ಆರನೇ ವಿಕ್ರಮಾದಿತ್ಯನ ಜೈನ ಶಾಸನಗಳು

ಕರ್ನಾಟಕದ ಚಕ್ರವರ್ತಿ ಪರಂಪರೆಯಲ್ಲಿ ಆರನೆಯ ವಿಕ್ರಮಾದಿತ್ಯ ಅದ್ವಿತೀಯ ವ್ಯಕ್ತಿ. ತನ್ನ ೫೦ ವರ್ಷಗಳ ಆಡಳಿತಾವಧಿಯಲ್ಲಿ ವಿಕ್ರಮಾದಿತ್ಯನು ಬರೆಸಿದ ಶಾಸನಗಳ ಸಂಖ್ಯೆ ಸುಮಾರು ಒಂದು ಸಾವಿರಕ್ಕೂ ಅಧಿಕ. ಸಾಹಿತ್ಯ ಕೃತಿಗಳು ಜೀವನಗತಿಯ ಕಲಾತ್ಮಕ ಅಭಿವ್ಯಕ್ತಿಯಾದರೆ ಶಾಸನಗಳು ದಾಖಲಾತ್ಮಕ ಅಭಿವ್ಯಕ್ತಿಯಾಗಿವೆ.

ಕರ್ನಾಟಕದಲ್ಲಿ ಆರನೇ ವಿಕ್ರಮಾದಿತ್ಯನ ಕಾಲದ ಧಾರ್ಮಿಕ ಸ್ಥಿತಿಗತಿಗಳಿಗೆ ಪೂರಕವಾಗಿ ಅಂದು ಪ್ರಚಲಿತದಲ್ಲಿದ್ದ ಧರ್ಮಗಳಿವೆ ಪೀಠಿಕೆಯಾಗಿ ಅವುಗಳ ಬೆಳವಣಿಗೆಯ ಹಿನ್ನೆಲೆಯ ಅವಶ್ಯಕತೆ ಇದೆ. ಪ್ರಾಯಶಃ ಕರ್ನಾಟಕದ ಮಟ್ಟಿಗೆ ಜೈನ ಧರ್ಮದ ನಂಬಿಕೆಗಳೇ ಅತ್ಯಂತ ಪ್ರಾಚೀನ ದಾಖಲೆಗಳೆಂದು ಹೇಳಬಹುದು.

ಜೈನ ಪರಂಪರೆಯ ಪ್ರಕಾರ ಚಂದ್ರಗುಪ್ತನು ಗುರು ಶೃತಕೇವಲಿ ಭದ್ರಬಾಹು ಮತ್ತಿತರ ಸಂಗಡಿಗರೊಂದಿಗೆ ಪಾಟಲೀಪುತ್ರದಿಂದ ಶ್ರವಣಬೆಳಗೊಳಕ್ಕೆ ಬಂದು ನೆಲೆಸಿದ್ದ ಎಂದು ತಿಳಿಯಲಾಗುತ್ತದೆ. ಬಹುಶಃ ಈ ಘಟನೆ ನಡೆದದ್ದು ಕ್ರಿ.ಪೂ. ನಾಲ್ಕನೇ ಶತಮಾನದ ಪ್ರಾರಂಭದಲ್ಲೇ ಇರಬೇಕು. ಚಂದ್ರಗುಪ್ತನು ಇಲ್ಲಿಯೇ ಸಲ್ಲೇಖನವ್ರತ ಕೈಗೊಂಡು ಪ್ರಾಣತ್ಯಾಗ ಮಾಡಿದನೆಂದು ನಂಬಿಕೆಯಿದೆ. ಅನಂತರದಲ್ಲಿ ಹಲವಾರು ರಾಜಮನೆತನಗಳು ಅವ್ಯಾಹತವಾಗಿ ಜೈನಧರ್ಮಕ್ಕೆ ಪೋಷಣೆ ನೀಡಿದರು. ಜೈನ ಧರ್ಮವೂ ಹಿಂದೂ ಧರ್ಮದ ನಂತರದ ಧರ್ಮವಾಗಿ ಉಳಿದುಕೊಂಡು ಬಂದಿತು. ಆರನೇ ವಿಕ್ರಮಾದಿತ್ಯನ ಆಡಳಿತಾವಧಿಯಲ್ಲಿ ಜೈನಧರ್ಮ ಒಂದು ಪ್ರಮುಖ ಧರ್ಮವಾಗಿದ್ದಿತು. ಜೈನಧರ್ಮ ಕರ್ನಾಟಕದ ಮಟ್ಟಿಗೆ ಹಿಂದೂ ಧರ್ಮದ ನಂತರದ ಧರ್ಮವಾಗಿ ರಾಜಪೋಷಣೆಯನ್ನು ಪಡೆಯುತ್ತಾ ನಿರಂತರವಾಗಿ ಬೆಳವಣಿಗೆಯನ್ನು ಹೊಂದಿದೆ.

ಕಲ್ಯಾಣ ಚಾಲುಕ್ಯರ ಆಳ್ವಿಕೆ ಅವಧಿಯಲ್ಲಿ ರಾಜ್ಯದ ಉದ್ದಗಲಕ್ಕೂ ಹಲವಾರು ಜೈನ ಶಾಸನಗಳು ದೊರೆಯುತ್ತವೆ. ಶಾಸನಗಳಲ್ಲಿನ ಉಲ್ಲೇಖಿತ ವಿವರಗಳನ್ನು ನೋಡಿದಾಗ ಜೈನಧರ್ಮದ ಪ್ರಾಮುಖ್ಯತೆಯ ಚಿತ್ರಣ ದೊರೆಯುತ್ತದೆ. ಕಲ್ಯಾಣ ಚಾಲುಕ್ಯರ ಕಾಲದಲ್ಲಿ ಈ ಕೇಂದ್ರಗಳು ಜೈನ ಕೇಂದ್ರಗಳಾಗಿಯೇ ಮುಂದುವರಿದುಕೊಂಡು ಬಂದವು. ಆರನೇ ವಿಕ್ರಮಾದಿತ್ಯನು ಸ್ವತಃ ಜೈನ ಧರ್ಮೀಯನಲ್ಲದಿದ್ದರೂ ಅವನ ಪತ್ನಿಯರಲ್ಲಿ ಕೆಲವರು ಜೈನ ಧರ್ಮವನ್ನು ಅನುಸರಿಸುತ್ತಿದ್ದರು. ಇದರಿಂದ ಅವನು ಧರ್ಮಸಹಿಷ್ಣು ಆಗಿದ್ದ ಎನ್ನುವುದು ಸ್ಪಷ್ಟವಾಗುತ್ತದೆ. ಇವನ ಕಾಲದಲ್ಲಿ ಹಲವಾರು ಜೈನ ಯತಿಗಳು, ಆಚಾರ್ಯರು ಜೈನ ಮಠಗಳನ್ನು ಕಟ್ಟಿಕೊಂಡು ಬಸದಿಗಳನ್ನು ನಿರ್ಮಾಣ ಮಾಡಿಕೊಂಡು ಹಲವಾರು ಸಾಮಾಜಿಕ ಚಟುವಟಿಕೆಗಳಲ್ಲಿ ತೊಡಗಿದ್ದರು. ಅಂದು ಪ್ರಚಲಿತದಲ್ಲಿದ್ದ ವಿಭಿನ್ನ ಜೈನ ಸಂಘಟನೆಗಳಾದ ಕೊಂಡಕುನ್ದಾನ್ವಯ, ಪುಸ್ತಕಗಚ್ಛ, ಯಾಪನೀಯ ಸಂಘ ಮೊದಲಾದ ಗುಂಪುಗಳು ಜೈನ ಧರ್ಮದ ಉನ್ನತಿಗೆ ಕಾರಣವಾದವು.

ಕ್ರಿ.ಶ. ೧೦೭೬-೭೭ರ ಲಕ್ಷ್ಮೇಶ್ವರ ಶಾಸನ ಪಂಡಿತರೊಬ್ಬರ ಸಲ್ಲೇಖನವ್ರತದ ವಿವರವನ್ನು ಕೊಡುತ್ತದೆ. ವಿಕ್ರಮಾದಿತ್ಯನ ಆಳ್ವಿಕೆಯ ಎರಡನೇ ವರ್ಷದಲ್ಲಿ, ಸೂರಸ್ತಗಣದವನಾಗಿದ್ದ ಶ್ರೀನಂದಿಪಂಡಿತದೇವನು ಇಲ್ಲಿಯ ಪುರಿಕಾರನಗರದ ಆನೆಸಜ್ಜೆ ಬಸದಿಯಲ್ಲಿ ಒಂದು ತಿಂಗಳ ಕಾಲ ಸಲ್ಲೇಖನವ್ರತ ಕೈಗೊಂಡು ದೇಹತ್ಯಾಗ ಮಾಡಿದನೆಂದು ಹಾಗೂ ಅವನ ಅಣ್ಣ ಬಾಲಚಂದ್ರನಂದಿ ಪಂಡಿತನೂ ಕೂಡ ಸಲ್ಲೇಖನವ್ರತ ಕೈಗೊಂಡನೆಂದು ತಿಳಿಸುತ್ತದೆ. ಶಾಸನದಲ್ಲಿ ಉಲ್ಲೇಖಿತ ಸೂರಸ್ತಗಣವು ಒಂದು ಮುಖ್ಯ ಜೈನಗಣವಾಗಿದ್ದಿತೆಂದು ತಿಳಿಯಬಹುದು. ಕ್ರಿ.ಶ. ೧೦೭೫-೭೬ರಲ್ಲಿ ಜೈನಗುರು ಸಿಂಹನಂದಿಯು ಹಿಂಗಣ ಮರಣವನ್ನು ಹೊಂದಿದನೆಂದು ಮತ್ತು ಅವನ ಶಿಷ್ಯನಾದ ಕಲ್ಯಾಣಕೀರ್ತಿಯು ಸಿಂಹನಂದಿಯ ಸ್ಮಾರಕವಾಗಿ ಜಿನೇಂದ್ರ ಚೈತ್ಯಾಲಯವನ್ನು ನಿರ್ಮಿಸಿದನು ಎಂದು ಈ ಶಾಸನ

* ಉಪ ಅಧೀಕ್ಷಕ ಶಾಸನತಜ್ಞರು, ಶಾಸನ ನಿರ್ದೇಶಕರ ಕಛೇರಿ, ಭಾರತೀಯ ಪುರಾತತ್ವ ಸರ್ವೇಕ್ಷಣ ಇಲಾಖೆ, ಮೈಸೂರು.

ಉಲ್ಲೇಖಿಸುತ್ತದೆ. ಕೊಪ್ಪಳವು ಪ್ರಾರಂಭದಲ್ಲೇ ಒಂದು ಪ್ರಮುಖ ಜೈನ ನೆಲೆಯಾಗಿದ್ದಿತು. ಹೀಗಾಗಿ ಕೊಪ್ಪಳದಲ್ಲಿ ಸಾಕಷ್ಟು ಸಂಖ್ಯೆಯ ಜೈನ ಶಾಸನಗಳು ದೊರೆಯುತ್ತವೆ. ಲಕ್ಷ್ಮೇಶ್ವರದಂತೆಯೇ ಬಳ್ಳಿಗಾವೆಯೂ ಕೂಡ ಪ್ರಮುಖ ಜೈನ ಕೇಂದ್ರವಾಗಿತ್ತು. ಈ ಮೇಲೆ ಉಲ್ಲೇಖಿಸಿದ ಬಳ್ಳಿಗಾವೆ ಶಾಸನದಲ್ಲಿ ಐದು ಮಠಗಳನ್ನು ನಿರ್ಮಿಸಿದ ರೂಪಭಟ್ಟಯ್ಯನು ಜೈನರಿಗೆಂದೇ ಒಂದು ಮಠವನ್ನು ನಿರ್ಮಿಸಿದ್ದರ ಉಲ್ಲೇಖವನ್ನು ಗಮನಿಸಿದ್ದೇವೆ. ಕ್ರಿ.ಶ. ೧೦೭೭ರ ಬಳ್ಳಿಗಾವೆಯ ಶಾಸನದ ಚಾಲುಕ್ಯ ಗಂಗ ಪೆರ್ಮಾನಡಿಯೂ ಜಿನಾಲಯವನ್ನು ಬಳ್ಳಿಗಾವೆಯ ನಗರದಲ್ಲಿ ನಿರ್ಮಿಸಿದ್ದು, ಆ ಬಸದಿಯ ಜೀರ್ಣೋದ್ಧಾರ ಕಾರ್ಯಗಳಿಗೆ ದಾನದತ್ತಿಗಳನ್ನು ನೀಡಿದನೆಂದು ತಿಳಿದುಬರುತ್ತದೆ. ಮಹಾರಾಷ್ಟ್ರ ರಾಜ್ಯದ ಸೊಲ್ಲಾಪುರ ಜಿಲ್ಲೆಯ ಅಕ್ಕಲಕೋಟೆ ಶಾಸನ, ಕ್ರಿ.ಶ. ೧೦೭೮ರಲ್ಲಿ ತೋಟ, ಮನೆ ಮತ್ತು ಎಣ್ಣೆಯ ಗಾಣಗಳನ್ನು ಜೈನ ಸನ್ಯಾಸಿನಿಯರ ಮತ್ತು ವಿದ್ಯಾರ್ಥಿಗಳ ಊಟೋಪಚಾರಗಳಿಗಾಗಿ ನೀಡಿರುವದನ್ನು ದಾಖಲಿಸಿದೆ. ಕ್ರಿ.ಶ. ೧೦೭೯ರ ಧಾರವಾಡ ಜಿಲ್ಲೆಯ ಕೋಲೂರು ಗ್ರಾಮದ ಶಾಸನ ಹಲವಾರು ವಿವರಗಳನ್ನು ನೀಡುತ್ತದೆ. ಜೈನಮತದ ಅನುಯಾಯಿಯಾಗಿದ್ದ ಬಾಳದೇವಯ್ಯನು ಬನವಾಸಿ ೧೨,೦೦೦ವನ್ನು ನೋಡಿಕೊಳ್ಳುತ್ತಿದ್ದ ಸಂದರ್ಭದಲ್ಲಿ ಇವನು 'ಕೀಳ್ಪೊಟ್ಟೆಯನ್ನು ವಡ್ಡರಾವುಳದ' ಸುಂಕಗಳನ್ನು ಪೆರ್ಜುಂಕ ಬಿಲ್ಕುಡೆಯನ್ನು ಸಂಗ್ರಹಿಸುತ್ತಿದ್ದ ಬೊಮ್ಮದೇವರಸನು ಹಾಗೂ ಪೆರ್ಗ್ಗಡೆ ಚಾವಣನು ದಾಸಗಾವುಂಡ ಮತ್ತು ರಾಜಗಾವುಂಡ ಎನ್ನುವವರು ಕೋಲೂರಿನ ಅಧಿಕಾರಿಳಾಗಿರುವ ಸಂದರ್ಭದಲ್ಲಿ, ಈ ಸುಂಕಗಳನ್ನು ಕೂಡ ದಾನ ಮಾಡುತ್ತಾರೆ.

ಹಲವಾರು ಗ್ರಾಮ ಪ್ರಮುಖರು, ಮಹಾಮಂಡಳೇಶ್ವರರು, ವ್ಯಾಪಾರಿಗಳು ಸಹ ಜಿನಾಲಯಗಳಿಗೆ ದಾನದತ್ತಿಗಳನ್ನು ನೀಡಿದ್ದಾರೆ. ಕ್ರಿ.ಶ. ೧೦೮೦ರ ಶಿಕಾರಿಪುರ ತಾಲ್ಲೂಕಿನ ತುಂಬರಹೊಸೂರಿನ ಶಾಸನದಲ್ಲಿ ಮಹಾದಂಡನಾಯಕ ಬಾಳದೇವಯ್ಯನು ಈ ಭಾಗವನ್ನು ಆಳುತ್ತಿರಲು ವಡ್ಡರಾವುಳ, ಪೆರ್ಜುಂಕ ಮತ್ತು ಬಿಲ್ಕುಡೆಗಳನ್ನು ನೀಡಿದ ವಿವರವನ್ನು ನೀಡುತ್ತದೆ. ಶಿವಮೊಗ್ಗ ಜಿಲ್ಲೆಯ ತಟ್ಟೆಕೆರೆಯ ಕ್ರಿ.ಶ. ೧೦೮೫ರ ಶಾಸನ ಬಸದಿಯ ನಿರ್ಮಾಣ ಹಾಗೂ ಮೂಲಸಂಘ ಕಾನೂರಗಣ ಮತ್ತು ಮೇಷಪಾಷಣ ಗಚ್ಛದ ಪ್ರಭಾಚಂದ್ರಸಿದ್ಧಾಂತದೇವರು ನಾಲ್ಕು ಬಸದಿಗಳನ್ನು ನಿರ್ಮಿಸಿ ಪ್ರತಿಯೊಂದಕ್ಕೂ ಸ್ಥಾನಪತಿಗಳನ್ನು ನೇಮಿಸಿದರು.

ಕ್ರಿ.ಶ. ೧೦೮೫ರ ಅರಸಿಬೀದಿ ಅಥವಾ ವಿಕ್ರಮಪುರವು ವಿಕ್ರಮಾದಿತ್ಯನ ಕಾಲದ ಒಂದು ಪ್ರಮುಖ ಕೇಂದ್ರವಾಗಿದ್ದು, ಉಪರಾಜಧಾನಿಯೂ ಆಗಿತ್ತು. ಈ ಶಾಸನದಲ್ಲಿ ಭೋಗಾವತಿ ನಗರದ ದೊರೆಯಾಗಿದ್ದಂತಹ ಸಿಂದರ ದೊರೆ ಸಿಂದರಸನ ಮಗ ಬರ್ಮದೇವರಸನು ಋಷಿಗಳಿಗೆ ಅಜ್ಜೆಗಳಿಗೆ ವಿಕ್ರಮಪುರದಲ್ಲಿ ಗೊಂಡಬೇಡಂಗಿ ಜಿನಾಲಯಕ್ಕೆ ಸೇರಿರುವ ಜೈನ ಭಿಕ್ಷುಗಳಿಗೆ ಆಹಾರದಾನಕ್ಕಾಗಿ ದಾನ ನೀಡಿದನೆಂದು ತಿಳಿಸುತ್ತದೆ. ಬಳ್ಳಾರಿ ಜಿಲ್ಲೆಯ ಹರಪ್ಪನಹಳ್ಳಿ ತಾಲ್ಲೂಕಿನ ಬಾಗಳಿ ಕೂಡ ಜೈನ ಕೇಂದ್ರಗಳಲ್ಲಿ ಒಂದು. ಇಲ್ಲಿನ ಬ್ರಹ್ಮ ಜಿನಾಲಯವು ಅಂದಿನ ಪ್ರಮುಖ ಜಿನಾಲಯವಾಗಿದ್ದಿತು. ಇಲ್ಲಿಯ ಶಾಸನವೊಂದರಲ್ಲಿ ತ್ರಿಭುವನಮಲ್ಲ ಪಾಂಡ್ಯದೇವನು ವಿಕ್ರಮಾದಿತ್ಯನ ಮಾಂಡಲಿಕನಾಗಿ ನೊಳಂಬವಾಡಿಯನ್ನು ಆಳುತ್ತಿರುವಾಗ ಅವನ ದಂಡನಾಯಕ ಚಿಕ್ಕಭಟ್ಟನು ಬ್ರಾಹ್ಮಣರ ನಿತ್ಯ ಆಹಾರಕ್ಕಾಗಿ ಹಲವಾರು ದಾನದತ್ತಿಗಳನ್ನು ನೀಡುವುದರ ಜೊತೆಗೆ ಬ್ರಹ್ಮ ಜಿನಾಲಯದ ನಿರ್ವಹಣೆಗೂ ದಾನ ನೀಡಿದ ವಿವರವಿದೆ.

ಕ್ರಿ.ಶ. ೧೦೮೭ರ ಆಂಧ್ರಪ್ರದೇಶದ ಮೆಹಬೂಬನಗರ ಜಿಲ್ಲೆಯ ಶಾಸನದಲ್ಲಿ ಪಲ್ಲವಜಿನಾಲಯ ಮತ್ತು ದ್ರವಿಳ ಸಂಘಗಳನ್ನು ಉಲ್ಲೇಖಿಸುತ್ತಾ ಅದರ ಸ್ಥಾನಾಧಿಪತಿಯಾದ ಕನಕಸೇನ ಭಟ್ಟಾರಕನ ಹೆಸರನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೦೯೪ರ ಇಂಗಳಗಿ ಶಾಸನದ ಪ್ರಕಾರ ವಿಕ್ರಮಾದಿತ್ಯನ ಆಳ್ವಿಕೆಯಲ್ಲಿ ಸ್ತ್ರೀಯರು ಅದರಲ್ಲಿಯೂ ವಿಶೇಷವಾಗಿ ಅವನ ಪತ್ನಿಯರಲ್ಲಿ ಅನೇಕರು ಜೈನ ಧರ್ಮೀಯರಾಗಿದ್ದು ಅವರಲ್ಲಿ ಶಾಸನೋಕ್ತವಾಗಿರುವಂತಹ ಜಾಕಲದೇವಿಯೂ ಜಿನಾಲಯವನ್ನು ನಿರ್ಮಿಸಿ ಜಿನಬಿಂಬವನ್ನು ಪ್ರತಿಷ್ಠಾಪಿಸಿ ಹಲವಾರು ದಾನದತ್ತಿ ನೀಡಿದ ವಿವರಗಳಿವೆ. ಅನಂತಪುರ ಜಿಲ್ಲೆಯ ಗೂಟಿ ತಾಲ್ಲೂಕಿನ ಕೊನಕೊಂಡ್ಲದ ಕ್ರಿ.ಶ. ೧೦೮೧ರ ಶಾಸನದಲ್ಲಿ ನಾಲಿಕಬ್ಬೆ ಎಂಬ ಸ್ತ್ರೀಯು ತನ್ನ ಗಂಡನ ಸ್ಮರಣಾರ್ಥವಾಗಿ ಅಲ್ಲಿ ಕೊಂಡಕುಂದೆಯ ತೀರ್ಥದ ಹತ್ತಿರ ಜಿನಾಲಯವೊಂದನ್ನು ನಿರ್ಮಿಸಿದಳು. ಮೆಡಕ್ ಜಿಲ್ಲೆಯ ಅಲ್ಲಾದುರ್ಗದ ಕ್ರಿ.ಶ. ೧೦೮೪ರ ಶಾಸನದಲ್ಲಿ ಶಾಂತಿ ಜಿನಾಲಯವಿದ್ದು ಅದನ್ನು ಕೀರ್ತಿವಿಲಾಸ ಶಾಂತಿಜಿನಾಲಯ ವೆಂದು ಕರೆಯಲಾಗುತ್ತಿತ್ತು. ಕ್ರಿ.ಶ. ೧೦೮೮ರ ಮೆಹಬೂಬ ನಗರದ ಪುಡೂರು ಶಾಸನ, ಜಿನಾಲಯ ನಿರ್ಮಾಣ ಮತ್ತು ಜಿನಬಿಂಬದ ಸ್ಥಾಪನೆ ಹಾಗೂ ಹಲವಾರು ದಾನದತ್ತಿಗಳ ವಿವರವನ್ನು ತಿಳಿಸುತ್ತದೆ. ಕಲಘಟಗಿ ತಾಲ್ಲೂಕಿನ ಮಲ್ಕಣಕೊಪ್ಪದ ಕ್ರಿ.ಶ. ೧೦೮೮ರ ಶಾಸನದಲಿ ಬಮ್ಮಿಸೆಟ್ಟಿ ಎನ್ನುವವನು ಬಸದಿಯೊಂದನ್ನು ನಿರ್ಮಿಸಿ ಭೂಮಿ ತೋಟ ಮನೆ ಹಾಗೂ ಒಂದು ಎಣ್ಣೆಗಾಣವನ್ನು ದಾನ ನೀಡಿದ ವಿಷಯವಿದೆ. ಕ್ರಿ.ಶ. ೧೦೯೬ರ ಡೋಣಿಯ ಶಾಸನದಲ್ಲಿ ಯಾಪನೀಯ ಸಂಘದ ಮತ್ತು ವೃಕ್ಷಮೂಲಗಣದ

ಮುನಿಚಂದ್ರ ತ್ರೈವಿದ್ಯಾಭಟ್ಟಾರಕನ ಶಿಷ್ಯನಾದ ಚಾರುಕೀರ್ತಿಪಂಡಿತನಿಗೆ ನಿರ್ಮಿಸಿದ ಬಸದಿಗೆ ೬೦ ಮಹಾಜನಗಳ ಸಮ್ಮುಖದಲ್ಲಿ ಸೋವಿಸೆಟ್ಟಿ ಎನ್ನುವವನು ದಾನ ನೀಡಿದನೆಂದು ತಿಳಿದುಬರುತ್ತದೆ. ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಗಬ್ಬೂರಿನಲ್ಲಿ ಕ್ರಿ.ಶ. ೧೧೧೯ರ ಶಾಸನದಲ್ಲಿ ನಖರರು, ಟಂಕಶಾಲೆ ಅಧಿಕಾರಿಗಳು ಅಗ್ರಹಾರ ಹಿರಿಯಗಬ್ಬೂರಿನ ಬ್ರಹ್ಮಜಿನಾಲಯದ ಚೈತ್ರ ಪವಿತ್ರದ ಉತ್ಸವಕ್ಕಾಗಿ ದಾನದತ್ತಿಗಳನ್ನು ನೀಡಿರುವ ಉಲ್ಲೇಖವಿದೆ.

ಕೊಲ್ಲಾಪುರದ ಕ್ರಿ.ಶ. ೧೦೮೭ರ ಶಾಸನ ಜೈನಯತಿ ರಾತೇಮಲ್ಲಕಾಂತಿಯು ಪುನ್ನಗವೃಕ್ಷ ಮೂಲಗಣದ ಅನುಯಾಯಿಯಾಗಿದ್ದು ಇವನಿಗೆ ಅಲ್ಲಿನ ಜೈನ ಬಸದಿಯ ಜೀರ್ಣೋದ್ಧಾರಕ್ಕೆ ಕುಂಡಿ-೩೦೦೦ವನ್ನು ತನ್ನ ರಾಜಧಾನಿ ಹೂವಿನಬಾಗೆಯಿಂದ ಆಳುತ್ತಿರುವಾಗ ಮಹಾಮಂಡಳೇಶ್ವರ ಕನ್ನಕೈರಸನು ರಾಜಧಾನಿ ಗೋಕಾಗೆಯಿಂದ (ಗೋಕಾಕ್) ಪೆರ್ಗ್ಗಡೆ ಮತ್ತು ಮಹಾಪ್ರಧಾನರಾದ ಬಂಮಣಯ್ಯನ ಅಣತಿಯ ಮೇರೆಗೆ ಕೆಲವು ದಾನದತ್ತಿಗಳನ್ನು ನೀಡಿದನೆಂದು ಉಲ್ಲೇಖಿಸುತ್ತದೆ. ಉಸ್ಮಾನಾಬಾದ್ ಜಿಲ್ಲೆಯ ಮುರಂ ಎಂಬಲ್ಲಿ ದೊರೆತ ಕ್ರಿ.ಶ. ೧೧೧೮ರ ಶಾಸನ, ರಾಜಧಾನಿ ಮೂರಂಬದಲ್ಲಿ (ಮುರಂ) ದಾಸಸೆಟ್ಟಿ ಎನ್ನುವವನು ಜಿನಾಲಯವನ್ನು ನಿರ್ಮಿಸಿದ್ದು, ಈ ಜಿನಾಲಯವು ಮೂಲಸಂಘ ಸೇಣಗಣ ಹಾಗೂ ಪುಸ್ತಕಗಚ್ಛಕ್ಕೆ ಸೇರಿದ್ದು ಇದರ ಯತಿಯಾಗಿ ವಾಸುಪೂಜ್ಯಭಟ್ಟಾರಕದೇವನಿಗೆ ಹಾಗೂ ಬಸದಿಯ ಪೂಜಾವಿಧಿಗಳಿಗೆ ಮತ್ತು ಜೀರ್ಣೋದ್ಧಾರಕ್ಕಾಗಿ ೪೦ ಮತ್ತರು ಭೂಮಿ ಹಾಗೂ ಒಂದು ಮತ್ತರು ತೋಟವನ್ನು ದಾನ ನೀಡಿದನೆಂದು ತಿಳಿಸುತ್ತದೆ.

ಆಂಧ್ರಪ್ರದೇಶದ ಹನುಮಕೊಂಡದಲ್ಲಿ ವಿಕ್ರಮಾದಿತ್ಯನ ಕಾಲದ ಕ್ರಿ.ಶ. ೧೧೧೬-೧೭ರ ಒಂದು ಶಾಸನ ಹನುಮಗೊಂಡಪುರದ ಸಬ್ಬಿ-ಒಂದು ಸಾವಿರದ ಅಧಿಪತಿಯಾಗಿದ್ದಂತಹ ಕಾಕತೀಯ ಮನೆತನದ ಮಹಾಮಂಡಳೇಶ್ವರ ಪ್ರೋಲನು ಇಲ್ಲಿಯ ಗುಡ್ಡದ ಮೇಲೆ 'ಕಡಲಲಾಯ' ಎಂಬ ಹೆಸರಿನ ಬಸದಿಯನ್ನು ನಿರ್ಮಿಸಿದನು. ಮೆಹಬೂಬನಗರ ಜಿಲ್ಲೆಯ ಪೆದ್ದಕಡುಮೂರಿನ ೧೧೧೭-೧೮ರ ಶಾಸನದಲ್ಲಿ ಮಹಾಮಂಡಳೇಶ್ವರ ಬ್ರಹ್ಮೇಶ್ವರದೇವನು ಪಾರ್ಶ್ವನಾಥ ದೇವರ ನಿತ್ಯನೈವೇದ್ಯಕ್ಕೆ ಮತ್ತು ಜೈನಯತಿಗಳ ಅನುಕೂಲಕ್ಕಾಗಿ ದಾನ ನೀಡಿದ ವಿವರವಿದೆ. ಅನಂತಪುರ ಜಿಲ್ಲೆಯ ಧರ್ಮಾವರಂ ತಾಲ್ಲೂಕಿನ ತೊಗರಕುಂಟದ ಒಂದು ಶಾಸನ ತೊಗರಕುಂಟೆಯ ಚಂದ್ರಪ್ರಭುದೇವರ ಬಸದಿ ಪೂಜೆಗಾಗಿ ಜೀರ್ಣೋದ್ಧಾರಕ್ಕಾಗಿ ದಂಡನಾಯಕ ಕೊಮ್ಮನಾರಯ್ಯನು ಹೂದೋಟ, ಮನೆ ಹಲವಾರು ನಿವೇಶನಗಳನ್ನು ದಾನ ನೀಡಿದ್ದಾನೆ. ನಲಗೊಂಡ ಜಿಲ್ಲೆಯ ಕೊಳನುಪಾಕದಲ್ಲಿ ವಿಕ್ರಮಾದಿತ್ಯನ ಕಾಲದ ಹಲವಾರು ಶಾಸನಗಳು ಬೆಳಕಿಗೆ ಬಂದಿವೆ. ಇಲ್ಲಿನ ಮತ್ತೊಂದು ಶಾಸನದಲ್ಲಿ ಕ್ರಿ.ಶ. ೧೧೨೫ರಲ್ಲಿ ಮಾನಸ್ತಂಭವನ್ನು ಉಲ್ಲೇಖಿಸುತ್ತಾ ದೇವಿ ಅಂಬಿಕೆಗೆ ಪಾನುಪುರ ಎಂಬ ಹಳ್ಳಿಯನ್ನು ದಾನ ಮಾಡಿದ ವಿವರವು ತಿಳಿದುಬರುತ್ತದೆ. ಇದೇ ಸ್ಥಳದ ಇದೇ ಕಾಲದ ಇನ್ನೊಂದು ಶಾಸನದಲ್ಲಿ ದೇವಭೋಗಕ್ಕಾಗಿ ಭೂದಾನವನ್ನು ಅಕ್ಕನ ಬಸದಿಗೆ ನೀಡಿದ ವಿವರವು, ಅಂರತಿಲಕದ ಅಂಬಿಕಾ ದೇವಿಗೆ ಸಹ ದಾನದತ್ತಿಗಳನ್ನು ನೀಡಿದ ದಾಖಲೆ ಈ ಶಾಸನದಲ್ಲಿದೆ. ಕೊಳನುಪಾಕ ಒಂದು ಪ್ರಮುಖ ಜೈನ ಕೇಂದ್ರವಾಗಿದ್ದಿತು ಎಂದು ಶಾಸನಗಳ ಹಿನ್ನೆಲೆಯಲ್ಲಿ ಹೇಳಬಹುದು.

ಕೊಳನುಪಾಕದಂತೆಯೇ ಗುಲ್ಬರ್ಗಾ ಜಿಲ್ಲೆಯ ಸೇಡಂ ಮತ್ತು ಅಡಕಿಗಳು ಪ್ರಮುಖ ಜೈನ ಕೇಂದ್ರವಾಗಿದ್ದವು. ಸೇಡಂ ನಗರವು ಜೈನ ಕೇಂದ್ರವಾಗಿದ್ದಿತು. ಕ್ರಿ.ಶ. ೧೧೨೪ರ ಒಂದು ಶಾಸನದಲ್ಲಿ ಸೇಡಿಂಬದ ಮುನ್ನೂರು ಮಹಾಜನರು ಜಿನಾಲಯವೊಂದನ್ನು ನಿರ್ಮಾಣ ಮಾಡಿ ಶಾಂತಿನಾಥ ತೀರ್ಥಂಕರನನ್ನು ಪ್ರತಿಷ್ಠೆ ಮಾಡಿ ದೇವಸ್ಥಾನಕ್ಕೆ ಸುವರ್ಣ ಕಲಶವನ್ನು ಮಾಡಿಸಿ ಆ ಜಿನಾಲಯಕ್ಕೆ ಬ್ರಹ್ಮ ಜಿನಾಲಯವೆಂದು ಹೆಸರಿಸಿ ದಾನದತ್ತಿ ನೀಡಿದನ್ನು ಉಲ್ಲೇಖಿಸುತ್ತದೆ. ಸೇಡಂ ತಾಲ್ಲೂಕಿನ ಅಡಕಿ ಗ್ರಾಮ ಕೂಡ ಜೈನ ಕೇಂದ್ರವಾಗಿತ್ತು. ಕ್ರಿ.ಶ. ೧೧೨೪-೨೫ರ ಶಾಸನವು ಇಲ್ಲಿ ಮಲ್ಲಸೆಟ್ಟಿ ಸಿರಿಯಕಾಳಸೆಟ್ಟಿ ಹಾಗೂ ಗುಣ ವೀರಸಿದ್ಧಾಂತ ದೇವರು ಬಸದಿಯೊಂದನ್ನು ನಿರ್ಮಿಸಿ ಪಾರ್ಶ್ವದೇವರನ್ನು ಪ್ರತಿಷ್ಠಾಪಿಸಿದರು ಎಂದು ಉಲ್ಲೇಖಿಸುತ್ತದೆ.

ಬಿಜಾಪುರ ಜಿಲ್ಲೆ ಜಮಖಂಡಿ ತಾಲ್ಲೂಕಿನ ತೇರದಾಳು ಶಾಸನ ಕ್ರಿ.ಶ. ೧೧೨೫ರ ಪ್ರಕಾರ ಕುಂಡಿ-೩೦೦೦ ಒಂದು ಉಪವಿಭಾಗವಾಗಿತ್ತು. ಚಾಲುಕ್ಯರ ಮಾಂಡಳಿಕನಾಗಿದ್ದ ಗೊಂಕದೇವರಸನು ಜೀಮೂತವಾಹನ ಮನೆತನಕ್ಕೆ ಸೇರಿದವನು ಎಂದು ಅವನ ಪೂರ್ವಜರ ಹೆಸರುಗಳನ್ನು ಉಲ್ಲೇಖಿಸುತ್ತದೆ. ಗೊಂಕದೇವರಸನು ತೇರದಾಳದಲಿ ಗೊಂಕಜಿನಾಲಯವನ್ನು ಕಟ್ಟಿಸಿ ನೇಮಿನಾಥ ತೀರ್ಥಂಕರರ ಮೂರ್ತಿಯನ್ನು ಪ್ರತಿಷ್ಠಾಪಿಸಿದನು. ಕಲಘಟಗಿ ತಾಲ್ಲೂಕಿನ ತುಂಬೂರಿನ ಕ್ರಿ.ಶ. ೧೧೨೫ರ ಶಾಸನದಲ್ಲಿ ಬರಮಯ್ಯ ಮತ್ತು ರಾಚಮಲ್ಲಯ್ಯರು ಇಂದ್ರನ ಅರಮನೆಗೆ ಸಮಾನವಾದಂತಹ ಬಸದಿಯೊಂದನ್ನು ನಿರ್ಮಿಸಿದರು ಎಂದು ಉಲ್ಲೇಖಿಸುತ್ತದೆ. ಬಾಗಲಕೋಟೆ ಜಿಲ್ಲೆಯ ಹುನುಗುಂದ ತಾಲ್ಲೂಕಿನ ಐಹೊಳೆ, ಬಾದಾಮಿ ಚಾಲುಕ್ಯರ

ಕಾಲದಿಂದಲೂ ಜೈನ ಕೇಂದ್ರವಾಗಿತ್ತು. ಮೇಗುತಿಗುಡ್ಡದ ಜಿನಾಲಯವನ್ನು ಅದೇ ಗುಡ್ಡದ ದಕ್ಷಿಣದ ತುದಿಯಲ್ಲಿ ಜೈನ ಗುಹಾಲಯವೊಂದನ್ನು ನಿರ್ಮಿಸಲಾಗಿತ್ತು. ಕ್ರಿ.ಶ. ೧೧೨೩ರಲ್ಲಿ ಶಾಸನದಲ್ಲಿ ಗುಡ್ಡದ ಮೇಲಿನ ದೇವಾಲಯವನ್ನು ಮೂಲಸಂಘಕ್ಕೆ ಸೇರಿದ ಜೈನಯತಿಗಳನ್ನು ಹಾಗೂ ಒಬ್ಬ ಸೆಟ್ಟಿಯನ್ನು ಉಲ್ಲೇಖಿಸುತ್ತದೆ. ಶಾಸನ ಬಹುತೇಕ ಭಾಗ ಹಾಳಾಗಿದೆ. ಇದೇ ಊರಿನ ಕ್ರಿ.ಶ. ೧೧೯೯ರ ಮತ್ತೊಂದು ಶಾಸನ ಕೇಶವಯ್ಯಸೆಟ್ಟಿ ಎಂಬ ವ್ಯಕ್ತಿಯ ಹೆಸರನ್ನು ಹೇಳುತ್ತಾ ಅಯ್ಯಾವೊಳೆ ಐನೂರ್ವರ ಸ್ವಾಮಿಗಳ ಹೆಸರನ್ನು ಉಲೇಖಿಸುತ್ತ ಕೇಶವಯ್ಯನು ಪುಟ್ಟ ಶಾಲೆಯನ್ನು, ಬಸದಿಯನ್ನು ನಿರ್ಮಿಸಿದ ವಿವರವಿದೆ.

ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಬೆಳಗಾಂ ಜಿಲ್ಲೆಯ ಸವದತ್ತಿ ತಾಲ್ಲೂಕಿನ ಹೂಲಿ ಕೂಡ ಜೈನಕೇಂದ್ರವಾಗಿದ್ದಿತೆಂದು ತೋರುತ್ತದೆ. ಇಲ್ಲಿನ ಪಂಚಲಿಂಗೇಶ್ವರ ದೇವಾಲಯವು ಮೂಲತಃ ಜೈನ ಬಸದಿಯಾಗಿದ್ದು ನಂತರದಲ್ಲಿ ಶೈವ ದೇವಾಲಯವಾಗಿ ಪರಿವರ್ತನೆಯಾಗಿದೆ. ಈ ಶಾಸನದಲ್ಲಿ ತಂದೂರಿನ ಯಾಪನೀಯ ಸಂಘವನ್ನು ಕುರಿತಂತೆ ಈ ಸಂಘದ ಯತಿಗಳಾದ ಶುಭಚಂದ್ರದೇವ ಹಾಗೂ ಮಾಘಣಂದಿಗಳನ್ನು ಹೆಸರಿಸುತ್ತದೆ. ಗೋಕಾಕ್ ಹತ್ತಿರ ಇರುವ ಕೊಣ್ಣೂರು ಪ್ರಮುಖ ಜೈನ ಕೇಂದ್ರವಾಗಿತ್ತು. ಕ್ರಿ.ಶ. ೧೦೮೭ರ ಶಾಸನದಲ್ಲಿ ಜೈನ ಚಟುವಟಿಕೆಯನ್ನು ಕುರಿತು ಉಲ್ಲೇಖಿಸುತ್ತದೆ. ಇಲ್ಲಿನ ಗಾವುಂಡ ಮಹಾಪ್ರಭು ನಿಧಿಯಮನು ಜೈನ ದೇವಾಲಯವೊಂದನ್ನು ನಿರ್ಮಿಸಿದನು. ಕುಂದೂರುಗಣ ಒಂದು ಪ್ರಮುಖ ಸಂಘವಾಗಿತ್ತು. ಕ್ರಿ.ಶ. ೧೦೮೮ರ ಗುಲ್ಬರ್ಗಾ ಜಿಲ್ಲೆಯ ಗುಲ್ಬರ್ಗಾ ತಾಲ್ಲೂಕಿನ ಹರಸೂರಿನ ಪಾರ್ಶ್ವಜಿನನಾಥ ಶಿಲಾಮೂರ್ತಿಯನ್ನು ಪ್ರತಿಷ್ಠಾಪಿಸಿದ ವಿವರವು ಹಾಗೂ ಧರಣೇಂದ್ರನ ಯಕ್ಷಿಗಾಗಿ ಬಹುಶಃ ಪ್ರತ್ಯೇಕ ದೇವಾಲಯವೊಂದನ್ನು ಕೂಡ ನಿರ್ಮಿಸಿದ ವಿವರವು ಶಾಸನೋಕ್ತವಾಗಿದೆ.

ಆರನೇ ವಿಕ್ರಮಾದಿತ್ಯನ ಕಾಲದಲ್ಲಿ ಜೈನ ಧರ್ಮ ಸಾಕಷ್ಟು ಉತ್ತುಂಗಕ್ಕೆ ಏರಿತ್ತು. ಯಾಪನೀಯ ಸಂಘ ಶ್ವೇತಾಂಬರ ಮತ್ತು ದಿಗಂಬರ ಪಂಥಗಳು ಪ್ರಭಾವಶಾಲಿಯಾಗಿದ್ದವು. ಇವುಗಳಲ್ಲಿ ಯಾಪನೀಯ ಸಂಘವೇ ಹೆಚ್ಚು ಪ್ರಭಾವಶಾಲಿಯಾಗಿದ್ದು ಅಡಕಿ, ಸೇಡಂ, ಹರಸೂರು, ಕೊಲ್ಲಾಪುರ, ಹಲಸಿ, ಹೂಲಿ, ಐಹೊಳೆ, ಡೋಣಿ, ಹೊಸೂರು, ಲಕ್ಕುಂಡಿ ಇನ್ನೂ ಹಲವಾರು ಕಡೆಗಳಲ್ಲಿ ಯಾಪನೀಯ ಸಂಘದಲ್ಲಿ ಹಲವಾರು ಉಪಗಣಗಳಿದ್ದವು. ಯಾಪನೀಯರು ಶ್ವೇತಾಂಬರ ಪಂಥದಿಂದ ಪ್ರಭಾವಿತರಾಗಿದ್ದರು ಹಾಗೂ ದಿಗಂಬರ ತತ್ವಗಳನ್ನು ಕೂಡ ಅವರು ಅನುಸರಿಸುತ್ತಿದ್ದರು.



## ಆಧಾರಸೂಚಿ


೧. **ಎ.ಆರ್.ಐ.ಇ. ವಾರ್ಷಿಕ ವರದಿಗಳು**

೨. ಎ.ಕ.ಸಂ. VII

೩. **ಎಪಿ.ಇಂಡಿಕಾ,** ಸಂ. XVIII, XIX

೪. **ಎಸ್.ಐ.ಐ.** IX, ಭಾಗ–೧, XI

೫. **ಕ.ಇನ್ಸ್.** ಆಂಧ್ರ ಭಾಗ–೧

೬. ಎ.ಪಿ.ಜಿ.ಎ.ಎಸ್. ಸಂ. ೩

೭. ದೇಸಾಯಿ ಪಿ.ಬಿ., **ಜೈನ ಎಪಿಗ್ರಾಫ್‌ಸ್ ಇನ್ ಸೌತ್ ಇಂಡಿಯಾ**

೮. ನಾಗರಾಜು ಡಿ.ಎಂ., ಇ.ಎಸ್.ಐ. ಸಂ. ೩೩, ಪು. ೧೬೮–೧೬೯

ಡಾ. ಎನ್. ನಂದೀಶ್ವರ*

# ಚಿಕ್ಕಬಾಣಗೆರೆಯ ಒಂದು ಹೊಸ ಶಾಸನ

ಚಿಕ್ಕಬಾಣಗೆರೆಯು ತುಮಕೂರು ಜಿಲ್ಲೆಯ ಸಿರಾ ತಾಲ್ಲೂಕಿನ ಕರ್ನಾಟಕದ ಗಡಿಯಂಚಿನಲ್ಲಿ ತಾಲ್ಲೂಕು ಕೇಂದ್ರದಿಂದ ೨೯ ಕಿ.ಮೀ. ದೂರದಲ್ಲಿರುವ ಗ್ರಾಮವಾಗಿದೆ. ಈ ಗ್ರಾಮದಲ್ಲಿ ಈಗಾಗಲೇ ಸಿರಾ ೧೦ ಹಾಗೂ ಸಿರಾ ೧೧ ಎಂಬ ಎರಡು ಶಾಸನಗಳು ಬಿ.ಎಲ್. ರೈಸ್‌ರವರ ಎಫಿಗ್ರಾಫಿಯ ಕರ್ನಾಟಿಕ ಸಂಪುಟ ೧೨ರಲ್ಲಿ ಪ್ರಕಟಿತವಾಗಿದೆ[1]. ಸಿರಾ ೧೦ರ ಶಾಸನವು ಹೊಯ್ಸಳ ವೀರಬಲ್ಲಾಳನು ಉಣ್ಣಾಮಲೆಯಿಂದ ಆಳುತ್ತಿದ್ದಾಗ (ಶಕ ೧೨೬೩) ಅವನ ಮಹಾಸಾಮಂತಾಧಿಪತಿ ದಂಡಗಲಕಿ ಹೊಳಕಲ್ಲ ಗಂಗೆಯನಾಯಕನು ಮಕ್ಕಳು ಬೊಮ್ಮೆಯ ನಾಯನು..ತಿಪಯನಯಕನ ಮಗ ಮಾಕೆಯನಾಯ್ಕಂಗೆ ಚಿಕ್ಕಬಾಣಗೆರೆ ಊರನ್ನು ವಾರಕೋಲು, ಸೇಸೆ, ಸಿದ್ದಾಯ, ಕಾಣಿಕೆ, ಕಡ್ಡಾಯ, ಪೂರ್ವ ಅಪೂರ್ವ, ಸಹಿತ ಸರ್ವಮಾನ್ಯವಾಗಿ ದತ್ತಿ ಬಿಡಲಾಗಿದೆ. ಎಲ್ಲೆಗಳನ್ನು ವಿವರಿಸಿದೆ.

ಸಿರಾ ೧೧ ಶಾಸನವು ನಿಡುಗಲ್ಲಿನ ಇರುಂಗೋಳ ಮಹಾರಾಜನು ಮಲ್ಲಿಕಾರ್ಜುನ ದೇವರಿಗೆ ಭೂದಾನ, ಎಣ್ಣೆಗಾಣ, ೫೦೦ ಗಿಡಗಳ ಹೂದೋಟಕೆ ಭೂದಾನವನ್ನು ಸ್ಥಾನಪತಿ ಕೇಶವ ಜೀಯನಿಗೆ ನೀಡಿದ ಸಂಗತಿ ತಿಳಿಸುತ್ತದೆ.

ಈ ಗ್ರಾಮದ ಆಂಜನೇಯ ದೇವಸ್ಥಾನದ ಹೊರಭಾಗದ ಗೋಡೆಯ ಪಕ್ಕ ಬಿದ್ದಿರುವ ಪಾಣಿಪೀಠದ ಮೇಲೆ ಒಂದು ಅಪ್ರಕಟಿತವಾದ ಶಾಸನವು ಕ್ಷೇತ್ರ ಕಾರ್ಯದ ಸಂದರ್ಭದಲ್ಲಿ ಕಂಡುಬಂದಿತು. ಈ ಶಾಸನವಿರುವ ಪಾಣಿಪೀಠವು ಎರಡು ಅಡಿ ಉದ್ದ, ಒಂದು ಅಡಿ ಎತ್ತರ, ಒಂದೂ ಮುಕ್ಕಾಲು ಅಡಿ ಅಗಲವನ್ನು ಹೊಂದಿದೆ. ಶಾಸನದ ಕಾಲ; ಲಿಪಿಯ ಆಧಾರದ ಮೇಲೆ ವಿಜಯನಗರದಕಾಲದ (೧೬ನೇ ಶತಮಾನದ) ಶಾಸನವೆಂದು ತಿಳಿಯಬಹುದು. ಈ ಶಾಸನವು ಆರು ಸಾಲುಗಳನ್ನು ಹೊಂದಿ ಕನ್ನಡ ಭಾಷೆ ಹಾಗೂ ಲಿಪಿಯನ್ನು ಹೊಂದಿದೆ. ಪಾಣಿಪೀಠದ ಮೇಲೆ ಈ ಶಾಸನವಿರುವುದು ವಿಶೇಷವಾದುದು.

ರೊಳ್ಳೆಯ ಕಾಮೆಯನಾಯ್ಕ ಚಿಕ್ಕಬಾಣಗೆರೆಯನ್ನಾಳುತ್ತಿದ್ದ ಸಮಯದಲ್ಲಿ ಅಲ್ಲಿನ ಗೌಡಿಕೆ ದೇವರ ನಾಗಯ್ಯ ಗೌಡನದಾಗಿತ್ತು. ಆ ಸಮಯದಲ್ಲಿ ಗೋಪಣ್ಣ ಎನ್ನುವವರು ಕೇಶವ ದೇವರನ್ನು ಪ್ರತಿಷ್ಠೆ ಮಾಡಿಸಿದನೆಂದು ಈ ಶಾಸನ ತಿಳಿಸುತ್ತದೆ. ಈ ರೊಳ್ಳೆಯ ಕಾಮೆಯನಾಯ್ಕ ಒಂದು ಪುಟ್ಟ ಪ್ರಾಂತ್ಯಕ್ಕೆ ಮಾತ್ರಕ್ಕೆ ಅಧಿಕಾರಿಯಾಗಿ ಆಳಿದಂತೆ ತಿಳಿಯಬಹುದೇ, ಆಗಲಿ ಅವನು ಒಂದು ನಾಡನ್ನು ಆಳಿದ ನಾಯಕನೆಂದು ಹೇಳಲು ಸಾಧ್ಯವಿಲ್ಲ. ಶಾಸನದಲ್ಲಿ ಉಲ್ಲೇಖವಾಗಿರುವ ಈ ಗ್ರಾಮಕ್ಕೆ ರೊಳ್ಳೆಯು ೨೦ ಕಿ.ಮೀ. ದೂರದಲ್ಲಿ ಇಂದು ಕರ್ನಾಟಕದ ಗಡಿಯಲ್ಲಿನ ಆಂಧ್ರಪ್ರದೇಶದ ಸ್ಥಳವಾಗಿದೆ.

ನಿಡಗಲ್ ನಾಯಕರ ಚರಿತ್ರೆಯಲ್ಲಿ ೧೫ನೇ ಶತಮಾನದಲ್ಲಿ ಕೊನೆ ಭಾಗದಲ್ಲಿ ಕಾಮನಾಯಕ ಎಂಬ ಹೆಸರು ಅವರ ಮನೆತನದಲ್ಲಿ ಉಲ್ಲೇಖವಾಗಿದೆ[2]. ಶಾಸನದಲ್ಲಿ ಉಲ್ಲೇಖವಾಗಿರುವ ಕಾಮೆನಾಯ್ಕನಿಗೂ ನಿಡಗಲ್ ಪಾಳೆಗಾರನಾದ ಕಾಮನಾಯಕನಿಗೂ ಸಂಬಂಧವಿರಬಹುದೆ ಎಂಬ ಪ್ರಶ್ನೆ ಉದ್ಭವಿಸುತ್ತದೆ.

ನಿಡಗಲ್ ಚರಿತ್ರೆಯಲ್ಲಿ ಕಾಮನಾಯಕನ ಪೂರ್ವದಲ್ಲಿ ಆಳ್ವಿಕೆ ನಡೆಸಿದ ಚಿಕ್ಕತಿಪ್ಪರಾಜೇಂದ್ರನ ಕಾಲದಲ್ಲಿ ನಿಡಗಲ್ಲು ಪ್ರಾಂತ್ಯ ಬಹಳ ವಿಸ್ತಾರವಾಗಿದುದನ್ನು ಡಿ.ಎನ್. ಯೋಗೀಶ್ವರಪ್ಪನವರ ಲೇಖನದಲ್ಲಿ ಗುರುತಿಸಬಹುದು.[3] ಪ್ರಾಯಶಃ ಅವನ ಕಾಲದಲ್ಲಿ ನಿಡಗಲ್ಲಿಗೆ ಕೇವಲ ೩೫ ಕಿ.ಮೀ. ಅಂತರದಲ್ಲಿನ ರೊಳ್ಳೆಯೂ ಕೂಡಾ ಸೇರಿರಬಹುದು ಹಾಗೂ ಅದು ಅವರ ಕಾಲದಲ್ಲಿ ಪ್ರಮುಖ ಸ್ಥಳವಾಗಿರಬಹುದು. ಆ ಪ್ರಾಂತ್ಯಕ್ಕೆ ಸೇರಿದ ಚಿಕ್ಕಬಾಣಗೆರೆಯಲ್ಲಿ ಶ್ರೀಮಂತ ವ್ಯಕ್ತಿ ಗೋಪಣ್ಣನು ಕೇಶವ ದೇವರ ದೇವಾಲಯವನ್ನು ನಿರ್ಮಿಸಿ ಶಾಸನವನ್ನು ಹಾಕುವಾಗ ಆ ಪ್ರಾಂತ್ಯದ ನಾಯಕನ ಹೆಸರನ್ನು ಉಲ್ಲೇಖಿಸುವುದು ಸಹಜವಾಗಿಯೇ ಆಗಿದೆ. ಆದುದರಿಂದ

* ಪ್ರಾಂಶುಪಾಲರು, ಎಸ್.ಎಂ.ಆರ್. ಪಿ.ಯು. ಕಾಲೇಜು, ಕಳ್ಳಂಬೆಳ್ಳ, ಸಿರಾ ತಾಲ್ಲೂಕು, ತುಮಕೂರು ಜಿಲ್ಲೆ.

ಈ ಶಾಸನವು ನಿಡಗಲ್ಲು ಪಾಳೆಗಾರನಾದ ಕಾಮನಾಯಕನ ಶಾಸನವೇ ಆಗಿದೆ ಎಂದು ಹೇಳಬಹುದು. ಇದು ನಿಡಗಲ್ಲು ನಾಯಕನಾದ ಕಾಮನಾಯಕನಿಗೆ ಸಂಬಂಧಿಸಿದ ಮೊದಲ ಶಾಸನವಾಗಿದೆ ಹಾಗೂ ಇವನಿಗೆ ಸಂಬಂಧಿಸಿದ ಬೇರೆ ಯಾವ ಶಾಸನಗಳೂ ಇದುವರೆಗೆ ದೊರೆತಿಲ್ಲ.

**ಈ ಶಾಸನದ ಕಾಲ :** ಈ ಶಾಸನದ ಲಿಪಿ ಮತ್ತು ಅಲ್ಲಿ ಉಲ್ಲೇಖವಾಗಿರುವ ಪ್ರಭವ ಸಂವತ್ಸರವು ಕ್ರಿ.ಶ. ೧೫೦೮ರ ವೇಳೆಗೆ ಸರಿ ಹೊಂದುತ್ತದೆ. ಆಗ ವಿಜಯನಗರದಲ್ಲಿ ತುಳುವ ನರಸನಾಯಕನ ಆಳ್ವಿಕೆ ಇತ್ತು ಮತ್ತು ಆ ನರಸನಾಯಕನ ಅಮರನಾಯಕನಾಗಿ ನಿಡಗಲ್ಲು ಪ್ರದೇಶದಲ್ಲಿ ಕಾಮನಾಯ್ಕ ಆಳ್ವಿಕೆ ಮಾಡುತ್ತಿದ್ದನು ಎಂದು ಹೇಳಬಹುದು.

ಒಟ್ಟಿನಲ್ಲಿ ಈ ಶಾಸನದಿಂದ ತಿಳಿದುಬರುವ ಸಂಗತಿ ಎಂದರೆ : ಈ ಶಾಸನವು–

*೧. ನಿಡಗಲ್ಲು ನಾಯಕರ ಮನೆತನಕ್ಕೆ ಸೇರಿದ ಶಾಸನವಾಗು ತ್ತದೆ.*

*೨. ಕಾಮನಾಯ್ಕನ ಆಳ್ವಿಕೆಗೆ ರೊಳ್ಳೆಯೂ ಕೂಡ ಸೇರಿತ್ತೆನ್ನಬಹುದು.*

*೩. ಆತನ ಆಳ್ವಿಕೆಯ ಕಾಲದಲ್ಲಿ ಚಿಕ್ಕಬಾಣಗೆರೆಯು ದೇವರ ನಾಗಯ್ಯನ ಗೌಡಿಕೆಗೆ ಒಳಪಟ್ಟಿತ್ತು.*

*೪. ಚಿಕ್ಕಬಾಣಗೆರೆಯಲ್ಲಿ ಗೋಪಣ್ಣ ಎನ್ನುವನು ಕೇಶವ ದೇವಾಲಯವನ್ನು ನಿರ್ಮಿಸಿದ ಸಂಗತಿ ಗೊತ್ತಾಗುತ್ತದೆ.*

*೫. ವಿಜಯನಗರದ ಕಾಲಕ್ಕೆ ಸೇರಿದ ಈ ಶಾಸನದ ಕಾಲವನ್ನು ಕ್ರಿ.ಶ. ೧೫೦೮ ಎಂದು ನಿರ್ಧರಿಸಬಹುದು.*

*೬ ಶಾಸನದಲ್ಲಿ ಉಲ್ಲೇಖವಾಗಿರುವ ಕಾಮಯ್ಯನಾಯ್ಕನು ನಿಡಗಲ್ಲು ಪಾಳೆಗಾರ ಕಾಮಯ್ಯನಾಯ್ಕನಾಗಿದ್ದಾನೆ.*

*೭. ಪಾಣಿಪೀಠದ ಮೇಲೆ ಶಾಸನವಿರುವುದು ಈ ಶಾಸನದ ವಿಶೇಷ.*

ಈ ಶಾಸನದಲ್ಲಿ ಉಲ್ಲೇಖವಾಗಿರುವಂತೆ ಗೋಪಣ್ಣನು ಚಿಕ್ಕಬಾಣಗೆರೆಯಲ್ಲಿ ಕೇಶವದೇವರನ್ನು ಪ್ರತಿಷ್ಠಾಪನೆ ಮಾಡಿದ್ದಾನೆಂದು ತಿಳಿದುಬರುತ್ತದೆ. ಮಂಟಪದಂತೆ ಇದ್ದ ಕೇಶವ ದೇವಸ್ಥಾನವು ಪಕ್ಕದಲ್ಲಿಯೇ ಇರುವ ಹಳೆಯದಾದ ನೇರಳೆಮರದ ಕೊಂಬೆಗಳು ಅದರ ಮೇಲೆ ಬಿದ್ದು ಶಿಥಿಲವಾಗಿರುತ್ತದೆಂದು ಹಾಗೂ ಇಲ್ಲಿ ಮೊದಲು ಗರುಡನ ವಿಗ್ರಹ ದೇವಸ್ಥಾನವಿತ್ತೆಂದು ಶ್ರೀ ಬಾಲಕೃಷ್ಣರವರು ತಿಳಿಸುತ್ತಾರೆ. ದೇವಸ್ಥಾನದ ಕೆಲವು ಕಂಬಗಳು ನೆಲದಲ್ಲಿ ಮುಚ್ಚಿಹೋಗಿರುತ್ತವೆ. ಕೇಶವನ ವಿಗ್ರಹದ ಬಗ್ಗೆ ಕ್ಷೇತ್ರಕಾರ್ಯದ ಸಂದರ್ಭದಲ್ಲಿ ಹುಡುಕಿದಾಗ ಎಲ್ಲಿಯೂ ಆ ಮೂರ್ತಿಯು ಆ ಗ್ರಾಮದಲ್ಲಿರುವುದು ಕಂಡುಬರಲಿಲ್ಲ. ಈ ಶಾಸನವು ಬರಹವಿರುವ ಪಾಣಿಪೀಠದ ಮೇಲೆಯೇ ಕೇಶವ ವಿಗ್ರಹವಿದ್ದು, ಕ್ರಮೇಣ ಆ ಸುಂದರವಾದ ವಿಗ್ರಹವನ್ನು ಯಾರೋ ಸ್ಥಳಾಂತರಿಸಿರಬಹುದು ಅಥವಾ ಇದು ಸಹ ನೆಲದಲ್ಲಿ ಮುಚ್ಚಿಹೋಗಿರಬಹುದು. ಅದು ದೊರೆತರೆ ಆ ಕಾಲದ ಶಿಲ್ಪ ಲಕ್ಷಣವನ್ನು ವಿವರಿಸಲು ಸಾಧ್ಯವಾದೀತು. ಇಂದು ಆಂಜನೇಯ ದೇವಸ್ಥಾನದ ಪಕ್ಕ ಕಲ್ಲುಗಳನ್ನು ಮೂರು ಅಡಿ ಎತ್ತರಕ್ಕೆ ಜೋಡಿಸಿ ಅದರಲ್ಲಿ ಶಿಥಿಲವಾದ ೧೧ನೇ ಶತಮಾನಕ್ಕೆ ಸೇರಿದ ಎರಡು ಭೈರವನ ವಿಗ್ರಹಗಳನ್ನಿಟ್ಟಿರುತ್ತಾರೆ. ಈ ವಿಗ್ರಹಗಳ ಮಧ್ಯೆ ರೇಖಾಚಿತ್ರದ ಕಲ್ಲು ಇರುತ್ತದೆ.



**ಶಾಸನದ ಪಾಠ**

*೧ ಪ್ರಭವ ಸಂವತ್ಸರದ ಭಾದ್ರಪದ ಸು ೩ ಮಂ ದಲು ಶ್ರೀ*

*೨ ಸ್ವಸ್ತಿ ಶೀಮನು ಮಹಾ ರೊಳ್ಳೆಯ ಕಾಮೆಯನಾಯ್ಕರು*

*೩ ಚಿಕ್ಕಬಾಣಸಗೆರೆಯನಾಳ್ವಲ್ಲಿ ದೇವರ ನಾಗಯ*

*೪ ಗೌಡಗೌಡಿಕೆಯ ನಾಳ್ವಲ್ಲಿ . . . .*

*೫ ಯ . . ಗಗೋಪಣ ಮಾಡ್ಸಿದ ಕೇಶವ ಪ್ರ(ತಿ)*

*೬ ಷ್ಠೆ ಮಂಗಳ ಮಹಾ ಶ್ರೀ ಶ್ರೀ ಶ್ರೀ*

(ಶಾಸನ ಓದಲು ನೆರವಾದ ಡಾ॥ ಪಿ.ವಿ. ಕೃಷ್ಣಮೂರ್ತಿ ಹಾಗೂ ಕೆಂಕೆರೆ ಹನುಮಂತೇಗೌಡರವರಿಗೆ ಕೃತಜ್ಞತೆಗಳು)





## ಆಧಾರಸೂಚಿ

೧. **ಎಪಿಗ್ರಾಫಿಯ ಕರ್ನಾಟಕ,** ಸಂ. ೧೨ (ರೈಸ್ ಆವೃತ್ತಿ), ತುಮಕೂರು.

೨. ಡಿ.ಎನ್. ಯೋಗೀಶ್ವರಪ್ಪ, 'ನಿಡಗಲ್ಲು ನಾಯಕರು', **ದಕ್ಷಿಣ ಕರ್ನಾಟಕ ಅರಸು ಮನೆತನಗಳು,** ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಅದೇ.,

ಡಾ. ಚನ್ನಬಸಪ್ಪ. ಜಿ*

# ರಾಯಚೂರು ಜಿಲ್ಲೆ ಮಲ್ಲಟ ಗ್ರಾಮದ ಅಪ್ರಕಟಿತ ಶಾಸನಗಳು

**ಹಿನ್ನೆಲೆ :**

ಮಲ್ಲಟ ಗ್ರಾಮದ ಐದು ಅಪ್ರಕಟಿತ ಶಾಸನಗಳ ಚರ್ಚೆಯೇ ಪ್ರಸ್ತುತ ಸಂಪ್ರಬಂಧದ ಉದ್ದೇಶ. ಈ ಹಿಂದೆ ಶಾಸನ ನಂಬರ್ ೩ನ್ನು *A.R.I.E.* 1960-61 ರಲ್ಲಿ ಕೇವಲ ಎರಡು ಸಾಲುಗಳ ಸಾರಾಂಶದಲ್ಲಿ ಮಲ್ಲಟದ ಕೋಟೆ ಮತ್ತು ಸೋಮನಾಥ ದೇವಾಲಯದ ವಿವರಗಳನ್ನು ಹೇಳಲಾಗಿದೆ.[1] ಹಾಗೆಯೇ ಇದೇ ಗ್ರಾಮದ ಕ್ರಿ.ಶ. ೧೧೯೬ರ ಒಂದು ಶಾಸನ[2] ಪ್ರಕಟವಾಗಿದೆ.

**ಶಾಸನಗಳು ದೊರೆತ ಸ್ಥಳ :** ಮಾನ್ವಿ ತಾಲ್ಲೂಕಿನ ಮಲ್ಲಟ ಗ್ರಾಮವು ರಾಯಚೂರು ಜಿಲ್ಲಾ ಕೇಂದ್ರದಿಂದ ಪಶ್ಚಿಮ ದಿಕ್ಕಿಗೆ ೪೫ ಕಿ.ಮೀ. ದೂರದಲ್ಲಿದೆ. ಇದು ಪ್ರಾಚೀನ ಮತ್ತು ಮಧ್ಯಯುಗೀನ ಕಾಲದಲ್ಲಿ ಮೊರಟ – ೩೦೦ ಆಡಳಿತ ವಿಭಾಗದ ರಾಜಧಾನಿಯಾಗಿತ್ತು. ಇಲ್ಲಿಂದಲೇ ಹೈಹಯ ವಂಶದ ಸಾಮಂತ ಅರಸು ಮನೆತನವು ಕಲ್ಯಾಣ ಚಾಳುಕ್ಯರು ಮತ್ತು ಕಳಚೂರಿಗಳ ಅಧೀನರಾಗಿ ರಾಜ್ಯಭಾರ ಮಾಡಿದರು. ಇಲ್ಲಿಯ ದೇವಾಲಯಗಳಾದ ನಖರೇಶ್ವರ, ಮಲ್ಲಿಕಾರ್ಜುನ, ಸೋಮನಾಥ, ಭೂಪದೇವರು, ಪಲ್ಲವೇಶ್ವರ, ಮಾದೇಶ್ವರ, ಕಲ್ಲೇಶ್ವರ, ಸಪ್ತನಾಥದೇವರು, ಲೋಕೇಶ್ವರ ದೇವರು, ಕೋಟೆಗಳು ಶಾಸನೋಕ್ತವಾಗಿವೆ. ಇವುಗಳಲ್ಲದೆ ಇಲ್ಲಿ ಕೇಶವ, ರಾಮಲಿಂಗೇಶ್ವರ, ವಚನಕಾರ ಮೊರಟದ ಬಂಕಯ್ಯ (ಸುಂಕದ ಬಂಕಯ್ಯ) ನ ಗದ್ದುಗೆ, ವೀರಭದ್ರೇಶ್ವರ ದೇವಾಲಯಗಳಿವೆ. ಇವುಗಳು ಶಾಸನೋಕ್ತ ವಾಗಿಲ್ಲ.

**ಶಾಸನಗಳ ಕಾಲ ಮತ್ತು ಶಿಲ್ಪ :** ಮಲ್ಲಟ ಗ್ರಾಮದ ಐದು ಶಾಸನಗಳು ಕರಿಯ ಕಲ್ಲಿನ ಚಪ್ಪಡಿಗಳ ಮೇಲೆ ಸುಂದರವಾಗಿ ಕೆತ್ತಲ್ಪಟ್ಟಿವೆ.

**ಶಾಸನ ನಂ. ೧ :** ಕಂಬಳೇರ ತೋಟದಲ್ಲಿರುವ ಈ ಶಾಸನವು ಕ್ರಿ.ಶ. ೧೧೫೯ಕ್ಕೆ ಸೇರುತ್ತದೆ. ಎತ್ತರ ೫೯ ಸೆಂ.ಮೀ. ಅಗಲ ೧೮ ಸೆಂ.ಮೀ. ಒಟ್ಟು ಸಾಲುಗಳು ೨೬. ಈ ಶಾಸನದ ಮೇಲೆ ಸೂರ್ಯ-ಚಂದ್ರರ ಶಿಲ್ಪಗಳು ಹಸು ತನ್ನ ಕರುವಿನೊಂದಿಗೆ ಇದ್ದು, ಮಧ್ಯದಲ್ಲಿ ಶಿವಲಿಂಗ, ಇದರ ಬದಿಯಲ್ಲಿ ಖಡ್ಗ ಶಿಲ್ಪವಿದೆ.



*ಗ್ರಾಮ ಮಲ್ಕಂದಿನ್ನಿ, ತಾಲ್ಲೂಕು ದೇವದುರ್ಗ, ಜಿಲ್ಲೆ ರಾಯಚೂರು – ೫೮೪ ೧೧೧.

**ಶಾಸನ ನಂ. ೨ :** ಮಲ್ಲಿಕಾರ್ಜುನ ದೇವಾಲಯದ ಈ ದೊಡ್ಡ ಶಾಸನದ ಕಾಲ ಕ್ರಿ.ಶ. ೧೧೪೮. ಇದರ ಎತ್ತರ ೧೭೦ ಸೆಂ.ಮೀ. ಅಗಲ ೧೦೯ ಸೆಂ.ಮೀ. ಒಟ್ಟು ಸಾಲುಗಳು ೪೭. ಈ ಶಾಸನದ ಮೇಲ್ಭಾಗದ ತ್ರುಟಿತ ಭಾಗವು ಶಾಸನದ ಇನ್ನೊಂದು ಬದಿಯಲ್ಲಿ ಸಂರಕ್ಷಿಸಲಾಗಿದೆ. ಇದರ ಮೇಲ್ಭಾಗದಲ್ಲಿ ಸೂರ್ಯ ಚಂದ್ರರ ಶಿಲ್ಪಗಳಿವೆ. ಇದರ ಕೆಳಗಡೆ ಮಂಟಪದ ಮಧ್ಯದಲ್ಲಿ ಸುಂದರ ಶಿವಲಿಂಗ ಭಾಗ ಮಾತ್ರ ಕಾಣಿಸುತ್ತದೆ.

**ಶಾಸನ ನಂ. ೩ :** ಈಳಿಗೇರು ಮಲ್ಲಯ್ಯನ ಹೊಲದ ಬದುವಿನಲ್ಲಿರುವ ಕ್ರಿ.ಶ. ೧೧೪೮ರ ಶಾಸನವು ಬಹುಪಾಲು ಸವೆದಿದೆ. ಇದರ ಎತ್ತರ ೧೩೧ ಸೆಂ.ಮೀ. ಅಗಲ ೮೫ ಸೆಂ.ಮೀ. ಒಟ್ಟು ಸಾಲುಗಳು ೩೬.

**ಶಾಸನ ನಂ. ೪ :** ಅಲ್ಲಮಪ್ರಭು ದೇವಾಲಯದ ಮುಂಬದಿಯಲ್ಲಿರುವ ಶಾಸನವು ಕ್ರಿ.ಶ. ೧೧೭೮ರ ಕಾಲಕ್ಕೆ ಸೇರುತ್ತದೆ. ಇದರ ಎತ್ತರ ೧೪೪ ಸೆಂ.ಮೀ. ಅಗಲ ೭೫ ಸೆಂ.ಮೀ. ಒಟ್ಟು ೫೨ ಸಾಲುಗಳಿವೆ. ಈ ಶಾಸನದ ಮೇಲ್ಬದಿಯಲ್ಲಿ ಸೂರ್ಯ-ಚಂದ್ರರು, ನಂದಿ, ಶಿವಲಿಂಗ, ಹಸು ತನ್ನ ಕರುವಿಗೆ ಹಾಲುಣಿಸುತ್ತಿರುವ ಉಬ್ಬು ಶಿಲ್ಪಗಳಿವೆ.



**ಶಾಸನ ನಂ. ೫ :** ಮಲ್ಲಿಕಾರ್ಜುನ ದೇವಾಲಯದ ಕಿರುಶಾಸನವು ಕ್ರಿ.ಶ. ೧೨ನೇ ಶತಮಾನಕ್ಕೆ ಸೇರುತ್ತದೆ. ಇದರ ಎತ್ತರ ೧೧೬ ಸೆಂ.ಮೀ. ಅಗಲ ೫೦ ಸೆಂ.ಮೀ. ಒಟ್ಟು ೩೦ ಸಾಲುಗಳಿವೆ. ಮೇಲ್ಭಾಗದ ಮಂಟಪದಲ್ಲಿ ಹಸು, ಶಿವಲಿಂಗ, ನಂದಿ ಮತ್ತು ಇವುಗಳ ಮೇಲ್ಬದಿಯಲ್ಲಿ ಸೂರ್ಯ-ಚಂದ್ರರ ಉಬ್ಬು ಶಿಲ್ಪಗಳಿವೆ. (ಚಿತ್ರ ೪) ಹಾಗೆಯೇ ಇದೇ ಶಾಸನದ ಹತ್ತಿರ ಇನ್ನೊಂದು ಭಗ್ನಗೊಂಡ ಶಾಸನದ ಮೇಲ್ಭಾಗದ ಕಲ್ಲು ಕಂಡು ಬಂದಿದ್ದು, ಅದು ಕ್ರಿ.ಶ. ೧೨ನೇ ಶತಮಾನಕ್ಕೆ ಸೇರುತ್ತದೆ. ಇದರಲ್ಲಿ ಕೈ ಮುಗಿದು ಕುಳಿತುಕೊಂಡ ಭಕ್ತ, ಉದ್ದನೆಯ ಜಡೆ ಬಿಟ್ಟ ಯತಿಯು ಶಿವಲಿಂಗಕ್ಕೆ ಪೂಜೆ ಸಲ್ಲಿಸುತ್ತಿರುವ ಶಿಲ್ಪ ಇದೆ. ಇವುಗಳ ಮೇಲ್ಬದಿಯಲ್ಲಿ ಸೂರ್ಯ-ಚಂದ್ರರ ಶಿಲ್ಪಗಳಿವೆ.

**ಶಾಸನಗಳ ಭಾಷೆ ಮತ್ತು ಲಿಪಿ :** ಮಲ್ಲಟ ಗ್ರಾಮದಲ್ಲಿ ದೊರೆತ ಈ ಐದು ಶಾಸನಗಳ ಭಾಷೆ ಕನ್ನಡ ಹಾಗೂ ಲಿಪಿಯೂ ಕನ್ನಡವೇ ಆಗಿದೆ. ಇವುಗಳ ಲಿಪಿಸ್ವರೂಪವು ಉತ್ತಮ ಮಾದರಿಯದಾಗಿದೆ. ಎಲ್ಲಾ ಅಕ್ಷರಗಳ ಬರಹವು ಸ್ಫುಟವಾಗಿದೆ. ಲಿಪಿಕಾರರು ಅಕ್ಷರಗಳನ್ನು ಆಳವಾಗಿ ಕಂಡರಿಸಿದ್ದಾರೆ. ಈ ಶಾಸನಗಳ ಬರಹಕ್ಕೆ ಕರಿಯ ಕಲ್ಲು ಬಳಸಲಾಗಿದೆ. ಶಾಸನಗಳ ಕೆಲವೆಡೆ ಚಕ್ಕೆಗಳು ಎದ್ದು, ಅಂಚುಗಳು ಒಡೆದು ಅಕ್ಷರಗಳು ಅಸ್ಫುಟವಾಗಿವೆ. ಶಾಸನ ನಂ. ೩; ಇಲ್ಲಿನ ಜನರ ಕೊಡಲಿ ಮಸೆಯುವ ವಸ್ತುವಾಗಿದ್ದರಿಂದ ಇದರ ಅಕ್ಷರಗಳು ಅರ್ಧದಷ್ಟು ಸವೆದು ಹೋಗಿರುತ್ತವೆ.

**ಶಾಸನಗಳ ಸ್ವರೂಪ ಹಾಗೂ ಉದ್ದೇಶ :** ಇವು ಶೈವಧರ್ಮದ ಶಾಸನಗಳಾಗಿದ್ದು, ಶಿವನ ಪ್ರಾರ್ಥನೆಯಿಂದ ಪ್ರಾರಂಭವಾಗುತ್ತವೆ. ಇವುಗಳು ದಾನ ಶಾಸನಗಳ ಗುಂಪಿಗೆ ಸೇರುತ್ತವೆ. ದೇವಾಲಯ, ಮಠ, ಘಟಿಕಾಸ್ಥಾನ, ಸ್ಥಾನಪತಿ, ತಪೋಧನ, ಜೀಯರು, ದೇವರ ಅಂಗಭೋಗ, ರಂಗಭೋಗ, ನೈವೇದ್ಯ ಮೊದಲಾದವು ಗಳಿಗಾಗಿ ಬಿಟ್ಟ ದಾನಗಳ ಬಗ್ಗೆ ದಾಖಲಿಸುವುದೇ ಈ ಶಾಸನಗಳ ಉದ್ದೇಶವಾಗಿರುತ್ತದೆ.

**ಶಾಸನಗಳ ಸಾರಾಂಶ :**

**ಶಾಸನ ನಂ. ೧ :** *ಕಂಬಳೇರ ತೋಟದಲ್ಲಿರುವ ಕ್ರಿ.ಶ. ೯-೧೦-೧೧೩೯ರ ಶಾಸನ :*

ಕಲ್ಯಾಣ ಚಾಳುಕ್ಯ ಚಕ್ರವರ್ತಿ ಜಗದೇಕ ಮಲ್ಲನ ಕಾಲದಲ್ಲಿ ಅವನ ಮಹಾಮಂಡಳೇಶ್ವರನಾದ ಘಟ್ಟದೇವರಸನು ಆಶ್ವಯುಜ ಮಾಸದ ಚಂದ್ರಗ್ರಹಣದಂದು ಅಭಿನವ ಮಲ್ಲಿಕಾರ್ಜುನ ದೇವರ ಅಂಗಭೋಗ, ರಂಗಭೋಗ, ನೈವೇದ್ಯ, ನಂದಾದೀವಿಗೆ ಸಲುವಾಗಿ ಪೂರ್ವ ದಿಕ್ಕಿನ

ಹೊಲದಲ್ಲಿ ಹರವೆಯ ದಾರಿಯಿಂದುತ್ತರ ಭಾಗದ ಬಟ್ಟಿಗನ ಹಳ್ಳದ ಉತ್ತರಕ್ಕಿರುವ ನಖರೇಶ್ವರ ದೇವರ ಸನ್ನಿಧಿಯಿಂದ ಕುರುಕುಂದೆಯ ಗಡಿಂಬ (ಕೋಲು) ದಲು ಮೂರು ಮತ್ತರು ಭೂಮಿಯನ್ನು ದೇವಾಲಯಕ್ಕೆ ದಾನ ಕೊಟ್ಟ ವಿವರಗಳಿವೆ. ಶಾಸನದ ಮುಂದಿನ ಭಾಗದಲ್ಲಿ ಜೀಯ ಪಂಡಿತರಿಗೆ ಒಂದು ಮನೆ ಹಾಗೂ ದೇವಾಲಯದ ದಕ್ಷಿಣಕ್ಕಿರುವ ಹೂದೋಟಕ್ಕೆ ೧೦೦ ಕಂಭ ಭೂಮಿಯನ್ನು ದಾನವಾಗಿ ಕೊಟ್ಟರು. ಆ ಊರಿನ ವ್ಯಾಪಾರಸ್ಥರೆಲ್ಲರೂ ತಮ್ಮ ಅಂಗಡಿಗಳಲ್ಲಿನ ಅರ್ಧ ಹಣದ ಜೋಳವನ್ನು ದಾನವಾಗಿ ಕೊಟ್ಟರು. ಶಾಸನದ ಕಡೆಯ ಭಾಗದಲ್ಲಿ ಮಲ್ಲಿಮಯ್ಯ ಮತ್ತು ಸಂದಿ ವಿಗ್ರಹಿ ಶಂಕರಯ್ಯ ಬರೆದರು ಎಂದಿದೆ. ಅವರಿಗೆ ಮೂರು ಮತ್ತರು ಭೂಮಿಯನ್ನು ಸ್ಥಾನಪತಿ ಜೀಯರು ದತ್ತಿ ನೀಡಿದ ವಿವರಗಳಿವೆ.

**ಶಾಸನ ನಂ. ೨ :** *ಮಲ್ಲಿಕಾರ್ಜುನ ದೇವಾಲಯದ ದೊಡ್ಡ ಶಾಸನ ಕ್ರಿ.ಶ. ೨೬-೧೨-೧೧೪೮ :*

ಕಲ್ಯಾಣ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲನು ಕಲ್ಯಾಣದಿಂದ ರಾಜ್ಯಭಾರ ಮಾಡುತ್ತಿದ್ದಾಗ ಅವನ ಸಾಮಂತ ಘಟ್ಟಿದೇವರಸನಿದ್ದ. ಈತನನ್ನು ಶಾಸನದಲ್ಲಿ ಹೈಹಯವಂಶೋದ್ಭವ ಮಲೆಪರೆ ಘೋಷಣ ನಾಲ್ಕು ಭಾಷೆಯ ಜಗಬಿರುದ ಮಂಡಳೀಕರಗಂಡ ಮಲ್ಲಿಕಾರ್ಜುನ ದೇವರ ಪಾದಾರಾಧಕ ಮುಂತಾಗಿ ಪ್ರಶಂಸಿಸಲಾಗಿದೆ. ಇವನು ಮೊರಟದಲ್ಲಿ ರಾಜ್ಯಭಾರ ಮಾಡುತ್ತಿದ್ದು, ಮಲ್ಲಿಕಾರ್ಜುನ ದೇವರಿಗೆ ಅಂಗಭೋಗ, ನೈವೇದ್ಯ, ಪಾತ್ರ-ಪಾವುಳ, ತಪೋಧನರ ಆಹಾರ ದಾನಕ್ಕೆಂದು ಬಮ್ಮರಾಶಿ ಪಂಡಿತನನ್ನು ಬಿನ್ನವಿಸಿ ಮಾಡಗಿರಿಯ ಬಳಿ ಮಾರುವ ಭತ್ತಕ್ಕೆ ಸುಂಕವನ್ನು ನಿಗದಿಪಡಿಸಿ ದೇವಾಲಯಕ್ಕೆ ಬಿಡುತ್ತಾನೆ. ಅಲ್ಲದೆ ಎರದಹಳ್ಳಿಯ ಉತ್ತರಕ್ಕೆ ಬಟ್ಟಿಗನಹಳ್ಳದ ಎರಡು ಕಡೆ ಕುರುಕುಂದೆಯ ಗಡಿಂಬ (ಕೋಲು)ದಲ್ಲಿ ಆರು ಮತ್ತರು ಭೂಮಿಯನ್ನು ದೇವರ ಹಡಪಕ್ಕೆ ಹೇರಿಗೆ ಐವತ್ತು ಎಲೆ ಬಿಡುವಂತೆ ಕಟ್ಟಳೆ ಮಾಡಿದಂತೆ ಉಲ್ಲೇಖವಿದೆ. ಹಾಗೆಯೇ ಶಾಸನ ಮುಂದುವರಿದು ಮಾಣಿಗಳಿಗೆ ಗಾಣದೆರೆಯಿಂದ ವಿನಾಯಿತಿ ನೀಡಿ ಅವರಿಗೆ ಗಾಣವನ್ನು ಕೊಟ್ಟು ದೇವರ ತ್ರಿಕಾಲಪೂಜೆಯ ಮಾಡುವ ಹೂವಿನ ಸಲುವಾಗಿ ೫೦ ಕಂಬ ಹೊಲ ದತ್ತಿ ಬಿಟ್ಟರು. ಭೂಪದೇವರಿಗೆ ಹಣದೊಂದಿಗೆ ನಾಗರಕೆರೆಯ ಉತ್ತರಕ್ಕೆ ೨೪ ಮತ್ತರು ಕರಿಯ ಜಮೀನು, ಸಿಡಿಲಹಳ್ಳದ ಪಶ್ಚಿಮಕ್ಕೆ ಕೇದಗೆ ಗೆರೆಯ ದಾರಿಯಿಂದ ಪೂರ್ವಕ್ಕೆ ಎರಡು ಮತ್ತರು ಮಸಬು (ಕೆಂಪು) ಭೂಮಿ ದತ್ತಿ ಕೊಟ್ಟರು. ದೇವಾಲಯದ ಸೂಳೆಯರಿಗೆ ಹತ್ತು ನಿವೇಶನ, ಜೀಯರಿಗೆ ಎರಡು ನಿವೇಶನ, ಮಾದಿಯಣ್ಣ ಎಂಬ ವ್ಯಕ್ತಿಗೆ ಕಂನ್ತರಿಕೆಯ ಹೊಲದಲ್ಲಿ ಎರಡು ಮತ್ತರು ಮಸಬು ಜಮೀನು, ಕುರುಕುಂದೆಯ ಹೊಲದಲ್ಲಿ ಎರಡು ಮತ್ತರು ಕರಿಯ ಜಮೀನು ಮತ್ತು ಮೊರಟದ ಉತ್ತರಕ್ಕೆ ಕಥೆಗೆರೆಯ ದಾರಿಯ ಪಶ್ಚಿಮಕ್ಕೆ ಗದ್ದೆ ಮಸಬು ದತ್ತಿ ನೀಡಲಾಯಿತು.

ಮಹಾಮಂಡಳೇಶ್ವರ ಘಟ್ಟಿದೇವರಸರು ನವಿಲಕಲ್ಲ ಹೊಲದೊಳಗೆ ಎರಡು ಮತ್ತರು ಮಸಬು ಜಮೀನು, ಮಾಲೆಗಾರ ಲೊತಣಗೆ ಪಟ್ಟವೆಂಗಡೆಯವರ ಹೊಲದಲ್ಲಿ ಎರಡು ಮತ್ತರು ಕರಿಯ ಜಮೀನು ಒಂದು ನಿವೇಶನ. ಕುಂಬಾರರಿಗೆ ಎರಡು ಮತ್ತರು, ಬಡಿಗ ಹಲ್ಲೋಜನಿಗೆ ಕಂನ್ತರಿಕೆಯ ಹೊಲದಲ್ಲಿ ಆರು ಮತ್ತರು ಜಮೀನು ದತ್ತಿ ನೀಡಿದ್ದು, ಶಾಸನದಲ್ಲಿ ಉಲ್ಲೇಖಗೊಂಡ ಜಮೀನನ್ನು ಕುರುಕುಂದೆಯ ಗಡಿಂಬ (ಕೋಲು)ದ ಮೂಲಕ ಅಳೆದು ನೀಡಲಾಗುತ್ತಿತ್ತೆಂಬ ವಿವರಗಳಿವೆ.

**ಶಾಸನ ನಂ. ೩ :** *ಈಳಿಗೇರು ಮಲ್ಲಯ್ಯನ ಹೊಲದ ಬದುವಿನಲ್ಲಿರುವ ಕ್ರಿ.ಶ. ೨೬-೧೨-೧೧೪೮ ರ ಶಾಸನ :*

ಕಲ್ಯಾಣ ಚಾಳುಕ್ಯ ಚಕ್ರವರ್ತಿ ಜಗದೇಕ ಮಲ್ಲನು ಕಲ್ಯಾಣದನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿರುವಾಗ ಅವನ ಸಾಮಂತ ಅರಸನಾಗಿ ಹೈಹಯ ವಂಶದ ಘಟ್ಟಿದೇವರಸನು ಮೊರಟ-೩೦೦ನ್ನು ಆಳುತ್ತಿದ್ದನು. ಇವನು ಮಹಾಕರ್ಣ ವೆರ್ಗ್ಗಡೆ ಸೋವರಸನಿಂದ ಮೊರಟಕೋಟೆಯ ಒಂದು ಭಾಗವಾದ ನಾಗರಕೆರೆಯ ದಕ್ಷಿಣದಲ್ಲಿ ಸ್ಥಾಪಿಸಲ್ಪಟ್ಟ ಸೋಮನಾಥದೇವರಿಗೆ ದತ್ತಿ ನೀಡಿದ ವಿವರವಿದೆ.[೩] ಶಾಸನ ಮುಂದುವರೆದು ಸಂಕ್ರಾಂತಿಯ ಹಬ್ಬದ ನಿಮಿತ್ಯವಾಗಿ ಅರ್ಧ ಹಣದ ಜೋಳವನ್ನು ಮೊರಟಸೀಮೆಯ ಹರವೆಯ ದಾರಿಯ ಉತ್ತರಕ್ಕಿರುವ ಭೂಮಿಯನ್ನು ಅಳೆದುಬಿಟ್ಟರು. ಹಾಗೆಯೇ ಹೂದೋಟಕ್ಕೆ ನೂರು ಕಂಬ ಭೂಮಿ, ಒಂದು ಮನೆಯ ನಿವೇಶನ, ಉಪಹಾರಕ್ಕೆ ಭತ್ತ ಬಿಟ್ಟರು. ಇಲ್ಲಿಯ ತೆಲ್ಲಿಗರು ಗಾಣದಿಂದ ತೆಗೆಯುವ ಎಣ್ಣೆಯನ್ನು ದತ್ತಿ ಕೊಟ್ಟರು. ಶಾಸನದ ಕೊನೆಯ ಭಾಗದಲ್ಲಿ ಶಾಸನವನ್ನು ಸಂಧಿ ವಿಗ್ರಹಿ ಶಂಕರಯ್ಯನೆಂಬುವವನು ಕಂಡರಿಸಿದನು. ಈತನಿಗೆ ಕರಿಯ ನೆಲ ಮೂರು ಮತ್ತರು ಭೂಮಿಯನ್ನು ಜೀಯರು ದತ್ತಿ ನೀಡಿದ ವಿವರಗಳಿವೆ.

**ಶಾಸನ ನಂ. ೪ :** *ಅಲ್ಲಮಪ್ರಭು ದೇವಾಲಯದ ಬಲಬದಿಯಲ್ಲಿರುವ ಕ್ರಿ.ಶ. ೨೬-೦೬-೧೧೭೮ ರ ಶಾಸನ:*

ಕಳಚೂರಿ ಭುಜಬಳ ಚಕ್ರವರ್ತಿರಾಯುಣ ಸಂಕಮದೇವನು ಮೊದೆಗನೂರ ನೆಲೆವೀಡಿನಿಂದ ರಾಜ್ಯಭಾರ ಮಾಡುತ್ತಿರುವಾಗ ಅವನ ಸಾಮಂತ ಅರಸನಾಗಿ ಮೊರಟದ ಹಲ್ಲರಸನ ಮಗ ಮಲ್ಲಿದೇವರಸನು ಮೊರಟದಿಂದ ಆಳ್ವಿಕೆ

ಮಾಡುತ್ತಿದ್ದನು. ಇವನು ಮೊರಟದುತ್ತರ ಭಾಗದ ನಾಗರಕೆರೆಯ ಪೂರ್ವ ದಿಕ್ಕಿನ ದಮ್ಮಯ್ಯ ಎಂಬ ವ್ಯಕ್ತಿಯ ಹೆಸರಿನಲ್ಲಿರುವ ಹೊಲದಲ್ಲಿಯ ಪಲ್ಲವೇಶ್ವರ ದೇವರಿಗೆ ಸಂಕ್ರಾಂತಿ ತಿಥಿ ನಿಮಿತ್ಯವಾಗಿ ದೇವರ ಅಂಗಭೋಗ ರಂಗಭೋಗ, ಧೂಪ-ದೀಪ, ನೈವೇದ್ಯ ದೇವರ ನಂದಾದೀವಿಗೆಗೆ ಪಾತ್ರ ಪಾವುಳ ಖಂಡಸ್ಫುಟಿತ ಜೀರ್ಣೋದ್ಧಾರ, ತಪೋಧನರ ಆಹಾರ ದಾನಕ್ಕೆ ಅಲ್ಲಿಯ ಸ್ಥಾನಾಧಿಪತಿ ಮಲ್ಲಿಕಾರ್ಜುನ ದೇವರ ಸೇವಕನಾದ ಮಹೇಶ್ವರ ಶಂಭುವಣ್ಣಂಗಳ ಮಗ ಮಲ್ಲಿದೇವನ ಪಾದಪೂಜೆ ಮಾಡಿ ಮೊರಟದ ಸೀಮೆಯಲ್ಲಿರುವ ಹುಣಸೆಹಳ್ಳಿ ಗ್ರಾಮವನ್ನು ತ್ರಿಭೋಗಾಭ್ಯಂತರ ಸರ್ವನಮಸ್ಯವಾಗಿ ಬಿಟ್ಟುಕೊಟ್ಟನು. ಹಾಗೆಯೇ ಶಾಸನ ಮುಂದುವರೆದು ದಾನದ ಗಡಿಗಳನ್ನು ಹೇಳುವಾಗ ಹುಣಸೆಹಳ್ಳಿ, ಕೊಟ್ಟಾರಾಹಳ್ಳಿ, ಸಿರಿಯೂರ, ನವಿಲಕಲ್ಲಗಳು ಉಲ್ಲೇಖಗೊಂಡಿವೆ. ನಖರೇಶ್ವರ, ಮಾದೇಶ್ವರ, ಕಲ್ಲೇಶ್ವರ, ಮಲ್ಲಿಕಾರ್ಜುನದೇವರುಗಳ ಪೂಜೆ, ನಂದಾದೀವಿಗೆಗೆ ದತ್ತಿ ಕೊಟ್ಟ ವಿಷಯಗಳಿವೆ. ಚಿಪ್ಪಗಿರಿಹಳ್ಳ, ನಖರೇಶ್ವರ ದೇವರಕೆರೆ, ಕಾಟಿಮಯ್ಯನ ಕೆರೆಗಳಲ್ಲಿ ಜಮೀನು ದತ್ತಿ ನೀಡುವಾಗ ಮತ್ತರು, ಕಮ್ಮ (ಕಂಬ), ಕುರುಕುಂದೆಯ ಗಡಿಂಬ (ಕೋಲು)ದ ಮೂಲಕ ಅಳೆದು ನೀಡಲಾಗುತ್ತಿತ್ತು. ವರ್ತಕರಾದ ನಾಲ್ಕು ನಾಡಸೆಟ್ಟಿ, ಮುಂಮ್ಮರಿದಂಡ ಎಲೆಯನ್ನು ಉತ್ಪಾದಿಸುವ ಹಂನವಣಿಗರು, ಎಣ್ಣೆಯನ್ನು ತಯಾರಿಸುವ ತೆಲ್ಲಿಗರು ವ್ಯಾಪಾರ-ವ್ಯವಹಾರಕ್ಕೆ ಗದ್ಯಾಣ, ಪಣ, ಪಾಗ, ಹೊಂಗೆ, ಕಾಣಿ, ವೀಸ ಎಂಬ ನಾಣ್ಯಗಳು ಚಲಾವಣೆಯಲ್ಲಿದ್ದವು. ಶಾಸನದ ಕಡೆಯ ಭಾಗದಲ್ಲಿ ಶಂಭುವಣ್ಣ ಎಂಬುವವನು ಶಾಸನ ಬರೆದನು. ಕಲ್ಲು ಕುಟಿಗ ತಿಮ್ಮೋಜ ಮತ್ತು ಮಲ್ಲೋಜರುಗಳು ಶಾಸನ ಕಂಡರಿಸಿದರು. ಇವರಿಗೆ ಒಂದೊಂದು ಮತ್ತರು ಜಮೀನು ದತ್ತಿ ನೀಡಿದ ವಿವರಗಳಿವೆ.

**ಶಾಸನ ನಂ. ೫ :** *ಮಲ್ಲಿಕಾರ್ಜುನ ದೇವಾಲಯದ ಕಿರುಶಾಸನ (ಕ್ರಿ.ಶ. ೧೨ನೇ ಶತಮಾನ) :*

ಶಿವಸ್ತುತಿಯೊಂದಿಗೆ ಆರಂಭವಾಗುವ ಈ ಶಾಸನವು ಮೊರಟದ ವರದಂಪ್ರಭು ಮಲ್ಲಿಕಾರ್ಜುನ ದೇವರ ಬಗ್ಗೆ ಉಲ್ಲೇಖಿಸುತ್ತದೆ. ಈ ದೇವರ ಭಕ್ತನಾದ ಮಹಾಮಂಡಳೇಶ್ವರ ಹಲ್ಲವರಸನು ರಾಜಧಾನಿ ಮೊರಟದ ಮಹಾಘಟಿಕಾ ಸ್ಥಾನವಾದ ಸ್ವಯಂಭು ಮಲ್ಲಿಕಾರ್ಜುನ ದೇವರ ಸನ್ನಿಧಾನದಲ್ಲಿ ಸರ್ವಧಾರಿ ಸಂವತ್ಸರದ ಉತ್ತರಾಯಣ ಸಂಕ್ರಾಂತಿಯ ಹಬ್ಬದ ನೆನಪಿಗೆ ಮೊರಟ-೩೦೦ ರಲ್ಲಿರುವ ಪಂಚಘಟಿಗೆಯ ಬ್ರಹ್ಮಪುರಿಯಲ್ಲಿ ಅರುವಣ (ನೇಗಿಲು ತೆರಿಗೆ) ವನ್ನು ಮನ್ನಾ ಮಾಡಿದನು. ಈ ಹಣವನ್ನು ಮಲ್ಲಿಕಾರ್ಜುನ ದೇವರ ಪೂಜೆ, ನಂದಾದೀವಿಗೆ, ನೈವೇದ್ಯ, ತಪೋಧನರ ಆಹಾರದಾನ ಖಂಡಸ್ಫುಟಿತ ಜೀರ್ಣೋದ್ಧಾರ, ಬ್ರಹ್ಮಪುರಿಯ ಬ್ರಾಹ್ಮಣರ ಗೃಹವಾಸಕ್ಕೆ ಮಹಾಮಂಡಳೇಶ್ವರ ಮಲ್ಲಿದೇವರಸನು ತನ್ನ ತಾತನಾದ ಮಹಾಮಂಡಳೇಶ್ವರ ಘಟ್ಟಿದೇವರಸ ಹಾಗೂ ಆತನ ಪಟ್ಟದ ರಾಣಿಗೆ ಶ್ರೇಯಸ್ಸಾಗಲೆಂದು ಈ ಮೇಲಿನ ದಾನವನ್ನು ಸರ್ವನಮಸ್ಯಧಾರಪೂರ್ವಕವಾಗಿ ಆ ಚಂದ್ರಾರ್ಕವಾಗಿ ಸಂದಾಯವಾಗುವಂತೆ ನೀಡಿದ್ದಾನೆ. ಈ ದಾನ ಕುರಿತಾದ ಶಾಪಾಶಯವಿದೆ. ಈ ಶಾಸನವನ್ನು ಶ್ರೀ ಮಲ್ಲಿಕಾರ್ಜುನ ದೇವರ ಸೇವಕನಾದ ಶಂಭುವಣ್ಣಂಗಳು ಬರೆದನು.

ಈ ನಂತರ ನಾಲ್ಕು ಸಾಲಿನ ಶಾಸನವು ಇದರ ಜೊತೆಗೆ ಸ್ವಲ್ಪ ಕಾಲದ ನಂತರ ಮಲ್ಲಿದೇವರಸ (ಕ್ರಿ.ಶ. ೧೧೭೮-೧೧೯೮) ನ ಮೊಮ್ಮಗನಾದ ಇಮ್ಮಡಿ ಮಲ್ಲಿದೇವರಸ (ಕ್ರಿ.ಶ. ೧೨೧೭)ನು ಇದೇ ದೇವರಿಗೆ ನಿಹಿಲಗೆರೆಯ ಬಳಿ ಎರಡು ಮತ್ತರು ಭೂಮಿಯನ್ನು ನೀಡಿ ಶಾಸನವನ್ನು ಹಾಕಿಸಿದ್ದಾನೆ. ಈ ಕೊನೆಯ ಸಾಲುಗಳು ಮೇಲಿನ ಶಾಸನಕ್ಕಿಂತ ಹೊಸದು.

**ಚಾರಿತ್ರಿಕ ಅಂಶಗಳು :** ಮಲ್ಲಟ ಗ್ರಾಮದ ಈ ಶಾಸನಗಳಲ್ಲಿ ಪ್ರಾರ್ಥನ ಪದ್ಯಗಳ ನಂತರ ಕಲ್ಯಾಣ ಚಾಳುಕ್ಯ ಚಕ್ರವರ್ತಿ ಜಗದೇಕಮಲ್ಲ ಮತ್ತು ಕಳಚೂರಿ ಚಕ್ರವರ್ತಿ ರಾಯಣ ಸಂಕಮನ ಉಲ್ಲೇಖವಿದ್ದು, ಇವರ ಸಾಮಂತ ಅರಸರಾಗಿ ಮೊರಟ-೩೦೦ರನ್ನು ಕೇಂದ್ರವನ್ನಾಗಿ ಮಾಡಿಕೊಂಡು ಆಳ್ವಿಕೆ ಮಾಡುತ್ತಿದ್ದ ಮೊರಟಹೈಹಯ ವಂಶದ ಅರಸರ ದೀರ್ಘ ಪ್ರಶಸ್ತಿಗಳಿವೆ. ಸಾಮಾನ್ಯವಾಗಿ ಇಲ್ಲಿಯ ಶಾಸನಗಳಲ್ಲಿ ಹೈಹಯರನ್ನು ಮಾಹಿಶ್ಮತಿ ಪುರವರಾಧೀಶ್ವರರು ಎಂದು ಕರೆಯಲಾಗಿದೆ. ಅಂದರೆ ಇವರು ಉತ್ತರದ ಮಾಹಿಶ್ಮತಿ ಪಟ್ಟಣದಿಂದ ದಕ್ಷಿಣದ ಕಡೆಗೆ ಬಂದು ನೆಲೆಸಿರಬೇಕು. ಪುರಾಣಗಳಲ್ಲಿಯ ನಿರೂಪಣೆಯಂತೆ ಯಯಾತಿಯ ಮೊಮ್ಮಗ ಯದು, ಈ ಯದುವಿನ ವಂಶದಲ್ಲಿ ಸಹಸ್ರಜಿತ್ ಎಂಬುವವನು ಹುಟ್ಟಿದನು. ಸಹಸ್ರಜಿತನ ಸಂತತಿಯಲ್ಲಿ ಜನಿಸಿದವನಾದ ಹೈಹಯನೆಂಬ ರಾಜನ ಮೂಲಕ ಹೈಹಯವೆಂಬ ವಂಶನಾಮವನ್ನು ಧರಿಸಿದ ಹಲವಾರು ಅರಸು ಮನೆತನಗಳು ಖ್ಯಾತಿ ಪಡೆದವು.[೪] ಇನ್ನೂ ಇದರ ಬಗ್ಗೆ ಹೆಚ್ಚಿನ ಅಧ್ಯಯನ ಕೈಗೊಳ್ಳುವ ಅಗತ್ಯವಿದೆ.

ಈ ಶಾಸನಗಳಲ್ಲಿ ಉಲ್ಲೇಖಗೊಂಡ ಹೈಹಯ ವಂಶಜ ರಾಜರು ಮೊದಲು ಮೊರಟ (ಮಲ್ಲಟ), ನಂತರ ಅಯ್ಯಣ ಸಿರವುರ (ಸಿರವಾರ) ಸ್ಥಳಗಳಿಂದ ಕ್ರಿ.ಶ. ೧೧ನೇ ಶತಮಾನದಿಂದ ಕ್ರಿ.ಶ. ೧೨೧೭ರವರೆಗೆ ರಾಜ್ಯಭಾರ ಮಾಡಿದರು. ಆದರೆ ಈ ವಂಶಜರು ಬೇರೆ ಬೇರೆ ಸ್ಥಳಗಳಿಂದ ರಾಜ್ಯಭಾರ ನಡೆಸಿದ ಉಲ್ಲೇಖವು ರಾಯಚೂರು ಜಿಲ್ಲೆಯ

ಇತರ ಶಾಸನಗಳಲ್ಲಿ ಬರುತ್ತದೆ. ಈ ಎಲ್ಲಾ ಶಾಸನಗಳನ್ನು ಆಧಾರವನ್ನಾಗಿಟ್ಟುಕೊಂಡು ಹೈಹಯ ವಂಶದ ವಂಶಾವಳಿಯನ್ನು ಕಟ್ಟಿಕೊಡಲು ಪ್ರಯತ್ನಿಸಿದ್ದೇನೆ. ಆ ವಂಶಾವಳಿಯನ್ನು ಮುಂದಿನಂತೆ ತೋರಿಸಿದೆ.

### ಹೈಹಯ ಅರಸರ ವಂಶಾವಳಿ




**ಹೈಹಯ ಅರಸರ ವಂಶಾವಳಿ** : ಈ ಮೇಲ್ಕಾಣಿಸಿದ ಸಾಮಂತ ಅರಸರಲ್ಲಿ ಲೋಕರಸ, ಗಣ್ಡರಾದಿತ್ಯ, ನಂಗ್ಯಪ್ಪರಸ, ಮಾನುವೆಯ ಮಳೆಯರಸ, ಘಟ್ಟಿದೇವರಸ, ಅಯ್ಯಣದೇವರು ನೇರವಾಗಿ ಎಲ್ಲಿಂದ ರಾಜ್ಯಭಾರ ಮಾಡುತ್ತಿದ್ದರೆಂಬುದು ಸ್ಪಷ್ಟವಾಗುವುದಿಲ್ಲ. ಆದರೆ ರಾಯಚೂರು ಜಿಲ್ಲೆಯ ಬೇರೆ ಬೇರೆ ಗ್ರಾಮಗಳಲ್ಲಿ ದೊರೆತ ಶಾಸನಗಳಲ್ಲಿ ಇವರು ಇದೇ ಜಿಲ್ಲೆಯ ಪ್ರದೇಶದಲ್ಲಿ ಆಡಳಿತ ಮಾಡುತ್ತಿದ್ದರೆಂಬುದು ಸ್ಪಷ್ಟವಾಗುತ್ತದೆ. ರೇವರಸ (ಕ್ರಿ.ಶ. ೧೦೫೨) ನು ಮಾತ್ರ ಎಡದೊರೆ–೨೦೦೦ ನಾಡಿನೊಂದಿಗೆ ಮೊರಟ–೩೦೦ನ್ನು ಆಳುತ್ತಿದ್ದನೆಂಬ ವಿಷಯವಿದೆ. ಘಟ್ಟಿದೇವರಸ (ಕ್ರಿ.ಶ. ೧೧೪೯) ನಿಂದ ಪ್ರಾರಂಭವಾಗಿ ಉಳಿದ ಅರಸರು ಮೊರಟ–೩೦೦ ನ್ನು ಆಳುತ್ತಿದ್ದರೆಂಬ ಪ್ರಸ್ತಾಪಗಳಿವೆ. ಇದರಲ್ಲಿ ಕೆಲವರಿಗೆ ಒಬ್ಬೊಬ್ಬ ರಾಣಿಯರು ಉಲ್ಲೇಖಗೊಂಡರೆ, ಒಂದನೇ ಮಲ್ಲಿದೇವರಸನಿಗೆ ಪಟ್ಟಮಹಾದೇವಿ ಮಾಕಲದೇವಿ ಯೊಂದಿಗೆ, ರಾಣಿಯಾಗಿ ಬೆಸವಲದೇವಿ ಇದ್ದ ಸಂಗತಿ ಶಾಸನಗಳಿಂದ ಸ್ಪಷ್ಟವಾಗುತ್ತದೆ.

**ಐತಿಹಾಸಿಕ ಮಹತ್ವ** : ರಾಯಚೂರು ಜಿಲ್ಲೆಯಲ್ಲಿ ಇಲ್ಲಿಯವರೆಗೆ ಪ್ರಕಟಗೊಂಡ ಶಾಸನಗಳಲ್ಲಿ ಯಾವುದೇ ಘಟಿಕಾ ಸ್ಥಾನದ ಉಲ್ಲೇಖವಿಲ್ಲ. ಇತ್ತೀಚೆಗೆ ಪತ್ತೆಯಾದ ಮಲ್ಲಟ ಗ್ರಾಮದ ಮಲ್ಲಿಕಾರ್ಜುನ ದೇವಾಲಯದ ಕ್ರಿ.ಶ. ೧೨ನೇ ಶತಮಾನದ ಶಾಸನ (ಶಾಸನ ಸಂಖ್ಯೆ ೫)ದಲ್ಲಿ ಮಲ್ಲಟ ಗ್ರಾಮವು ಮತ್ತು ಅಲ್ಲಿನ ಮಲ್ಲಿಕಾರ್ಜುನ ದೇವಾಲಯವು ಮಹಾಘಟಿಕಾ ಸ್ಥಾನವಾಗಿದ್ದ ವಿಷಯ ಪ್ರಸ್ತಾಪವಿದೆ. (ಚಿತ್ರ ೫) ಆದ್ದರಿಂದ ರಾಯಚೂರು ಜಿಲ್ಲೆಯಲ್ಲಿಯೇ ಏಕೈಕ ಮಹಾಘಟಿಕಾಸ್ಥಾನವು ಮೊಟ್ಟಮೊದಲ ಬಾರಿಗೆ ಶೋಧಿತಗೊಂಡಂತಾಗಿದೆ.[೫] ಈ ವೇಳೆಯಲ್ಲಿ ದೇವಾಲಯಗಳೊಂದಿಗೆ ಮಠಗಳು ಸೇರಿಕೊಳ್ಳುತ್ತಿದ್ದ ವೆಂಬುದಕ್ಕೆ ಮಲ್ಲಿಕಾರ್ಜುನ ದೇವಾಲಯ ಸಾಕ್ಷಿ. ದೇವಸ್ಥಾನ ಮುಂತಾದ ಸಾಮಾಜಿಕ ಸಂಸ್ಥೆಗಳ ಮೇಲಾಧಿಕಾರಿಗಳಿಗೆ ಸ್ಥಾನಪತಿಗಳು ನೈಷ್ಠಿಕ ಬ್ರಹ್ಮಚಾರಿಗಳಾಗಿ ಶಿವದೇವಾಲಯಗಳ ಆಡಳಿತ ಸೂತ್ರಧಾರರಾಗಿದ್ದರು. ಅಂತಹವರಲ್ಲಿ ಈ ಸ್ಥಾನದೊಡೆಯ....ಜೀಯಪಂಡಿತ (ಕ್ರಿ.ಶ. ೧೧೪೯), ಸ್ಥಾನಪತಿ ಬಮ್ಮರಾಶಿ ಪಂಡಿತ (ಕ್ರಿ.ಶ. ೧೧೪೮), ಸ್ಥಾನಪತಿ ಮಹೇಶ್ವರ ಶಂಭುವಣ್ಣನ ಮಗ ಮಲ್ಲಿದೇವ (ಕ್ರಿ.ಶ. ೧೧೭೮ ಕ್ರಿ.ಶ. ೧೨ನೇ ಶತಮಾನ) ಮೊದಲಾದವರನ್ನು ಕಾಳಾಮುಖ ಗುರುಗಳ ವರ್ಗಕ್ಕೆ ಸೇರಿಸಿಕೊಳ್ಳಲಾಗಿದೆ. ಇಂತಹ ಕಾಳಾಮುಖ ಗುರುಪರಂಪರೆಯಲ್ಲಿ ಅತ್ಯಂತ ಪ್ರಸಿದ್ಧವಾದುದು ಮಲ್ಲಿಕಾರ್ಜುನ ದೇವಾಲಯವಾಗಿತ್ತು. ಈ ದೇವಾಲಯಕ್ಕೆ ಸಂಬಂಧಿಸಿದ ಸಂಪೂರ್ಣ ಪ್ರಭುತ್ವವನ್ನು ಪಡೆದಿದ್ದ ಗುರುಗಳು ಬ್ರಹ್ಮಚಾರಿಗಳ ವಿದ್ಯಾದಾನಕ್ಕೆ ಸತ್ರ, ವಿದ್ಯಾರ್ಥಿಗಳ ಅನ್ನದಾನಕ್ಕೆ ಚಕ್ರವರ್ತಿ ಮತ್ತು ಮಹಾಮಂಡಲೇಶ್ವರರಿಂದ ಮಹೇಶ್ವರ ರಾಹರ ದಾನವನ್ನು ಪಡೆದುಕೊಳ್ಳುತ್ತಿದ್ದರು. ಇವರು ಮಲ್ಲಿಕಾರ್ಜುನ ದೇವಾಲಯದಲ್ಲಿ ಘಟಿಕಾ ಸ್ಥಾನವನ್ನು ನಡೆಸುತ್ತಿದ್ದರಿಂದ ಅವರನ್ನು ಶಾಸನಗಳು ಸ್ಥಾನಪತಿಗಳೆಂದು ಕರೆದಿವೆ. ಇಲ್ಲಿ ಬ್ರಹ್ಮಪುರಿಯ ಉಲ್ಲೇಖ ಬಂದಿದ್ದು ಅಂದಿನ ದಿನಗಳಲ್ಲಿ ಬ್ರಾಹ್ಮಣರು ವಾಸ ಮಾಡುವ ಗ್ರಾಮದ ಒಂದು



ಕೇರಿಯಾಗಿತ್ತು. ಹಾಗೆಯೇ ಅರಸರ ಬಿರುದಾವಳಿ, ಪರಾಕ್ರಮ, ರಾಜ್ಯ ವಿಸ್ತಾರ, ದೇವಾಲಯಗಳನ್ನು ಚಕ್ರವರ್ತಿ ಮತ್ತು ಸಾಮಂತ ಅರಸರು ಕಟ್ಟಿಸಿ ಅವುಗಳ ಜೀರ್ಣೋದ್ಧಾರಕ್ಕೆ ಭೂಮಿ, ಹಣವನ್ನು ನೀಡಿದ ಉಲೇಖಗಳಿವೆ. ಇಲ್ಲಿಯ ಶಾಸನಗಳಲ್ಲಿ ಸಾಮಾನ್ಯ ವ್ಯಕ್ತಿಗಳೆನ್ನದೆ ವಿವಿಧ ಹುದ್ದೆ-ಕಸಬುದಾರರಾದ ಪ್ರಭುಗಾವುಂಡರು, ಜೀಯರು, ಮಾಣಿಗಳು, ಮಾಲೆಗಾರ, ತೆಲ್ಲಿಗರು, ಕುಂಬಾರ, ಬಡಿಗ, ಹಂನವಣಿಗ, ನಾಲ್ಕುನಾಡಸೆಟ್ಟಿ, ಮುಂಮ್ಮರಿದಂಡ, ಸೂಳೆಯರ ಪ್ರಸ್ತಾಪಗಳಿವೆ. ದಾನವನ್ನು ನೀಡಲು ಪರ್ವ, ತಿಂಗಳು, ವಾರ ಮೊದಲಾದ ವಿಷಯಗಳನ್ನು ತಿಳಿಸುವುದರಿಂದ ಅನೇಕ ಐತಿಹಾಸಿಕ ಸಂಗತಿಗಳು ಈ ಶಾಸನಗಳಿಂದ ಹೊಸದಾಗಿ ಬೆಳಕಿಗೆ ಬಂದಿವೆ.

**ಸಾಂಸ್ಕೃತಿಕ ಮಹತ್ವ :** ಮಲ್ಲಟ ಗ್ರಾಮದ ಕ್ರಿ.ಶ. ೧೧೯೩ ರ ಶಾಸನದಲ್ಲಿ ಉಲ್ಲೇಖಗೊಂಡ ನಖರೇಶ್ವರ ದೇವಾಲಯವು ಪ್ರಸಿದ್ಧಿ ಪಡೆದ ದೇವಾಲಯವಾಗಿತ್ತು. ಮಲ್ಲಿಕಾರ್ಜುನ ದೇವಾಲಯವು ಮಲ್ಲಟ ಗ್ರಾಮದ ಉತ್ತರಕ್ಕೆ ಇದೆ. ಇದನ್ನು ಶಾಸನಗಳು ಅಭಿನವ ಮಲ್ಲಿಕಾರ್ಜುನ, ವರದಂ ಪ್ರಭು ಮಲ್ಲಿಕಾರ್ಜುನ, ಶ್ರೀ ಸ್ವಯಂಭು ಮಲ್ಲಿಕಾರ್ಜುನ ದೇವಾಲಯವೆಂದು ಸಂಬೋಧಿಸುತ್ತವೆ. ಇದು ಸುಂದರವಾದ ದೇವಾಲಯವಾಗಿದ್ದು, ಮೊದಲು ಈ ದೇವಾಲಯದ ನವರಂಗದ ಭಾಗವು ಪೂರ್ವಕ್ಕೆ ಮುಖವಿದ್ದುದನ್ನು ನಂತರದ ದಿನಗಳಲ್ಲಿ ಜೀರ್ಣೋದ್ಧಾರಗೊಂಡಾಗ ದಕ್ಷಿಣಕ್ಕೆ ಮುಖವನ್ನು ತೆಗೆದು ಪೂರ್ವದ ಬಾಗಿಲನ್ನು ಮುಚ್ಚಲಾಗಿದೆ. ಈ ದೇವಾಲಯದ ಒಳಗಡೆ ಗರ್ಭಗೃಹ, ಅಂತರಾಳ, ನವರಂಗದ ಭಾಗಗಳಿದ್ದು, ಇಲ್ಲಿಯ ಹಲವು ಶಿಲ್ಪಗಳು ಕಣ್ಮನ ಸೆಳೆಯುತ್ತವೆ. ಶಾಸನ ನಂ. ೩ ರಂತೆ ಮಲ್ಲಟ ಗ್ರಾಮದ ಅಂದಿನ ದಿನಗಳಲ್ಲಿ ಊರ ಸುತ್ತಲೂ ಕೋಟೆಯಿತ್ತು. ಹಳೆಯ ಗ್ರಾಮ ಸಂಪೂರ್ಣ ನೆಲಸಮವಾದ ಮೇಲೆ ಅದರ ಮೇಲೆ ಪುನರ್ ನಿರ್ಮಿತಗೊಂಡ ಹೊಸ ಗ್ರಾಮವನ್ನು ಇಂದು ಕಾಣುತ್ತೇವೆ. ಏಕೆಂದರೆ ಹಳೆಯ ದೇವಾಲಯ (ಕಲ್ಯಾಣ ಚಾಳುಕ್ಯರ ಕಾಲ) ವಾದ ರಾಮಲಿಂಗೇಶ್ವರ ದೇವಾಲಯವು ಗ್ರಾಮದ ಮಧ್ಯ ಭಾಗದಲ್ಲಿದ್ದು, ಅದು ಸಂಪೂರ್ಣವಾಗಿ ಮಣ್ಣಿನಲ್ಲಿ ಹೂತು ಹೋಗಿದ್ದು ಅದರ ಮೇಲೆ ಮನೆಗಳು ನಿರ್ಮಾಣಗೊಂಡಿವೆ. ಇತ್ತೀಚೆಗೆ ಅದರ ಗರ್ಭಗೃಹ, ಅಂತರಾಳ ಭಾಗಗಳು ಹೂತಿದ್ದನ್ನು ತೆಗೆದರೂ ಕೂಡ ಇಂದಿನ ಗ್ರಾಮದ ನೆಲಮಟ್ಟಕ್ಕಿಂತ ಕೆಳಗೆ ಈ ದೇವಾಲಯವಿದೆ. ಹಾಗೆಯೇ ಇದೇ ಶಾಸನವು ಉಲ್ಲೇಖಿಸುವ ಸೋಮನಾಥ ದೇವಾಲಯವು ಶಾಸನವಿರುವ ಸ್ಥಳದಲ್ಲಿತ್ತೆಂಬುದಕ್ಕೆ ಅಲ್ಲಿಯ ದೇವಸ್ಥಾನದ ಅಧಿಷ್ಠಾನದ ಭಾಗ ಮತ್ತು ಕಲ್ಲುಗಳು ಕಾಣಬರುತ್ತವೆ.

ಊರ ಹೊರಗೆ ಹೊಲ (ಉತ್ತರ)ದಲ್ಲಿರುವ ಅಲ್ಲಮಪ್ರಭು ದೇವಾಲಯವು ನಿರ್ಮಾಣವಾಗುವಾಗ ದೇವಾಲಯ ಹೊಲದ ಮಾಲೀಕತ್ವವು ದಮ್ಮಯ್ಯ ಎಂಬ ವ್ಯಕ್ತಿಯ ಹೆಸರಿನಲ್ಲಿತ್ತು. ಇದು ತ್ರಿಕೂಟಾಚಲ ದೇವಾಲಯವಾಗಿದ್ದು, ಮೂರು ಗರ್ಭಗೃಹಗಳಲ್ಲಿ ಶಿವಲಿಂಗಗಳನ್ನು ಪ್ರತಿಷ್ಠಾಪಿಸಲಾಗಿತ್ತು. ಈ ದೇವಾಲಯದ ಮುಂದೆ ಇರುವ ಕ್ರಿ.ಶ. ೧೧೭೮, ೧೧೯೬ರ ಶಾಸನಗಳಲ್ಲಿ ಪಲ್ಲವೇಶ್ವರ, ಮಾದೇಶ್ವರ, ಕಲ್ಲೇಶ್ವರ, ಲೋಕೇಶ್ವರ ಎಂಬ ದೇವರುಗಳ ಉಲ್ಲೇಖವೂ ಬರುತ್ತದೆ. ಇಲ್ಲಿಯ ಎರಡು ಗರ್ಭಗೃಹಗಳಲ್ಲಿ ಪಲ್ಲವೇಶ್ವರ ಮತ್ತು ಮಾದೇಶ್ವರ ಲಿಂಗಗಳನ್ನು ಪ್ರತಿಷ್ಠಾಪಿಸಿದ್ದು ಸ್ಪಷ್ಟವಾಗುತ್ತದೆ. ಆದರೆ ಇನ್ನೊಂದು ಗರ್ಭಗೃಹದ ಯಾವ ಹೆಸರಿನ ಶಿವಲಿಂಗವನ್ನು ಪ್ರತಿಷ್ಠಾಪಿಸಿದ್ದರೆಂಬುದು ಗೋಚರವಾಗುವುದಿಲ್ಲ. ಮಾದೇಶ್ವರ ಲಿಂಗವನ್ನು ಮೊರಟ ಹೈಹಯ ವಂಶದ ಮಲ್ಲಿದೇವರಸನ ರಾಣಿಯಾದ ಬೆಸವಲದೇವಿಯು ತಮ್ಮ ತಂದೆ ವಚನಕಾರನಾದ ಸಕಳೇಶ್ವರ ಮಾದರಸನ ಹೆಸರಿನಲ್ಲಿ ಪ್ರತಿಷ್ಠಾಪಿಸಿದ ವಿಷಯ ಇಲ್ಲಿಯ ಇನ್ನೊಂದು ಶಾಸನ (ಕ್ರಿ.ಶ. ೧೧೯೬) ದಲ್ಲಿದೆ. ಈ ದೇವಾಲಯದ ಹತ್ತಿರ ಎಡಬದಿಯಲ್ಲಿ ಸುಂದರವಾದ ಬಾವಿಯಿದ್ದು ಇಂದು ಇದರಲ್ಲಿ ನೀರು ಇರುವುದಿಲ್ಲ. ಅಂದಿನ ದಿನಗಳಲ್ಲಿ ದೇವಾಲಯದ ಪೂಜೆ ಮತ್ತು ಹೂವಿನ ತೋಟವನ್ನು ಮಾಡಿಕೊಂಡ ಬಗ್ಗೆ ಅಲ್ಲಿ ಇಂದಿಗೂ ಕಾಲುವೆಯು ಕಾಣಬರುತ್ತದೆ. ಈ ಬಾವಿ ಬಹುತೇಕ ಭಾಗ ಸುಸ್ಥಿತಿಯಲ್ಲಿದೆ. ಹಾಗೆಯೇ ಶಾಸನೋಕ್ತವಲ್ಲದ ವೀರಭದ್ರ ದೇವಾಲಯವು ಮಲ್ಲಿಕಾರ್ಜುನ ದೇವಾಲಯದ ಹತ್ತಿರದಲ್ಲಿದೆ. ಇದು ಕಲ್ಯಾಣ ಚಾಳುಕ್ಯರ ಕಾಲದ್ದಾಗಿದ್ದು, ಗರ್ಭಗೃಹ, ಅಂತರಾಳ ಹೊಂದಿದ್ದು ಮುಂದಿನ ಭಾಗವಾದ ನವರಂಗವು ಸಂಪೂರ್ಣ ನಶಿಸಿ ಹೋಗಿದೆ. ಇದೇ ಕಾಲಕ್ಕೆ ಸೇರಿದ ಕೇಶವ ದೇವಾಲಯವು ಊರ ಒಳಗೆ ಡಾ. ವೆಂಕಟೇಶರವರ ಮನೆಯ ಮುಂದೆ (ಪೂರ್ವ) ಇದೆ. ಇದು ಸಂಪೂರ್ಣ ಶಿಥಿಲವಾಗಿ ಕೇವಲ

ಅಧಿಷ್ಠಾನದ ಭಾಗಗಳು ಉಳಿದುಕೊಂಡಿದ್ದು, ಇದರ ಮಧ್ಯದಲ್ಲಿ ಕೇಶವಶಿಲ್ಪವನ್ನು ಇರಿಸಲಾಗಿದೆ.

ಬೇರೆ ಜಿಲ್ಲೆಯ ಶಾಸನಗಳಲ್ಲಿ ಉಲ್ಲೇಖವಿರದೆ ಕೇವಲ ರಾಯಚೂರು ಜಿಲ್ಲೆಯ ಮಲ್ಲಟ ಮತ್ತು ನಿಲವಂಜಿ ಗ್ರಾಮಗಳ ಶಾಸನಗಳಲ್ಲಿ ಉಲ್ಲೇಖಗೊಂಡ ಕುರುಕುಂದೆಯ ಗಡಿಂಬ (ಕೋಲು) ವು ಭೂಮಿಯನ್ನು ಅಳೆಯುವ ಮಾಪನವಾಗಿದ್ದು, ಇಲ್ಲಿಯ ಶಾಸನಗಳಲ್ಲಿ ಹೆಚ್ಚಿಗೆ ಪ್ರಸ್ತಾಪಗೊಂಡಿರುತ್ತದೆ. ಏಕೆಂದರೆ ಈ ಅಳತೆಯ ಮಾಪನವನ್ನು ಕೇವಲ ಮೊರಟ ಹೈಹಯ ಸಾಮಂತ ಅರಸರು ಹೆಚ್ಚಿಗೆ ಬಳಸಿದಂತೆ ಕಾಣಬರುತ್ತದೆ. ಹಾಗೆಯೇ ಶಾಸನೋಕ್ತ ಬಟ್ಟಿಗನಹಳ್ಳ, ಸಿಡಿಲಹಳ್ಳ, ಚಿಪ್ಪಗಿರಿಹಳ್ಳ, ನಾಗರಕೆರೆ, ನಖರೇಶ್ವರ ದೇವರಕೆರೆ; ಆಹಾರ ಪದಾರ್ಥಗಳಾದ ಜೋಳ, ಭತ್ತ ಮೊದಲಾದವುಗಳು ಉಲ್ಲೇಖಗೊಂಡಿವೆ. ಇಲ್ಲಿಯ ಶಾಸನಗಳಲ್ಲಿ ಶಾಪಾಶಯ ಭಾಗಗಳು ದೀರ್ಘವಾಗಿ ಬಂದಿದ್ದು, ಅಂದಿನ ಸಾಂಸ್ಕೃತಿಕ ಜೀವನದ ಮಹತ್ವವನ್ನು ತಿಳಿದುಕೊಳ್ಳಲು ಸಹಕಾರಿಯಾಗಬಲ್ಲವೆಂದು ಹೇಳಬಹುದು.

**ಭೌಗೋಳಿಕ ವಿವರ :** ಇಂದಿನ ಮಲ್ಲಟ ಗ್ರಾಮವು ಶಾಸನೋಕ್ತ ಮರವಟವಾಗಿದ್ದು, ಮೂಲದಲ್ಲಿ ವಟ (ಆಲದಮರ) ಎಂಬ ಸಸ್ಯನಾಮದಿಂದ ಬಂದಿದೆ. ಮಲ್ಲಟ ಗ್ರಾಮದಲ್ಲಿ ಅನಾದಿ ಕಾಲದಿಂದಲೂ ವಟವೃಕ್ಷ (ಆಲದಮರ)ಗಳು ಹೇರಳವಾಗಿದ್ದವು. ಇಲ್ಲಿಯ ಶಾಸನಗಳಲ್ಲಿಯೂ ಕೂಡ ಭೂಮಿಯನ್ನು ದತ್ತಿ ನೀಡುವಾಗ ಆಲದ ಮರಗಳ ಉಲ್ಲೇಖವಿರುವುದರಿಂದ, ಆಲದ ಮರಗಳಿಂದ ಕೂಡಿದ (ತುಂಬಿದ) ಊರು ಮರವಟವಾಗಿ ಮುಂದೆ ಮೊರಟ, ಮರಾಟ, ಮಲ್ಲಟವಾಗಿರಬೇಕೆಂದು ಅನಿಸುತ್ತದೆ. ಈ ಬಗೆಯ ರೂಪಾಂತರವನ್ನು ಚಿಮ್ನಹಳ್ಳಿ[೬] (ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲ್ಲೂಕು) ಗ್ರಾಮದ ಶಾಸನ (ಕ್ರಿ.ಶ. ೧೦೮೬) ದಲ್ಲಿ ಗುರ್ತಿಸಬಹುದಾಗಿದೆ.

ಶಾಸನಗಳಲ್ಲಿ ಉಲ್ಲೇಖಗೊಂಡ ಕಲ್ಯಾಣವು ಇಂದು ಬೀದರ್ ಜಿಲ್ಲೆಯ ಬಸವಕಲ್ಯಾಣವಾಗಿದೆ. ಹಾಗೆಯೇ ಮಲ್ಲಟದ ಸುತ್ತಮುತ್ತಲಿನ ಗ್ರಾಮಗಳಾದ ಕುರುಕುಂದೆ (ಕುರುಕುಂದಾ), ಪಟ್ಟವೆಂಗಡೆ (ಪಟಕನದೊಡ್ಡಿ), ಹರವೆ (ಹರವಿ), ಕಂನ್ತರಿಕೆ (ಕಾತಕಿ), ನವಿಲಕಲ್ಲ (ನವಲಕಲ್), ಸಿರಿಯೂರ (ಸಿರವಾರ), ಮಾಡಗೇರಿ (ಮಾಡಗಿರಿ), ಹುಣಸೆಹಳ್ಳಿ (ಹುಣಚೇಡಿ), ಕೇದಗಕೆರೆ (ಕ್ಯಾದಿಗ್ಗೇರಾ) ಗಳಾಗಿದ್ದು ಇವುಗಳಲ್ಲಿ ಮೊದಲಿನ ಎಲ್ಲಾ ಸ್ಥಳಗಳು ಮಾನ್ವಿ ತಾಲ್ಲೂಕಿನಲ್ಲಿದ್ದು, ಕೊನೆಯ ಸ್ಥಳವು ಮಾತ್ರ ದೇವದುರ್ಗ ತಾಲ್ಲೂಕಿನಲ್ಲಿದೆ. ಇನ್ನುಳಿದ ಎರದಹಳ್ಳಿ, ಕೊಟ್ಟರಾಹಳ್ಳಿಗಳನ್ನು ಪತ್ತೆಹಚ್ಚುವುದಕ್ಕೆ ಸಾಧ್ಯವಾಗಲಿಲ್ಲ.

**ಶಾಸನಗಳಲ್ಲಿ ಉಕ್ತವಾದ ಲಿಪಿಕಾರರು ಮತ್ತು ರೂವಾರಿಗಳು:**

ಮಲ್ಲಟ ಗ್ರಾಮದ ಶಾಸನಗಳ ಕೊನೆಯಲ್ಲಿ ಶ್ರೀಕರಣದ ಮಲ್ಲಿಮಯ್ಯ, ಶಂಭುವಣ್ಣರವರು ಶಾಸನಗಳನ್ನು ಬರೆದರೆ, ಸಂಧಿವಿಗ್ರಹಿ ಶಂಕರಯ್ಯ, ಕಲ್ಲುಕುಟಿಗ ತಿಮ್ಮೋಜ ಮತ್ತು ಬಡಗಿ ಮಲ್ಲೋಜರೆಂಬುವರು ಶಾಸನಗಳನ್ನು ಕಂಡರಿಸಿದರೆಂಬ ವಿವರಣೆಯಿದೆ.

## ಅನುಬಂಧ

**ಶಾಸನ ನಂ. ೧ :** ಮಲ್ಲಟ ಗ್ರಾಮದ ಕಂಬಳೇರ ತೋಟದಲ್ಲಿರುವ ಶಾಸನ (ಕ್ರಿ.ಶ. ೧೧೩೯)

೧ ಸ್ವಸ್ತಿಶ್ರೀ ಜಯಶ್ಚಾಭ್ಯುದಯ
೨ ಂಸ್ವಸ್ತಿಶ್ರೀ ಮಚ್ಚಾಳುಕ್ಯ ಚಕ್ರವರ್ತ್ತಿ
೩ ಜಗದೇಕಮಲ್ಲವರಿಷದ ೨ನೇ ಸಿದ್ಧಾರ್ಥಿ ಸಂವ
೪ ತ್ಸರದ ಆಶ್ವೀಜದ ಪೌರ್ಣ್ನಮಾವಾಸ್ಯೆ ಸೋಮ
೫ ವಾರದಂದು ಸೋಮಗ್ರಹಣ ನಿಮಿತ್ತ
೬ ದಿಂ ಶ್ರೀಮನ್ಮಹಾಮಮಡಳೇಶ್ವರಂ ಘಟ್ಟಿದೇವರಸರು
೭ ಧಾರಾಪೂರ್ವ್ವಕಂ ಮಾಡಿಯಭಿನವ ಮಲ್ಲಿ
೮ ಕಾರ್ಜುನ ದೇವರಂಗ ಭೋಗಕ್ಕಂ ನಿವೇದ್ಯಕ್ಕಂ ನಂದಾದೀವಿಗೆ
೯ ಗಂ ಜ....ಮೂಡ ಹೊಲದಲು
೧೦ ಹಜಿವೆಯ ಬಟ್ಟೆಯಿಂದುತ್ತರ ಭಾಗದ ಬಟ್ಟಿಗನಹಳ್ಳ
೧೧ ದಿಂ ಬಡಗಲು ನಖರೇಶ್ವರ ದೇವರ ಕೆಯ್ಯಿಂ ಮೂಡಲು
೧೨. ಚತುರ ಶ್ರೀ ಪಳರಿಯಿಂ ಕುಜಿಕುಂದೆಯ ಗಡಿಂಬದಲು ಬಿ
೧೩. ಟ್ಟನೆಲಂ ಮತ್ತರು ಮೂಜಿ ಈ ಧರ್ಮ್ಮಮನರಸು
೧೪ ಗಳು ಪ್ರತಿಪಾಳಿಸಿದವರ್ಗೆ ವಾರಣಾಸಿಯ
೧೫ ಲು ಸಾಯಿರ ಕವಿಲೆಯಂ ಸಬ್ರಾಹ್ಮಣರ್ಗ್ಗೆ ಕೊಟ್ಟ
೧೬ ಫಲವಕ್ಕುಯಿ ಸ್ಥಾನದೊಡೆಯಂ . . ಜೀಯ
೧೭ ಪಂಡಿತರ್ಗ್ಗೆ ಕೊಟ್ಟ ಮನೆ ೧ ದೇವಾಲ್ಯದ ತೆಂಕದೆಸೆಯಲು
೧೮ ದೇವರ ಹೂದೋಂಟಕ್ಕೆ ಬಿಟ್ಟ ನೆಲ ಕಮ್ಮ ೧೦೦ ಅಂಗಡಿಯ
೧೯ ಲು ನಖರಂಗಳು ಕೊಟ್ಟ ಅರವನ ಜೋಳ ॥
೨೦ ಸ್ವದತ್ತಂ ಪರದತ್ತ ವಾಯೋಹರೇತಿ ವಸುಂಧರಾಣಾಂ
೨೧ ಸರ್ಷ್ಟಿವರಿಶ ಸಹಸ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿ:
೨೨ ಯೀ ಸಾಸನವಂ ಘಟ್ಟಿದೇವರಸರ ಬೆಸದಿಂ ಶ್ರೀಕರ
೨೩ ಣದ ಮಲ್ಲಿಮಯ್ಯನುಂ ಸನ್ಧಿವಿಗ್ರಹಿ ಸಂಕರಯ್ಯ
೨೪ ನುಂ ಬರೆದರು ॥ ಶ್ರೀ ಮೂಜುಮ
೨೫. ತ್ತರು ವ್ರಿತ್ತಿಯ . ಜ . ಜೀಯರು
೨೬. ವಂ . ಹ . ಬರು ॥

ಶಾಸನ ನಂ. ೨ : ಮಲ್ಲಿಕಾರ್ಜುನ ದೇವಾಲಯದ ದೊಡ್ಡ ಶಾಸನ (ಕ್ರಿ.ಶ. ೧೧೪೮)

೧ [ಸ್ವಸ್ತಿ ಸಮಸ್ತಭುವನಾಶ್ರಯ ಶ್ರೀಪೃ]ಥ್ವೀವಲ್ಲಭ ಮಹಾರಾಜಾಧಿ [ರಾಜಪರಮೇಶ್ವರ]

೨ [ಶ್ರೀಮತ್] ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವ ವಿಜಯ ರಾಜ್ಯ ಮುತ್ತರೋತ್ತರಾಭಿವೃದ್ಧಿ [ಪ್ರವರ್ದ್ಧಮಾನ ಮಾಚಂದ್ರಾರ್ಕ ತಾ]

೩ [ರಂಬರಂ ಸಲ್ಲುತ್ತಮಿರೆ] ಕಲ್ಯಾಣದ ನೆಲೆವೀಡಿನೊಳು ಸುಖಸಂಕಥಾ ವಿನೋದದಿದಂ ರಾಜ್ಯಂಗೆಯ್ಯುತ್ತಮಿರೆ ಸ್ವಸ್ತಿ [ಯನೇಕ]

೪ (ಭಂಗುರ ತರಂಗ) ಸಂಘಾತ ವೀಚೀ ನಿಚಯುಲವಣಾಬ್ದಿವಳಯು ವಳಯಿತ ವೇಳಾವನ ಗಂಗಾತೀರಪರ್ಯಾತ್ರತನುಮಧ್ಯ ದೇಶಾಧೀಶ್ವರ

೫ [ಮಾಹಿಷ್ಮತಿ] ಪುರವರಾಧೀಶ್ವರ ಸಹಸ್ರಬಾಹು ಪ್ರತಾಪ ಭೂಪ ದಿಳೀಪನಹಿಹಂಸುವಂಶೋದ್ಭವಂ ವಿವೇಕ ಕಮಲೋದ್ಭವನತ್ಯುಗ್ರ

೬ [ನರಸಿರ] ದರ್ಪ್ಪಣ ಧ್ವಜ ವಿರಾಜಮಾನ ದಾನಕಾನೀನ ಮಾಲಪರೆ ಘೋಶಣ ನ್ರಿಪರತ್ನ ಭೂಷಣ ಸಮರ ಪ್ರಚಂಡ ಮೂರು ಲೋಕದ ಗಂಡ ಸಂಕ

೭ [ರ ಸಮರಭಯಂ] ಕರ ನರಲೋಕ ಜಗದಳ ನಾಲ್ಕು ಭಾಸೆಯ ಜಗಬಿರುದ ಮಂಡಳಿಕರಗಂಡ ನುಡಿದಂತೆ ಗಂಡ ಸತ್ಯರಾಧೇಯ ಶೌಚಗಾಂಗೇಯ ಗೋತ್ರಪವಿ

೮ [ತ್ರಪರಾಂ]ಗನಾಪುತ್ರ ಶ್ರೀಮಲ್ಲಿಕಾರ್ಜುನದೇವರ ಪಾದಾರಾಧಕ ಪರಬಳ ಸಾಧಕ ನಾಮಾದಿ ಸಮಸ್ತ ಪ್ರಶಸ್ತಿ ಸಹಿತಂ ಶ್ರೀಮನ್ಮಹಾ

೯ ಮಂಡಳೇಶ್ವರ ಘಟ್ಟಿದೇವರಸರು ರಾಜಧಾನಿ ಮೊರಟದಲು ರಾಜ್ಯಂಗೆಯ್ಯುತ್ತವಿರಲು ॥ ಸಕವರಿಶ ೧೦೭೦ನೆಯ ವಿಭವ ಸಂವತ್ಸರದ

೧೦ .... ಸೋಮವಾರದಂದುತ್ತರಾಯಣ ಸಂಕ್ರಾನ್ತಿ(ಯ ಪಬ್ಬ) ನಿಮಿತ್ತವಾಗಿ ಶ್ರೀ ಮಲ್ಲಿಕಾರ್ಜುನ ದೇವರಂಗ ಭೋಗ ನಿವೇದ್ಯಕ್ಕಂ ಪಾತ್ರ

೧೧ .... ಣಧಾರಕ್ಕಂ ತಪೋಧನರಾಹಾರದಾನಕ್ಕಂ ಮುಂನ ನಡೆವ ಪೂರ್ವ್ವ ವ್ರಿತ್ತಿಯ ಅಲ್ಲಿಯ ಸ್ಥಾನಾಧಿಪತಿ ಬಮ್ಮರಾಶಿ ಪಂಡಿ

೧೨ .... ಮೊ . ಱ . ಜೀಯರಂ ಬೆಸಗೊಂಡು ಮಾಡಗಿರಿಯ . ಚೆಯಸಿ ಸಿಧಾಯನ ಬೀಡಿನಲು ತಂದು ಮಾರುವ ಭತ್ತಕ್ಕೆ ಕೊಟ್ಟರಿ ಕೊ

೧೩ .... ವೀಸ ಮೂಡವೊಲದಲ್ಲಿ ಎರದ ಹಳ್ಳಿಯ ದಾರಿಯಿಂದಂ ಬಡಗಲು ಬಟ್ಟಿಗನಹಳ್ಳದಿ ಕ್ಕೆಲದಿ ಕುರುಕುಂದೆಯಗಡಿಂ

೧೪ ಬದಲು .... ಕರಿಯ ನೆಲ ಮತ್ತರಾಱು ಮತ್ತಂ ಬಡಗವೊಲದ ವಿವರ ವಟದ ದಾರಿಯರಲದಿ ಕುಱುಕುಂದೆಯ ಗಡಿಂಬದಲು ಬಿಟ್ಟ

೧೫ [.... ನೆಲಂ] ಮತ್ತರಾರು ದೇವರ ಹಡಪಕ್ಕೆ ಹೇರಿಗೆ ನೂರು ಹೇರಿಗೆಯ್ವುತ್ತೆಲೆಯುಲಿ ಯಿಂತಿವಂ ಸಲಿಸಿ ಶ್ರೀಘಟ್ಟಿಭೂಪೋತ್ತಮಂ

೧೬ ... ತಾ [.. ಕೊಟ್ಟು] ದಾದುದೆಡೆ ಮೊಱಟದ ಸೀವಟಿಕಂತಗಿರೆಯ ತ್ರಿ [ಬೋಗಾಭ್ಯಂತರ ಸ] ಹಿತವಾಗಿ ಧಾರಾಪೂರ್ವ್ವಕಂ ಮಾಡಿ ಕೊಟ್ಟ ೮ ಬಿಂದುಗ [ಚೋಳವಂ ಕೊಟ್ಟರು ಮಾ]

೧೭ .... ಮಾ . ಲೋ . ಹಂಂನ ಕಾಣಿಕೆಯಂ

೧೮ ... ಕೆರೆಯ ಗದ್ದೆಯಂ ಕೊಟ್ಟರು ಎಡೆಯೊಲ ಕುಱುಕುಂದೆಯ ಗಡಿಂಬದಲು ಕರಿಯ ನೆಲ ಮತ್ತರು ನಾಲ್ಕು

೧೯ ದಿಗಿ ಮಾಣಿಗೆ ಗಾಣದೆರ ಸಹಿತವಾಗಿ ಕೊಟ್ಟ ಗಾಣ ಮೂರು ತ್ರಿಕಾಲ ಪೂಜೆಯ ಹೂವಿಂಗೆ ಕೊಟ್ಟ

೨೦ ಮಿ .... ಕುರುಕುಂದೆಯ ಗಡಿಂಬದಲು ಬಿಟ್ಟಕಮ್ಮಂ ನಾಲ್ಕೂ ರೆಯ್ಯತ್ತುಯಿಂತಿವಲಂ ಸಲುತ್ತವಿರೆ .. ಬಳಿಕ

೨೧ ಗು . ಗಿಮ್ಮಾಡಿ ಭೂಪದೇವರ್ಗ್ಗೆ ತಾಯಿ ಕೊಟ್ಟ ಪಣಂ .. ಮಾರಿದ ಮೂಡಲು ಬೆಸದಿಯ ಕೈಯ್ಯಿಂದಂ ತೆ . ಲು ನಾಗರಕೆ

೨೨ ರೆ ಬಡಗಲು ಚತುರಾಶ್ರಯದಳತೆಯ ಕುರುಕುಂದೆಯ ಗಡಿಂಬದಲು ಬಿಟ್ಟ ಕರಿಯ ನೆಲಂ ಮತ್ತರು ಯಿಪ್ಪತ್ತು ನಾಲ್ಕು

೨೩ ದೆರೆ ವೊಲದಲು ಸಿಡಿಲ ಹಳ್ಳದಿಂ ಪಡುವಲು ಕೆದಗೆಯದ .. ದಾರಿಯಿಂದ ಮೂಡಲು ಚತುರಾಶ್ರಯ ದಳಿಲು.

೨೪ ಕುರುಕುಂದೆಯ ಗಡಿಂಬದಲು ಬಿಟ್ಟ ಮಸಬಿನ ಮತ್ತರು ಎರಡು ॥ ದೇವಾಲಯದ ಸೂಳೆಯರಿಗೆ ದೇವಾಲ್ಯದಿಂ ತೆಂಕಲು ರಾಜ್ಯಂಗೈ

೨೫ ದ ಕೊಟ್ಟ ನಿವೇಶನ ಹತ್ತು ಆಲದ ಪಡುವಲು ಮಣ್ಣ ಪಡಿಯು . ವ ಜೀಯರಿಗೆ ಕೊಟ್ಟ ನಿವೇಶನ ಎರಡು ಮೊರಟ ನಾಡೊ

೨೬ ... ಯ ಮಾಡುವವರು ಸ್ನಾನ ಪೂಜೆಯಂ ಜೀಯರಿಗೆ ಕಾಡದಿರಲೆಂದು ದೇವತಾ ಸೀಮೆಗೆ ಕೊಟ್ಟ ಬತ್ತ ..

೨೭ .. ಮಾದಿಯಣ್ಣಂಗಳಿಗೆ ಕಂ ನ್ತರಿಕೆಯ ವೊಲದೊಳಗೆ ಕುರುಕುಂದೆಯ ಗಡಿಂಬದಲು ಚತುರಾಶ್ರಯದಳಿತೆಯ

೨೮ ನೆಲ ಮತ್ತರು ಎರಡು ಮಸಂಬು ಮತ್ತು ಕೊಡು . ಲ್ಲಿ . ಳ ಕುರುಕುಂದೆಯ ವೊಲದೊಳಗೆ . ಯನೂರ ಕರಿಯ.

೨೯ ಕ .. ಮೊರಡಿಯಂ ಮಾಡಲು ಚತುರಾಶ್ರಯದಳಿತಯಂ ಕುರುಕುಂದೆಯ ಗಡಿಂಬದಲು ಕೊಟ್ಟ ಕರಿಯ ನೆಲಂ ಮತ್ತರು

೩೦ .. ಬಡಗವೊಲದಲು ಕೆದಗೆಯ ಕೆರೆ ದಾರಿಯಿಂದಂ ಪಡುವಲು ಕಾರೆಯ ಮಾ . ಯದ ಬಡಗಲು ಕುರುಕುಂದೆಯ

೩೧ ಗದ್ದೆ ಮಸಂಬು ಮೂರು ಹಳ್ಳಿಯಲ್ಲಿಯು ಕೊಟ್ಟ ಗದ್ದೆ ಕಮ್ಮಂ ಮುನ್ನೂರು ದೂರದ ಬಡಗಲು ಹಳ್ಳದಿ ಮೂಡಲು ..

೩೨ ಕ .. ನೂರು ಶ್ರೀಮನ್ಮಹಾಮಂಡಳೇಶ್ವರ ಘಟ್ಟಿದೇವರಸರು ನವಿಲಕಲ್ಲವೊಲದೊಳಗೆ ಕುರುಕುಂದೆಯ ಗಡಿಂಬದಲು

೩೩ ಬಿಟ್ಟ ನೆಲ ಮತ್ತರು ಎರಡು ಮಸಂಬು ಮತ್ತರು ಎರಡು ಶಂಭುವಣ್ಣಂಗಳಿಗೆ ಕಂ ನ್ತರಿಕೆಯ ಹೊಲದೊಳಗೆ ಕುರುಕುಂದೆಯ ಗಡಿಂಬದ

೩೪ ಲು ಬಿಟ್ಟ ಕರಿಯ ನೆಲ ಮತ್ತರು ಎರಡು ಮಸಂಬು ಮತ್ತರು ಎರಡು ಮೇಳಲಡಿಯರನೆಯರು . . ಕೊಟ್ಟ . . ಕಮ್ಮ

೩೫ . . ಱ ಪಟ್ಟವಂಗೆಡವರ ಪೊಲದೊಳಗೆ ಕೊಟ್ಟ ಕರಿಯ ನೆಲಮತ್ತರು ಎರಡು ಮಾಲೆಗಾರ ಲೊ ಠಣಗೆ

೩೬ ನೆಲ ಮತ್ತರು ಎರಡು ಮನೆಯ ನಿವೇಶನ ವೊನ್ದು ಕುಂಬಾರರೆಲೆಯಗೆ ಮತ್ತರು ಎರಡು ಬಡಿಗ ಹಲ್ಲೋಜ ಬಿಟ್ಟ

೩೭ ಕಂನ್ತರಿಕೆಯ ಹೊಲದೊಳಗೆ ಕುರುಕುಂದೆಯ ಗಡಿಂಬದಲು ಕೊಟ್ಟ ಕರಿಯ ನೆಲಮತ್ತಾರರು ತೋಟದೊ.

೩೮ . . ಮಾಡ ಹೊಲದೊಳಗೆ ಯಕಲು. ಗರಲಿ ಹೊಂಗೆ ಪಣದ ಸವಂದಗೆಯ . . . ರುಸಿಂ. . ಲ್ಲಿಗೆ ಕೊ.

೩೯ ಟ್ಟ . ದಮ್ಮ . . ಯ್ಯಣ ಖಂಡುಗ ಸ . ಳ ಕೊ . . . . ದ ಚಲುವಾದ ಗಂಗೆಯ ತಡಿಯಲು ವೇದ

೪೦ ಪಾರಗರಪ್ಪ ಸಾವಿರ ಮಾನಿಸ ಸುಬ್ರಾಹ್ಮಣರ್ಗ್ಗೆ ಸಾವಿರ ಕವಿಲೆಯಂ ದಾನವ ಕೊಟ್ಟ ಫಲಮಕ್ಕು ಈ ಧರ್ಮ ಮನಳಿದವರ್ಗ್ಗೆ

೪೧ ಮಳವಿಗೊಡಂಬಟ್ಟವರ್ಗ್ಗೆ ವಾರಣಾಸಿಯಲು ಸಾವಿರ ಕವಿಲೆಯ ಯಮನಳಿದ ಮಹಾಪಾತವಕ್ಕುಂ ॥

೪೨ ಸಾಮಾನ್ಯೋಯಂ ಧರ್ಮಸೇತುನ್ರಿಪಾಣಾಂ ಕಾಲೇಕಾಲೇ ಪಾಲನಿಯೋ ಭವದಿಃಸ

೪೩ ರ್ಬ್ಬಾನ್ಸೇ ತಾನ್ಭಾವಿನರ್ವಾತ್ಥಿರ ವೇಂದ್ರನ್ । ಭೂಯೋಭುಯೋಯಾಚತೇ ರಾಮಚಂದ್ರ ॥

೪೪. ಸ್ವದತ್ತಾಂ ಪರದತ್ತಾಂ ವಾಯೋ ಹರೇತಿ ವಸುಂಧರಾಂ ಷಷ್ಟಿರ್ವರ್ಷ

೪೫ ಸಹಸ್ರಾಣಿ ವಿಷ್ಟಾಯಾಂ ಜಾಯತೇಕ್ರಿಮಿ । ಮಂಗಳ ಮಹಾ ಶ್ರೀ ಶ್ರೀ

**ಶಾಸನ ನಂ. ೩ : ಈಳಿಗೇರು ಮಲ್ಲಯ್ಯನ ಹೊಲದ ಬದುವಿನಲ್ಲಿರುವ ಶಾಸನ (ಕ್ರಿ.ಶ. ೧೧೪೮)**

೧ ಸ್ವಸ್ತಿಸಮುಸ್ತಭುವನಾಶ್ರಂಯು ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ

೨ ಪರಮೇಶ್ವರ ಪರಮಭಟ್ಟಾರಕಂ ಸತ್ಯಾಶ್ರಯ ಕುಳತಿಳಕಂ ಚಾಳುಕ್ಯಾಭರಣಂ

೩ ಶ್ರೀಮತ್ ಪ್ರತಾಪ ಚಕ್ರವರ್ತಿ ಜಗದೇಕಮಲ್ಲದೇವರ ವಿಜಯರಾಜ್ಯಮುತ್ತರೋ

೪ ತ್ತರಾಭಿವೃದ್ಧಿ ಪ್ರವರ್ಧಮಾನ ಚಂದ್ರಾರ್ಕ್ಕ ತಾರಬರಂ ಸಲ್ಲುತ್ತಮಿರೆ

೫ ಕಲ್ಯಾಣದ ನೆಲೆವೀಡಿನೊಳು ಸುಖಸಂಕಥಾ ವಿನೋದದಿಂದಂ

೬ ರಾಜ್ಯಂಗೈಯ್ಯುತ್ತಿರಲು ಸ್ವಸ್ತಿ . . ನೆ . . . . . . ತರಂಗ ಸಂಘಾತ

೭ ವೀಚಿ ನಿಚಯ ಲವಣಾಬ್ದಿ ವಳಯ ವಳಯಿತ ವೇಳಾವನ ಗಂಗಾತೀರ

೮ ಪಾರಿಯ್ಯಾತ್ರತನು ಮಧ್ಯ ದೇಶಾದೀಶ್ವರಂ ಮಾಹಿಶ್ಮತಿ ಪುರಾವರಾಧೀಶ್ವರಂ

೯ ಸಹಸ್ರ ಬಾಹು ಪ್ರತಾಪಂ ಭೂಪ ದಿಳೀಪ ನಹುಹಯ ವಂಶೋದ್ಭವಂ ವಿವೇಕ

೧೦ ಕಮಳೋದ್ಭವನತ್ಯುಗ್ರ ನರಸಿರ ದರ್ಪ್ಪಣ ಧ್ವಜ ವಿರಾಜಮಾನ ದಾನ ಕಾನಿನ ಮ

೧೧ ಲಪಱ ಘೋಷಣ ನ್ರಿಪರತ್ನ ಭೂಷಣ ಸಮರ ಪ್ರಚಂಡ ಮೂಱು ಲೋಕದ ಗಂ

೧೨ ಡ ಅರಸಂಕ ಸಂಕರ ಸಮರ ಭಯಂಕರ ನರಲೋಕ ಜಗದಳ ನಾಲ್ಕು ಭಾಷೆಯ ಜಗಬಿರುದ ಮಂಡಳಿಕರ ಗಂ

೧೩ ಡ ನುಡಿದಂತೆ ಸತ್ಯರಾಧೇಯ ಶೌಚಗಾಂಗೇಯ ಪರಂಗನಾಪುತ್ರ ಪಾದರಾಧಕ ಘಟ್ಟಿದೇವರಸರು....

೧೪ . . . . . . . . . .

೧೫ . . . . . . . . . . . . . . . . . . . . . . .

೧೬ . . . . . ಸೋವರಸರು . . . . . . . . . .

೧೭ . . . . ಶ್ರೀ . . . . . ತಂ . . ಜ . . . . . ಸ . . ಲ . . . .

೧೮ . . . . . . . . . . . . . . . . . . . . .

೧೯ ದುತ್ತರಾಯಣ ಸಂಕ್ರಾಂತಿಯ ಪರ್ಬ್ಬ ನಿಮಿತ್ತವಾಗಿ ಅರವಾನ . . .

೨೦ ದಾರಾ . . . . . ಸೀಮೆವಳಗಣ . . . ಹರವೆಯ ಬಟ್ಟೆಯಿದಂ ಬಡಗ

೨೧ ಲು ಬಿಟ್ಟಗನ ಹಳ್ಳದಿ ಮೂಡಲು . . . ರ ಹಳ್ಳದಾರಿಯ ಶ . ಡು . . ಲುಭತ್ತರ

೨೨ ಪಳ . . ಕುರುಕುಂದೆಯ ಗೇಣ ಗಡಿಂಬದಲು ಬಿಟ್ಟ ಕರಿಯ ನೆಲ ಮತ್ತರು . ಅರವಾನ

೨೩ . . . . . . . ಹೂದೋಂಟ ಕಮ್ಮಂ ನೂಱ . ರೊಳಗಿನ ಮನೆಯ ನಿವೇಶನವೊಂದು .

೨೪ . ಕಂ . . . . ಯಲು ಹನೆಯಲು ಬದಿ ಭತ್ತವಂ ಬಿಟ್ಟರು ಅಲ್ಲಿಯ ತೆಲ್ಲಿಗರು ಗಾಣದಲು ಬಿ

೨೫ . . . . ಕೊ. ಬ ಲಿ . . ಜೀಯರು ಹತ್ತುಮತ್ತರು ಱ . . . . ಲಯ.

೨೬ . . . . ರೆ . . . . . . . . . . . . . . . . . . . .

೨೭ ದಲು . . . ಯ ಕುರುಕುಂದೆಯ ಹೊಲದಲು . . . . . . . . ಲರು

೨೮ . . . . ಮೊದಲು . ಲಿ

೨೯ ಮತ್ತರು ಬ . ದನಿ. ಗೆಯ . . . ಸರು . . . . ಲದ . . . . ಲು . ವತು . .

೩೦ ಕಲು . . . . . . . . . . . . . . . ವಲು. ಚು . . . . . . . ಜ. ಕರಿಯ ನೆಲ ಮತ್ತರು

೩೧ . . . . . ಣ ಸೀಮೆಯಲು ಸಂಧಿವಿಗ್ರಹಿ ಸಂಕರಯ್ಯನುಂ . . . .

೩೨ . . . . ವಾರಾಣಾಸಿಯ ಸಾಯಿರ ಕವಿಲೆಯ ಫಲವಕ್ಕು ಯೀ

೩೩ ಧರ್ಮವನಳಿದವರಿಗೆ ಮಳವಿಗೊಡಂಬಟ್ಟವರಿಗೆ ವಾರಣಾಸಿಯಲು . . . . ಲಯ . . . .

೩೪ . . . . . ಮತ್ತರು ಕಾಯ . . . . ಲಮ . . . .

೩೫ . . . . . ರ . . . ಕರಿಯ . . .

೩೬ . . . . ಸ . . . . . . ಮಂಗಳ ಮಹಾಶ್ರೀ ಶ್ರೀ ಶ್ರೀ ಶ್ರೀ

**ಶಾಸನ ನಂ. ೪ :** ಅಲ್ಲಮಪ್ರಭು ದೇವಾಲಯದ ಬಲ(ದಕ್ಷಿಣ) ಬದಿಯ ಶಾಸನ (ಕ್ರಿ.ಶ. ೧೧೭೮)

೧ ಶ್ರೀ ಓಂ ನಮಃ ಶಿವಾಯ ॥ ಶ್ರೀ ಮಲ್ಲಿಕಾರ್ಜುನ ದೇವ ಶರಣು ॥ ಗಣಾಪತ್ಯೇನಮಃ

೨ ನಮಸ್ತುಂಗ ಶಿರಶ್ಚುಂಬಿ ಚಂದ್ರಚಾಮರಚಾರವೇ ತ್ರೈಲೋಕ್ಯ ನಗರಾರಂಭ ಮೂ[ಲಸ್ತಂಭಾ]

೩ ಯ ಶಂಭವೇ ॥–॥ ಸ್ವಸ್ತಿಶ್ರೀಮತು ಕಳಚುರಿಯ ಭುಜಬಳ ಚಕ್ರವರ್ತಿ

೪ ರಾಯಣ ಸಂಕಮದೇವನು ಮೊದೆಗನೂರ ನೆಲೆವೀಡನಲು ಸುಖಸಂಖಥಾ ವಿನೋ[ದದಿಂ]

೫ ರಾಜ್ಯಂಗೈಯುತ್ತವಿರಲು ॥ ಸ್ವಸ್ತಿಯನೇಕ ಭಂಗುರತರತ್ತವಂಗ ಸಂಘಾತ ವೀಚಿನಿಚ

೬ ಯಲವಣಾಬ್ಧಿ ವಳಯವಳೆಯುತ ವೇಳಾವನ ಗಂಗಾತೀರ ಪಾಯ್ರಾತ್ರ ತನ್ಮಧ್ಯ ದೇಶಾ

೭ ಧೀಶ್ವರಂ ಮಾಹಿಶ್ಮತಿ ಪುರವರಾಧೀಶ್ವರ ಸಹಸ್ರ ಬಾಹು ಪ್ರತಾಪ ಭೂಪ ದಿಳೀಪನ ಹಿಹಯ

೮ ವಂಶೋದ್ಭಮ ವಿವೇಕ ಕಮಳೋದ್ಭವನತ್ತುಗ್ರ ನರಸಿರದರ್ಪ್ವಣ ಧ್ವಜವಿರಾಜಮಾನ ದಾನಕಾನೀನಮಾ

೯ ಲಪರೆ ಘೋಶಣ ನೃಪರತ್ನ ಭೂಶಣ ಸಮರಪ್ರಚಂಡ ಮೂರು ಲೋಕದ ಗಂಡ ಅಯ್ಯಣಾ

೧೦ ದಿತ್ಯ ಸಂಕರನರಲೋಕ ಜಗದಳ . . . . ವರಗಂಡ ನಾಲ್ಕು ಭಾಷೆಯ ಬಿರುದ ಮಂಡಳಿಕರಗಂ

೧೧ ಡ ನುಡಿದಂತೆ ಗಂಡ ಸತ್ಯರಾಧೇಯ ಶೌಚಗಾಂಗೇಯ ಗೋತ್ರಪವಿತ್ರ ಪರಾಂಗನಾಪುತ್ರ ಶ್ರೀಮಲ್ಲಿಕಾ

೧೨ ರ್ಜುನದೇವರ ಪಾದರಾಧಕಂ ಪರಬಳ ಸೂದ್ರಕಂ ನಾಮಾದಿ ಸಮಸ್ತ ಪ್ರಶಸ್ತಿ ಸಹಿತ ಶ್ರೀಮನ್ಮಹಾಮಂ

೧೩ ದಳೇಸ್ವರಂ ಮೊರಟದ ಹಲ್ಲರಸನಮಗ ಮಲ್ಲಿದೇವರಸನು ಸುಖಸಂಖಥಾ ವಿನೋದದಿಂದಂ ರಾಜ್ಯಂ

೧೪ ಗೆಯ್ಯುತ್ತಮಿರಲು ಮೊರಟದುತ್ತರ ದಿಶಾಭಾಗದ ನಾಗರಕೆರೆಯ ಮೂಡಣದಮ್ಮಯ್ಯನ

೧೫ ಹೆಸರ ಶ್ರೀಪಲ್ಲವೇಶ್ವರ ದೇವರ್ಗ್ಗೆ ಶಕವರ್ಷ ೧೧೦೦ನೆಯ ವಿಳಂಬಿ ಸಂವತ್ಸರದಾಷಾಡ ಶುದ್ಧ ೧೦ ಸೋ

೧೬ ಮವಾರದಂದು ದಕ್ಷಿಣಾಯನ ಸಂಕ್ರಾಂತಿ ತಿಥಿನಿಮಿತ್ಯವಾಗಿ ದೇವರಂಭೋಗಕ್ಕಂ ರಂಗಭೋಗಕ್ಕಂ ದೂಪ

೧೭ ದೀಪ ನೈವೇದ್ಯಕ್ಕಂ ದೇವರ ನಂದಾದೀವಿಗೆಗಂ ಪಾತ್ರ ಪವುಳಕ್ಕಂ ಖಂಡಸ್ಫುಟಿತ ಜೀರ್ಣೋದ್ಧಾರಕ್ಕಂ ತಪೋಧನರಾಹಾ

೧೮ ರದಾನಕ್ಕವಾಗಿಂ‌ಉಲ್ಲಿಂ‌ಉ ಸ್ಥಾನಾಧಿಪತಿ ಶ್ರೀಮಲ್ಲಿಕಾರ್ಜುನದೇವರ ತೊತ್ತು ಮಹೇಶ್ವರ ಶಂಭುವಣ್ಣಂಗಳ ಮಗ

೧೯ ಮಲ್ಲಿದೇವನ ಕಾಲಂಕರ್ಚಿ ಧಾರಾಪೂರ್ವ್ವಕಂ ಮಾಡಿ ಮೊರಟದ ಸೀಮೆಯೊಳಗಣ ಹುಣಿಸೆಯಹಳ್ಳಿಯಂ ತ್ರಿಭೋ

೨೦ ಗಾಭ್ಯಂತರವೊಳಗಾಗಿ ಸರ್ವ್ವನಮಸ್ಯವಾಗಿ ಕೊಟ್ಟರಾ ಹಳ್ಳಿಯ ಹೊಲದ ಸೀಮಾ ಸಂಬಂಧದ ಚತುರಶ್ರೀ . ಮೋದಶು

೨೧ ದ್ದಿಯಹೊಂಗೆಂ . ಡೆಯಲ್ಲಿ ಯೆರೆಯಸ್ಥಳ ಮರವಟದ ಪಡುವಣದ ಶಂಕರಲ ಮೊದಲುಗೊಂಡು ಮೂಡವಳಗಾಗಿ ಮ

೨೨ ರವಟದ ಹಳ್ಳಿಯ . . ದ . . ಹಳ್ಳಿಯ ತೆಂಕದೆಸೆಯಂ ಸಂಯತೆ ಮೂಡಣ ದಿಕ್ಕುಗಳ ವರಂದಿ ರಲು ಬಡಗಣಸೀಮೆ ॥

೨೩ ಮತ್ತವಾ ದಿಕ್ಕುಗೆ ಲ್ಲ ಐದು ಲೋಕಮುಂದಾಗಿ ಸಿರಿಯೂರದ ಹೊಲದ ಪಡುವಣ ಸೀಮೆಗೊಂಡು ಬರಲಯ ಸದೆಗಳ ಬಡಗ

೨೪ ಣ ಬೆಳ್ಳಮರದ ದೊಡ್ಡ ಗುಂಡುವರಂ ಮೂಡಣಸೀಮೆ ॥ ಮತ್ತವಾ ಬೆಳ್ಳಮರದ ದೊಡ್ಡ ಗುಂಡಿ ನೆಲದ್ದು ಹಡುವ ಮುಂದಾಗಿ ಸಿರಿಯೂರದ

೨೫ ಲ್ಲಿದ್ದ ನವಿಲಕಲ್ಲಂಗೆ ಬಂದ ಬಟ್ಟೆಗೊಂಡು ಬರಲು ಬೇವಿನ ಹೊಲದ ಮೂಡಣ ಬದು ಹೂವರಳಿಯಿ..ರ್ಹಶರ್ಮಳ . . . ಕುನಿಯಾಗಿ ಬಳಗಮು

೨೬ ದಾಗಿ ಬರಲಾ ಕಬ್ಬೆಹಳ್ಳದ ಬಡಗಣ ತಲೆವರಂ ಬಂಡಲದು ಹಡುವ ಮುಂದಾಗಿ ಸಂಯತೆ ತಆಯ ಬಾಗುವ . ಸಿರಲು ಮೂಡಣಸೀ

೨೭ ಮೆ ॥ ಮತ್ತವಾತಾಳಿಬಯ ಬಾಗಿನಲಿದ್ದು ದೊಂದುಬಡುದ ಬಗೊಂಡು ಬಡಗ ಮುಂದಾಗಿ ಕಗ್ಗಲ್ಲಬೇಟೆಯ ಮೇಗಣಂ ಹೋಗಲು ಮುಂನ ಮ

೨೮ ರವಟದ ಪಡುವಣ ಹಳ್ಳದ ಚಂವದರಂಪಡುವಣಸೀಮೆ ॥ ಮತ್ತಮದಾಯಮೇ ಸಂವವಿ ಸ್ಥಳದ ವ ತುಸ್ಸೀಮೆಯುವೆಂಗೆಂ. ಡ ॥

೨೯ ಹುನಿಸೆಯಹಳ್ಳಿಯ ಕಲ್ಲ . . ಬುತ್ಯದ ಬಾಗಿಸಮೊದಲ . ದ್ದು ಕಲ್ಲು ಬಲದ ಲಿಕ್ಕಿ ಸಂಯಿತ ಬಡಗ ಮುಂದಾಗಿ ಬೆಂಗಿಯಗದ್ದೇನ

೩೦ ಮೇಗಣ ನಖರೇಶ್ವರಿ ದೇವರ ಕೆಯಿ ಹೊಱಗಾಗಿ ತಾರಳೆಗಲ್ಲುಗಂದು ಪಡುವಣ ಸೀಮೆ ॥ ಮತ್ತವಲ್ಲಿಂದ ಮೂಡ ಮುಂದಾಗಿ . .

೩೧ ಯಲು ತುಗ್ಗಿ. ಹಳ್ಳಳಿಯ ಮೇಗಣ ಮಾಂಗನಹರಳ ಬಡಗಣದ ಮೂ . . ತಟದ . . . ದರಂ ಬಡಗಣ ಸೀಮೆ ॥ ಮತ್ತವಾ

೩೨ . [ಬೆಂಬ] ದುಲಿದ್ದು ತೆಂಕ ಮುಂದಾಗಿ ಮು . ಕೆಲ್ಲ ನಡೆದಲಿ ಕ್ಕಿ ಕಲ್ಲ ಬಳಿಗೊಂದು ಮೂಡ ಮುಂದಾಗಿ ಒ . . ಯಲುಗಂ . ಗೋಱಿಯ

೩೩ ಮೂಡಣ ಕೋಡಿಯಿಂ ತೆಂಕಮುಂದಾಗಿ ಮರವಟದ ದಾರಿಯಂ ಕೋಡಿಯಂ ದಾರಿವಳಿದು ಚಿಪ್ಪಗಿರಿಯ ಹಳ್ಳದ ಮೂಡಣ ಸೀಮೆ ॥

೩೪ ಮತ್ತವಾಹಳ್ಳದ ಬಳಿ ವಿಳಿದು ಪಡುವ ಮುಂದಾಗಿಯದ ಕಲ್ಲುವರಂ ಬಿಟ್ಟಕಲ್ಲ ಬಡಗಣ. ಕಪ್ಪಲಗೊಂಡು ಸಂಯಿತೆ ಮುನಿನ

೩೫ ಗುಳಿಯ ದಾರಿಯ ಬಾಗಿನ ಮೂಡಲು ಒಂದು ತೆಂಕಣಸೀಮೆ ಮತ್ತಂ ಕಾಟಿಮಯ್ಯನ ಕೆರೆಯಂ ಬಡಗನಲಾರವೆಯ

೩೬ . . . ದಾರಿಯ ಮೂಡಲು ಮಾದೇಶ್ವರದೇವರ ಕೆಯ್ಯಂ ಪಡುವಲು ಕುರುಕುದೆಯ ಗಡಿಂಬದಿಂ ಕೊಟ್ಟ . . ಲು ಮತ್ತರು ೧ ಮರವಾಗದೀ

೩೭ . . . ಚಿಪ್ಪಗಿರಿಯ ಹಳ್ಳದಿಂದಂ ತೆಂಕಲು ಮರವಟದ ದಾರಿಯಿಂದಂ ಪಡುವಣದ ಕಲ್ಲಿಂದಂ ಮೂಡಲು ಕರಿಯ ನೆಲ ಮತ್ತರು ೨

೩೮ . . ಕಲ್ಲೇಶ್ವರ ದೇವರಿಂದಂ ಮೂಡಲು ಹಳ್ಳದಿಂದಂ ಪಡುವಣ ತಟದಲು ಹೂದೋಂಟಕ್ಕೆ ಕುರುಕುಂದೆಯ ಗಡಿಂಬದಲು ಕೊಟ್ಟ ಕಮ್ಮ . .

೩೯ . . . . ಮಲ್ಲಿಕಾರ್ಜುನ ದೇವರ ಪರಿಸಂ ಮೂಡಲು ಮನೆಯ ನಿವೇಶನ ೧ ದೇವರ ನನ್ದಾದೀವಿಗೆ ತೆಱ ಸಹಿತವಾಗಿ ಕೊಟ್ಟ ಗಾಣ ೧

೪೦ . . . . ಬಿಲುಕೊಡೆಯ ಸುಂಕದಲು ತಿಂಗಳಿಗೆ ಗದ್ಯಾಣ ೧ದಂ ಕೊಟ್ಟರು ॥ ಶ್ರೀಮತ್ತಂ ಮೊಱಟದ ಸಮಸ್ತ ಪರಿ . . . .

೪೧ . . . . ಸಾ . . ವೆಂ ನ . ಯ ರಸಾರ . . . . ಳಗಾಗಿ ಲೆಂಕ ಕ . ಗರೊಳಗಾಗಿ ವರ್ಷಂಪ್ರತಿ ಮನೆವಣವಾಗಿಯುತ್ತಮದಲು ಪಣ೧ಮ

೪೨ ತ್ತರು ಪಾಗ ೨ ಕವಿಪದಲು ಪಾಗ ೧ ದಂ ಕೊಟ್ಟರು॥ ಮತ್ತವರ ಸರುತಿಪ್ಪೆ ಸುಂಕಮುಂ ಕೊಟ್ಟರು ॥ ಶೀಮತ್ತಂ ಮೊಱಟ ೩೦೦–ಱಱ . . ಸ . .

೪೩ . . . ಪ್ರಮುಖವಾಗಿ ನಾಲ್ಕು ನಾಡ ನಾನಾದೇಸಿ ಮುಮ್ಮರಿದಂಡ ವಂ ಮಹಾನಾಡಾಗಿ ನೆರೆದಾ ಚಂದ್ರಾರ್ಕಸ್ಥಾಯಿಯಾಗಿ ಶ್ರೀಪಲ್ಲವೇಶ್ವರ

೪೪ ದೇವರ್ಗ್ಗೆ . . ಯವೆಂತಂ . . . ತೂಕದ ಬಂಡಮಾರಿದಲ್ಲಿ ಹೊಂಗೆ ಕೊಟ್ಟಲ್ಲಿ ಮರೆವೀಸ ಕೊಂಡಲ್ಲಿ . . . . . .

೪೫ ಳ . ನಿಮಹವಿನಿಯೊಳಗಾಗಿ ವಸ್ತ್ರ ಭಂಡಗೆ ಹೊಂಗೆ ಕೊಟಲ್ಲಿಯರೆವೀಸ ಕೊಂಡಲ್ಲಿಯರೆವೀಸ ದವಸದ ಭಂಡದಲ್ಲಿ ಹಣ ಕೊಟ್ಟಲ್ಲಿ ಕಾಣಿ

೪೬ ಕೊಂಡಲ್ಲಿ . ಣ ಅಡಕೆ ಮಾರಿದಲ್ಲಿ ಹೊಂಗೆ ಕೊಟ್ಟಲ್ಲಿ ಕಾಣಿ ಕೊಂಡಲ್ಲಿ ಕಾಣಿ ಹಂನವಣಿಗರಲ್ಲಿಯ ಹೇಱಿಂ

೪೭ ರಿಯ . ಳಿ ಮದೊಳಗಿನ ದಡದಲ್ಲಿ ಕುದುರೆಗೆ . ಗೆವಂ ಕೊಟ್ಟರು ತೆಲ್ಲಿಗರು ಗಾಣದಲು ಗಿದ್ದ . ಯ ಕೊಟ್ಟರು ದೇವರ ದೂಪ ದೀಪಂಗಳಿಂಗೆ . . .

೪೮ ಲುಪಾಗ ೧ ಬಿಲುಕೊಡೆಯಲು ಪಾಗ ೧ದಂ ಕೊಟ್ಟರು ಸೆ . . ಗ ಗುಂದೆ ಹೊಲೆಗುಂ . . ಯಲುವ . . ರ್ಮ್ಮಂ ಆ. ಕುಂಟೆಯಲು ಪಾಗ ೧ ದಂ ಕೊಟ್ಟರು

೪೯ ನೊಬ್ಬರೆಲೆನೆರೆವ ಮೊಱಟ ೩೦೦ ಹೊಳಗಳಲ್ಲಿ ವರ್ಷಂ ಪ್ರತಿಯಾಕಲಲ್ಲು ಹಾಗವ ಕೊಟ್ಟರು ಮತ್ತಂ ಮೊಱಟ ೩೦೦ ಱಱ ಪ್ರಭುಗಾವುಂಡಗಳ . . . .

೫೦ . ದೇವರ್ಗ್ಗೆ ವರ್ಷಂ ಪ್ರತಿ ಕಾಣಿಕೆಯಾಗಿಯೂರಲು ಗದ್ಯಾಣ ೧ ದಂ ಕೊಟ್ಟರು ಮಲ್ಲಿಕಾರ್ಜುನ ದೇವರ ಬಾಗಿಲು ವಳಬದಿ ಕಾ . .

೫೧ ಲುಯಿ ಬಡಗಲಾಗಿ ಜಕಲದೇವಿಂಯ ನಿವೇಶನ ಶಂಬುವಣ್ಣಂಗಳಿಗೆ ಕೊಟ್ಟರು ॥ ಕಲುಕುಟಿಗ. ತಿಮ್ಮೋಜಂಗೆ

೫೨ . ಱಯ ಬಡಗಲು . ರಿಯ . . ಡಲು ಕೊಟ್ಟ ಕರಿಯ ಮತ್ತ . . . . . ॥

೫೩ ದು ಮತ್ತರು ೧

**ಶಾಸನ ನಂ. ೫ :** ಮಲ್ಲಟ ಗ್ರಾಮದ, ಮಲ್ಲಿಕಾರ್ಜುನ ದೇವಾಲಯದ ಕಿರು ಶಾಸನ (ಕ್ರಿ.ಶ. ೧೨ನೇ ಶತಮಾನ)

೧ ಶ್ರೀಯನಿಳಾಧಿಪಂಗೆ ವಿಜಯೋತ್ಸವಮಂ ಮಹೋತ್ಸಂಗೆ ಕೂರ್ತ್ತುವಾಕು

೨ ಶ್ರೀಯನಜಂಗೆ ತೇಜಮನಿನಂದೆ ಸಮಸ್ತ ಸುರರ್ಗ್ಗೆ. ಷಮಂಗ . ಯ

೩ ಯೆನಲ್ಕೆ ಕೊಟ್ಟು ನರಲೋಕದ ಭಕ್ತರ ಬಳ್ಳದಂಕಡಲು ಜ್ಯಾಯನೆನಿಂದ

೪ ನಿ ಮೊರಟದಲು ವರದಂ ಪ್ರಭು ಮಲ್ಲಿಕಾರ್ಜುನ॥ ತಚ್ಚರಣಶರಣಂ

೫ ಸ್ವಸ್ತಿ ನಿಜ ನಾಮಾಂಕ ಮಾಳಿಕಾ ಪ್ರಸಸ್ತಿ ಸಹಿತಂ ಶ್ರೀ ಮನ್ಮಹಾಮಂಡಳೇಶ್ವ

೬ ರ ಹಲ್ಲವರಸರು ಶ್ರೀಮತು ರಾಜಧಾನಿ ಮೊರಟದ ಮಹಾಘಟಿಕ ಸ್ಥಾನಂ

೭ ಶ್ರೀಸ್ವಯಂಭು ಮಲ್ಲಿಕಾರ್ಜುನ ದೇವರ ಸಂನಿಧಾನದಲು ಸರ್ವ್ವಧಾರಿ ಸಂ

೮ ವತ್ಸರದ ಬಹುಳ ಸಪ್ತಮಿ ಸೋಮವಾರದ ದುತ್ತರಾಯಣ ಸಂಕ್ರಾಂ

೯ ತ್ತಿಯ ಪರ್ಬ್ಬ ನಿಮಿತ್ತದಿಂ ಮೊರಟ ಮೂನೂಜಜಿ ಪಂಚಗರಿಗೆಯ ಬ್ರಹ್ಮಪುರಿ

೧೦ ಗಳು . . ರಿಜೆವರುಣದ ... ಸುದಂ ಗ್ರಾಮಾಯ ಗ್ರಾಮಂಗಳನುದೇ

೧೧ ವತಾ ಪೂಜೆ ನನ್ದಾದೀಪಿಗೆ ನಿವೇದ್ಯಕ್ಕಂ ತಪೋಧನರಾಹಾರದಾನ ಖಂಡುಸ್ಫುಟಿ

೧೨ ತ ಜೀರ್ನ್ನೋದ್ಧಾರಕ್ಕಂ ಬ್ರಹ್ಮಪುರಿಯ ಬ್ರಾಹ್ಮಣರ ಗೃಹವಾಸಕ್ಕಂ ತವಗೆ

೧೩ ಪುಣ್ಯಾರ್ತ್ಥವಾಗಿಂ ತಮ್ಮಯುಂ ಮಹಾಮಂಡಳೇಶ್ವರ ಮಲ್ಲಿದೇವರಸರು

೧೪ ಶ್ರೀಮತುಪಟ್ಟ ಮಹಾದೇವಿಯರಸಿಯರ್ಗ್ಗೆ ಮಹಾಮಂಡಳೇಶ್ವರಂ....

೧೫ ಘಟ್ಟಿದೇವರಸರು ಶ್ರೇಯಸಾಗಲೆಂದು ಮೊರಟ ಮೂನೂ ಜಜಿಅರುವಣ

೧೬ . . . . ಸರ್ವನಮಸ್ಯವಾಗಿ ಧಾರಾಪೂರ್ಬ್ಬಕಂ ಮಾಡಿ ಚಂದ್ರಾರ್ಕ್ಕ

೧೭ ಸ್ಥಾಯಿಯಾಗಿ ಬಿಟ್ಟರು ಮೊರಟ ಮೂನೂಜಜಿ ಪ್ರಭು ಗಾಮುಂಡುಗಳಾರಾ

೧೮ ವಡಂ ಬನಾನುವಂದ ಕಬಳಿಸಿದ ರಪ್ಪಡೆಲ್ಲರ ಸಿಂಗಂ ನಾಬಗಂ ಸಕ

೧೯ ಲಿ ಕೆಲಕ್ಕಂ ದೋಹರು ಬ್ರತಿ ಜಾತಿಗೆ ಹೊಂಗು ॥ ಈ ಧರ್ಮ್ಮವನೀಯ್ಯನೋವಂ

೨೦ ಶದರಸುಗಳಾರಾದಡಂ ಪ್ರತಿಪಾಳಿಸುವವರು ಪ್ರತಿಪಾಳಿಸಿದವರ್ಗ್ಗೆವಾ

೨೧ ರಣಾಸಿ ಕುರುಕ್ಷೇತ್ರ ಪ್ರಯಾಗ ಪುಷ್ಕ ತೀರ್ತ್ಥದಲು ಜಾತಿ ಕವಿಲೆಯಂ

೨೨ ಖುರಶೃಂಗಗಳುಮಂ ಸುವರ್ನ್ನದಿಂ ಕಟ್ಟಿಸಿ ಸಾಸಿರ್ಬ್ಬರು ವೇದಪಾರಗರಪ್ಪ ಸಬ್ರಾ

೨೩ ಹ್ಮಣರ್ಗ್ಗೆ ದಾನಂಗೆಯ್ದ ಫಲಂ॥ ಇದನಳಿದವರಿಗೆ ಕೋಟಿ . ಯಂಕವಿಲೆ

೨೪ ಯನೆ ಕೊಂದ ಪಾತಕನಕ್ಕಂ ವೇದವಿದರಂ ಪನ್ನಿ . . ಯನೆ ಕೋಟಿತೀರ್ತ್ಥದ

೨೫ . ಕೋಟಿ ಮಹಾದಿನದಲಳಿದ ಸಿನ್ತಿದ ನಳಿದ ॥ ಶ್ರೀ ಮಲ್ಲಿಕಾರ್ಜುನ ದೇವರ ತೊ

೨೬ ತ್ತು ಸಕಲ ಭಕ್ತರ ಕರುಣದ ಸಿಸು ಶಂಭುವಣ್ಣಂಗಳು ಬರದ॥

೨೭ ಶ್ರೀ ಮನ್ಮಹಾಮಂಡಳೇಶ್ವರಂ ಇಂಮ್ಮಡಿ

೨೮ ಮಲ್ಲಿದೇವರಸರು . ವ. . ನುಮಳು

೨೯ . . ರು ದೇವರ್ಗ್ಗೆ ಕೊಟ್ಟ ನಿಂ ಹಿಲಗೆರೆಯ ಕೆರೆಯ

೩೦ ನೆಲಮತ್ತರು ೨

(ನಾನು ಮಲ್ಲಟಗ್ರಾಮದ ಕ್ಷೇತ್ರಕಾರ್ಯಕ್ಕೆ ಹೋದಾಗ ನನ್ನ ಜೊತೆ ಬಂದು ಶಾಸನಗಳ ಛಾಯಾಚಿತ್ರಗಳನ್ನು ತೆಗೆದು ನನಗೆ ನೀಡುವುದರೊಂದಿಗೆ ನಾನು ಈ ಲೇಖನವನ್ನು ಬರೆಯಲು ಪ್ರೋತ್ಸಾಹಿಸಿ ಅದರ ಕರಡು ಪ್ರತಿ ತಿದ್ದಿದ ಹಿರಿಯರೂ, ಗೌರವಾನ್ವಿತರಾದ ಡಾ. ಹೆಚ್. ಚಂದ್ರಶೇಖರ ಮತ್ತು ನನ್ನ ಪಿಹೆಚ್.ಡಿ ಪದವಿಗೆ ಮಾರ್ಗದರ್ಶಕರಾಗಿದ್ದ ಡಾ. ಜೆಂ.ಶಾ. ಶ್ಯಾಮಲಾರತ್ನಕುಮಾರಿ, ಸುಂ.ಕಂ. ಗೋವರ್ಧನ, ಮಲ್ಲಟದ ಶಿವಶಂಕರ, ಡಾ. ವೆಂಕಟೇಶ ಮೊದಲಾದವರಿಗೆ ಕೃತಜ್ಞತೆಗಳನ್ನು ಸಲ್ಲಿಸುತ್ತೇನೆ.)



## ಆಧಾರಸೂಚಿ

೧. *Annual Report on Indian Epigraphy.* 1960-61, B. No. 559.

೨. **ಕ.ವಿ.ವಿ. ಶಾಸನ ಸಂಪುಟ–೭, ರಾಯಚೂರು ಜಿಲ್ಲೆ,** ಮಾನ್ವಿ ೧೦೨. (ಸಂ.) ಡಾ. ದೇವರಕೊಂಡಾರೆಡ್ಡಿ, (೨೦೦೩), ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. *A.R.I.E.* 1960-61, B. No. 559.

೪. Hemachandraray, *Dynastic History of Northern India,* Vol-II, P. 738.

೫. ಚನ್ನಬಸಪ್ಪ ಜಿ., 'ಮಲ್ಲಟ ಗ್ರಾಮದಲ್ಲಿ ಐದು ಶಿಲಾಶಾಸನಗಳು ಪತ್ತೆ', **ರಾಯಚೂರುವಾಣಿ,** (ದಿನಪತ್ರಿಕೆ–ಸಾಪ್ತಾಹಿಕ ಸಂಪದ), ದಿನಾಂಕ : ೧೯–೦೬.–೨೦೦೫, ಪುಟ–೪.

೬. **ಕ.ವಿ.ವಿ. ಶಾಸನ ಸಂಪುಟ–೭, ರಾಯಚೂರು ಜಿಲ್ಲೆ,** ಹಗರಿಬೊಮ್ಮನಹಳ್ಳಿ–೩೦. (ಸಂ.) ಡಾ. ದೇವರಕೊಂಡಾರೆಡ್ಡಿ, (೧೯೯೯), ಕನ್ನಡ ವಿಶ್ವವಿದ್ಯಾಲಯ, ಹಂಪಿ.

ಡಾ. ಮಲ್ಲಿಕಾರ್ಜುನ ಕುಂಬಾರ*

# ಕಾಲಕಾಲೇಶ್ವರದ ಎರಡು ಅಪ್ರಕಟಿತ ಶಾಸನಗಳು

ಗದಗ ಜಿಲ್ಲೆಯ ರೋಣ ತಾಲೂಕಿನಲ್ಲಿರುವ ಗಜೇಂದ್ರಗಡ ಸನಿಹದಲ್ಲಿ "ಕಾಲಕಾಲೇಶ್ವರ"ನೆಂಬ ಕ್ಷೇತ್ರವಿದೆ. ಇಲ್ಲಿಯ ಶಾಸನದಿಂದ ಈ ಕ್ಷೇತ್ರವು ೧೦ನೇ ಶತಮಾನದ ಪೂರ್ವದಲ್ಲಿ ಅಸ್ತಿತ್ವದಲ್ಲಿ ಇತ್ತು ಎಂದು ತಿಳಿದುಬರುತ್ತದೆ. ಈ ದೇವಾಲಯದಲ್ಲಿ ಅನೇಕ ಭಗ್ನಮೂರ್ತಿಗಳು, ಕೆಲವು ಅವಶೇಷಗಳು ಇತಿಹಾಸದ ಭೂತಕಾಲವನ್ನು ಸಾರುತ್ತವೆ. ಇಲ್ಲಿ ಒಂದೇ ಕಲ್ಲಿನಲ್ಲಿ ಮೂರು ಶಾಸನಗಳಿವೆ. ಕಲ್ಯಾಣ ಚಾಲುಕ್ಯರ ಮಾಂಡಲೀಕರಾದ ಯಲಬುರ್ಗಿಯ ಸಿಂದ ಅರಸರ ವಂಶಾವಳಿ ಹಾಗೂ ಅವರ ಶೌರ್ಯ ಸಾಹಸಗಳನ್ನು ಹೇಳುವ ಶಾಸನಗಳಾಗಿದ್ದು, ಇವು ಈಗಾಗಲೇ ಪ್ರಕಟಗೊಂಡಿವೆ. ಆದರೆ ಇಲ್ಲಿರುವ ಇನ್ನೆರಡು ಶಾಸನಗಳಲ್ಲಿ ಒಂದು ದೀಪಮಾಲೆ ಕಂಬದಿಂದ ಮೆಟ್ಟಿಲು ಹತ್ತಿ ಹೋದರೆ ಎದುರಿಗಿರುವದು ದೇವರ ಉತ್ಸವ ಮಂಟಪ, ಇಲ್ಲಿಂದ ಮೆಟ್ಟಿಲಿಗೆ ಹತ್ತಿರುವಂತೆ ಇರುವ ಮಂಟಪದಲ್ಲಿ ವೀರಭದ್ರ ದೇವರಿಗೆ ಎದುರಾಗಿರುವ ಕಲ್ಲಿನ ಮಂಟಪದ ಕಂಬದಲ್ಲಿ ಅಪರೂಪದ ಏಳು ಸಾಲಿನ ಶಾಸನ ಒಂದು ಬೆಳಕಿಗೆ ಬಂದಿದೆ. ಈ ಶಾಸನದ ಅಕ್ಷರಗಳು ಅಲ್ಲಲ್ಲಿ ಸವೆದಿವೆ. ಇದನ್ನು ಮಾಘ ಬಹುಳ ಶುದ್ಧ ಪೂರ್ಣಿಮೆಯ ಗುರುವಾರ ಕಟ್ಟಿಸಿದ ಬಗ್ಗೆ ಇಲ್ಲಿ ಉಲ್ಲೇಖವಿದೆ. ಈ ಶಾಸನದ ಪಾಠ ಈ ರೀತಿ ಇದೆ:

೧ ಶ್ರೀ ಮಲಿಕ ...... ಕೆಯ
೨ ಲಿಂಕ .. ರಾ......ಹಿರಿ
೩ ಹಿರಿಯ .. ಕಳಕಪ್ಪ ಯಾಕು
೪ ಭರು ಸರಾಯಿ ಕಟ್ಟಿಸಿದ



* "ವಚನ" ರಾಜೂರ – ೫೮೨೨೩೦, ತಾ. ರೋಣ, ಜಿ. ಗದಗ

೫ ರು ಮಾಗ (ಘ) ಬಹುಳ ಶುದ್ಧ ಪೂರ್ಣಿಮ

೬ ಗುರುವಾರ ಶ್ರೀ ಕುಂದಾಹ ಶ್ರೀ

೭ ನೆ ಭಗಮೆ..

ಈ ಶಾಸನದಿಂದ ಮಲ್ಲಿಕ್..ಹಾಗೂ ಅವನ ಕೆಳಗಿನ ಅಧಿಕಾರಿ ಯಾಕೂಬರು ಮುಸ್ಲಿಂರಾಗಿದ್ದು ಈ ಮಂಟಪವನ್ನು ಅವರು ಕಟ್ಟಿಸಿರುವುದು ಸ್ಪಷ್ಟವಾಗುತ್ತಿದೆ. ಇದರಿಂದ ಕಾಲಕಾಲೇಶ್ವರನಿಗೆ ಹಿಂದೂಗಳಾದಿಯಾಗಿ ಮುಸ್ಲಿಂರು ಕೂಡಾ ಭಕ್ತಿಪೂರ್ವಕ ತಮ್ಮ ಸೇವೆ ಸಲ್ಲಿಸಿದ್ದು ಇದರಿಂದ ಮನವರಿಕೆಯಾಗುತ್ತದೆ.

ಈ ಶಾಸನೋಕ್ತ ಮಲ್ಲಿಕ್ ಎಂಬುವರು ಕ್ರಿ.ಶ. ೧೫೫೫ ರಲ್ಲಿ ಇದ್ದ ಇದೇ ರೋಣ ತಾಲೂಕಿನ ಯಾವಗಲ್ಲ ಗ್ರಾಮದ ಶಾಸನೋಕ್ತನಾದ ಮಲ್ಲಿಕ್ ಸಾಹೇಬರು ಆಗಿರಬಹುದು. ಏಕೆಂದರೆ ಈ ಎರಡು ಶಾಸನಗಳ ಕಾಲ ೧೬ನೇ ಶತಮಾನವಾಗಿದೆ. ಯಾವಗಲ್ಲ ಶಾಸನದ ಮಲ್ಲಿಕ್ ಸಾಹೇಬರು ಗದಗ ಸೀಮೆಯ ಅಧಿಕಾರಿಯಾಗಿ ತನ್ನ ಕೆಳಗಿನ ಅಧಿಕಾರಿಗಳಿಗೆ ನಿರ್ದೇಶನ ನೀಡುತ್ತಿದ್ದರು ಎಂದು ೭ ಸಾಲಿನ ಈ ಶಾಸನ ಹೇಳುತ್ತದೆ. ಈತನನ್ನು ಈ ಶಾಸನವು "ಮಹಾರಾಜಾಧಿರಾಜ"ನೆಂದು ಕರೆದದ್ದು ಗಮನಾರ್ಹವಾಗಿದೆ.[೧] ಮಹಾರಾಜಾಧಿರಾಜ ಮಲ್ಲಿಕ್ ಸಾಹೇಬನ ಆಜ್ಞೆಯ ಮೇರೆಗೆ ಕ್ರಿ.ಶ. ೧೫೫೫ರಲ್ಲಿ ಗದಗ ಸೀಮೆಯ ವೆಂಕೋಜಿ ಪಂಡಿತ, ದೇವಪ್ಪಗೌಡ ಮತ್ತು ಸೇನಬೋವ ಲಿಂಗಪ್ಪ ಹಾಗೂ ಇತರರು ಸೇರಿ ಯಾವಗಲ್ಲಿನ ಒಬ್ಬರಿಗೆ ತೋಟವನ್ನು ನೀಡಿ, ಅದರಲ್ಲಿರುವ ಭಾವಿಯ ನೀರನ್ನು ಧರ್ಮಾರ್ಥವಾಗಿ ನೀಡಿದರೆಂದು ಈ ಶಾಸನ ಹೇಳುತ್ತದೆ.[೨] ಈ ಮಲ್ಲಿಕ್ ಸಾಹೇಬರ ಅಧೀನದಲ್ಲಿ ಕಾಲಕಾಲೇಶ್ವರ ಶಾಸನೋಕ್ತ ಈ ಸಾರಾಯಿ ಕಟ್ಟಿಸಿದ ಯಾಕೂಬರೂ ಒಬ್ಬರಾಗಿರಬಹುದು. ಕಲ್ಲಿನ ಕಂಬದಲ್ಲಿರುವ ಈ ಶಾಸನವು ಸುಣ್ಣ ಹಚ್ಚಿದ್ದರಿಂದ ಕಾಣದೇ ಪೂರ್ತಿಯಾಗಿ ಮುಚ್ಚಿಹೋಗಿತ್ತು.

೧೦-೧೧ನೆಯ ಶತಮಾನದ ಒಂದು ಸಾಲಿನ ಮತ್ತೊಂದು ಶಾಸನವು ಕಾಲಕಾಲೇಶ್ವರನ ಗರ್ಭ ಗೃಹದ ಎದುರಿಗಿರುವ ಶಿವಲಿಂಗವೊಂದರ ಚೌಕಾಕಾರದ ಪೀಠದ ಮೇಲಿದೆ. ಈ ಬರಹದ ಪಾಠ ಈ ರೀತಿ ಇದೆ :

೧ ಶ್ರೀ ಭಾಹರಾಸಿ ಭಟರರು

ಇದು ಒಬ್ಬ ಕಾಳಾಮುಖ ಯತಿಯ ಹೆಸರಾಗಿದೆ. ಇದಕ್ಕೆ ಆಧಾರವೆನ್ನುವಂತೆ ದೇವಾಲಯದ ತೂಗು ತೊಟ್ಟಿಲದ ಬಳಿ ಇರುವ ದುರ್ಗಾದೇವಿಯ ಸಮೀಪದಲ್ಲಿ ಯತಿ ದಂಪತಿಗಳ



ಶಿಲ್ಪವಿದೆ. ಈ ಯತಿಯೇ ಈ ಶಾಸನದಲ್ಲಿರುವ ಭಾಹರಾಸಿ ಭಟಾರರಾಗಿರಬಹುದು. ಗದಗ ಜಿಲ್ಲೆ ಮತ್ತು ರೋಣ ತಾಲೂಕಿನ ಸೂಡಿ ಭಾಗದ ಪರ್ವತಾವಳಿ ಪ್ರದೇಶಗಳಲ್ಲಿ ಕಾಳಾಮುಖ ಯತಿಗಳ ಪರಂಪರೆ ಇದ್ದ ಬಗ್ಗೆ ನಮಗೆ ಶಾಸನಗಳು ಆಧಾರ ಒದಗಿಸುತ್ತವೆ. ಈ ಭಾಗದಲ್ಲಿದ್ದ ಸೋಮೇಶ್ವರ ಯತಿ, ಚಂದ್ರಭೂಷಣ ಪಂಡಿತ, ಈಶಾನ್ಯ ಶಕ್ತಿ ಪಂಡಿತರಂತಹ ಹಲವಾರು ಕಾಳಾಮುಖ ಯತಿಗಳು ಹಲವಾರು ಶಾಸನಗಳಲ್ಲಿ ಉಲ್ಲೇಖಿತರಾಗಿದ್ದಾರೆ. ಈ ಹಿನ್ನೆಲೆಯಲ್ಲಿ ಕಾಲಕಾಲೇಶ್ವರ ಕ್ಷೇತ್ರದಲ್ಲಿಯೂ ಕೂಡಾ ಕಾಳಾಮುಖ ಯತಿಗಳು ಇದ್ದರೆಂದು ಸ್ಪಷ್ಟವಾಗುತ್ತದೆ. ಈ ಕ್ಷೇತ್ರದಲ್ಲಿ ಪತ್ತೆಯಾದ ಈ ಶಾಸನಗಳು ಈ ದೇವಾಲಯದ ಇತಿಹಾಸದ ಮೇಲೆ ಸಾಕಷ್ಟು ಬೆಳಕು ಚಲ್ಲುತ್ತವೆ.



## ಆಧಾರಸೂಚಿ


೧. *SII Vol. X V 263*, ಯಾವಗಲ್ಲ ಶಾಸನ.

೨. ಅದೇ..

ಸಂತೇಬೆನ್ನೂರು ಸುಮತೀಂದ್ರ ನಾಡಿಗ್*

# ಹೊಯ್ಸಳ ವೀರಬಲ್ಲಾಳನ ಕಾಲದ ಅಪ್ರಕಟಿತ ಶಾಸನಪ್ರತಿ

ಸುಮಾರು ೧೦೦-೧೫೦ ವರ್ಷಗಳ ಹಿಂದಿನ ಪ್ರಾಚೀನ ಕಾಗದದ ಹಸ್ತಪ್ರತಿಯೊಂದು ದಾವಣಗೆರೆ ನಗರವಾಸಿ ನಿವೃತ್ತ ಪ್ರಾಚಾರ್ಯರ್ ಶ್ರೀ ಎಸ್. ಟಿ. ಶಿವಪ್ಪನವರಲ್ಲಿ ನನಗೆ ದೊರೆಯಿತು. ಅದರಲ್ಲಿ ಹೊಯ್ಸಳ ಕಾಲದ ಒಂದು ದಾನ ಶಾಸನ ನಕಲು ಮಾಡಿರುವುದು ನನ್ನ ಗಮನ ಸೆಳೆಯಿತು. ಇದು ಚನ್ನಗಿರಿ ತಾಲೂಕಿನ ಇತಿಹಾಸಕ್ಕೆ ಸಂಬಂಧಿಸಿದ್ದಾಗಿದ್ದು, ಈವರೆಗೆ ಎಲ್ಲೂ ಪ್ರಕಟವಾಗದಿರುವುದನ್ನು ನಾನು ಗುರುತಿಸಿ ಈ ಪ್ರಬಂಧದ ಮೂಲಕ ಅದನ್ನು ಎಲ್ಲರ ಗಮನಕ್ಕೆ ತರುತ್ತಿದ್ದೇನೆ.

ಒಟ್ಟು ೪೯ ಸಾಲುಗಳಲ್ಲಿ ಬರೆಯುಲ್ಪಟ್ಟಿರುವ ಇದೊಂದು ಶಿಲಾಶಾಸನದ ನಕಲಾಗಿದೆ. ಆರಂಭದ ಸ್ತುತಿ ಪದ್ಯಗಳು ಕೊನೆಯ ಶಾಪಾಶಯ ಶ್ಲೋಕಗಳು ಮಾತ್ರ ಸಂಸ್ಕೃತ ಭಾಷೆಯಲ್ಲಿದ್ದು ಉಳಿದಂತೆ ಶಾಸನದ ಎಲ್ಲಾ ಭಾಗ ಕನ್ನಡ ಭಾಷೆ ಮತ್ತು ಲಿಪಿಯಲ್ಲಿದೆ.

ಕ್ರಿ.ಶ. ೧೧೯೦ರಲ್ಲಿ ಅಂದರೆ ಶಾ.ಶ.೧೧೧೨ನೇ ಸಾಧಾರಣ ಸಂವತ್ಸರದ ವೈಶಾಖ ಶುದ್ಧ ಸೋಮವಾರದಂದು ಸಮಸ್ತ ಭುವನಾಶ್ರಯುಂ, ಶ್ರೀ ಪೃಥ್ವೀವಲ್ಲಭ, ಮಹಾರಾಜಾಧಿರಾಜ ರಾಜಪರಮೇಶ್ವರ, ಯಾಚಕಜಲಕಲ್ಪವೃಷ, ಯಾದವ ಕುಲಾಂಬರದ್ಯುಮಣಿ, ಸಂಯುಕ್ತ ಚೂಡಾಮಣಿ, ಮಲೆರಾಜರಾಜ, ಮಲಪರೊಳ್ಗಂಡ ಕದನ ಪ್ರಚಂಡ, ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಛಲದಂಕರಾಮ, ವೈರೀಭಯಕಂಠೀರವ, ಮಗರರಾಜ್ಯ ನಿರ್ಮೂಲನ, ಚೋಳರಾಜ್ಯ ಪ್ರತಿಷ್ಠಾಚಾರ್ಯ ಶ್ರೀಮತ್ಪ್ರತಾಪ ಚಕ್ರವರ್ತಿ ಎಂಬೆಲ್ಲಾ ಬಿರುದು ಹೊಂದಿದ್ದ ಹೊಯಿಸಳ ವೀರಬಲ್ಲಾಳದೇವ ಚೋಳನಾಡ ಪಂಪಾ ನೆಲವೀಡಿನೊಳ್, ದುಷ್ಟನಿಗ್ರಹ ಶಿಷ್ಟ ಪರಿಪಾಲನೆ ಮಾಡುತ್ತಾ ನಿಜರಾಜಧಾನಿ ದೋರಸಮುದ್ರದಲ್ಲಿ ವಿಜಯರಾಜ್ಯವನ್ನು ಉತ್ತರೋತ್ತರಾಭಿ ಪೃಥ್ವೀ ಪ್ರವರ್ಧಮಾನನಾಗಿ ಆಳುತ್ತಿರುವಾಗ ಅನಾದಿ ಅಗ್ರಹಾರ, ಸುರಗಿರಿಯ ಹರಿಹರಾತ್ಮಕ ಶ್ರೀ ಸಿದ್ಧೇಶ್ವರ ದೇವರ ಅಂಗಭೋಗ, ರಂಗಭೋಗ, ಖಂಡಸ್ಫುಟಿತ ಔಪಾಸನೆಗೆ ಅಗ್ರಾಸನಕೆ ಮೂರು ಪತ್ತಿಗೆ ಜೀರ್ಣೋದ್ಧಾರಕ್ಕೆಂದು ಜೊಂತೆಯ ವಾನರಾಸಿ ಗುರುಗಳ ಕಾಲಂ ಕರ್ಚಿ ಮೈರಾಮನ ಹಡಿ ಲಕ್ಷ್ಮಸಾಗರ ಬೆರಳಂಗೆರ್ರಿ, ಕತ್ತಲೆಂಗೆರಿ, ಮುಗ್ಗತ್ತನ ಹಡಿ ಬಿಲದೋಣಿ, ಕಲುಸಾಗರ, ಹರಿದ್ರಾ ಹಡಿ ಎಂಬ ಅಷ್ಟ ಗ್ರಾಮಗಳನ್ನು ದತ್ತಿ ಬಿಟ್ಟ ಬಗ್ಗೆ ಈ ಶಾಸನ ತಿಳಿಸುತ್ತದೆ.

ಈ ಶಾಸನದಲ್ಲಿ ಬಳಸಿರುವ ಭಾಷೆ, ಶೈಲಿ, ಉಲ್ಲೇಖಿತ ಕಾಲ ಇತ್ಯಾದಿಗಳು ಹೊಯ್ಸಳ ವೀರಬಲ್ಲಾಳನ ಕಾಲದ ಇತರ ಶಾಸನಗಳಿಗೆ ಹೊಂದಾಣಿಕೆ ಆಗಲಿರುವುದ ರಿಂದ ಇದೊಂದು ನೈಜ ಶಾಸನದ ಪ್ರತಿ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಇಮ್ಮಡಿ ಬಲ್ಲಾಳ ತನ್ನ ತಂದೆಯ ವಿರುದ್ಧ ಬಂಡೆದ್ದು, ೧೧೭೩ರ ಜುಲೈ ೨೨ಕ್ಕೆ ತಾನೇ ಹೊಯ್ಸಳ ಸಾಮ್ರಾಜ್ಯದ ಚಕ್ರವರ್ತಿಯಾಗಿ ಅಧಿಕಾರ ವಹಿಸಿಕೊಂಡ ವಿಚಾರ ಕಡೂರು ಶಾಸನದಿಂದ ತಿಳಿದುಬರುತ್ತದೆ. ನಂತರ ವೀರಬಲ್ಲಾಳ ೧೧೭೭ರಲ್ಲಿ ಉಚ್ಚಂಗಿ ಪಾಂಡ್ಯರ ಕಾಮದೇವನನ್ನು ಸೋಲಿಸಿ, ಉಚ್ಚಂಗಿದುರ್ಗ ಗೆದ್ದು, ಶನಿವಾರ ಸಿದ್ಧಿ, ಗಿರಿದುರ್ಗಮಲ್ಲ ಎಂದು ಕರೆಸಿಕೊಂಡನೆಂದು ಹೇಳಲಾಗುತ್ತದೆ. ಪ್ರಸ್ತುತ ಉಲ್ಲೇಖಿತ ಶಾಸನದ ಗ್ರಾಮಗಳೂ ಈ ಉಚ್ಚಂಗಿ ವೇಂಠೆಗೆ ಸೇರಿದ ಪ್ರದೇಶಗಳಾಗಿ ಗುರುತಿಸಲ್ಪಟ್ಟಿವೆ. ಈ ಶಾಸನದಲ್ಲಿ ಇಮ್ಮಡಿ ಬಲ್ಲಾಳ ಪಂಪಾ ನೆಲವೀಡಿನೊಳ್ ದುಷ್ಟನಿಗ್ರಹ ಶಿಷ್ಟ ಪರಿಪಾಲನೆ ಮಾಡುತ್ತಿರುವ ಕಾಲದಲ್ಲಿ ಎಂದು ನಮೂದಾಗಿರುವುದು ಹಂಪೆಯ ಪಂಪಾಕ್ಷೇತ್ರವನ್ನು ಆಗ ಅವನು ಇನ್ನೊಂದು ನೆಲವೀಡಾಗಿ ಮಾಡಿಕೊಂಡಿದ್ದ ಎಂಬುದನ್ನು ತಿಳಿಸುತ್ತದೆ, ಬಾಗಳಿಯ ಶಾಸನ ಅವನು ೧೧೯೩ರಲ್ಲಿ ಬಾಳ್ಗುಳಿಯನ್ನು ನೆಲವೀಡನ್ನಾಗಿ ಮಾಡಿಕೊಂಡಿರುವುದನ್ನು ಸೂಚಿಸುತ್ತದೆ. ಈ ಶಾಸನ ಕೆಲವೇ ವರ್ಷಗಳ ಅಂತರದಲ್ಲಿ ಹಂಪೆಯನ್ನು ತನ್ನ ನೆಲವೀಡನ್ನಾಗಿ ವೀರಬಲ್ಲಾಳ ಮಾಡಿಕೊಂಡಿರುವುದಕ್ಕೆ ಸಾಕ್ಷಿಯಾಗಿದೆ.

*ಸಂತೇಬೆನ್ನೂರು - ೫೭೭ ೫೫೨ (ದಾವಣಗೆರೆ ಜಿಲ್ಲೆ) ಮೊಬೈಲ್ : ೯೯೦೦೨ ೪೩೭೮೦

ದಾನಕೊಟ್ಟ ಸ್ಥಳ ಅನಾದಿ ಅಗ್ರಹಾರ ಸುರಗಿರಿಯ ಹರಿಹರಾತ್ಮಕ ಶ್ರೀ ಸಿದ್ಧೇಶ್ವರ ದೇವರಿಗೆ ಎಂದಿದ್ದು, ಅಗ್ರಹಾರ ಸ್ಥಳದ ಹೆಸರು ನಮೂದಾಗಿಲ್ಲದಿರುವುದು ಹಲವಾರು ಸಂದೇಹಗಳಿಗೆ ಎಡೆಯುಂಟುಮಾಡಿದೆ. ಸುರಗಿರಿ ಸಿದ್ಧೇಶ್ವರ ದೇವರೆಂಬ ಉಲ್ಲೇಖ ಇರುವುದರಿಂದ ಅದನ್ನು ಈಗಿನ ದಾವಣಗೆರೆ ಜಿಲ್ಲೆ ಚನ್ನಗಿರಿ ತಾಲೂಕಿನ ಸೂಳೆಕೆರೆಯ ದಡದ ಮೇಲಿನ ಸಣ್ಣ ಬೆಟ್ಟದ ಮೇಲಿರುವ ಸಿದ್ಧೇಶ್ವರ ದೇವರೆಂದು ಗುರುತಿಸಿ ಅದರ ಅಂಗಭೋಗ, ರಂಗಭೋಗ, ಔಪಾಸನೆ ಇತ್ಯಾದಿ ಸೇವೆಯೊಂದಿಗೆ ದೇವಸ್ಥಾನದ ಜೀರ್ಣೋದ್ಧಾರಕ್ಕೆ ಬೊಂತೆಯ ವಾನರಾಸಿ ಗುರುಗಳ ಕಾಲು ತೊಳೆದು ಅಷ್ಟಗ್ರಾಮಗಳನ್ನು ದಾನಕೊಟ್ಟಿರುವ ಶಾಸನ ಇದೊಂದು ಹೇಳಬಹುದಾಗಿದೆ. ಕಾರಣವೆಂದರೆ:

೧. ಶಾಸನದಲ್ಲಿ ಸುರಗಿರಿ ಪರ್ವತ ಎಂದು ಉಲ್ಲೇಖಿಸಿರುವ ಪ್ರದೇಶವನ್ನು ಕರ್ನಲ್ ಮೆಕೆಂಝಿ ಅವರು ತಮ್ಮ ಸೂಳೆಕೆರೆ ಕೈಫಿಯತ್ತಿನಲ್ಲಿ ಸೂಳೆಕೆರೆ ಸಿದ್ಧೇಶ್ವರ ದೇವಸ್ಥಾನ ಇರುವ ಬೆಟ್ಟವನ್ನು ಸುರಗಿರಿ ಎಂದು ಕರೆದಿರುವುದು.

೨. ಶಾಸನದಲ್ಲಿ ಉಲ್ಲೇಖಿಸಿದ ಸ್ಥಳದ ಚಕ್ಕಬಂದಿಯಂತೆ ಬಡಗದಿಕ್ಕಿನಲ್ಲಿ ಮೈರಾಮನ ಹಡಿ, ಲಕ್ಷ್ಮಸಾಗರ ಬೆರಳಂಗೆರ್ರಿ, ಮುಗ್ಗತ್ತೇನ ಹಡಿಯೂ ಟೆಂಕಲು ಬಿಲದೋಣಿ ಕಲುಸಾಗರ ಹರಿದ್ರಾಹಡಿ ಎಂಬದಾಗಿದ್ದು ಸದರಿ ಸೂಳೆಕೆರೆ ಗುಡ್ಡದ ಉತ್ತರಕ್ಕೆ ಇರುವ ಚನ್ನಗಿರಿ ತಾಲೂಕಿನ ರಾಮಸಾಗರವೇ ಶಾಸನದಲ್ಲಿ ಉಲ್ಲೇಖಿತ ಮೈರಾಮನ ಹಡಿ ಲಕ್ಷ್ಮಸಾಗರ ಈಗಿನ ಲಕ್ಷ್ಮಿಸಾಗರ, ಬೆರಳಂಗೆರ್ರಿ ಈಗಿನ ಬೆಳಲಗೆರೆ, ಕತ್ತಲಂಗೆರ್ರಿ ಈಗಿನ ಕತ್ತಲಗೆರೆ ಮುಗ್ಗತ್ತೇನ ಹಡಿ ಈಗಿನ ಹೊನ್ನಾಳಿ ತಾಲೂಕಿನ ಮುಕ್ಕೇನಗಳ್ಳಿ ಎಂದು ದಕ್ಷಿಣಕ್ಕೆ ಇರುವ ಬಿಲದೋಣಿ ಅಂದರೆ ಚನ್ನಗಿರಿ ತಾಲೂಕಿನ ಈಗಿನ ಬಿಲ್ಲಹಳ್ಳಿ, ದೋಣಿಹಳ್ಳಿ ಎಂಬ ಅಕ್ಕಪಕ್ಕ ಗ್ರಾಮಗಳ ಕಲುಸಾಗರ ಎಂದರೆ ಈಗಿನ ಕಂಸಾಗರವೂ ಹರಿದ್ರಾಹಡಿ ಎಂದರೆ ಈಗಿನ ಸೂಳೆಕೆರೆಹಳ್ಳ ಹರಿದ್ರಾಹಳ್ಳ ಎಂದು ಗುರುತಿಸಬಹುದಾಗಿದೆ.

೩. ಸದರಿ ಸೂಳೆಕೆರೆಯಲ್ಲಿ ಸಿದ್ಧೇಶ್ವರ ದೇವಾಸ್ಥಾನವಿದ್ದು ಅದರ ವಾಸ್ತುಶಿಲ್ಪ ಹೊಯ್ಸಳ ಮಾದರಿಯಲ್ಲಿಯೇ ಇದೆ. ಮೆಕೆಂಝಿ ಕೈಫಿಯತ್ತಿನಂತೆ ಆ ದೇವಾಲಯವನ್ನು ಹೊಯ್ಸಳ ಬಲ್ಲಾಳ ರಾಜ್ಯವಾಳುತ್ತಿರುವಾಗ ಅವನ ವಂಶ ಸಂಬಂಧಿಯಾದ ವಿಕ್ರಮರಾಯನೆಂಬವನು ಈ ಸ್ಥಳ ನೋಡಿ ಅಲ್ಲಿ ಪಟ್ಟಣಕಟ್ಟಿ ಅದಕ್ಕೆ ಸ್ವರ್ಗಾವತಿ ಎಂದು ಹೆಸರಿಟ್ಟು, ಅಲ್ಲಿನ ವಾಲ್ಮೀಕದಲ್ಲಿದ್ದ ಸಿದ್ಧೇಶ್ವರ ದೇವಸ್ಥಾನ ಗುರುತಿಸಿ ದೇವಾಲಯ ನಿರ್ಮಿಸಿದನೆಂದು ತಿಳಿಸುತ್ತದೆ. ನಂತರ ಆತನೂ ಮಗಳು ಶಾಂತವ್ವೆ ಅಲ್ಲಿ ಒಂದು ಕೆರೆ ಕಟ್ಟಿಸಿದಳು. ಆಕೆ ಅಕ್ರಮವಾಗಿ ಓರ್ವ ದೇವತೆಯೊಂದಿಗೆ ಸಂಪರ್ಕ ಬೆಳಸಿ ಗಳಿಸಿದ ಹಣದಿಂದ ಕೆರೆ ನಿರ್ಮಿಸಿದ ಕಾರಣ ಜನರು ಆಕೆಗೆ ಸೂಳೆ ಎಂದು ಕರೆದರೆಂದು ಮುಂದೆ ಆ ಕಾರಣ ಆ ಕೆರೆ ಸೂಳೆಗೆರೆ ಎಂದು ಹೆಸರಾಯಿತೆಂದು ಅಲ್ಲಿನ ಸ್ಥಳೀಯ ಚರಿತ್ರೆ ತಿಳಿಸುತ್ತದೆ. ನಮ್ಮ ರಾಜ್ಯದಲ್ಲೇ ಅತಿದೊಡ್ಡದಾದ ಈ ಕೆರೆ ಹಾಗಾಗಿ ಅಲ್ಲಿ ಕಟ್ಟಿಸಿದ ಸ್ವರ್ಗಾವತಿ ಪಟ್ಟಣವನ್ನೇ ಅದು ಮುಳಗಡೆ ಮಾಡಿತು. ಹಾಗಾಗಿ ಅಲ್ಲಿ ಜನವಸತಿ ಇಲ್ಲ ಈಗಲೂ ಅಲ್ಲಿ ಜನ ವಾಸಿಸುತ್ತಿಲ್ಲ ಆದರೆ ಈ ಶಾಸನ ಅದೊಂದು ಅನಾದಿ ಅಗ್ರಹಾರವಾಗಿತ್ತೆಂದು ತಿಳಿಸುತ್ತದೆ.

೪. ಕೈಫಿಯತ್ತಿನಲ್ಲಿ ಸ್ವರ್ಗಾವತಿ ಪಟ್ಟಣದಲ್ಲಿ ೨೦೦ ಅಗ್ನಿಹೋತ್ರಿ ಬ್ರಾಹ್ಮಣರು ೧೦೦೦ ಅಧ್ಯಾಪಕರು ಅಲ್ಲಿ ನೆಲೆಸಿದ್ದರೆಂದು ಉಲ್ಲೇಖವಿದೆ. ಆದ್ದರಿಂದ ಸುರಗಿರಿಯ ಅನಾದಿ ಅಗ್ರಹಾರ ಈ ಪ್ರದೇಶದೇ ಎಂಬುದು ಸ್ಪಷ್ಟ.

ಅಲ್ಲಿರುವ ಲಿಂಗ ಹರಿಹರಾತ್ಮಕವೆಂದು ಶಾಸನ ಉಲ್ಲೇಖಿಸುತ್ತದೆ. ಆದರೆ ಅಲ್ಲಿರುವ ಲಿಂಗದ ಮೇಲೆ ಹಸುವಿನ ಹೆಜ್ಜೆಯ ಗುರುತುಗಳಿದ್ದಂತಿದ್ದು ಅದು ಲಿಂಗಕ್ಕೆ ಹಾಲೆರೆದ ಹಸುವಿನ ಗೊರಸುಗಳ ಗುರುತೆಂದು ಹೇಳಲಾಗುತ್ತದೆ ಈಗ ಅದನ್ನು ಕೇವಲ ಸಿದ್ಧೇಶ್ವರ ಸ್ವಾಮಿ ಲಿಂಗ ಎಂದು ಮಾತ್ರ ಕರೆಯಲಾಗುತ್ತಿದೆ.

ಹೊಯ್ಸಳರ ಹೆಚ್ಚಿನ ಶಾಸನಗಳಂತೆ ಕಾಳಾಮುಖ ಪಂಥದ ಬೊಂತೆಯ ವಾನರಾಸಿಗುರುಗಳಿಗೆ ಈ ಶಾಸನದ ಸ್ಥಳಗಳನ್ನು ದೇವಸ್ಥಾನದ ಪೂಜಾವಿಧಿಗಳಿಗಾಗಿ ದಾನ ಕೊಡಲಾಗಿದೆ.

ಗದಗ ಜಿಲ್ಲೆಯ ಇಟಗಿಯ ಒಂದು ಶಾಸನ ಹೊಂಬಳದ ಪ್ರಖ್ಯಾತ ಮುನಿ ಬೊಂತಿದೇವರ ಶಿಷ್ಯ ಮಲ್ಲಿಕಾರ್ಜುನಯ್ಯನನ್ನು ಉಲ್ಲೇಖಿಸುತ್ತದೆ. ಕ್ರಿ.ಶ.೧೦೫೪ರ ಈ ಶಾಸನದಿಂದ ಬೊಂತಿದೇವರು ಅಂದಿನ ದಿನಗಳಲ್ಲಿ ಪ್ರಸಿದ್ಧ ಗುರುಗಳಾಗಿದ್ದು, ದೊಡ್ಡಶಿಷ್ಯರ ಪಡೆಯನ್ನೇ ಹೊಂದಿದ್ದರೆಂದು ತಿಳಿದು ಬರುತ್ತದೆ. ಕ್ರಿ.ಶ. ೧೧೮೯ರ ಹೊಂಬಳರ ಇನ್ನೊಂದು ಶಾಸನ ಇವರ ಶಿಷ್ಯ ರುದ್ರಶಕ್ತಿದೇವರು ಹೊಂಬಾಳದಲ್ಲಿ ಕುಮಾರ ಬೊಂತೇಶ್ವರ ಗುಡಿಯನ್ನು ನಿರ್ಮಿಸಿದ್ದನ್ನು ತಿಳಿಸುತ್ತದೆ. ಈ ಶಾಸನದಲ್ಲಿ ಉಲ್ಲೇಖಿತ ಬೊಂತೆ ವಾನರಾಸಿಗುರುಗಳು ಇಟಗಿಯ ಬೊಂತೆಯಗುರುಗಳ ಶಿಷ್ಯರಾಗಿರುವ ಸಂಭವ ಹೆಚ್ಚಾಗಿದೆ. ಇಟಗಿಯ ಶಾಸನದ ಕಾಲವು ಈ ಶಾಸನದ ಉಲ್ಲೇಖಿತ ಕಾಲಮಾನಕ್ಕೆ ಸರಿಹೊಂದುವುದನ್ನು ಗಮನಿಸಬಹುದಾಗಿದೆ. ಈಗಿರುವ ಸೂಳೆಕೆರೆಯ ದಂಡೆಯ ಮೇಲೆ 'ಇಟಗಿ' ಎಂಬ ಗ್ರಾಮ ಒಂದಿದ್ದು ಅದು ಇನ್ನಷ್ಟೂ ಕುತೂಹಲ ತರುತ್ತದೆ.

ಸೂಳೆಕೆರೆಯ ಸಿದ್ಧೇಶ್ವರ ದೇವಸ್ಥಾನದ ಸಮೀಪ, ಭದ್ರಾ ನಾಲಾ ತೆಗೆಯುವ ಸಂದರ್ಭದಲ್ಲಿ ಬಹುಶಃ ಕಾಳಾಮುಖ ಪಂಥದ ಗುರುಗಳ ಪೂಜಾಸಾಮಗ್ರಿಗಳು ಸಮಾಧಿಗಳೂ ದೊರೆತ ಬಗ್ಗೆ ಪ್ರಾಚ್ಯವಸ್ತು ಇಲಾಖಾ ವರದಿ ತಿಳಿಸುತ್ತದೆ.

ಶಾಸನದ ನಕಲಿನಲ್ಲಿ ತಿಥಿಕಾಲ ಸೂಚಿಸುವ ಭಾಗ ತ್ರುಟಿತವಾಗಿದೆ. ಬಹುಶಃ ಈ ಶಾಸನ ಶಕ ೧೧೧೨ನೇ ಸಾಧಾರಣ ಸಂವತ್ಸರದ ವೈಶಾಖ ಶುದ್ಧ ಪೌರ್ಣಿಮ ಸೋಮವಾರ ಆಗಿರುವ ಸಾಧ್ಯತೆ ಇವೆ.

ಈ ಶಾಸನದಲ್ಲಿ ಉಲ್ಲೇಖಿತ ಪ್ರದೇಶಗಳ ಸನಿಹ ಗ್ರಾಮಗಳಲ್ಲೂ ಉಚ್ಚಂಗಿ ಪಾಂಡ್ಯರ, ಆಸಂದಿ ಗಂಗರ ಬೆಳಗುತ್ತಿ ಸಿಂಧರ, ಯಾದವರ ಕಾಲದ ಅನೇಕ ಶಾಸನಗಳಿದ್ದು ಬಹುಶಃ ಅವರೆಲ್ಲರ ಮೇಲೆ ವೀರಬಲ್ಲಾಳ ಪ್ರಭುತ್ವ ಸಾಧಿಸಿರುವ ಹೆಗ್ಗುರುತಾಗಿ ಈ ಶಾಸನ ಹಾಕಿಸಿರುವ ಸಾಧ್ಯತೆ ಇದೆ. ಉಲ್ಲೇಖಿತ ಕತ್ತಲಗೆರೆ ಪಕ್ಕದ ಗ್ರಾಮವಾದ ಕಾರಿಗನೂರಿನಲ್ಲಿ ಹೊಯ್ಸಳ ವೀರಬಲ್ಲಾಳನ ಒಂದು ಶಿಲಾಶಾಸನ ಇರುವುದನ್ನು ನಾವು ಗಮನಿಸಬೇಕು.

ಕ್ರಿ.ಶ. ೧೧೯೯ರಲ್ಲಿ ಬೆಳಗುತ್ತಿ ಸಿಂಧ ಮುಮ್ಮಡಿ ಈಶ್ವರ ಬಂಡೇಳಲು ಇಮ್ಮಡಿ ಬಲ್ಲಾಳನ ಪಟ್ಟದ ರಾಣಿ ಉಮಾದೇವಿ ಗಂಡನ ಅನುಪಮ ಸ್ಥಿತಿಯಲ್ಲಿ ಸಿಂಧರನ್ನು ಸೋಲಿಸಿ ಈಗಿನ ಹೊನ್ನಾಳಿ ಪ್ರಾಂತ್ಯ ತನ್ನ ವಶಕ್ಕೆ ತೆಗೆದುಕೊಂಡದ್ದಾಗಿ, ಇತಿಹಾಸದ ದಾಖಲೆಗಳು ತಿಳಿಸುತ್ತವೆ. ಸೂಳೇಕೆರೆ ಹೊನ್ನಾಳಿಗೆ ಕೇವಲ ೨೫ಕಿ.ಮೀ. ದೂರ ಇದ್ದು, ಆಗ ಈ ಪ್ರಾಂತವೂ ಹೊಯ್ಸಳರ ಅಧೀನದಲ್ಲಿತ್ತೆಂಬುದಕ್ಕೆ ಇದು ಬಲವಾದ ಆಧಾರವಾಗಿವೆ.

ಸೂಳೆಕೆರೆಯಲ್ಲಿರುವ ದೇವಸ್ಥಾನದ ನಿರ್ಮಾಣ ಮತ್ತು ಅಲ್ಲಿನ ಕೆರೆ ಕಟ್ಟಿಸಿದ ಬಗ್ಗೆ ಹೆಚ್ಚಿನ ಮಾಹಿತಿಯುಳ್ಳ ಶಾಸನ ವೊಂದು ಶಾಂತಮ್ಮನವರ ತೂಬಿನ ಬಳಿ ಹೂತುಬಿದ್ದಿದೆ, ಎಂದು ಸೂಳೆಕೆರೆ ಕೈಫಿಯತ್ತು ತಿಳಿಸುತ್ತದೆ. ಅಲ್ಲದೆ ಹಾಲಿ ಸಿದ್ದೇಶ್ವರ ದೇವಸ್ಥಾನದ ಮುಂದೆಯೂ ಎರಡು ಮೂರು ಕಲ್ಲುಗಳು ಸುಣ್ಣ-ಬಣ್ಣ-ಎಣ್ಣೆ ಬಳಿದುಕೊಂಡು ಓದಲು ಬರುವಂತಿಲ್ಲ. ಬಹುಶಃ ನಾನು ಮಂಡಿಸುತ್ತಿರುವ ಶಾಸನದ ಮೂಲ ಶಿಲಾ ಶಾಸನ ಇವುಗಳಲ್ಲಿ ಒಂದಾಗಿರುವ ಸಾಧ್ಯತೆ ಇದೆ. ಇದನ್ನು ಇನ್ನಷ್ಟು ಸಂಶೋಧನೆಗಳಿಂದ ದೃಢಪಡಿಸಿಕೊಳ್ಳಬೇಕಾಗಿದೆ.

ಒಟ್ಟಿನಲ್ಲಿ ಮೇಲ್ಕಂಡ ಎಲ್ಲ ಅಂಶ ಗಮನಿಸಿದಾಗ ಇದೊಂದು ನೈಜ ಶಾಸನದ ನಕಲೆಂದು ಗುರುತಿಸಬಹುದಲ್ಲದೇ ಇದು ಸೂಳೆಕೆರೆ ಸಿದ್ಧೇಶ್ವರ ದೇವಾಸ್ಥಾನಕ್ಕೆ ಸಂಬಂಧಪಟ್ಟ ಶಾಸನ ಎಂಬ ತೀರ್ಮಾನಕ್ಕೆ ಬರಬಹುದಾಗಿದೆ.

ಈ ಶಾಸನ ಪತ್ತೆಯಿಂದ ದಾವಣಗೆರೆ ಜಿಲ್ಲೆಯಲ್ಲಿ ಇಮ್ಮಡಿ ಬಲ್ಲಾಳನ ಶಾಸನಗಳ ಸಂಖ್ಯೆ ಸದ್ಯ ೧೬ಕ್ಕೆ ಹೆಚ್ಚಿದ್ದು ಹೊಯ್ಸಳ ಇತಿಹಾಸಕ್ಕೆ ಒಂದು ಹೊಸ ಸೇರ್ಪಡೆಯಾಗಿದೆ. ಈವರೆಗೆ ದಾವಣಗೆರೆ ಜಿಲ್ಲೆಯಲ್ಲಿ ೪೬ ಹೊಯ್ಸಳರ ಶಾಸನ ಗುರುತಿಸಲ್ಪಟ್ಟಿದೆ.

(ಈ ಶಾಸನದ ಪ್ರಾಚೀನ ಹಸ್ತಪ್ರತಿ ಒದಗಿಸಿಕೊಟ್ಟ ನಿವೃತ್ತ ಪ್ರಾಚಾರ್ಯ ಎಸ್.ಟಿ. ಶಿವಪ್ಪನವರಿಗೂ ಇದರ ಶುದ್ಧ ಪ್ರತಿ ಸಿದ್ಧಪಡಿಸಲು ನೆರವಾದ ಚಿತ್ರದುರ್ಗದ ಸಂಶೋಧಕ ಡಾ॥ ಬಿ. ರಾಜಶೇಖರಪ್ಪನವರಿಗೆ ಈ ಪ್ರಬಂಧ ಮಂಡನೆಗೆ ಅನೇಕ ಸಲಹೆ ಸೂಚನೆಗಳಲ್ಲದೆ ಹಲವಾರು ದಾಖಲೆ ಒದಗಿಸಿಕೊಟ್ಟ ಡಾ॥ ಎಂ.ಜಿ. ನಾಗರಾಜ್, ಡಾ॥ ಕೆಳದಿ ವೆಂಕಟೇಶ್ ಜೋಯಿಸ್, ಗ್ಯಾಸೆಟಿಯರ್ ಇಲಾಖೆಯ ಸಂಪಾದಕ ಎಸ್. ರಾಜೇಂದ್ರಪ್ಪ ಇವರಿಗೆ ನನ್ನ ಕೃತಜ್ಞತೆಗಳು.)

## ಶಾಸನ ಪಾಠ

ನಮಸ್ತುಂಗ ಶಿರಶ್ಚುಂಬಿ । ಚಂದ್ರಚಾಮರ ಚಾಶವೆ।
ತ್ರೈಲ್ಲೋಕ್ಯನಗರಾರಂಭ ಮೂಲಸ್ತಂಭಾಯ ಶಂಭವೇ
ಸ್ವಸ್ತಿ ಸಮಸ್ತ। ಭುವನಾಶ್ರಯಂ ಶ್ರಿ ಪುಥ್ವಿ ವಲ್ಲ
ಭಂ । ಮಹಾರಾಜ್ಯಧಿರಾಜ । ರಾಜಪರಮೇಶ್ವರಂ।
ಯಾಚಕ ಜನ ಕಲ್ಪ ಉಕ್ಷ । ಯಾದವ ಕುಲಾಂಬರ
ದ್ಯುಮಣಿ । ಸಂಯುಕ್ತ ಚೂಡಮಣಿ । ಮಲೆರಾಜ
ರಾಜ । ಮಲಪರೊ[ಳ್ಗ]ಂಡಾ । ಕದನ ಪ್ರಚೆಂಡ । ಶನಿ
ವಾರ ಸಿದ್ಧಿ ಗಿರಿದುರ್ಗಮಲ್ಲ । ಚಲದಂಕ ರಾಮ ವೈ
ರೀಭ ಕಂಠಿರವಂ । ಮಗದ ರಾಜ್ಯ ನಿರ್ಮೂಲನಂ ।
ಚೊಳರಾಜ್ಯ । ಪ್ರತಿಷ್ಟಚ್ಯಾಯ್ಯ ನಂ ।ಶ್ರಿ ಮತ್ಪ್ರ
ತ್ತಾಪ ಚಕ್ರವರ್ತಿ ಹೊಯಿಸಳ ವಿರ ಬಲ್ಲಾಳದೆವ।
ಚೊಳನಾಡ ಪಂಪಾನೆಲೆವಿಡಿನೊಳ್ । ದುಷ್ಟನಿಗ್ರ
ಹಃ । ಸಿಷ್ಟ ಪ್ರತ್ತಿ ತಾಲನಂ । ನಿಜ ರಾಜಧಾನಿ
ದೊರಸಮುದ್ರದೊಳ್ ವಿಜಯ ರಾಜ್ಯ । ಮುತ್ತರೊ
ತ್ತರಾಭಿ ಪ್ರುಥವಿ ಪ್ರವರ್ಥಮಾನ । ಮಾಚಂದ್ರಾರ್ಕ
ತ್ತಾರಂಬರಂ। ಸಲುತ್ತಮಿರೆ। ಅಲ್ಲಿಗೆ ಅಲ್ಲಿಗೆ ಶಕ ವರುಷ
೧೧೧೨ನೆಯ ಸಾಧಾರರ್ಣ ಸಂವತ್ಸರದ ವೈಶಾಖ [ಸು]
ಸೊಮವಾರದಂದು ನೊಣಂಬು ಆ.......
ಸೂರ್ಯ್ಯ ಧರ್ಮ ಸಿರೊ ಮಣಿಪ । ಶ್ರಿ ಮುತ್ತು
ಜನಮೆಜಯ ದೆವ ಪತಿಯಾದ । ಅನಾದಿ

ಅಗ್ರಹಾರಂ ಸುರಗಿರ್ರಿಯ ಹರ್ರಿಹರಾತ್ಮಕ
ಶ್ರೀ॥ ॥ ಸಿದ್ದೇಶ್ವರ ದೇವರ್ರಗೆ ಅಂಗಬೊಗ ರಂಗ
ಭೊಗ ಖಂಡಸ್ಪುಟಿತ ಜಿಪಾಸನಕಂ । ಯಾದೆ
ವರ ಆಗ್ರಾಸನಕಂ । ಮೂರ್‍ರು ಪತ್ತಿಗೆ ಉಂಟಾ
ಗಿ ಜಿರ್ನೊರ್ಧಾರಕವೆಂದು । ಬೊಂತ್ತೆಯ ಪಾಲಿ
ರಾಸಿ । ಗುರುಗಳ ಕಾಲಂ ಕರ್ಚಿ । ಧಾರಾ ಪೂರ್ವ್ವಕಂ
ಮಾಡಿ ಬಿಟದ । ಸುರಗಿರ್ರಿಯ ಬಿಡಗಲು
ಮೈರಾಮನ ಹಡಿ ೧ । ಲಕ್ಷಸಾಗರ ೧ ಬೆರಳಂಗೆರ್ರಿ
ಯಂ । ಕತ್ತಲಿಂಗೆರ್ರಿಯಂ । ಮುಗ್ಗತ್ತೆನಹಡಿ।
ಯಾ ಟೆಂಕಲು ಬಿಲಡೊಣಿಯಂ । ಯಾ ಟೆಂ
ಕಲು । ಕಲುಸಾಗರ । ಮಾಟೆಂಕಲು ಹರ್ರಿದ್ರಾ
ಹಡಿ ಮುಖ್ಯ ಅಷ್ಟಗ್ರಾಮಂ । ಯಲೆಯ ಹೆ
ರ್ರಿಂಗೆ ವಿಸ ಯಾ ಧರ್ಮಮಂ । ಮುಂನ್ನೊಬ್ಬರು ದೇವ
ರ ಶ್ರಿ ಕಾರ್‍ಯ್ಯವ ನಡ್ಸು ವರ್‍ರು॥
ಪ್ರಿಯದಿಂದ್ದಿತ್ತಿದ । ನೈದೆ ಕಾಯ್ದ ಪುರುಷಂ
ಆಯುಂ । ಜಯಂ ಶ್ರಿ ಯುಮಃ ತೈದುದಂ।
ಕಾಯಿದೆ । ಕಾಯದ ಪಾಪಿಗೆ ಕುರುಕ್ಷೇತ್ರಂಗಳು
ಳ್ । ವಾರಣಾಶಿಯೊಳ್ ಕೊಟಿ ಮುನಿಂದ್ರರಂ। ಕಪಿ
ಲೆಯಂ । ವೆದಾಡ್ಯರಂ । ಕೊಂದುದೊಂದು । ಯಶಶಂ
ಪುೆರ್ದುಗೆಮೆಂದು । ಸಾರ್ರಿದ ವಿಶೆಷ ವಾಕ್ಯಮಂ
ಧರ್ರಿಯೊಳ್ ॥
ಸ್ವದತ್ತ। ಪರದತ್ತಂ ವ್ವಾ । ಯೊ ಹರೆತ್ತು। ವಸುಂಧ
ರಾ। ಷಷ್ಟಿರ್ವರ್ರುವ ಸಹಸ್ರಾಣಿ'। ಯಿಷ್ಟಾಯಾಂ। [ಜಾ]
ಯತೆ ಕ್ರಿಯೆ ॥ ದಾನಂ ವ್ವಾ ಪಲಿನಂ । ವೇತ್ತಿ । ದಾನಾಶ್ರೆ
ಯೊನ । ಪಾಲನಂ । ರಾನಾ ಸ್ವರ್ಗ ಮವ್ವಾ ಪ್ನೊತ್ತಿ । ಪಾ
ಲನಾದಚ್ಯುತಂ ಪದಂ॥
ಶ್ರಿ ಮನಮಹ ಪಸಾಯಿತ ಪರಮ ವಿಶ್ವಾಸಿದೆಮರಸ
ನ ಬರಪ್ಪ । ಶ್ರೀ ಶ್ರೀ ಶ್ರೀ
॥ಸಂಕ್ರೊಜ ಹೊಯಿದ ಶ್ಯಾಸನಾ ॥ ಯಿವರ ಶ್ಯಾಸನ ಉ।
ನಲುಕುದರ್‍ರೆ ವಡಲಗೆರ್‍ರೆ ಬ್ರಂಹ್ಮೆಶ್ವ ದೆವರ್ರಿಗೆ ಬರ ಶಿ.......
ಕಾರ್ರಿಗನೊರಲು ಕಲಿನಾಥ ದೆವರ್ರಿಗೆ ಬರಶಿ ಕೊಟ ಕಲು..
ಯಿ ಯೆಂಟು ಗ್ರಾಮಉ ಸರ್ವಮಾಂನ್ಯ ಉತ್ತಾರವಾಗಿ
ನಡಿಯುವಂತ್ತೆಧರ್ಮ

ಶ್ಯಾಸನಕ್ಕೆ ದೆವಾತ್ತಾ ವಿನಿಯೊಗ ಪಥತ್ತಿಪಿವರಾ॥
ಪ್ರಾತಃ ಕಾಲ ಉಪದಿತ್ವರ್ರಿತ ಮದ್ರ ಅಭಿಷೆಕ ಪಂಚಾಮ್ರುತ
ಯು
ಕ್ತವಾಗಿ। ಮಧ್ಯಾಂನ ಕಾಲ ಯೆಕಾದಶವಾರ ರುದ್ರಾಭಿಷೆಕ
ಬ್ರಾಂಹರು
ಜನ ೧೧ ಉಪಾದಿವಂತ್ತರು ಸಹಸ್ಯನಾಮ ಉಪಾದಿ ಶ್ರಿ
ಸೂಕ್ತ ೧
ಪುರಷಸೂಕ್ತ ಬ್ರಾಂಹಣ ಉಪಾದಿ ೧ ಪೂರಣಿಕ ತ್ತಾಂತ್ರಿಕರು
೧ ಪವಮಾನಸೂಕ್ತ ಉಪಾದಿ ಮಂತ್ರ
ಪುರ್ವ ಉಪಾದಿ ೧ ಬ್ರಾಂಹ್ಮಣ ಪ್ರದಕ್ಷಣೆ ನಮಸ್ಕರ ಉಪಾದಿ
ಅರ್ಚಕ ಪರ್ರಿ
ಚಾರಕ ಜನ೨ ಅಮ್ರುತ ಪಡಿತ್ರಿಕಾಲ ನಯಿವೆದ್ಯ ಪಂಚಭಕ್ಷಯುಕ್ತ
ನಂದಾದಿಪಗಳು ॥ ಯಿದೆ ಪ್ರಕಾರ ಅಯನವರ ಪೂಜಾ
ಬಗ್ಯೆ
ಬ್ರಾಂಹ್ಮರ್‍ರು ಜನ ೫ ಯಿದರ ಹೊರ್ತು ನಿತ್ಯ ಕ್ರುತು ಫಲಪುರ್‍ರ್ವಗ
ಳ ಸಮರ್ಪಣೆ ನಿತ್ಯದಲು ಶಿವಕೂಟದಲ್ಲಿ ಬ್ರಂಹ್ಮರು ಅತ್ತಿಥಿ
ಅಭ್ಯೆ
ಗತ್ತಿಗಳಿಗೆ ಸದಾ ಅಂನ ಸಂತ್ತರ್ಪಣಾ। ವಿಸೆಷ ಕಟಲೆ ಜನಗಳು
।ಗುಢಿ ಕವಲದಾರ್‍ರು ಹುಲಗಾರ್‍ರು ಭೊವಿ ಜನಗಳು
ಬಜಂತ್ರಿವಾದ್ಯ
ದವರ್‍ರು ನಾಟಕಧಾರ್ರಿಗಳು ಯಿ ಪ್ರಕಾರ ವರುಷಂಪ್ರತ್ತಿ
ಸಂಬಳ ।
ನಿತ್ಯೊತ್ಸವಃ ಪಕ್ಷೊತ್ಸಹ ಮಾಸೊತ್ಸಹ ಕಟ್ಲೆಶ್ರಾವಣ
ಅಭಿಷೇಕ ನವರಾತ್ರಿ ಉತ್ಸವ ಕಾರ್ತ್ತಿಕ ಲಕ್ಷದಿಪೊತ್ಸಹ ಧನು
ರ್ಮ್ಮಾಸ ಪುಜಾ ಶಿವರಾತ್ರಿ ಯಾವ ಪೂಜಾ ರಥೋತ್ಸಹಾ ಯಿ
ಕಾ
ಲದಲು ವಸೆಷ ಬ್ರಾಂಹ್ಮರ ಸಂತರ್ಪಣೆ ಭೂರ್‍ರಿದಕ್ಷಣೆ ಸಂಭಾ
ವನೆ ಮುಂತ್ತಾಗಿ ಯಾಥಾ ವಿಹಿತವಾಗಿ ದೆವತ್ತಾ ಶೆವಯು
ನಡಿಯು
ತ್ತಯಿತ್ತು । ಯಿತಲಾಗಿ ದೆವತ್ತಾ ಸೆವಿಗೆ ನಡಿಯು
ವಂತ್ತಾದು ಯಿ ಸ್ತಳದಲ್ಲಿ ॥ ಯೆನಂದರ್‍ರೆ ॥
ಯಿ ಕೆರೆಂ ನಿರ್ಮಾಣವಾದದೆವತ್ತಾತ್ತ ಕೆರೆ ಯಿ ರಾಜ್ಯಕ್ಕೆ
ಪ್ರಜೆಗಳ ಜಿವನೊಪಾಯಕ್ಕೆ ದನಕರಗಳಿಗೆ ಸಹಾಯ ಕೆರೆ
ನಿರ್ರಿ

ನಿಂದ ಬದಕಿ ಯಿರ್ರುತ್ತಾರೆ ॥ ಯಿ ಸಿಮೆ ಪ್ರಜೆಗಳು ತಾಂಉ
ಮಾಡಿ ಬರುವಂತ್ತಾ ಬೆದಲು ನಿರವರ್ರಿಗೆ ಸಹ ತ್ತೇರುವ ಹಣಕ್ಕೆ
ದೇವರ್ರಿಗೆ ವರ್ತನೆ ವರಹಣಕ್ಕೆ ಹಾಗದ ಪ್ರಕಾರ ದೆವರ್ರಿಗೆ ಕೊ
ಡತ್ತಕ್ಕ ಮಾಮೂಲು ೧ ಆಟ ಆಡಿದ ಶಿಬಿಗೆ ಸಾವಿ
ರ ಣಕ್ಕೆ ಸಿ ದೆವರ ಪಟ ಯಂತ್ತ ವಂದು ಧರರ್ಣದ ಮೆರ್ರಿಗೆ
ಕೊಡುವಂತ್ತ ಮಾಮೂಲು ೧ ಅಮಾದಿ ಕೊರ್ರಿನೆರೆ ಅಂಗಳ
ದಲ್ಲಿ ಹಿಂದೆ ಸಹ ಖಂಡಗ೧ಕ್ಕೆ ಸಿಡೆದೆವರ ಕೊಳಗ ಯಂತ್ತಾ
ಅಂಬಾರ ರಾಶಿಯಲ್ಲು ವಂದು ಕೊಳಗದ ಮೆರ್ರಿಗೆ ಬಿರ್ರುವ
ಮಾಮೂಲೆ ೧ ಯಿ ದೆವರ್ರಿಗೆ ಜಹರ್ರಿಯಲಿ
ಜಪ್ತಯಲ್ಲಿ ಸದಾ ಕೆಲಉ ಭೂಮಿ ಯಿರ್ರುತದೆ। ಯಿದರ
ಸಾಗವಳಿ ಆಗಿ ಹುಟಿದ ಹಣ ಸಿಮೆಯಿಂದ ಬರತಕ್ಕಂ[ತ್ತಾ]
ಹಣ ಸಹ । ಸರಕಾರ ಮುಖಾಂತ್ರ ವಸೂಲು ಮಾಡಿಶಿ ದೆವತ್ತಾ
ಸೆವೆ ಅರ್ಚಿಕ ೧ ಪರ್ರಚಾರ್ರಿಕ ೧ ಗುಡಿಕಾವಲ ಆಳು ೧ ಬಜಂತ್ರಿ ಜನ೧
ವಾದ್ಯದವ ೧ ಭೊವಿ ಜನ ೧ ಮಶ್ಯಾಲಜ ೧ ಯಿ ಜನರ್ರುಗ್ರಳಿಗೆ
ಸಂಬಳಉ ಸಲುತ್ತಯಿತ್ತು । ವಿಸೆಷ ಮಾಸೊತ್ಸವ ಧರ್ಮ
ಅಮ್ರುತ ಪಢಿ ನಂದಾದಿಪಾ ಶ್ರಾವಣ ಮಾಸದಲು ಹರಿನೊಂ[ರು]
ಜನ ಬ್ರಾಂಹ್ಮರು ನಿತ್ಯಾ ಯೆ ಕಾದಶ ರುದ್ರಾಭಿಷೆಕ ಪಂಚಾ..
ಅಭಿಷೇಕ ಯಿವರ್ರಿಗೆ [ಸಂಭಾ]
ವನೆ ಸಲುತ । ನವರಾತ್ರೆ ಉತ್ಸವ ಕಾರ್ತಿಕದಲ್ಲಿ ಲಕ್ಷ ।
ದಿಪಾರಾಧನ ಬ್ರಾಂಹ್ಮಣ ಸಂತ್ತರ್ಪಣಾ ಧನುರ್ಮಾಸ
ಪೂಜ ಶಿವರಾತ್ರೆ ಯಲು ಯಾಮಪೂಜಾ ಕೊಡಲೆ ರ
ಥೊತ್ಸಹ ತಾಂತ್ರಿಕಗೆ ಸಹ। ಯಿ ತ್ತತ್ತತ್ಕಾಲಗಳಲ್ಲಿ ಬ್ರಾಂ
ಹ್ಮರ ಸಂತ್ತರ್ಪಣೆ ವಿಸೆಷವಾಗಿ ನಡೆದು ಅವರ್ರಿಗೆ ಭೂ
ರ್ರಿ ದಕ್ಷಣೆ ಸಂಭಾವನೆ ಸಹ ಸಲುತ್ತ । ಯಿ ಉತ್ಸವಕಾಲದ
ಲ್ಲಿ ಸಿಮೆ ಪರ್ರಿಷೆ ಜನ ಬಂದಂತ್ತವರ್ರಿಗೆ ಯರಡು
ಮಾರ್ರು ದಿವ್ಸ ಪರ್ರಿಯಾಂತ್ರದಲ್ಲು ದಾಸೊಗ ನಡಿ
ಯುತ್ತ ಯಿ ರ್ರಿತ್ತಿಯಲು ದೆವತ್ತಾಸೆವಿಯು ನಡೆದು ಬಿ
ಂದದರ್ರಿದ ಸಿಮೆ ಸುಭಿಕ್ಷವಾಗಿ । ಪ್ರಬಾಕ್ಷೆಮವಾ
ಗಿ ಹಿಗೆ ನಢಿಯುತ ಯಿರುವಲ್ಲಿ । ಯಿತಲಾಗಿ । ಸಂನ್ ೧೮೪೨ನೆ
ಯಿಸವಿ ಹಜರತ ಟೊಕ್ಸ ಸಾಹಬಿ ಬಹದರು ಮತಲೊಟ ಸಾಹೆ
ಬ ಬಹದರವರ ಕಾಲದವರ್ರಿಗು ಯಿ ರೈತರಿಂದ ಬರತಕ್ಕ ಮಾಮೂ
ಲು ವರ್ತನೆ ಹಣಉ ಸರಕಾರ ಮುಖಾಂತ್ರ ಶೆಕದಾರ ಶ್ಯಾನುಭಾಗರ
ಮಾರ್ರ್ರಿಫತ ವಸೂಲು ಆಗಿ ಯಿದ ಮಟದಲ್ಲಿ ದೆವರ ಸೆವೆ ನಡಿ
ತ್ತು ಯಿಗ ರೈತರು ಕೊಡುವ ವರ್ತನೆ ಹಣಕ್ಕೆ ॥



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎಪಿಗ್ರಾಫಿಯಾ ಆಫ್ ಕರ್ನಾಟಕ., (ರೈಸ್ ಆವೃತ್ತಿ), ಸಂತುರ (ಶಿವಮೊಗ್ಗ ಮತ್ತು ಕಡೂರು ಜಿಲ್ಲೆಗಳಲ್ಲಿ)
೨. **ಕರ್ನಾಟಕದ ಕೈಫಿಯತ್ತುಗಳು.,** (ಸಂ) ಡಾ॥ ಎಂ.ಎಂ. ಕಲಬುರ್ಗಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೩. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ ೧,** ಡಾ॥ ಎಂ.ಎಂ. ಕಲಬುರ್ಗಿ, ಕನ್ನಡ ವಿಶ್ವವಿದ್ಯಾಲಯ, ಹಂಪಿ
೪. **ಕನ್ನಡ ವಿಷಯ ವಿಶ್ವಕೋಶ.,** ಮೈಸೂರು ವಿಶ್ವವಿದ್ಯಾಲಯ, ಮೈಸೂರು
೫. ಪ್ರೊ॥ ಎಸ್.ಎ. ನಜುಂಡಸ್ವಾಮಿ., **ಹೊಯ್ಸಳರ ಇತಿಹಾಸ**
೬ ಎಸ್. ರಾಜೇಂದ್ರಪ್ಪ., 'ಇಟಗಿಯ ಪ್ರಾಚ್ಯಾವಶೇಷಗಳು' : **ಸತ್ಯಶುದ್ಧಕಾಯಕ,** ೧೯೯೨, ಚಿತ್ರದುರ್ಗ
೭. **ಸತ್ಯಶುದ್ಧಕಾಯಕ.,** ಮೇ–ಆಗಸ್ಟ್ ೧೯೯೧, (ಸಂ) ಡಾ॥ ಬಿ. ರಾಜಶೇಖರಪ್ಪ
೮. AR SIE 1952-53 No. 102.
೯. ಎಸ್.ಟಿ. ಶಿವಪ್ಪ., **ಪ್ರಾಚೀನ ಹಸ್ತ ಪ್ರತಿ**
೧೦. **ಸೂಳೆಕೆರೆ ಸಾಹಿತ್ಯ**–ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರು ಲಗತ್ತು: ಶಾಸನದ ನಕಲು ಪುಟಗಳು

ಡಾ. ಡಿ.ವಿ. ಪರಮಶಿವಮೂರ್ತಿ*

# ಗುಳ್ಳದಮನೆಯ ಅಪ್ರಕಟಿತ ಶಾಸನ

ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿನ ಒಂದು ಸಣ್ಣ ಹಳ್ಳಿ – ಗುಳ್ಳದಮನೆ. ಕೆಲವು ತಿಂಗಳ ಹಿಂದೆ ಈ ಗ್ರಾಮದ ಪಶ್ಚಿಮಕ್ಕಿರುವ ಸಿದ್ಧಪ್ಪನವರ ಹೊಲವನ್ನು ಉಳುಮೆ ಮಾಡುವಾಗ ಒಂದು ಸುಂದರವಾದ ಪಾರ್ಶ್ವನಾಥ ವಿಗ್ರಹ ಮತ್ತು ಒಂದು ಶಿಲಾಶಾಸನ ದೊರೆಯಿತು. ಇವುಗಳ ಪರಿಶೀಲನೆಗಾಗಿ ಜಿಲ್ಲಾ ಆಡಳಿತವು ಜೈನ ವಿದ್ವಾಂಸರು ಮತ್ತು ನನ್ನ ಗುರುಗಳಾದ ಪ್ರೊ. ಹಂಪನಾ ಅವರನ್ನು ಆಹ್ವಾನಿಸಿತ್ತು. ಅವರ ದೆಸೆಯಿಂದ ಶಾಸನದ ಪರಿಶೀಲನೆಗಾಗಿ ಅವರ ಜೊತೆಯಲ್ಲಿ ನಾನೂ ಹೋಗುವ ಸುವರ್ಣ ಅವಕಾಶ ದೊರೆಯಿತು. ಆರಂಭದಲ್ಲಿ ತ್ರುಟಿತವಾಗಿರುವ ಈ ಶಾಸನವು ಅಪ್ರಕಟಿತವಾಗಿದ್ದು ಅದರ ವಿವರ ಈ ಕೆಳಕಂಡಂತಿದೆ.

ಹೊಯ್ಸಳ ದೊರೆ ಒಂದನೇ ನರಸಿಂಹನ ಅವಧಿಯ ಈ ಶಾಸನವು ೪೩ ಸಾಲುಗಳಿಂದ ಕೂಡಿದ್ದು ಸುಂದರವಾದ ಲಿಪಿಯನ್ನು ಹೊಂದಿದೆ. ಶಾಸನವು ಎರಡೂವರೆ ಅಡಿ ಅಗಲ ಮತ್ತು ಆರು ಅಡಿ ಎತ್ತರವಾಗಿದೆ. ಇದರಲ್ಲಿ ಕಾಲವನ್ನು ಸಕವರ್ಷದ **೧೦೮೪ ನೆಯ ಚಿತ್ರಭಾನು ಸಂವತ್ಸರದಂದು ಉತ್ತರಾಯಣ ಸಂಕ್ರಾಂತಿ ವ್ಯತಿಪಾತಂ ಸೋಮಗ್ರಹಣ ಆದಿವಾರದಂದು** .... ಎಂದು ನೀಡಿದೆ. ಇದು **ಕ್ರಿ ಶ. ೧೧೬೨, ಅಕ್ಟೋಬರ್ ೨೩, ಭಾನುವಾರಕ್ಕೆ** ಸರಿಹೊಂದುತ್ತದೆ. ಆರಂಭದಿಂದ ೨೫ನೇ ಸಾಲಿನವರೆಗೂ ಪ್ರಶಸ್ತಿ ಭಾಗವೇ ಇದ್ದು ಅನಂತರ ದಾನದ ವಿಷಯವಿದೆ. ಇದೊಂದು ಶೈವಶಾಸನವಾಗಿದ್ದು ಸರ್ವಾಧಿಕಾರಿ ಕಲಿಬಣ್ಣಗಳ ತಮ್ಮನಾದ ಮಹಾದೇವಣ್ಣನ ಸಮ್ಮುಖದಲ್ಲಿ ಗುಳ್ಳದಮಾನೆಯ ನಾಗಗೌಡ ಮತ್ತು ಕಾಳವ್ವೆಗೌಡಿಯರ ಮಗನಾದ ಕೇತಗೌಡನು ಮೂಲಸ್ಥಾನದ ಮಲ್ಲಿಕಾರ್ಜುನ ದೇವರಿಗಾಗಿ ಆ ದೇವಾಲಯದ ಆಚಾರ್ಯನಾದ ಶಿವಶಕ್ತಿಜೀಯರ ಕಾಲನ್ನು ತೊಳೆದು ಗ್ರಾಮದ ಹಲವು ಕಡೆ ಗದ್ದೆ, ಹೊಲ, ತೋಟಗಳನ್ನು ದಾನವಾಗಿ ನೀಡಿದ ವಿಷಯವಿದೆ. ಇಲ್ಲಿ ಉಲ್ಲೇಖವಾಗಿರುವ ಹೊಯ್ಸಳ ಅರಸ ಒಂದನೇ ನರಸಿಂಹನು ಕ್ರಿ.ಶ. ೧೧೫೧ರಿಂದ ೧೧೭೩ರವರೆಗೆ ರಾಜ್ಯವನ್ನಾಳಿದನೆಂದು ಇತಿಹಾಸಕಾರರು ನಿರ್ಧರಿಸಿರುವರು. ಆದರೆ ಇವನು ಸುಖಲೋಲುಪನೂ ಅಸಮರ್ಥನೂ ಆಗಿದ್ದನು. ಸಾಹಿತ್ಯ ಪೋಷಕನಾಗಿದ್ದ ಈತನ ಆಸ್ಥಾನದಲ್ಲಿ ಕವಿ ಸುಮನೋಬಾಣ ಮತ್ತು ಹರಿಹರಕವಿ ಇದ್ದರು. ಕ್ರಿ.ಶ. ೧೧೭೩ರಲ್ಲಿ ಇಮ್ಮಡಿ ಬಲ್ಲಾಳನು ತನ್ನ ತಂದೆಯ ವಿರುದ್ಧವೇ ಬಂಡೆದ್ದು ರಾಜ್ಯವನ್ನು ವಶಪಡಿಸಿಕೊಂಡನು. ಆದರೆ ಶಾಸನದಲ್ಲಿ ನರಸಿಂಹನನ್ನು ಸಾಂಪ್ರದಾಯಿಕ ಬಿರುದು ಬಾವಲಿಗಳೊಡನೆ ವೀರನೆಂದೇ ಹೊಗಳಿದೆ.

ಶಾಸನದಲ್ಲಿ ಉಲ್ಲೇಖವಾಗಿರುವ ಮೂಲಸ್ಥಾನದ ಮಲ್ಲಿಕಾರ್ಜುನ ದೇವಾಲಯದಲ್ಲಿ ತಪೋಧನರು ವಾಸವಾಗಿದ್ದರೆಂದು ಶಾಸನದಿಂದ ತಿಳಿದುಬರುತ್ತದೆ. ಇಲ್ಲಿನ ಆಚಾರ್ಯನಾದ ಶಿವಶಕ್ತಿಜೀಯರನ್ನು ಶಾಸನದಲ್ಲಿ **ಯಮನಿಯಮ ಸ್ವಾಧ್ಯಾಯಧ್ಯಾನಧಾರಣಮೋನಾನುಷ್ಠಾನ ಜಪ ಸಮಾಧಿ ಸೀಲಗುಣ ಸಂಪನ್ನರೆಂದು** ಹೊಗಳಿದೆ.

ಈ ಶಾಸನದಿಂದ ತಿಳಿದುಬರುವ ಕೆಲವು ಮುಖ್ಯ ವಿಷಯಗಳು ಕೆಳಕಂಡಂತಿವೆ :

೧ ಒಂದನೇ ನರಸಿಂಹನನ್ನು ಶಾಸನದಲ್ಲಿ ವಿಶೇಷವಾಗಿ ಹೊಗಳಿದೆ.

೨ ಇವನ ಹೊಗಳಿಕೆಯ ಭಾಗದಲ್ಲಿ ಹಲಸಿಗೆ, ಬೆಳುವಲ ಮುನ್ನೂರು, ಪುಲಿಗೆರೆ, ಲೊಕ್ಕಿಗುಂಡಿ, ಸಿಂಗಮಲೆ, ರಾಯಪುರಂ, ತಲಕಾಡು, ರೊದ್ದ, ಉಚ್ಚಂಗಿ, ವೆಲ್ಲೂರು, ಬಳ್ಳಾರೆ, ಗೊಬ್ಬೂರುಗಳ ಉಲ್ಲೇಖವಿದೆ.

೩ ಮಹಾಪ್ರಧಾನಿ, ಮಹಾಪಸಾಯಿತ, ಅಂಗರೀಕರಧಿಷ್ಠಾಯಕ, ಸರ್ವಾಧಿಕಾರಿ, ಕಲಿಬಣ್ಣಂಗಳ ತಮ್ಮ ಮಹಾದೇವಣ್ಣಂಗಳು ಮಾಡಿದ ದಾನವೆಂದು ಹೇಳಿದೆ.

೪ ಇವರ ಜೊತೆ **ಗುಳ್ಳದಮಾನೆಯ** ನಾಗಗೌಂಡ ಮತ್ತು ಕಾಳವ್ವೆಗೌಂಡಿಗೆ ಜನಿಸಿದ ಸುಪುತ್ರ ಕುಲದೀಪಕನಾದ

* ಪ್ರವಾಚಕರು/ಮುಖ್ಯಸ್ಥರು, ಶಾಸನಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬.

**ಕೇತಗೌಂಡನೂ** ಸೇರಿ ದಾನ ನೀಡಿದ ವಿಷಯವಿದೆ. ಇಲ್ಲಿ ಉಲ್ಲೇಖವಾಗಿರುವ ಗುಳ್ಳದಮಾನೆಯೆಂಬ ಸ್ಥಳವೇ ಈಗಿನ ಗುಳ್ಳದಮನೆಯೆಂಬ ಊರಾಗಿದೆ. ಇಲ್ಲಿ ಗುಳ್ಳ ಎಂಬ ಪದವು ಸಸ್ಯವಾಚಕವಾಗಿದ್ದು ಮಾನೆ ಯೆಂಬ ಪದವು ಮಾನ(ಅಳತೆ)ವನ್ನು ಸೂಚಿಸುತ್ತದೆ. ಅಂದರೆ ಸಸ್ಯ ಅಥವಾ ಅಳತೆಯ ಸೂಚಕದಿಂದ ಗುಳ್ಳದಮನೆಯೆಂಬ ಹೆಸರು ಬಂದಿದೆಯೆಂದು ತೋರುತ್ತದೆ. 'ಮಾನ' ಶಬ್ದವು ಮಾನ್ಯ(ದಾನ)ದಿಂದಲೂ ಬಂದಿರುವ ಸಾಧ್ಯತೆಯನ್ನೂ ತೆಗೆದುಹಾಕುವಹಾಗಿಲ್ಲ.

೫ ದಾನ ನೀಡಿರುವ ಭೂಮಿಯನ್ನು **ಗಂಗನಗಳೆ** ಎಂಬ ಅಳತೆಯ ಕೋಲಿನಲ್ಲಿ ಅಳೆದು ದಾನ ನೀಡಿದೆ. ಈ ಹೆಸರಿನ ಅಳತೆ ಬೇರೆಶಾಸನದಲ್ಲಿ ಇದೂವರೆಗೂ ದೊರೆತಿಲ್ಲ. ಇದು ಗಂಗರ ಕಾಲದಿಂದಲೂ ಬಳಕೆ ಯಲ್ಲಿರುವ ಅಥವಾ ಗಂಗನೆಂಬ ವ್ಯಕ್ತಿಯು ಹೆಸರಿನಲ್ಲಿರುವ ಅಳತೆಗೋಲಾಗಿದೆ.

೬ ದಾನದ ರೂಪವಾಗಿ ಒಟ್ಟು ೧೦೧ ಮತ್ತರು ಭೂಮಿಯನ್ನು ನೀಡಿದೆ.

೭ ಯಾವ ಯಾವ ದಿಕ್ಕಿನಲ್ಲಿ ಭೂಮಿಯನ್ನು ದಾನವಾಗಿ ನೀಡಿದೆಯೆಂದು ಶಾಸನದಲ್ಲಿ ಗಡಿಮೇರೆಗಳನ್ನು ವಿವರವಾಗಿ ನೀಡಿದೆ.

೮ ಶಾಸನದ ಕೊನೆಯಲ್ಲಿ ಸಾಂಪ್ರದಾಯಿಕವಾದ ಶಾಪಾಶಯವಿದೆ.

೯ ಅಂತಿಮದಲ್ಲಿ **ಶಾಸನಮಿದಾರು**. . . . .ಎಂಬ ಅಪರೂಪದ ಶ್ಲೋಕವಿದೆ

ಒಟ್ಟಾರೆಯಾಗಿ ಈ ಶಾಸನದ ಶೋಧನೆಯಿಂದ ಒಂದನೇ ನರಸಿಂಹನ ಮತ್ತೊಂದು ಶಾಸನ ಮತ್ತು ಗುಳ್ಳದಮನೆ ಗ್ರಾಮದ ಮೊದಲ ಶಾಸನವೊಂದು ಬೆಳಕಿಗೆ ಬಂದಂತಾಗಿದೆ. ಹೊಯ್ಸಳರ ಅವಧಿಯಲ್ಲಿ **ಗಂಗನಗಳೆ**ಯೆಂಬ ಅಳತೆಯ ಕೋಲೊಂದು ಇತ್ತೆಂದು ಮೊದಲಬಾರಿಗೆ ತಿಳಿದುಬಂದಿದೆ.

* *

## ಶಾಸನದ ಪೂರ್ಣ ಪಾಠ

೧ @ ಸ್ವಸ್ತಿ ॥ ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೇ ತ್ರೈ

೨ ಲೋಕ್ಯ ನಗರಾರಂಭ ಮೂಲ ಸ್ತಂಬಾಯ ಶಂಭವೇ॥

೩ ಸ್ವಸ್ತಿ ಸಮಧಿಗತ ಪಂಚ ಮಹಾಶಬ್ದ ಮಹಾ ಮಂಡಳೇಶ್ವರಂ ದ್ವಾ



೪ ರಾವತೀ ಪುರವರಾಧೀಶ್ವರಂ ಯಾದವಕುಳಾಂಬ ರದ್ಯುಮಣಿ ಸಂಯುಕ್ತ ಚೂಡಾ

೫ ಮಣಿ ಮಲಪರೊಳು ಗಣ್ಡ ಗಣ್ಡ ಪ್ರ. . . . . . . . . . . . . . . . . . . ರ್ಮ್ಮಳ

೬ ಪರಿ . . . . . . . . . . . . . ಕದನೈಕ . . . . . . . . . . . . . . . . . .

೭ ರ . . . . . .ಗಂ. . ರ. . . . . . . . . . . . . . . . . . . . . . . . . .

೮ ಳ . . . . .ಪಾಡಲೆ ಸವಿಸ್ತವಾಕ್ಯ . . . ನಾದ . . . . . . . . . . . . . . .

೯ ಳಾಚಂದ್ರಾರ್ಕ್ಕ ಸಾಹಸೋತ್ತುಂಗ . . . . . . . . . . . . . . . . . . . . .

೧೦ ಪ್ರಶಸ್ತಿ ಸಹಿತ ಶ್ರೀಮನ್ಮಹಾ ಮಂಡಳೇಶ್ವರಂ ತ್ರಿಭುವನಮಲ್ಲ . . . . . . . . .

೧೧ ಹೊಯ್ಸಳದೇವರು ಕೊಂಗು ನಂಗಲಿ ತಳಕಾಡು . . . . . . . . . . . . . . .

೧೨ ಉುವಲ ನೊಣಂಬವಾಡಿ . . . . ಯಾಗಿ ದೋರಸಮುದ್ರದ ನೆಲೆವೀಡಿನೊಳು

೧೩ ದುಷ್ಟನಿಗ್ರಹ ಶಿಷ್ಟ ಪ್ರತಿಪಾಳನಂಗೆಯ್ದು ಸುಖ ಸಂಕಥಾ ವಿನೋದದಿಂ . . . . . .

೧೪ ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾಚಂದ್ರಾರ್ಕ ತಾರಂ ಸಲುತ್ತಮಿರೆ

೧೫ . . . . . . . . . . . .ಸೂಜನರ್ಪ . . . . . . . . . . . . . . ಸೇವು

೧೬ ಙ ರಾಜ್ಯ ದಕ್ಷಿಣ . . ಕೊಳ್ಳು ಚಲ್ವಿನಿಂ . . . ಳಿತ . ದೇಯಂ . . . ತಿ . ಬಣದೇವ .

೧೭ ನಾಂ ತನ್ನಾಜ್ಞೆಯೀಟಿ ದಿಶಾ ಚಕ್ರಮನೊತ್ತಿಕೊಣ್ಡು ತಳಕಾಡುಂ ಗಂಗರಾಜ್ಯಕ್ಕೆ

೧೮ ತಾಂ ಮೊದಲಾದಂ ಯದುವಂಶವರ್ಧನಕರಂ ಶ್ರೀವಿಷ್ಣು ಭೂಪಾಳಕಂ ॥ . . ನೀ . . . .

೧೯ ಯೆ . ದೊಳುಂ ಮಲೆ ಕಂಚಿ . . . . . ಖ . ಅಭಯ . ನಾವನು . . . . . . . . . . .

೨೦ ಆ . . ಪದಿಂದ ಕೊಂಡ ವಿಷ್ಣುವರ್ಧನ ಹೊಯ್ಸಣದೇವನು ॥ ಹಲಸಿಗೆ ಬೆಳುವಲ ಮು

೨೧ ನ್ನೂರು ಪುಲಿಗೆರೆ ಆ ಲೊಕ್ಕುಗುಂಡಿ . . . . ದೋ . . . . .ವೆರಕ ಕಲಿಗಳ ನೆ

೨೨ ತ್ತರನು . . . . . ಬಲಕೊಂಡು ವಿಷ್ಣುವರ್ಧನ ಹೊಯ್ಸಣದೇವನು ॥ ನಂಗಲಿ ಕೊಂಗು ಸಿಂ

೨೩ ಗಮಲೆ ರಾಂಯುಪುರಂ ತಳಕಾಡು ರೊದ್ದ ಮಾಚೆಂಗಿರಿವಾಶ ಉಚ್ಚಂಗಿ ವಲ್ಲೂರು

೨೪ ಬಳ್ಳರೆ ಗೊಬ್ಬೂರು ವೇರಕ ಕಲಿಗಳನೆ ತಗು . . . . ಬಲದಿಂ ಕೊಂಡ ವಿಷ್ಣುವರ್ಧನ ಹೊ

೨೫ ಯ್ಸಣ ದೇವರು ॥ ಸ್ವಸ್ತಿ ಶ್ರೀ ಮಹಾಪ್ರಧಾನಂ ಮಹಾಪಸಾಯಿತಂ ಅಂಗರೀಕರಧಿಷ್ಠಾ

೨೬ ಯಕಂ ಸರ್ವಾಧಿಕಾರಿ . . . . ಕಲಿಬಣ್ಣಂಗಳ ತಮ್ಮ ಮಹಾದೇವಣ್ಣಂ

೨೭ ಗಳು ಬಿಟ್ಟಧರ್ಮ । ಸ್ವಸ್ತಿ ಶ್ರೀಮತು **ಗುಳ್ಳದಮಾನೆಯ ನಾಗಗೌಂಡಂಗಂ ಕಾಳ**

೨೮ **ವ್ವೆ ಗೌಂಡಿಗಂ** ಪುಟ್ಟಿದ **ಸುಪುತ್ರ ಕುಲದೀಪಕನಪ್ಪ ಕೇತಗೌಂಡನುಂ**ಮಿರ್ದು ಸಕವ

೨೯ ರ್ಷದ ೧೦೮೪ **ನೆಯ ಚಿತ್ರಭಾನು ಸಂವತ್ಸರದಂದು ಉತ್ತರಾಯಣ ಸಂಕ್ರಾಂತಿ**

೩೦ ವ್ಯತಿಪಾತಂ **ಸೋಮಗ್ರಹಣ ಆದಿವಾರದಂದು** ಶ್ರೀ **ಮೂಲಸ್ತಾನದ ಮಲ್ಲಿಕಾರ್ಜು**

೩೧ **ನ ದೇವರ** ಅಂಗಭೋಗಕ್ಕು ಚೈತ್ರ ಪವಿತ್ರಕಂ ತ್ರಿಕಾಲ ಪೂಜೆ ನೀವೇದ್ಯಕಂ ಜೀ

೩೨ ರ್ಣ್ಣೋದ್ಧಾರಕ್ಕಂ ತಪೋಧನರ ಆಹಾರದಾನಕ್ಕಂ ಮೆಂದು ಸ್ವಸ್ತಿ ಯಮನಿಯಮ ಸ್ವಾದ್ಯಾ

೩೩ ಯಧ್ಯಾನ ಧಾರಣಮೋನಾನುಷ್ಟಾನ ಜಪ ಸಮಾಧಿ ಸೀಲಗುಣ ಸಂಪನ್ನರುಮಪ್ಪ ಸಿ

೩೪ **ವಶಕ್ತಿಜೀಯರ** ಕಾಲಂ ಕರ್ಚ್ಚಿ ದಾರಾಪೂರ್ವಕಂ ಮಾಡಿ ಬಿಟ್ಟ ದತ್ತಿ । ಶಿವಾಲಯದಿಂ ಬಡ

೩೫ ಗಲು ಊರಿಂ ತಲೆಯ ಗದ್ದೆ ಗಂಗನಗಳೆಯಲು ಕಂಬ ಐವ್ವತು ತೆಂಕಲು ವೋಣಿಂದು ಹಗೆ ಮ

೩೬ ಧ್ಯದಲ್ಲಿ ನಟ್ಟಕಲ್ಲು ಅಲ್ಲಿಂದ ನೈರಿತ್ಯದಲಿ ನಟ್ಟ ಕಲ್ಲುಗಡಿ ಅಲ್ಲಿಂದ ಪಡುವಲು ಬದುಹು ಮೇರೆ ಆ

೩೭ ಗಿ ವಾಯುವ್ಯದ ನಟ್ಟ ಕಲ್ಲುಗಡಿ ಅಲ್ಲಿಂದಂ ಬಡಗಣ ವೋಣಿ ಬದುಹು ಮೇರೆ ಆಗಿ ಈಶಾ

೩೮ ನ್ಯದಲು ನಟ್ಟಕಲ್ಲು ಹುಟ್ಟಿದಜೆಯ ಗಡಿ ಅಲ್ಲಿಂದ ಮೂಡಲು ವೋಣಿ ಬದುಹು ಮೇರೆ ಆಗಿ ಆಗ್ನೇಯ

೩೯ ದಲು ನಟ್ಟ ಕಲ್ಲುಗಡಿ ಊರಿಂದ ಈಶಾನ್ಯದಲು ಬೆದ್ದಲೆ ಗಂಗನಗಳೆಯಲಿ ಕಂಬ ಐವ್ವತುಕಂ ಕ

೪೦ ಲ್ಲು ಹಿರಿವೋಣಿ ಬದುಹು ಮೇರೆ ಆಗಿ ನೈರಿತ್ಯದಲು ನಟ್ಟ ಕಲ್ಲುಗಡಿ ಪಡುವಲು ಭಂಡಿದಾರಿ ಬ

೪೧ ದುಹು ಮೇರೆ ಆಗಿ ವಾಯುವ್ಯದ ನಟ್ಟ ಕಲ್ಲುಗಡಿ ಅಲ್ಲಿಂದ ಬಡಗಲು ಬದುಹು ಮೇರೆ ಆಗಿ

೪೨ ಈಶಾನ್ಯದಲು ನಟ್ಟ ಕಲ್ಲುಗಡಿ ಅಲ್ಲಿಂದ ಮೂಡಲು ಬದುಹು ಮೇರೆ ಆಗಿ ಆಗ್ನೇಯದಲು ನಟ್ಟ

೪೩ ಕಲ್ಲು ಹುಟ್ಟಿದ ಬೆಣ್ಣಚಿಕಲ್ಲುಗಡಿ ಅನ್ತು ಗಂಗನಗಳೆಯಲು ಮತ್ತ ೧೦೦ ರೊಂದು

೪೪ ಸ್ವದತ್ತಂ ಪರದತ್ತಂ ವಾಯೋಹರೇತಿ ವಸುಂಧರಾಂ ಸಷ್ಟಿರ್ವರಿಷ ಸಹಸ್ರಾಣಿ ಮಿಷ್ಟಾಯಾಂ

೪೫ ಜಾಯತೇ ಕ್ರಿಮಿ: ॥ ದಯಯಿಂದಿಂತಿದನೆಯ್ದೆ ಕಾವ ಪುರುಷಂಗಾಯು ಶ್ರೀ

೪೬ ಯುಂಮಕ್ಕೆ ಇದಂ ಕಾಯದೆ ಕಾಯ್ದ ಪಾಪಿಗೆ ಕುರುಕ್ಷೇತ್ರಂಗಳೊಳು ವಾಣರಾಸಿಯೊಳು ಕೋಟಿ

೪೭ ಮುನಿಪ್ರರಂ ಕವಿಲೆಯಂ ವೇದಾಢ್ಯರಂ ಕೊಂದು ದೊಂದು ಯಸಂ ಸಾಜಿದಪುದೀಶೈಳಾಕ್ಷ

೪೮ ರ ಧಾತ್ರಿಯೊಳು ॥ ಸಾಸನಮಿದಾರುದೆಲ್ಲಿಯ ಸಾಸನಮಾರಿತ್ತರೇಕೆ ಸಲಿಸುವೆನೆಂ

೪೯ ಬಾ ಪಾಪಿ. . .ಳ ರೌರವಕ್ಕೆ ಗಳಗಳನಿಳಿಗುಂ ॥

(ಈ ಶಾಸನ ಶೋಧನೆಗೆ ಅವಕಾಶ ಮಾಡಿಕೊಟ್ಟ ಗುರುಗಳಾದ ಪ್ರೊ. ಹಂಪನಾ ಅವರಿಗೆ ಮತ್ತು ಗ್ರಾಮದ ಜನತೆಗೆ ನನ್ನ ಕೃತಜ್ಞತೆಗಳು)



ಡಾ. ಎಸ್.ಕೆ. ಮೇಲಕಾರ*
ಡಾ. ರು.ಮ. ಷಡಕ್ಷರಯ್ಯ**

# ಚಡಚಣದ ಅಪ್ರಕಟಿತ ಶಾಸನ (ಕ್ರಿ.ಶ. ೧೦೮೦-೧೦೮೧)

ಬಿಜಾಪೂರ ಜಿಲ್ಲೆಯ ಇಂಡಿ ತಾಲೂಕಿನಿಂದ ೩೫ ಕಿ.ಮೀ. ದೂರದಲ್ಲಿರುವ ಚಡಚಣ ಗ್ರಾಮವು ಒಂದು ಪ್ರಮುಖ ವಾಣಿಜ್ಯ ಕೇಂದ್ರವಾಗಿರುತ್ತದೆ. ಇಲ್ಲಿಯವರೆಗೆ ಚಡಚಣದಲ್ಲಿ ದೊರೆತ ಪ್ರಕಟಿತ ಶಾಸನಗಳಲ್ಲಿ ಮತ್ತು ಈಗ ದೊರೆತ ಹೊಸ ಶಾಸನದಲ್ಲಿ ಚಡಚಣ "ಚಟ್ಟ" "ತಾಣ"ವೆಂದು ಉಲ್ಲೇಖವಾಗಿದೆ. ಈ ಪ್ರಾಚೀನ ಸ್ಥಳವು ಬಿಜಾಪೂರದಿಂದ ಪಂಡರಾಪುರಕ್ಕೆ ಹೋಗುವ ಹೆದ್ದಾರಿಯಲ್ಲಿ ಬರುತ್ತಿದ್ದು ಮಂಗಳವೇಡೆಯಲ್ಲಿ ರಾಜ್ಯವಾಳುತ್ತಿದ್ದ ಬಿಜ್ಜಳನ ವಂಶಜರ ವಾಸಸ್ಥಳವೆಂದು ಪ್ರಸಿದ್ಧವಾಗಿದೆ. ಅಲ್ಲಮಪ್ರಭುಗಳು ಕ್ರಿ.ಶ. ೧೨ನೇ ಶಮಾನದಲ್ಲಿ ಈ ಭಾಗದಲ್ಲೆಲ್ಲಾ ಸಂಚರಿಸುತ್ತಾ ಚಡಚಣದಲ್ಲಿ ವಾಸ್ತವ್ಯ ಮಾಡಿದರೆಂದು ಹೇಳಲಾಗಿರುವ ಪರಮಾನಂದರ ಗುಡಿ ಇಲ್ಲಿರುವುದು. ಈ ದೇವಾಲಯದ ಸುತ್ತಲೂ ವೀರಗಲ್ಲುಗಳು ಸಪ್ತಮಾತೃಕೆಯರ ಭಗ್ನ ಶಿಲ್ಪಗಳು ಕಂಡುಬರುವವು.

ಕಲ್ಯಾಣ ಚಾಳುಕ್ಯರ ದೊರೆ ಮೊದಲನೆಯ ಸೋಮೇಶ್ವರನ ಕ್ರಿ.ಶ. ೧೦೫೭ರ ಭಗ್ನ ಶಾಸನವೊಂದು ಇಲ್ಲಿದ್ದು "ಬಿಜ್ಜರಸನಿಂದ ದೇವಾಲಯಕ್ಕೆ ಭೂಮಿ ಹಾಗೂ ಹಣ ದಾನ ಮಾಡಿದಂತೆ. ಧರ್ಮ ಭಟಾರಕರು ಸಹ ಈ ದೇವಾಲಯಕ್ಕೆ ಭೂದಾನ ಮಾಡಿದ ಬಗ್ಗೆ ಉಲ್ಲೇಖಿಸುವುದು".

ಕ್ರಿ.ಶ. ೧೦೬೭ರ ಇನ್ನೊಂದು ಶಾಸನ ಪರಮಾನಂದರ ದೇವಾಲಯದ ಪ್ರಾಕಾರದ ಗೋಡೆಗೆ ಕಟ್ಟಲಾಗಿರುವ ಕನ್ನಮರಸನ ಶಾಸನವು, "ಪ್ರಭು ರಾಜಚಟ್ಟನ ಮಗನಾದ ಪ್ರಭುದಾಸನು ನೀಡಿದ ಭೂದಾನ"ದ ಬಗ್ಗೆ ತಿಳಿಸುವುದು.

ಆ ಊರಿನ ಅಗಸೆ ಬಾಗಲಿಗೆ ಕಟ್ಟಲಾಗಿರುವ ಕ್ರಿ.ಶ. ೧೧೨೬-೨೭ರ ಭಗ್ನ ಶಾಸನದಲ್ಲಿ ಯಾದವ ಅರಸ ಸಿಂಘಣನು ಆಳ್ವಿಕೆಯ ಕಾಲಾವಧಿಯಲ್ಲಿ ಕ್ರಿ.ಶ. ೧೨೨೬-೨೭ರ ಭಗ್ನ ಶಾಸನದಲ್ಲಿ ಯಾದವ ಅರಸ ಸಿಂಘಣನು ಆಳ್ವಿಕೆಯ ಕಾಲಾವಧಿಯಲ್ಲಿ ಕ್ರಿ.ಶ. ೧೨೨೬-೨೭ರಲ್ಲಿ ನೀಡಿದ ದಾನಗಳ ಕುರಿತು ಉಲ್ಲೇಖವಿದೆ.

ಅದೇ ಅಗಸಿ ಬಾಗಿಲಿನಲ್ಲಿರುವ ಕ್ರಿ.ಶ. ೧೩ನೇ ಶತಮಾನದ ಶಾಸನ ಕಪಿಲಸಿದ್ಧ ಮಲ್ಲಿಕಾರ್ಜುನನಿಗೆ ಅರ್ಪಿಸಲಾದ ಸಿದ್ಧರಾಮನ ವಚನ ಕವಿಯ ಓಂ ಜಯ ಪರಮೇಶ್ವರ ಎಂದು ಆರಂಭವಾಗುವ ಪಾಠವನ್ನು ದಾಖಲಿಸಿದೆ.

ಇತ್ತೀಚೆಗೆ ಈ ಊರಿನ ಹನುಮಂತ ದೇವರ ಗುಡಿಯನ್ನು ಕೆಡವಿ ಅದನ್ನು ಮತ್ತೆ ಪುನಃ ಕಟ್ಟುವಾಗ ಅಲ್ಲಿ ಅಗೆದ ಬುನಾದಿಯಲ್ಲಿ ತುಣುಕು ಹೊಸ ಶಾಸನವೊಂದು ಪತ್ತೆಯಾಯಿತು.

ಹೊಸದಾಗಿ ಶೋಧವಾದ ಈ ಶಾಸನ ೨೭ ಸಾಲಿನದ್ದಾಗಿದ್ದು ಇದರಲ್ಲಿ "ಚಾಳುಕ್ಯ ವಿಕ್ರಮನ ೪ನೆಯ ಸಿದ್ದಾರ್ಥ ಸಂವತ್ಸರದ ವೈಶಾಖ ಅಮವಾಸ್ಯೆ ಬುಧವಾರ ವೃತ್ತ ರಾಯಣ ಸಂಕ್ರಾಂತಿ ಸೂರ್ಯಗ್ರಹಣ ಯತಿ ಪಾಥ ನಿಮಿತ್ಯಂ ಮಹಾಮಂಡಳೇಶ್ವರ ಜೋಗಮರಸರ ಮಗದೇವರು ಮಾಂಗಳವೆಡದ 'ಚಟ್ಟತಾಣ' ಸುಖ ಸಂಕಥಾ "ವಿನೋದದಿಂದ ರಾಜ್ಯಂಗೆಯತ್ತಮಿರೆ" ಎಂದಿದೆ.

ಮುಂದಿನ ಶಾಸನ ಸಾಲುಗಳು ಅಲ್ಲಲ್ಲಿ ತ್ರುಟಿತವಾಗಿವೆ. ನಂತರದ ಸಾಲುಗಳಲ್ಲಿ ಹಿಪ್ಪರಿದೊಳಗೆ ಬಿಟ್ಟ ಮತ್ತರು ೧೨ ಗದ್ಯಾಣ ಪೊನ್ನು ಕೊಂಡ ಬಿಟ್ಟ ಮತ್ತರು ೧೪ ಮೂಲೆಗೆ ಹೊಲದೊಳಗೆ ಕೊಳಗ ಗದ್ಯಾಣ ಒನ್ದ ಕೊಂಡುಬಿಟ್ಟ ಮತ್ತರು-೨೦. ಶಾಸನದ ಕೊನೆಗೆ ಸ್ವದತ್ತಂ ಪರದತ್ತಃ ವಾಯೆ ಹರತಿ ವಸುಂದರ ಷಷ್ಠಿ ವರ್ಷ ಸಹಸ್ರಾಣಿ ವಿಷ್ಟಾಯಾಂ ಜಾಯಿತೆ ಕ್ರಿಮಿಃ ಓ ಎಂದಿದೆ. ಹೀಗೆ ಮಂಗಳವೇಡೆಯ ನೆಲೆವೀಡಿನೊಳಗೆ ಬರುವ ಚಟ್ಟ-ತಾಣ ಮತ್ತು ಚಡಚಣದ ಹಿಪ್ಪರಿದೊಳಗೆ ಆಳ್ವಿಕೆ ಮಾಡಿದ ಮಹಾಮಂಡಳೇಶ್ವರ

* ಮ್ಯೂಜಿಯಂ ಕ್ಯೂರೇಟರ್, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೩.
** ನಿರ್ದೇಶಕರು, ಕನ್ನಡ ಸಂಶೋಧನ ಸಂಸ್ಥೆ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ – ೩.

ಜೋಗಮರಸು ಅಲ್ಲಿಯ ದೇವಾಲಯಕ್ಕೆ ದಾನದತ್ತಿ ಬಿಟ್ಟ ಬಗ್ಗೆ ಈ ಶಾಸನ ವಿವರಿಸುವುದು.

ಈ ಮುಂಚೆ ಪ್ರಸ್ತಾಪಿತವಾದ ಪರಮಾನಂದ ದೇವಾಲಯದ ಸುತ್ತುಗೋಡೆಯಲ್ಲಿಯ ಶಾಸನ ಕಲ್ಯಾಣ ಚಾಳುಕ್ಯ ಒಂದನೆಯ ಸೋಮೇಶ್ವರನ ಆಳ್ವಿಕೆಯ ೯೭೭ನೆಯ ಶಕ ವರ್ಷ ವಿಳಂಬ ಸಂವತ್ಸರ ಎಂದರೆ ೧೦೫೫ನೆಯ ಕ್ರಿಸ್ತವರ್ಷವನ್ನು ನಿರ್ದೇಶಿಸಿದೆ. ಈ ಶಾಸನ ಬಿಜ್ಜರಸನ ದತ್ತಿಯನ್ನು ಮತ್ತು "ಕಾಲಂಜರಪುರವರಾಧಿಪಂ ಸ್ವರ್ಣ ವೃಸಭದ್ವಜಂ (ಡಮರುಗ) ತೂರ್ಯನಿರ್ಘೋಂಕ್ಷಣಂ, ಡಹಳಬೆಡಂಗಂ, ಮತ್ತು ಕೀರ್ತಿನಾರಾಯಣಂ' ಎಂಬ ಬಿರುದನ್ನು ಉಲ್ಲೇಖಿಸುತ್ತಾ ಬಿಜ್ಜರಸನು ಮಂಗಳವೇಡದ ನೆಲೆವೀಡಿನೊಳ್ ಆಳುತ್ತಿರುವ ಬಗ್ಗೆ ಹೇಳಿದರೆ, ಇನ್ನೊಂದು ಶಾಸನ "ಕಳಿಂಗ ವೆಂಗಿ ಭುಜಂಗವೈನತೇಯ' ಲಾಳ, ಜೋಳ ಬಳೆ, ಜಳದಿ ಬಡವನಾಳ ಎಂಬ ಬಿರುದುಗಳುಳ್ಳ" ಕನ್ನಮರಸರು ತನ್ನ ಭುಜಬಲದಿಂದ ಐವತ್ತು ಕಾಳಗಗಳಲ್ಲಿ ಜಯವನ್ನು ಸಂಪಾದಿಸಿ ೧೨ ಜನ ಮನೆಯವರನ್ನು ಕೊಂದು ಹಾಕಿ ಮಂಗಳವೇಡ ನೆಲೆವೀಡನ್ನು ನಿಷ್ಕಂಟಕವಾಗಿ ಮಾಡಿದನೆಂದು ವರ್ಣಿಸಿದೆ. ಈ ಶಾಸನದ ಕಾಲ ಶಕವರ್ಷ ೯೮೮ನೇ ಸರ್ವಧಾರಿ ಸಂವತ್ಸರ, ಎಂದರೆ ಕ್ರಿ.ಶ. ೧೦೬೭. ಇಂಚು ಚಣಚಣ ಶಾಸನಗಳಲ್ಲಿ ಗೋಚರವಾದ ಬಿಜ್ಜರಸ ಯಾ ಕನ್ನಮರಸನು ಜೋಗರಸರ ತಂದೆ ಎಂಬುದಾಗಿ ನಮಗೆ ಗೊತ್ತಾಗುತ್ತದೆ.

ಈ ಹೊಸ ಶಾಸನದಲ್ಲಿ ಉಕ್ತವಾದ ಜೋಗರಸರ ತಂದೆ ಕನ್ನಮ ಅಥವಾ ಕೃಷ್ಣರಾಜನು ವೆಂಗಿ, ಲಾಳ, ಚೋಳ, (ಆಂಧ್ರ, ದಕ್ಷಿಣ ಗುಜರಾತ ಮತ್ತು ತಮಿಳುನಾಡು) ಮೊದಲಾದ ಪ್ರದೇಶಗಳಲ್ಲಿ ದಂಡಯಾತ್ರೆ ಮಾಡಿ ಜಯ ಸಾಧಿಸಿ ಪಿತ್ರಾರ್ಜಿತವಾದ ಮಂಗಳವೇಡದ ಒಡೆತನದ ಜೊತೆಗೆ ಬಿಜಾಪೂರ ಪ್ರದೇಶದ ಚಡಚಣ, ಹಿಪ್ಪರಗಿ ಭಾಗದ ಮೇಲಾಧಿಕಾರ ನಡೆಸುತ್ತಿದ್ದರೆಂದು ತಿಳಿದುಬರುವುದು.

ಒಟ್ಟಾರೆ ಹೇಳುವುದಾದರೆ ಈ ಚಡಚಣದಲ್ಲಿ ದೊರೆತ ೫೫ ಪ್ರಕಟಿತ ಶಾಸನಗಳ ಜೊತೆಗೆ ಇದೊಂದು ಹೊಸ ಶಾಸನವಾಗಿದ್ದು ಈ ಭಾಗದ ಹರಸೂರ ಬ್ಯಾಹಟ್ಟಿ, ಕೊಕಟನೂರು, ಶಾಸನಗಳ ಆಧಾರದಿಂದ ಜೋಗಮರಸರ ತಂದೆ 'ಕನ್ನಮರಸ' ಕೃಷ್ಣರಾಜನೆಂದು ಮತ್ತು ಬಿಜ್ಜರಸರು




ಎಂಬುದು ಅವನ ಬಿರುದುಗಳೆಂದೂ, ಗೆದ್ದ ಪ್ರದೇಶಗಳು ಅವರ ಉಪರಾಜಧಾನಿ ಮಂಗಳವೇಡದ ಉಲ್ಲೇಖಗಳು ಅವರ ಸಾಮ್ರಾಜ್ಯ ಗಡಿ ವಿಸ್ತಾರವನ್ನು ಮತ್ತು ಅವರ ಮನೆತನದ ಮೇಲೆ ಬೆಳಕು ಚಲ್ಲುವಲ್ಲಿ ಸಹಕಾರಿಯಾಗಿವೆ. ಅದೇ ರೀತಿ ಈ ಊರಲ್ಲಿ ಕಂಡುಬರುವ ವೀರಗಲ್ಲು ಪದ್ಮಾವತಿ, ಯಕ್ಷ, ಯಕ್ಷಿಶಿಲ್ಪಗಳು, ಪಾರ್ಶ್ವನಾಥ ವಿಗ್ರಹ, ಜೈನ ಬಸದಿ, ಗಣಪತಿ, ಶೈವಯತಿ, ಗಜಲಕ್ಷ್ಮೀ, ಸಪ್ತಮಾತೃಕೆಯರ ಜೋಡುಶಿಲ್ಪಗಳು, ಹನುಮಾನ ದೇವಾಲಯ, ಕಲ್ಯಾಣ ಚಾಲುಕ್ಯರ ಕಾಲದ ದೇವಾಲಯಗಳು ಚಡಚಣದ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡುವಲ್ಲಿ ಅಮೂಲ್ಯವಾದ ಆಕರ ಸಾಮಗ್ರಿಗಳಾಗಿವೆ. ಹೆಚ್ಚಿನ ಸಂಶೋಧನಾಧ್ಯಯನ ಈ ಭಾಗದಲ್ಲಿ ನಡೆಯಬೇಕಾಗಿದೆ.

(ಈ ಶಾಸನವು ಪತ್ತೆ ಆದ ಬಗ್ಗೆ ಚಡಚಣದ ಡಾ. ಎ.ಎಸ್. ಬಡಿಗೇರ, ಉಪನಿರ್ದೇಶಕರು, ಎ.ಎಸ್.ಐ. ಔರಂಗಾಬಾದ್ ಅವರು ತಿಳಿಸಿದರು. ಅವರಿಗೂ ನನ್ನ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಪಿ.ಬಿ. ದೇಸಾಯಿ., ಕಲಚೂರಿಗಳ ಶಾಸನಗಳ ಒಂದು ಅಧ್ಯಯನ.
೨. ಡಾ. ಶ್ರೀನಿವಾಸ ರಿತ್ತಿ., ಇನ್ಸ್ಕ್ರಿಪ್ಷನ್ ಫ್ರಂಮ್ ಸೊಲ್ಲಾಪೂರ ಡಿಸ್ಟ್ರಿಕ್ಟ್.
೩. ಡಾ. ಶ್ರೀನಿವಾಸ ರಿತ್ತಿ., ಇನ್ಸ್ಕ್ರಿಪ್ಷನ್ ಫ್ರಂಮ್ ನಂದೇಡ ಡಿಸ್ಟ್ರಿಕ್ಟ್.
೪. S.I.I.XX ಶಾಸನ ಸಂಖ್ಯೆ ೩೭, ೧೭೩, ೧೯೭, ೨೪೧, ೩೪೨.

ಹರಿಹರ ಶ್ರೀನಿವಾಸರಾವ್ *

# ವಿಠ್ಠಲಾಪುರದ ಭಿಷ್ಟಪ್ಪಯ್ಯನವರ ಮನೆತನದ ಎರಡನೇ ಅಪ್ರಕಟಿತ ಕಂಚಿನ ಶಾಸನ

ಗದಗ ಜಿಲ್ಲೆಯ ಮುಂಡರಗಿ ತಾಲ್ಲೂಕಿನ ಗ್ರಾಮ ವಿಠ್ಠಲಾಪುರವು ಹಂಪೆಯ ದ್ವಾರಗೋಪುರ ನಿರ್ಮಾತೃ ಶ್ರೀ ಭಿಷ್ಟಪ್ಪಯ್ಯನವರ ವಾಸಸ್ಥಾನ. ಅವರ ಮನೆತನದವರ ಒಡೆತನದಲ್ಲಿ ಶ್ರೀ ಪಾಂಡುರಂಗ ವಿಠ್ಠಲನ ದೇವಸ್ಥಾನವಿದೆ. ಈ ದೇವಸ್ಥಾನದಲ್ಲಿ ೩೫ ರಿಂದ ೪೦ ಕೆ.ಜಿ. ತೂಕದ ಪಾದರಸವನ್ನು ಒಳಗೊಂಡ 'ಚರ ರಸ ಲಿಂಗ' ಒಂದಿದೆ. ಲಿಂಗವನ್ನು ಸ್ಥಳಾಂತರಿಸಬಹುದಾದ ಕಂಚಿನ ಪೀಠದ ಮೇಲೆ ಇಟ್ಟಿರುತ್ತಾರೆ. 'ಕೂರ್ಮ-ಗಜ ಪೀಠ'ಗಳ ಸಂಗಮವೆನಿಸಿರುವ ಈ ಪೀಠದಲ್ಲಿ ಎರಡು ಶಾಸನಗಳನ್ನು ಕಂಡರಿಸಲಾಗಿದೆ. ಮೊದಲ ಶಾಸನವನ್ನು ಇತಿಹಾಸದರ್ಶನ ಸಂಪುಟ ೧೦/೧೯೯೫ ಪುಟ ೮೩ರಲ್ಲಿ ಪ್ರಕಟಿಸಲಾಗಿದೆ.[೧] ಈಗ ಪ್ರಕಟವಾಗುತ್ತಿರುವುದು ೨ನೇ ಕಂಚಿನ ಶಾಸನ.

**ಶಾಸನದ ಪಾಠ**

೧ ಪುರೋಹಿತ ಫಣಿ ಭ
೨ ಟ್ಟರಿಗೆ ಭತ್ತ ಖ ೨ ಪ್ರತಿ ವ
೩ ರುಷ ವರುಷ ಕೊಡ ಬೇ
೪ ಕು ವಿಶ್ವನಾಥಾರ್ಪಣಮಸ್ತು।
೫ ಕೋನಪ್ಪನ ಸದಾಸೇವೆ

ಈ ಶಾಸನದಲ್ಲಿ ೫ ಸಾಲುಗಳಿದ್ದು ಪುರೋಹಿತ ಫಣಿಭಟ್ಟರಿಗೆ ೨ ಖಂಡುಗ ಭತ್ತವನ್ನು ಪ್ರತಿ ವರುಷ ಕೊಡಬೇಕೆಂದು ಕೋನಪ್ಪನು ತಾನು ವಿಶ್ವನಾಥ ದೇವರಿಗೆ ಅರ್ಪಿಸಿ ದಾನ ನೀಡಿದ್ದಾನೆ.

**ಹಂಪೆಯ ದ್ವಾರಗೋಪುರ ನಿರ್ಮಾತೃ ವಿಠ್ಠಲಾಪುರದ ಭಿಷ್ಟಪ್ಪಯ್ಯ!**

ಇತ್ತೀಚೆಗೆ ಬಿಡುಗಡೆಯಾಗಿರುವ ಎಸ್.ಎಲ್. ಭೈರಪ್ಪನವರ 'ಆವರಣ' ಕಾದಂಬರಿ ಪುಟ ೭೦ರಲ್ಲಿ ಉಲ್ಲೇಖಿತವಾಗಿರುವ ಸಾಲುಗಳು :

ಹಂಪಿಯನ್ನಾಳಿದ ರಾಜರಲ್ಲಿ ಧರ್ಮಾಂಧತೆ ಇರಲಿಲ್ಲ ವೆಂಬುದಕ್ಕೆ ಈ ಕೆಳಗಿನ ಅಂಶಗಳು ಸಾಕ್ಷಿಯಾಗಿವೆ.

*೧. ವಿರೂಪಾಕ್ಷ ದೇವಾಲಯದ ರಾಯಗೋಪುರದ ನಿರ್ಮಾಪಕನು ವೈಷ್ಣವನಾಗಿದ್ದ ಕೃಷ್ಣದೇವರಾಯ....*

*ವಿರೂಪಾಕ್ಷ ದೇವಾಲಯದಲ್ಲಿ ಇಂದಿಗೂ ಪೂಜೆ ನಡೆಯುತ್ತಿದ್ದು ಅದು ಭಗ್ನವಾಗದೆ ಉಳಿದಿದ್ದರೆ ಹಂಪಿಯ ಮೂಲದೈವವನ್ನು ಉಳಿಸಿಕೊಳ್ಳಲು ಅಲ್ಲಿಯ ಜನ ಒಗ್ಗಟ್ಟಾಗಿ ಮುಸ್ಲಿಮರ ಸೇನೆಯ ವಿರುದ್ಧ ನಿಂತದ್ದು ಕಾರಣವಾಗಿರಬಹುದು.*

**ಪ್ರವೇಶ ಪುಟ ೨ :** *"ಈ ಕಾದಂಬರಿಯ ಐತಿಹಾಸಿಕ ವಿಷಯದಲ್ಲಿ ನನ್ನ ಸ್ವಂತದ್ದು ಏನೂ ಇಲ್ಲ. ಪ್ರತಿಯೊಂದು ವಿವರ ಅಥವಾ ನಡೆಗೂ ಇರುವ ಆಧಾರಗಳನ್ನು ಸಾಹಿತ್ಯದ ಕಲೆಯು ತಡೆದುಕೊಳ್ಳುವ ಮಟ್ಟಿಗೂ ಕಾದಂಬರಿಯ ಅಂಗವಾಗಿಯೇ ಅಳವಡಿಸಿದ್ದೇನೆ....*

**ಪುಟ ೬೯ :** *ನಾಯಕಿಯು ಪಕ್ಕದಲ್ಲಿದ್ದ ಗ್ರಂಥಗಳನ್ನು ನೋಡಿದಳು : ಶ್ರೀನಿವಾಸ ರಿತ್ತಿ ಮತ್ತು ಬಿ.ಆರ್. ಗೋಪಾಲ್: A History of Karnataka, ಎನ್. ವೆಂಕಟರಮಣಯ್ಯ : The Delhi Sultanate, ಸೂರ್ಯನಾಥ ಕಾಮತ್ : A Concise History of Karnataka, ಪಿ.ಬಿ. ದೇಸಾಯಿ : Karnataka Through the Ages ಹೀಗೆ ಇನ್ನೂ ಕೆಲವು ಗ್ರಂಥಗಳು.*

ಭೈರಪ್ಪನವರು 'ರಾಯ ಗೋಪುರ'ದ ನಿರ್ಮಾಪಕನು ವೈಷ್ಣವನಾಗಿದ್ದ ಕೃಷ್ಣದೇವರಾಯ ಈ ಕಾದಂಬರಿಯ ಐತಿಹಾಸಿಕ ವಿಷಯಗಳನ್ನು ವಿದ್ವಾಂಸರ ಅಭಿಪ್ರಾಯದ ಮೇರೆಗೆ ತೆಗೆದುಕೊಂಡಿರುವುದಾಗಿ ತಿಳಿಸಿದ್ದಾರೆ. ಆದರೆ

* 'ಸಮರ್ಥ' ೭೫/೧೫, ವಿಕಾಸ್ ಹೈಸ್ಕೂಲ್ ಎದುರು, ೫ನೇ ಬ್ಲಾಕ್, ೩ನೇ ಫೇಸ್, ಬನಶಂಕರಿ ೩ನೇ ಹಂತ, ಬೆಂಗಳೂರು-೫೮.

ಭಿಷ್ಟಪ್ಪಯ್ಯನೇ ಇದರ ಕರ್ತೃ ಎಂದು ಮುಂದಿರುವ ಅಂಶಗಳು ವಿದಿತಗೊಳಿಸುತ್ತವೆ.

೧. ಹಂಪಿಯ ಜನರು ಇದನ್ನು ಈಗಲೂ ಭಿಷ್ಟಪ್ಪಯ್ಯನವರು ಕಟ್ಟಿಸಿದ ಗೋಪುರವೆಂದೇ ಕರೆಯುತ್ತಾರೆ. ಇದನ್ನು ಈಗಿನ ಹಂಪೆ ವಿದ್ಯಾರಣ್ಯ ಪೀಠದ ಗುರುಗಳೂ ಒಪ್ಪಿರುತ್ತಾರೆ.

೨. ಭಿಷ್ಟಪ್ಪಯ್ಯನವರ ಮನೆತನದ ಜನರ ಪ್ರಕಾರ ಶ್ರೀ ವಿರೂಪಾಕ್ಷ ದೇವರ ದರ್ಶನಕ್ಕೆ ಪೂರ್ವ ಬಾಗಿಲಿನಿಂದ ಪ್ರವೇಶವಿರುವುದು ಎರಡು ಮನೆತನದವರಿಗೆ ಮಾತ್ರ. ಅ) ಆನೆಗೊಂದಿ ರಾಜಮನೆತನದವರಿಗೆ, ಆ) ಶ್ರೀ ಗುರು ಭಿಷ್ಟಪ್ಪಯ್ಯನವರ ಮನೆತನದವರಿಗೆ. ಉಳಿದ ಎಲ್ಲರಿಗೂ ಈಗಲೂ ದಕ್ಷಿಣ ದ್ವಾರದಿಂದ ಮಾತ್ರ ಪ್ರವೇಶ ಉಂಟು.

೩. ಅನಂತರಾವ್ ಆಪ್ಟೆ ಶಾಲಾ ಮಾಸ್ತರರು ಬರೆದಿರುವ **'ಹಂಪೆಯ ಶ್ರೀ ವಿರೂಪಾಕ್ಷ ದೇವಾಲಯದ ಗೋಪುರದ ನಿರ್ಮಾಪಕ ಶ್ರೀ ಭಿಷ್ಟಪ್ಪಯ್ಯನವರು'**[೨] ಎನ್ನುವ ಪುಸ್ತಕಕ್ಕೆ ಕನ್ನಡದ ಕುಲಪುರೋಹಿತರಾದ ಆಲೂರು ವೆಂಕಟರಾಯರು ಮುನ್ನುಡಿ ಬರೆಯುತ್ತಾ ಹೀಗೆ ಹೇಳಿದ್ದಾರೆ : (ಪು. ೪, ತಾ. ೨೦-೧೧-೧೯೬೨) "ಈ ಭಿಷ್ಟಪ್ಪಯ್ಯನವರ ಚರಿತ್ರೆಯಲ್ಲಿ ಬಂದಿರುವ ಅನೇಕ ಪವಾಡಗಳನ್ನು ನಂಬಿರಿ, ಬಿಡಿರಿ. ಆದರೆ ಲಕ್ಷ್ಮಾಂಬೆಯವರ ಬಲಿದಾನ ಮಾತ್ರ ಪವಾಡವಲ್ಲ. ೪೦-೫೦ ವರ್ಷಗಳ ಹಿಂದೆಯೇ ನಾನು ಹಂಪೆಯನ್ನು ನೋಡಲಿಕ್ಕೆ ಹೋದಾಗ ಇದು ಭಿಷ್ಟಪ್ಪಯ್ಯನವರ ಗೋಪುರವೆಂಬುದನ್ನು ಕೇಳಿದೆ. ಅಲ್ಲಿಯ ೨ನೇ ಅಂತಸ್ತಿನಲ್ಲಿರುವ ಲಕ್ಷ್ಮಾಂಬೆಯ ಶಿಲಾ ಮೂರ್ತಿಯನ್ನು ನೋಡಿದ್ದೆ. (ಆ ಶಿಲಾಮೂರ್ತಿಗೆ ಅನೇಕ ವರ್ಷಗಳಿಂದ ಸುಣ್ಣವನ್ನು ಬಳಿಯುತ್ತಾ ಬಂದಿದ್ದಾರೆ. ಆದ್ದರಿಂದ ಇಲ್ಲಿ ಕೊಟ್ಟಿರುವ ಅವರ ಫೋಟೋ ಚೆನ್ನಾಗಿ ಬಂದಿಲ್ಲ) ಅಲ್ಲದೆ, ಭಿಷ್ಟಪ್ಪಯ್ಯನವರ ಶಿಲಾಮೂರ್ತಿ ಅವರಿಗೆ ದೊರೆತ (ಅವರೇ ಮಾಡಿಸಿದ ?) ರಸಲಿಂಗದ ಮೂರ್ತಿ ಇವೆಲ್ಲವೂ ಭಿಷ್ಟಪ್ಪಯ್ಯನವರ ಚರಿತ್ರೆ ನಿಜವೆಂದೇ ಹೇಳುತ್ತದೆ".

೪. ಹಂಪೆ ವಿಶ್ವವಿದ್ಯಾಲಯದವರು ಪ್ರಕಟಿಸಿರುವ (೨೦೦೧) ಅಹೋಬಲನ **'ವಿರೂಪಾಕ್ಷ ವಸಂತೋತ್ಸವ ಚಂಪೂ'** ಕಾವ್ಯದ ಸಂಪಾದಕರಾದ ಪ್ರೊ. ಕಣ್ಣನ್ ಅವರು 'ಈ ಪ್ರಾಚೀನ ಮಹಾಗೋಪುರಕ್ಕೆ ಐತಿಹಾಸಿಕ ಪ್ರಾಮುಖ್ಯವಿದೆ" (ಪು. [illegible]) ಎನ್ನುತ್ತಾರೆ. ಶ್ರೀ ವಿರೂಪಾಕ್ಷನ ವಸಂತೋತ್ಸವವನ್ನು ವರ್ಣಿಸುವಾಗ ಕವಿ ಅಹೋಬಲನು ಹಂಪೆಯ ಪರಿಸರವನ್ನು ಅಲ್ಲಿಯ ತೀರ್ಥಕ್ಷೇತ್ರಗಳ ವಿಶೇಷಗಳನ್ನು 'ದೃಷ್ಟಿಕ'ವಾದ (ದೃಷ್ಟಿಗೆ ಕಾಣಸಿಗುವ) ನೋಟಗಳನ್ನು ಚಿತ್ರಿಸಿದ್ದಾನೆ. ಈ ಮಹಾ ಗೋಪುರವನ್ನು 'ಹಳೆಯ ಮಹಾಗೋಪುರ'[೩], 'ವಿಷ್ಟಪೇಶ ಗುರು ಗೋಪುರ'[೪] 'ದೊಡ್ಡ ಗೋಪುರ'[೫], 'ದೇವಾಲಯ ಮಹಾದ್ವಾರ'ದ[೬], 'ವಿಷ್ಟಪೇಶ ಗುರುವಿನ ಗೋಪುರ ಶಿಖರಾಗ್ರ'[೭], 'ವಿರೂಪಾಕ್ಷ ದೇವಾಲಯದ ಗೋಪುರದ ತುದಿಯಲ್ಲಿ ಹೊಳೆಯುವ ಶೃಂಗ'[೮], 'ಪ್ರಾಚೀನ ಗೋಪುರ'ದಿಂದ ಜನರು ಹೊರಟು ನಗರದ ಬೀದಿಗೆ ಬಂದರು; ಈಗ ಪಂಪಾಪುರದ ಉತ್ತರ ದ್ವಾರದಿಂದ ನದಿಯತ್ತ (ತುಂಗಭದ್ರೆ) ಹೋಗುತ್ತಿದ್ದಾರೆ, ಎಂದು ದೃಶ್ಯಕಾವ್ಯವಾಗಿಸಿದ್ದಾನೆ. ಈ ಕವಿಯ ಕಾಲವನ್ನು ಸಂಪಾದಕರು ೧೪ನೇ ಶತಮಾನದ ದ್ವಿತೀಯಾರ್ಧವೆಂದು ಹೇಳುತ್ತಲೇ ಈ ಬಗ್ಗೆ ಭಿನ್ನಾಭಿಪ್ರಾಯಗಳಿರುವುದನ್ನೂ ದಾಖಲಿಸಿದ್ದಾರೆ. (ಪು. ೧೦/ ೧.೧.೩ ಕವಿಯ ದೇಶ-ಕಾಲ).

***ಸಾರಾಂಶ :*** ಭಿಷ್ಟಪ್ಪಯ್ಯನವರ ಕಾಲದ ಬಗ್ಗೆ ಭಿನ್ನಾಭಿಪ್ರಾಯಗಳಿದ್ದರೂ ಕೂಡಾ ಮೇಲಿನ ಎಲ್ಲಾ ಅಂಶಗಳ ಪ್ರಕಾರ ಎಸ್.ಎಲ್. ಭೈರಪ್ಪನವರು ಆವರಣ ಕಾದಂಬರಿಯಲ್ಲಿ ಉಲ್ಲೇಖಿಸಿರುವ 'ರಾಯಗೋಪುರದ ನಿರ್ಮಾಪಕನು ವೈಷ್ಣವನಾಗಿದ್ದ ಕೃಷ್ಣದೇವರಾಯ' ಅಲ್ಲ, ವಿಷ್ಟೇಶ ಅಥವಾ ಭಿಷ್ಟಪ್ಪಯ್ಯ ಎನ್ನುವುದು ಸ್ಪಷ್ಟವಾಗುತ್ತದೆ.

ಭಿಷ್ಟಪ್ಪಯ್ಯನವರ ಬಗ್ಗೆ ಅವರ ಮನೆತನದಲ್ಲಿ ಈಗಲೂ ದೊರೆಯುತ್ತಿರುವ ಅನೇಕ ಸಂಸ್ಕೃತ, ಮರಾಠಿ ಹಾಗೂ ಕನ್ನಡ ಮೋಡಿಲಿಪಿ ಹಸ್ತಪ್ರತಿಗಳು ಇನ್ನೂ ಸಾಕಷ್ಟು ಸಂಖ್ಯೆಯಲ್ಲಿವೆ. ಈ ನಿಟ್ಟಿನಲ್ಲಿ ಈ ಲೇಖಕನೂ ಸೇರಿದಂತೆ ಅದೇ ಮನೆತನದವರಾದ ಶ್ರೀ ಎಸ್.ಡಿ. ಮಹಾಪುರುಷ ಶ್ರೀಮತಿ ವಸುಂಧರಾದೇಸಾಯಿ, ಮೇವುಂಡಿ ಮುಂತಾದವರ ಪ್ರಯತ್ನಗಳೂ ಮುಂದುವರೆದಿವೆ.

(ಈ ಶಾಸವನ್ನು ಓದಲು ಕೊಟ್ಟು ಸಹಕರಿಸಿದ ಶ್ರೀಮತಿ ಮತ್ತು ಶ್ರೀ ಎಸ್.ಡಿ. ಮಹಾಪುರುಷ, ವಿಠ್ಠಲಾಪುರ ಅವರಿಗೆ ಕೃತಜ್ಞತೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ವಿವರಗಳಿಗೆ ಲೇಖನವನ್ನು ಓದಬೇಕಾಗಿ ವಿನಂತಿ.

೨. ಈ ಪುಸ್ತಕದ ಪ್ರಕಾಶಕರು ಶ್ರೀ ಭಿಷ್ಟಪ್ಪಯ್ಯ ಮಹಾಪುರುಷ ಮೇವುಂಡಿ (ಪೊ. ಬೆಲವೆಗಿ ತಾ. ಹಾವೇರಿ, ೧೯೬೨)

೩. ಪುಟ ೭೬.

೪. ಪುಟ ೮೫.

೫. ಪುಟ ೧೨೧.

೬ ಪುಟ ೧೨೮.

೭. ಪುಟ ೧೮೦

೮. ಪುಟ ೫೩೩.

ಡಾ. ಬಿ. ರಾಜಶೇಖರಪ್ಪ*

# ಚಿತ್ರದುರ್ಗ ಪಾಳೆಯಗಾರರು ಮತ್ತು ಗುತ್ತಿ ಅರಸರ ಸಂಬಂಧದ ಒಂದು ಹೊಸ ಶಾಸನ

ಚಿತ್ರದುರ್ಗ ಜಿಲ್ಲೆಯ ಹಿರಿಯೂರು ತಾಲ್ಲೂಕು ಕಸಬಾ ಹೋಬಳಿಯ ಮಸ್ಕಲ್ ಗ್ರಾಮದಲ್ಲಿ ಕಂಡುಬಂದ ಒಂದು ಹೊಸಶಾಸನವನ್ನು ಕುರಿತು ಈ ಸಂಪ್ರಬಂಧ. ಈ ತಾಲ್ಲೂಕಿನ ದೊಡ್ಡ ಗ್ರಾಮಗಳಲ್ಲಿ ಒಂದಾದ ಮಸ್ಕಲ್. ತಾಲ್ಲೂಕು ಕೇಂದ್ರವಾದ ಹಿರಿಯೂರಿನಿಂದ ಸರಿಸುಮಾರು ಉತ್ತರಕ್ಕೆ ೧೫ ಕಿ.ಮೀ. ದೂರದಲ್ಲಿದೆ. ಈ ಗ್ರಾಮದಲ್ಲಿ ಶಿವಲಿಂಗವಿರುವ ಒಂದು ಚಿಕ್ಕ ದೇವಸ್ಥಾನವಿದ್ದು, ಜನ ಅದನ್ನು 'ಈಶ್ವರ ದೇವಸ್ಥಾನ' ಎಂದು ಕರೆಯುತ್ತಾರೆ. ಈ ದೇವಸ್ಥಾನದ ಮುಂಭಾಗದ ನವರಂಗದಲ್ಲಿ (ನವರಂಗ ಎಂದು ನಿರ್ದಿಷ್ಟವಾಗಿ ಹೇಳಲಾಗದಿದ್ದರೂ ಸದ್ಯಕ್ಕೆ ಹಾಗೆ ಇಟ್ಟುಕೊಳ್ಳಬಹುದು), ಬಲಬದಿಯ ಗೋಡೆಗೆ ಸೇರಿಸಿ (ಇರಿಸಿ) ದಂತಿರುವ, ಕ್ಲೋರೈಟ್ ಸಿಸ್ಟ್ ಜಾತಿಯ ಒಂದು ಕಲ್ಲು ಚಪ್ಪಡಿಯಲ್ಲಿ ಈ ಶಾಸನವಿದೆ. ನೆಲದಿಂದ ಸುಮಾರು ೬೯ ಸೆಂ.ಮೀ. ಎತ್ತರ, ಹಾಗೂ ೫೬ ಸೆಂ.ಮೀ. ಅಗಲ ಇರುವ ಆ ಚಪ್ಪಡಿಯ ಮೇಲುಭಾಗದಲ್ಲಿ, ನಡುವೆ ಶಿವಲಿಂಗ, ಅದರ ಆಚೆ ಈಚೆ ಸೂರ್ಯ ಚಂದ್ರರು ; ಎಡಭಾಗದಲ್ಲಿ (ಸೂರ್ಯನ ಕೆಳಗೆ) ನಿಂತ ವೃಷಭ, ಇವುಗಳ ರೇಖಾಕೆತ್ತನೆ ಇದೆ. ಆ ರೇಖಾ ಕೆತ್ತನೆಯ ಕೆಳಗೆ ಕನ್ನಡ ಲಿಪಿ ಮತ್ತು ಭಾಷೆಯಲ್ಲಿರುವ ೧೪ ಸಾಲುಗಳ ಆ ಶಾಸನ ಬರಹವನ್ನು ೫೬ ಸೆಂ.ಮೀ. ಎತ್ತರ ಮತ್ತು ೫೬ ಸೆಂ.ಮೀ. ಅಗಲ ಇರುವ ಹರಹಿನಲ್ಲಿ ಕೊರೆಯಲಾಗಿದೆ. ೧೦ ಸಾಲುಗಳವರೆಗೆ ಅಕ್ಷರಗಳು ಬಹುಪಾಲು ಸುಸ್ಥಿತಿಯಲ್ಲಿದ್ದು, ಆ ಮುಂದಿನ ಸಾಲುಗಳಲ್ಲಿ ಕೆಲವು ಅಕ್ಷರಗಳು ತ್ರುಟಿತವಾಗಿವೆ. ಕೆಲವು ಕಾಗುಣಿತ ದೋಷಗಳು ಮತ್ತು ವಾಕ್ಯರಚನೆಯ ದೋಷಗಳು ಇರುವುದಾದರೂ, ಶಾಸನದ ಒಟ್ಟು ಅಭಿಪ್ರಾಯವನ್ನು ಗ್ರಹಿಸಲು ಅದರಿಂದ ಅಡಚಣೆ ಏನೂ ಇಲ್ಲವೆನ್ನಬಹುದು. ಶಾಸನದ ಪಾಠ ಹೀಗಿದೆ :

(ಸೂರ್ಯ) (ಚಂದ್ರ)

(ನಿಂತಿರುವ ವೃಷಭ) (ಶಿವಲಿಂಗ)



೧ ಸ್ವಸ್ತಿಶ್ರೀ ಜಯಬ್ದ ಶಾಲಿವಾನ ಶಕೆ ೧೬೭೬ ಭಾವ ಸಂ॥ ಮಾರ್ಗ

೨ ಶಿರಾ ಬ ೭ ಸುಕ್ರವಾರ ಗಳಿ ೧೫ ಶ್ರೀ ಮಧುಕೆ(ೀ)ಶ್ವರ ಲಿಂಗ ಸ್ತಾಪ್ಯ [ಪ್ರಾ]

೩ ಣ ಪ್ರಾತಿಷ್ಠ ॥ ಶ್ರೀಮನ್ಮಹ ಕಾಮಗೆ(ೀ)ತಿ ಬರಮಂಣ ನಾಯಕರ

೪ ಮೆದಕೆ(ೀ)ರಿ ನಾಯಕರ ಕೊಮರ ಕಸ್ತುರಿ ರಂಗಪ ನಾಯಕರು ॥ ಮಹ । ರಾ । ಶ್ರೀ ॥

೫ ಮುರಾರಿರಾಯ ಗೊ(ೀ)ರಪಡೆ(ೀ)ರಿಗೆ ಹಿರಿಯೂರ ವಳಗಣ ಮಸಕಲ ಪ್ರತಿನಾ[ಮ]

* ಕನ್ನಡ ಪ್ರಾಧ್ಯಾಪಕರು, ಪ್ರಾಂಶುಪಾಲರು (ನಿ), ೨ನೇ ಅಡ್ಡರಸ್ತೆ, (ಪಶ್ಚಿಮ), ಜೆಸಿಆರ್ ಬಡಾವಣೆ, ಚಿತ್ರದುರ್ಗ-೫೭೭೫೦೧

೬ ವೆಂಕಟಪುರ ದಾರದತವಾಗಿ ಕೊಟ ಕಾರಣ । ಗೊ(ೀ) ರಪಡೆ ರಾಯರು । [ರಾ।]

೭ ಹಿರಿದೆ ರಾಮ ಜಮದಾರನವರಿಗೆ ಯಿ(ೀ) ಗ್ರಾಮ ದಾರೆಯದ ಕಾರ [ಣ]

೮ ನಾವು ಮಾಡಿದ ದರ್ಮಯಿ(ೀ) ದೆ(ೀ)ವಸ್ಥಾನಕೆ ಯಿ(ೀ)ರರ ಗುಡಿ ಬಳಿ[ಯ]

೯ ಹೊಲ ದೊಡಕೆರೆ ಹಿಂದೆ ಗದೆ (ೀ) ನು । ಅರ್ಚಿಕ ಅನು [ಭ]

೧೦ ವಿಸಿಕೊಂಡು ದೆ(ೀ)ವಥಾ ಶಾವೆ ನೆಡೆ [ಸ*] ಬೆ(ೀ) ಕು ಯಿ(ೀ) ದೇವಸ್ಥಾನ

೧೧ . ಮಾನ್ಯಕು ಯಿದರ ಜೊ(ೀ)ಡಿ ಮಾನೆಗಾಣಿ [ಕೆ]....

೧೨ . . ಗು ಯಾರಾದರು ಅಲುಪಿದರೆ ಗೊ(ೀ). .

೧೩ . . ಹತ್ಯ ಸಿಸುಹತ್ಯ ಮಾಡಿದ [ಪಾ] . .

೧೪ . . . . ತ . . . . .

ಶಾಸನದ ಅಭಿಪ್ರಾಯವನ್ನು ಈ ಮುಂದಿನಂತೆ ಸಂಗ್ರಹವಾಗಿ ಹೇಳಬಹುದು : ಶಾಲಿವಾಹನ ಶಕೆ ೧೬೭೬ನೆಯ ಭಾವ ಸಂವತ್ಸರದ ಮಾರ್ಗಶಿರ ಬಹುಳ ಸಪ್ತಮಿ ಶುಕ್ರವಾರ (ಸೂರ್ಯೋದಯದ ಮೇಲಿನ) ಗಳಿಗೆ ೧೫ರಲ್ಲಿ ಮಧುಕೇಶ್ವರ ಲಿಂಗವು ಪ್ರತಿಷ್ಠೆಗೊಂಡು, ಪ್ರಾಣ ಪ್ರತಿಷ್ಠೆಯೂ ಸಹ ನೆರವೇರಿತು. ಕಾಮಗೇತಿ ವಂಶದ ಬರಮಣ್ಣ ನಾಯಕರ ಪುತ್ರರಾದ ಮೆದಕೇರಿ ನಾಯಕರ ಪುತ್ರರಾದ ಕಸ್ತೂರಿರಂಗಪ್ಪ ನಾಯಕರು ಮಹಾರಾಜೇಶ್ರೀ ಮುರಾರಿರಾಯ ಗೋರಪಡೆಯವರಿಗೆ, ಹಿರಿಯೂರಿಗೆ ಸೇರಿದ ಮಸಕಲ್ಲು ಗ್ರಾಮಕ್ಕೆ ವೆಂಕಟಾಪುರ ಎಂದು ಪ್ರತಿನಾಮ (ಬದಲಿ ಹೆಸರು) ಇಟ್ಟು ಅದನ್ನು ಧಾರಾದತ್ತವಾಗಿ ಕೊಟ್ಟರು. ಆಮೇಲೆ ಈ ಗ್ರಾಮ ಗೋರಪಡೆರಾಯರಿಂದ ಹಿರಿದೆ ರಾಮ ಜಮಾದಾರ ಎಂಬುವರಿಗೆ ಧಾರೆ ನೀಡಲ್ಪಟ್ಟ ಕಾರಣ, (ಚಿತ್ರದುರ್ಗ ಸಂಸ್ಥಾನದ ದೊರೆಗಳಾದ) ನಾವು ಮಾಡಿದ ಧರ್ಮ ಏನೆಂದರೆ, ಈ ದೇವಸ್ಥಾನಕ್ಕೆ ಈರರ ಗುಡಿಯ ಬಳಿಯ ಹೊಲ, ದೊಡ್ಡಕೆರೆಯ ಹಿಂದಿನ ಗದ್ದೆ, ಇವನ್ನು ನೀಡಿರುತ್ತೇವೆ. ಅರ್ಚಕರು ಈ ದಾನದ ಭೂಮಿಗಳನ್ನು ಅನುಭವಿಸಿಕೊಂಡು ಹೋಗುತ್ತ, ದೇವತಾ ಸೇವೆಯನ್ನು ನಡೆಸಿಕೊಂಡು ಹೋಗಬೇಕು. ಈ ಮಾನ್ಯರ ಭೂಮಿಗೆ ಯಾರಾದರೂ ಆಸೆಪಟ್ಟರೆ, ಗೋಹತ್ಯೆ ಶಿಶುಹತ್ಯೆ ಮುಂತಾದ್ದನ್ನು ಮಾಡಿದ ಪಾಪಕ್ಕೆ ಹೋಗುತ್ತಾರೆ. (ಹೀಗೆ ಶಾಪಾಶಯದೊಂದಿಗೆ ಈ ಶಾಸನ ಮುಕ್ತಾಯಗೊಳ್ಳುತ್ತದೆ). ಈ ಶಾಸನವನ್ನು ಹಾಕಿಸಿರುವುದು ಕಸ್ತೂರಿರಂಗಪ್ಪ ನಾಯಕ ದೊರೆ ಎಂಬುದು ಸ್ಪಷ್ಟ. ಆದ್ದರಿಂದ ಇದರಲ್ಲಿ 'ನಾವು' ಎಂಬ ಶಬ್ದ ಆ ದೊರೆ ತನ್ನನ್ನೇ ಕರ್ತೃಸ್ಥಾನದಲ್ಲಿಟ್ಟು ಹೇಳಿದ್ದು ಎನ್ನುವುದು ಸ್ವಯಂವ್ಯಕ್ತ.

ಶಾಸನದಲ್ಲಿ ಹೇಳಿರುವ ಶಕ ವರ್ಷ ೧೬೭೬, ಕ್ರಿಸ್ತಶಕೆಯ ೧೭೫೪ನೆಯ ವರ್ಷವಾಗುತ್ತದೆ. ಮಸಕಲ್ಲು ಗ್ರಾಮವನ್ನು ಧಾರಾದಾತ್ತವಾಗಿ ನೀಡಿದ ಕಾಮಗೇತಿ ವಂಶದ ದೊರೆ, ಚಿತ್ರದುರ್ಗ ಇತಿಹಾಸದಲ್ಲಿ ಪ್ರಸಿದ್ಧನಾದ ಬರಮಣ್ಣನಾಯಕನ (೧೬೮೯–೧೭೨೧) ಪೌತ್ರ ಹಾಗೂ ಹಿರೇಮದಕೇರಿ ನಾಯಕನ (೧೭೨೧–೧೭೪೮) ಪುತ್ರ ಆಗಿದ್ದಂತಹ ಇಮ್ಮಡಿ ಕಸ್ತೂರಿರಂಗಪ್ಪ ನಾಯಕ ಎನ್ನುವುದು ಸುಸ್ಪಷ್ಟವಾಗಿದೆ. ಈ ದೊರೆ ಚಿತ್ರದುರ್ಗ ಸಂಸ್ಥಾನವನ್ನು ೧೭೪೮ ರಿಂದ ೧೭೫೮ ರವರೆಗೆ ಆಳಿದನು. ಹಾಗೆಯೇ ಇದರಲ್ಲಿ ಬರುವ ಮುರಾರಿರಾಯ ಗೋರಪಡೆ ೧೭೩೧ ರಿಂದ ೧೭೭೬ ರವರೆಗೆ ಈಗಿನ ಆಂಧ್ರಪ್ರದೇಶದ ಪ್ರಮುಖ ಐತಿಹಾಸಿಕ ಸ್ಥಳಗಳಲ್ಲಿ ಒಂದಾದ ಗುತ್ತಿಯ ಸಂಸ್ಥಾನವನ್ನು ಆಳಿದ ದೊರೆ ಎನ್ನುವುದೂ ಸ್ಪಷ್ಟವಿರುವ ಸಂಗತಿಯೆ. ಶಾಸನ ಹೇಳುವ ಒಂದು ಕೌತುಕದ ಅಂಶವೆಂದರೆ, ಒಂದು ಸಂಸ್ಥಾನದ ದೊರೆ ಇನ್ನೊಂದು ಸಂಸ್ಥಾನದ ದೊರೆಗೆ ಒಂದು ಗ್ರಾಮವನ್ನು ಧಾರಾದತ್ತವಾಗಿ ನೀಡಿದ್ದ ಎನ್ನುವುದು. ಇದನ್ನು ದಾನ ಎಂದು ಹೇಳುವುದು ಸೂಕ್ತವಾಗಿ ಕಾಣುವುದಿಲ್ಲ ; ಬದಲಿಗೆ ಕಾಣಿಕೆ ಎಂದು ಹೇಳಬಹುದು. ಈ ಗ್ರಾಮಕಾಣಿಕೆ ನೀಡಲ್ಪಟ್ಟದ್ದು ಯಾವ ಕಾರಣಕ್ಕಾಗಿ ಎಂಬುದನ್ನು ಶಾಸನ ಸೂಚಿಸಿಲ್ಲ. ಈ ಬಗ್ಗೆ ಪರಿಶೀಲಿಸುವುದು ಅಗತ್ಯವೆನಿಸುತ್ತದೆ. ಒಂದು ಅಂಶವಂತೂ ಇಲ್ಲಿ ಸ್ಪಷ್ಟವೆಂದು ಹೇಳಬಹುದು. ಅದೆಂದರೆ, ಮೇಲೆ ಹೇಳಿದ ಚಿತ್ರದುರ್ಗ ಹಾಗೂ ಗುತ್ತಿ ದೊರೆಗಳ ನಡುವೆ ಹಾರ್ದಿಕವಾದ ಸಂಬಂಧ ಇತ್ತು ಎನ್ನುವುದು ಮತ್ತು ಚಿತ್ರದುರ್ಗದ ದೊರೆ ಗುತ್ತಿಯ ದೊರೆಯ ವಿಷಯದಲ್ಲಿ ತುಂಬ ಗೌರವ ವಿಶ್ವಾಸಗಳನ್ನು ಹೊಂದಿದ್ದ ಎನ್ನುವುದು.

ಭಾರತದ ಚರಿತ್ರೆಯಲ್ಲಿ ಪ್ರಸಿದ್ಧನಾದ ಛತ್ರಪತಿ ಶಿವಾಜಿಯ ಭೋಸ್ಲೆ ವಂಶದ ಸೊದರ ಸಂಬಂಧದ ಒಂದು ಪ್ರಖ್ಯಾತ ವಂಶ ಘೋರ್ಪಡೆ ವಂಶ ಎಂಬುದು ಈಗಾಗಲೇ ತಿಳಿದ ಸಂಗತಿ. ಭೋಸ್ಲೆ ವಂಶಜರಂತೆ ಈ ಘೋರ್ಪಡೆ ವಂಶಜರು ಮಹಾರಾಷ್ಟ್ರ ಮತ್ತು ಕರ್ನಾಟಕದ (ಮುಧೋಳ, ದತ್ತವಾಡ, ಬೇಡಕ್, ಗಜೇಂದ್ರಗಡ ಮತ್ತು ಸಂಡೂರು ಇಂಥ) ಕೆಲವೆಡೆಗಳಲ್ಲಿ ನೆಲೆಗೊಂಡಿದ್ದರು. ೧೮ನೆಯ ಶತಮಾನದ ಪೂರ್ವಾರ್ಧದಲ್ಲಿ ದಕ್ಷಿಣ ಭಾರತದ ರಾಜಕೀಯ ಹಾಗೂ ಯೌದ್ಧಿಕ (ಸೇನಾ ಕಾರ್ಯಾಚರಣೆಯ) ಚಟುವಟಿಕೆಗಳಲ್ಲಿ ಗಣನೀಯ ಪಾತ್ರವಹಿಸಿದವರಲ್ಲಿ ಒಬ್ಬ ಈ ಮುರಾರಿರಾವ್

ಘೋರ್ಪಡೆ. ಇವನಲ್ಲಿ ೧೦,೦೦೦ಕ್ಕೂ ಹೆಚ್ಚಿನ ಸಂಖ್ಯೆಯ, ಚೆನ್ನಾಗಿ ನುರಿತ ಅಶ್ವದಳ ಇತ್ತಲ್ಲದೆ, ಇವನು ಗುತ್ತಿಯ ಜೊತೆಗೆ ಕೆಲವು ವರ್ಷ ತಮಿಳುನಾಡಿನ ಪ್ರಸಿದ್ಧ ಐತಿಹಾಸಿಕ ಸ್ಥಳಗಳಲ್ಲಿ ಪರಿಗಣಿತವಾದ ತಿರುಚಿರಾಪಳ್ಳಿ (ತಿರುಚಿ) ಹಾಗೂ ಆಂಧ್ರಪ್ರದೇಶದ ಪೆನುಗೊಂಡೆಗಳ ಮೇಲೂ ಕೆಲಕಾಲ ಅಧಿಕಾರವನ್ನು ಹೊಂದಿದ್ದ. ೧೭೪೧ರಲ್ಲಿ ತಿರುಚಿರಾಪಳ್ಳಿಯ ಅಧಿಕಾರಕ್ಕಾಗಿ ಚಂದಾಸಾಹೇಬ್ ಮತ್ತಿತರರ ನಡುವೆ ಸಂಘರ್ಷ ಉಂಟಾದಾಗ, ಪ್ರಕಾಶಕ್ಕೆ ಬಂದ ಮುರಾರಿರಾವ್ ಘೋರ್ಪಡೆಯ ಸೈನ್ಯ ಬಲದ ಶ್ರೇಷ್ಠತೆ ಮತ್ತು ಅವನ ಧೀರತೆ ದಕ್ಷತೆಗಳು ಅವನು ಅತ್ಯುನ್ನತಿಗೆ ಏರಲು ಸಹಕಾರಿಯಾದುವು. ಚಂದಾಸಾಹೇಬ್ ಮತ್ತು ಅವನ ಮಗ ಅರೀಬ್ ಸಾಹೇಬ್ ಅವರು ಬಂದಿಗಳಾಗಿ ಮರಾಠರ ಅಂದಿನ ರಾಜಧಾನಿಯಾಗಿದ್ದ ಸತಾರಾಕ್ಕೆ ರವಾನಿಸಲ್ಪಟ್ಟು, ಮುರಾರಿರಾವ್ ತಿರುಚಿರಾಪಳ್ಳಿಯ ಪ್ರಾಂತಪಾಲಕ (governor) ಎಂದು ಘೋಷಿತನಾದ.

ಮುರಾರಿರಾವ್ ತಿರುಚಿರಾಪಳ್ಳಿಯ ಪ್ರಾಂತಪಾಲಕನಾಗಿದ್ದಾಗ, ತಮಿಳುನಾಡಿನ ಶ್ರೀರಂಗಂನಲ್ಲಿರುವ ಪ್ರಸಿದ್ಧ ದೇವಾಲಯಕ್ಕೆ ೫೭ ಹಳ್ಳಿಗಳನ್ನು ಜಹಗಿರಾಗಿ ನೀಡಿದ್ದನಲ್ಲದೆ, ಜಂಜುಕೇಶ್ವರ ದೇವಾಲಯಕ್ಕೆ ೧೪ ಹಳ್ಳಿಗಳನ್ನೂ ತಿರುಚಿಯ ತಾಯುಮನೆಸ್ವಾಮಿಯ ದೇವಾಲಯಕ್ಕೆ ೯ ಹಳ್ಳಿಗಳನ್ನೂ ದಾನವಾಗಿ ನೀಡಿದ್ದನು.

ನಿಜಾಂ–ಉಲ್–ಮುಲ್ಕ್‌ನು ಮುರಾರಿರಾವ್ ಒಬ್ಬ ಯೋಧ ಮತ್ತು ರಾಜಕೀಯ ಮುತ್ಸದ್ದಿ ಎಂದಷ್ಟೇ ಅಲ್ಲ, ಗುತ್ತಿಯ ಸ್ವತಂತ್ರ ಪ್ರಭು ಎಂದು ಒಪ್ಪಿಕೊಂಡು ಮನ್ನಣೆ ನೀಡಿದನಲ್ಲದೆ, ಪೆನುಗೊಂಡೆ ಪ್ರಾಂತವನ್ನು ಅವನಿಗೇ ಬಿಟ್ಟುಕೊಟ್ಟು, ವರ್ಷಕ್ಕೆ ಎರಡು ಲಕ್ಷ ರೂಪಾಯಿಗಳಷ್ಟು ಮೊತ್ತದ ಕಪ್ಪ ಸಹ ನೀಡುವುದಾಗಿ ಸಮ್ಮತಿಸಿದ. ಕೆಲವು ಕರಾರುಗಳ ಮೇಲೆ, ಮುರಾರಿರಾವ್ ಕೈಯಿಂದ ತಿರುಚಿಯನ್ನು ೧೭೪೩ರಷ್ಟು ಹೊತ್ತಿಗೆ ಬಿಡಿಸಿಕೊಂಡು ತನ್ನದಾಗಿಸಿಕೊಂಡ.

ಹೀಗೆ ಅಂದಿನ ದಕ್ಷಿಣ ಭಾರತದ ಪ್ರಮುಖ ರಾಜಕೀಯ ಮಹತ್ತ್ವದ ವ್ಯಕ್ತಿಗಳಲ್ಲಿ ಒಬ್ಬನಾಗಿದ್ದ ಮುರಾರಿರಾವ್ ಘೋರ್ಪಡೆ ಚಿತ್ರದುರ್ಗದ ದೊರೆ ಇಮ್ಮಡಿ ಕಸ್ತೂರಿರಂಗಪ್ಪ ನಾಯಕನ ಸಂಪರ್ಕಕ್ಕೆ ಬಂದದ್ದು ಕೂಡಾ ಒಂದು ಮುಖ್ಯ ಸಂಗತಿಯೆ. ಮುರಾರಿರಾವ್‌ಗಿಂತ ಪೂರ್ವದಲ್ಲೇ ಚಿತ್ರದುರ್ಗದ ನಾಯಕರಿಗೂ ಘೋರ್ಪಡೆ ಮನೆತನದವರಿಗೂ ಸಂಬಂಧ ಇತ್ತಾದರೂ ಅದು ಮುರಾರಿರಾವ್‌ನ ಕಾಲದಲ್ಲಿದ್ದಂತಹ ಹಾರ್ದಿಕ ಸಂಬಂಧವಾಗಿರಲಿಲ್ಲ. ಆ ಸಂಬಂಧ ಒಮ್ಮೆ ಸ್ನೇಹದ್ದಾದರೆ ಇನ್ನೊಮ್ಮೆ ವಿರಸದ ಸಂಬಂಧವಾಗಿತ್ತು. ಬರಮಣ್ಣನಾಯಕನ ಕಾಲಕ್ಕೆ ಸಂತಾಜಿ ಘೋರ್ಪಡೆ (ಪ್ರಸ್ತುತ ಮುರಾರಿರಾವ್‌ನ ದೊಡ್ಡ ಅಜ್ಜ) (ಈಗಿನ ತುಮಕೂರು ಜಿಲ್ಲೆಯ) ಸಿರಾದ ಮೇಲೆ ದಾಳಿ ಮಾಡಬಂದ ಕಾಲಕ್ಕೆ ಈ ಮನೆತನದವರೊಂದಿಗೆ ಮೊದಲ ಬಾರಿಗೆ ಏರ್ಪಟ್ಟ ಸಂಬಂಧ ಹಾರ್ದಿಕವಾದುದಾಗಿತ್ತು. ಸಂತಾಜಿ ದಾಳಿಮಾಡಬಂದಾಗ, ಸಿರಾದ ಸುಬೇದಾರನಾಗಿದ್ದ ಖಾಸಿಂಖಾನ್ ಅಲ್ಲಿಂದ ತಪ್ಪಿಸಿಕೊಂಡು, ಚಿತ್ರದುರ್ಗ ಪ್ರದೇಶದ ತಳಕಿನತ್ತ ಹೊರಟು, ಮತ್ತೆ ಅಲ್ಲಿಂದ ದೊಡ್ಡೇರಿ ಕೋಟೆಗೆ ಹೋಗಿ ಅಲ್ಲಿ ರಕ್ಷಣೆ ಪಡೆದ. ಅವನನ್ನು ಸಿರಾದಿಂದ ಉದ್ದಕ್ಕೂ ಬೆನ್ನಟ್ಟಿಕೊಂಡೇ ಬಂದ ಸಂತಾಜಿಯ ಸೈನ್ಯ ಕಡೆಗೆ ದೊಡ್ಡೇರಿಗೂ ಬಂದು ಮುತ್ತಿಗೆ ಹಾಕಿತು. ಆಗ ಅವರಿಗೆ ನೆರವಾಗಲು ಚಿತ್ರದುರ್ಗದ ಬರಮಣ್ಣನಾಯಕ ಒಂದಷ್ಟು ಸೈನ್ಯವನ್ನು ದಳವಾಯಿಗಳನ್ನು ಕಳಿಸಿಕೊಟ್ಟ.

ಈ ಸಂಯುಕ್ತ ಸೈನ್ಯದ ದಾಳಿಯನ್ನು ಎದುರಿಸಲಾಗದೆ ಖಾಸಿಂಖಾನ್ ಮರಣವನ್ನಪ್ಪಿದಾಗ, ದೊಡ್ಡೇರಿ ಕೈವಶವಾಗಲು ಸಂತಾಜಿ ಘೋರ್ಪಡೆ ಆ ಕೋಟೆಯನ್ನು ಬರಮಣ್ಣನಾಯಕನಿಗೇ ಬಿಟ್ಟುಕೊಟ್ಟು ತೆರಳಿದ. ಹೀಗೆ ಅವರಿಬ್ಬರ ನಡುವೆ ಅಂಕುರಿಸಿದ ಸಂಬಂಧ ಮುಂದೆ ಸಂತಾಜಿಯ ತಮ್ಮ ಹಿಂದೂರಾವ್ (ಬಹಿರೀಜಿ) (೧೬೮೯–೧೭೦೮) ಮತ್ತು ಅವನ ಮಗ ೧ನೇ ಸಿದ್ಧೋಜಿರಾವ್ (೧೭೦೮–೧೭೩೦) ಕಾಲದಲ್ಲಿ ಹಾರ್ದಿಕವಾಗಿ ಉಳಿಯಲಿಲ್ಲ. ಏಕೆಂದರೆ ಅವರಿಬ್ಬರೂ ಬೇರೆ ಬೇರೆ ಕಾಲದಲ್ಲಿ ಚಿತ್ರದುರ್ಗ ಸಂಸ್ಥಾನದ ಗಡಿಪ್ರದೇಶಗಳಲ್ಲಿ ಆಗಾಗ ದಾಳಿ ಹಾವಳಿ ಮಾಡಬಂದವರೇ ; ಕಡೆಯಲ್ಲಿ ದುರ್ಗದ ದಳವನ್ನು ಎದುರಿಸಲಾಗದೆ ಹಿಮ್ಮೆಟ್ಟಿದವರೇ. ಹೀಗಾಗಿ ಅವರೊಂದಿಗಿನ ದುರ್ಗದವರ ಸಂಬಂಧ ಹಾರ್ದಿಕವಾಗಿರಲು ಸಾಧ್ಯವಿರಲಿಲ್ಲ. ಈ ಸಂಬಂಧ ಮತ್ತೆ ಹಾರ್ದಿಕತೆಯ ದಾರಿಗೆ ಬಂದದ್ದು ೧ನೇ ಸಿದ್ಧೋಜಿರಾವ್‌ನ ಮಗ ಮುರಾರಿರಾವ್‌ನ ಕಾಲದಲ್ಲೇ. ಆ ಸಂದರ್ಭ ಹೀಗಿದೆ :

ಪ್ರಸ್ತುತ ಇಮ್ಮಡಿ ಕಸ್ತೂರಿರಂಗಪ್ಪನಾಯಕನ ತಂದೆ ಹಿರೇಮದಕೇರಿ ನಾಯಕನಿಗೂ ಹರಪನಹಳ್ಳಿಯ ದೊರೆ ಸೋಮಶೇಖರನಾಯಕನಿಗೂ, ೧೭೪೮ರಲ್ಲಿ ಮಾಯಕೊಂಡದಲ್ಲಿ (ಈಗಿನ ದಾವಣಗೆರೆ ಜಿಲ್ಲೆಯಲ್ಲಿರುವ ಒಂದು ಪ್ರಸಿದ್ಧ ಐತಿಹಾಸಿಕ ಸ್ಥಳ) ನಡೆದ ಭೀಕರ ಕಾಳಗದಲ್ಲಿ, ಹಿರೇಮದಕೇರಿ ನಾಯಕರು ಮರಣವನ್ನಪ್ಪಬೇಕಾಯಿತು. ಹರಪನಹಳ್ಳಿಯ ಸೋಮಶೇಖರನಾಯಕನಿಗೆ ಬೆಂಬಲ್ಲಿಸಿ, ದುರ್ಗದ ವೈರಿಗಳಾಗಿದ್ದ ಬಿದನೂರು, ಸವಣೂರು, ರಾಯದುರ್ಗ ಇವುಗಳ ಸೈನ್ಯಗಳೂ ಮಾಯಕೊಂಡವನ್ನು ಮುತ್ತಿದಾಗ ಹಿರೇಮದಕೇರಿ ನಾಯಕನು. ಆ ಮುತ್ತಿಗೆಯನ್ನು

ಯಶಸ್ವಿಯಾಗಿ ಎದುರಿಸಿದನು. ಮರಾಠರ ಅಂದಿನ ರಾಜಧಾನಿಯಾಗಿದ್ದ ಸತಾರೆಯಲ್ಲಿ ಸೆರೆಯಲ್ಲಿದ್ದ ಚಂದಾಸಾಹೇಬನೂ ಅವನ ಮಗನೂ ಅಲ್ಲಿಂದ ತಪ್ಪಿಸಿಕೊಂಡು ತಿರುಚಿರಾಪಳ್ಳಿಗೆಂದು ಪ್ರಯಾಣ ಹೊರಟು ಬರುವಾಗ್ಗೆ, ಅದೇ ಕಾಲಕ್ಕೆ ಜರುಗಿದ ಮಾಯಕೊಂಡದ ಕಾಳಗದಲ್ಲಿ ಹಿರೇಮದಕೇರಿನಾಯಕನಿಗೆ ತನ್ನ ೨೦೦ ಮಂದಿ ಅಶ್ವದಳ ಮತ್ತು ೨೦೦ ಮಂದಿ ಕಾಲುದಳದೊಂದಿಗೆ ಬೆಂಬಲವಾಗಿ ನಿಂತು ಹೋರಾಡಿದರು. ಆ ಕಾಳಗದಲ್ಲಿ ಚಂದಾಸಾಹೇಬನ ಮಗನು ಅಸುನೀಗಿದನು.

ಸೋಮಶೇಖರನಾಯಕ ಮತ್ತು ಹಿರೇಮದಕೇರಿ ನಾಯಕ ಇಬ್ಬರೂ ಆನೆಯ ಮೇಲೆ ಕುಳಿತು, ಪರಸ್ಪರ ಹೋರಾಡಿದರು. ಆ ಕದನದಲ್ಲಿ ಬಿದ್ದ ತೀವ್ರ ಏಟಿನ ಗಾಯದಿಂದಾಗಿ ಹಿರೇಮದಕೇರಿನಾಯಕ ಅಲ್ಲೇ ಅಸುನೀಗಲು ಅಲ್ಲೇ ಅವನ ಅಂತ್ಯಕ್ರಿಯೆಯೂ ಜರುಗಿತು. ಅವನ ಅಸ್ಥಿಶೇಷಗಳನ್ನು ದುರ್ಗಕ್ಕೆ ತಂದು ಇಲ್ಲಿಯ ಬೆಟ್ಟದ ಮೇಲೆ ಅವನ ತಂದೆ ಬರಮಣ್ಣನಾಯಕನ ಸಮಾಧಿಯ ಮುಂದೆ ನೆಲೆಗೊಳಿಸಿ ಅವನಿಗೆ ಇಲ್ಲೂ ಒಂದು ಸಮಾಧಿಯನ್ನು ರಚಿಸಲಾಯಿತು. ಮುಂದೆ ಅವನ ಮಗ ಇಮ್ಮಡಿ ಕಸ್ತೂರಿ ರಂಗಪ್ಪನಾಯಕನು ಪಟ್ಟಕ್ಕೆ ಬಂದನು.

ಅವನು ಪಟ್ಟಕ್ಕೆ ಬರುತ್ತಿದ್ದಂತೆ ತಂದೆಯ ಸಾವಿಗೆ ಕಾರಣರಾದವರ ಮೇಲೆ ಮುಯ್ಯಿ ತೀರಿಸಿಕೊಳ್ಳಲು, ಮಾಯಕೊಂಡವು ಅನ್ಯಾಕ್ರಾಂತವಾಗುವುದನ್ನು ತಪ್ಪಿಸಲು, ಅವನಿಗೆ ಸೈನ್ಯದ ನೆರವು ನೀಡಿ ಖುದ್ದು ಬಂದು ಹೋರಾಟದಲ್ಲಿ ಪಾಲ್ಗೊಂಡ ಇಬ್ಬರು ರಾಜಕೀಯ ಪ್ರಮುಖದಲ್ಲಿ ಒಬ್ಬ ಗುತ್ತಿಯ ದೊರೆಯಾಗಿದ್ದ ಈ ಮುರಾರಿರಾವ್ ಘೋರ್ಪಡೆ; ಇನ್ನೊಬ್ಬ ಆದವನ್ನಿ (ಆದವಾನಿ) ಯ ಸುಬೇದಾರನಾಗಿದ್ದ ಹಿದಾಯತ್ ಮೋತಿ (ಮೊಹದೀನ್) ಖಾನ್. ದುರ್ಗ, ಗುತ್ತಿ, ಆದವಾನಿ ಈ ಮೂರು ಸೈನ್ಯಗಳ ಸಂಯುಕ್ತ ದಾಳಿಯನ್ನು ಎದುರಿಸಲಾಗದೆ ಹರಪನಹಳ್ಳಿ, ಬಿದನೂರು ಮತ್ತಿತರ ದಂಡುಗಳು ಮಾಯಕೊಂಡವನ್ನು ಬಿಟ್ಟು ಪಲಾಯನ ಮಾಡಿದುವು.

ಈ ನೆರವಿನ ಖರ್ಚಿಗಾಗಿ ಇಮ್ಮಡಿ ಕಸ್ತೂರಿರಂಗಪ್ಪ ನಾಯಕನು, ಅವರಿಬ್ಬರಿಗೂ ಒಂದು ಲಕ್ಷ ವರಹ ಮೊತ್ತವನ್ನು ನೀಡಿದನು. ಇವರಿಬ್ಬರೊಂದಿಗೆ ಮಾತನಾಡಿಕೊಂಡ ಅನಂತರದಲ್ಲಿ ಕಸ್ತೂರಿ ರಂಗಪ್ಪ ನಾಯಕನು ಸಂತೇಬೆನ್ನೂರನ್ನು ಮುತ್ತಿದನು. ಆಗ ವೈರಿಗಳಾಗಿದ್ದ ಬಿದನೂರಿನವರು, ಹರಪನಹಳ್ಳಿಯವರು ಮತ್ತು ಅವರ ಬೆಂಬಲಿಗರೊಂದಿಗೆ ಗುತ್ತಿಯ ಮುರಾರಿರಾವ್ ಮತ್ತು ಆದವಾನಿಯ ಸುಬೇದಾರ ಇಬ್ಬರೂ ಆಮಿಷಕ್ಕೆ ಒಳಗಾಗಿ ಅವರ ಕಡೆ ಆದರೆಂದು ತಿಳಿದುಬಂದ ಕಾರಣ, ಕಸ್ತೂರಿ ರಂಗಪ್ಪ ನಾಯಕ ಯತ್ನವಿಲ್ಲದೆ ಸಂತೇಬೆನ್ನೂರು ಮುತ್ತಿಗೆಯನ್ನು ಬಿಟ್ಟು ದುರ್ಗಕ್ಕೆ ಬಂದನು. ಆದರೆ ಅವರ ಪರಸ್ಪರ ಸಂಬಂಧವೇನೂ ಕಡಿದುಹೋಗಲಿಲ್ಲ ; ಮುಂದಿನ ವರ್ಷ (೧೭೪೯ರಲ್ಲಿ) ಗುತ್ತಿಯ ಮುರಾರಿರಾವ್ ದುರ್ಗಕ್ಕೆ ಬಂದು ಕಸ್ತೂರಿ ರಂಗಪ್ಪನಾಯಕನನ್ನು ಭೇಟಿ ಮಾಡಿ, ಗುತ್ತಿಗೆ ವಾಪಸಾದನು.

ಅದಾದ ಆರು ವರ್ಷಗಳ ತರುವಾಯ, ೧೭೫೪ರಲ್ಲಿ ಇಮ್ಮಡಿ ಕಸ್ತೂರಿರಂಗಪ್ಪ ನಾಯಕ ನಿಧನವಾಗುವ ಕೆಲಕಾಲದ ಮುಂಚೆ, ಈ ಶಾಸನ ಹಾಕಿಸಿರುವುದನ್ನು ನೋಡಿದರೆ, ಆ ಹೊತ್ತಿಗೆ ಅವರಿಬ್ಬರ ನಡುವೆ ಉಂಟಾಗಿದ್ದ ಬಿರುಕು ಅಥವಾ ತಪ್ಪು ತಿಳುವಳಿಕೆ ನಿವಾರಣೆಯಾಗಿತ್ತೆಂದು ತಿಳಿಯಬಹುದು. ತಮ್ಮ ರಾಜಕೀಯ ಹಿತೈಷಿ ಅಥವಾ ಬೆಂಬಲಿಗನಾಗಿದ್ದ ಮುರಾರಿರಾವ್ ಘೋರ್ಪಡೆಗೆ ಪ್ರಾಯಃ ಯಾವುದೇ ರಾಜಕೀಯ ಒಪ್ಪಂದದ ಕಾರಣವಾಗಿ ಅಲ್ಲದೆ ಕೇವಲ ಪ್ರೀತಿ ಗೌರವಗಳ ಕುರುಹಾಗಿ, ಈ ಗ್ರಾಮ ಕಾಣಿಕೆಯನ್ನು ಕಸ್ತೂರಿರಂಗಪ್ಪನಾಯಕ ಸಮರ್ಪಿಸಿದಂತೆ ಕಾಣುತ್ತದೆ. ಈ ಶಾಸನದಲ್ಲಿ ಮುರಾರಿರಾವ್ ದೊರೆಗೆ ಮಹಾರಾಜೇಶ್ರೀ ಎಂಬ ವಿಶೇಷಣ ಬಳಸಿರುವುದು, ದುರ್ಗದ ದೊರೆ ಅವನ ಬಗ್ಗೆ ಹೊಂದಿದ್ದ ಗೌರವಕ್ಕೆ ಸೂಚನೆ ಕೊಡುವಂತಿದೆ. ಇದಲ್ಲದೆ ಅಂದಿನ ಕಾಲದ ಅತ್ಯಂತ ಶಕ್ತ ದೊರೆಗಳಲ್ಲೊಬ್ಬನಾಗಿದ್ದ ಮುರಾರಿರಾವ್, ದುರ್ಗದ ನಾಯಕರೊಂದಿಗೆ ವಿರಸ ಮಾಡಿಕೊಳ್ಳದೆ ಸ್ನೇಹಿತನಾಗಿ ಉಳಿದದ್ದು ಕೂಡಾ ದುರ್ಗದವರ ಸಾಮರ್ಥ್ಯಕ್ಕೆ ಪರೋಕ್ಷ ಸೂಚನೆಯೆಂಬಂತಿದೆ.

ಗ್ರಾಮಕಾಣಿಕೆ ಸ್ವೀಕರಿಸಿದ ಮುರಾರಿರಾವ್ ಅದನ್ನು ಪ್ರಾಯಃ ತನ್ನ ನೆಚ್ಚಿನ ಅಧಿಕಾರಿಗಳಲ್ಲೊಬ್ಬನಾಗಿದ್ದ ಅಂದರೆ ಜಮಾದಾರನಾಗಿದ್ದ ಹಿರಿದೆ ರಾಮ ಜಮಾದಾರನಿಗೆ ಕಾಣಿಕೆಯಾಗಿ ನೀಡಿ ಆ ಗ್ರಾಮದಲ್ಲಿ ದೇವಸ್ಥಾನವನ್ನು ನಿರ್ಮಿಸಿ ಲಿಂಗವನ್ನು ಪ್ರತಿಷ್ಠಿಸಿ ಮಧುಕೇಶ್ವರ ಎಂದು ಅದನ್ನು ಹೆಸರಿಸಿ, ಪ್ರಾಣಪ್ರತಿಷ್ಠೆಯನ್ನು ಮಾಡಿಸಿದಾಗ ಇಮ್ಮಡಿ ಕಸ್ತೂರಿ ನಾಯಕನು, ಆ ದೇವರ ನಿರಂತರ ಪೂಜಾ ವ್ಯವಸ್ಥೆಯ ಸಲುವಾಗಿ ಹೊಲ ಗದ್ದೆಯ ದಾನ ನೀಡಿದ್ದನ್ನು ಶಾಸನ ತಿಳಿಸುತ್ತದೆ. ದುರ್ಗದ ದೊರೆ ಗ್ರಾಮವನ್ನು ಮುರಾರಿರಾವ್ ದೊರೆಗೆ ಕಾಣಿಕೆಯಾಗಿ ಕೊಟ್ಟಮೇಲೆ, ಅಲ್ಲಿ ಆದ ದೇವರಿಗೆ ಹೊಲ ಗದ್ದೆಗಳನ್ನು ದಾನವಾಗಿ ನೀಡಿದ್ದು ಹೇಗೆ ಎಂಬ ಪ್ರಶ್ನೆ ಮೂಡುತ್ತದೆ.

ಇದು ಬಹುಶಃ ಹೀಗಿರುವಂತೆ ಕಾಣುತ್ತದೆ: ಚಿತ್ರದುರ್ಗದ ದೊರೆ ಈ ಗ್ರಾಮವನ್ನು ಕಾಣಿಕೆಯಾಗಿ ನೀಡುವುದರ ಮೂಲಕ ದುರ್ಗದ ಬೊಕ್ಕಸಕ್ಕೆ

ಸಂದಾಯವಾಗಿದ್ದ ಆ ಗ್ರಾಮದ ವಿವಿಧ ಕರಗಳೆಲ್ಲ ಅಲ್ಲಿಂದ ಮುಂದೆ ಗುತ್ತಿಯ ದೊರೆಗೆ ಸಲುವಂತಾದರೂ, ದೇವತಾ ಸೇವೆಗಾಗಿ ದುರ್ಗದ ದೊರೆ ನೀಡಿದ ಹೊಲ ಮತ್ತು ಗದ್ದೆ ಇವು ಮಸಕಲ್ಲು ಗ್ರಾಮದ ರಾಜಸ್ವ ವ್ಯಾಪ್ತಿಯ ಹೊರಗಿದ್ದು ದುರ್ಗದ ದೊರೆಯ ಅಧಿಕಾರಕ್ಕೆ ಒಳಪಟ್ಟ ಪ್ರದೇಶದಲ್ಲಿದ್ದಿರಬಹುದು ಎನ್ನಿಸುತ್ತದೆ.

ಗುತ್ತಿಯ ದೊರೆ ಮುರಾರಿರಾವ್ ಘೋರ್ಪಡೆಯಿಂದ ಗ್ರಾಮವನ್ನು ಪಡೆದ ರಾಮ ಜಮಾದಾರನ ಹೆಸರಿಗೆ ಒಂದು ವಿಶೇಷಣವೆಂಬಂತೆ ಕಾಣುವ 'ಹಿರಿದೆ' ಎಂಬುದು ಅವನ ಮನೆತನದ ಹೆಸರೋ ಅಥವಾ ಅವನ ಮೂಲಸ್ಥಳದ ಹೆಸರೋ ಅಥವಾ ಹೃದಯ ಎಂಬ ಶಬ್ದದ ಆಡುಮಾತಿನ ರೂಪವೋ ಸ್ಪಷ್ಟವಿಲ್ಲ. ಇದು ಪ್ರಾಯಃ ಹೃದಯ ಎಂಬುದರ ವಿರೂಪವಾಗಿರುವುದರ ಸಾಧ್ಯತೆ ಹೆಚ್ಚು ಎಂದು ಕಾಣುತ್ತದೆ. ಏಕೆಂದರೆ ಉತ್ತರ ಭಾರತದಲ್ಲಿ ಹೃದಯರಾಮ ಎಂಬ ಹೆಸರು ಸರ್ವೇಸಾಮಾನ್ಯ ಎಂದು ಹೇಳಲಾಗುತ್ತಿದೆ (ಅಡಿಟಿಪ್ಪಣಿ ನೋಡಿ).* ಇನ್ನು 'ಜಮಾದಾರ' ಎಂಬ ಮಾತಿನಿಂದ ಅವನು ಮುರಾರಿರಾಯನಲ್ಲಿ ಬಹುಶಃ ಸೇನೆಯನ್ನು ಜಮಾವಣೆ ಮಾಡಿಕೊಂಡು ಒಂದು ಕಡೆಯಿಂದ ಇನ್ನೊಂದು ಕಡೆ ಕರೆದೊಯ್ಯುತ್ತಿದ್ದ ಅಧಿಕಾರ ಸ್ಥಾನದಲ್ಲೇ ಅಥವಾ ಕಂದಾಯ ಸಂಗ್ರಹದ ಸೇವೆಯಲ್ಲೇ ಇದ್ದವನೆಂದು ತೋರುತ್ತದೆ. ಈ ಗ್ರಾಮದ ಉಸ್ತುವಾರಿ ನೋಡಿಕೊಂಡು ಹಾಗೆಯೇ ಮಧುಕೇಶ್ವರ ದೇವರ ಪೂಜಾವ್ಯವಸ್ಥೆಯ ಉಸ್ತುವಾರಿಯನ್ನು ಸಹ ನೋಡಿಕೊಂಡು ಹೋಗಬಲ್ಲ ಯೋಗ್ಯ ಹಾಗೂ ಸಮರ್ಥ ಎಂದು ಮುರಾರಿರಾವ್‌ಗೆ ಅನ್ನಿಸಿ ಈ ಗ್ರಾಮವನ್ನು ಅವನಿಗೆ ಕೊಡುಗೆಯಾಗಿ ಕೊಟ್ಟಂತೆ ಕಾಣುತ್ತದೆ.

ಇಲ್ಲಿ ಮತ್ತೊಂದು ಸಂಗತಿಯನ್ನು ಸಹ ಸೇರಿಸಬಹುದು: ಈ ಗ್ರಾಮ ಕಾಣಿಕೆ ನೀಡಿದ ಸ್ವಲ್ಪ ಕಾಲದಲ್ಲೇ (ಅದೇ ವರ್ಷದಲ್ಲೇ) ಕಸ್ತೂರಿ ರಂಗಪ್ಪ ನಾಯಕನು ವಿಧಿವಶನಾದನು. ಆಮೇಲೆ ಅವನ ಉತ್ತರಾಧಿಕಾರಿಯಾಗಿ ಬಂದವನು ೬ನೆಯ ಅಥವಾ ಕೊನೆಯ ಮದಕೇರಿನಾಯಕ (೧೭೫೪-೧೭೭೯). ಕಾಲದ ವಿಪರ್ಯಾಸವೆಂದರೆ, ಚಿತ್ರದುರ್ಗ ಪಾಳೆಯಗಾರ ಮನೆತನದ ರಾಜಕೀಯ ಹಿತೈಷಿಯಾಗಿದ್ದ ಮುರಾರಿರಾವ್, ೧೭೭೬ರಲ್ಲಿ ಮೈಸೂರಿನ ಹೈದರ್ ಅಲೀ ಗುತ್ತಿಯನ್ನು ಮುತ್ತಿದಾಗ, ರಾಜಕೀಯದ ಒತ್ತಡದ ಪರಿಸ್ಥಿತಿಯಿಂದಾಗಿ ಅವನ ಬೆಂಬಲಿಗನಾಗಿ ಬಂದಿದ್ದ ಚಿತ್ರದುರ್ಗ ಪಾಳೆಯಗಾರ ಮನೆತನದವನೇ ಆದ ಕೊನೆಯ ಮದಕೇರಿನಾಯಕನಿಂದ ಸೆರೆಹಿಡಿಯಲ್ಪಟ್ಟು ಹೈದರ್ ಅಲಿಗೆ ಒಪ್ಪಿಸಲ್ಪಟ್ಟನು. ಅನಂತರದಲ್ಲಿ ಹೈದರ್ ಅಲೀ ಅವನನ್ನು (ಈಗಿನ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ಕನಕಪುರ ತಾಲ್ಲೂಕಿನಲ್ಲಿರುವ) ಕಬ್ಬಾಳುದುರ್ಗಕ್ಕೆ ಸಾಗಿಸಿ ಅಲ್ಲಿ ಬಂಧನದಲ್ಲಿಟ್ಟ ಕೆಲಕಾಲದ ಅನಂತರ ಅವನು ಅಲ್ಲೇ ಕಾಲವಾದನು.

ಈಗ ಮಸ್ಕಲ್ ಗ್ರಾಮದಲ್ಲಿ ಈ ದೇವರ ಪೂಜೆ ನಿತ್ಯ ನಡೆಯುತ್ತಿದೆಯಾದರೂ, ಈ ದೇವರಿಗೆ ಕೊಡಲ್ಪಟ್ಟಿದ್ದ ಯಾವೊಂದು ಭೂಮಿಯೂ ಈಗ ದೇವರ ಪಾಲಿಗೆ ಉಳಿದಿಲ್ಲ ಎಂದು ಹೇಳುತ್ತಾರೆ. ಅದೇನೆ ಇರಲಿ, ಚಿತ್ರದುರ್ಗ ಪಾಳೆಯಗಾರರ ಹಾಗೂ ಗುತ್ತಿ ಮುರಾರಿರಾಯರ ಗೌರವಪೂರ್ಣ ಸಂಬಂಧಕ್ಕೆ ಸಾಕ್ಷಿಯಾದ ಈ ಶಾಸನ, ಈಶ್ವರಲಿಂಗ ಈಗಲೂ ಇವೆ.

ಈ ಶಾಸನವನ್ನು ನಾನು ಓದಿಕೊಂಡು ಬಂದ ಕೆಲಕಾಲದ ಮೇಲೆ ಇದನ್ನು ಹಿರಿಯ ಶಾಸನತಜ್ಞರಾದ ಆರ್. ನರಸಿಂಹಾಚಾರ್ ಅವರು ೧೯೧೮ರಲ್ಲೇ ಇದನ್ನು ನೋಡಿದ್ದು, ಇದರ ಸಾರಾಂಶ ಕೊಟ್ಟಿದ್ದುದು ಆ ವರ್ಷದ ಮೈಸೂರು ಪುರಾತತ್ವ ಇಲಾಖೆಯ ವರದಿ (MAR) ಸಂಪುಟದಿಂದ ತಿಳಿದುಬಂತು. ಅವರು ಏಕೆ ಇದರ ಪಾಠ ಕೊಡದೆ ಹೋದರೋ ತಿಳಿಯದು. ಹೀಗಾಗಿ ಈ ಶಾಸನ ಇದೇ ಮೊದಲ ಬಾರಿಗೆ ಪಾಠ ಸಹಿತ ಹಾಗೂ ಸಂಬಂಧಿಸಿದ ವಿವರಸಹಿತ ಇಲ್ಲಿ ಸಾದರಪಡಿಸಲ್ಪಡುತ್ತಿದೆ. ಆರ್. ನರಸಿಂಹಾಚಾರ್ ಅವರು ಕೊಡುವ ಒಂದು ಹೆಚ್ಚಿನ ಅಂಶವೆಂದರೆ, ಅವರ ಈ ಶಾಸನ ನೋಡಿದ ಕಾಲಕ್ಕೆ ಮಸ್ಕಲ್ ಗ್ರಾಮದಲ್ಲಿ ಸುಭದ್ರವಾದ ಕೋಟೆ ಇದ್ದು ಅದಕ್ಕೆ ಎತ್ತರವಾದ ಎರಡು ಹೆಬ್ಬಾಗಿಲುಗಳಿದ್ದುವು ಎಂದು ಹೇಳಿರುವುದು. ಆದರೆ ಅವಾವುವೂ ಈಗ ಹಿಂದೆ ಇದ್ದ ಸ್ಥಿತಿಯಲ್ಲಿ ಉಳಿದಿಲ್ಲದಿರು ವುದು, ಕಾಲ ತರುವ ಬದಲಾವಣೆಗೆ ಸಾಕ್ಷಿಯಾಗಿದೆ.

(ಈ ಶಾಸನವನ್ನು ನೋಡಲು ಸಹಕರಿಸಿದವರು ಮಸ್ಕಲ್ ಗ್ರಾಮದ ಶ್ರೀ ಎಸ್. ತಿಪ್ಪೇಸ್ವಾಮಿ ಮತ್ತು ಶ್ರೀ ಟಿ. ಯರಗುಂಟಯ್ಯ ಅವರು. ಅಲ್ಲಿಗೆ ಹೋಗಿಬರಲು ವಾಹನ ಸೌಕರ್ಯ ನೀಡಿದವರು ಶ್ರೀ ಟಿ. ಭರತ್‌ಕುಮಾರ್ ಮತ್ತು ಜತೆಯಲ್ಲಿ ಬಂದವರು ಶ್ರೀ ಎಸ್.ಎಚ್. ಆಶೋಕಕುಮಾರ್ ಅವರು. ಇವರೆಲ್ಲರಿಗೂ ನನ್ನ ಹಾರ್ದಿಕ ನೆನಕೆಗಳು)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. S.U. Bhandare., 'History and Coinage of the Ghorpade chiefs of Gooty', *Numismatic Digest*, Vol. 17, 1993 ; Eds Parameshwari Lal Gupta and Ajay Mitra Shastri ; Indian Institute of Research in Numismatic studies, Anjaneri Maharashtra.

೨. M.Y. Ghorpade., *The Grand Resistance (Murarirao Ghorpade and the 18th Century Deccan)*, Ravidayal Publisher, Delhi, 1992.

೩. **ಚಿತ್ರದುರ್ಗ ಪಾಳೆಯಗಾರರ ದಾಖಲೆಗಳು**., (ಸಂ.) ೨೦೦೭. ಡಾ. ಬಿ. ರಾಜಶೇಖರಪ್ಪ, ಕರ್ನಾಟಕ ರಾಜ್ಯ ಪತ್ರಾಗಾರ ಇಲಾಖೆ, ಬೆಂಗಳೂರು.

೪. 'ಚಿತ್ರದುರ್ಗ–ಮರಾಠ ಬಾಂಧವ್ಯ' (ಲೇಖನ) **ಡಾ. ಬಿ. ಮುದ್ದಾಚಾರಿ, ಸಂಪುಟ** : ಚಂದ್ರವಳ್ಳಿ : (ಸಂ.) ಡಾ. ಎಂ.ವಿ. ಶ್ರೀನಿವಾಸ್, ಲಕ್ಷ್ಮಣ್ ತೆಲಗಾವಿ, ಜಿಲ್ಲಾ ಇತಿಹಾಸ ಸಂಶೋಧನ ಮಂಡಲಿ, ಚಿತ್ರದುರ್ಗ, ೧೯೭೬.

೫. **MAR for the year 1918** ; Ed : R. Narasimhachar, B'lore.


* ದಿ. ೯, ೧೦, ೧೧ ಮಾರ್ಚ್ ೨೦೦೭ ರಂದು ಉಡುಪಿಯಲ್ಲಿ ಜರುಗಿದ Epigraphical Society of India ಮತ್ತು Place Names Society of India ಇವುಗಳ ಸಂಯುಕ್ತ ಸಮ್ಮೇಳನದಲ್ಲಿ, ಈ ಸಂಪ್ರಬಂಧವನ್ನು ಇಂಗ್ಲಿಷಿನಲ್ಲಿ ಮಂಡಿಸಿದಾಗ ಅಲಹಾಬಾದ್ ವಿಶ್ವವಿದ್ಯಾಲಯದಲ್ಲಿ ಪ್ರಾಧ್ಯಾಪಕರಾಗಿರುವ ಡಾ. ದುಬೆ ಅವರು, ಹೃದಯರಾಮ ಜಮಾದಾರ ಎಂಬುದು ಜನಸಾಮಾನ್ಯರ ಉಚ್ಚಾರದಲ್ಲಿ ಹಿರಿದೆ ರಾಮ ಜಮಾದಾರ ಆಗಿರಬೇಕೆಂದೂ, ತಮ್ಮ ಪ್ರದೇಶದಲ್ಲಿ ಹೃದಯರಾಮ ಎಂಬ ವ್ಯಕ್ತಿನಾಮ ತುಂಬ ಪ್ರಚಲಿತವೆಂದೂ ಸೂಚಿಸಿರುತ್ತಾರೆ. ಅವರನ್ನು ಇಲ್ಲಿ ಹಾರ್ದಿಕವಾಗಿ ನೆನೆಯುತ್ತೇನೆ.

ಡಾ. ಗಿರಿಜಾಪತಿ ಎಂ.*

# ಚಿತ್ರದುರ್ಗ ಪಾಳೇಗಾರರ ಹಿತ್ತಾಳೆ ಚೌಡಿಕೆಯ ಶಾಸನ

ಚಿತ್ರದುರ್ಗ ನಗರದಲ್ಲಿ ಹಳೆಯ ಕಾಲದ ಲೋಹದ ವಸ್ತುಗಳನ್ನು ಕೊಂಡು ಮಾರುವ ಅಂಗಡಿಯೊಂದರಲ್ಲಿ ಪ್ರಾಚೀನ ಕನ್ನಡ ಬರಹದ ಕೆತ್ತನೆ ಇರುವ, ಹಿತ್ತಾಳೆಯ ಚೌಡಿಕೆಯೊಂದು ಈಚೆಗೆ ನನ್ನ ಗಮನ ಸೆಳೆಯಿತು. ಆ ಬರಹ ಪರಿಶೀಲಿಸಲಾಗಿ, ಅದು ಚಿತ್ರದುರ್ಗದ ಪಾಳೇಗಾರರಲ್ಲಿ ಪ್ರಸಿದ್ಧನಾದ ಬಿಚ್ಚುಗತ್ತಿ ಬರಮಣ್ಣನಾಯಕನು ಕೆತ್ತಿಸಿದ ಶಾಸನ ಎಂಬುದು ಬೆಳಕಿಗೆ ಬಂದಿತು.

ಹಿತ್ತಾಳೆ ಚೌಡಿಕೆಯ ತೂಕ ೩.೭ ಕಿಲೋ ಗ್ರಾಂಗಳು, ಉದ್ದ ೨೮ ಸೆಂ.ಮೀ., ವ್ಯಾಸ ಒಂದು ಕೊನೆ ೨೭ ಸೆಂ.ಮೀ., ಇನ್ನೊಂದು ಕೊನೆ ೨೪ ಸೆಂ.ಮೀ. ಇದೆ. ಶಾಸನ ಪಾಠ ಕೆತ್ತಿರುವ ಸ್ಥಳ ಉದ್ದ ೧೦ ಸೆಂ.ಮೀ., ಅಗಲ ೮ ಸೆಂ.ಮೀ. ಇದೆ.

### ಶಾಸನದ ಪಾಠ

೧ ಪ್ರಮಾತಿ ಸಂವತ್ಸರದ ಜೆಷ್ಟ ಬ ೭ ಮು (ಯು)
೨ ಶುಕ್ರವಾರದಲು ಉಚಂಗಂಮ್ಮ ಗು
೩ ತಿಯಂಮನವರ ದೇವತಾಸವೆಗೆ
೪ ಶ್ರೀ ಮಂನ್ಮಹನಾಯಕಚಾರ್ಯ
೫ ಕಾಮಗೆತಿ ಕಸ್ತುರಿ ಮೆದಕೆರಿ ನಾಯ
೬ ಕರ ಬರಮಪ ನಾಯಕರು ನೊಟ
೭ ದ ಯಲಂಣನ ಮೊಂಮಗ ವಾರ
೮ ದ ಪರುಸರಾಮಯಗೆ ಮಾಡಿಸಿ
೯ ಕೊಟಂಥಾ ಚಲುಡಿಕೆ ‖ಶ್ರಿ‖

ಪ್ರಮಾಥಿ ಸಂವತ್ಸರದಲ್ಲಿ ಉಚ್ಚಂಗಮ್ಮ ಮತ್ತು ಗುತ್ತಿಯಮ್ಮ ದೇವತೆಗಳ, ಸೇವೆಯ ಸಲುವಾಗಿ ಶ್ರೀ ಮನ್ಮಹಾನಾಯಕಾಚಾರ್ಯ ಕಾಮಗೇತಿ ಕಸ್ತೂರಿ ಮೆದಕೇರಿ ನಾಯಕ ಬರಮಣ್ಣ ನಾಯಕರು, ತೋಟದ ಯಲ್ಲಣ್ಣ ಎಂಬುವನ ಮೊಮ್ಮಗ ವಾರದ ಪರಶುರಾಮಯ್ಯ ಎಂಬುವನಿಗೆ ಮಾಡಿಸಿಕೊಟ್ಟ ಚೌಡಿಕೆ ಇದು ಎಂದು ಆ ಬರಹ ತಿಳಿಸುತ್ತದೆ. ಇದು ಕ್ರಿ.ಶ. ೧೬೯೯ರಲ್ಲಿ ಮಾಡಿಸಿಕೊಟ್ಟ



* # ೧೮೨, ಬಗ್ಗನಡು, ಕೆ.ಆರ್. ಹಳ್ಳಿ ಗೇಟ್, ಹಿರಿಯೂರು ತಾಲ್ಲೂಕು, ಚಿತ್ರದುರ್ಗ ಜಿಲ್ಲೆ.

ಚೌಡಿಕೆ ಎಂದು ವ್ಯಕ್ತವಾಗುತ್ತದೆ. ಬರಮಣ್ಣ ನಾಯಕನು ಅತ್ಯಂತ ದಕ್ಷ ಪಾಳೇಗಾರನಾಗಿದ್ದು ಕ್ರಿ.ಶ. ೧೬೮೯ ರಿಂದ ೧೭೨೧ ರವರೆಗೆ ದೀರ್ಘ ಕಾಲ ಚಿತ್ರದುರ್ಗ ಸಂಸ್ಥಾನದ ಆಳ್ವಿಕೆ ನಡೆಸಿದನು. ಈತನನ್ನು ಬಿಚ್ಚುಗತ್ತಿ ಬರಮಣ್ಣ ನಾಯಕನೆಂದು ಸಹ ಕರೆಯಲಾಗುತ್ತಿತ್ತು. ಈತನ ಆಳ್ವಿಕೆಯಲ್ಲಿ ಚಿತ್ರದುರ್ಗ ಸಂಸ್ಥಾನವನ್ನು ಆಳಿದ ಎಲ್ಲಾ ಪಾಳೇಗಾರರಿಗಿಂತಲೂ ಹೆಚ್ಚಿನ ಸಂಖ್ಯೆಯಲ್ಲಿ ಶಾಸನಗಳನ್ನು ಕೆತ್ತಿಸಿರುವುದು ವ್ಯಕ್ತವಾಗಿದೆ.

ಈ ಹಿಂದೆ ಚಿತ್ರದುರ್ಗ ಶಾಸನ ಸಂಶೋಧಕರಾದ ಡಾ॥ ಬಿ. ರಾಜಶೇಖರಪ್ಪನವರಿಗೆ ದೊರೆತ ಮೂರು ಹಿತ್ತಾಳೆ ಚೌಡಿಕೆಯ ಶಾಸನಗಳಲ್ಲಿ ಎರಡು ಚಿತ್ರದುರ್ಗದ ಪಾಳೆಗಾರರ ಶಾಸನಗಳಾಗಿದ್ದು ಆ ತರುವಾಯ ದೊರೆತಿರುವ ಚೌಡಿಕೆಯ ಮೇಲಿನ ಮೂರನೆಯ ಶಾಸನ ಇದಾಗಿದೆ. ಅದರಲ್ಲಿ ಒಂದು ಪ್ರಸ್ತುತ ಚೌಡಿಕೆಯನ್ನು ನೀಡಿದ ಬರಮಣ್ಣ ನಾಯಕನದು, ಅದು ೧೬೩೩ನೆಯ ಖರ ಸಂವತ್ಸರ ಅಂದರೆ ಕ್ರಿ.ಶ. ೧೭೧೧ಕ್ಕೆ ಸೇರಿದ್ದಾಗಿದೆ. ಎರಡನೆಯ ಚೌಡಿಕೆಯ ಶಾಸನ ಇಮ್ಮಡಿ ಕಸ್ತೂರಿ ರಂಗಪ್ಪ ನಾಯಕನ ಕಾಲದ್ದು. ಬಹುಶಃ ಕ್ರಿ.ಶ. ೧೭೪೭ನೆಯ ವರ್ಷದ್ದು. ಮೂರನೆಯ ಶಾಸನ ಸವೆದುಹೋಗಿ ಅಸ್ಪಷ್ಟವಾಗಿದೆ ಎಂದು ತಿಳಿಸಿರುತ್ತಾರೆ. ಈ ಒಂದು ಹಿನ್ನೆಲೆಯಲ್ಲಿ ನೋಡಿದಾಗ, ಚೌಡಿಕೆಯ ಮೇಲೆ ದೊರೆತ ಚಿತ್ರದುರ್ಗ ಪಾಳೇಗಾರರ ಮೂರನೆಯ ಶಾಸನ, ಪ್ರಸ್ತುತ ಶಾಸನವಾಗಿದೆ. ಅಷ್ಟೇ ಅಲ್ಲ ಇದು ಚೌಡಿಕೆಯ ಮೇಲಿನ ಅತ್ಯಂತ ಹಳೆಯ ಶಾಸನವಾಗಿದೆ.

ಚಿತ್ರದುರ್ಗದ ಪಾಳೇಗಾರರು ಅತ್ಯಂತ ಭಕ್ತಿಯಿಂದ ನಡೆದುಕೊಂಡ ದೇವತೆಗಳಲ್ಲಿ ಚಿತ್ರದುರ್ಗದ ಈಗಿನ ದೊಡ್ಡಪೇಟೆಯಲ್ಲಿರುವ ಉಚ್ಚಂಗಮ್ಮ ದೇವತೆಯು ಒಬ್ಬಳಾಗಿದ್ದಾಳೆ. ಇದೇ ಶಾಸನದಲ್ಲಿ ಹೇಳಿರುವ ಗುತ್ತಿಯಮ್ಮ ಮಾತ್ರ ಯಾವುದೆಂದು ಸ್ಪಷ್ಟವಾಗಬೇಕಾಗಿದೆ. ಉಚ್ಚಂಗಮ್ಮ ದೇವತೆಯನ್ನು ಉತ್ಸವಾಂಬೆ ಎಂಬುದಾಗಿ ಸಹ ಕರೆಯುವುದುಂಟು. ಮೂಲತಃ ಉಚ್ಚಂಗಿದುರ್ಗದಲ್ಲಿದ್ದ ಈ ದೇವತೆಯ ಉತ್ಸವ ಮೂರ್ತಿಯನ್ನು ಚಿತ್ರದುರ್ಗಕ್ಕೆ ತರಿಸಿಕೊಂಡ ಮೇಲೆ, ಪಾಳೇಗಾರರು ಇದರ ಭಕ್ತರಾದ ಮೇಲೆ, ಈ ದೇವಾಲಯ ಪ್ರವರ್ಧಮಾನಕ್ಕೆ ಬಂತು ಎಂದು ತಿಳಿದುಬಂದಿದೆ. ಈ ದೇವತೆಗೆ ಪಾಳೇಗಾರರು ಬೇವಿನ ಸೀರೆ ಉಟ್ಟು ಹರಕೆ ಸಲ್ಲಿಸುವುದು, ಸಿಡಿ ಆಡಿಸುವುದು, ಚೌಡಿಕೆಗಳನ್ನು ಮಾಡಿಸಿಕೊಡುವುದು, ಇತ್ಯಾದಿಯಾಗಿ ನಾನಾ ರೀತಿಯಲ್ಲಿ ಭಕ್ತಿಯನ್ನು ತೋರಿಸಿ ನಡೆದುಕೊಂಡಿದ್ದಾರೆ. ಈಗಿರುವ ದೇವಸ್ಥಾನದ ಪ್ರಾಕಾರ ಮಂಟಪವನ್ನು, ಗೋಪುರವನ್ನು ಪ್ರಸ್ತುತ ಚೌಡಿಕೆಯನ್ನು ನೀಡಿದ ಬಿಚ್ಚುಗತ್ತಿ ಬರಮಣ್ಣನಾಯಕನು ಕಟ್ಟಿಸಿದನೆಂದು ತಿಳಿದುಬರುತ್ತದೆ.

ಹಿರಿಯ ಸಂಶೋಧಕರಾಗಿದ್ದ ಹುಲ್ಲೂರು ಶ್ರೀನಿವಾಸ ಜೋಯಿಸರು ಈ ದೇವತೆಯನ್ನು ಕುರಿತ ಪ್ರಾಚೀನ ಕಾಲದ ಕೆಲವು ಪ್ರಾರ್ಥನಾ ಪದ್ಯಗಳನ್ನು ಸಂಗ್ರಹಿಸಿ ಪ್ರಕಟಿಸಿದ್ದಾರೆ. ಈ ದೇವತೆ ಮತ್ತು ಪಾಳೇಗಾರರ ವಿಶಿಷ್ಟ ಸಂಬಂಧವನ್ನು ಇಲ್ಲಿಯ ಜನಪದ ಸಾಹಿತ್ಯದಲ್ಲೂ ಸಹ ವ್ಯಕ್ತವಾಗಿದೆ. ಹೀಗಾಗಿ ಪಾಳೇಗಾರರು ಈ ದೇವತೆಯ ಬಗ್ಗೆ ವಿಶೇಷ ಭಕ್ತಿ ಇದ್ದ ಕಾರಣ ಬರಮಣ್ಣ ನಾಯಕನು ಈ ಹಿತ್ತಾಳೆ ಚೌಡಿಕೆಯನ್ನು ಮಾಡಿಸಿಕೊಟ್ಟಿರುವುದು ಸಹಜವೇ ಆಗಿದೆ. ಚೌಡಿಕೆ ಸ್ತ್ರೀ ದೇವತೆಗಳಿಗೆ ನುಡಿಸುವ ವಾದ್ಯವೆಂಬುವುದು ಎಲ್ಲರಿಗೂ ತಿಳಿದ ಸಂಗತಿಯಾಗಿದೆ. ಚೌಡಿಕೆಯನ್ನು ಮರದಲ್ಲಿ ಮಾಡುತ್ತಿದ್ದಂತೆ, ಲೋಹದಲ್ಲಿಯೂ ಸಹ ಮಾಡುತ್ತಿದ್ದರು ಎಂಬುದಕ್ಕೆ ಪ್ರಸ್ತುತ ಹಿತ್ತಾಳೆ ಚೌಡಿಕೆ ಸಾಕ್ಷಿಯಾಗಿದೆ.

(ಈ ಪ್ರಬಂಧವನ್ನು ಮಂಡಿಸಲು ಪ್ರೋತ್ಸಾಹ ಹಾಗೂ ಎಲ್ಲಾ ರೀತಿಯಲ್ಲಿ ಮಾರ್ಗದರ್ಶನ ನೀಡಿದ ನನ್ನ ಆತ್ಮೀಯ ಸ್ನೇಹಿತರು ಮತ್ತು ಕರ್ನಾಟಕದ ಹಿರಿಯ ಶಾಸನ ಸಂಶೋಧಕರೂ ಆಗಿರುವ ಚಿತ್ರದುರ್ಗದ ಡಾ. ಬಿ. ರಾಜಶೇಖರಪ್ಪನವರಿಗೆ ನನ್ನ ಹೃತ್ಪೂರ್ವಕ ವಂದನೆಗಳು.)



## ಆಧಾರಸೂಚಿ

೧. ಎಂ.ಎಸ್. ಪುಟ್ಟಣ್ಣ., (೧೯೨೪), ಚಿತ್ರದುರ್ಗದ ಪಾಳಯಗಾರರು.
೨. ಡಾ. ಬಿ. ರಾಜಶೇಖರಪ್ಪ., (೨೦೦೧), ಇತಿಹಾಸ ಕಥನ.

ಡಾ. ಬಿ. ನಂಜುಂಡಸ್ವಾಮಿ*

# ಉರವಕೊಂಡ ಗವಿಮಠದ ಚನ್ನಬಸವಸ್ವಾಮಿಗಳಿಗೆ ಮುಮ್ಮಡಿ ಕೃಷ್ಣರಾಜ ಒಡೆಯರ ಗ್ರಾಮ ಭೂದಾನ ಪತ್ರ

ಮೈಸೂರು ನಾಡಿನ ಧರ್ಮಪ್ರಭು ಮುಮ್ಮಡಿ ಕೃಷ್ಣರಾಜ ಒಡೆಯರ್ (೧೭೯೪-೧೮೬೮) ಅವರು ಆಂಧ್ರ ಪ್ರದೇಶದ ಅನಂತಪುರ ಜಿಲ್ಲೆ ಉರವಕೊಂಡ ಗವಿಮಠದ ಚನ್ನಬಸವಸ್ವಾಮಿಗಳಿಗೆ ಕೊಟ್ಟ ಗ್ರಾಮಭೂದಾನದ ಪತ್ರವನ್ನು ಮೈಸೂರು ಸ್ಟಾರ್ ಸಂಸ್ಥಾಪಕರಾದ ಯಜಮಾನ್ ವೀರಸಂಗಪ್ಪನವರು ಸನ್ ೧೮೮೬ನೇ ಇಸವಿ ಸೆಪ್ಟಂಬರ್ ೨೦ನೇ ತಾರೀಖು ಸ್ಟಾರ್ ಪತ್ರಿಕೆಯಲ್ಲಿ ಪ್ರಕಟಿಸಿದ್ದ ಕರಸ್ಪಾನ್‌ಡೆನ್ಸ್ ಪುಸ್ತಕದ ೨೭೪-೨೭೭ ಪುಟದಲ್ಲಿ ಅಚ್ಚಾಗಿದೆ. ಇಂದಿಗೂ ಉರವಕೊಂಡ ಮಠದವರಿಗೆ ಚಿತ್ರದುರ್ಗ ಜಿಲ್ಲೆ ಮೊಳಕಾಲ್ಮೂರು ದೇವಸಮುದ್ರದ ಬುಡ್ಡೇನಹಳ್ಳಿಯ ಹತ್ತಿರ ಗ್ರಾಮಭೂದಾನವಾಗಿ ಪಡೆದ ಭೂಮಿ ಇದೆ. ಮೈಸೂರು ಸ್ಟಾರ್ ಯಜಮಾನ್ ವೀರಸಂಗಪ್ಪನವರು ಈ ಗ್ರಾಮಭೂದಾನ ಪತ್ರವನ್ನು ಮುದ್ರಣ ಮಾಡಿದ ಕಾರಣ ಈ ಹಿಂದೆ ರಾಜಮಹಾರಾಜರು ತಮ್ಮ ಮಾತಾ-ಪಿತೃಗಳ ಪಂಚಭೂತತ್ವನ್ನು ಹೊಂದಿದಾಗ ಅವರ ಸ್ವರ್ಗಲೋಕಪ್ರಾಪ್ತಿಗೆ ತ್ರಿಮತಸ್ಥರಿಗೆ ಅಲ್ಲದೆ ವೀರಶೈವ ಜಂಗಮರಿಗೆ, ಗುರು, ವಿರಕ್ತರಿಗೂ ಭೂದಾನ ಕೊಡುತ್ತಿದ್ದರು ಎಂಬುದನ್ನು ಉದಾಹರಣೆ ಸಮೇತ ವಿವರಿಸಲು ತಮಗೆ ಲಭ್ಯವಾದ ಉರುವಕೊಂಡ ಮಠದ ಗ್ರಾಮಭೂದಾನ ಪತ್ರವನ್ನು ಯಜಮಾನ್ ವೀರಸಂಗಪ್ಪನವರು ಮುದ್ರಿಸಿದರು. ಅಂದಿಗೆ ಅದೊಂದು ಐತಿಹಾಸಿಕ ದಾಖಲೆಯೇ.

ಕ್ರಿ.ಶ. ೧೮೨೪ರ ಕಾಲಮಾನದ ಈ ಗ್ರಾಮದಾನವನ್ನು ಸ್ವೀಕರಿಸಿದರು ಯಾದವಗಿರಿ ಶಿವಾನುಭವ ಚರಮೂರ್ತಿ ರಾಚೋಟಿಸ್ವಾಮಿಗಳಾದ ಇವರ ಕರಸಂಜಾತ ಕರೀವೃಷಭೇಂದ್ರ ಸ್ವಾಮಿಗಳು ಇವರ ಕರಸಂಜಾತರು ಶ್ರೀ ಚನ್ನಬಸವಸ್ವಾಮಿಗಳು. ಗುರು ಶಿಷ್ಯರು ಅರ್ಥಾತ್ ಕರಿವೃಷಭೇಂದ್ರ ಸ್ವಾಮಿಗಳು ಮತ್ತು ಶ್ರೀ ಚನ್ನಬಸವ ಸ್ವಾಮಿಗಳು ಉರವಕೊಂಡದಲ್ಲಿ ಗವಿಮಠದಲ್ಲಿ ನಡೆಯುವ ನಿತ್ಯದಾಸೋಹ ಮೊದಲಾದ ಧರ್ಮಕಾರ್ಯಗಳಿಗೆ ಅರ್ಪಣೆಯಾಗಬೇಕೆಂದು ಧರ್ಮಪ್ರಭು ಮುಮ್ಮಡಿ ಕೃಷ್ಣರಾಜ ಒಡೆಯರ್‌ರವರು ತಮ್ಮ ಮಾತೋಶ್ರೀ ಚಲುವಾಜಮ್ಮಣ್ಣಿ ಯವರು ಆಷಾಢ ಶುದ್ಧ ೧, ಗುರುವಾರದಲ್ಲಿ ಸ್ವರ್ಗಸ್ಥರಾದರು ಅವರಿಗೆ ಶಾಶ್ವತವಾದ ಪುಣ್ಯಲೋಕ ಪ್ರಾಪ್ತಿಗೋಸ್ಕರ ಆಷಾಢ ಬಹುಳ ೧೩ನೇ ಸೋಮವಾರವಾದ ಹನ್ನೆರಡನೇ ಪುಣ್ಯ ದಿವಸದಂದು ಈ ಗ್ರಾಮದಾನವನ್ನು ನೀಡಲಾಗಿದೆ. ಮಠದಲ್ಲಿ ನಡೆಯುತ್ತಾ ಇದ್ದ ನಿತ್ಯ ದಾಸೋಹ ಮೊದಲಾದ ಧರ್ಮಕಾರ್ಯಗಳಿಗೆ ಬರುವ ಆದಾಯವನ್ನು ಬಳಸಿಕೊಂಡು ಶಿಷ್ಯ ಪರಂಪರೆಯಾಗಿ ಶಾಶ್ವತವಾಗಿ ಅನುಭವಿಸಿಕೊಂಡು ಸರ್ಕಾರದ ಶ್ರೇಯಸ್ಸನ್ನು ಸದಾ ಕೋರಬೇಕು ಎಂದು ಹೇಳಲಾಗಿದೆ.

ಮೂಲಪತ್ರವು ಉರವಕೊಂಡ ಸಂಸ್ಥಾನದಲ್ಲಿ ಇರಬಹುದು. ಅವಲೋಕನಕ್ಕೆ ಲಭ್ಯವಾಗಿಲ್ಲ. ಅರಮನೆ ಕಾಗದ ಪತ್ರಗಳು ಸಾಕಷ್ಟು ನಷ್ಟವಾಗಿರುವುದರಿಂದ ಅಲ್ಲಿಯೂ ಪತ್ರ ದೊರಕುವುದು ಕಷ್ಟ. ಯಜಮಾನ್ ವೀರಸಂಗಪ್ಪನವರು ತಮಗೆ ಲಭ್ಯವಾದ ಪತ್ರವನ್ನು ಯಥಾವತ್ತಾಗಿ ಮುದ್ರಣ ಮಾಡಿದ್ದರಿಂದ ಐತಿಹಾಸಿಕ ಮಹತ್ತ್ವವಾದ ಒಂದು ದಾಖಲೆ ಉಳಿಸಿದ ಕೀರ್ತಿ ಯಜಮಾನ್ ವೀರಸಂಗಪ್ಪನವರಿಗೆ ಸಲ್ಲಬೇಕು.

**ಉರವಕೊಂಡ ಗವಿಮಠದ ಚನ್ನಬಸವಸ್ವಾಮಿಗಳಿಗೆ**
**ಮುಮ್ಮಡಿ ಕೃಷ್ಣರಾದ ಒಡೆಯರವರ ಗ್ರಾಮಭೂದಾನ ಪತ್ರ**

ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲೀವಾಹನ ಶಕ ವರುಷಂಗಳು ೧೭೪೬ನೇ ವರ್ತಮಾನ ಸ್ವಭಾನು ಸಂ॥ ಶ್ರಾವಣ ಶುದ್ಧ ೧ ಗುರುವಾರದಲ್ಲು ಆತ್ರೇಯಗೋತ್ರದ ಅಶ್ವಲಾಯನ ಸೂತ್ರದ ಋು(ಖ್)ಶಾಖಾನುವರ್ತಿಗಳಾದ ಇಮ್ಮಡಿ ಕೃಷ್ಣರಾಜವಡೆಯರವರ ಪೌತ್ರರಾದ ಚಾಮರಾಜ ವಡಯರವರ ಪುತ್ರ ರಾಜಶ್ರೀ ಮೆತ್ಸಸ್ತ ಭೂಮಂಡಲ ಮಂಡನಾಯಮಾನಾ ನಿಖಿಲದೇಶಾವತಂಸ ಕರ್ನಾಟಕ ಜನಪದ ಸಂಪದಧಿಷ್ಟಾನಭೂತ ಶ್ರೀ ಮನ್ಮಹೀಶೂರ

*** ಪಂಡಿತ್ ತಾರಾನಾಥ್ ಆಯುರ್ವೇದ ಚಿಕಿತ್ಸಾಲಯ, ತುಮಕೂರು ಷಾಪಿಂಗ್ ಕಾಂಪ್ಲೆಕ್ಸ್, ಬಿ.ಹೆ.ಚ್. ರಸ್ತೆ, ತುಮಕೂರು.**

ಸಂಸ್ಥಾನ ಮಧ್ಯದೇದೀಪ್ಯಮಾನ ಅವಿಕುಲಸುಧಾಕರ ಕುಲಕ್ರಮಾಗತ ರಾಜಕ್ಷಿತಿಪಾಲ ಪ್ರಮುಖ ನಿಖಿಲ ರಾಜಾಧಿರಾಜ ಮಹಾರಾಜ ಚಕ್ರವರ್ತಿ ಮಂಡಲಾನುಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರ ಪ್ರೌಢಪ್ರತಾಪಾಪ್ರತಿಮ ವೀರನರಪತಿ ಬಿರುದೆಂತೆಂಬರಗಂಡ ಲೋಕೈಕವೀರ ಯದುಕುಲಪಯಃ ಪಾರಾವಾರ ಕಳಾನಿಧಿಶಂಖ ಚಕ್ರಾಂಕುಶಕುಠಾರ ಮಕರ ಮತ್ಸ್ಯ ಶರಭಸಾಳ್ವ ಗಂಡಭೇರುಂಡ ದರಣೀವರಾಹ ಹನುಮದ್ಗರುಡ ಕಂಠೀರವಾದ್ಯನೇಕ ಬಿರುದಾಂಕಿತರಾದ ಮಹಿಸೂರು ಕೃಷ್ಣರಾಜವಡೆಯರವರು ಯಾದವಗಿರಿ ಶಿವಾನುಭವ ಚರಮೂರ್ತಿ ರಾಚೊಟಿಸ್ವಾಮಿ ಕರಕಮಲ ಸಂಜಾತ ಕರೀವೃಷಭೇಂದ್ರಸ್ವಾಮಿ ಪಾಣಿಪದ್ಮೊದ್ಭವ ಶ್ರೀ ಚನ್ನಬಸವ ಸ್ವಾಮಿಗಳವರಿಗೆ ಬರಿಸಿಕೊಟ್ಟ ಗ್ರಾಮ ಭೂದಾನ ಸಾದನವೆತೆಂದರೆ ಶ್ರೀ ಕರಿವೃಷಭೇಂದ್ರಸ್ವಾಮಿಗಳವರ ಸಂಗಡ ಮಹಿಸೂರಿಗೆ ದಯಮಾಡಿದಲ್ಲಿ ಗುತ್ತಿ ತಾಲೋಕು ಪೈಕಿ ವುರುವಕೊಂಡೆ ಕಸಬೆ ಗ್ರಾಮದಲ್ಲಿರುವ ಗವಿಮಠಕ್ಕೆ ನಿತ್ಯದಾಸೋಹ ಮೊದಲಾದ ಧರ್ಮದ ಬಗ್ಗೆ ಶಾಶ್ವತವಾಗಿ ನಡಿಯುವ ಹಾಗೆ ಅಪ್ಪಣೆಯಾಗಬೇಕೆಂಬದಾಗಿ ಹಜಾರದಲ್ಲಿ ಶ್ರುತವಾದ್ದರಿಂದ ನಮ್ಮ ಮಾತೋಶ್ರೀ ಚಲುವಾಜಮ್ಮಣ್ಣಿಯವರು ಈ ಸಂವತ್ಸರದ ಆಷಾಢ ಶುದ್ಧ ೧ ॥ ಗುರುವಾರದಲ್ಲೂ ಸ್ವರ್ಗಸ್ಥರಾದವರಿಗೆ. ಶಾಶ್ವತವಾದ ಪುಣ್ಯಲೋಕಾವಾಸವಾಗಿ ಇರುವದ ಕ್ಕೋಸ್ಕರ ಈ ಆಷಾಢ ಬಹುಳ ೧೩ ಸೋಮವಾರವಾದ ಹನ್ನೆರಡನೇ ಪುಣ್ಯದಿವಸದಲ್ಲು ಮೊಣಕಾಲುಮುರಿ ತಾಲ್ಲೋಕು ಪೈಕಿ ದೇವಸಮುದ್ರ ಹೋಬಳಿ ಒಳಿತವಾದ ಬುಡ್ಡೆನಹಳ್ಳಿ ಅಸಲಿ ಒಂದಕ್ಕೆ ಬೆರಿಜು ಕಂಠೀರಾಯಿ ಐನೂರು ಮೂವತ್ತು ಒಂದು ವರಾಹಾವು ಎರಡು ಹಣ ಮೂರು ವಿಸಾ ಪೈಕಿ ವಿಷು ಸಂವತ್ಸರದ ಸಾಗುವಳಿ ಕಂಠೀರಾಯಿ ನಾನೂರು ಹತ್ತೊಂಬತ್ತು ವರಹಾವು ಏಳು ಹಣ ಜಾತ ಐಯಿಂದಾ ಸಾಗುವಳಿ ಆಗತಕ್ಕ ಲುಕ್ಸಾಸಾನು ಕಂಠೀರಾಯಿ ನೂರಹನ್ನೊಂದು ವರಹಾವು ಐದು ಹಣ ಮೂರು ವೀಸವು ಭಯಂಬೆರಿಜು ಕಂಠಿರಾಯಿ ಐನೂರು ಮೂವತ್ತೊಂದು ವರಹಾವು ಎರಡು ಹಣ ಮುರುವೀಸ ಇದಲ್ಲದೆ ಈ ಗ್ರಾಮಕ್ಕೆ ಸೇರಿದ ಸುಂಕಾ ಹುಲ್ಲು ಬನ್ನಿ ಮುಂತಾದ ಬಾಜಿಬಾಬು ಸಹವಾಗಿ ಈ ಗ್ರಾಮವನ್ನು ನಿಖಿಲ ಸುರಾಸುರ ಮಣಿಮಕುಟ ತೇಜೋರಾಜಿನಿರಾಜಿತ ಪಾದ ಪೀಠರಾದ ಶ್ರೀ ಚಾಮುಂಡೇಶ್ವರೀ ಪ್ರೀತ್ಯರ್ಥವಾಗಿ ಯಾದವಗಿರಿ ಶಿವಾನುಭವ ಚರಮೂರ್ತಿ ರಾಚೋಟಿಸ್ವಾಮಿ ಕರಕಮಲ ಸಂಜಾತ ಕರಿವೃಷಭೇಂದ್ರಸ್ವಾಮಿ ಪಾಣಿಪದ್ಮೋದ್ಭವ ಶ್ರೀ ಚನ್ನಬಸವಸ್ವಾಮಿಗಳಸವರಿಗೆ ॥ ಆತ್ರೇಯಸಗೋತ್ರ ಆಶ್ವಲಾಯನ ಸೂತ್ರದಋಕ್ಶಾಖಾನುವರ್ತಿಗಳಾದ ಯಿಂಮ ಕೃಷ್ಣರಾಜ ವಡೆಯರವರ ಪೌತ್ರರಾದ ಚಾಮರಾ ವಡೆಯರವರ ಪುತ್ರರಾದ ಶ್ರೀಮತ್ಸಮಸ್ತ ಭೂಮಂಡ ಮಂಡಲಾಯಮಾನ ನಿಖಿಲದೇಶಾವತಂಸಕ ಕರ್ನಾಟ ಜನಪದ ಸಂಪದಧಿಷ್ಠಾನ ಭೂತ ಶ್ರೀಮನ್ ಮಹಿಸೂ ಸಂಸ್ಥಾನ ಮದ್ಯದೆದೀಪ್ಯಮಾನ ಅಪಿಕಲ ಸುಧಾಕ ಕುಲಕ್ರಮಾಗತರಾಜ ಕ್ಷಿತಿಪಾಲ ಪ್ರಮುಖ ನಿಖಿಲರಾಜಾಧಿರಾ ಮಹಾರಾಜ ಚಕ್ರವರ್ತಿ ಮಂಡಲಾನು ಭೂತದಿವ್ಯರ ಸಿಂಹಾಸನಾರೂಢ ಶ್ರೀಮದ್ರಾ[ಜ]ಧಿರಾಜ ಪರಮೇಶ್ವರ ಪ್ರೌ ಪ್ರತಾಪ ಅಪ್ರತಿಮವೀರ ನರಪತಿ ಬಿರುದೆಂತೆಂಬರ ಗಂ ಲೋಕೈಕವೀರ ಯದುಕುಲಪಯಃ ಪಾರಾವಾರ ಕಳಾನಿ ಶಂಖಚಕ್ರಾಂಕುಶ ಕುಠಾರಮಕರಮತ್ಸ್ಯ ಶರಭಸಾ ಗಂಡಭೇರುಂಡ ಧರಣೀವರಾಹ ಹನುಮದ್ಗರು ಕಂಠೀರವಾದ್ಯನೇಕ ಬಿರುದಾಂಕಿತರಾದ ಮೈಸೂರ ಶ್ರೀಕೃಷ್ಣರಾಜವಡೆಯರವರು ಸರ್ವಮಾನ್ಯವಾಗಿ ವುರುಕೊಂ ಕಸಬ ಗ್ರಾಮದಲ್ಲಿ ಇರುವ ಗವೀಮಠಕ್ಕೆ ಅಪ್ಪಣೆ ಕೊ ಇದೆವೆಯಾಗಿ ಆ ಮೇರಿಗೆ ಈ ಗ್ರಾಮವನ್ನು ಸ್ವಭಾ ಸಂತ್ಸರದಾರಭ್ಯ ಈ ಗ್ರಾಮಕ್ಕೆ ಸೇರಿದ ಬಾಜೆಬಾಬುಸಹ ಮಠದ ಹಾವಾಲ್ ಮಾಡಿಕ್ಕೊಳ್ಳುವದು । ಇಲ್ಲಿಂದಾ ಮುಂ ಈ ಗ್ರಾಮದಯಲ್ಲೆ ಚತ್ತುಶೀಮೆವೊಳಗಣ ಕಾಡಾರಂ ನೀರಾರಂಬ ವುನೆ ವೊಗವಣ ಜಾತಿಕೂ ಸಮಯಚಾರವುಲ್ಲು ಬನ್ನಪುಪ್ಪಾರಿಕೆ ಕಾಣಿಕೆ ಬೆಡಕೆ ಮದು ಕೂಡಾವಳಿ ಸುಂಕಾ ಪೊಂಮು ವ್ಯವರಣೆ ಚರಾದಾ ವುರವಳಿ ಫಲವೃಕ್ಷ ಈಚಲಪೈರು ಮುಂತಾ ಆಸಕಲಸೊಮ್ಯದಿಂದಾ ಎಷ್ಟು ಹುಟ್ಟಿದಾಗ್ಯೂ ಈ ಮಠ ಧರ್ಮಕ್ಕೆ ಆಗತಕ್ಕ ವುಪಯುಕ್ತ ಮಾಡಿಕೊಂಡ ಅನುಭವಿಸುವದು ಈ ಗ್ರಾಮದಯಲ್ಲೆ ಚತುಸ್ಸೀಮೆವೊಳಗ ನಿಧಿನಿಕ್ಷೇಪಜಲತರುಪಾಷಾಣ ಅಕ್ಷಿಣ ಆಗಾವಿ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗತೇಜಸೋಮ್ಯಂಗಳು ಈ ಮಠಕ್ಕೆ ಸಲ್ಲುವದು ಈ ಗ್ರಾಮದ ಚತುಸ್ಸಿಮೆವಳಗೆ ಶ್ರೀಗಂ ಹೊರ್ತು ಕಡಮೆ ಮಡ್ಡಿ ಪತಂಗ ಪತ್ರೆಳಿಶೀಗೆ ಮುಂತಾ ಜಿನಸುಗಳೆಲ್ಲಾ ಈ ಮಠಕ್ಕೆ ಸಲ್ಲುವದು ॥ ಈ ಮೇರಿ ನಿರುಪಾಧಿಕದಲ್ಲಿ ಸರ್ವಮಾನ್ಯವಾಗಿ ಅಪ್ಪಣೆ ಕೊಟ್ಟು ಇರು ಈ ಗ್ರಾಮವನ್ನು ಈ ಮಠದಲ್ಲಿ ಮಾಡುವ ನಿತ್ಯದಾಸೋ ಮೊದಲಾದ ಧರ್ಮಗಳಿಗೆ ಉಪಯುಕ್ತ ಮಾಡಿಕೊಳ್ಳು ಈ ಮಠದ ನಿಮ್ಮ ಶಿಷ್ಯಪರಂಪರೆಯಾಗಿ ಶಾಶ್ವತವಾ ಅನುಭವಿಸಿಕೊಂಡು ಸರಕಾರದಾರ್ಶೀಯ ಪ್ರಾರ್ಥನೆ ಮಾಡು ಇರುವದೆಯಂದು ಆತ್ರೇಯಸಗೋತ್ರದ ಆಶ್ವಲಾಯನ ಸೂತ್ರ

ಖುಕ್ಯಾಖಾನುವರ್ತಿಗಳಾದ ಇಮ್ಮಡಿಕೃಷ್ಣರಾಜವಡೆಯರವರ ಪೌತ್ರರಾದ ಮುಂಮಡಿ ಚಾಮರಾಜ ವಡೆಯರವರ ಪುತ್ರರಾದ ಶ್ರೀಮಸ್ತಭೂಮಂಡಲ ಮಂಡನಾಯಮಾನಾ ನಿಖಿಲದೇಶ ವತಂಸ ಕರ್ನಾಟಕ ಜನಪದ ಸಂಪದಧಿಷ್ಠಾನಭೂತ ಶ್ರೀಮನ್‌ಂಮಹಿಸೂರ ಮಹಾಸಂಸ್ಥಾನ ಮಧ್ಯದೆದೀಪ್ಯಮಾನ ಅವಿಕಲ ಸುಧಾಕರಕುಲಕ್ರಮಾಗತಾ ರಾಜಕ್ಷಿತಿಪಾಲಪ್ರಮುಖ ನಿಖಿಲರಾಜಾಧಿರಾಜಮಹಾರಾಜ ಚಕ್ರವರ್ತಿ ಮಂಡಲಾನು ಭೂತ ದಿವ್ಯರತ್ನ ಸಿಂಹಾಸನಾರೂಢ ಶ್ರೀಮದ್ರಾಜಾಧಿರಾಜ ಪರಮೇಶ್ವರ ಪ್ರೌಢಪ್ರತಾಪ [ಅ]ಮಿತ ವೀರನರಪತಿ ಬಿರುದಂತೆಂಬರಗಂಡ ಲೋಕೈಕ ವೀರ ಯದುಕುಲಪಯಃ ಪಾರಾವಾರಕಳರನಿಧಿ ಶಂಖಚಕ್ರಾಂಕುಶಕುಠಾರ ಮಕರಮತ್ಸ್ಯ ಶರಭಸಾಳ್ವಗಂಡಭೇರುಂಢ ಧರಣೀರರಾಹ ಹನುಮದ್ಗರುಡ ಕಂದ್ಯೆನೇಶೀರವಾಕ ಬಿರುದಾಂಕಿತರಾದ ಮಹಿಸೂರ ಕೃಷ್ಣರಾಜವಡೆಯರವರು ಯಾದವಗಿರಿ ಶಿವಾನುಭವ ಚರಮೂರ್ತಿ ರಾಚೋಟಿಸ್ವಾಮಿ ಕರಕಮಲ ಸಂಜಾತ ಕರಿವೃಷಭೇಂದ್ರಸ್ವಾಮಿ ಪಾದಪದ್ಮೊದ್ಭವ ಶ್ರೀ ಚನ್ನಬಸವ ಸ್ವಾಮಿಗಳವರಿಗೆ ಬರಶಿ ಕೊಟ್ಟ ಭೂಗ್ರಾಮದಾನ ಸಾಧನಾ॥

ತಾರೀಖು ೮ನೇ ಮಾಹೇ ಆಗಷ್ಟು ಸನ್ ೧೮೨೩ನೇ ಇಸವಿ ಖತಾ ಪ್ರಸುನ್ಯೆಯ ಮುನಿಷಿ ಹುಜೂರು ಸ್ವದಸ್ತೂರು॥ **ಸಾಲಿಯಾನಾ ಕಂಠೀರಾಯಿ ಐನೂರು ಮುವತ್ತೊಂದು ವರಹಾವು ಎರಡು ಹಾಗ ಮುರುವೀಸಾ ಇದು ಶಿವಾಯಿ ಇದರ ಬಾಜೇಬಾಬು** ಸುದಾ ಈ ಗ್ರಾಮವನ್ನು ನಿಮ್ಮ ಮಠದ ಪಾರಂಪರ್ಯವಾಗಿ ಸುಖದಿಂದ ಸರ್ವಮಾನ್ಯವಾಗಿ ಅನುಭವಿಸಿಕೊಂಡು ನಮ್ಮ ಸಂಸ್ಥಾನದ ಶ್ರೇಯಃ ಪ್ರಾರ್ಥನೆ ಮಾಡಿಕೊಂಡು ಸುಖದಿಂದಾ ಇರುವದು ಎಂದು ಬರಶಿಕೊಟ್ಟ ಭೂದಾನ ಶಾಸನಾ ಸಹಿರುಜು

ಶ್ರೀಕೃಷ್ಣ ಎಂದು ಖಾಸಾ ಸೈನು ಇದೆ
ಕನ್ನಡ ಅಕ್ಷರದ ಬಟುವಿನ ಚಿಕ್ಕ ಮೊಹರು ಇದೆ.



ಡಾ. ಗಿರಿಜಾ*

# ರಾಮಘಡದ ಹುಲಿಮಾನಪ್ಪನ ಮಠದ ಅವಶೇಷಗಳು ಮತ್ತು ಕೆಲವು ದಾಖಲೆಗಳು

ಬಿಸಿಲು ಬಳ್ಳಾರಿ ಎಂದೇ ಬಳ್ಳಾರಿ ಜಿಲ್ಲೆಯು ಬಿಸಿಲಿಗೆ ಹೆಸರಾಗಿದ್ದರೆ, ಅದಕ್ಕೆ ತದ್ವಿರುದ್ಧವೆಂಬಂತೆ ಮಲೆನಾಡು ಎಂದು ಪ್ರಸಿದ್ಧಿ ಪಡೆದಿರುವುದು ಸಂಡೂರು ತಾಲೂಕು. ಈ ತಾಲೂಕಿನ ಸುಶೀಲನಗರ (ದೌಲತ್‌ಪುರ) ಗ್ರಾಮದಿಂದ ಸುಮಾರು ೯ ಕಿ.ಮೀ ಅಂತರದಲ್ಲಿರುವ ಅತಿ ಎತ್ತರದ ಬೆಟ್ಟದ ಮೇಲಿನ ರಾಮಘಡ ಗಣಿ ಪ್ರದೇಶವನ್ನೊಂದಿದ ಕಾಡಿನ ಮಧ್ಯದ ಒಂದು ಕೊಳ್ಳ ಪ್ರದೇಶದಲ್ಲಿ ಹುಲಿಮಾನಪ್ಪನ ಮಠದ ಕಟ್ಟಡದ ಅವಶೇಷಗಳಿವೆ. ಈ ಮಠದ ಕಟ್ಟಡಕ್ಕೆ ಸ್ಥಳೀಯವಾಗಿ ದೊರಕುವ ಕಬ್ಬಿಣಯುಕ್ತ ಶಿಲೆಯನ್ನು ಬಳಸಲಾಗಿದ್ದು, ಕಂಬಗಳಿಗೆ ಗಾರೆ ಮತ್ತು ಇಟ್ಟಿಗೆಯನ್ನು ಬಳಸಲಾಗಿದೆ. ತುಂಡು ತುಂಡಾಗಿ ಬಿದ್ದಿರುವ ಈ ಕಂಬಗಳು ಸು. ಒಂದು ಅಡಿ ದಪ್ಪ ಇವೆ. ಈ ಕಟ್ಟಡವು ಸು. ೩೦ ಅಡಿ ಅಗಲ ಹಾಗೂ ಸು. ೪೫ ಅಡಿ ಉದ್ದ ಇರುವುದು. ಸಂಪೂರ್ಣ ಪಾಳು ಬಿದ್ದಿರುವ ಈ ಕಟ್ಟಡದ ಅವಶೇಷಗಳಿರುವ ನಿವೇಶನವನ್ನು ಗಮನಿಸಿದರೆ ಇದು ಸು. ೩೦೦-೪೦೦ ವರ್ಷಗಳಷ್ಟು ಪ್ರಾಚೀನದ್ದಾಗಿ ಕಂಡು ಬರುವುದು ಪಾಳು ಬಿದ್ದಿರುವ ಈ ಹುಲಿಮಾನಪ್ಪನ ಮಠದಲ್ಲಿ ಇಂದಿಗೂ ವಿಶೇಷ ಸಂದರ್ಭದಲ್ಲಿ ಪೂಜೆಪುನಸ್ಕಾರಗಳು ಜರುಗುತ್ತವೆ. ಈ ಮಠಕ್ಕೆ ಸಂಬಂಧಿಸಿದ ವಂಶದವರು ಇದ್ದಾರೆ ಮತ್ತು ಅದಕ್ಕೆ ಸಂಬಂಧಿಸಿದ ಮುದ್ರೆ ಉಂಗುರಗಳಿದ್ದು ಅವುಗಳನ್ನು ಕುರಿತು ಇಲ್ಲಿ ಚರ್ಚಿಸಲಾಗಿದೆ.

***ಹುಲಿಮಾನಪ್ಪನ ಮಠಕ್ಕೆ ಸಂಬಂಧಿಸಿದ ಮುದ್ರೆ ಉಂಗುರದ ಶಾಸನಗಳು***

ರಾಮನಮಲೆಯ ಹುಲಿಮಾನಪ್ಪನ ಮಠದ ವಂಶಸ್ಥರಾದ ವಸಂತಾಚಾರ್ಯ ಭಗವತಾಚಾರ್ಯ ಮಠದ್ ಅವರ ಮನೆಯಲ್ಲಿ (ದಾವಣಗೆರೆಯಲ್ಲಿರುತ್ತಾರೆ) ಈಗಲೂ ಶಾಸನವಿರುವ ಎರಡು ಮುದ್ರೆ ಉಂಗುರಗಳಿವೆ. ಇವುಗಳಲ್ಲಿ ಒಂದು ನಾಲ್ಕು ಸಾಲಿನ ದೇವನಾಗರಿ ಲಿಪಿಯಲ್ಲಿರುವ ಬೆಳ್ಳಿಯ ಮುದ್ರೆ ಉಂಗುರ, ಮತ್ತೊಂದು ಹಿತ್ತಾಳೆ ಮುದ್ರೆ ಉಂಗುರ. ಈ ಲಿಪಿಗಳ ಶೈಲಿಯನ್ನು ಗಮನಿಸಿದರೆ ಅವುಗಳ ಕಾಲ ಕ್ರಿ.ಶ. ಸು. ೧೬-೧೭ನೇ ಶತಮಾನ ಎಂದು ಗೊತ್ತಾಗುವುದು.

**ಬೆಳ್ಳಿಯ ನಾಲ್ಕು ಸಾಲಿನ ದೇವನಾಗರಿ ಲಿಪಿಯುಳ್ಳ ಮುದ್ರೆ ಉಂಗುರ**

*೧ ಶ್ರೀ ಮಂತ್ಕಾಶಿ ಹಂಪಿನಿ    ೨ ರಾಲಂಬಪುರಿ ಸಿಂಹಾಸ*
*೩ ನ ಪ್ರಥಮ ರೂಡಾಚಾರ್ಯ ೪ ಚಿಕ್ಕೇಶ್ವರ ಸ್ವಾಮಿ ಶ್ರೀ*

ಎಂದಿರುವುದು. ಕಾಶಿ ಕ್ಷೇತ್ರಕ್ಕೆ ಸಮಾನವಾದ ಹಂಪಿಯ ನಿರಾಲಂಬಪುರಿಯ ಸಿಂಹಾಸನಕ್ಕೆ ಚಿಕ್ಕೇಶ್ವರ ಸ್ವಾಮಿಗಳು ಪ್ರಥಮ ರೂಡಾಚಾರ್ಯರಾಗಿದ್ದರೆಂದು ತಿಳಿಸುವುದು.

**ಹಿತ್ತಾಳೆಯ ಮುದ್ರೆಯಲ್ಲಿರುವ (ದೇವನಾಗರಿ ಲಿಪಿ)**

*೧ ಶ್ರೀ    ೨ ಶ್ರೀ ಚಿಕ್ಕೇಶ್ವರ ಮೂರು ಜಾವಸ್ವಾಮಿ ಶ್ರೀ*
*೩ ವಂಶ    ೪ ಶ್ರೀ ಜ್ಜಗದ್ಗುರು*
*೫ ನಿರಂಜನಸ್ವಾಮಿ ಮೂಲ ಸಂಸ್ಥಾನ ೬ ಅಂತರವಳ್ಳಿ ಮುದ್ರ*
*೭ ನಂಬರ್    ೮ ೧*



* ೨೯೭/ಎ, ಟೀಚರ್ಸ್ ಕಾಲನಿ, ವೀರಭದ್ರೇಶ್ವರ ನಿಲಯ, ಎಂ.ಪಿ. ಪ್ರಕಾಶನಗರ, ಹೊಸಪೇಟೆ, ಬಳ್ಳಾರಿ ಜಿಲ್ಲೆ - ೫೮೩ ೨೦೧

ಎಂದಿರುವುದು. ಈ ಮುದ್ರೆಯು, ಶ್ರೀ ಚಿಕ್ಕೇಶ್ವರ ಮೂರು ಜಾವಸ್ವಾಮಿಯ ವಂಶಕ್ಕೆ ಸೇರಿದ ಶ್ರೀ ಜಗದ್ಗುರು ಶ್ರೀ ನಿರಂಜನಸ್ವಾಮಿ ಮೂಲಸಂಸ್ಥಾನ ಅಂತರವಳ್ಳಿಗೆ ಸಂಬಂಧಿಸಿದ ಸಂಖ್ಯೆ ೧೮ ಮುದ್ರೆ ಆಗಿದೆ.

ಈ ಎರಡು ಮುದ್ರೆ ಉಂಗುರ ಶಾಸನಗಳ ಮಾಹಿತಿಯನ್ನು ಗಮನಿಸಿದರೆ, ಈ ಚಿಕ್ಕೇಶ್ವರಸ್ವಾಮಿಯ ಇತಿಹಾಸಕ್ಕೂ ಮತ್ತು ಹಂಪಿ ಕ್ಷೇತ್ರಕ್ಕೂ ಹಿಂದಿನಿಂದಲೂ ಸಂಬಂಧವಿದ್ದಂತೆ ಕಾಣುವುದು. ಈ ಚಿಕ್ಕೇಶ್ವರ ಮೂರು ಜಾವಸ್ವಾಮಿಯ ವಂಶಕ್ಕೆ ಸೇರಿದಂತಹ ಶ್ರೀ ಜಗದ್ಗುರು ಶ್ರೀ ನಿರಂಜನ ಸ್ವಾಮಿಗಳ ಮೂಲಸಂಸ್ಥಾನ ಅಂತರವಳ್ಳಿಗೆ ಸಂಬಂಧಪಟ್ಟಿದ್ದಾಗಿತ್ತೆಂದು ತಿಳಿದು ಬರುವುದು. ಈ ಎರಡೂ ಮುದ್ರೆ ಉಂಗುರಗಳನ್ನು ಹೊರತುಪಡಿಸಿದರೆ ಚಿಕ್ಕೇಶ್ವರ ಮೂರುಜಾವಸ್ವಾಮಿಯ ಕುರಿತು ಮಾಹಿತಿಯನ್ನು ನೀಡುವ ಯಾವ ದಾಖಲೆಗಳು ಈ ಪ್ರದೇಶದಲ್ಲಿ ಲಭ್ಯವಿಲ್ಲ. ಆದರೆ ಈ ಮಠ ಪರಂಪರೆಗೆ ಸಂಬಂಧಿಸಿದ ಕೆಲವು ವಂಶಗಳು ಸಂಡೂರು ತಾಲೂಕಿನ ರಾಮನಮಲೆಯ ಆಸುಪಾಸಿನ ಪ್ರದೇಶದಲ್ಲಿ ಬಂದು ನೆಲೆಸಿ, ಅಂತರವಳ್ಳಿ ಸಂಸ್ಥೆಗೆ ಸಂಬಂಧಿಸಿದ ಶಾಖಾಮಠಗಳನ್ನು ಸ್ಥಾಪಿಸಿಕೊಂಡು ಇದ್ದರು. ಅಂದರೆ ರಾಮನಮಲೆಯ ಹುಲಿಮಾನಪ್ಪನ ಮಠವು ಇವರ ಒಂದು ಶಾಖಾಮಠವಾಗಿರಬೇಕೆಂದು ಈ ಎರಡು ಮುದ್ರೆ ಉಂಗುರಗಳ ಆಧಾರದಿಂದ ಊಹಿಸಬಹುದಾಗಿದೆ. ಈ ಚಿಕ್ಕೇಶ್ವರ ಮೂರುಜಾವಸ್ವಾಮಿಯ ಕುರಿತು ಅನೇಕ ಶಾಸನಗಳ ಹಾಗೂ ಪುರಾಣಗಳ ಉಲ್ಲೇಖಗಳಿರುವುದನ್ನು ಕಾಣುತ್ತೇವೆ. ಅವುಗಳ ಬಗ್ಗೆ ಇಲ್ಲಿ ಗಮನಿಸೋಣ :-

***ಮೂರು ಜಾವಿದೇವನಿಗೆ ಸಂಬಂಧಿಸಿದಂತೆ ಇದುವರೆಗೂ ಲಭಿಸಿರುವ ೧೨ ಶಾಸನಗಳು :***

*೧. ಕ್ರಿ.ಶ ೧೦೫೯ ರ ಹಿರೇಮಾಗಲಗೇರಿ ಶಾಸನ ; ೨. ಕ್ರಿ.ಶ. ೧೧೭೪ ರ ರಟ್ಟಹಳ್ಳಿ ಶಾಸನ; ೩. ಕ್ರಿ.ಶ.೧೦೨೭ರ ಕಲಕೇರಿ ಶಾಸನ; ೪. ಕ್ರಿ.ಶ. ೧೨೨೭ರ ಲಕ್ಷ್ಮೇಶ್ವರದ ಶಾಸನ; ೫. ಕ್ರಿ.ಶ. ೧೨೩೮.ರ ರಟ್ಟಹಳ್ಳಿ ಶಾಸನ; ೬. ಕ್ರಿ.ಶ. ೧೩ನೇ ಶತಮಾನ ಕಲಕೇರಿ ಶಾಸನ; ೭. ಕ್ರಿ.ಶ. ೧೨೨೭ರ ರಟ್ಟಹಳ್ಳಿ ಶಾಸನ; ೮. ಕ್ರಿ.ಶ. ೧೩ನೇ ಶತಮಾನ ಹಿರೇಮೊರಬದ ಶಾಸನ; ೯. ಕ್ರಿ.ಶ. ೧೨೩೮ರ ರಟ್ಟಹಳ್ಳಿ ಶಾಸನ; ೧೦. ಕ್ರಿ.ಶ. ೧೨೭೫ರ ಚಿಕ್ಕಮಾಗಡಿ ಶಾಸನ; ೧೧ ಕ್ರಿ.ಶ. ೧೨೮೮ರ ಕಡೂರು ಶಾಸನ; ೧೨. ಕ್ರಿ.ಶ. ೧೨೩೭ರ ರಟ್ಟಹಳ್ಳಿ ಶಾಸನ;*

ಶಾಸನಗಳಷ್ಟೇ ಅಲ್ಲದೇ ಕಾವ್ಯಗಳಲ್ಲಿಯೂ ಈ ಮೂರು ಜಾವಿದೇವನ ಹೆಸರಿರುವುದನ್ನು ಕಾಣುತ್ತೇವೆ. ವೀರಶೈವಾಮೃತ ಮಹಾಪುರಾಣ ಹಾಗೂ ಸಿದ್ದೇಶ್ವರ ಪುರಾಣಗಳಲ್ಲಿ ಅಗ್ಗಳೆಯ ದೇವರಸನು ಜಾವವನ್ನು ತಡೆಯಲು ಮೂರು ಜಾವಿದೇವ ಎಂಬ ಬಿರುದನ್ನು ಧರಿಸಿದ ಎಂದಿದೆ. ಆದರೆ ಕ್ರಿ.ಶ. ೧೬೫೦ರಲ್ಲಿದ್ದ ಶಾಂತನಿರಂಜನನ ಅಬ್ಬಲೂರು ಚರಿತ್ರೆಯಲ್ಲಿ 'ಮೂರು ಜಾವುದ' ಎಂಬ ಹೆಸರು ಚಿಕ್ಕೇಶಯತಿಯ ಬಿರುದು ಎಂಬುದಾಗಿ ತಿಳಿದು ಬರುತ್ತದೆ. ಇಡೀ ಕಾವ್ಯದ ಉದ್ದಕ್ಕೂ ಅಲ್ಲಲ್ಲಿ ಚಿಕ್ಕೇಶಯತಿಯ ಸ್ತುತಿ ಇರುವುದನ್ನು ಕಾಣಬಹುದು. ಏಕಾಂತರಾಮಯ್ಯನಿಗೆ ಶಿವಮತ ಪ್ರಸಾರ ಕಾರ್ಯದಲ್ಲಿ ಸಹಾಯ ಮಾಡಿದ ಮೂರು ಜಾವುದ ದೇವರು ಅಂತರವಳ್ಳಿಯವನು ಎಂದೂ ವಿಶ್ವಕರ್ಮ ಬ್ರಾಹ್ಮಣ ವಂಶಾಬ್ಧಿ ಚಂದ್ರಮನು ಕಂತುಹರನ ಮತದವರ ಸಂತತಿಯ ಕಾಯ್ದವನು ಎಂದೂ 'ರೂಢಾಚಾರ್ಯ' ಎಂಬ ಪರ್ಯಾಯ ಹೆಸರನ್ನು ಹೊಂದಿದವನು ಎಂಬ ವಿವರ ಅಬ್ಬಲೂರು ಚರಿತ್ರೆಯಿಂದ ತಿಳಿದು ಬರುತ್ತದೆ.

ರಾಣಿಬೆನ್ನೂರು ತಾಲೂಕಿನ ಅಂತರವಳ್ಳಿಯಲ್ಲಿ ಮೂರು ಜಾವಿದೇವನ ಗುಡಿ ಹಾಗೂ ಮೂರ್ತಿಯಿದ್ದರೂ ಇನ್ನಿತರ ಯಾವುದೇ ಐತಿಹಾಸಿಕ ಆಧಾರಗಳು ಅಲ್ಲಿ ದೊರೆಯುವುದಿಲ್ಲ. ಇವನಿಗೆ ಸಂಬಂಧಿಸಿದ ಒಂದು ಶಾಸನವೂ ಅಲ್ಲಿ ದೊರಕಿಲ್ಲ. ಅಂತರವಳ್ಳಿಯಲ್ಲಿ ಇಂದಿಗೂ ವಿಶ್ವಕರ್ಮ ಸಮುದಾಯದವರು ಈ ಮೂರು ಜಾವುದ ದೇವರನ್ನೇ ತಮ್ಮ ವಂಶದ ಮೂಲ ಪುರುಷನೆಂದು ಭಾವಿಸಿ ಉತ್ತರ ಕರ್ನಾಟಕದ ವಿವಿಧೆಡೆಗಳಲ್ಲಿ ಮೂರು ಜಾವುದ ದೇವರ ಹೆಸರಿನ ಮಠಗಳನ್ನು ಸ್ಥಾಪಿಸಿಕೊಂಡಿದ್ದಾರೆ. ಅವುಗಳಲ್ಲಿ ಗಮನೀಯವಾದವುಗಳೆಂದರೆ ವಿಜಾಪುರದ ಶ್ರೀ ಮೂರು ಜಾವಧೀಶ್ವರ ಸಂಘ; ವಿಜಾಪುರ ಜಿಲ್ಲೆಯ ಗುಂಡ ಬಾವಡಿಯ ಮೂರು ಜಾವುದ ಮಠ, ಸಿಂದಗಿ ತಾಲೂಕಿನ ಬಂಟನೂರಿನ ಮೂರು ಜಾವುದ ಮಠ, ಅಫಜಲ್‌ಪುರದ ಮೂರು ಜಾವುದ ಮಠ, ಬೀಳಗಿಯ ಮೂರು ಜಾವುದ ಮಠ ಹಾಗೂ ಬರಡೋಲದ ಮೂರು ಜಾವುದ ಮಠಗಳಾಗಿವೆ.

ಆದರೆ ಸಂಡೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಈ ಅಂತರವಳ್ಳಿಯ ಮೂರುಜಾವಸ್ವಾಮಿ ಮಠ ಪರಂಪರೆಗೆ ಸಂಬಂಧಿಸಿದ ವಂಶದ ಒಂದು ತಲೆಮಾರಿನವರು ಈ ಹುಲಿಮಾನಪ್ಪನ ಮಠದ ಅಧಿಕಾರವನ್ನು ಹೊಂದಿದ್ದರೆಂಬುದನ್ನು ಇಲ್ಲಿ ದೊರೆತಿರುವ ಶಾಸನ ಹಾಗೂ ಕಾಗದಪತ್ರಗಳು ತಿಳಿಸುತ್ತವೆ. ಈ ಶಾಸನಗಳಲ್ಲಿಯ ಲಿಪಿಯನ್ನು ಗಮನಿಸಿದರೆ ಇವು ಸು. ೧೬-೧೭ನೇ ಶತಮಾನಕ್ಕೆ ಸೇರಿದವುಗಳಾಗಿದ್ದು, ದೊರೆತಿರುವ ಕಾಗದ ಪತ್ರಗಳು ೧೯-೨೦ನೇ ಶತಮಾನಕ್ಕೆ ಸಂಬಂಧಿಸಿದವುಗಳಾಗಿವೆ. ಅಂದರೆ ಈ ಚಿಕ್ಕೇಶ ಮೂರು ಜಾವಿದೇವನ ಇತಿಹಾಸವು ಬಸವಯುಗದಿಂದ ಮುಂದುವರಿದಿದ್ದು ಇಂದಿಗೂ ಇನ್ನೂ ಕೆಲವು ಪ್ರದೇಶದಲ್ಲಿ ಪ್ರಚಲಿತದಲ್ಲಿರುವುದು ಗಮನಾರ್ಹವಾಗಿದೆ. ಅದರಂತೆ ಸಂಡೂರು ಪ್ರದೇಶಕ್ಕೆ ಸಂಬಂಧಿಸಿದಂತೆ ಈ

ಮೂರು ಜಾವಸ್ವಾಮಿಯ ಮಠಕ್ಕೆ ಸಂಬಂಧಿಸಿದ ವಂಶದ ಒಂದು ತಲೆಮಾರಿನವರು ಈ ಹುಲಿಮಾನಪ್ಪ ಮಠದ ಅಧಿಕಾರವನ್ನು ಹೊಂದಿದ್ದರೆಂಬುದು ಗಮನಾರ್ಹ.

**ರಾಮುನವುಲೆಮಠ ಸ್ಥಾಪಕರ ವಂಶ :** ಈ ರಾಮಘಡದಲ್ಲಿರುವ ಹುಲಿಮಾನಪ್ಪನ ಮಠ ಸ್ಥಾಪನೆಗೆ ಕಾರಣರಾದ ವ್ಯಕ್ತಿ ಬಂದಪ್ಪಯ್ಯ. ಈತನ ಮಗ ಪಟ್ಟದ ಮೊಣ್ಣಪ್ಪಯ್ಯ, ಈತನ ಮಗ ಕಾಳಹಸ್ತಯ್ಯ, ಈತನ ಮಗ ರಾಮಲಿಂಗಯ್ಯ, ಈತನ ಮಗ ನಾಗಲಿಂಗಯ್ಯ, ಈ ನಾಗಲಿಂಗಯ್ಯನಿಗೆ ಬಹುಶಃ ಮಕ್ಕಳಿಲ್ಲದ್ದರಿಂದ ಚೆನ್ನವೀರಯ್ಯ ಎಂಬುವವರನ್ನು ದತ್ತು ಪುತ್ರನನ್ನಾಗಿ ಸ್ವೀಕರಿಸಿದ್ದಾರೆ. ಈ ಸನದು ಚನ್ನವೀರಯ್ಯನವರದಾಗಿರುತ್ತದೆ. ಮುಂದೆ ಈ ಚನ್ನವೀರಯ್ಯನಿಗೂ ಗಂಡು ಸಂತಾನ ವಿಲ್ಲದ್ದರಿಂದ, ತನ್ನ ಮಗಳಾದ ದೊಡ್ಡೀರಪ್ಪನ ಮಗನಾದ ವೀರನಂಜಪ್ಪನಿಗೆ ಚನ್ನವೀರಯ್ಯನವರು ಸರ್ವಾಧಿಕಾರತ್ವವನ್ನು ವಹಿಸಿಕೊಟ್ಟು, ದೊಡ್ಡೀರಪ್ಪನ ಮಗಳಾದ ರಾಜಮ್ಮನನ್ನು ತನ್ನ ಗಂಡು ವಂಶಸ್ಥರಾದ ಹರುಪ್ಪನಹಳ್ಳಿ ಮಾನಪ್ಪನ ಮಗ ಕಾಳಾಚಾರಿಗೆ ಕೊಡಿಸಿ, ಅವರ ಮಕ್ಕಳಿಗೆ ಅಧಿಕಾರ ವಹಿಸಿ ನೀನು ಕಾರ್ಬಾರು ಮಾಡಿಕೊಂಡಿರುವು ದಾಗಿ ಸನದು ಬರೆದು ಮಾ॥ಸಂಡೂರಿನ ಮಹಾರಾಜರಾದ ಶಿವಷಣ್ಮುಖರಾವ್ ಅವರಿಂದ ನೋಂದಣಿ (ರಿಜಿಷ್ಟರ್) ಮಾಡಿಸಿರುವ ಸನದು ಇದಾಗಿದೆ ಎಂದು ತಿಳಿಸುತ್ತದೆ. ಈ ಚನ್ನವೀರಯ್ಯನ ಮೊಮ್ಮಕ್ಕಳು ಪ್ರಸ್ತುತ ರಾಮನಮಲೆಯ ಮಠಕ್ಕೆ ಅಧಿಕಾರಸ್ಥರಾಗಿರುವರು ಎಂಬ ವಿಷಯವು ಸಹ ಈ ದಾಖಲೆಯಿಂದ ಗೊತ್ತಾಗುವುದು.

**ರಾಮನಮಲೆಯ ಹುಲಿಮಾನಪ್ಪನ ಮಠಕ್ಕೆ ಸೇರಿದ ದಾನ ಪತ್ರ :** ರಾಮನಮಲೆಯ ಹುಲಿಮಾನಪ್ಪನ ಮಠಕ್ಕೆ ಸೇರಿದ ಈ ದಾನ ಪತ್ರದಲ್ಲಿ ಬಸವಪ್ಪ ಸ್ವಾಮಿಗಳವರ ದೇವಾಲಯದ ಪೂಜೆಗಾಗಿ ಕೊಟ್ಟ ಭೂಮಿ ದಾನದ ವಿವರ ಎಂದಿದ್ದು ಅದು ಈ ಕೆಳಗಿನಂತಿದೆ.

ನನ್ನ ಪಟ್ಟದಲ್ಲಿರುವ (ಗಾರ್ನದಾರಿಗಳು) ಬಳ್ಳಾರಿ ಜಿಲ್ಲೆಯ ಹೊಸಪೇಟೆ ತಾಲೂಕಿಗೆ ಸೇರಿದ ಗರಗ ಗ್ರಾಮದ ಹತ್ತಿರದಲ್ಲಿರುವ ೧೭೭ ಎಕರೆ ೮೭ ಗುಂಟೆ ರಾಮನಮಲೆ ಗ್ರಾಮದಲ್ಲಿರುವ ಗುಡಿ ಸಂರಕ್ಷಣೆ ಮಾಡುವುದಕ್ಕಾಗಿ ಭೂಮಿದಾನ ಕೊಟ್ಟ ವಿವರ ಇದಾಗಿದ್ದು, ಈ ಭೂಮಿಯನ್ನು ನಮ್ಮ ಮಕ್ಕಳು, ಮೊಮ್ಮಕ್ಕಳು ವಂಶಪಾರಂಪರ್ಯವಾಗಿ ಅನುಭವಿಸುತ್ತ ಈ ದೇವಾಲಯದ ದೇವತಾ ಅರ್ಚನೆ, ನಂದಾದೀಪ, ವಿಳ್ಯೆಯ ಸೇವೆಯನ್ನು ಮಾಡಿಕೊಂಡು ಬರಬೇಕೆಂದು ತಿಳಿಸಿರುವುದು. ಈ ಆಜ್ಞೆಗೆ ತಪ್ಪಿ ನಡೆದು ಕೊಂಡವರಿಗೆ ಬಹುಶಃ (ಈ ಸಾಲು ಸ್ಪಷ್ಟವಿಲ್ಲ) ಆ ಜಾಗದಿಂದ ಜಪ್ತಿ ಮಾಡಿಸಿ ತಮಗೆ ಬೇಕಾದ ವ್ಯಕ್ತಿಯನ್ನು ದೇವಾಲಯದ ದೇವತಾಕಾರ್ಯಕ್ಕೆ ನೇಮಿಸಿಕೊಳ್ಳುವ ಸರ್ವ ಸ್ವತಂತ್ರ ಅಧಿಕಾರ ನಮಗೆ ಇದೆ ಎಂದು ಈ ಭೂಮಿದಾನ ಪತ್ರವು ಉಲ್ಲೇಖಿಸುವುದು. ನಂತರ ಕೆಳಭಾಗದಲ್ಲಿ ಯಿನಾಮಾಗಿ ಕೊಟ್ಟ ಭೂಮಿಯ ಮಾಲಿಕರ ಸಹಿ ಅಸ್ಪಷ್ಟವಾಗಿದೆ ಮತ್ತು ೧೪೩೧ರ (೧೫.ಶ) ಡಿಸೆಂಬರ್ ತಿಂಗಳ ೧೯ನೇ ತೇದಿ ಎಂದು ತಿಳಿಸಿರುವುದು.

**ಹುಲಿಮಾನಪ್ಪನ ಮಠಕ್ಕೆ ಸೇರಿದ ಮತ್ತೊಂದು ದಾನ ಪತ್ರ :** ಈ ಮಠಕ್ಕೆ ಸಂಬಂಧಿಸಿದ ಮತ್ತೊಂದು ದಾನಪತ್ರ ಇದಾಗಿದ್ದು ಇದು ಹನ್ನೊಂದು ಸಾಲುಗಳನ್ನೊಂದಿದೆ. ಆದರೆ ಕೆಲವು ಸಾಲಿನ ಅಕ್ಷರಗಳು ಅಸ್ಪಷ್ಟವಾಗಿವೆ. ಶ್ರೀ ವಿಜಯಾಭ್ಯುದಯ ಎಂಬ ಪದದಿಂದ ಪ್ರಾರಂಭ ವಾಗಿರುವ ಇದು ಶಾಲಿವಾಹನ ಶಖ ವರ್ಷ ೧೬೨೮ನೇ (೧೭ನೇ ಶ) ದುರ್ಮುಖಿ ಸಂವತ್ಸರದ ಮಾರ್ಗಶಿರ ಬಹುಳ ೯ ರಲ್ಲಿ ಶ್ರೀ ಮನ್ನಮಹಾನಾಯಕಾಚಾರ್ಯ ರಾಜ ಬಾಗೂಳಿಯ ದಿಬ್ಯಾನಾಯ್ಕನ ಹೆಸರನ್ನು ಉಲ್ಲೇಖಿಸುತ್ತದೆ. ಹಾಗೂ ಹೊಸಪೇಟೆ ತಾಲೂಕಿನ ಗರುಗ ಗ್ರಾಮದಲ್ಲಿ ಯಾವುದೋ (ಅಕ್ಷರ ಸ್ಪಷ್ಟವಿಲ್ಲ)



ದಾನವನ್ನು ಸರ್ವಮಾನ್ಯ ಮಾಡಿಕೊಟ್ಟ ಸಂದರ್ಭದಲ್ಲಿ ಈ ದಾನ ಪತ್ರ ಬರಿಸಿಕೊಟ್ಟಂತೆ ತಿಳಿದು ಬರುತ್ತದೆ. ಕೊನೆಗೆ ಶಾಪಾಶಯವಿದ್ದು ಅದೂ ಅಸ್ಪಷ್ಟವಿದೆ.

ಒಟ್ಟಿನಲ್ಲಿ ಮೇಲಿನ ಎರಡು ದಾನ ಪತ್ರಗಳನ್ನು ಗಮನಿಸಿದರೆ ಇಂದಿಗೂ ಹೊಸಪೇಟೆ ತಾಲೂಕಿಗೆ ಸೇರಿದ ಗರಗ ಗ್ರಾಮದಲ್ಲಿ ಈ ಮಠಕ್ಕೆ ಸಂಬಂಧಪಟ್ಟ ಭೂಮಿಗಳು

ಇವೆ ಎಂಬುದು ಸ್ಪಷ್ಟವಾಗುತ್ತದೆ. ಈ ಗ್ರಾಮದವರಿಗೂ ಹಾಗೂ ಹುಲಿಮಾನಪ್ಪನ ಮಠಕ್ಕೂ ಹಿಂದಿನಿಂದಲು ನಿಕಟವಾದ ಸಂಬಂಧವಿದ್ದಂತೆ ತಿಳಿದು ಬರುವುದು.

**ಹುಲಿಮಾನಪ್ಪನ ಶಿಲ್ಪ :** ಹುಲಿಮಾನಪ್ಪನ ಮಠದ ಕಟ್ಟಡದ ಅವಶೇಷಗಳ ಮಧ್ಯದಲ್ಲಿ ಹುಲಿಮಾನಪ್ಪನ ಶಿಲ್ಪವಿದೆ. ಈ ಶಿಲ್ಪವನ್ನು ಕಪ್ಪು ಶಿಲೆಯಲ್ಲಿ ಕಂಡರಿಸಲಾಗಿದೆ. ಇದರ ಕಾಲ ಕ್ರಿ.ಶ.೧೩-೧೪ನೆಯ ಶತಮಾನಕ್ಕೆ ಸರಿ ಹೊಂದುತ್ತದೆ. (VPR 1988--91, P. 238.) ಈ ಸಂತನು ಹುಲಿಯ ಮೇಲೆ ಕುಳಿತಿದ್ದು ಒಂದು ಸರ್ಪವನ್ನು ಹುಲಿಯ ಬಾಯಿಗೆ ಕಡಿವಾಣ ಹಾಕಿ ಮತ್ತೊಂದು ಹಾವನ್ನು ಎಡಗೈಯಲ್ಲಿ ಚಾಟಿಯಂತೆ ಹಿಡಿದಿದ್ದಾನೆ. ಕೊರಳಲ್ಲಿ ಶಿವಲಿಂಗದ ಕರಡಿಗೆಯನ್ನು ಧರಿಸಿಕೊಂಡಿದ್ದು, ಕೈತೋಳು ಮತ್ತು ಮುಂಗೈಯಲ್ಲಿ ರುದ್ರಾಕ್ಷಿ ಮಾಲೆಗಳನ್ನು, ಕಟಿಯಲ್ಲಿ ಉಡದಾರವನ್ನು ಮುಂಗಾಲುಗಳಲ್ಲಿ ಕಡಗಗಳನ್ನು ಧರಿಸಿದ್ದು, ಹುಲಿಯ ಮೇಲೆ ಕುಳಿತು ಸವಾರಿ ಮಾಡುವಂತಿದೆ. ಪ್ರಸ್ತುತ ಈತನನ್ನು ವಿಶ್ವಕರ್ಮ ಜನಾಂಗದವರು ತಮ್ಮ ಮನೆತನದ ದೈವವನ್ನಾಗಿ ಸ್ವೀಕರಿಸಿ ಪೂಜಿಸುತ್ತಿರುವರು.

**ಈ ಶಿಲ್ಪದ ಬಗ್ಗೆ ಸ್ಥಳೀಯರ ಹೇಳಿಕೆ :** ಹುಲಿಮಾನಪ್ಪನು ಹಿಂದೆ ಹುಲಿಗಳ ಸಹಾಯದಿಂದ ವ್ಯವಸಾಯ ಮಾಡುತ್ತಿದ್ದನೆಂದು ಹಾಗೂ ಹಾವನ್ನು ಚಾಟಿಯನ್ನಾಗಿ ಮಾಡಿಕೊಂಡಿದ್ದನೆಂದು ತಿಳಿಸಿರುವರು. ಸಂಡೂರು ಹೆಚ್ಚು ಕಾಡನ್ನು ಹೊಂದಿರುವ ಪ್ರದೇಶ ವಾಗಿದ್ದರಿಂದ ಸು. ೬೦೦-೭೦೦ ವರ್ಷಗಳಷ್ಟು ಹಿಂದೆ ಈ ಕಾಡಿನಲ್ಲಿ ಹುಲಿಗಳೂ ಇದ್ದಿರಬಹುದು! ಈತನು ಅವುಗಳಿಗೆ ಹೆದರದೆ ಅವುಗಳ ಮಧ್ಯೆ ಜೀವಿಸಿದ್ದಿರಬಹುದು. ಅದಕ್ಕಾಗಿ ಮಾನಪ್ಪ ಎಂಬ ಈತನನ್ನು ಹುಲಿಮಾನಪ್ಪ ಎಂದು ಕರೆದಿರಬೇಕು. ಸ್ಥಳೀಯರ ಹೇಳಿಕೆಯನ್ನು ಗಮನಿಸಿದರೆ ಹುಲಿಮಾನಪ್ಪನಿಗೂ ರಾಮಘಡದ ಅರಣ್ಯ ಪ್ರದೇಶಕ್ಕೆ ಗಾಢವಾದ ಸಂಬಂಧವಿದ್ದಂತೆ ಕಂಡು ಬರುತ್ತದೆ. ದಟ್ಟವಾದ ಅರಣ್ಯದಲ್ಲಿ ಕಾಡು ಪ್ರಾಣಿಗಳ ನಡುವೆ ವಾಸ ಮಾಡಿಕೊಂಡಿರವುದು ಬಹಳ ಕಷ್ಟದ ಕಾರ್ಯ ಆದರೂ, ಮಾನಪ್ಪನು ಈ ರೀತಿಯಾಗಿ ಜೀವಿಸಿದ್ದಂತೆ ತಿಳಿದು ಬರುತ್ತದೆ. ಹೀಗಿದ್ದವನು ಜನರ ಕಣ್ಣಲ್ಲಿ ಮಹಿಮಾ ಪುರುಷನಾಗಿರುವನು ಅಲ್ಲದೇ ಇಲ್ಲಿದ್ದ ಪ್ರಾಚೀನ ಕಬ್ಬಿಣದ ಗಣಿ ಕಾರ್ಮಿಕರು ಅಂದರೆ ವಿಶ್ವಕರ್ಮ ಜನಾಂಗದವರು ತಮ್ಮ ಆರಾಧನೆಗಾಗಿ ಈ ಮಾನಪ್ಪನ ಐತಿಹ್ಯವನ್ನು ಬಳಸಿಕೊಂಡು ಶಿಲ್ಪವನ್ನು ತಯಾರಿಸಿಕೊಂಡಿರಬೇಕು. ಈ ಅವಧಿಯಲ್ಲಿ ಆಗಾಗಲೇ ಪ್ರಚಲಿತದಲ್ಲಿದ್ದ ಐತಿಹ್ಯಗಳನ್ನು ಶಿಲ್ಪದಲ್ಲಿ ನಿರ್ವಚಿಸಲಾಗಿದೆ. ಹೀಗಾಗಿ ಸರ್ಪ ಮತ್ತು ಹುಲಿಗಳು ಆ ಶಿಲ್ಪದಲ್ಲಿ ಒಡಮೂಡಿರಬೇಕು. ಅಲ್ಲದೆ ಈ ಶಿಲ್ಪವನ್ನು ವಿಶ್ವಕರ್ಮ ಜನಾಂಗದವರೇ ನಿರ್ಮಿಸಿದರೆಂಬ ಯಾವ ದಾಖಲೆಯೂ ಇಲ್ಲ. ಈಗಾಗಲೇ ಇದ್ದಿರಬಹುದಾದ ಒಂದು ಶಿಲ್ಪಕ್ಕೆ ಈ ಕಥೆ ಅಥವಾ ಐತಿಹ್ಯ ಬೆರೆಸಿರಬಹುದೆಂದು ತೋರುತ್ತದೆ. ಈ ಐತಿಹ್ಯವನ್ನು ಹೊರತುಪಡಿಸಿ ನಾವು ಇಲ್ಲಿ ಮುಖ್ಯವಾಗಿ ಗಮನಿಸಬೇಕಾದ ಅಂಶ ಎಂದರೆ 'ಹುಲಿಮಾನಪ್ಪ'ನ ಮಠ ಎಂಬುದನ್ನು ಮತ್ತು ಇದರಲ್ಲಿ ಮುಖ್ಯವಾಗಿ 'ಹುಲಿ' ಎಂಬ ಪದ ಬಳಕೆಯಾಗಿರುವುದು ಗಮನಾರ್ಹ. ಪ್ರೊ. ಲಕ್ಷ್ಮಣ ತೆಲಗಾವಿಯವರು ಇತಿಹಾಸ ದರ್ಶನ-ಸಂ.೫ರಲ್ಲಿ 'ಚಿತ್ರದುರ್ಗ ಬೆಟ್ಟದ ಪೆರುಮಾಳೆಪುರ' ಮರುಸಂಶೋಧನೆ ಎಂಬ ಲೇಖನದಲ್ಲಿ ಈ ಹುಲಿ ಎಂಬ ಪದ ಬಳಕೆಯ ಬಗ್ಗೆ ಪ್ರಸ್ತಾಪಿಸಿದ್ದಾರೆ. ಈ 'ಹುಲಿ' ಎಂಬುದು 'ಹೂಲಿ' ಎಂದಾಗಿದ್ದು-ನಿಸರ್ಗವಾಚಿ ಪದವಾಗಿರಬೇಕು ಎಂದಿರುವರು 'ಹೂಲಿ' ಎಂದರೆ ಎರಡು ಬೆಟ್ಟಗಳ ಮಧ್ಯೆ ಜಲಪಾತ ವಾಗುತ್ತಿರುವ ಪ್ರದೇಶ ಎಂದಿರುವರು ಮತ್ತು ಈ ಪದವು ಸಸ್ಯವಾಚಿ ಪದವಾಗಿ ಕೆಲವು ಕಡೆ ಸ್ಥಳವಾಚಿ ಪದವಾಗಿ ಬಳಕೆಯಾಗಿರಬೇಕೆಂದು ತಿಳಿಸಿರುವರು. ಆದರೆ ರಾಮಘಡದ ಹುಲಿಮಾನಪ್ಪನ ಶಿಲ್ಪದಲ್ಲಿ ಮಾನಪ್ಪ ಯತಿಯು ಹುಲಿಯ ವಾಹನದ ಮೇಲೆ ಕುಳಿತಿರುವುದರಿಂದ ಇಲ್ಲಿ ಬಳಕೆಯಾಗಿರುವ 'ಹುಲಿ' ಎಂಬ ಪದವು ನಿಸರ್ಗವಾಚಿಯಾಗಿರದೇ, ವ್ಯಕ್ತಿನಾಮ ಹಿನ್ನಲೆಯಲ್ಲಿ ಬಳಕೆಯಾಗಿರುವಂತೆ ತೋರುತ್ತದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ॥ ಡಿ.ವಿ. ಪರಮಶಿವಮೂರ್ತಿ, **ಶಾಸನ ಸಂಶೋಧನೆ**

೨. ಡಾ॥ ಸಿ. ನಾಗಭೂಷಣ, **ಕನ್ನಡ ಸಾಹಿತ್ಯ ಸಂಸ್ಕೃತಿ ಶೋಧನೆ**

೩. **ರಾಯಚೂರು ಜಿಲ್ಲಾ ಶಾಸನ ಸಂಪುಟ,** (ಹಂಪಿ ಕ.ವಿ.ವಿ.) (ಸಂ) ದೇವರ ಕೊಂಡಾರೆಡ್ಡಿ

   ೧. ದೇವರ ಗುಡಿಶಾಸನ, ರಾಯಚೂರು ಜಿಲ್ಲೆ ಸಿಂಧನೂರು ತಾಲೂಕು

   ೨. ಅನ್ವರಿ ಶಾಸನ, ರಾಯಚೂರು ಜಿಲ್ಲೆ, ಲಿಂಗಸೂರು ತಾಲೂಕು

   ೩. ನಿಲವಂಜಿ ಶಾಸನ, ರಾಯಚೂರು ಜಿಲ್ಲೆ, ದೇವನದುರ್ಗ ತಾಲೂಕು.

೪. ಎಂ.ಎಂ. ಕಲಬುರ್ಗಿ, **ಶಾಸನಗಳಲ್ಲಿ ಶಿವಶರಣರು.**

೫. **ಲಕ್ಕಣದಂಡೇಶನ ಶಿವತತ್ವ ಚಿಂತಾಮಣಿ ವಿವೇಚನೆ,** (ಸಂ:) ಕೆ. ರವೀಂದ್ರನಾಥ.

ಎನ್.ಎಸ್. ವೀರೇಶ್ ಉತ್ತಂಗಿ*

# ಉತ್ತಂಗಿಯ ವೀರಗಲ್ಲುಗಳು, ನಿಸಿಧಿ ಶಾಸನಗಳು

'ಉತ್ತಂಗಿ' ಬಳ್ಳಾರಿ ಜಿಲ್ಲೆಯ ಹೂವಿನಹಡಗಲಿ ತಾಲ್ಲೂಕಿನ ಒಂದು ಸ್ವತಂತ್ರ ಗ್ರಾಮ. ಪಂಚಾಯಿತಿ ಹೊಂದಿರುವ ಊರು. ಇದು ಕಲ್ಯಾಣದ ಚಾಲುಕ್ಯರು, ಹೊಯ್ಸಳರು ಮುಂತಾದ ಅರಸು ಮನೆತನಗಳ ಆಳ್ವಿಕೆಗೆ ಒಳಪಟ್ಟಿತ್ತೆಂಬುದನ್ನು ಇಲ್ಲಿ ಸಿಕ್ಕಿರುವ ಶಾಸನಗಳು ದೃಢಪಡಿಸುತ್ತವೆ. ಮತ್ತು ಕೋಗಳಿ ೫೦೦ರ ನಾಡಿಗೆ ಸೇರಿದ ಊರಾಗಿತ್ತು. ಇಲ್ಲಿ ಕಲ್ಯಾಣದ ಚಾಲುಕ್ಯರು ಮತ್ತು ಹೊಯ್ಸಳರ ಕಾಲಕ್ಕೆ ಸೇರಿದ ಸ್ಮಾರಕಗಳಿವೆ. ಕ್ರಿ.ಶ. ೧೧೫೦ರ ಇಮ್ಮಡಿ ಜಗದೇಕಮಲ್ಲನ ಕಾಲದ ಶಾಸನವು (ಉತ್ತಂಗಿಯ ಶಂಕರೇಶ್ವರ ದೇವಾಲಯದ ನವರಂಗದ ಎಡಗೋಡೆಯ ಶಾಸನ) "ಕೋಗಳಿ ನಾಡದರ್ಕ್ಕೆ ತಿಳಿಕಂ ಕುತ್ತಂಗಿಯೆಂಬುತ್ತಮ ಗ್ರಾಮಂ ತಾನೆನಿಸಿರ್ದಂತ"[೧].... ಎಂದೂ "ಗಾವುಂಡಗಳ ಗ್ರಾಮಂ ಕುತ್ತಂಗಿಯಲು"[೨].... ಎಂದು ದಾಖಲಿಸುತ್ತದೆ. ಈ ಶಾಸನದಲ್ಲಿ 'ಉತ್ತಂಗಿ' ಎಂಬ ಹೆಸರನ್ನು 'ಕುತ್ತಂಗಿ' ಎಂದೂ 'ಗಾವುಂಡಗಳ ಗ್ರಾಮ ಕುತ್ತಂಗಿ' ಎಂದೂ ಉಲ್ಲೇಖಗೊಂಡಿದೆ.

ಹಾಗೆಯೇ ಕ್ರಿ.ಶ. ೧೨೨೬ರ ಹೊಯ್ಸಳರ ವೀರನರಸಿಂಹನ ಕಾಲದ ಶಾಸನವು (ರಾಮೇಶ್ವರ ದೇವಾಲಯದ ನವರಂಗದ ಕಂಬ ಶಾಸನ) 'ಕೋಗಳೀನಾಡ ಪಸಾಯು ಊರಡಿ ಕಾಣೆಯುಲ್ಲಿ ಕೂನ್ತಿಲೋಯು ಶ್ರೀರಾಮನಾಥ ದೇವರ'[೩].... ಎಂದು ಉಲ್ಲೇಖಿಸಿದೆ. ಈ ಶಾಸನದಲ್ಲಿ ಉತ್ತಂಗಿಯನ್ನು 'ಕೂನ್ತಿಲೋಯ' ಎಂದು ಕರೆಯಲಾಗಿದೆ. 'ಕೂನ್ತಿಲೋಯು' ಎಂಬ ಪದದ ಅರ್ಥವೇನು? ಅದರ ಪದನಿಷ್ಪತ್ತಿ ಏನು ? ೧೧೫೦ರ ಶಾಸನ ಉಲ್ಲೇಖ ಕುತ್ತಂಗಿ ೧೨೨೬ರ ಶಾಸನದಲ್ಲಿ 'ಕೂನ್ತಿಲೋಯ' ಎಂದು ಏಕೆ ಮಾರ್ಪಾಡಾಯಿತು ಎಂಬುದನ್ನು ಗಮನಿಸಬೇಕಿದೆ.

ಊರಿನ ಪಶ್ಚಿಮ ದಿಕ್ಕಿನಲ್ಲಿರುವ ಕೆಂಪನಗೌಡ್ರ ಕೆಂಚಪ್ಪನವರ ಹೊಲದ ಮಧ್ಯದಲ್ಲಿ ಇರುವ ಬೇವಿನ ಮರದಡಿಯಲ್ಲಿ ಸು. ೬–೭ ನಿಸಿಧಿಶಾಸನಗಳಿವೆ. ಇದೇ ಹೊಲದ ದಕ್ಷಿಣ ದಿಕ್ಕಿಗೆ ಅಲ್ಪ ದೂರದಲ್ಲಿರುವ ಶ್ರೀ ಸಿ.ಜೆ. ಈಶಪ್ಪನವರ ಹೊಲದ ಒಡ್ಡಿನಲ್ಲಿ ಒಂದು ನಿಸಿಧಿ ಶಾಸನವಿದೆ (ಇದು ಮಲಗಿದೆ) ಹಾಗೆಯೇ ಊರಿನ ಸೋಗಿ ರಸ್ತೆಯ ಹತ್ತಿರವಿರುವ ಶ್ರೀ ಶಂಕರಸ್ವಾಮಿ ಸಂಸ್ಥಾನ ವಿರಕ್ತಮಠದ ದ್ವಾರಬಾಗಿಲ ಬಳಿ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಹಾಗೂ ಇಟ್ಟಿಗೆಯಿಂದ ಹೊಳಗುಂದಿಗೆ ಹೋಗುವ ರಸ್ತೆಯ ಪಕ್ಕದಲ್ಲಿರುವ (ಊರ ಹೊರಗೆ) ತೀರ್ಥರಾಮೇಶ್ವರ ದೇವಾಲಯದ ಪವುಳಿ ಮುಂಭಾಗದ ಬಲಗಡೆ ಒಂದು ವೀರಗಲ್ಲನ್ನು ನಿಲ್ಲಿಸಲಾಗಿದೆ. ಅಲ್ಲದೆ ಊರ ಮಧ್ಯದಲ್ಲಿರುವ ಶ್ರೀ ಎಸ್.ಎಂ. ಶಿವಾನಂದಯ್ಯನವರ ಮನೆಯ ಎದುರಿಗೆ ಒಂದು ವೀರಗಲ್ಲು ಇದೆ. ಈವರೆಗೆ ಇವುಗಳನ್ನು ಕುರಿತು ಅಧ್ಯಯನವಾಗಿಲ್ಲ. ಈ ಲೇಖನದಲ್ಲಿ ಮೇಲೆ ಉಲ್ಲೇಖಿಸಿದ ನಿಸಿಧಿ ಮತ್ತು ವೀರಗಲ್ಲು ಶಾಸನಗಳನ್ನು ಕುರಿತು ವಿವರವಾಗಿ ಚರ್ಚಿಸುವ ಪ್ರಯತ್ನ ಮಾಡಲಾಗಿದೆ.

ನನಗೆ ದೊರೆತಿರುವ ಎರಡು ವೀರಗಲ್ಲುಗಳೂ ವಿಭಿನ್ನವಾಗಿವೆ. ಒಂದೊಂದು ತನ್ನದೇ ಆದ ವೈಶಿಷ್ಟ್ಯತೆಯಿಂದ ಕೂಡಿದೆ. ಒಂದು ವೀರಗಲ್ಲು ಒಬ್ಬ ವ್ಯಕ್ತಿ ಮತ್ತೊಬ್ಬ ವ್ಯಕ್ತಿಯೊಡನೆ ಹೋರಾಡುವ ಶಿಲ್ಪ ಹೊಂದಿದ್ದರೆ, ಮತ್ತೊಂದು ರಣರಂಗದಲ್ಲಿ ವೈರಿಯೊಡನೆ ಹೋರಾಡುವ ಶಿಲ್ಪ ಹೊಂದಿದೆ.

**ಶ್ರೀ ಶಂಕರಸ್ವಾಮಿ ಸಂಸ್ಥಾನ ವಿರಕ್ತ ಮಠದ ವೀರಗಲ್ಲು:** ಪೂರ್ವಾಭಿಮುಖವಾಗಿರುವ ಶ್ರೀಮಠದ ಬಾಗಿಲ ಬಳಿ ನಿಲ್ಲಿಸಿರುವ ಈ ಶಾಸನ ಲಿಪಿರಹಿತ ವೀರಗಲ್ಲಾಗಿದೆ. ೪ ಹಂತದಲ್ಲಿ ಕೆತ್ತಲಾಗಿರುವ ಇದು ೨ ಅಡಿ ಅಗಲ ೩ ೧/೨ ಅಡಿ ಎತ್ತರ ಹೊಂದಿದೆ. ಇದರಲ್ಲಿ ಕೆತ್ತಲಾಗಿರುವ ಶಿಲ್ಪ ಮತ್ತು ಬಳಸಿರುವ ಕಲ್ಲಿನ ಆಧಾರದ ಮೇಲೆ ಈ ವೀರಗಲ್ಲು ೧೩–೧೪ನೇ ಶತಮಾನಕ್ಕೆ ಸೇರಿದ್ದೆಂದು ಹೇಳಬಹುದು.

ಮೊದಲನೆಯ ಹಂತದಲ್ಲಿ ವೀರರಿಬ್ಬರು ವೈರಿಗಳೊಡನೆ ಹೋರಾಡುವ ಶಿಲ್ಪವಿದೆ. ಒಬ್ಬ ವೀರನು ವೈರಿ ಕಡೆಯ ವ್ಯಕ್ತಿಯನ್ನು ನೆಲಕ್ಕೆ ತುಳಿದು ಭರ್ಜಿಯಿಂದ ಎದುರಾಳಿಗಳಿಗೆ

* ಸಂಶೋಧನಾ ವಿದ್ಯಾರ್ಥಿ, ಶಾಸನಶಾಸ್ತ್ರ ವಿಭಾಗ, ಕನ್ನಡ ವಿ.ವಿ. ಹಂಪಿ.

ಹೊಡೆಯುವ ಸನ್ನಾಹದಲ್ಲಿದ್ದಾನೆ. ಎದುರಾಳಿಗಳು ಎಡಗೈಯಲ್ಲಿ ಎದುರಾಳಿಗಳಿಗೆ ಹೊಡೆಯುವ ಸನ್ನಾಹದಲ್ಲಿದ್ದಾನೆ. ಎದುರಾಳಿಗಳು ಎಡಗೈಯಲ್ಲಿ ಗುರಾಣಿ, ಬಲಗೈಯಲ್ಲಿ ಕತ್ತಿ ಹಿಡಿದು ಹೋರಾಟದಲ್ಲಿ ನಿರತರಾಗಿದ್ದಾರೆ. ವೀರನಿಗೆ ಸಹಾಯಕನಾಗಿ ಹಿಂದೊಬ್ಬ ವೀರನಿದ್ದಾನೆ. ಎರಡನೆಯ ಹಂತದಲ್ಲಿ ಮಡಿದ ವೀರನನ್ನು ಇಬ್ಬರು ಅಪ್ಸರೆಯರು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿಕೊಂಡು ದೇವಲೋಕಕ್ಕೆ ಹೋಗುವ ಶಿಲ್ಪವನ್ನು ಕೆತ್ತಲಾಗಿದೆ. ಪಲ್ಲಕ್ಕಿಯಲ್ಲಿ ಮಡಿದ ವೀರ ಧ್ಯಾನಾಸಕ್ತನಾಗಿ ಕುಳಿತಿರುವಂತೆ ಕೆತ್ತಲಾಗಿದೆ.

ಮೂರನೇ ಹಂತದಲ್ಲಿ ವೀರಸ್ವರ್ಗಕ್ಕೆ ಹೋಗಿ ದೇವರಿಗೆ ನಮಸ್ಕರಿಸಿ ಧ್ಯಾನಾವಸ್ಥೆಯಲ್ಲಿ ಕೈಮುಗಿದು ಕುಳಿತಿರುವ ಚಿತ್ರವಿದೆ. ಹಾಗೂ ಶಿವಲಿಂಗ ಮತ್ತು ನಂದಿ ಶಿಲ್ಪವನ್ನು ಕೆತ್ತಲಾಗಿದೆ. ೪ನೇ ಹಂತದಲ್ಲಿ ವಿನಾಯಕ ಮತ್ತು ಆತನ ಬಲಭಾಗದಲ್ಲಿ ಸೂರ್ಯ, ಎಡಭಾಗದಲ್ಲಿ ಚಂದ್ರನನ್ನು ಕೆತ್ತಲಾಗಿದೆ.

**ತೀರ್ಥರಾಮೇಶ್ವರ ದೇವಾಲಯದ ವೀರಗಲ್ಲು :** ಇದು ಉತ್ತಂಗಿ ಹೊರಭಾಗದ ಹೊಳಗುಂದಿ ರಸ್ತೆಯ ಪಕ್ಕದಲ್ಲಿರುವ ಸಣ್ಣ ಗುಡ್ಡದ ಮೇಲೆ ಇರುವ ತೀರ್ಥರಾಮೇಶ್ವರ ದೇವಾಲಯದ ಮುಂಭಾಗದ ಪವುಳಿಯ ಬಾಗಿಲ ಬಲಭಾಗದಲ್ಲಿ (ಒಳಗೆ ಹೋಗುವಾಗ) ನಿಲ್ಲಿಸಲಾಗಿದೆ. ಕಪ್ಪು ಮಿಶ್ರಿತ ಹಸಿರು ಬಣ್ಣದ ಕಲ್ಲಿನಲ್ಲಿ ಮೂರು ಹಂತದಲ್ಲಿ ಈ ಶಾಸನ ಶಿಲ್ಪವನ್ನು ಕೆತ್ತಲಾಗಿದೆ. ಈ ಶಾಸನವು ೧೧/೨ ಅಡಿ ಅಗಲ ೩ ಅಡಿ ಎತ್ತರ ಹೊಂದಿದ್ದು ೧೩ನೇ ಶತಮಾನಕ್ಕೆ ಸೇರಿದ್ದಾಗಿದೆ.



ಮೊದಲನೆಯ ಭಾಗದಲ್ಲಿ ವೀರನೊಬ್ಬ ಕೈಯಲ್ಲಿ ಭರ್ಚಿ ಹಿಡಿದು ನೆಲಕ್ಕೆ ಬಿದ್ದಿರುವ ಎದುರಾಳಿಗೆ ತಿವಿಯುತ್ತಿದ್ದಾನೆ. ಇವನ ಎದುರಾಳಿ (ಮತ್ತೊಬ್ಬ) ಬಲಗೈಯಲ್ಲಿ ಬಿಲ್ಲು ಹಿಡಿದಿದ್ದಾನೆ. ಸೊಂಟದಲ್ಲಿ ಸಣ್ಣ ಚಾಕು ಇದೆ. ಅದರ ಮೇಲೆ ಎಡಗೈ ಇಟ್ಟಿದ್ದು ಯುದ್ಧಕ್ಕೆ ಸಿದ್ಧನಾಗಿ ನಿಂತಿದ್ದಾನೆ. ಇಬ್ಬರೂ ತುರುಬು ಕಟ್ಟಿದ್ದಾರೆ.

೨ನೇ ಭಾಗದಲ್ಲಿ ಯುದ್ಧದಲ್ಲಿ ಮಡಿದ ವೀರನನ್ನು ಸುರಾಂಗನೆಯರಿಬ್ಬರು ದೇವಲೋಕಕ್ಕೆ ಕರೆದೊಯ್ಯುವ ಶಿಲ್ಪ ಕೆತ್ತಲಾಗಿದೆ.

೩ನೇ ಭಾಗದಲ್ಲಿ ಒಂದು ಕಡೆ ವೀರ ಧ್ಯಾನಾಸಕ್ತನಾಗಿ ಕುಳಿತಿರುವ ಮತ್ತು ಶಿವಲಿಂಗದ ಎದುರು ಕೈಮುಗಿದು ಕುಳಿತಿರುವಂತೆ ಶಿಲ್ಪವನ್ನು ಕೆತ್ತಲಾಗಿದೆ. ಮೇಲ್ಭಾಗದ ತುದಿ ಸ್ವಲ್ಪ ಒಡೆದಿದೆ.

ಒಟ್ಟಾರೆಯಾಗಿ ಹೇಳುವುದಾದರೆ ಈ ಎರಡೂ ಶಾಸನಗಳು ಶೈವ ಶಾಸನಗಳಾಗಿದ್ದು ವಿಭಿನ್ನವಾಗಿವೆ. ಇವು ಲಿಪಿರಹಿತ ವೀರಗಲ್ಲುಗಳಾಗಿವೆ.

**ನಿಸಿಧಿ ಶಾಸನಗಳು**

ಜೈನ ಧರ್ಮದ ವ್ಯಕ್ತಿ ಸಲ್ಲೇಖನ ವ್ರತ ಕೈಗೊಂಡು ಸಾವನಪ್ಪಿದ ನೆನಪಿಗಾಗಿ ಹಾಕಿಸಿದ ಶಾಸನಗಳು ನಿಸಿಧಿ ಶಾಸನಗಳಾಗಿವೆ. ಉತ್ತಂಗಿಯ ಪಶ್ಚಿಮ ದಿಕ್ಕಿಗಿರುವ ಕೆಂಚನಗೌಡ್ರ ಕೆಂಚಪ್ಪನವರ ಹೊಲದ (ಸೋಗಿರಸ್ತೆಯ ಎಡಭಾಗದಲ್ಲಿದೆ) ಮಧ್ಯೆದಲ್ಲಿರುವ ದೊಡ್ಡ ಬೇವಿನ ಮರದ ಕೆಳಗೆ ಗುಂಪುಗುಂಪಾಗಿವೆ. ಈ ನಿಸಿಧಿ ಶಾಸನಗಳಲ್ಲಿ ಎರಡನ್ನು ನಿಲ್ಲಿಸಿದರೆ ನಾಲ್ಕೈದನ್ನು ಹಾಗೆಯೇ ಮಲಗಿಸಲಾಗಿದೆ. ಒಂದೆರಡು ಮಣ್ಣಿನಲ್ಲಿ ಹೂತುಕೊಂಡಿವೆ. ಇದೇ ಹೊಲದ ಮುಂದಿನ ಹೊಲದ (ಸಿ.ಜೆ. ಈಶಪ್ಪನ ಹೊಲ) ಒಡ್ಡಿನ ಮೇಲೆ ಒಂದು ಶಾಸನವನ್ನು ಮಲಗಿಸಲಾಗಿದೆ. ಇದರಲ್ಲಿರುವ ಎರಡು ಸಾಲಿನ ಲಿಪಿ ಅಸ್ಪಷ್ಟವಾಗಿದೆ. ಬಹುಶಃ ಜಿನ ವ್ಯಕ್ತಿ ಸಲ್ಲೇಖನ ವ್ರತ ಕೈಗೊಂಡು ನಿರ್ವಾಣ ಹೊಂದಿದ ವಾರ, ದಿನಾಂಕ, ಉದ್ದೇಶ ಮುಂತಾದ ಅಂಶವನ್ನು ಆ ಲಿಪಿ ಹೊಂದಿರಬಹುದು. ಇದರಲ್ಲಿರುವ ಶಿಲ್ಪ ಅಸ್ಪಷ್ಟವಾಗಿದೆ.

### ಬೇವಿನ ಮರದಡಿ ಇರುವ ನಿಸಿಧಿ ಶಿಲ್ಪಗಳ ವೈಶಿಷ್ಟ್ಯ

ಬೇವಿನ ಮರದ ಮುಂಭಾಗದ ಬುಡದಲ್ಲಿ ನಿಲ್ಲಿಸಿರುವ ಶಾಸನ ಕ್ರಿ.ಶ. ೧೫-೧೬ನೇ ಶತಮಾನಕ್ಕೆ ಸೇರಿದ್ದಾಗಿದೆ. ಲಿಪಿ ಹೊಂದಿರುವ ಈ ಶಾಸನವು ೧ ೧/೨ ಅಡಿ ಅಗಲ ೪ ಅಡಿ ಎತ್ತರವಿದ್ದು ಬಿಳಿ ಬಣ್ಣ ಹೊಂದಿದೆ. ಇದರಲ್ಲಿ ನಿಂತ ಭಂಗಿಯ ಜಿನಶಿಲ್ಪವನ್ನು ಕೆತ್ತಲಾಗಿದೆ. ಈ ಜಿನಶಿಲ್ಪದ ಕೆಳಗೆ ದಂಪತಿಗಳೀರ್ವರು ಕೈಮುಗಿದು ಕುಳಿತಿರುವ ಶಿಲ್ಪಗಳನ್ನು ಕೆತ್ತಲಾಗಿದೆ. ಇದರ ಕೆಳಗೆ ನಿಸಿಧಿಯಾದ ವ್ಯಕ್ತಿಯ ವಿವರ ಹೊಂದಿದ ಲಿಪಿ ಇದೆ.

*ವಿಸು.ಜೇಷ್ಠಬ.೪ ಮಂಗಳವಾರ*
*ಉತ್ತಂಗಿಯ ವಿರೂಪಗೌಡನ ಮಗ*
*ಬೊಮ್ಮಗೌಡನ ಮರಣ*[೪]

ಎಂದು ವಿಸು ಸಂವತ್ಸರ ಜೇಷ್ಠ ಬಹುಳ-೪ ಮಂಗಳವಾರದಂದು ಉತ್ತಂಗಿಯ ವಿರೂಪಗೌಡನ ಮಗ ಬೊಮ್ಮಗೌಡ ಮರಣ ಹೊಂದಿದ್ದರ ಬಗ್ಗೆ ತಿಳಿಸುತ್ತದೆ.



ಮರದ ಹಿಂಭಾಗದ ಬಲಗಡೆ ನಿಲ್ಲಿಸಿದ ಶಾಸನವು ೧ ೧/೨ ಅಡಿ ಅಗಲ ೨ ೧/೨ ಅಡಿ ಎತ್ತರ ಹೊಂದಿದ್ದು, ೧ ೧/೨ ಅಡಿಯಷ್ಟು ಹೂತುಕೊಂಡಿದೆ. ನಿಂತಿರುವ ಜಿನನ ಶಿಲ್ಪದ ಕೆಳಗಡೆ ಧ್ಯಾನಾಸಕ್ತರಾಗಿ ಕುಳಿತಿರುವ ಶ್ರಾವಕರ ಶಿಲ್ಪ ಕೆತ್ತಲಾಗಿದೆ. ಇದರ ಕೆಳಗಡೆ ಲಿಪಿ ಇರುವ ಸಾಧ್ಯತೆ ಇದೆ. (ಇದು ಮಣ್ಣಲ್ಲಿ ಹೂತುಕೊಂಡಿದೆ) ಇದು ಕಪ್ಪು ಮಿಶ್ರಿತ ಹಸಿರು ಬಣ್ಣ ಹೊಂದಿದ್ದು ೧೩ನೇ ಶತಮಾನಕ್ಕೆ ಸೇರಿದ ಶಾಸನವಾಗಿದೆ. ಬಳ್ಳಾರಿ ಜಿಲ್ಲೆಯ ಶಾಸನಗಳು ಎಂಬ ಗ್ರಂಥದಲ್ಲಿ (ಸಂಪಾದಿಸಿರುವ) ಡಾ. ಸಿ.ಎಸ್. ಪಾಟೀಲರು 'ಪ್ರಜಾಪತಿ ಮಾರ್ಗಶಿರ ಶು. ೫ (ಶುಕ್ರವಾರ) ಬೊಮ್ಮಗೌಡನ ಪತ್ನಿ ನಾಗಾಯಿಯು'[೫] ಸತ್ತಿರುವುದನ್ನು ಎಂದು ದಾಖಲಿಸಿರುವ ಶಾಸನ ಇದಾಗಿರುವುದು.

ಅದೇ ಮರದ ಹಿಂಭಾಗದ ಎಡಗಡೆ ಮಣ್ಣಲ್ಲಿ ಮಲಗಿರುವ ಶಾಸನವು ೧ ೧/೨ ಅಡಿ ಅಗಲ, ೨ ೧/೨ ಅಡಿ ಉದ್ದ ಹೊಂದಿದ್ದು ೧೩ನೇ ಶತಮಾನಕ್ಕೆ ಸೇರಿದ್ದಾಗಿದೆ. ಜಿನಪ್ರತಿಮೆಯ ಕೆಳಗಡೆ ಕೈಮುಗಿದು ಧ್ಯಾನಾಸಕ್ತರಾಗಿ ಕುಳಿತಿರುವ ಶ್ರಾವಕರೀವರ ಶಿಲ್ಪ ಕೆತ್ತಲಾಗಿದೆ. ಈ ಶಿಲ್ಪಗಳ ಕೆಳಗಡೆ ಎಡಭಾಗದಲ್ಲಿ ನಿಸಿಧಿಯಾದವರ ಬಗ್ಗೆ (ವಿವರ ನೀಡಿದೆ) ಶಾಸನ ಕೆತ್ತಲಾಗಿದೆ.

೧)....ದಲು ೫)....ದಲಿಸುತರ

೨)....ಸುತ ೬)....ದ

೩)....ತಧಿ ೭) ವಿಪುಟಿಯ ಮೊಂಮಗ

೪)....ಸರವರ ೮) ಉಡನ ಮಗ ಮಯಸ[೬]

ಇದು ಪುಟಿಯ ಬೊಮ್ಮಗೌಡನ ಮಗ ಮಯಸ (ಬಹುಶಃ ಮಹೇಶ) ಸತ್ತಿರುವುದನ್ನು ತಿಳಿಸುತ್ತದೆ. ೧೩ನೇ ಶತಮಾನಕ್ಕೆ ಈ ಶಾಸನ ಸೇರಿದೆ.

ಈ ಮೇಲಿನ ಶಾಸನದ ಪಕ್ಕದಲ್ಲಿಯೇ ಇರುವ ಇನ್ನೊಂದು ನಿಸಿಧಿ ಶಾಸನವು ೧ ಅಡಿ ೨ ಇಂಚು ಅಗಲ, ೨ ೩/೪ ಅಡಿ ಉದ್ದವಿದ್ದು ಇದರ ಹಿಂಭಾಗ ಸಂಪೂರ್ಣ ಹೂತಿದೆ. ನಿಂತ ಭಂಗಿಯ ಜಿನಶಿಲ್ಪದ ಬಲಪಾದದ ಬಳಿ ತನ್ನ ತೊಡೆಯ ಮೇಲೆ ಎರಡೂ ಕೈಜೋಡಿಸಿ (ಪದ್ಮಾಸನದಲ್ಲಿ) ಪಾಣಿಪೀಠದ ಮೇಲೆ ಶ್ರಾವಕ ಕುಳಿತಿದ್ದಾನೆ. ಹಾಗೂ ಎಡಪಾದದ ಬಳಿ ಎರಡು ಕೈ ಜೋಡಿಸಿ ಕೈಮುಗಿದಿರುವ ಭಂಗಿಯಲ್ಲಿ ಧ್ಯಾನಾಸಕ್ತಳಾಗಿ ದಂಪತಿಗಳಿರಬಹುದು. ಇದು ಡಾ. ಸಿ.ಎಸ್. ಪಾಟೀಲರು ತಮ್ಮ "ಬಳ್ಳಾರಿ ಜಿಲ್ಲೆಯ ಶಾಸನಗಳು" ಕೃತಿಯಲ್ಲಿ ಉಲ್ಲೇಖಿಸಿರುವಂತೆ 'ಶಕ-೧೩೦೧, ಕಾಳಾಯುಕ್ತಿ ಚೈತ್ರ ಶು. ೫ ಗುರುವಾರ ಕ್ರಿ.ಶ. ೧೩೭೯ರ ಮಾರ್ಚ್ ೪ರಂದು



ವಿರೂಪನಗೌಡನ ಧರ್ಮಪತ್ನಿ ವಾಗ್ದೇವಿ ಮರಣ’[೭] ಹೊಂದಿದ ವಿವರ ತಿಳಿಸುವ ಶಾಸನ ಇದಾಗಿರಬಹುದು ಶಾಸನಲಿಪಿ ಮಣ್ಣಲ್ಲಿ ಮುಚ್ಚಿಹೋಗಿರಬಹುದು.

ಕನ್ನಡ ವಿಶ್ವವಿದ್ಯಾಲಯವು ಪ್ರಕಟಿಸಿರುವ ಬಳ್ಳಾರಿ ಜಿಲ್ಲೆಯ ಶಾಸನಗಳು ಎಂಬ ಶಾಸನ ಸಂಪುಟದಲ್ಲಿ ಉಲ್ಲೇಖಿಸಿರುವಂತೆ

೧) ‘ಯ ನಿಯಮಿತ

೨) ಪಸಡನ ಮಗ’[೮]

ಎಂದು ಅಲ್ಲೇ ಇರುವ ಅಸ್ಪಷ್ಟ ಜಿನಶಿಲ್ಪದ ಮೇಲೆ ಪಸಡನ ಮಗ ಸಲ್ಲೇಖನವ್ರತ ಕೈಗೊಂಡು ಸತ್ತಿರುವ ವಿಚಾರ ತಿಳಿಸುತ್ತದೆ.

ಗುಂಪಾಗಿರುವ ಇದೇ ಅವಧಿಯ ನಿಸಿಧಿಗಳು ಕುಕನೂರು, ಇಟಗಿ ಪರಿಸರದಲ್ಲೂ ದೊರೆಯುತ್ತವೆ. ಇಲ್ಲಿ ನೆಲೆಯೂರಿದ್ದ ಜೈನರೆಲ್ಲಾ ಕಾಲಾಂತರದಲ್ಲಿ ಈ ಗ್ರಾಮಗಳನ್ನು ತೊರೆದು ಜಿಲ್ಲೆಯ ಮುಳುಗುಂದ ಹಾಗೂ ಅಕ್ಕಪಕ್ಕದ ಗ್ರಾಮಗಳಿಗೆ ವಲಸೆ ಹೋಗಿದ್ದಾರೆ. ಇವರು ವಲಸೆ ಹೋದುದರ ಬಗ್ಗೆ ಕುಮ್ಮಟ ದುರ್ಗದ ಪಾಳೆಗಾರರ ಅವಧಿಯ ಜಿನಮೂರ್ತಿ ಮೇಲಿನ ಶಾಸನದ (ಇದು ಈಗ ಲಂಡನ್ ಮ್ಯೂಜಿಯಂನಲ್ಲಿದೆ. ಇದನ್ನು ಡಾ. ಸಿ.ಎಸ್. ಪಾಟೀಲ್ ಪ್ರಕಟಿಸಿದ್ದಾರೆ) ಪ್ರಕಾರ ಜೈನರಿಗೆ ಕಿರುಕುಳ ಹೆಚ್ಚಾಗಿ ಅವರೆಲ್ಲಾ ಗದಗ, ಹುಬ್ಬಳ್ಳಿ, ಬೆಳಗಾವಿ ಪ್ರದೇಶಗಳಿಗೆ ವಲಸೆ ಹೋದವರೆಂದು ತಿಳಿಸುತ್ತದೆ. ಹಾಗಾಗಿ ಉತ್ತಂಗಿ ಜೈನರು ಇದಕ್ಕೆ ಹೊರತಲ್ಲ. ಅವರು (ಬಹುಶಃ) ಉತ್ತಂಗಿ ಇತರ ಧರ್ಮೀಯರ ಕಿರುಕುಳಕ್ಕೆ ಒಳಗಾಗಿ ಬೇರೆ ಕಡೆ ವಲಸೆ ಹೋಗಿರಬಹುದು; ಇಲ್ಲವೆ ಸ್ಥಳೀಯವಾಗಿ ಹೆಚ್ಚು ಪ್ರಚಲಿತವಿದ್ದ ವೀರಶೈವ ಧರ್ಮಕ್ಕೆ ಮತಾಂತರವಾಗಿರಬಹುದು.

ಸದ್ಯ ಈ (ಜಿನ) ನಿಸಿಧಿ ಶಾಸನಗಳು ಸಿಕ್ಕಿರುವುದು ಗೌಡಕಿ ಮನೆತನದ ಕೆಂಚನಗೌಡ್ರ ಕೆಂಚನಗೌಡರ (ಕೆಂಚಪ್ಪ) ಹೊಲದಲ್ಲಿ. ಹಾಗಾಗಿ ಇಲ್ಲಿನ ಜೈನರು ವೀರಶೈವ ಧರ್ಮಕ್ಕೆ ಮತಾಂತರವಾಗಿರುವುದು ಗೋಚರಿಸುತ್ತದೆ. ಕಾರಣ ಶಾಸನದಲ್ಲಿ ಉಲ್ಲೇಖಿಸಿರುವ ಬೊಮ್ಮಗೌಡ, ವಿರೂಪನಗೌಡ ಎಂಬ ಹೆಸರುಗಳು ಕೆಂಚನಗೌಡ್ರ ವಂಶದಲ್ಲಿ ಇಂದಿಗೂ ಮುಂದುವರಿದುಕೊಂಡು ಬರುತ್ತಿವೆ. ಅಂದರೆ ಹಿಂದೆ ಕೆಂಚನಗೌಡರ ವಂಶದವರು ಜೈನರಾಗಿದ್ದು ಯಾವುದೋ ವಿಪತ್ತಿಗೆ ಸಿಲುಕಿ ವೀರಶೈವರಾಗಿರಬಹುದೆಂದು ಊಹಿಸಬಹುದು. ಈ ಕುರಿತು ಇನ್ನೂ ಹೆಚ್ಚಿನ ಅಧ್ಯಯನದ ಅವಶ್ಯಕತೆ ಇದೆ. ಪುಟ್ಟಯ್ಯ, ಬೊಮ್ಮಗೌಡ, ಮಯಸ, ಪಸಡ ನಾಗಾಯಿ, ವಿರೂಪನಗೌಡ, ವಾಗ್ದೇವಿ ಎಂಬ ಶಾಸನೋಕ್ತ (ಪಸಡ, ನಾಗಾಯಿಕಿ ಹೊರತುಪಡಿಸಿ) ವ್ಯಕ್ತಿ ನಾಮಗಳನ್ನು ನೋಡಿದರೆ ಇಂದಿಗೂ ಉತ್ತಂಗಿ ಗ್ರಾಮದಲ್ಲಿ ಬಳಕೆಯಲ್ಲಿ ರುವುದು ಕಂಡುಬರುತ್ತದೆ. ಈಗ ಉತ್ತಂಗಿಯಲ್ಲಿರುವ ಬಹುಸಂಖ್ಯಾತ ವೀರಶೈವರು ಹಿಂದೊಮ್ಮೆ ಜೈನರಾಗಿದ್ದು ಕಾಲದ ಸ್ಥಿತ್ಯಂತರದಲ್ಲಿ ಅವರು ವೀರಶೈವರಾಗಿ ಮತಾಂತರ ಹೊಂದಿರುವರು ಎಂದು ಊಹಿಸಲು ಅವಕಾಶವಿದೆ.

ಈ ಮೇಲೆ ವಿವರಿಸಿದ ನಿಸಿಧಿ ಶಾಸನಗಳಿಗೆ ಬಳಸಿರುವ ಕಲ್ಲು ಸ್ಥಳೀಯವಾಗಿ ದೊರೆಯುವ ಪದರುಶಿಲೆಯ ಕಲ್ಲಾಗಿದೆ. ಈ ಕಾರಣದಿಂದ ಬಿಸಿಲು ಮಳೆಗೆ ಈ ಶಿಲೆಗಳು ಕರಗಿ ಶಿಲ್ಪಭಾಗಗಳು ಅಸ್ಪಷ್ಟವಾಗಿವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂಪುಟ ೧, ಬಳ್ಳಾರಿ ಜಿಲ್ಲೆ,** ೧೯೯೯. (ಸಂ.) ಡಾ. ದೇವರಕೊಂಡಾರೆಡ್ಡಿ ಮತ್ತು ಇತರರು. ಪು. ೪೪೮.

೨. ಅದೇ., ಪು. ೪೪೮.

೩. ಅದೇ., ಪು. ೪೫೦.

೪. **ಬಳ್ಳಾರಿ ಜಿಲ್ಲೆಯ ಶಾಸನಗಳು.,** ೧೯೯೭, ಡಾ. ಸಿ.ಎಸ್. ಪಾಟೀಲ್ ಮತ್ತು ವಿನೋದ ಪಾಟೀಲ್ (ಸಂ.) ಪು. ೬೮.

೫. ಅದೇ., ಪು. ೬೭.

೬. ಅದೇ., **ಕನ್ನಡ ವಿಶ್ವವಿದ್ಯಾಲಯ ಶಾಸನ, ಸಂ. ೧, ಬಳ್ಳಾರಿ ಜಿಲ್ಲೆ,** ಪು. ೪೫೦.

೭. ಅದೇ., **ಬಳ್ಳಾರಿ ಜಿಲ್ಲೆಯ ಶಾಸನಗಳು,** ಪು. ೬೭.

೮. ಅದೇ., **ಕನ್ನಡ ವಿಶ್ವವಿದ್ಯಾಲಯ ಶಾಸನ,** ಸಂ. ೧, ಬಳ್ಳಾರಿ ಜಿಲ್ಲೆ, ಪು. ೪೫೧.

(ಕನ್ನಡ ವಿಶ್ವವಿದ್ಯಾಲಯದ ಶಾಸನ ಶಾಸ್ತ್ರ ವಿಭಾಗದ ಪೂಜ್ಯ ಗುರುಗಳಾದ ಡಾ. ದೇವರಕೊಂಡಾರೆಡ್ಡಿ, ಡಾ. ಡಿ.ವಿ. ಪರಮಶಿವಮೂರ್ತಿ ಮತ್ತು ಡಾ. ಎಂ. ಕೊಟ್ರೇಶ್ ಅವರು ಈ ಶಾಸನಗಳ ಬಗ್ಗೆ ಮಾಹಿತಿ ನೀಡಿದ್ದಾರೆ. ಮತ್ತು ನನ್ನೂರಿನ ಗೆಳೆಯರಾದ ಕೆ. ಮಾರುತಿ, ಸಿ. ಗುರುಬಸವರಾಜ ಇವರು ಈ ಶಾಸನಗಳ ಅಧ್ಯಯನಕ್ಕೆ ಸಹಕರಿಸಿದ್ದಾರೆ.)

ಡಾ. ಪಿ.ವಿ. ಕೃಷ್ಣಮೂರ್ತಿ*

# ದೊಡ್ಡಪಾಲನಹಳ್ಳಿ ವೀರಗಲ್ಲು ಶಾಸನ ಮತ್ತು ಶಿಲ್ಪ

ತುಮಕೂರು ಜಿಲ್ಲೆ ಕೊರಟಗೆರೆ ತಾಲ್ಲೂಕು ಕೋಳಾಲ ಹೋಬಳಿಗೆ ಸೇರಿದ ಗ್ರಾಮ ದೊಡ್ಡಪಾಲನಹಳ್ಳಿ. ಆ ಗ್ರಾಮ, ಅಲ್ಲಿನ ಕುಮಾರರಾಮಸ್ವಾಮಿ ದೇವಾಲಯದಿಂದಾಗಿ ಗಮನಾರ್ಹವಾಗಿದೆ. ಕರ್ನಾಟಕದ ವೀರ ಪರಂಪರೆಯಲ್ಲಿ ಕುಮಾರರಾಮನ ಹೆಸರು ಅಜರಾಮರ. ಆ ವೀರನ ಗಾಥೆ ಜಾನಪದ ಹಾಗೂ ಶಿಷ್ಟ ಸಾಹಿತ್ಯಗಳೆರಡರಲ್ಲೂ ತನ್ನ ಸ್ಥಾನವನ್ನು ಚಿರಸ್ಥಾಯಿಗೊಂಡಿರುವುದು ಒಂದು ವಿಶಿಷ್ಟ ಸಂಗತಿಯೆಂದೇ ಹೇಳಬೇಕು. ಎಲ್ಲೆಲ್ಲಿ ಆ ಆದರ್ಶ ವೀರನ ಪರಂಪರೆಗೆ ಸೇರಿದ ಜನಸಮೂಹಗಳು ಅಧಿಕ ಸಂಖ್ಯೆಯಲ್ಲಿ ಸಾಂದ್ರಗೊಂಡಿರುತ್ತವೋ ಅಲ್ಲೆಲ್ಲ ತಮ್ಮ ಪರಂಪರೆಯ ವೀರಾಗ್ರಣಿ ಕುಮಾರರಾಮನ ಸ್ಮಾರಕಗಳು ತಲೆಯೆತ್ತಿವೆ. ಕರ್ನಾಟಕ ದಾದ್ಯಂತ ಪರನಾರಿಸೋದರನೆಂದು ಖ್ಯಾತಗೊಂಡಿದ್ದ ಆ ಸಾಂಸ್ಕೃತಿಕವೀರನ ಆರಾಧನೆ ಇಂದಿಗೂ ಪ್ರಚಲಿತವಿರುವುದು ವಿಸ್ಮಯ ಸಂಗತಿಯೆಂದರೆ ತಪ್ಪಾಗಲಾರದೇನೊ ? ಅಂತಹ ವೀರಾರಾಧನಾ ಸ್ಥಳಗಳಲ್ಲಿ ಒಂದಾದ ದೊಡ್ಡಪಾಲಹಳ್ಳಿಯಲ್ಲಿ ವೀರಪರಂಪರೆಯ ದ್ಯೋತಕವಾದ ವೀರಗಲ್ಲುಗಳು ಅಸ್ತಿತ್ವ ಪಡೆದಿರುವುದು ಅಸಂಭವವೇನಲ್ಲ. ಪ್ರಸ್ತುತ ಆ ಊರಿನ ಆಸುಪಾಸಿನಲ್ಲಿ ಹಲವಾರು ವೀರಗಲ್ಲುಗಳು ಇರುವುವಾದರೂ ಈಗ ಪ್ರಸ್ತಾಪಿಸಲಿರುವ ವೀರಗಲ್ಲು ವಿಶಿಷ್ಟವಾಗಿದೆ.

ಮೇಲೆ ಪ್ರಸ್ತಾಪಿಸಿದ ಕುಮಾರರಾಮಸ್ವಾಮಿ ದೇವಾಲಯದ ಆವರಣದ ಹೊರಗಿನ ಬಯಲ ಎಡ ಬದಿಯಲ್ಲಿ ಮೂರು ಹಂತಗಳಿಂದ ಕೂಡಿದ ಸುಮಾರು ೨.೪ ಮೀ. ಎತ್ತರ ೧.೨೦ ಮೀ. ಅಗಲ ಪ್ರಮಾಣದ ಗಟ್ಟಿ ಗ್ರಾನೈಟ್ ಶಿಲೆಯ ಉಬ್ಬು ಶಿಲ್ಪಗಳಿಂದ ಕೂಡಿದ ವೀರಗಲ್ಲೊಂದಿದ್ದು ಗಮನ ಸೆಳೆಯುತ್ತದೆ. ಈ ವೀರಗಲ್ಲಿನ ಎಡ ಬಲ ಬದಿಗಳಲ್ಲಿ ೦.೪ ಮೀ x೨.೪ ಮೀ ಅಳತೆಯ ಚಪ್ಪಡಿ ಕಲ್ಲುಗಳನ್ನು ನಿಲ್ಲಿಸಲಾಗಿತ್ತು. ಹಾಗೇ ನಿಲ್ಲಿಸಿದ್ದ ವೀರಗಲ್ಲಿನ ಎಡಬದಿಯ ಚಪ್ಪಡಿ ಕಲ್ಲಿನ ಮೇಲೆ ಶಾಸನವಿರುವುದು ಕಂಡುಬಂದಿತು. ಅದೇ ಊರಿಗೆ ಸೇರಿದ ಸರ್ಕಾರಿ ಅಧಿಕಾರಿ ಹುಲಿಯಪ್ಪನವರು ನನ್ನ ಮಿತ್ರರಾದ ಡಾ. ಅ.ಲ. ನರಸಿಂಹನ್ ಅವರ ಗಮನಕ್ಕೆ ತಂದು ಅದನ್ನು ಸ್ಥಳದಲ್ಲೆ ಪರಿಶೀಲಿಸಲು ಅವಕಾಶ ಕಲ್ಪಿಸಿಕೊಟ್ಟರು. ಆಗ ಪಡೆದುಕೊಂಡ ಶಾಸನದ ಪಡಿಯಚ್ಚು, ವೀರಗಲ್ಲಿನ ಛಾಯಾಚಿತ್ರಗಳ ನೆರವಿನಿಂದ ಆ ವೀರಗಲ್ಲಿನ ಶಿಲ್ಪ ಮತ್ತು ಅಲ್ಲಿನ ಶಾಸನಪಾಠವನ್ನು ಪರಿಶೀಲಿಸಿ ಪರಿಚಯಿಸುವ ಪ್ರಯತ್ನವನ್ನು ಇಲ್ಲಿ ಕೈಗೊಳ್ಳಲಾಗಿದೆ. (ಈಗ ಆ ವೀರಗಲ್ಲು ಹಾಗೂ ಶಾಸನವಿರುವ ಕಲ್ಲು ಚಪ್ಪಡಿಗಳನ್ನು ಸೇರಿದಂತೆ ಮೇಲೊಂದು ಛಾವಣಿಯನ್ನು ಮುಚ್ಚಿ ಇಟ್ಟಿಗೆ ಕಾಂಕ್ರಿಟ್‌ಗಳಿಂದ ಅದನ್ನು ಚಿಕ್ಕ ಗುಡಿಯನ್ನಾಗಿ ರೂಪಾಂತರಿಸಲಾಗಿದೆ.)

ವೀರಗಲ್ಲು ಮೂರು ಹಂತಗಳಿಂದ ಕೂಡಿದ್ದು ೦.೪ x ೨.೪ ಮೀ. ಪ್ರಮಾಣದ್ದಾಗಿದೆ. ಕೆಳಹಂತದಲ್ಲಿ ಐವರು ವೀರರು ತಮ್ಮ ಬಲಗೈಗಳನ್ನು ಮೇಲಕ್ಕೆತ್ತಿ ಒಬ್ಬೊಬ್ಬರು ವಿಭಿನ್ನ ಆಕಾರದ ಖಡ್ಗಗಳನ್ನು ಬೀಸುತ್ತಿರುವಂತೆಯೂ ಎಡಗೈಯಲ್ಲಿ ಉದ್ದನೆಯ ದಂಡದಂತಹ ಆಯುಧಗಳನ್ನು ಎತ್ತಿಡಿದುಕೊಂಡು ಮುನ್ನುಗ್ಗುತ್ತಿರುವಂತೆ ಬಿಂಬಿತಗೊಳಿಸಲಾಗಿದೆ. ಎಲ್ಲಾ ವೀರರು ಮುಡಿಗಳನ್ನು ಕಟ್ಟಿದ್ದು ವಸ್ತ್ರಧಾರಣ ಮಾಡಿಕೊಂಡಿರುವಂತೆ ಶಿಲ್ಪಿಸಲಾಗಿದೆ.

ಎರಡನೇ ಅಂದರೆ ಮಧ್ಯದ ಹಂತದಲ್ಲಿ ಐದು ಜನ ವೀರರು ವಿಮಾನವೊಂದರಲ್ಲಿ ಪದ್ಮಾಸನ ಭಂಗಿಯಲ್ಲಿ ಪವಡಿಸಿದ್ದು, ವಿಮಾನದ ಎಡಬಲ ಬದಿಗಳಲ್ಲಿ ಆ ವಿಮಾನವನ್ನು ಮೇಲಕ್ಕೆ ಎತ್ತಿ ಹಿಡಿದಂತೆ ಸರ್ವಾಲಂಕಾರ ಭೂಷಿತೆಯರಾದ ದೇವಗಣಿಕೆಯರು ಶಿಲ್ಪಿತಗೊಂಡಿದ್ದಾರೆ. ಅಂದರೆ ಆ ಐವರು ವೀರರನ್ನೊಳಗೊಂಡ ವಿಮಾನವನ್ನು ಸ್ವರ್ಗಕ್ಕೆ ಎತ್ತೊಯ್ಯುತ್ತಿರುವಂತೆ ಬಿಂಬಿತವಾಗಿದೆ. ಅದರ ಮೇಲಿನ ಹಂತದಲ್ಲಿ ಐವರು ವೀರರು ಸಾಲಾಗಿ ಶಿವಲಿಂಗದ ಮುಂದೆ ಅಂಜಲಿಬದ್ಧರಾಗಿ ಪವಡಿಸಿರುವಂತೆ ಶಿಲ್ಪಿಸಲಾಗಿದೆ. ಶಿವಲಿಂಗದ ಪಕ್ಕದಲ್ಲಿ ಕಮಂಡಲವನ್ನು ಕೈಯಲ್ಲಿ ಹಿಡಿದು

* ೩೭, 'ಶ್ರೀಕೃಷ್ಣಕೃಪ', ೩ನೇ ಕ್ರಾಸ್, ಸುಬ್ಬಣ್ಣ ಲೇಔಟ್, ಹರಿನಗರಕ್ರಾಸ್, ಬೆಂಗಳೂರು – ೫೬೦ ೦೬೨.

ಬಲಗೈಯಿಂದ ಲಿಂಗವನ್ನು ಪೂಜಿಸುತ್ತಿರುವಂತಿರುವ ಪೂಜಾರಿ ಅಥವಾ ಯತಿಯಿದ್ದು ಅವನ ಹಿಂಬದಿಗೆ ಅಂದರೆ ನಂದಿಯ ಹಿಂದೆ ಶಂಖವನ್ನು ಊದುತ್ತಿರುವಂತಿರುವ ಕುಬ್ಜ ಶಿಲ್ಪವಿದೆ. ಈ ಹಂತದ ಮೇಲ್ಭಾಗದಲ್ಲಿ ಸೂರ್ಯ, ಚಂದ್ರರಂತಹ ಉಬ್ಬು ಶಿಲ್ಪಗಳಿವೆ.

ಕಠಿಣವಾದ ಗಟ್ಟಿ ಗ್ರಾನೈಟ್‌ನಲ್ಲಿ ಸಾಕಷ್ಟು ಸವಿವರವಾಗಿಯೇ ವೀರರ ಶಿಲ್ಪಗಳು ಕಂಡುಬರುತ್ತದೆ. ಈ ವೀರಗಲ್ಲಿನಲ್ಲಿ ಶಿಲ್ಪಿತಗೊಂಡಿರುವ ವೀರರ ಮತ್ತು ಇತರರ ವಿವರಗಳು ಹಿಂದಿನ ಅಂದರೆ ಗಂಗ, ನೊಳಂಬ, ಬಾಣರ, ಹೊಯ್ಸಳರ ಕಾಲದವಕ್ಕಿಂತ ಭಿನ್ನವಾಗಿರುವುದು ಎದ್ದು ಕಾಣುತ್ತದೆ. ಸುಮಾರು ೧೪ನೇ ಶತಮಾನದ ಶಿಲ್ಪ ಲಕ್ಷಣಗಳನ್ನು ಇದು ಪ್ರತಿನಿಧಿಸುತ್ತಿದೆ ಎಂದರೆ ತಪ್ಪಾಗಲಾರದು. ಒಟ್ಟಾರೆ ಶಿಲ್ಪಿತಗೊಂಡಿರುವ ವಿವರಗಳು ಚಲನಶೀಲತೆಯಿಂದ ಕೂಡಿ ಸಮಕಾಲೀನ ಶಿಲ್ಪಿಗಳ ಕೌಶಲ್ಯವನ್ನು ಪ್ರತಿಬಿಂಬಿಸುತ್ತಿದೆ ಎಂದು ಹೇಳಬಹುದು.

**ಶಾಸನ :** ಈ ವೀರಗಲ್ಲಿನ ಎಡಬದಿಯ ಚಪ್ಪಡಿಯಲ್ಲಿ ೪೦ x ೯೨ ಸೆಂ.ಮೀ. ಪ್ರದೇಶದಲ್ಲಿ ೯ ಸಾಲುಗಳಿಂದ ಕೂಡಿದ ಶಾಸನವಿದೆ. ಈ ಶಾಸನದಲ್ಲಿ ಸುಮಾರು ೭ x ೬ ಸೆಂ.ಮೀ. ಅಳತೆಯ ಅಕ್ಷರಗಳನ್ನು ಕೆತ್ತಲಾಗಿದೆ. ವಿಜಯನಗರ ಆರಂಭ ಕಾಲದ, ಪ್ರಾಯಶಃ ಅದೇ ಊರಿನ ವ್ಯಕ್ತಿಯೋರ್ವನ ೫ ಜನ ಮಕ್ಕಳು ಹೋರಾಟವೊಂದರಲ್ಲಿ ಹೋರಾಡಿ ಮಡಿದು ಸ್ವರ್ಗಸ್ತರಾದ ಸಂಗತಿಯನ್ನು ಈ ಶಾಸನ ನಿರೂಪಿಸುವಂತಿದೆ. ಈ ಶಾಸನದ ಮೂರು ಮತ್ತು ೮ನೇ ಸಾಲಿನ ವಿವರಗಳು ಅಸ್ಪಷ್ಟವಾಗಿರುವುದರಿಂದ ಆ ಐದೂ ಜನ ವೀರನ ತಂದೆಯ ಹೆಸರು ಜಕೊಂಡ ಎಂದು ಮಾತ್ರ ಓದಲು ಸಾಧ್ಯವಾಗಿದೆ. ಮಾದಿಗೌಡ, ಹೊಂನಂಣ, ನಿಂಗಂಣ, ಹೇಯಂಣ ಮತ್ತು ಜವನಪ್ಪ ಎಂದು ಐದೂ ಜನ ವೀರರ ಹೆಸರು ದಾಖಲಾಗಿದೆ.



ಈ ವೀರರ ಹೋರಾಟದ ಕಾರಣ ಸ್ಪಷ್ಟವಾಗುವುದಿಲ್ಲ ಪ್ರಾಯಶಃ ವಿಜಯನಗರ ಕಾಲದಲ್ಲಿ ಈ ಊರಿನ ಮೇಲೆ ನಡೆದ ದಾರಿಯಲ್ಲಿ ಹೋರಾಡಿ ಮಡಿದ ವೀರರು ಇವರಾಗಿರಬೇಕು. ವಿಜಯನಗರ ಕಾಲದ ಈ ವೇಳೆ ವಾಳಿಗಳ ಬಗ್ಗೆ ಇನ್ನೂ ಅಧ್ಯಯನ ನಡೆಯಬೇಕಾದ ಅಗತ್ಯವಿದೆ.

ಶಾಸನದ ಕಾಲವನ್ನು ಶಾಸನದಲ್ಲಿ 'ಸ್ವಭಾನು ಸಂವತ್ಸರದ ಆಷಾಡ ಶುದ್ಧ ಪಂಚಮಿ ಸೋಮವಾರ' ಎಂದು ಉಕ್ತವಾಗಿದೆ. ಶಕವರ್ಷದ ಉಲ್ಲೇಖವಿಲ್ಲ. ಈ ಶಾಸನದ ಲಿಪಿ ಸ್ವರೂಪದಿಂದ ಅಂದರೆ 'ಲ'ಕಾರ ಮತ್ತು ಅಕ್ಷರಗಳ ತಲಕಟ್ಟು ಇವುಗಳ ಸ್ವರೂಪವನ್ನು ಗಮನಿಸಿದರೆ ೧೩ನೇ ಶತಮಾನದ ಅಂತ್ಯಕ್ಕೆ ಸೇರಿಸಬಹುದಾದ ಅವಕಾಶವಿದೆ. ಆದರೆ ೧೪ನೇ ಶತಮಾನದ ಮೊದಲ ಭಾಗಕ್ಕೆ ಕೆಲವು ಲಿಪಿಗಳು ಹೊಂದಿಕೊಳ್ಳುವಂತೆ ತೋರುವುದರಿಂದ ಕೆಲವಕ್ಷರಗಳು ತೋರುವುದರಿಂದ ಸದ್ಯಕ್ಕೆ ಇಲ್ಲಿನ ತೇದಿ ವಿವರಗಳನ್ನು ಹೋಲಿಸಿಕೊಂಡರೆ ಕ್ರಿ.ಶ. ೧೩೪೩ನೇ ವರ್ಷಕ್ಕೆ ಹೊಂದಾಣಿಕೆ ಆಗುತ್ತದೆ. ಆಗ್ಯೆ ವಿಜಯನಗರದಲ್ಲಿ ಹಕ್ಕಬುಕ್ಕರ ಆಳ್ವಿಕೆ ನಡೆಯುತ್ತಿರುತ್ತದೆ.

**ಶಾಸನದ ಪಾಠ**

೧ ಸ್ವಸ್ತಿ ಸ್ವಭಾನು ಸಂವತ್ಸರದ ಆ
೨ [ಷಾ]ಡ ಸುದ ಪಂತ್ಸಮಿ ಸೋಮವಾರ
೩ [ಶ್ರೀ]ಮತು ಪ . ಪ ಬಕವ . ವ [ಬು]
೪ ಕ್ಕರಾಯನ ಕಾಲದಲಿ ಜಕೊಂಡ(ನ)
೫ [ಮ]ಕ್ಕಳು ಮಾದಿಗೌಡ ಹೊಂನ
೬ [ಣ ನಿ]ಂಗಂಣ ಹೇ(೦)ಮಂಣ ಜ
೭ (ವ)ನಪ್ಪನವರು ಪಾಲನಹಳ್ಳಿ .
೮ (ಹೊ)ಡವೆರೆಗೆ ಕಾದಿ ಸ್ವರ್ಗ್ಗಸ್ತರಾ
೯ [ದರು] ವೀರಗಲು



ಜಯದೇವಪ್ಪ ಜೈನಕೇರಿ*

# ಹೊಸನಗರ ತಾಲೂಕಿನ ಅಪ್ರಕಟಿತ ವೀರಗಲ್ಲು ಶಾಸನಗಳು

ಶಿವಮೊಗ್ಗ ಜಿಲ್ಲೆ ಹೊಸನಗರ ತಾಲೂಕಿನ ಐತಿಹಾಸಿಕ ಜೈನಕೇಂದ್ರ ಹೊಂಬುಜದ ಪೂರ್ವಕ್ಕೆ ಸುಮಾರು ೧೦ ಕಿ.ಮೀ. ದೂರದಲ್ಲಿರುವ ಗರ್ತಿಕೆರೆಯಿಂದ ಉತ್ತರಕ್ಕೆ ೩ ಕಿ.ಮೀ. ದೂರದಲ್ಲಿರುವ ಮಳಲಿಕೊಪ್ಪ ಗ್ರಾಮಕ್ಕೆ ಸೇರಿದ ಹುಗುಡಿ ಮಜರೆಯ ಹೊರವಲಯದಲ್ಲಿರುವ ಸೊಪ್ಪಿನ ಕಾಡಿನಲ್ಲಿ ಇರುವ ವೀರಗಲ್ಲು ಶಾಸನದ ನಕಲು ತೆಗೆದಾಗ ಶಾಸನದ ಬಹುಪಾಲು ಅಕ್ಷರಗಳು ಸವೆದು ಹೋಗಿದ್ದುದು ಕಂಡುಬಂದಿತು. ಕೆಲವು ಸಾಲುಗಳನ್ನು ಅಲ್ಲಲ್ಲಿ ಓದಿ ಗಮನಿಸಿದಾಗ ಇದೊಂದು ಅಪ್ರಕಟಿತ ಶಾಸನವೆಂದು ತಿಳಿಯಿತು.

ಹೊಯ್ಸಳ ವಾಸ್ತು ವಿನ್ಯಾಸದ ಸುಂದರ ಕೆತ್ತನೆಯ ವೀರಗಲ್ಲು ಶಾಸನ ಸುಮಾರು ೧೨೫ ಸೆಂ.ಮೀ. ಎತ್ತರ ೬೦ ಸೆಂ.ಮೀ. ಅಗಲವಾಗಿದೆ. ನಾಲ್ಕು ಹಂತಗಳಿಂದ ಕೂಡಿದ ವೀರಗಲ್ಲು ಶಾಸನದ ಮೇಲ್ಭಾಗವು ಅರ್ಧ ಚಂದ್ರಾಕೃತಿಯ ಕೆತ್ತನೆಗಳಿಂದ ಕೂಡಿದೆ. ಕೀರ್ತಿಮುಖ, ಬಳ್ಳಿಗಳು ಕಲಾತ್ಮಕವಾಗಿವೆ. ಮಧ್ಯದಲ್ಲಿ ಅರೆಗೋಪುರ ಕಳಸವಿದೆ. ನಾಲ್ಕು ಹಂತಗಳಲ್ಲಿರುವ ನಾಲ್ಕು ಪಟ್ಟಿಕೆಗಳ ಮೇಲೆ, ವೀರನ ಕುರಿತ ಶಾಸನವಿದೆ. ಶಾಸನವು ಹಳಗನ್ನಡದಲ್ಲಿದೆ. ವೀರಗಲ್ಲು ಶಾಸನದ ಕೆಳಹಂತದಲ್ಲಿ, ವೀರನೊಬ್ಬನು ಕುದುರೆಯ ಮೇಲೆ ಕುಳಿತು ಶತ್ರುಗಳೊಂದಿಗೆ ಕಾದಾಡುವ ದೃಶ್ಯವಿದೆ. ಕಾಲಾಳುಗಳು ಆಯುಧ ಹಿಡಿದಿರುವ ಯುದ್ಧದ ದೃಶ್ಯವು ಉಬ್ಬುಶಿಲ್ಪ ಸ್ಫುಟವಾಗಿದೆ. ೨ನೇ ಹಂತದಲ್ಲಿ ಗ್ರಾಮದ ಗೋವುಗಳನ್ನು ರಕ್ಷಿಸುವ ಹೋರಾಟದಲ್ಲಿ ಮಡಿದ ವೀರ ಮತ್ತು ಆತನ ಪತ್ನಿಯ ಸ್ವರ್ಗಾರೋಹಣ ದೃಶ್ಯ ಕೆತ್ತನೆಯ ಶಿಲ್ಪಗಳಿವೆ. ನಾಲ್ಕನೆಯ ಹಂತದಲ್ಲಿ ವೀರ ದಂಪತಿಗಳು ಸ್ವರ್ಗಲೋಕ ಸೇರಿದ ದೃಶ್ಯದ ಜೊತೆಗೆ ಶಿವಲಿಂಗ, ನಂದಿಯ ಓಂದೆ ಡಕ್ಕೆ ಬಾರಿಸುತ್ತಿರುವ ಭಕ್ತ ಮತ್ತು ಯತಿಗಳ ಚಿತ್ರಗಳನ್ನು ಕೆತ್ತಲಾಗಿದೆ.

ಇದೊಂದು ಅಪ್ರಕಟಿತ ವೀರಗಲ್ಲು ಶಾಸನವಾಗಿದ್ದು ಓದಲು ಸಾಧ್ಯವಾದ ಶಾಸನ ಪಾಠವನ್ನು ಕೆಳಗೆ ಕೊಡಲಾಗಿದೆ. ಶಾಸನದಲ್ಲಿ ಹುಗುಡಿ ಗ್ರಾಮದ ಉಲ್ಲೇಖವಿದೆ. ವಿಶೇಷವೆಂದರೆ ಈ ಶಾಸನದಲ್ಲಿ ಅಪರೂಪವಾದ 'ಶರಣು' ಶಬ್ದ ಬಳಕೆಯಾಗಿದೆ. ಈ ಶಾಸನವನ್ನು ಪೂರ್ಣ ಓದುವುದು ಸಾಧ್ಯವಾದರೆ ಹುಗುಡಿ ಪ್ರದೇಶದ ಇತಿಹಾಸದ ಮೇಲೆ ಹೊಸ ಬೆಳಕು ಚೆಲ್ಲಬಹುದಾಗಿದೆ.

ವೀರಗಲ್ಲು ಇರುವ ಸ್ಥಳಕ್ಕೆ ಹೋಗುವ ದಾರಿಯ ಬಲಭಾಗದಲ್ಲಿ ಹೂತುಹೋದ ಒಂದು ಜಿನಬಿಂಬ ಕಂಡು ಬಂದಿತು. ಪದ್ಮಾಸನದಲ್ಲಿ ಕುಳಿತಿರುವ ಭಂಗಿಯಲ್ಲಿ ಸುಮಾರು ಮೂರು ಅಡಿ ಎತ್ತರವಿರುವ ಆ ಏಕಶಿಲಾ ಮೂರ್ತಿಯ ಶಿರೋಭಾಗವನ್ನು ಒಡೆದಿದ್ದಾರೆ. ಅತ್ಯಂತ ಪ್ರಮಾಣ ಬದ್ಧವಾಗಿರುವ ಈ ಬೃಹತ್ ಪ್ರತಿಮೆ ಶಿರೋಭಾಗದಲ್ಲಿ ಜಡೆ ಇದ್ದು ಕತ್ತಿನ ಹಿಂಭಾಗದಲ್ಲಿ ಭುಜದವರೆಗೂ ಇಳಿಬಿದ್ದಿದೆ. ಇದರಿಂದಾಗಿ ಇದೊಂದು ತೀರ್ಥಂಕರ ಮೂರ್ತಿಶಿಲ್ಪವೆಂದು ಹೇಳಬಹುದು. ಇದನ್ನು ಕತ್ತಿ ಮಸೆಯುವ ಕಲ್ಲನ್ನಾಗಿ ಬಳಸಿರುವುದನ್ನು ಕಂಡು ಸ್ಥಳೀಯರಿಗೆ ರಕ್ಷಿಸಲು ತಿಳಿಸಲಾಯಿತು.

ಶಾಸನದ ಪಾಠವನ್ನು ಶ್ರೀ ಬೈಜೋಜ ಎಂಬವನು ರಚಿಸಿದ್ದಾನೆ ಮತ್ತು ಶಾಸನ ಅಂತ್ಯದಲ್ಲಿರುವ ಸಂಗೋಯನ ಮಗ ಕಲ್ಲುಕುಟಿಗ ಬೀರೋಜ ಎಂಬುವನು ಕೆತ್ತಿದನು ಎಂಬ ಉಲ್ಲೇಖ ಕಂಡುಬರುತ್ತದೆ. ಈತನ ಶಾಸನಗಳು ಈ ಭಾಗದಲ್ಲಿ ಕ್ರಿ.ಶ. ೧೨೯೦-೧೩೧೦ರ ಅವಧಿಯಲ್ಲಿ ದೊರೆಯುತ್ತವೆ. ಆದ ಕಾರಣ ಶಾಸನವನ್ನು ಇದೇ ಕಾಲಕ್ಕೆ ಸೇರಿಸಬಹುದಾಗಿದೆ. ಹುಗುಡಿಯ ಹಸುಗಳನ್ನು ಅಪಹರಿಸುವಲ್ಲಿ ನಡೆದ ಯುದ್ಧದಲ್ಲಿ ಮರಣ ಹೊಂದಿದವನಾಗಿ ನಿಲ್ಲಿಸಿದ ವೀರಗಲ್ಲು ಇದಾಗಿದೆ.

**ಹಿರೇಜೇನಿ ಶಾಸನ :** ಶಿವಮೊಗ್ಗ ಜಿಲ್ಲೆ ಹೊಸನಗರ ತಾಲೂಕಿನ ರಿಪ್ಪನ್‌ಪೇಟೆಯಿಂದ ಸು. ೧೦ ಕಿ.ಮೀ. ದೂರದ ಹಿರೇಜೇನಿ ಎಂಬ ಕಾಡಿನೊಳಗಣ ಗ್ರಾಮದಲ್ಲೂ ಶಾಸನವೊಂದು ದೊರಕಿತು. ಅಲ್ಲಿ ಪ್ರಾಚೀನ ಈಶ್ವರ

* # ೮೭, ಶಾಂತಲಾ, ಕುವೆಂಪು ರಸ್ತೆ, ಶಿವಮೊಗ್ಗ.

ದೇವಾಲಯ, ಶಿವಲಿಂಗ, ಲಕ್ಷ್ಮಿ, ಗಣಪತಿ, ಸಪ್ತಮಾತೃಕೆಯರ ಶಿಲ್ಪಗಳಿವೆ. ಜೊತೆಗೆ ತುಂಡಾಗಿದ್ದ ವೀರಗಲ್ಲು ಶಾಸನವು ಮರದ ಕಾಂಡದ ಒಳಗೆ ಬಂಧಿತವಾಗಿದ್ದುದನ್ನು, ಗ್ರಾಮಸ್ಥರ ನೆರವಿನಿಂದ ಮುಕ್ತಗೊಳಿಸಿ ಸ್ವಚ್ಛಗೊಳಿಸಿ ನಕಲು ತೆಗೆಯಲಾಯಿತು. ಮೂರು ಹಂತಗಳಲ್ಲಿರುವ ವೀರಗಲ್ಲು ಎರಡು ಭಾಗವಾಗಿ ತುಂಡಾಗಿದೆ. ಮೇಲಿನ ಹಂತದಲ್ಲಿ ಸೂರ್ಯ, ಚಂದ್ರರು, ಶಿವಲಿಂಗವನ್ನು ಪೂಜಿಸುವ ಸ್ತ್ರೀ ಮತ್ತು ಪುರುಷ ಕೆತ್ತನೆಗಳು, ನಂದಿ ಇವೆ. ಮೇಲ್ಭಾಗದ ಪ್ರಭಾವಳಿ ಅರ್ಧ ವೃತ್ತಾಕಾರವಾಗಿದೆ. ಅಂಚಿನಲ್ಲಿ ಹೂಬಳ್ಳಿಗಳ ಕೆತ್ತನೆ ಇದೆ. ಮೇಲಿನ ಭಾಗದ ಮೊದಲ ಪಟ್ಟಿಕೆ ೬ ಇಂಚು ಅಗಲವಿದ್ದು ೫ ಸಾಲುಗಳ ಶಾಸನವಿದೆ. ವೀರನ ಸ್ವರ್ಗಾರೋಹಣ ಚಿತ್ರಗಳಿವೆ. ಎರಡನೇ ಪಟ್ಟಿಕೆಯೂ ೬ ಇಂಚು ಅಗಲವಿದೆ. ೫ ಸಾಲುಗಳ ಶಾಸನವಿದೆ. ನಂತರದಲ್ಲಿ ವೀರನು ಹೋರಾಡುತ್ತಿರುವ ಕೆತ್ತನೆ ಶಿಲ್ಪಗಳು, ವೀರನು ಮರಣ ಹೊಂದಿದ ಶಿಲ್ಪಗಳಿವೆ. ಮೂರನೇ ಪಟ್ಟಿಕೆ ಸುಮಾರು ೨೦ ಇಂಚು ಅಗಲವಿದ್ದು ೧೫ ಸಾಲುಗಳ ಶಾಸನವಿದೆ. ಶಾಸನದ ಬಹುಪಾಲು ಓದುವಂತಿದೆ. ಶಾಸನದ ಕೆಳಭಾಗದ ಅಕ್ಷರಗಳು ಸವೆದಿದ್ದು ಓದಲು ಸಾಧ್ಯವಾಗಲಿಲ್ಲ. ಮೇಲಿನ ಶಾಸನ ಸುಮಾರು ೪' x ೨' ಅಡಿ ಇದ್ದು ಕ್ರಿ.ಶ. ೧೧೧೯ಕ್ಕೆ ಸೇರಿದೆ. ಮೇಲಿನ ಭಾಗದ ಶಾಸನದ ಎರಡು ಪಟ್ಟಿಕೆಗಳಲ್ಲಿ ಹೊಂಬುಜ ವಂಶದ ಬಿರುದುಗಳು ೫+೫ ಸಾಲುಗಳಲ್ಲಿ ಕಂಡುಬರುತ್ತದೆ. ೨ನೇ ತುಂಡಿನ ೧೫ ಸಾಲುಗಳಲ್ಲಿ ಮಹಾ ಮಂಡಲೇಶ್ವರ ಪೆರ್ಮಾಡಿ ಸಾಂನ್ತರದೇವ, ಬೈಸಸದ ಜೇನಿಯ ಬಿಯುಬ್ಬಿಯು ಮಗ ಪೆರ್ಗಡೆ ಕೇಸರ ಬೊಯ್ಯನ ಡಣ್ಣನಾಯ್ಕ....ಕಾದಿ ಸತ್ತಂ.... ಚಾಳುಕ್ಯ ವಿಕ್ರಮ ಕಾಲದ ೩೩ನೆಯ ಸರ್ವಧಾರಿ ಸಂವತ್ಸರದ (ಚೈತ್ರ) ಬಹುಳ ತ್ರಯೋದಸಿ ಸೋಮವಾರದಂದು ಶ್ರೀಮತು ಪೆರ್ಮಡಿ ಶಾನ್ತರದೇವ ಜೇನಿಯ ಪೆರ್ಗಡೆಯರಿಗೆ ಕಾಡಕೊಹು ಗದ್ದೆ ಯನ್ನು ನೀಡಿದನೆಂಬ ಉಲ್ಲೇಖವಿದೆ. ಹಿರೇಜೇನಿಯ ಈ ಶಾಸನದಲ್ಲಿ ತೆರೆದರೆ, ಕಿರುಕುಳಾದಾಯ ಮುಂತಾದ ತೆರಿಗೆ ವಿನಾಯಿತಿ ಪ್ರಸ್ತಾಪವಿರುವುದು ವಿಶೇಷ. ಅಲ್ಲದೆ ಪೆರ್ಗಡೆ ಕೇಸ ಎಂಬ ಅಧಿಕಾರಿಯ ಉಲ್ಲೇಖವೂ ಈ ಶಾಸನದಲ್ಲಿ ಮೊದಲ ಬಾರಿಗೆ ಕಂಡುಬರುತ್ತಿದೆ. ಕೊನೆಯಲ್ಲಿ ಶಾಪಾಶಯವಿದೆ.

## ಹುಗುಡಿಯ ವೀರಕಲ್ಲು ಶಾಸನ ಪಾಠ

**ಮೊದಲನೆಯ ಪಟ್ಟಿಕೆ**

೧ ಶ್ರೀ . . . . . ಶರ

೨ ಣು ಹುಗುಡಿಯ

೩ . . . . .

**ಎರಡನೆಯ ಪಟ್ಟಿಕೆ**

೪ ೦ಕ ಬಲವಾನ ಬೈಚೆಯ ಬಲ್ಲಾಳ . . . . ಬಿ

೫ ಲೋ . ಬೈಚಯ ಸುರಲೋಕ ಬರ್ಥದ ಪಜ ಅ

೬ ಲೋಕಕೆ ಬಹ

೭ . . . . . . .

೮ ಲಿಯಪಂ ಕಾದಿ

**ಮೂರನೆಯ ಪಟ್ಟಿಕೆ**

೯ ಲಿ ಬಿದ . . . . ಲಕಂ ಬಳಿಕ

೧೦ . . . . ಬೈಚಯನ

**ನಾಲ್ಕನೆಯ ಪಟ್ಟಿಕೆ**

೧೧ ಶ್ರೀ ಬೈಚೋಜ ಕಟಿದ ಪದ ಶ್ರೀ ಸಂಗೋಯನ

೧೨ ಮಗ ಕಲುಕುಟಿಗ ಬೀರೋಜ ಕಡಿದ

೧೩ . . . .



ಶಾಸನ ಅಂತ್ಯದಲ್ಲಿರುವ ಸಂಗೋಜನ ಮಗ ಕಲ್ಲುಕುಟಿಗನ ಶಾಸನಗಳು ಈ ಭಾಗದಲ್ಲಿ ಕ್ರಿ.ಶ. ೧೨೯೦- ೧೩೧೦ ಅವಧಿಯಲ್ಲಿ ದೊರೆಯುತ್ತದೆ. ಆದ ಕಾರಣ ಶಾಸನವನ್ನು ಇದೇ ಕಾಲಕ್ಕೆ ಸೇರಿಸಬಹುದಾಗಿದೆ. ಹುಗುಡಿಯ ಹಸುಗಳನ್ನು ಅಪಹರಿಸುವಲ್ಲಿ ನಡೆದ ಯುದ್ಧದಲ್ಲಿ ಮರಣ ಹೊಂದಿದವನಿಗಾಗಿ ನಿಲ್ಲಿಸಿದ ವೀರಗಲ್ಲು ಇದಾಗಿದೆ.

**ಹಿರೆಜೇನಿ, ಹೊಸನಗರ ತಾಲೂಕು, ಶಿವಮೊಗ್ಗ ಜಿಲ್ಲೆ.**

**ಮೊದಲ ಪಟ್ಟಿಕೆ**

೧ ಶ್ರೀ ಸ್ವಸ್ತಿ ಸಮಧಿಗತ ಪಂಚ ಮಹಾಸಬ್ದ ಮಹಾಮಣ್ಡಳೇಸ್ವರಂ ನುತ್ತರ

೨ ಮಧುರಾದೀಶ್ವರ ಪಟ್ಟಿ ಪೊಂಬುರ್ಚ್ಚಪುರವರೇಶ್ವರಂ ಮಹೋಗ್ರವಂಶ

೩ ಲಲಾಮಮಂ ಪದ್ಮಾವತೀಲಬ್ದವರಪ್ರಸಾದಾಸಾದಿತ ವಿಪುಳ ತುಳಾ ಪು

೪ [ರುಷ] ಮಹಾಹಾದಾನ ಹಿರಣ್ಯಗರ್ಬ್ಭ ತ್ರಯಾಧಿಕ ದಾನ ವಾನರಧ್ವಜ ಮ್ರಿಗಾ

೫ ಲಾಂಚನ ವಿರಾಜಿತಾನ್ವಯೋತ್ಪನ್ನಂ ಬಹುಕಳಾಸಪನ್ನ ಶಾ

**ಎರಡನೆಯ ಪಟ್ಟಿಕೆ**

೬ ನ್ತರ ಕುಳಕುಮುದಿನೀ ಶಶಾಂಕ ಮಯೂಖಾಂಕುರಂ ರಿಪುಮಂಡಳಿಕ ಪತಂಗದೀಪಾಂಕುರಂ ತೋಂಣ್ಡಮ

೭ ಡಳಿಕ ಕುಳಾಚಳ ವಜ್ರದಂಣ್ಡಂ ಬಿರುದಬೇರುಣ್ಡಂ ಕಂದುಕಾಚಾರ್ಯ್ಯಂ ಮಂದರಧೈರ್ಯ್ಯಂ ಕೀರ್ತಿ

೮ ನಾರಾಯಣಂ ಶೌರ್ಯಪಾರಾಯಣಂ ಜಿನಪಾಧಾರಾಧಕಂ ರಿಪುಬಳ ಸಾಧಕಂ ಸಾನ್ತಾ (ರಾ)

೯ ಆದಿತ್ಯ ಸರಳ ಜನಸ್ತುತ್ಯ ನೀತಿಸಾಸ್ತ್ರಜ್ಞಂ ಬಿರುದ ಸಬ್ಬರ್ಜ್ಞಂ

೧೦ .... ಅತಿಬಿರುದ ಭುಜಕಲಿಗಳ ಬಿರುದ ....

**ಮೂರನೆಯ ಪಟ್ಟಿಕೆ**

೧೧ ........ ॥ ಆ ನಪ್ಪ ನನ್ನಿಸಾನ್ತರದೇವಂ

೧೨ ...... ನರಸಂಕಗಾಳ

೧೩ ....... ತನೂಜಂ ಶ್ರೀಮನ್ಮಹಾಮಣ್ಡಳೇಶ್ವರಂ ತ್ರಿಭುವನಮಲ್ಲಂ ಭುವನೈಕ

೧೪ . . . . . . . . ಆತನತವಂ ಉತ್ತರಮಧುರಾಧೀಶ್ವರನುತ್ತಮಗುಣಾನುಗ್ರವಂಶತಿಳ

೧೫ ಕಲಿಭುಜದಜನಸ್ತುತ್ಯಂ ಕಾಮಿತ ... ತ್ತಮ ಭುಜಬಳ ಪ್ರತಾ .... ಯರದೇವ



೧೬ ನಾಮಾದಿ ಪ್ರಸತಿಸಹಿತಂ ಶ್ರೀ ಮನ್ಮಹಾಮಂಣ್ಡಳೇಶ್ವರಂ ಪೆರ್ಮ್ಮಡಿ ಸಾಂನ್ತದೇವಂ ಬೈಸಸದ ಜೆನಿಯ

೧೭ ಹಡವಳ ...... ಬಿಯಬ್ಬಿಯ ಮಗಂ ಪೆರ್ಗ್ಗಡೆಕೇಸಂ ....... ಯ್ಯನ ದಣ್ಡನಾಯ್ಕ

೧೮ .... ಕಾದಿ ಸತ್ತಂ । ಚಾಳುಕ್ಯ ವಿಕ್ರಮ ಕಾಲದ ೩೩ನೆಯ ಸರ್ವಧಾರಿ

೧೯ ಸಂವತ್ಸರದ [ಚೈತ್ರ] ಬಹುಳತ್ರಂಯೋದಸಿ ಸೋಮವಾರದಂನ್ದು ಶ್ರೀಮತು ಪೆರ್ಮಡಿ ಶಾನ್ತರ ದೇ

೨೦ ವ ಜೆನಿಯ ಪೆರ್ಗ್ಗಡೆಯರಿಗೆ ಕಾಡಕೊಹು ಗದ್ದೆ ಸಿವನೆ ವಿಶ್ವವಂದ್ರಾರ್ಕೆ ತಾರಂಬರಂ ಕೆಱೆ ದೆಱೆ ಕಿಱ

೨೧ ಕುಳಾಯಂ ಸ .... ಹಾರಂ ಇ ಕೊಹನಳಿದ ಬಾಣರಾಸಿ ಕುರುಕ್ಷೇತ್ರದಲು ಕವಿಲೆಯುಂ

೨೨ ಬ್ರಾಹ್ಮಣ [ನಳಿ]ದ ಪಾತಕಂ ॥ ಬಿಟ್ಟಿಗ ಹೊಯ್ಸಳಭೂಪನ ... ದಣ್ಡಮನೆಕಣ್ಡು ಆವಯವಂ

೨೩ ........ ಯದರು ॥ ತುರು ಹಕ

೨೪ ತನುವ .... ಪರಿಯಾ ಮಾ

೨೫ ಡಿಂ ... ವಕೆರೆಯಂ ವಾಜಿಯನು ...... ದೆರೆಯಂ ಸಯ್ಯುವಿ ನಾಗೇದ್ರಮ

೨೬ ಜಿಟ್ಟಜುಮಂ

ಶಾಸನ ಕ್ರಿ.ಶ. ೧೧೧೯ಕ್ಕೆ ಸೇರಿರುತ್ತದೆ. ಪೆರ್ಗಡೆ ಕೇಸ ಎಂಬ ಅಧಿಕಾರಿಯ ಉಲ್ಲೇಖ ಮೊದಲ ಬಾರಿಗೆ ಈ ಶಾಸನದಲ್ಲಿ ಕಂಡುಬರುತ್ತದೆ.

(ಉಭಯ ಶಾಸನಗಳನ್ನು ಓದಲು ನೆರವಾದ ಡಾ. ಜಗದೀಶ ಮತ್ತು ಡಾ. ಬಿ. ರಾಜಶೇಖರಪ್ಪ ಅವರಿಗೆ ಲೇಖಕ ಕೃತಜ್ಞ)



ಪ್ರೊ. ಎಂ.ಎಸ್. ನರೇಗಲ್ಲ*

# ಹೊಸೂರ ಗ್ರಾಮದ ನವಶೋಧಿತ ಸ್ಮಾರಕ ಶಾಸನಗಳು

ಗದಗ ತಾಲ್ಲೂಕಿನ ಹೊಸೂರ ಗ್ರಾಮದಲ್ಲಿ ಐದು ನವ ಶೋಧಿತ ಸ್ಮಾರಕ ಶಾಸನಗಳು ಕಂಡುಬಂದಿವೆ.

**ಹುಲಿಬೇಟೆ ವೀರಗಲ್ಲು :** ಗದಗ ತಾಲೂಕಿನ ಹೊಸೂರ ಗ್ರಾಮವು ಪ್ರಾಚೀನ ದೇವಾಲಯ ಮತ್ತು ಅನೇಕ ಶಾಸನಗಳಿಂದ ಪ್ರಸಿದ್ಧಿ ಪಡೆದ ಗ್ರಾಮವಾಗಿದೆ. ಈ ಗ್ರಾಮವು ಸುಮಾರು ಒಂದು ಸಾವಿರ ವರ್ಷಗಳಷ್ಟು ಹಿಂದಿನ ಇತಿಹಾಸವನ್ನು ಹೊಂದಿದೆ. ಕಲ್ಯಾಣ ಚಾಲುಕ್ಯರ ಶೈಲಿಯ ಸುಂದರವಾದ ಅನೇಕ ದೇವಾಲಯಗಳು ಇಲ್ಲಿವೆ. ಇಲ್ಲಿನ ಪಾಳು ಶಿವದೇವಾಲಯದ ಮುಂಭಾಗದಲ್ಲಿ ನೆಲದಲ್ಲಿ ಹುದುಗಿದ್ದ ಹುಲಿಬೇಟೆಯ ವೀರಗಲ್ಲೊಂದು ಪತ್ತೆಯಾಗಿದೆ. ಇದು ಗದಗ ಜಿಲ್ಲೆಯಲ್ಲಿಯೇ ಬಹಳ ಅಪರೂಪವಾದ ಹುಲಿಬೇಟೆ ವೀರಗಲ್ಲೆಂದು ತಿಳಿದುಬಂದಿದೆ. ಈ ವೀರಗಲ್ಲಿನ ಕಾಲವು ಲಿಪಿಯು ಆಧಾರದಿಂದ ಕ್ರಿ.ಶ. ೧೨ನೇ ಶತಮಾನದ್ದಾಗಿದೆ. ಇದು ೫ ಅಡಿ ಎತ್ತರವಿದ್ದು ಮೂರು ಹಂತಗಳಲ್ಲಿ ಶಿಲ್ಪವನ್ನು ಚಿತ್ರಿಸಲಾಗಿದೆ.



ಮೊದಲ ಹಂತದಲ್ಲಿ ವೀರನೊಬ್ಬನು ಹುಲಿಯೊಂದಿಗೆ ಹೋರಾಡುತ್ತಿರುವಂತೆಯೂ ಎರಡನೇಯ ಹಂತದಲ್ಲಿ ಇಬ್ಬರು ಅಪ್ಸರೆಯರು ವೀರನನ್ನು ಮಂಟಪದಲ್ಲಿ ಸ್ವರ್ಗಕ್ಕೆ ಕರೆದೊಯ್ಯುತ್ತಿರುವಂತೆಯೂ, ಮೂರನೆಯ ಹಂತದಲ್ಲಿ ವೀರನು ಶಿವಲಿಂಗದ ಮುಂದೆ ಕುಳಿತಿರುವಂತೆಯೂ ಚಿತ್ರಿಸಲಾಗಿದೆ. ಇದು ವೀರನು ಸ್ವರ್ಗಕ್ಕೆ ಸಂದಿರುವನೆಂದು ಸಾಂಕೇತಿಕವಾಗಿ ತಿಳಿಸುತ್ತದೆ. ಈ ವೀರಗಲ್ಲಿನ ವಿಶೇಷವೆಂದರೆ ಕೆಳಗಿನ ಹಂತದಲ್ಲಿ ವೀರನು ಹುಲಿಯೊಂದಿಗೆ ಹೋರಾಡುತ್ತಿರುವ ಸಮಯದಲ್ಲಿ ಅವನ ನೆರವಿಗೆ ಎರಡು ನಾಯಿಗಳು ಹುಲಿಯೊಂದಿಗೆ ಹೋರಾಡುತ್ತಿವೆ. ಆ ಎರಡೂ ನಾಯಿಗಳನ್ನು ಹಗ್ಗದಿಂದ ಕಟ್ಟಿದ್ದು ಆ ಹಗ್ಗವನ್ನು ವೀರನು ತನ್ನ ಕೈಯಲ್ಲಿ ಹಿಡಿದಿರುವನು. ಈ ರೀತಿ ನಾಯಿಗಳನ್ನು ಹಗ್ಗದಲ್ಲಿ ಕಟ್ಟಿ ಹಿಡಿದಿರುವುದು ಕರ್ನಾಟಕದಲ್ಲಿನ ಅಪರೂಪದ ಚಿತ್ರಣವಾಗಿದೆ. ವೀರಗಲ್ಲಿನಲ್ಲಿ ನಾಲ್ಕು ಸಾಲಿನ ಬರವಣಿಗೆಯಿದ್ದು ಅದರಲ್ಲಿ ಮಲ್ಲಿದೇವಣನ ಮೊಮ್ಮಕ್ಕಳಾದ ಬೊಮ್ಮಯ್ಯ, ಮಲ್ಲಯ್ಯ, ಬರಮ ಹಾಗೂ ಮತ್ತೊಬ್ಬನು (ಹೆಸರು ಅಳಿಸಿದೆ) ಜೊತೆಗೂಡಿ ಕಾಡಿನಲ್ಲಿ ಹುಲಿಯೊಂದಿಗೆ ಹೋರಾಡುವರು. ಈ ಹೋರಾಟದ ಸಮಯದಲ್ಲಿ ಒಬ್ಬ ವೀರನ ಹತನಾಗಿದ್ದಾನೆ. ವೀರಗಲ್ಲಿನ ಪಾಠದ ಭಾಗವು ಸವೆದಿರುವುದರಿಂದ ಸತ್ತ ವೀರನ ಹೆಸರು ಕಾಣುವುದಿಲ್ಲ. ಈ ವೀರಗಲ್ಲನ್ನು ಕೆತ್ತಿದವನು ಮಾದೋಜನೆಂದು ಶಾಸನದಲ್ಲಿ ತಿಳಿಸಿದೆ. ಈ ವೀರಗಲ್ಲಿನ ಆಧಾರದಿಂದ ಸುಮಾರು ಎಂಟನೂರು ವರ್ಷಗಳ ಪೂರ್ವದಲ್ಲಿ ಈ ಗ್ರಾಮಪರಿಸರವು ಅರಣ್ಯದಿಂದ ಕೂಡಿತ್ತೆಂದು ಅದರಲ್ಲಿ ಹುಲಿಗಳೂ ವಾಸವಾಗಿದ್ದವೆಂದು ತಿಳಿದುಬರುತ್ತದೆ. ಮಾನವನ ದುರಾಸೆಯ ಫಲವಾಗಿ ಇಂದು ಅರಣ್ಯವು ನಾಶವಾಗಿ ಕಾಡು ಪ್ರಾಣಿಗಳು ನಶಿಸಿ–ಹೋಗಿರುವ ಕ್ರೂರವಾದ ಸತ್ಯ ಈ ವೀರಗಲ್ಲಿನಿಂದ ಮನವರಿಕೆಯಾಗುತ್ತದೆ.

* ಮುಖ್ಯಸ್ಥರು, ಇತಿಹಾಸ ವಿಭಾಗ, ಕೆ.ಎಸ್.ಎಸ್. ಮಹಾವಿದ್ಯಾಲಯ, ಗದಗ.



**ನಾಗರಕಲ್ಲಿನಲ್ಲಿ ಶಾಸನ :** ನಾಗಪೂಜೆ ಪ್ರಾಚೀನ ಕಾಲದಿಂದಲೂ ಬೆಳೆದು ಬಂದ ಧಾರ್ಮಿಕ ಪದ್ಧತಿಯಾಗಿದೆ. ಬಹಳಷ್ಟು ನಾಗರ ಕಲ್ಲುಗಳು ಕೇವಲ ನಾಗಶಿಲ್ಪವನ್ನು ಮಾತ್ರ ಒಳಗೊಂಡಿರುತ್ತವೆ. ಆದರೆ ಗದಗ ತಾಲೂಕಿನ ಹೊಸೂರಿನ ನಾಗರಕಲ್ಲಿನ ಶಿಲ್ಪದ ಕೆಳಭಾಗದಲ್ಲಿ ೫ ಸಾಲಿನ ಶಾಸನವಿದ್ದು ಅಕ್ಷರಗಳ ಶೈಲಿಯಿಂದ ಇದು ೧೨ನೇ ಶತಮಾನದ್ದೆಂದು ಕಂಡುಬರುತ್ತದೆ. ಇದರಲ್ಲಿನ ೫ ಸಾಲುಗಳೆಂದರೆ :

೧ ಸ್ವಸ್ತಿ ಶ್ರೀಮತು ಮಿವಣದಂಡನಾ

೨ ಯಕರ ಮಱಿಯಮ್ಮ ಚಟ್ಟ

೩ ಪದಂಡನಾಯಕರ ಮಮ್ಮ ಶ್ರೀ

೪ ವತು ಹೆಮ್ಮಾಡಿ ದಂಡನಾಯ

೫ ಕನ ಶ್ರೀ ನಾಗಂ

ಹೀಗೆ ನಾಗರಕಲ್ಲಗಳ ಮೇಲೆ ಶಾಸನದ ಬರವಣಿಗೆ ಗದಗ ತಾಲೂಕಿನಲ್ಲಿ ಅಪರೂಪದ ಸಂಗತಿಯಾಗಿದೆ.

**ನಿಸಿಧಿಶಾಸನ :** ಇದೇ ಊರಿನ ಹೊಲವೊಂದರಲ್ಲಿ ಎರಡು ನಿಸಿಧಿ ಶಾಸನಗಳು ದೊರೆತಿದ್ದು ಒಂದು ಕೇವಲ ಶಿಲ್ಪದಿಂದ ಕೂಡಿದ್ದರೆ ಇನ್ನೊಂದು ಶಾಸನ ಸಹಿತ ನಿಸಿಧಿ ಶಾಸನವಿದೆ. ಶಾಸನ ರಹಿತ ನಿಸಿಧಿ ಶಾಸನದಲ್ಲಿ ಕೇವಲ ತೀರ್ಥಂಕರನ ಮೂರ್ತಿ ಹಾಗೂ ಮುಕ್ಕೊಡೆ ಎಡಭಾಗದಲ್ಲಿ ವ್ಯಕ್ತಿಯೊಬ್ಬ ಕೈಮುಗಿದು ಕುಳಿತ ಚಿತ್ರಣ ಮತ್ತು ಬಲಭಾಗದಲ್ಲಿ ಯತಿಯೊಬ್ಬನು ವ್ಯಾಸಪೀಠದ ಮೇಲಿನ ಪುಸ್ತಕವನ್ನು ಪಠಣ ಮಾಡುವ ಚಿತ್ರವಿದೆ. ಮೇಲಿನ ಪಾರ್ಶ್ವಗಳಲ್ಲಿ ಸೂರ್ಯ ಹಾಗೂ ಚಂದ್ರನ ಚಿತ್ರಗಳಿವೆ.

ಆದರೆ ಇನ್ನೊಂದು ನಿಸಿಧಿ ಕಲ್ಲಿನ ಮೇಲೆ ನಾಲ್ಕು ಸಾಲಿನ ಶಾಸನವಿದೆ.

೧ ಮೂಲಸಂಘ ಕಾಣೂರ್ಗಣದ ಸಕಳ ಪಂತ ಭಟಾರಕರ ಗು



೨ ಡ್ಡರು ಗಾಣದ ಹೊಚಿಸೆಟ್ಟಿ ಸಕರ ಸೆಟ್ಟಿಯರ ನಿಸಿಧಿಗೆ

ಎಂದು ಉಲ್ಲೇಖವಿದೆ. ಇವರು ಗಾಣಿಗ ಕುಲದ ಜೈನರೆಂದು ತಿಳಿದುಬರುತ್ತದೆ.

**ವೀರಗಲ್ಲು :** ಈ ವೀರಗಲ್ಲು ೧೪ ಸಾಲುಗಳಿಂದ ಕೂಡಿದ್ದು ಶಾಸನದ ಪಠ್ಯವು ಸಂಪೂರ್ಣ ತ್ರುಟಿತವಾಗಿದೆ. ಅಲ್ಲಲ್ಲಿ ಕೆಲವು ಅಕ್ಷರ ಹಾಗೂ ಶಬ್ಧಗಳು ಕಂಡು ಬಂದಿವೆ. ಇಲ್ಲಿನ 'ಬಿತ್ತುವಲ್ಲಿ' ಎಂಬ ಶಬ್ಧ ಕಂಡು ಬಂದಿದ್ದರಿಂದ ರೈತನೊಬ್ಬ ಹೊಲ ಬಿತ್ತುವ ಸಂದರ್ಭದಲ್ಲಿ ವೀರತನವನ್ನು ಮೆರೆದದ್ದಕ್ಕಾಗಿ ಈ ವೀರಗಲ್ಲನ್ನು ನಿಲ್ಲಿಸಿರಬಹುದು.

೧ ಲ್ತ ಋ ಪುನ . . . . . .

೨ ಗೂವಲ . . . . . .

೩ . ಲ ಗ ಱ ಚು . ಋ ನಿತ್ತು

೪ ಕುತ್ತ . . ಸಿಪ . . . . .

೫ ದನುಣ್ಣ ಪಸ . . . . . ನಿಧಿ

೬ ಮತ್ತು ದಱ

೭ ಗೂಳ . .

೮ ಬಿತ್ತು . .

೯ ವಲ್ಲಿ . .

೧೦ ಗಾವ . .



೧೧ . ದ್ವಿ ರಿಲಿ

೧೨ . ದ . . ರಾ

೧೩ ವರೊ

೧೪ . . ಜಿಯ ಹಳು ಬರುಗರಕ

ಹೀಗೆ ಹದಿನಾಲ್ಕು ಸಾಲಿನ ಈ ವೀರಗಲ್ಲು ಸಂಪೂರ್ಣ ತ್ರುಟಿತವಾಗಿದೆ.

**ನವಿಲುಗಳ ಸ್ಮಾರಕ ಶಿಲ್ಪ** : ಹೊಸೂರಿನ ತ್ರಿಕೂಟೇಶ್ವರ ದೇವಾಲಯದ ಎದುರಿಗೆ ಎರಡು ನವಿಲುಗಳನ್ನುಳ್ಳ ಸ್ಮಾರಕ ಶಿಲ್ಪ ಕಂಡುಬಂದಿದೆ. ಈ ಶಿಲ್ಪದಲ್ಲಿ ಇಬ್ಬರು ಸ್ತ್ರೀಯರು ಚಾಮರ ಹಿಡಿದು ಹಿಂದೆ ನಿಂತಿದ್ದಾರೆ. ಇದು ನವಿಲುಗಳನ್ನು ಸ್ವರ್ಗಕ್ಕೆ ಕೊಂಡೊಯ್ಯುವಂತೆ ಕಂಡುಬರುತ್ತದೆ. ಪ್ರಾಚೀನ ಕಾಲದಲ್ಲಿ ಮಾನವನು ಪಕ್ಷಿಗಳೊಂದಿಗೆ ಅವಿನಾಭಾವ ಸಂಬಂಧವನ್ನು ಹೊಂದಿದ್ದನೆಂದು ಇದರಿಂದ ತಿಳಿದುಬರುತ್ತದೆ. ಇಂದಿಗೂ ಹೊಸೂರು ಗ್ರಾಮದ ಸುತ್ತಲಿನ



ಪ್ರದೇಶದಲ್ಲಿ ನವಿಲುಗಳು ಅಧಿಕ ಸಂಖ್ಯೆಯಲ್ಲಿ ವಾಸಿಸುವದು ಕಂಡುಬರುತ್ತದೆ. ಕುಕ್ಕೆ ಸುಬ್ರಮಣ್ಯ ದಾನಶಾಸನದಲ್ಲಿ ನವಿಲಿನ ಶಿಲ್ಪ ಇದೆ (ಡಾ. ಡಿ.ವಿ. ಪರಮಶಿವಮೂರ್ತಿಯವರ 'ಶಾಸನ ಶಿಲ್ಪ') ಆದರೆ ಗದಗ ತಾಲೂಕಿನಲ್ಲಿ ಈ ನವಿಲುಗಳ ಸ್ಮಾರಕಶಾಸನ ಅಪರೂಪವಾಗಿದೆ.

(ಈ ಪ್ರಬಂಧದ ಮಂಡನೆಗೆ ಅವಕಾಶ ಮಾಡಿಕೊಟ್ಟ ಕನ್ನಡ ವಿಶ್ವವಿದ್ಯಾಲಯದ ಶಾಸನಶಾಸ್ತ್ರ ವಿಭಾಗಕ್ಕೂ ಹಾಗೂ ಕ್ಷೇತ್ರಕಾರ್ಯದಲ್ಲಿ ಜೊತೆಗಿದ್ದು ಪ್ರೋತ್ಸಾಹಿಸಿದ ಡಾ. ಡಿ.ವಿ. ಪರಮಶಿವಮೂರ್ತಿಯವರಿಗೆ ಧನ್ಯವಾದಗಳು.)



ಕರೆಪ್ಪಗೌಡ ಸಿ. ಪಾಟೀಲ*

# ಮದಲೂರಿನ (ಶ್ರೀರಂಗಾಪೂರ) ವೀರಗಲ್ಲು ಶಾಸನಶಿಲ್ಪ

ಬೆಳಗಾವಿ ಜಿಲ್ಲೆಯ ಸವದತ್ತಿ ತಾಲೂಕಿನ ಮುನವಳ್ಳಿಯಿಂದ ೧೦ ಕಿ.ಮೀ. ದೂರದಲ್ಲಿರುವ ಮದಲೂರಿನ (ಶ್ರೀರಂಗಾಪೂರ) ಸಿದ್ಧೇಶ್ವರ ದೇವಾಲಯದ ಎದುರು ಇಲ್ಲಿ ಸಂಪಾದಿಸಿರುವ ಸ್ಮಾರಕ ಶಿಲಾಸಾಸನವಿದೆ.[೧] (ಚಿತ್ರನೋಡಿ) ಶಿಲ್ಪಫಲಕವು ೯೦ ಸೆಂ.ಮೀ. ಉದ್ದ, ೭೦ ಸೆಂ.ಮೀ. ಅಗಲವಾಗಿದ್ದು, ಒಂದರ ಮೇಲೊಂದರಂತೆ ನಾಲ್ಕು ಶಿಲ್ಪ ಪಟ್ಟಿಕೆಗಳಿವೆ. ಮೊದಲನೆಯ (ಕೆಳಗಿನ) ಪಟ್ಟಿಕೆಯಲ್ಲಿ ವೀರನು ವೈರಿಗಳೊಂದಿಗೆ ಹೋರಾಡುವ ದೃಶ್ಯವಿದ್ದು, ಅವನ ಹಿಂಭಾಗದಲ್ಲಿ ತುರು(ಹಸು)ಗಳನ್ನು ಚಿತ್ರಿಸಲಾಗಿದೆ. ಎರಡನೆಯ ಪಟ್ಟಿಕೆಯಲ್ಲಿ ಹೋರಾಟದಲ್ಲಿ ಮಡಿದ ವೀರನನ್ನು ಆರು ಜನ ಅಪ್ಸರೆಯರು ದೇವಲೋಕಕ್ಕೆ ಕರೆದೊಯ್ಯುತ್ತಿದ್ದು, ಕೈಯಲ್ಲಿ ಹೂಮಾಲೆಯನ್ನು ಹಿಡಿದಿದ್ದಾರೆ. ಅಪ್ಸರೆಯೊಬ್ಬಳು ವೀರನ ತಲೆಯ ಮೇಲೆ ಛತ್ರಿಯನ್ನು ಹಿಡಿದಿದ್ದಾಳೆ. ಮೂರನೆಯ ಪಟ್ಟಿಕೆಯಲ್ಲಿ ವೀರನು ಎತ್ತರವಾದ ಪೀಠದ ಮೇಲೆ ಸುಖಾಸನದಲ್ಲಿ ಕುಳಿತಿದ್ದಾನೆ. ಇಕ್ಕೆಲಗಳಲ್ಲಿ ಐದು ಜನ ವಾದ್ಯಗಾರರ ದೃಶ್ಯವಿದ್ದು, ಮೇಲ್ಭಾಗದಲ್ಲಿ ಅಪ್ಸರೆಯರು ಕೈಗಳಲ್ಲಿ ಚಾಮರಗಳನ್ನು ಹಿಡಿದು ನಿಂತಿದ್ದಾರೆ. ಇದರ ಮೇಲ್ಗಡೆ ಇರುವ ನಾಲ್ಕನೆಯ ಪಟ್ಟಿಕೆಯಲ್ಲಿ ದ್ರಾವಿಡ ಮಾದರಿಯ ಮಂಟಪದ ಪ್ರತಿಕೃತಿಯಿದ್ದು, ಮಧ್ಯದಲ್ಲಿ ಶಿವಲಿಂಗವಿದೆ. ಇಕ್ಕೆಲಗಳಲ್ಲಿ ಗಡ್ಡಧಾರಿ ಯತಿ (ಮುನಿ), ಗಣೇಶ, ಮಹಿಷಮರ್ದಿನಿ, ವೃಷಭ (ನಂದಿ) ಶಿಲ್ಪಗಳ ನಿರೂಪಣೆಯಿದೆ. ಯತಿಗಳು (ಮುನಿಗಳು) ಶಿವಲಿಂಗಕ್ಕೆ ಪೂಜೆಗೈಯುತ್ತಿದ್ದು, ಧ್ವಜಸ್ತಂಭಗಳು, ಸೂರ್ಯಚಂದ್ರರ ಸಂಕೇತಗಳಿವೆ. ಪ್ರಸ್ತುತ ಶಾಸನವನ್ನು ಈ ಪಟ್ಟಿಕೆಗಳ ನಡುವಿನ ಅವಕಾಶದಲ್ಲಿ ಸುಮಾರು ೧೩ ಸಾಲುಗಳಲ್ಲಿ ಕೊರೆದಿದೆ. ಶಾಸನ ಸಾಲುಗಳು ಹೆಚ್ಚು ಕಡಿಮೆ ಸುಸ್ಥಿತಿಯಲ್ಲಿವೆ.

ಶಾಸನವನ್ನು ಕ್ರಿ.ಶ. ೧೧-೧೨ನೆಯ ಶತಮಾನದ ಕನ್ನಡ ಲಿಪಿ ಮತ್ತು ಭಾಷೆಯಲ್ಲಿ ಬರೆದಿದೆ. ೧೩ ಸಾಲುಗಳಿದ್ದು, ಅಕ್ಷರಗಳು ಸ್ಪಷ್ಟವಾಗಿವೆ. ಪ್ರಾರಂಭಿಕ ವಾಕ್ಯವನ್ನು ಹೊರತುಪಡಿಸಿ, ಶಾಸನವು ಪದ್ಯರೂಪದಲ್ಲಿದೆ. ಒಂದು ಪದ್ಯ ಉತ್ಪಲಮಾಲಾ ವೃತ್ತದಲ್ಲಿ, ಮೂರು ಪದ್ಯಗಳು ಕಂದದಲ್ಲಿ ಹಾಗೂ ಇನ್ನೊಂದು ಪದ್ಯ ಚಂಪಕಮಾಲಾ ವೃತ್ತದಲ್ಲಿ ಇವೆ. ಮೂರು ಮತ್ತು ನಾಲ್ಕನೆಯ ಸಾಲುಗಳಲ್ಲಿ ತೇದಿಯ ವಿವರಗಳಿದ್ದು, ಚಾಳುಕ್ಯ ವಿಕ್ರಮ ವರ್ಷದ ಹದಿನಾರನೆಯ ಪ್ರಜಾಪತಿ ಸಂವತ್ಸರದ ಫಾಲ್ಗುಣ ಅಷ್ಟಮಿ ಆದಿವಾರ ಎಂಬ ಪದಗಳು ಸ್ಪಷ್ಟವಾಗಿವೆ. ಆದ್ದರಿಂದ ಈ ತೇದಿಯನ್ನು ಕ್ರಿ.ಶ. ೧೦೯೨ ಫೆಬ್ರುವರಿ ೨೯ ರವಿವಾರಕ್ಕೆ ಸಮಾನವೆಂದು ಪರಿಗಣಿಸಬಹುದು.

ಶಾಸನವು ಕಲ್ಯಾಣದ ಚಾಲುಕ್ಯ ಮನೆತನದ ತ್ರಿಭುವನಮಲ್ಲನ (೬ನೆಯ ವಿಕ್ರಮಾದಿತ್ಯ) ಆಳ್ವಿಕೆ ಮತ್ತು ಪ್ರಶಸ್ತಿಗಳನ್ನು ಪರಿಚಯಿಸುತ್ತದೆ. ಕುಜೆಂಬ ಗಾಳಿಗನು ('ಕುಜೆಂಬ' ಪದಕ್ಕೆ 'ಕೋಟೆಯ ಕಾವಲುಗಾರ' ಮತ್ತು 'ಉಗ್ರಾಣದ ಯಜಮಾನ' ಎಂಬ ಅರ್ಥವಿದೆ) ಜಕ್ಕಿವಾಡವನ್ನು ಮುತ್ತಿದಾಗ, ಜಕ್ಕಿವಾಡದ ಸೋಮಗಾವುಂಡನು ಅವನ ವಿರುದ್ಧ ಹೋರಾಡಿ ಮಡಿದು ಸೂರ್ಯಲೋಕವನ್ನು ಸೇರಿದನೆಂಬ ಕೀರ್ತಿಗೆ ಭಾಜನನಾದನು. ಶಾಸನದಲ್ಲಿ ಸೋಮಗಾವುಂಡನನ್ನು ಬಿಲ್ಲು ವಿದ್ಯೆಯಲ್ಲಿ ಅರ್ಜುನ, ರಾಮ ಮತ್ತು ಪರಶುರಾಮರಿಗೆ ಸಮಾನನೆಂದು ವರ್ಣಿಸಲಾಗಿದೆ. ಇವನು ಒಂದು ಸಾವಿರ ಕುದುರೆಗಳ ಬಂಟ(ನಾಯಕ)ನಾಗಿದ್ದನು. ಈತನು ಸುಭಟ ಚೂಡಾಮಣಿ ಎನಿಸಿ ಇಂದ್ರಪುರವನ್ನು (ದೇವಲೋಕ) ಹೊಕ್ಕನು (ಸೇರಿದನು).

ಛಲದಿಂದ ಹೋರಾಡುವಾಗ ಅವನ ವಿರೋಧಿ ಬಲವು ಕಡಿಮೆಯಾಗುತ್ತ ಬಂದಿತು. ಕೂರಲಗಿನ (ಹರಿತವಾದ) ಕತ್ತಿಯಿಂದ ಹಲವರನ್ನು ನೆಲಕ್ಕುರುಳಿಸಿದನು. ವೈರಿಗಳೊಂದಿಗೆ ಹೋರಾಡುತ್ತ ಮಡಿದ ಈ ಸೋಮಗಾವುಂಡನು ಇಂದ್ರನ ಅಪ್ಸರೆಯರೊಂದಿಗೆ ಸುಖಭೋಗದಿಂದಿರುವನು.

ಇದೊಂದು ಊರಳಿವು ವೀರಗಲ್ಲು ಶಾಸನಶಿಲ್ಪ

* ಸಂಶೋಧನ ವಿದ್ಯಾರ್ಥಿ, ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನ ವಿಜ್ಞಾನ ವಿಭಾಗ, ಕ.ವಿ. ಧಾರವಾಡ-೦೩



ವಾಗಿದ್ದು, ದಾಳಿಯಲ್ಲಿ ಹೋರಾಡಿ ಮಡಿದ ವೀರರ ಜ್ಞಾಪಕಾರ್ಥಕವಾಗಿ ನಿಲ್ಲಿಸಿದ ವೀರಗಲ್ಲುಗಳ ವರ್ಗಕ್ಕೆ ಸೇರುತ್ತದೆ. ಶಾಸನದ ಪಾಠ ಈ ಕೆಳಗಿನಂತಿದೆ.[೨]

**ಮೊದಲನೆಯ ಪಟ್ಟ**

೧. @ಸ್ವಸ್ತಿ ಸಮಸ್ತ ಭುವನಾಶ್ರಯ ಶ್ರೀ ಪೃಥ್ವೀವಲ್ಲಭ ಮಹಾರಾಜಾಧಿರಾಜ ಪರಮೇಶ್ವರ ಪರಮಭಟ್ಟಾರ

೨. ಕಂ ಸತ್ಯಾಶ್ರಯಕುಳತಿಳಕಂ ಚಾಳುಕ್ಯಾಭರಣಂ ಶ್ರೀಮತ್ತ್ರಿ ಭುವನಮಲ್ಲದೇವರ ವಿಜಯರಾಜ್ಯ

೩. ಮುತ್ತರೋತ್ತರಾಭಿವೃದ್ಧಿ ಪ್ರವರ್ಧಮಾನಮಾ ಚಂದ್ರಾರ್ಕ್ಕ ತಾರಂಬರಂ ಸಲುತ್ತಮಿರೆ ಚಾಳುಕ್ಯ ವಿಕ್ರ[ಮ*] ವರ್ಷದ ಹದಿನಾರನೆಯ ಪ್ರಜಾಪತಿ ಸಂ

೪. ವತ್ಸರದ ಫಾಲ್ಗುಣ ಸುದ್ಧ ಅಷ್ಟಮಿ ಆದಿವಾರದಂದು ॥ [ಉತ್ಪಲಮಾಲಾ*] ತರ್ಕ್ಕಿನ ನಾಯಕರ್ಪ್ಪಲರುಮಂ ಗೆದೆಗೊಣ್ಡ ಕುಱಿಂಬ[ಗಾ]ಳಿಗಂ ಮಿಕ್ಕ ವಿರೋ

೫. ಧದಿಂ ಪರಿದು ಮುತ್ತಿದನಾಟಕೆ ಜಕ್ಕಿವಾಡಮಂ ಪಕ್ಕಮೆಯಿಕ್ಕಿದಶ್ವಚಯಮಂ ಕಡೆಯೆಚ್ಚು ಪಲಂಬರ ನೆಲಕ್ಕಿಕ್ಕಿ ಮಹೋತ್ಸ

೬. ವಂ ಬೆರಸು ಸೋಮಗವುಣ್ಡನೆ ಸೂರ್ಯ್ಯಲೋಕಮಂ ಪೊಕ್ಕನೆನಿಪ್ಪ ಕೀರ್ತ್ತಿ ಪರೆದೆಯ್ದಿದುದೆಯ್ದೆ ದಿಗನ್ತರಾಳ ಮಂ ॥@

**ಎರಡನೆಯ ಪಟ್ಟ**

೭. [ಕಂದ*] ಭೀಮಾನುಜನ್ಮನೊ ಮೇಣ್ ರಾಮನೊ ಮೇಣ್ ಪರಸುರಾಮನೊ ಪೇಳಿವನೆಂಬೀ ಮಾತು ನೆಗ[ಳೆ] ನೆಗಟ್ದಿಂ ಸೋಮಗವು

೮. ಣ್ಡಂ ಸಮನ್ತು ಚಾಪಾಗಮದೊಳ್ ॥ ಒಸರಿಸದಾನ್ತ ಕಾಳನ ಸಾಸಿರ ಬಂಟಿಂಗಮವನ ಕುದುರೆಯ ದಳಮಂ

೯. ಪೆಸದೆ ತಱ್ತಿಱಿದಂ ದೇವಾಸುರ ರಣದಂತೆ ನೆಗಟ್ದ ಗಣಿಗರ ಸೋಮ ॥ ಮಣಿಯದೆ ಕುಱಿಂಬ ಗಾಳಮನಣಿ

೧೦. ಯಂ ಮಾರ್ಕ್ಕೊಣ್ಡು ಕುದುರೆವುಂ ಮೇಲ್ಲಾಳಂ ಪೆಣೆದಿರಿದು ಸುಭಟ ಚೂಡಾಮಣಿ ಗಣಿಗರ ಸೋವನಿಂದ್ರ ಪುರಮಂ ಪೊಕ್ಕ ॥

**ಮೂರನೆಯ ಪಟ್ಟ**

೧೧. [ಚಂಪಕಮಾಲಾ*] ಚಲಚಲದಿಂದಿದಿರ್ಚ್ಚಿದ ವಿರೋಧಿ ಬಲಂ ಪಿರಿದಾಗೆ ತನ್ನ ದೋರ್ವ್ವಲದ ಪೊದರ್ಪ್ಪಿನಿಂದಿದಿರನಳು ಕುಱಿದಾನ್ತು

೧೨. ಮಹೋಗ್ರಮಪ್ಪ ಕೂರಲಗಿನ ಬಾಣದಿಂ ಪಲರನಿಕ್ಕಿ ಬಬಾಪ್ಪೆನೆ ಜಕ್ಕಿವಾಡದೂರಳಿವಿನೋಳಣ್ಮಿ ಸತ್ತು ಜಸ

೧೩. ಮಂ ನೆಱೆ ಪೆತ್ತ ಮರೆಂ[ದ್ರ] ಕಾನ್ತೆ [ಯ]ರ್ಪ್ಪ[ಲ] ಗ್ಗಿಪ ಭೊಗ್ಯನಾಗಿ ಸುಖದಿಂದಮೆ ಗಂಗರ ಸೋಮ [ನಿ]ಲ್ದ್ ಪ॥@

(ಶಾಸನದ ಪಡಿಯಚ್ಚನ್ನು ಓದಿ, ಈ ಲೇಖನವನ್ನು ಬರೆಯಲು ಸಹಕರಿಸಿದ ನನ್ನ ವಿದ್ಯಾಗುರುಗಳು ಹಾಗೂ ನನ್ನ ಸಂಶೋಧನ ಮಾರ್ಗದರ್ಶಕರೂ ಆದ ಡಾ. ಶ್ರೀನಿವಾಸ ವ್ಹಿ. ಪಾಡಿಗಾರ, ಪ್ರವಾಚಕರು ಮತ್ತು ಅಧ್ಯಕ್ಷರು ಪ್ರಾಚೀನ ಭಾರತೀಯ ಇತಿಹಾಸ ಮತ್ತು ಶಾಸನವಿಜ್ಞಾನ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ ಇವರಿಗೆ ನನ್ನ ಕೃತಜ್ಞತೆಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಈ ಶಾಸನವನ್ನು ಆ್ಯನ್ಯುಯಲ್ ರಿಪೋರ್ಟ್ಸ್ ಆನ್ ಸೌಥ್ ಇಂಡಿಯನ್ ಎಪಿಗ್ರಫಿ (ಎ.ಆರ್.ಎಸ್.ಐ.ಇ.) ೧೯೪೦-೪೧. ಅಪೆಂಡಿಕ್ಸ್-ಇ. ನಂ. ೫೮, ಪುಟ-೨೪೪ರಲ್ಲಿ ಗಮನಿಸಿದೆಯಾದರೂ, ಶಾಸನದ ಪಾಠ ಈವರೆಗೆ ಪ್ರಕಟವಾಗಿಲ್ಲ.

೨. ಕಪ್ಪು ಶಾಯಿಂದ ತೆಗೆದ ಪಡಿಯಚ್ಚಿನಿಂದ ಓದಲಾಗಿದೆ.

ಡಾ॥ ಹೆಚ್. ಚಂದ್ರಶೇಖರ*

# ದೇವದುರ್ಗದ ಈರಣ್ಣ ದೇವರ ಗುಡ್ಡದ ಶಾಸನದ ಒಂದು ಅಧ್ಯಯನ

ದೇವದುರ್ಗ ನಗರವು ತಾಲ್ಲೂಕು ಕೇಂದ್ರವಾಗಿದ್ದು, ರಾಯಚೂರು ಜಿಲ್ಲಾಕೇಂದ್ರದಿಂದ ವಾಯುವ್ಯ ದಿಕ್ಕಿನಲ್ಲಿ ಸುಮಾರು ೬೫ ಕಿ.ಮೀ. ದೂರದಲ್ಲಿದೆ. ಇದು ನನ್ನ ಹುಟ್ಟೂರು. ನಾನು ಚಿಕ್ಕವನಾಗಿದ್ದನಿಂದಲೂ ಇಲ್ಲಿರುವ ಹಲವಾರು ಕಟ್ಟಡಗಳನ್ನು, ಗುಡಿಗಳನ್ನು, ಬಾವಿಗಳನ್ನು ಕುತೂಹಲಿಯಾಗಿ ನೋಡಿ, ಇತಿಹಾಸ ತಿಳಿಯಲು ಪ್ರಯತ್ನಿಸಿದ್ದೆ ; ಆದರೆ ಫಲಕಾರಿಯಾಗಲಿಲ್ಲ. ೧೯೯೯ರ ಇತಿಹಾಸ ದರ್ಶನದಲ್ಲಿ ಪ್ರಕಟವಾದ ಸಂಪ್ರಬಂಧದಲ್ಲಿ,[೧] ಚಂದನಕೆರೆ ಗ್ರಾಮವು ದೇವದುರ್ಗ ನಗರಕ್ಕಿಂತಲೂ ಪುರಾತನವಾದದ್ದು ಎಂದು ಪುರಾತತ್ವ ಆಧಾರಗಳಿಂದ ಬರೆದಿದ್ದೆ. ಆಗ ರಾಯಚೂರು ಜಿಲ್ಲೆಯ ಶಾಸನಗಳು ಪ್ರಕಟವಾಗಿರಲಿಲ್ಲ. ೨೦೦೩ರಲ್ಲಿ ಪ್ರಕಟವಾದ ಶಾಸನ ಸಂಪುಟದಲ್ಲಿ, ಶಾಸನ ಸಂಖ್ಯೆ ೪೬೭ರ ಅಧ್ಯಯನದಿಂದ ದೇವದುರ್ಗದ ಇತಿಹಾಸ ತಿಳಿಯುವಂತಾಯಿತು. ಇದು ಒಂದು ರೀತಿಯಿಂದ ನನಗೆ ವೈಯಕ್ತಿಕವಾಗಿ ತುಂಬಾ ಸಂತಸ ನೀಡಿದ ಸಂಶೋಧನೆ ಮತ್ತು ಅಧ್ಯಯನ. ಈ ಶಾಸನವನ್ನು ಮತ್ತು ಶಾಸನದಲ್ಲಿ ಉಲ್ಲೇಖಗೊಂಡಿರುವ ಸ್ಮಾರಕಗಳನ್ನು ಮುಂದೆ ಚರ್ಚಿಸುತ್ತೇನೆ.

ಈ ಶಾಸನವು ನಗರದ ಪೂರ್ವ ದಿಕ್ಕಿನಲ್ಲಿರುವ ಈರಣ್ಣ ದೇವರ ಗುಡ್ಡದ ಶಿಖರದ ಮೇಲಿದೆ. ಈ ಶಿಖರವು ನೆಲಮಟ್ಟದಿಂದ ಸುಮಾರು ೩೦೦ ಮೀ. ಎತ್ತರದಲ್ಲಿದೆ. ಈ ಗುಡ್ಡದ ಮೇಲಿರುವ ಶಾಸನದವರೆಗೂ ಪೂರ್ವ ದಿಕ್ಕಿನಿಂದ ಅಂದರೆ ಗೌರಂಪೇಟೆಯಿಂದಲೂ ಮತ್ತು ಪಶ್ಚಿಮ ದಿಕ್ಕಿನಿಂದಲೂ ಅಂದರೆ ದೇವದುರ್ಗದಿಂದಲೂ ಹತ್ತಲು ಅನುಕೂಲವಾಗುವಂತೆ ಗುಂಡುಗಳನ್ನು (Boulders) ಮೆಟ್ಟಲುಗಳಂತೆ ಜೋಡಿಸಲಾಗಿದೆ. ಸ್ವಲ್ಪ ಕಷ್ಟವಾದರೂ ಶಿಖರದವರೆಗೆ ಹತ್ತಬಹುದಾಗಿದೆ.

**ಅಪರೂಪದ ಚಿತ್ರ-ಶಾಸನ :** ಈ ಶಾಸನವನ್ನು ಕೆತ್ತಲು ಒಂದು ನೆಟ್ಟಗೆ ನಿಂತಿರುವ ದೊಡ್ಡ ಗುಂಡನ್ನು (Vertically Standing boulder) ಆರಿಸಲಾಗಿದೆ. ಇದರ ಎತ್ತರ ಸುಮಾರು ೯ ಮೀ. ಇದೆ. ಈ ಗುಂಡಿನ ತುದಿಯಲ್ಲಿ ಇರುವ ಒಂದು ನೈಸರ್ಗಿಕವಾಗಿ ನಿರ್ಮಾಣ ಗೊಂಡಿರುವ ಮುಂಚಾಚನ್ನು (Balcony) ಕೃತಕವಾಗಿ ಮಾರ್ಪಡಿಸಿ, ಈ ಮುಂಚಾಚಿನ ಅಡಿಯಲ್ಲಿ ಕಲ್ಲನ್ನು ಸಮತಳವಾಗುವಂತೆ ಕೆತ್ತಿ, ಇಂಥ ಸಪಾಟಗೊಂಡ ಭಾಗದ ಮೇಲೆ ಶಾಸನ ಮತ್ತು ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈ ಕಾರಣಗಳಿಂದಾಗಿ ಮಾನವನ ಕೈಗಳಿಂದಲೂ ನೈಸರ್ಗಿಕ ಹೊಡೆತಗಳಿಂದಲೂ ಈ ಶಾಸನ ಸುರಕ್ಷಿತವಾಗಿದೆ. ಉಬ್ಬುಶಿಲ್ಪಗಳು ಮತ್ತು ಶಾಸನದ ಅಕ್ಷರಗಳು ಇಂದಿಗೂ ಸ್ಪುಟವಾಗಿ ಕಾಣುತ್ತವೆ. ಈ ಶಾಸನ ಮತ್ತು ಉಬ್ಬು ಶಿಲ್ಪಗಳನ್ನು ಕೆತ್ತಲು ಅನುಕೂಲವಾಗಲೆಂದು ಮುಂಚಾಚಿನಲ್ಲಿ ಎರಡು ಕಬ್ಬಿಣದ ಉಂಗುರಗಳನ್ನು (Iron Rings) ಹೊಡೆಯಲಾಗಿದೆ. ಈ ಉಂಗುರಗಳಿಗೆ ಹಗ್ಗಗಳನ್ನು ಸಿಕ್ಕಿಸಿ ಬಹುಶಃ ತೊಟ್ಟಿಲು ಅಥವಾ ತೂಗುಮಣೆಗಳನ್ನು ನೇತುಹಾಕಿ ಶಾಸನವನ್ನು ಕೆತ್ತಿರುವುದು ನೋಡಿದರೆ ಗೊತ್ತಾಗುತ್ತದೆ.

ಈ ಶಾಸನವನ್ನು ಎರಡು ಭಾಗಗಳಲ್ಲಿ ಕೆತ್ತಲಾಗಿದೆ. ಶಾಸನದ ಎಡಭಾಗದಲ್ಲಿ ಶಾಸನವನ್ನು ಕೆತ್ತಲಾಗಿದ್ದರೆ ಬಲಭಾಗದಲ್ಲಿ ಅರ್ಥಪೂರ್ಣ ಹಾಗೂ ಕಲಾತ್ಮಕ ಉಬ್ಬು ಶಿಲ್ಪಗಳನ್ನು ಕೆತ್ತಲಾಗಿದೆ. ಈ ಶಾಸನದಲ್ಲಿ ನಾರದನು ಕೃಷ್ಣನಿಗೆ ಈ ಶಾಸನದ ನಾಯಕನಾದ ಕೇಸವಯ್ಯಗೌಡನ ಬಗ್ಗೆ ಮತ್ತು ಕಟ್ಟಿಸಿದ ರಚನೆಗಳ ಬಗ್ಗೆ ಹೇಳುತ್ತಾನೆ. ಅಂದರೆ ಕೇಸವಯ್ಯ ಗೌಡನನ್ನು ಒಬ್ಬ ಪೌರಾಣಿಕ ಪುರುಷನಂತೆ ಚಿತ್ರಿಸಲು ಪ್ರಯತ್ನಿಸಲಾಗಿದೆ. ಇದಕ್ಕೆ ಸಾಕ್ಷಿ ಎಂಬಂತೆ ಲೋಕಸಂಚಾರಿ ನಾರದ ಮುನಿಯನ್ನು ನವಿಲಿನ ಮೇಲೆ ಕುಳಿತಂತೆ ಉಬ್ಬುಶಿಲ್ಪವನ್ನು ಕೆತ್ತಲಾಗಿದೆ. ಈ ಉಬ್ಬುಶಿಲ್ಪವಲ್ಲದೆ, ಷಣ್ಮುಖ, ಹನುಮಂತ, ನಂದಿವಾಹನರಾದ ಶಿವಪಾರ್ವತಿ, ಹರಿಹರ ಶಿಲ್ಪ, ಮತ್ಸ್ಯಕನ್ಯೆಯರು ಇತ್ಯಾದಿ ಶಿಲ್ಪಗಳನ್ನು ಮತ್ತು ಹಣ್ಣಿನ ಗಿಡಗಳನ್ನು ಕೆತ್ತಲಾಗಿದೆ. ಈ ಶಿಲೆಯು ದಪ್ಪ ಪದರುಗಳ

* 'ಸಂಗಮ' ಎಮ್.ಐ.ಜಿ.-೭೭, ೬ನೇ ಕ್ರಾಸ್, ೬ನೇ ಮೇನ್, ಕೆ.ಹೆಚ್.ಬಿ.ಕಾಲೋನಿ, ಬಸವೇಶ್ವರನಗರ, ಬೆಂಗಳೂರು.

ಸೀಣಿ ಕಲ್ಲಾಗಿದ್ದರೂ (Coarse Grained Granitic Gneiss) ಶಿಲ್ಪಿಯು ತನ್ನ ಕೈಚಳಕದಿಂದ ಕಲಾತ್ಮಕ ಉಬ್ಬುಶಿಲ್ಪಗಳನ್ನು ಸುಂದರವಾಗಿ ಬಿಡಿಸಿದ್ದಾನೆ. ಒಂದೊಂದು ಉಬ್ಬುಶಿಲ್ಪವನ್ನು ಬಣ್ಣಿಸುವುದು ಮತ್ತು ಲೇಖನದಲ್ಲಿ ಚರ್ಚಿಸುವುದು ಸಾಧ್ಯವಾಗುವದಿಲ್ಲ. ಆದ್ದರಿಂದ ಈ ಶಾಸನವು ಒಂದು ಕಲಾತ್ಮಕ ಚಿತ್ರ–ಶಿಲ್ಪ ಶಾಸನವಾಗಿದೆ ಎಂದು ಹೇಳಿದರೆ ಸದ್ಯಕ್ಕೆ ಸಾಕು ಎನಿಸುತ್ತದೆ.

**ಶಾಸನದ ಪಾಠದ ಚರ್ಚೆ :** ಈ ಶಾಸನದಲ್ಲಿ ಉಲ್ಲೇಖಗೊಂಡಿರುವ ಚಾರಿತ್ರಿಕ ಅಂಶಗಳನ್ನು ಮತ್ತು ರಚನೆಗಳನ್ನು (Structures) ಮುಂದಿನಂತೆ ಚರ್ಚಿಸಲಾಗಿದೆ.

ಈ ಶಾಸನದ ಕಾಲ (ಶಾಲಿವಾಹನ ಶಕೆ ೧೬೧೨, ಪ್ರಮೋದೂತ ಸಂವತ್ಸರ, ಶ್ರಾವಣ ಬಹುಳ ೧೧) ೨೦-೨೮-೧೬೯೦ ಬುಧವಾರವಾಗುತ್ತದೆ. ಈ ಶಾಸನದಲ್ಲಿ ಅರಕೇರಿಯ ಕೇಸವಯ್ಯಗೌಡನು ದೇವದುರ್ಗವನ್ನು ಕ್ರಿ.ಶ. ೧೬೭೭ರಲ್ಲಿ ನಿರ್ಮಿಸಿದನೆಂದು ಉಲ್ಲೇಖಿತವಾಗಿದೆ. ಈ ಕೇಸಲಯ್ಯಗೌಡನ ತಂದೆಯ ಹೆಸರು ತಿಮ್ಮಣಗೌಡ ಮತ್ತು ತಂದೆಯ ಹೆಸರು (ಅಂದರೆ ತಾತ) ಹೇಮಣ್ಣಗೌಡನೆಂದು ತಿಳಿದುಬರುತ್ತದೆ. ಈ ಕೇಸವೈಯ್ಯಗೌಡನ (ಈತನನ್ನು ಕಾಸಲಯ್ಯ, ಚಿಕ್ಕ ಕಾಸಲೇಂದ್ರ, ಕೇಸವೈಯಗೌಡ ಎಂದೂ ಹೆಸರಿಸಲಾಗಿದೆ) ಇಬ್ಬರು ಹೆಂಡಂದಿರ ಹೆಸರುಗಳು ಲಕ್ಷ್ಮವ್ವ ಮತ್ತು ವಂಕಮ್ಮ (ವಂಕವ್ವ) ಎಂದು ತಿಳಿದು ಬಂದರೆ, ಏಳು ಗಂಡುಮಕ್ಕಳ ಹೆಸರುಗಳು (ಗವುಡಪ್ಪ, ನಾರಾಯಣ್, ವಾಸುದೇವ, ಹರೀಶ್ವರ, ಕಮಲಧರ, ವೊಂಕಾರ, ಚಿಕ್ಕ ಕಮಲಧರ) ಮತ್ತು ಎಂಟು ಹೆಣ್ಣು ಮಕ್ಕಳು (ವೀರವ್ವ, ತಿಂಮ್ಮವ್ವ, ಕಾನಾವ್ವ, ಕೃಷ್ಣಂಮ, ಸಕ್ಕರೈವ್ವ, ವರದವ್ವ, ಮಂಗಮ್ಮ, ವೆಂಕಮ್ಮ) ಇದ್ದರೆಂದು ತಿಳಿದು ಬರುತ್ತದೆ. ಅಂದರೆ ಕಾಸಲಯ್ಯನು ತುಂಬು ಸಂಸಾರಿ ಪಾಳೇಗಾರನಾಗಿದ್ದ ಎಂದು ಸ್ಪಷ್ಟವಾಗುತ್ತದೆ. ಈ ಕಾಸಲಯ್ಯನ ವಂಶಸ್ಥರು ಈಗಲೂ ಅರಕೇರಿಯಲ್ಲಿದ್ದಾರೆ. ನಾನು ಕ್ಷೇತ್ರಕಾರ್ಯದಲ್ಲಿ ಈಗಿರುವ ವಂಶಿಕರ ಸಹಾಯದಿಂದ ಕ್ರಿ.ಶ. ೧೮೦೦ರಿಂದ ಈ ವಂಶವೃಕ್ಷವನ್ನು ಸಂಗ್ರಹಿಸಿದ್ದೇವೆ.

ಈ ಕೇಸಲಯ್ಯಗೌಡನು ಚಂದನಕೆರೆಯ ಸರದೇಸಾಯ ಮತ್ತು ಮಾಮಲೆದಾರನಾಗಿದ್ದನು. ಮತ್ತು ಸುರಪುರ ಸಂಸ್ಥಾನಕ್ಕೆ ಸೇರಿದ ದೊರೆಯಾಗಿದ್ದನು ಎಂದು ತಿಳಿದು ಬರುತ್ತದೆ. ಅಂದರೆ ಚಂದನಕೆರೆಯು ದೇವದುರ್ಗಕ್ಕಿಂತಲೂ ಹಳೆಯ ಸ್ಥಳವಾಗಿತ್ತೆಂಬ ನನ್ನ ಹಿಂದಿನ ಊಹೆಗೆ[೧] ಇಲ್ಲಿ ಶಾಸನಾಧಾರ ಸಿಕ್ಕಂತಾಯ್ತು.

ಕಾಸಲಯ್ಯಗೌಡನು ನಳನಾಮ ಸಂವತ್ಸರದಲ್ಲಿ (ಕ್ರಿ.ಶ. ೧೬೭೭) ದೇವದುರ್ಗವನ್ನು ನಿರ್ಮಿಸಿದನು. ದೇವದುರ್ಗದ ಕೆರೆ, ಪೂರ್ವದ ತಟಾಕ, ರಾಜಗೃಹವನ್ನು ಕಟ್ಟಿಸಿದನೆಂದು ಈ ಶಾಸನದಲ್ಲಿ ಹೇಳಲಾಗಿದೆ. ದೇವದುರ್ಗಕ್ಕೆ ಹುಗ್ಗಿಯ ಔತಣವನ್ನು ನೀಡಿದನು. ಅದಕ್ಕೆ ಕಾರಣವೆಂದರೆ, ಅವನು ಶ್ರೀಗೋವರ್ಧನ ಗೋಪಾಲಕೃಷ್ಣನ ಗುಡಿಯ ನಿರ್ಮಾಣ ಮಾಡಿದ್ದಾಗಿದೆ. ಪೇಟೆ ಹುಟ್ಟಿಸಿ ಸಂತೆ ನೆರೆಸಿದ ಮತ್ತು ಮೂಡಣ ತಟಾಕದ ಹಿಂದೆ ವುಪನಂ ನಿರ್ಮಿಸಿದನೆಂದು ಬಣ್ಣಿಸಲಾಗಿದೆ. ಈ ಶಾಸನದಲ್ಲಿ. ಕೆರೆ ಬಾವಿ ಡೊಣೆಗಳಂ ಕಟ್ಟಿಸಿ ಸಲ್ಲಲಿತ ಉಪಜಲದ ಸಾಧನ ಸೌಕರ್ಯಗಳನ್ನು ನಿರ್ಮಿಸಿದನು ಎಂಬುದನ್ನು ಗಮನಿಸಿದರೆ, ಈ ಗೌಡನಿಗೆ ಜನಹಿತ ಕಾರ್ಯಗಳ ಬಗ್ಗೆ, ಕಳಕಳಿ ಇತ್ತೆಂಬುದು ವ್ಯಕ್ತವಾಗುತ್ತದೆ. ಈ ಶಾಸನದಲ್ಲಿ ಉಲ್ಲೇಖಗೊಂಡ ರಚನೆಗಳನ್ನಲ್ಲದೆ (Structures) ಪರೋಕ್ಷವಾಗಿ ಸಂಬಂಧಿತ ಬೇರೆ ರಚನೆಗಳನ್ನು ನಾನು ಗುರ್ತಿಸಿದ್ದೇನೆ. ಈ ಎಲ್ಲಾ ಪುರಾತತ್ವ ಅವಶೇಷಗಳನ್ನು ಅಥವಾ ಸ್ಮಾರಕಗಳನ್ನು ಈ ಲೇಖನದಲ್ಲಿ ವಿವರವಾಗಿ ಚರ್ಚಿಸಲು ಸಾಧ್ಯವಾಗದು. ಕೇವಲ ಸ್ಥಳ ನಿರ್ದೇಶನಗಳನ್ನು ಮಾತ್ರ ಚಿತ್ರಗಳೊಂದಿಗೆ ಇಲ್ಲಿ ನೀಡುತ್ತೇನೆ. ಅದೊಂದು ಇನ್ನೂ ದೊಡ್ಡದಾಗಿ ಬಹುಶಃ ಚಿಕ್ಕ ಪುಸ್ತಕಕ್ಕೆ ಹೊಂದುವ ಸಾಮಗ್ರಿ ಇದು.

**ಕೆರೆಗಳು :** ಈ ಶಾಸನದಲ್ಲಿ ಕೇಸಯ್ಯಗೌಡನ–ದೇವದುರ್ಗದ ಕೆರೆ ಮತ್ತು ಮೂಡಣ ತಟಾಕ ನಿರ್ಮಿಸಿದನು ಎಂಬ ಉಲ್ಲೇಖ ಇದೆ. ದೇವದುರ್ಗದ ಪಶ್ಚಿಮಕ್ಕೆ ಊರಿಗೆ ಹೊಂದಿಕೊಂಡೇ ಒಂದು ಕೆರೆ, ಸುಮಾರು ೨೦ ವರ್ಷಗಳ ಹಿಂದಿನವರೆಗೂ ಇತ್ತು. ಈಗ ಈ ಕೆರೆಯ ಒಡ್ಡನ್ನು ಒಡೆದದ್ದರಿಂದ ಕೆರೆಯಂಗಳವು ಪ್ಲಾಟುಗಳಾಗಿ ಮಾರ್ಪಟ್ಟಿದೆ. ಈ ಕೆರೆಗೆ ಬೆನಕನ ಕೆರೆ ಎಂದು ಕರೆಯಲಾಗುತ್ತಿತ್ತು. ಬೆನಕನಕೆರೆಯ ಒಡೆತನ ಈ ಊರಿನ ಈಡಿಗರ ಒಂದು ಪ್ರಸಿದ್ಧ ಮನೆತನಕ್ಕೆ ಸೇರಿತ್ತು. ಈ ಮನೆತನಕ್ಕೆ ಈ ಒಡೆತನ ಹೇಗೆ ವರ್ಗವಾಯಿತೆಂಬುದು ತಿಳಿಯದು. ಆದರೆ ಇದೇ ಕೆರೆಯೇ ಕೇಸವಯ್ಯ ಕಟ್ಟಿಸಿದ ದೇವದುರ್ಗದ ಕೆರೆ. ಮೂಡಣ ತಟಾಕ ಎಂದರೆ ಊರಿಗೆ ಪೂರ್ವದಿಕ್ಕಿನಲ್ಲಿರುವ ತಿಮ್ಮಪ್ಪನ ಕೆರೆ. ಕೇಸವಯ್ಯನ ತಂದೆಯ ಹೆಸರಿನಿಂದ ಈ ಕೆರೆಗೆ ಈ ಹೆಸರು ಬಂದಿರಬೇಕು. ಈ ಕೆರೆ ಇಂದಿಗೂ ಇದೆ. ಆದರೆ ಸಂಗ್ರಹ ಸಾಮರ್ಥ್ಯ ಕುಂದಿದೆ. ಇಂದಿಗೂ ಈ ಕೆರೆಯಿಂದ ಸುಮಾರು ೨೦ ಎಕ್ರೆ ಭೂಮಿ ನೀರನ್ನುಣ್ಣುತ್ತದೆ.

**ಗೋಪಾಲಸ್ವಾಮಿ ಗುಡಿ :** ಈ ಶಾಸನದ ೭ನೆಯ ಸಾಲಿನಲ್ಲಿ ಗೋವರ್ಧನ 'ಗೋಪಾಲಕೃಷ್ಣನ ಪ್ರತಿಷ್ಠೆ' ಮಾಡಿಸಿದ ಉಲ್ಲೇಖ ಇದೆ. ಈ ಗುಡಿಯು ಈಗಲೂ ಸುಸ್ಥಿತಿಯಲ್ಲಿದೆ. ತಿಮ್ಮಪ್ಪನನ ಕೆರೆಯ ಒಡ್ಡಿ ಕೆಳಹರಿವಿನಲ್ಲಿದೆ (Down stream). ಈ ಗುಡಿಯನ್ನು ದಪ್ಪ ಹರಳುಗಳ

ಸೀಣಿಕಲ್ಲಿನ (coarse grain gneiss) ಒಂದು ಸಮತಳವಿಲ್ಲದ ಗುಂಡಿನ (Boulder) ಮೇಲೆ ಕಟ್ಟಲಾಗಿದೆ. ಈ ಗುಡಿಯಲ್ಲಿ ಕೇವಲ ಒಂದು ಚಿಕ್ಕ ಗರ್ಭಗುಡಿ ಮಾತ್ರ ಇದೆ. ಗರ್ಭಗುಡಿಯ ಮೇಲೆಯೇ ವಿಜಯನಗರ ಶೈಲಿಯನ್ನು ಅನುಕರಿಸಿ ಒಂದು ವಿಮಾನವನ್ನು ಕಟ್ಟಲಾಗಿದೆ. ಗರ್ಭಗುಡಿಯೊಳಗೆ ಗುಂಡಿನ (Boulder) ಮೇಲೆಯೇ ಕೃಷ್ಣ, ರುಕ್ಮಿಣಿ ಮತ್ತು ಸತ್ಯಭಾಮೆಯ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಪಕ್ಕದಲ್ಲಿಯೇ ಗೋಪಿಕಾ ಸ್ತ್ರೀಯರ ಮತ್ತು ಗೋವುಗಳ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಉಬ್ಬುಶಿಲ್ಪಗಳು ಕಲಾತ್ಮಕವಾಗಿಲ್ಲ. ಇದನ್ನು ಜನರು ಕೇವಲ ಗೋಪಾಲಸ್ವಾಮಿ ಗುಡಿ ಎಂದು ಕರೆಯುತ್ತಾರೆ. ಈ ಗುಡಿಯ ಪೂಜಾರಿಗಳು ಸಾಳೇರ (ಪದ್ಮಸಾಲಿ) ಜಾತಿಗೆ ಸೇರಿದ ಪೂಜಾರಿಗಳಾಗಿರುವದೊಂದು ವಿಶೇಷ. ಈ ಗುಡಿಯ ಸಮೀಪದಲ್ಲಿರುವ ಮತ್ತು ಊರೊಳಗೆ ಇರುವ ಬ್ರಾಹ್ಮಣರು ಪೂಜೆ ಸಲ್ಲಿಸಲು ಇಲ್ಲಿಗಂತು ಬರುವದಿಲ್ಲ. ಗರ್ಭಗುಡಿಯಲ್ಲಿ ಒಂದು ಸರ್ಪದ ಚಿತ್ರವನ್ನು ಕೆತ್ತಲಾಗಿದೆ. ಇದು ಕಾಳಿಂಗ ಸರ್ಪವನ್ನು ಸಂಕೇತಿಸಬಹುದು. ಕೃಷ್ಣನು ಗೋಪಿಕಾ ಸ್ತ್ರೀಯರ ವಸ್ತ್ರಾಪಹರಣದ ಉಬ್ಬುಚಿತ್ರವನ್ನು ಕೆತ್ತಲಾಗಿದೆ. ಈ ಎಲ್ಲ ಶಿಲ್ಪಗಳಿಗೆ ಎಣ್ಣೆ ಬಳಿದಿರುವದರಿಂದ ಯಾವ ಕಲಾತ್ಮಕತೆಯು ಉಳಿದಿಲ್ಲ. ಗರ್ಭಗುಡಿಯಲ್ಲಿ ಒಂದು ಕೃಷ್ಣ, ರುಕ್ಮಿಣಿ, ಸತ್ರಭಾಮೆ ಇರುವ ಕಂಚಿನ ಸುಂದರ ಶಿಲ್ಪವಿದೆ. ಈ ಕಂಚಿನ ಶಿಲ್ಪದ ಎತ್ತರ ೧೨ ಇಂಚು ಮತ್ತು ಅಗಲ ೬ ಇಂಚು ಇದೆ. ಪ್ರಭಾವಳಿಯ ಮಧ್ಯದಲ್ಲಿ ಕೃಷ್ಣ ರುಕ್ಮಿಣಿ ಮತ್ತು ಸತ್ಯಭಾಮೆಯರ ಶಿಲ್ಪವನ್ನು ಎರಕ ಹೊಯ್ದು ಕಟೆಯಲಾಗಿದೆ. ಇದೊಂದು ಸುಂದರ ಕಲಾಕೃತಿ. ಇದನ್ನು ಕಾಣಿಕೆಯಾಗಿ ಮಾಡಿಸಿಕೊಟ್ಟವರ ಹೆಸರನ್ನು ಹಿಂಬದಿಯಲ್ಲಿ "ಧರ್ಮಗೌಡಾ ಬಸನಗೌಡ ಕೊಪ್ಪದ, ಇಲಕಲ್ ಜಿ॥ ಬಿಜಾಪುರ" ಎಂದು ಸ್ಪಷ್ಟವಾಗಿ ಕೆತ್ತಲಾಗಿದೆ. ದಿನಾಂಕ ಇತ್ಯಾದಿ ವಿವರಗಳಿಲ್ಲ. ಇದು ಉತ್ಸವಮೂರ್ತಿ. ಈ ಮೂರ್ತಿಯನ್ನು ಪಲ್ಲಕ್ಕಿಯಲ್ಲಿಟ್ಟು ದಸರೆಯ ಹಬ್ಬದಂದು (ವಿಜಯದಶಮಿ) ಊರಿನ ಪ್ರಮುಖ ಬೀದಿಯಲ್ಲಿ ಮೆರವಣಿಗೆಯಲ್ಲಿ ಬನ್ನಿಮಂಟಪದವರೆಗೆ ಒಯ್ಯಲಾಗುತ್ತದೆ. ಈ ಸಂಪ್ರದಾಯ ಹಲವಾರು ದಶಕಗಳಿಂದಲೂ ನಡೆದುಕೊಂಡು ಬಂದಿರುವದರಿಂಥ ಈ ಉತ್ಸವಮೂರ್ತಿಯ ಕಾಲವನ್ನು ೧೭-೧೮ನೆಯ ಶತಮಾನವೆಂದು ಹೇಳಬಹುದಾಗಿದೆ.

**ಕೇಸವಯ್ಯನ ಉಬ್ಬುಶಿಲ್ಪಗಳು ಮತ್ತು ಮೆರವಣಿಗೆ :** ಈ ದೇವಾಲಯದ ಅಡಿಯಲ್ಲಿರುವ ಸೀಣಿಕಲ್ಲಿನ ಗುಂಡಿನ ಸುತ್ತಲೂ ಹಲವಾರು ಬಗೆಯ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಇವುಗಳಲ್ಲಿ ರಾಮಾಯಣ ಮಹಾಭಾರತದ ಕತೆಗಳನ್ನು ಚಿತ್ರಿಸುವ ಉಬ್ಬುಶಿಲ್ಪಗಳಿವೆ. ಐತಿಹಾಸಿಕವಾಗಿ ಕೆಲವು ಉಬ್ಬುಶಿಲ್ಪಗಳು ಮುಖ್ಯವೆನಿಸುತ್ತವೆ. ಪಲ್ಲಕ್ಕಿಯೊಳಗೆ ದೊರೆಯೊಬ್ಬ ಸುಖಾಸೀನನಾಗಿ ಕುಳಿತಿದ್ದು, ಪಲ್ಲಕ್ಕಿಯನ್ನು ಮುಂದೆ ನಾಲ್ಕು ಬೋಯಿಗಳು ಹಿಂದೆ ಎರಡು ಬೋಯಿಗಳು ಹೊತ್ತುಕೊಂಡು ಮೆರವಣಿಗೆಯಲ್ಲಿ ಹೊರಟಿರುವ ನೋಟಗಳು ಗಮನಸೆಳೆಯುತ್ತವೆ. ಇಂಥ ಹಲವು ಉಬ್ಬುಶಿಲ್ಪಗಳನ್ನು ಮೇಲಿನ ಸಾಲಿನಲ್ಲಿ ಕೆತ್ತಲಾಗಿದೆ. ಮೆರವಣಿಗೆಯಲ್ಲಿ ಶಸ್ತ್ರಧಾರಿ ಸೈನಿಕರನ್ನು ಮೇಲಿನಿಂದ ಕೆಳಕ್ಕೆ ಎರಡನೆಯ ಸಾಲಿನಲ್ಲಿ ಮತ್ತು ಮೂರನೆಯ ಸಾಲಿನಲ್ಲಿ ಕುದುರೆ ಸವಾರರು ಮೆರವಣಿಗೆಯಲ್ಲಿ ಹೊರಟಿದ್ದಾರೆ. ಈ ಶಿಲ್ಪಗಳ ವಿವರವಾದ ಸೂಕ್ಷ್ಮ ಅಧ್ಯಯನದಿಂದ ಆ ಕಾಲದ ಉಡುಪು ತೊಡಪುಗಳನ್ನು, ಶಸ್ತ್ರಗಳನ್ನು ಗುರ್ತಿಸಬಹುದಾಗಿದೆ. ಇದು ಮುಂದಿನ ಅಧ್ಯಯನದ ವಸ್ತುವಾಗುತ್ತದೆಂದು ಹೇಳಿ ಗೋಪಾಲಸ್ವಾಮಿಗುಡಿಯ ವಿವರಣೆಯನ್ನು ಮುಗಿಸುತ್ತೇನೆ.

**ನಿಜಂಪೇಟೆ :** ಈ ಶಾಸನದಲ್ಲಿ ಮೂಡಲ ತಟಾಕದ ಹಿಂದೆ ಹೂಬನವನ್ನು ಮತ್ತು ಮೆರೆವ ಬಜಾರನ್ನು ಮತ್ತು "ಪೇಟೆ"ಯನ್ನು ನಿರ್ಮಿಸಿದವನು ಈ ಗೌಡನೆಂದು ಹೇಳಲಾಗಿದೆ. ಈ ಮಾತು, ಹಿಂದೆ ತಿಮ್ಮಪ್ಪನ ಕೆರೆಯ ಹಿನ್ನೀರನ್ನು ದಾಟಿ ಸುಮಾರು ಒಂದು ಮೈಲಿ ದೂರದಲ್ಲಿದ್ದ ನಿಜಂಪೇಟೆಗೆ ಅನ್ವಯಿಸುತ್ತದೆ. ೧೯೫೦-೬೦ರ ದಶಕದಲ್ಲಿ ಇಲ್ಲಿ ಮನೆಗಳಿದ್ದವು, ಜನವಸತಿ ಇತ್ತು. ಹಿಂದೆ ಇದ್ದ ಹುಣಿಸೆಮರದ ತೋಟ ಈಗಲೂ ಇದೆ. ಆದರೆ ಈಗ ಮನೆಗಳಿಲ್ಲ, ಹೂದೋಟಗಳಿಲ್ಲ. ಈ ನಿವೇಶನಗಳೆಲ್ಲಾ ಉಳುಮೆಗೊಳಪಟ್ಟ ಹೊಲಗಳಾಗಿವೆ.

**ಸಕ್ಕರೆಂಬಾವಿ :** ಈ ನಿಜಂಪೇಟೆಯ ನಿವೇಶನ ಮತ್ತು ತಿಮ್ಮಪ್ಪನ ಕೆರೆಯ ಮಧ್ಯದಲ್ಲಿ ಒಂದು ದೊಡ್ಡ ಆಳತೆಯ (ಬಹುಶಃ ೫೦ ಅಡಿ ಉದ್ದ ೩೦ ಅಡಿ ಅಗಲ) ಬಾವಿ ಇದೆ. ತೀರ ಇತ್ತೀಚಿನವರೆಗೆ ಅಂದರೆ ೧೯೬೦-೭೦ರ ದಶಕದವರೆಗೆ ಈ ಬಾವಿಯು ಸುಸ್ಥಿತಿಯಲ್ಲಿತ್ತು. ಆಗ ಸ್ವಲ್ಪ ಮಟ್ಟಿಗೆ ಯಾತನೀರಾವರಿಯ ಸೌಲಭ್ಯ ಈ ಬಾವಿಯ ಮೊಟ್ಟೆಗಳಿಂದಾಗುತ್ತಿತ್ತು. ಆಗ ಇದು ಊರಿನ ಬಾಲಕರು ಈಜಾಡುವ ಬಾವಿಯಾಗಿತ್ತು. ಈ ಬಾವಿಯ ಹೆಸರು ಸಕ್ಕರೆಂಬಾವಿ. ಕೇಸವಯ್ಯನ ಹೆಣ್ಣುಮಕ್ಕಳಲ್ಲಿ ಒಬ್ಬಳ ಹೆಸರು ಸಕ್ಕರೆವ್ವ ಎಂಬುದನ್ನು ನೆನೆದರೆ, ಬಹುಶಃ ಈ ಕೇಸವಯ್ಯಗೌಡನಿಗೆ ಅತ್ಯಂತ ಮಗಳಾದ ಸಕ್ಕರೆವ್ವನ ಹೆಸರನ್ನು ಈ ಬಾವಿಗೆ ಇಟ್ಟಿರಬಹುದು.

**ಕಾಸಬಾವಿ :** ತಿಮ್ಮಪ್ಪನಕೆರೆಯ ಒಡ್ಡಿನ ಉತ್ತರದ ಕೊನೆಯಲ್ಲಿ ಕಾಸಬಾವಿ ಇದೆ. ಇದು ೧೯೫೦-೫೫ರವರೆಗೆ ಹೊಕ್ಕು ತುಂಬುವ ಬಾವಿಯಾಗಿತ್ತು. ಇದು ಜನಪ್ರಿಯ

ಸಿಹಿನೀರಿನ ಬಾವಿ. ಆದರೆ ೧೯೬೦ರ ಸುಮಾರಿಗೆ ಈ ಹೊಕ್ಕು ತುಂಬುವ ಬಾವಿಯನ್ನು ಗಿರಕಿಗಳನ್ನು ಹಾಕಿ ಚಿಕ್ಕ ಸೇದುವ ಬಾವಿಯನ್ನಾಗಿ ಪರಿವರ್ತಿಸಲಾಯಿತು. ಈ ಬಾವಿಯ ಉತ್ತರ ದಿಕ್ಕಿನಲ್ಲಿ ಸುಂದರ ಕಮಾನುಗಳುಳ್ಳ ಮಂಟಪವನ್ನು ಕಟ್ಟಲಾಗಿತ್ತು. ಇಂದಿಗೂ ಈ ಮಂಟಪದ ಪಳೆಯುಳಿಕೆಯನ್ನು ನೋಡಬಹುದು.

ಕೇಸವಯ್ಯಗೌಡನು ಸಂತೆಯಂ ನೆರಸಿದನೆಂದು ಶಾಸನದಲ್ಲಿ ಹೇಳಲಾಗಿದೆ. ಇಂದಿಗೂ ಪ್ರತಿ ಶನಿವಾರ ಇಂದಿನ ತಹಸೀಲ ಕಚೇರಿಯ ಹಿಂಭಾಗದ ಮೈದಾನದಲ್ಲಿ ಸಂತೆ ಸೇರುತ್ತದೆ. ೧೯೬೦ರ ದಶಕದವರೆಗೂ ಸಂತೆಯು ದೊಡ್ಡಪ್ರಮಾಣದಲ್ಲಿ ನೆರೆದು ದೊಡ್ಡ ದೊಡ್ಡ ಗುಡಾರಗಳನ್ನು ಹಾಕಿ ವ್ಯಾಪಾರಸ್ಥರು ಮಾರಾಟ ಮಾಡುತ್ತಿದ್ದರು. ರೈತರು ಜೋಳ, ಸಜ್ಜೆ ಇತ್ಯಾದಿ ತಾವು ಬೆಳೆದ ಧಾನ್ಯಗಳನ್ನು ನೇರವಾಗಿ ಜನರಿಗೂ ಸಗಟು ಖರೀದಿದಾರರಿಗೂ ಮಾರುತ್ತಿದ್ದರು. ಈಗ ಮೈದಾನದಲ್ಲಿ ಮಿನಿ ವಿಧಾನಸೌಧದ ನಿರ್ಮಾಣ ಆರಂಭವಾಗಿದೆ. ತುಂಬಾ ಬೆಳೆದುನಿಂತ ನೆರಳನ್ನು ನೀಡುವ ಮರಗಳನ್ನು ಕಡಿಯಲಾಗಿದೆ. ಇದು ಅತ್ಯಂತ ದುರ್ದೈವದ ಸಂಗತಿ.

ಈ ಸಂತೆಯ ಮೈದಾನದ ಒಂದು ಕೊನೆಯಲ್ಲಿ ಒಂದು ಸುಂದರ ಕಾವಲುಗೋಪುರವಿದೆ ಎಂದು ೧೯೯೯ರಲ್ಲಿ ನಾನು ವಿವರಿಸಿದ್ದೆ.[1] ಇದರ ಕಾಲವನ್ನು ೧೭-೧೮ನೆಯ ಶತಮಾನವೆಂದು ಅದರ ವಾಸ್ತುಶೈಲಿಯನ್ನಾಧರಿಸಿ ಊಹಿಸಿದ್ದೆ. ಈಗ ಈ ಕಮಾನನ್ನು ಕ್ರಿ.ಶ. ೧೬೭೭ರಲ್ಲಿ ದೇವದುರ್ಗದ ಸಂತೆಯ ಕಾವಲಿಗಾಗಿ ಕಟ್ಟಿಸಿರಬಹುದೆಂದು ಹೇಳಿದರೆ ಸರಿಯಾದೀತು. ಆದರೆ ಈ ಸುಂದರ ಕಾವಲು ಗೋಪುರವನ್ನು ವಿಕೃತಗೊಳಿಸುತ್ತಿರುವ ಕೈಗಳಿಗೆ ತಡೆಯೊಡ್ಡುವ ಸಾಮರ್ಥ್ಯ ಸರ್ಕಾರಕ್ಕೆ ಇಲ್ಲವಲ್ಲ ಎಂಬ ವ್ಯಥೆ ನನ್ನನ್ನು ಇಂದಿಗೂ ಕಾಡುತ್ತಲಿದೆ.

**ರಾಜಗೃಹ ಅರ್ಥಾತ್ ದರ್ಬಾರ್** : ಈ ಕಾಸಲೇಂದ್ರನು ನಿರ್ಮಿಸಿದ ರಾಜಗೃಹವು ಸುಂದರವಾದ ಹುಲಿಮುಖದ ಮುಗಿಲಟ್ಟಣೆಯಿಂದ ಶೋಭಿಸುತ್ತಿತ್ತು ಎಂದು ಶಾಸನದಲ್ಲಿ ಬಣ್ಣಿಸಲ್ಪಟ್ಟ ಕಟ್ಟಡವು ಜನರ ಬಾಯಲ್ಲೀಗ 'ದರ್ಬಾರ' ಎಂದು ಕರೆಯಲ್ಪಡುತ್ತದೆ. ಬಹಳಷ್ಟು ಭಾಗ ಭಗ್ನಗೊಂಡರೂ ಬಾಲ್ಕನಿಗಳು ಇಂದಿಗೂ ನಯನಮನೋಹರವಾಗಿವೆ. ದರ್ಬಾರದ ಒಳಭಾಗದ ಬಹು ಭಾಗ ಬಿದ್ದು ಹೋಗಿದ್ದರೂ, ಅಂದಿನ ದೊರೆಗಳು ನಡೆಸುತ್ತಿದ್ದ ದರ್ಬಾರ ಹಾಲ್ ತನ್ನ ಗತವೈಭವವನ್ನು ಸುಂದರ ಸಮಪ್ರಮಾಣದ ಕಮಾನುಗಳ ಮೂಲಕ ಹೇಳುತ್ತದೆ.

**ಮಲ್ಲೇದೇವರ ಗುಡ್ಡ ಮತ್ತು ಕೇಸಲಯ್ಯನ ಸಮಾಧಿ :** ಈ ಶಾಸನದ ೧೩ನೆಯ ಸಾಲಿನಲ್ಲಿ ಚಿಕ್ಕ ಕಾಸಲೇಂದ್ರನು ಗಿರಿತ್ರಯ ದುರ್ಗಗಳನ್ನು ರಚಿಸಿದನೆಂದು ಹೇಳುತ್ತದೆ. ಇದೇ ಶಾಸನದಲ್ಲಿ ದೇವದುರ್ಗವಲ್ಲದೆ ಮಲ್ಲೇದೇವರ ದುರ್ಗವನು ಕಟ್ಟಿಸಿದನೆಂದು ಹೇಳಲಾಗಿದೆ. ಮಲ್ಲೇದೇವರದುರ್ಗದ ಹೆಸರು ಈಗ ಮಲ್ಲೇದೇವರ ಗುಡ್ಡವೆಂದು ಮಾರ್ಪಾಟಾಗಿದೆ. ಇದೊಂದು ಈಗ ತೀರ ಸಣ್ಣಹಳ್ಳಿ; ಬಹುಶಃ ಒಂದು ಸಾವಿರ ಜನಸಂಖ್ಯೆ ಇರಬಹುದು. ದೇವದುರ್ಗದಿಂದ ಸಿರವಾರಕ್ಕೆ ಹೋಗುವ ರಸ್ತೆಯ ಬಲಕ್ಕೆ ಅರಕೇರಿ ಗ್ರಾಮ ದಾಟಿದ ನಂತರ ಸುಮಾರು ೬ ಕಿ.ಮೀ. ಅಂತರದಲ್ಲಿ ಈ ಹಳ್ಳಿ ಇದೆ. ಈ ಹಳ್ಳಿಯ ಪಶ್ಚಿಮಕ್ಕೆ ಒಂದು ಸಣ್ಣ ದಿಣ್ಣೆ ಇದೆ. ಇದೊಂದು ಕಣಶಿಲೆಯ ಬಂಡೆಗಳಿಂದ ಕೂಡಿದ ಚಿಕ್ಕಗುಡ್ಡ. ನೆಲಮಟ್ಟದಿಂದ ಬಹುಶಃ ೩೦-೪೦ ಮೀ. ಎತ್ತರವಿರಬಹುದು. ಕೊನೆಯಲ್ಲಿ ಕೋಟೆ ಗೋಡೆಯ ಅವಶೇಷಗಳು ಮಾತ್ರ ನೋಡಲು ಸಿಗುತ್ತವೆ. ಊರು ಮತ್ತು ಕೋಟೆ ಗೋಡೆಯ ಮಧ್ಯದಲ್ಲಿ ಜಟ್ಟೆಪ್ಪನ ಗುಡಿ ಮತ್ತು ತಾಯಮ್ಮನ ಕಟ್ಟೆಗಳಿವೆ. ಇವುಗಳು ಜಾನಪದ ದೇವತೆಗಳ ಕಲ್ಲು ಮತ್ತು ಕಟ್ಟೆಗಳು. ಯಾವಾಗಲೋ ಒಂದು ಸಲ ಯಾರೋ ಪೂಜೆ ಮಾಡುತ್ತಾರೆ. ಐತಿಹಾಸಿಕವಾಗಿಯಾಗಲೀ ವಾಸ್ತುಶೈಲಿಯ ದೃಷ್ಟಿಯಿಂದಾಗಲೀ ಯಾವ ಮಹತ್ವವನ್ನು ಈ ಕಟ್ಟಡಗಳು ಹೊಂದಿಲ್ಲ. ಆದರೆ ಈ ಕೋಟೆಗೋಡೆಯ ಅವಶೇಷಗಳಿಂದ ಇನ್ನೂ ಪಶ್ಚಿಮಕ್ಕೆ ಸುಮಾರು ೩೦-೪೦ ಅಡಿ ಅಂತರದಲ್ಲಿ ಒಂದು ಕಟ್ಟೆ ಗಮನಸೆಳೆಯುತ್ತದೆ. ಸುಮಾರು ೫ ಮೀ. ಮತ್ತು ೩ ಮೀ. ಉದ್ದಗಲಗಳ ಈ ಕಟ್ಟೆಯ ಮಧ್ಯದಲ್ಲಿ ಒಂದು ಬೇವಿನ ಮರ ಬೆಳೆದು ನಿಂತಿದೆ. ಈ ಕಟ್ಟೆಯ ಎತ್ತರ ಸುಮಾರು ೧ ಮೀ. ಸುತ್ತಲೂ ಒರಟುಕಲ್ಲಿನ ಚಪ್ಪಡಿಗಳನ್ನು ಜೋಡಿಸಲಾಗಿದೆ. ಈ ಚಪ್ಪಡಿಗಳ ಮೇಲೆ ಕೆಲ ಅಸ್ಪಷ್ಟ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ಈ ಕಟ್ಟೆಯ ಪೂರ್ವದಿಕ್ಕಿನ ಚಪ್ಪಡಿಯ ಮೇಲೆ ಅಸ್ಪಷ್ಟ ಯುದ್ಧದ ದೃಶ್ಯಗಳನ್ನು ಮತ್ತು ಒಂದು ಆನೆಯ ಶಿಲ್ಪವನ್ನು ಕೆತ್ತಲಾಗಿದೆ. ಉತ್ತರದ ಚಪ್ಪಡಿಯ ಮೇಲೆ ಒಂದು ಗಿಳಿ, ಕುದುರೆಸವಾರಿ ಮಾಡಿರುವ ಒಬ್ಬ ವೀರನ ಉಬ್ಬುಶಿಲ್ಪ ಮತ್ತು ಒಂದು ಹೋರಿಯನ್ನು ಕೆತ್ತಲಾಗಿದೆ. ಪಶ್ಚಿಮದ ದಿಕ್ಕಿನ ಚಪ್ಪಡಿಯ ಮೇಲೆ ಎರಡು ನವಿಲುಗಳ ಮತ್ತು ಒಂದು ಜಿಂಕೆಯ ಉಬ್ಬುಶಿಲ್ಪಗಳನ್ನು ಕೆತ್ತಲಾಗಿದೆ. ದಕ್ಷಿಣದ ಚಪ್ಪಡಿಯ ಮೇಲೆ ಯಾವ ಚಿತ್ರವೂ ಇಲ್ಲ. ಈ ಕಟ್ಟೆಯ ಸಮೀಪದಲ್ಲಿ ತೀರ ಇತ್ತೀಚಿನ ಸಮಾಧಿಗಳಿವೆ. ಈ ಸಮಾಧಿಗಳು ಕೊತ್ವಾಲ ಮನೆತನ ಸಮಾಧಿಗಳು. ಸಮೀಪದಲ್ಲಿ ಸಮಾಧಿಗಳಿರುವುದರಿಂದ ಇದೊಂದು ಸ್ಮಶಾನ ಭೂಮಿಯಾಗಿದೆ ಎಂದು ಊಹಿಸಿದರೆ ತಪ್ಪಾಗದು. ಈ ಕಟ್ಟೆಯನ್ನು

ಸಮೀಪದ ಮರ್ಕವುದಿನ್ನಿ ಗ್ರಾಮದ ದೊರೆಗಳು ಯುಗಾದಿಯಂದು ಬಂದು ಪೂಜಿಸುತ್ತಾರೆ. ಆದ್ದರಿಂದ ಈ ಕಟ್ಟೆಯ ಉತ್ತರದ ಚಪ್ಪಡಿಯ ಮೇಲಿರುವ ವೀರನ ಉಬ್ಬು ಶಿಲ್ಪ ಕೇಸಲಯ್ಯನನ್ನು ಸೂಚಿಸುತ್ತದೆಂದೂ, ಈ ಕಟ್ಟೆಯು ಈ ಮಲ್ಲೆದೇವರ ದುರ್ಗವನ್ನು (ಮಲ್ಲೆದೇವರಗುಡ್ಡ) ನಿರ್ಮಿಸಿದ ಈ ಗೌಡನ ಸಮಾಧಿ ಇರಬಹುದೆಂದು ಊಹಿಸಿದರೆ ತಪ್ಪಾಗದು.

ಕೇಸವಯ್ಯಗೌಡನು ಕಟ್ಟಿಸಿದ ಮೂರನೆಯ ಗಿರಿದುರ್ಗ ಅರಕೇರಿಯ ಕೋಟೆ. ಇಂದಿನ ಅರಕೇರಿ ಗ್ರಾಮಕ್ಕೆ ಹೊಂದಿಕೊಂಡೇ ಒಂದು ಸುಮಾರು ೪೦೦ ಮೀ. ಎತ್ತರದ ಗುಡ್ಡವಿದೆ. ಈ ಗುಡ್ಡದ ಮೇಲೆ ಹಾಳಾಗಿರುವ ಮನೆಗಳು ಮತ್ತು ಕೋಟೆಯ ಗೋಡೆಗಳನ್ನು ನೋಡಬಹುದು.[೪] ಈ ಕೋಟೆಯೇ ಕೇಸವಯ್ಯಗೌಡನು ತಾನು ಹುಟ್ಟಿದ ಊರಿನಲ್ಲಿ ಕಟ್ಟಿಸಿದ ಕೋಟೆ.

ಅರಕೇರಿಯ ಊರ ಮಧ್ಯದಲ್ಲಿ ಗೌಡರ ದೊಡ್ಡಮನೆ ಇದೆ. ಇದೇ ಕೇಸವಯ್ಯನ ವಂಶಜರ ಮನೆ. ಇದರ ವಿಸ್ತಾರ ದೇವದುರ್ಗದ ರಾಜಗೃಹಕ್ಕೆ ಹೋಲಿಸಿದರೆ ತುಂಬಾ ಚಿಕ್ಕದು. ಅಂಥ ಯಾವ ವಿಶೇಷತೆಯೂ ಇಲ್ಲ. ಆದರೂ ಇದನ್ನು ದರ್ಬಾರ ಎಂದೇ ಕರೆಯುತ್ತಾರೆ. ಬಹುಶಃ ಕೇಸವಯ್ಯಗೌಡನ ವಂಶಜರು, ಮನೆತನದ ಆರ್ಥಿಕ ಪರಿಸ್ಥಿತಿ ಇಳಿಮುಖವಾದ ನಂತರ ಸಧ್ಯದ ನಿವೇಶನದ ಮೇಲೆ ಕಟ್ಟಲಾದ ಮನೆ. ಇದು ತುಂಬಾ ಬದಲಾವಣೆಗಳಾಗಿವೆ. ಸಧ್ಯ ಈ ಮನೆಯಲ್ಲಿ ವಾಸವಾಗಿರುವವರು ವಿರುಪಣ್ಣ ಮಾಸ್ತರರು. ಇವರು ಮಲ್ಲೇದೇವರಗುಡ್ಡ ಗ್ರಾಮದ ಸರ್ಕಾರಿ ಮಾಧ್ಯಮಿಕ ಶಾಲೆಯಲ್ಲಿ ಮಾಸ್ತರರಾಗಿದ್ದಾರೆ. ತುಂಬಾ ಸಭ್ಯಸ್ಥರೆಂದು ಹೆಸರು ಪಡೆದಿದ್ದಾರೆ. ನಾನು ಚರ್ಚೆಯಲ್ಲಿ ತೊಡಗಿದಾಗ ಸಹೃದಯಿಯಾಗಿ ಚರ್ಚಿಸಿದರು. ಇವರ ಚಿಕ್ಕಪ್ಪ ಗೌಡಯ್ಯ ನಾಯಕದೊರೆ, ೪-೧-೨೦೦೭ರಂದು ತೀರಿದರೆಂದು ತಿಳಿಸಿದರು. ಈ ಗೌಡಣ್ಣನಾಯಕರು ಈ ಮನೆತನದ ಬಗ್ಗೆ ಸಾಕಷ್ಟು ಮಾಹಿತಿಯನ್ನು ಹೊಂದಿದ್ದರೆಂದು ತಿಳಿದುಬರುತ್ತದೆ. ಸಧ್ಯ ಆ ಮಾಹಿತಿಯ ಆಧಾರದ ಮೇಲೆ ಸುಮಾರು ಕ್ರಿ.ಶ. ೧೮೦೦ರ ನಂತರದ ವಂಶವೃಕ್ಷವನ್ನು ವಿರುಪಣ್ಣ ಮಾಸ್ತರರೇ ಬರೆದುಕೊಟ್ಟು ಸಹಕರಿಸಿದರು.

ಇವರ ಮನೆಯಲ್ಲಿ ಯಾವ ಬಗೆಯ ಪುರಾತನ ದಾಖಲೆಗಳಿಲ್ಲ. ಕೇವಲ ೪ ಆಯುಧಗಳು ನೋಡಲು ಸಿಕ್ಕವು. ಇವುಗಳ ಮೇಲೆ ಯಾವ ಬಗೆಯ ಅಕ್ಷರಗಳಾಗಲೀ ಮತ್ತು ನಕ್ಷೆ ಇಲ್ಲದಿರುವದರಿಂದ ಕಾಲವನ್ನು ನಿರ್ಧರಿಸಲಾಗಿಲ್ಲ. ಇವುಗಳು ಕೈಗತ್ತಿ (ಜಂಬ್ಯಾ) ವರ್ಗಕ್ಕೆ ಸೇರುವ ಚಿಕ್ಕ ಆಯುಧಗಳು. ಇವರ ಮನೆಯಲ್ಲಿದ್ದ ಎಲ್ಲಾ ಬಂದೂಕುಗಳನ್ನು ಹೈದ್ರಾಬಾದದ ರಜಾಕಾರರ ಪತನಾನಂತರ ಬಂದ ಸರ್ಕಾರದ ಅಧಿಕಾರಿಗಳು ತಮ್ಮ ವಶಕ್ಕೆ ತೆಗೆದುಕೊಂಡರು. ಇದೇ ರೀತಿಯಾಗಿ ಆಗ ನಿಜಾಂ ಪ್ರಾಂತ್ಯಕ್ಕೆ ಸೇರಿದ್ದ ಊರುಗಳಲ್ಲಿ, ಪೊಲೀಸ್ ಕಾರ್ಯಾಚರಣೆಯ ನಂತರ ಮಿಲ್ಟ್ರಿಯ ಆಡಳಿತಗಾರರು ಎಲ್ಲಾ ಖಾಸಗಿ ಮನೆಗಳಲ್ಲಿದ್ದ ಆಯುಧಗಳನ್ನು ಜಪ್ತಿ ಮಾಡಿದರು.

**ಉಪಸಂಹಾರ :** ಈರಣ್ಣದೇವರ ಗುಡ್ಡದ ಶಿಖರದ ಮೇಲಿರುವ ಶಾಸನದ ಅಧ್ಯಯನ ಮತ್ತು ನಾನು ಕೈಗೊಂಡ ಕ್ಷೇತ್ರ ಕಾರ್ಯಗಳ ಆಧಾರಗಳ ಮೇಲೆ ಈ ಕೆಳಗಿನ ಅಂಶಗಳು ಸ್ಪಷ್ಟವಾಗುತ್ತವೆ :

೧. *ಕ್ರಿ.ಶ. ೧೬೭೭ರಲ್ಲಿ ದೇವದುರ್ಗವನ್ನು ಕಟ್ಟಿಸಿದ ಕೇಸವಯ್ಯಗೌಡನು ಅರಕೇರಿಯವನು. ಅವನು ಬೇಡ ಜನಾಂಗಕ್ಕೆ ಸೇರಿದ ದೊರೆ, ವೈಷ್ಣವ ಧರ್ಮದ ಅನುಯಾಯಿ ಯಾಗಿದ್ದನು.*

೨. *ಇಬ್ಬರು ಹೆಂಡದಿರನ್ನು ಹೊಂದಿ ಅನೇಕ ಮಕ್ಕಳನ್ನು ಪಡೆದ ಕಾಸಲೇಂದ್ರನು ತುಂಬು ಸಂಸಾರಿಯಾಗಿದ್ದನು.*

೩. *ಕಲಾಪ್ರೇಮಿಯಾಗಿದ್ದ ಈತನು ಸುಂದರ ರಾಜಗೃಹ ವನ್ನು ಭವ್ಯವಾದ ರೀತಿಯಲ್ಲಿ ಕಟ್ಟಿಸಿದನು.*

೪. *ಕೆರೆ ಮತ್ತು ಬಾವಿಗಳನ್ನು ಕಟ್ಟಿಸಿ ನೀರಾವರಿ ಸೌಕರ್ಯಗಳನ್ನು ತನ್ನ ಪ್ರಜೆಗಳಿಗೆ ಒದಗಿಸಿದನು.*

೫. *ಸಂತೆ, ಪೇಟೆ ಮತ್ತು ಬಜಾರುಗಳನ್ನು ನಿರ್ಮಿಸಿ ವ್ಯಾಪಾರ ವಾಣಿಜ್ಯಕ್ಕೆ ಪ್ರೋತ್ಸಾಹಿಸಿದನು. ಇದರಿಂದ ಕೃಷಿಕರಿಗೂ ವಣಿಕರಿಗೂ ಅನುಕೂಲವಾಯಿತು.*

೬. *ಇವನು ಸುರಪುರ ಸಂಸ್ಥಾನದ ಅಧೀನದಲ್ಲಿದ್ದ ದೊರೆಯಾಗಿದ್ದನು.*

೭. *ಈರಣ್ಣದೇವರಗುಡ್ಡದ ಮೇಲೆ ಸುಂದರ ಹಾಗೂ ಅನುಪಮ ಶಾಸನವನ್ನು ಕೆತ್ತಿಸಿದನು. ಈ ಶಾಸನದ ಕವಿಯ ಹೆಸರು ಶ್ವೇತಾಚಲದ ದೀಕ್ಷಿತ ಮದನಗೋಪಲ.*

೮. *ಕೇಸಯ್ಯಗೌಡನು ದೇವದುರ್ಗದ ಗುಡ್ಡದ ಮೇಲೆ ಕೋಟೆಯನ್ನು ಕಟ್ಟಿಸಿದನು. ಅದರಂತೆ ಅರಕೇರಿಯ ಗುಡ್ಡದ ಮೇಲೆ ಮಲ್ಲೆದೇವರ ದುರ್ಗವನ್ನು ಕಟ್ಟಿಸಿದನು. ಇಂದು ದೇವದುರ್ಗ ಉಳಿದೆರಡು ಹಳ್ಳಿಗಳಿಗಿಂತ ತುಂಬಾ ದೊಡ್ಡದಾಗಿ ಬೆಳೆದಿದೆ. ತುಂಬಾ ಸುಂದರವಾದ ದೇವದುರ್ಗದ ರಾಜಗೃಹವನ್ನು ಈಗಿನ ಅದರ ಮಾಲಕರು ನಿರ್ಲಕ್ಷಿಸಿದ್ದಾರೆ.*

(ಕೃತಜ್ಞತೆಗಳು : ನನ್ನ ಕ್ಷೇತ್ರಕಾರ್ಯದಲ್ಲಿ ನನ್ನ ಸೋದರನಂತಿರುವ ದೇವದುರ್ಗದ ನಿಷ್ಠಾವಂತ ಪತ್ರಕರ್ತ ಶ್ರೀ ರಂಗಣ್ಣ ಪಾಟೀಲ ಅಳ್ಳುಂಡಿ, ನನ್ನ ತಮ್ಮ ಹೆಚ್. ದಂಡಪ್ಪ ಮತ್ತು ಆತನ ಇಬ್ಬರು ಶಿಷ್ಯರು ಸಹಕರಿಸಿದ್ದಾರೆ. ಅಂತೆಯೇ ಅರಕೇರಿಯ ವಿರುಪಣ್ಣ ಸಹೃದಯಿಯಾಗಿ ಸಹಕರಿಸಿದ್ದಾರೆ. ಇವರೆಲ್ಲರಿಗೂ ನನ್ನ ಕೃತಜ್ಞತೆಗಳನ್ನರ್ಪಿಸುತ್ತೇನೆ. ಅತಿ ಸಾಹಸಪಟ್ಟು ಈ ಶಾಸನದ ಪಡಿಯಚ್ಚನ್ನು ತೆಗೆದು ಪ್ರಕಟಣೆಗೆ ಕಾರಣರಾದ ಡಾ॥ ಪರಮಶಿವಮೂರ್ತಿಯವರಿಗೆ ನನ್ನ ನಮನಗಳು.)

## ಅನುಬಂಧ : ದಿನಾಂಕ : ೮-೨-೨೦೦೮ರಂದು ಅರಕೇರಿಯ ಕೇಸವಯ್ಯಗೌಡನ ವಂಶಜರಾದ ಶ್ರೀ ವಿರುಪಪ್ಪ ಮಾಸ್ತರು ಬರೆದುಕೊಟ್ಟ ವಂಶವೃಕ್ಷ

ಗೌಡಪ್ಪನಾಯಕ ದೊರೆ, ಅರಕೆರೆ
(ಜನನ ಅಂದಾಜು ಕ್ರಿ.ಶ. ೧೮೦೦)

- ಜಂಪಣ್ಣನಾಯಕದೊರೆ, ಅರಕೇರಿ, ಈ ಮನೆತನದ ವಾರಸುದಾರರು (ಜನನ ಅಂದಾಜು ಕ್ರಿ.ಶ. ೧೮೩೦)
  - ರಂಗಪ್ಪನಾಯಕದೊರೆ (ಜನನ ಅಂದಾಜು ೧೮೬೦)
    - ವಿರುಪಣ್ಣನಾಯಕದೊರೆ (ಜನನ ಅಂದಾಜು ಕ್ರಿ.ಶ. ೧೮೯೦)
      - ವೆಂಕಟಪ್ಪನಾಯಕದೊರೆ
      - ಕೋನಪನಾಯಕದೊರೆ (ಮರಣ ೧೯೮೦) ಮದುವೆಯಾಗಿರಲಿಲ್ಲ
      - ಗೋವಿಂದರಾಜದೊರೆ (ಮರಣ ೩೦-೧೦-೧೯೯೨) + ಹೆಂಡತಿ ನೀಲಮ್ಮ
        - *ಗೌಡಣ್ಣನಾಯಕದೊರೆ + ಶೀತಮ್ಮ (ಜನನ ೧೯-೮-೧೯೨೬) ಹೆಂಡತಿ (೪-೧-೨೦೦೭ ಮರಣ)
          - ಚಂದ್ರಶೇಖರ ನಾಯಕದೊರೆ (ಜನನ ೧೯೬೮)
        - ಶ್ರೀಮತಿ ರಂಗಮ್ಮ (ದಿವಂಗತರು)
        - ಶ್ರೀಮತಿ ಗೋವಿಂದಮ್ಮ (ದಿವಂಗತರು)
        - ವೆಂಕಟೇಶನಾಯಕ (ಜನನ : ೧-೧-೧೯೬೦)
        - ವಿರುಪಣ್ಣನಾಯಕದೊರೆ** (ಜನನ ೦೧-೦೧-೧೯೬೧)
        - ಕ್ರಿಷ್ಟಪ್ಪನಾಯಕದೊರೆ (ಜನನ ೧೯೬೭)
        - ವಿಜಯಲಕ್ಷ್ಮಿ ಜೈನಾಪುರ (ಜನನ ೧೯೭೨)
        - ಜಂಪಣ್ಣನಾಯಕದೊರೆ (ಜನನ ೧೯೭೪)
      - ಕ್ರಿಷ್ಣಪನಾಯಕ ಮದುವೆ ಆಗಿಲ್ಲ (ಮರಣ ೧೯೭೮)
      - ಜಂಪಣ್ಯನಾಯಕದೊರೆ (೧೯೬೮ರಲ್ಲಿ ಮರಣ) ಮದುವೆ ಆಗಿಲ್ಲ
- ದೇವದುರ್ಗದ ಸಧ್ಯದ ದೊರೆಗಳ ಮೂಲಪುರುಷ ವಿವರಗಳು ಸಧ್ಯಕ್ಕೆ ಲಭ್ಯವಿಲ್ಲ
  - ಶಿವಂಗಿಗೆ ಒಬ್ಬ ಮಗ ಹೋದನು
    - ರಂಗಪ್ಪನಾಯಕದೊರೆ (ವಿವರಗಳು ಸಧ್ಯಕ್ಕೆ ಲಭ್ಯವಿಲ್ಲ)
- ಹರೆಸಾಬದೊರೆ (ಅರಿಕೇರಿ) ವಿವರಗಳಿಲ್ಲ

* ಗೌಡಣ್ಣನಾಯಕದೊರೆ ತುಂಬಾ ಸರಳ ಅಷ್ಟೇ ಪ್ರಭಾವಿ ವಯಕ್ತಿಯಾಗಿದ್ದರೆಂದು ಅರಕೇರಿಯ ನನ್ನ ಸ್ನೇಹಿತರು ಹೇಳಿದರು.

** ವಿರುಪಣ್ಯ ಮಾಸ್ತರರಿಗೆ ಅವರ ತಾತನ ಹೆಸರನ್ನು ಇಡಲಾಗಿದೆ ಎಂದು ಸ್ವತಃ ಅವರೇ ಹೇಳಿದರು.



# ಅನುಬಂಧ

## ಶಾಸನ ಪಠ್ಯ

೧ ೦ ॥ ಶ್ರೀ ಗಣಾಧಿಪತಯೇ ನಮಃ ॥ ಅಯುರ ದ್ರೋಣಸುತೆ । ಭುವನೆವಯಿಸುತೆ । ಶ್ರೀಮಂ ದಶರಥೆ । ಸೆತ್ರುಕ್ಷಯಂ ರಘವ । ಸೇಷಶಯಂ ಸ್ತೊತನುತ । ಬಲಂ ಹಲಾಧರೆ । ಸ

೨ ೦ ॥ ತ್ರಂಹು ಕೊಂತಿಸುತೆ । ಲೈಸ್ವರಿಯಂನ ಹುಸೆ । ಕುತ ಶತಮುಖೆ । ಮಾನಂಚ ದುರಿಯೋಧನೆ । ನಿಸ್ಸೆಂರಿದುರೆ । ಭವಂತು ಭನತಂ । ಕೀರ್ತ್ತಿಂಸೋ ನರಾಯಣೇ ॥ ಪ್ರಿತ್ರ ॥ ಸ್ವಸ್ತಿ ಶ್ರೀ ಜಯದುಬುಧಯ । ಸ್ತೇಲಿವನ ಸಖ ೧೬೧೨ ನೇ

೩ ೦ ॥ ಪ್ರಮಾದೂತ ನಾಮ ಸವಛರದ ಸ್ರೇವಣ ಬಹುಳ ಯೇಕಾದಸಿ ಮಂಗಳವರದಲು ಬರದ ಲಿಖಿತವು ॥ ಶ್ರೀಮತು ಅರಕೆರಿಯ ಗವುಡ ಹೇಮಣ್ಣಗಉಡನ ಮಗ ತಿಂಮಣಗವುಡನ ಕೋಮಾರ ಚಿಕ್ಕಸ

೪ ೦ ॥ ಲೈಯಗವುಡ ದೇಸಾಯಿ ಕರಿಯಾಲೆ ಚಂದನಕೆರೆ ಸರದೇಸಾಯಿ ಮಹಾಲಾನಿಹಾಯೆ ಮಾಮಲೇ ರಯಿಚುರನಕ ವಿವರವು । ರಾಜೇಶ್ರೀ ಕೇಸವೈಯಗವುಡನು ನಳ ನಾಮ ಸಂವತ್ಸರದಲಿ ದೇವದುರ್ಗ

೫ ೦ ॥ ಬಲ್ಲಿದಮಟಾಳಿ ನಾರದ ಮುನಿ ನಿನ್ನ ಬೊಲ್ಲೆಯ ಮಾತದಂತಿರಲಿ । ಯೆಲ್ಲಿದ ಬಂದೆ ಕುದ್ಧಿಯ ಪೇಳೆನಲಾ

೬ ೦ । ಲಿಸೋ ಲೇಸಿದನು ಕುಷ್ಣನೊಡನೆ ।

೭ ೦ ॥ ದ ಕೆರೆ ಹಾಕಿಸಿ ದೇವದುರ್ಗಕ್ಕೆ ಹುಗ್ಗಿ ಹೊಯಿಸಿ ನಿರ್ಮಿತವ ಮಾಡಿ ಶ್ರೀ ಗೋವರ್ಧನದ ಗೋಪಾಲ ಕುಷ್ಣನ ಪ್ರತಿಷ್ಠೆ ಮಾಡಿ ಪೇಟೆ ಹುಟಿಸಿ ಸಂತೆ ನೆರಹಿಂ ಅಲ್ಲಿಂದ ಆಮಲೆ ದೇವರದುರ್ಗವ ನಿಂ

೮ ೦ ॥ ರ್ಮಿತವಂ ಮಾಡಿ ಅ ತರುವಾಯ ಮಲ್ಲೇದೇವರ ದುರ್ಗವನು ಕಟ್ಟಿ ನಿರ್ಮಿತವಂ ಮಾಡಿದನೂ ಕಾಸಲಯಗ್ಗವುಡನ ಕೊಮಾರರೂ ಗವುಡಪ್ಪ ನಾರಾಯಣ ವಾಸುದೇವ ಪರೀಕ್ಷ

೯ ೦ ॥ ರ ಕಮಲಧರ ದೇವ್ರೊಂಕಾರ ಚಿಕ್ಕ ಕಮಲಧರ ಹೆಂಣ್ಣು ಮಕ್ಕಳು ವೀರಪ್ಪ ತಿಂಮ್ಮಪ್ಪ ಕಾನಾಪ್ಪ ಕುಷ್ಣಮ ಸಕರೆಪ್ಪ ವರದಪ್ಪ ಮಂಗಮ್ಮ ವೆಂಕಮ್ಮ ಕಾಸಲಯ್ಯ

೧೦ ೦ ॥ ಗವುಡನ ಅರ್ಧಾಂಗನೆಯರು ಲಕ್ಷ್ಮಮ್ಮ ವೆಂಕಪ್ಪ ॥ ಸುರಪುರದ ವಿಸ್ತಾರ ಯೀ ದೇವದುರ್ಗ ಸುಂಧರ ಪ್ರಾಕಾರ ಮುಗಿಲಟ್ಟಣೆಯ ಹುಲಿಮುಖಂ ಸರುವರುದ ರಾಜಗೃಹದ ಶೃಂಗಾರಮಂ ಕೇ

೧೧ ೦ ॥ ಭಾಯಮಾನಮಾದಾ । ಹರಿಯ ದೂರ್ಜಣ ಸೆಟಾಕದ ಹಿಂದೆ ಪ್ರಸವಂ ದುಗಿದ ಬಾಣಾರ ಪ್ರುಂದಾರಕಾದ್ರಿಯುಮಗರದಮೆಗು ದುರ್ಗವಳಿ ನಗರಮಂ ಪ್ರೋಲ್ಪ ಸೊಗಸಿಂದ ಚೆಲ್ವಿನಿಸಿದಾ ॥ ೦

೧೨ ೦ ॥ ಮಲ್ಲದೇವರ ದುರ್ಗದಿಗವ ವಿಸ್ತಾರಗೈವರಲ್ಲಿಗಲ್ಲಿಗೆ ಬಂಲ ಕೆರೆ ಬಾವಿ ದೋಣಿಗಳಂ । ಸಲ್ಲಲಿತ ಪ್ರಪಜಲದ ಸಾಧ ಸಪ್ರುಲ್ಲದ ಸ್ತೂಲಾಯುದಪರಭಾಗಮೆಸುವಾ ॥ ಪಲ್ಲವಿತ ವನ ಕೊಳ್ಪ ಪಾಸರಿಗಳಿಂದೆಸುವ । ಪುಲ್ಲ ತರು

೧೩ ೦ ॥ ಗೂಲ್ಲ ಲತೆ ಗುಹೆಗಳಂ ಮಿಗೆ ಬಲಿದು ಬಲ್ಲಿದ ಸ್ತೂಲ ಚತಾಸಲೆಂದ್ರು ಗಿರಿತ್ರಯವ ದುರ್ಗವ ರಚಿಸಿದಾ ॥ ಧ್ರುವನಂ ವಿಹಗದಿ ತ್ರಿಕೂಟಾದ್ರಿಂ-ಯೊಳ್ಪಾಗ್ರೀವನನುಜನಂ(ರ) ಸಾತಳದ ಮಧ್ಯದಲಿ

೧೪ ೦ ॥ ನಿಜಭವನವಂ ಬಳಿಗೆ ಸಂಪದ ಚಿರಾಯುಚನಿಲದೀವಿಯರೆ ಯನನುಜನಾದಾ ॥ ಅವಿರಗನಿಮಿಷ ಜನದನಾಥ ಸ್ವೀಕಾಲಂದ ಕವಿಯು ದೀಕ್ಷಿತ ಮಧುವ ಗೋಪಾಲ ಶ್ರೀಕುಷ್ಣ ರವಿ ।

೧೫ ೦ ॥ ಸೋಮ ಹಾರೆಯುಗ್ಗನ್ನೆವರ ಚಕಕಾಸಲೇಂದ್ರ ನನ್ನನೇರಕ್ಷಣ ॥ ೦ ॥ ಹರ ದರುಹನ ತಾತ್ಪರಿಯದಿಶೋಣಿತ ಪ್ರುದದೆಗಾನ್ವೆದಲಾಗಿ । ಮುಗನುರ್ಧನಸ್ಯ ಮೊಪ್ಪು ಸುಧಿ ವಿಸ್ತರವಾದುಧೇನ ಹೇ

೧೬ ೦ ॥ ಉಪೆನೂ ॥ ಸ್ಮರತನಯನ ಪಪ್ರುದುಚನನೃಧಿಕನಾಲಿಸಲೊಳ ದೈತ್ಯಸಾತ್ಯಕಿಯಾ । ಸುರತ ಲಂಪಟಪಾಂತು ತಿರುಗದೆ ಸುಖ ಬಿಟು ನಿರುಸಾಗಿರ್ಧ ಗೋಪುರದಿ ॥ ಗಟ್ಟಿತನದಲಾತ ಪ್ರೋಕದ್ಯ್ವಾದ ಕಂಡು ಹುದಿ

೧೭ ೦ ॥ ಸಿ ಕೊಟ್ಟವನಾಗಿವ್ರು । ಕೊಬ್ಬದ ದಡಿಗ ದೈತ್ಯರು ಜಡು ಹಿಡೆಯಲೆಬ್ಬದಾವ ರೊಡಲುಗಳಾ ॥ ಲೆಕ್ಕವಿಲ್ಲದೆ ಕೊಂದನದಟುಳ ದೃಷ್ಟರ ವಿಕ್ರಮ ವಿರೋಕಮರಾ ರಕ್ಕಸರಾಯ ಬಾಣಾಸುರ ಹಿಡಿದನು

೧೮ ೦ ॥ ಮುಕ್ಕಣ ಕೊಟ್ಟ ಶಕ್ತಿಯಲಿ ॥

(ಶಾಸನದಲ್ಲಿ ಒಂದು ಸಾಲಾದ ಮೇಲೆ ಅರ್ಧಗೆರೆ ಬಂದಿದೆ. ಹಾಗೂ ಅರ್ಧ ಸಾಲಾದ ಮೇಲೆ ಒಂದು ಸಾಲಿನಿಂದ ಓದಿಕೊಂಡಲ್ಲಿ ಅರ್ಥ ಸ್ಪಷ್ಟವಾಗುತ್ತದೆ. ಈ ಶಾಸನದ ಸುತ್ತಲೂ ದೇವತೆಗಳ ಉಬ್ಬುಶಿಲ್ಪಗಳನ್ನು ಬಿಡಿಸಲಾಗಿದೆ)

## ಚಿತ್ರಗಳ ವಿವರ (ಪುಟ ೧೦೭–೧೦೮ ನೋಡಿ)

೧. ದೇವದುರ್ಗ ನಿರ್ಮಾಪಕ ಕೇಸವಯ್ಯಗೌಡನ ಬಗ್ಗೆ ಕೃಷ್ಣನಿಗೆ ತ್ರಿಲೋಕ ಸಂಚಾರಿ ಶಾಸನೋಕ್ತ ನಾರದನಿಂದ ಮಾಹಿತಿ.

೨. ಶಾಸನದ ಬಲಭಾಗದಲ್ಲಿ ನಂದಿವಾಹನ ಶಿವ ಪಾರ್ವತಿ ಮತ್ತು ಗರುಡನ ಉಬ್ಬುಶಿಲ್ಪ.

೩. ನಯನ ಮನೋಹರ ತಿಮ್ಮಪ್ಪನ ಕೆರೆ ಹಿಂಬದಿಗೆ ಈರಣ್ಣದೇವರ ಗುಡ್ಡ. ಬೇಸಿಗೆಯಲ್ಲಿ ನೀರು ಬತ್ತಿ ಹೋಗುತ್ತದೆ.

೪. ದಪ್ಪ ಹರಳುಗಳ ಸೀಣಕಲ್ಲಿನ ಗುಂಡಿನ ಮೇಲೆ ನಿರ್ಮಿತ ಗೋಪಾಲಸ್ವಾಮಿ ದೇಗುಲ.

೫. ಗೋಪಾಲಸ್ವಾಮಿ ಗುಡಿಯಲ್ಲಿ ಕೃಷ್ಣ, ರುಕ್ಮಿಣಿ ಮತ್ತು ಸತ್ಯಭಾಮೆ ಮತ್ತು ಎಡಬದಿಯ ಗೋವುಗಳ ಉಬ್ಬು ಶಿಲ್ಪ.

೬. ಕೃಷ್ಣ, ರುಕ್ಮಿಣಿ, ಸತ್ಯಭಾಮೆಯರ ಕಂಚಿನ ಕಲಾಕೃತಿ – ಇಲಕಲ್ ಗ್ರಾಮದ ಧರ್ಮಗೌಡ ಬಸವಗೌಡ ಕೊಪ್ಪಳ ಅವರ ಕೊಡುಗೆ.

೭. ಕೇಸವಯ್ಯಗೌಡನ ಮೆರವಣಿಗೆಯ ಉಬ್ಬುಶಿಲ್ಪ; ಅವರ ಶಿರೋವೇಷ ಹಾಗೂ ಬೋವಿಗಳ ಉಡುಪು – ವಿಜಯನಗರ ಶೈಲಿಯವು.

೮. ಗೋಪಾಲಸ್ವಾಮಿ ಗುಡಿಯಡಿಯ ಸೀಣಿಕಲ್ಲು ಗುಂಡಿನ ಮೇಲೆ ಕೇಸವಯ್ಯಗೌಡನ ಪಲ್ಲಕ್ಕಿ, ಶಸ್ತ್ರಧಾರಿ ಕಾಲ್ಪಳ ಹಾಗೂ ಅಶ್ವದಳದ ಉಬ್ಬು ಶಿಲ್ಪಗಳು.

೯. ಕೇಸವಯ್ಯಗೌಡನ ಮಗಳು ಸಕ್ಕರೆವ್ವನ ಹೆಸರಿನ ಭಾವಿ.

೧೦. ಕೇಸವಯ್ಯಗೌಡ ನಿರ್ಮಿತ ಹೊಕ್ಕು ತುಂಬುವ ಸುಮಾರು ೩೦' X ೩೦' ಅಳತೆಯ ಸಿಹಿನೀರು ಭಾವಿ. ೧೯೫೦ರಲ್ಲಿ ಸೇದುವಭಾವಿಯಾಗಿ ಪರಿವರ್ತನೆ. ಈ ಜನಪ್ರಿಯ ಬಳಕೆಯ ಭಾವಿ ಹಿನ್ನೆಲೆಗೆ ತಿಮ್ಮಪ್ಪನ ಕೆರೆಯ ಒಡ್ಡು ಇದೆ.

೧೧. ಕೇಸವಯ್ಯ ನಿರ್ಮಿತ ಸುಂದರ ಅಟ್ಟಣಿಗಳ ದೇವದುರ್ಗದ ರಾಜದರ್ಬಾರ್.

೧೨. ದೇವದುರ್ಗ ದರ್ಬಾರದ ಸುಂದರ ಮುಗಿಲಟ್ಟಣಿಗೆಯ ಉಳಿಕೆ.

೧೩. ಕೇಸವಯ್ಯನ ಸಭೆಯ ಸಭಾಂಗಣದ ಸುಂದರ ಕಮಾನುಗಳ ಭಾಗ.

೧೪. ಮಲ್ಲೇದೇವರ ಗುಡ್ಡದ ಪಶ್ಚಿಮದ ಹೊಲದಲ್ಲಿರುವ ಬೇವಿನಕಟ್ಟೆ ಉತ್ತರದ ಕಲ್ಲಿನ ಚಪ್ಪಡಿಯ ವೀರನ ಉಬ್ಬುಶಿಲ್ಪ.

೧೫. ಅರಕೇರಿಯ ದೊರೆಗಳ ದರ್ಬಾರು ಮನೆ.

೧೬. ಅರಕೇರಿಯ ಕೇಸವಯ್ಯನ ವಂಶಿಕನ ಮನೆಯಲ್ಲಿರುವ ಹಳೆ ಆಯುಧಗಳು.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಹೆಚ್. ಚಂದ್ರಶೇಖರ., 'ಚಂದನಕೆರೆ : ಒಂದು ಪ್ರಾಥಮಿಕ ಅಧ್ಯಯನ', ಇತಿಹಾಸದರ್ಶನ, ಸಂಪುಟ ೧೪/೧೯೯೯, ಪು. ೧೪, (ಸಂ.) ನಾಗರಾಜ ಎಂ.ಜೆ., ಕೃಷ್ಣಮೂರ್ತಿ ಪಿ.ವಿ., ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

೨. ಡಾ. ದೇವರ ಕೊಂಡಾರೆಡ್ಡಿ., (೨೦೦೩), ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ : ೭, ರಾಯಚೂರು ಜಿಲ್ಲೆ, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೩. ಡಾ. ಎಚ್. ಚಂದ್ರಶೇಖರ., ಅದೇ.

೪. ಡಾ. ಹೆಚ್. ಚಂದ್ರಶೇಖರ., (೨೦೦೪) 'ರಾಯಚೂರು ಜಿಲ್ಲೆಯ ದೇವದುರ್ಗ ತಾಲ್ಲೂಕಿನ ಅರಕೇರಿ ಗ್ರಾಮದ ವೀರಗಲ್ಲುಗಳು', ಇತಿಹಾಸ ದರ್ಶನ, ಸಂ. ೧೯, (ಸಂ.) : ಎಂ.ಜೆ. ನಾಗರಾಜ ಮತ್ತು ಕೃಷ್ಣಮೂರ್ತಿ ಪಿ.ವಿ., ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು.

ಡಾ. ಜೆ.ಎಂ. ನಾಗಯ್ಯ*

# ಶಾಸನಗಳಲ್ಲಿ ಧರ್ಮ ಸಂಘರ್ಷ

'ಸಕಲ ಧರ್ಮಧೇನು ನಿವಹಕ್ಕಾಡುಂ ಬೊಲಂ' ಎಂದು ಖ್ಯಾತವಾದ ಕರ್ನಾಟಕ ಅನೇಕ ಮತಧರ್ಮಗಳಿಗೆ ಆಶ್ರಯ ಕೊಟ್ಟಿದೆ. ಇಲ್ಲಿಯ ಆಳರಸರು, ಜನರೂ ಕೂಡ ಎಲ್ಲಾ ಧರ್ಮಗಳನ್ನು ಸಮಾನವಾಗಿ ಕಂಡಿದ್ದಾರೆ. "ಶ್ರೀಮಲ್ಲೊಕ್ಕಿಗುಣ್ಡಿಯೂರೊಡೆಯ ಪ್ರಮುಖ ಮಹಾಜನಂ ಶ್ರೀಸಾಸಿರ್ವರುಂ ಧರ್ಮಂಗಳಂ ಸ್ವಧರ್ಮದಿಂ ಸುರಕ್ಷಿತಮಾಗೆ ರಕ್ಷಿಸುತ್ತಮಿರೆ"[1] ಎಂಬಂಥ ಮಾತುಗಳು ಅನೇಕ ಶಾಸನಗಳಲ್ಲಿ ಕಂಡುಬರುತ್ತಿದ್ದು ಇದು ಈ ಜನರ ವಿಶಾಲ ಮನೋಭಾವನೆಯ ದ್ಯೋತಕವಾಗಿದೆ. ಇದು ಒಂದು ಮುಖವಾದರೆ ಇನ್ನೊಂದು ಮುಖದಲ್ಲಿ ಧರ್ಮಸಂಘರ್ಷವನ್ನು ಕಾಣುತ್ತೇವೆ. ಇಂಥ ಶಾಸನಗಳನ್ನು ವಿಶ್ಲೇಷಿಸಿ ಘಟನಾ ಶೋಧವನ್ನು ಅನಾವರಣಗೊಳಿಸುವ, ವ್ಯಾಖ್ಯಾನದ ಮೂಲಕ ಘಟನೆಯ ಕಾರಣಗಳನ್ನು ಶೋಧಿಸುವ ಉದ್ದೇಶವನ್ನು ಪ್ರಸ್ತುತ ಲೇಖನ ಹೊಂದಿದೆ.

ಧರ್ಮಸಂಘರ್ಷಗಳಿಗೆ ತಮ್ಮ ಧರ್ಮ, ತಮ್ಮ ದೈವವೇ ಶ್ರೇಷ್ಠ, ಅನ್ಯಧರ್ಮ, ಅನ್ಯ ದೈವಗಳು ಕೀಳು ಎಂಬ ಮೂಲಭೂತ ಭಾವನೆಗಳೇ ಕಾರಣಗಳಾಗಿವೆ. ಹಾಗೆಯೇ ಒಂದು ಧರ್ಮಕ್ಕೆ ಸಲ್ಲುತ್ತಿದ್ದ ವಿಶೇಷ ಮರ್ಯಾದೆಗಳು ಉದಾಹರಣೆಗೆ : ಪಂಚಮಹಾಶಬ್ದ, ಕಳಸ, ಧ್ವಜ ಇತ್ಯಾದಿಗಳನ್ನು ಇತರ ಧರ್ಮದವರು ಬಳಸಿದಾಗ ಸಂಘರ್ಷಗಳು ನಡೆದಿವೆ. ಮತಾಂಧ ಅರಸ ದಾಳಿ ಮಾಡಿದಾಗ ತನ್ನದಲ್ಲದ ಧರ್ಮದವರ ದೇವಾಲಯಗಳನ್ನು ನಾಶ ಮಾಡಿದ್ದಾರೆ. ತಮ್ಮ ವಶಕ್ಕೊಳಗಾದವರೆಲ್ಲರೂ ತಮ್ಮ ಧರ್ಮದ ಅನುಯಾಯಿಗಳಾಗಬೇಕೆಂಬುದೇ ಇದರ ಹಿಂದಿನ ಉದ್ದೇಶವಿರುತ್ತದೆ. ಇಂಥ ಸಂಘರ್ಷಗಳು ರಕ್ತಪಾತದಲ್ಲಿ ಪರ್ಯವಸಾನವಾಗಿ ಆನಂತರ ಪರಸ್ಪರ ಶಾಂತಿ ಒಪ್ಪಂದ ಮಾಡಿಕೊಂಡದ್ದನ್ನು ಶಾಸನಗಳು ನಿರೂಪಿಸುತ್ತವೆ.

ಚೌಡದಾನಪುರ[1] ಶಾಸನದಲ್ಲಿ ಶಿವದೇವಮುನಿ (ಶಿವಮುದ್ದು ಬ್ರತಿಪ) ಶ್ರೀಶೈಲದಿಂದ ಮುಕ್ತಿ ಕ್ಷೇತ್ರವೆಂದು ಪ್ರಸಿದ್ಧಿ ಪಡೆದಿದ್ದ ಈಗಿನ ಚೌಡದಾನಪುರಕ್ಕೆ ಆಗಮಿಸಿ ಅಲ್ಲಿಯೇ ನೆಲೆಸಿ ಅನೇಕ ಧಾರ್ಮಿಕ ಕಾರ್ಯಗಳನ್ನು ನೆರವೇರಿಸಿದ ಸಂಗತಿಗಳನ್ನು ಹೇಳಲಾಗಿದೆ. ಇವನು ಕಟ್ಟಾ ಶೈವನಾಗಿದ್ದು ಶಿವನನ್ನು ಮಾತ್ರ ಆರಾಧಿಸುತ್ತಿದ್ದನು. ಇವನಿಗೆ ಇತರ ದೇವತೆಗಳೆಲ್ಲರೂ ಶಿವನ ಕಿಂಕರರಾಗಿದ್ದರು. ಈ ಅಂಶವನ್ನು ಶಾಸನ[2]

*ಕೇಶವ ಜಿನ ಬೌದ್ಧಾದಿಗ*
*ಳೀಶನ ಕಿಂಕರರು [ಬೇ]ಜೆ ದೇವತೆಯಲ್ಲಂ*
*ದಾ ಶಿವಮುದ್ದು ಬ್ರತಿಪ ಮ*
*ಹೇಶನನೊಲಿದಾಲಿಸಿದಂ ಜಗತ್ರಯವಜೆಯಲು ॥*

*ಎಲಗಳ ವಾದಿಗೀದಿ ಪಡ ವೈಷ್ಣವ ಗಿಷ್ಣವ ಸೌರಗಿವುರ ಮಾ*
*ಣೆಲಗಳ ಬೊಂಮಿಗಿಂಮಿ ನಿಗಮಾರ್ಥವನಜೆಯದ ಯಜ್ವಿಗಿಜ್ವ ಬೇ*
*ಡೆಲಗಳ ಬೌದ್ಧಗಿದ್ಧ ಬಜೆಯಾಗಮಿಗೀಗಮಿ ಮಂತ್ರವಾದಿ ಸಾ*
*ಕುಲಿಯದಿರೆಂದು ಬಗ್ಗಿಪುದು ಶ್ರೀಶಿವದೇವನ ಕಾಲ ಹೊಂದಡರು ॥*

–ಎಂದು ಮುಂತಾಗಿ ಹೇಳುತ್ತದೆ.

ಚೋಳ ಅರಸರು ಕರ್ನಾಟಕದ ಮೇಲೆ ದಾಳಿ ಮಾಡಿ ಇಲ್ಲಿಯವರನ್ನು ಸೋಲಿಸುತ್ತ ಶಿವಾಲಯಗಳನ್ನು ಹೆಚ್ಚು ನಿರ್ಮಿಸಿದರು. ಇದಕ್ಕೆ ಕಾರಣ ಚೋಳರು ಶೈವರಾಗಿದ್ದುದು. ಅವರ ಕಾಲದಲ್ಲಿ ಕೆಲವು ಜಿನಾಲಯಗಳು ನಾಶವಾದವು. ಗದಗ ತಾಲ್ಲೂಕಿನ ಗವರವಾಡ[3] ಶಾಸನ ಚೋಳ ಅರಸ ಜಿನಾಲಯವನ್ನು ನಾಶ ಮಾಡಿದ ಸಂಗತಿಗಳನ್ನು ಹೇಳುತ್ತದೆ. ರೇವಕನಿರ್ಮ್ಮಡಿಯ ವಲ್ಲಭನಾದ ಗಂಗಪೆರ್ಮ್ಮಾಡಿ ಬೂತುಗನು ಬೆಳ್ವೊಲ-೩೦೦ ಆಳುವಾಗ ರಾಜಧಾನಿ ಅಣ್ಣಿಗೆರೆಯಲ್ಲಿ ಜಿನೇಂದ್ರ ಮಂದಿರವನ್ನು ಕಟ್ಟಿಸುತ್ತಾರೆ. ಇದು ಎರಡರುನೂರು ವಿಭಾಗದಲ್ಲಿ 'ಪೂಜ್ಯ' ಎನ್ನುವ ಖ್ಯಾತಿಯನ್ನು ಪಡೆದಿತ್ತು. ಈ ಜಿನಾಲಯವನ್ನು ಚೋಳ ಅರಸ ನಾಶ ಮಾಡಿದುದನ್ನು ಶಾಸನದಲ್ಲಿ ಹೀಗೆ ಹೇಳಲಾಗಿದೆ.

*ಪೊಲೆಚೋಳಂ ನೆಲೆಗೆಟ್ಟು ತನ್ನ ಕುಳಧರ್ಮಾಚಾರಮಂ ಬಿಟ್ಟು ಬೆ*
*ಳ್ವೊಲ ದೇಶಕ್ಕಡಿಯಿಟ್ಟು ದೇವಗೃಹ ಸಂದೋಹಂಗಳಂ ಸುಟ್ಟು ಕ*

*ಡಾ. ಆರ್.ಸಿ. ಹಿರೇಮಠ ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

*ಯ್ಯಲೆ ಪಾಪಂ ಬೆಳೆದೆ (ದ) ತ್ತೆನಲ್ಕೆಧುರೊಳು ತ್ರೈಲೋಕ್ಯ ಮಲ್ಲಂಗೆ ಪಂದಲೆಯಂ ಕೊಟ್ಟಸುವಂ ಬಿಸುಟ್ಟು ನಿಜವಂಶೋಚ್ಚಿತ್ತಿಯಂ ಮಾಡಿದ॥*
*ಶ್ರೀ ಪೆರ್ಮ್ಮಾನಡಿ ಮಾಡಿಸಿ*
*ದೀ ಪರಮ ಜಿನಾಲಯಂಗಳಂ ಪೊಲೆವಟ್ಟಿ*
*ದರ್ಾ ಪಾಣ್ಡ್ಯಚೋಳನೆಂಬ ಮ*
*ಹಾಪಾತಕ ತಿವುಳನಳಿದಧೋಗತಿಗಿಳಿದ ॥*

ಹೀಗೆ ನಾಶವಾದ ಜಿನಾಲಯವನ್ನು ಲಕ್ಷ್ಮಮಂಡಳಿಕನು ಜೀರ್ಣೋದ್ಧಾರ ಕಾರ್ಯವನ್ನು ೧೦೭೧ರಲ್ಲಿ ಮಾಡಿಸುತ್ತಾನೆ ಮತ್ತು ದತ್ತಿ, ದಾನ ಬಿಡುತ್ತಾನೆ.

*ಜಿನನಾಥಾವಾಸಮಂ ವಾಸವರಿತು ನಿಭಮಂ ಕಷ್ಟಕಾತೀಯ ದುರ್ಭಾವನೆಯಿಂ ಚಾಂಡಾಳ ಚೋಳಂ ಸುಡಿಸಿ ಕೆಡಿಸಿ ವಿಚ್ಛಿತ್ತಿಯಾಗಿರ್ದುದೆನೆಟ್ಟನೆ ನಷ್ಟೋದ್ಧಾರಮಂ ಸಾಸ್ವತಮತಿಶಯ ಮಾಯ್ತೆಂಬಿನಂ ಮಾಡಿತಚ್ಛಾಸನಮಾ ಚಂದ್ರಾರ್ಕ್ಕ ತಾರಂ ನಿಲೆ ನಿಲೆಸಿದನೇಂ ಧನ್ಯನೊ ಲಕ್ಷ್ಮಭೂಪಂ*

ಈ ನಾಶಕ್ಕೆ ಕಾರಣನಾದ ಚೋಳ ಅರಸನೆಂದರೆ ರಾಜೇಂದ್ರಚೋಳನ ಹಿರಿಯ ಮಗ ರಾಜಾಧಿರಾಜ II, ಇವನು ಕಲ್ಯಾಣದ ಚಾಲುಕ್ಯ ಚಕ್ರವರ್ತಿ ಒಂದನೆಯ ಸೋಮೇಶ್ವರನ ಜೊತೆ ಯುದ್ಧ ಮಾಡಿ ಗಂಗಾಧರ, ಗುಂಡಪಯ್ಯ, ಕೇವುದ ಮೊದಲಾದ ಚಾಲುಕ್ಯ ಅಧಿಕಾರಿಗಳನ್ನು ಯುದ್ಧದಲ್ಲಿ ಕೊಂದು ಕಂಪಿಲಿಯನ್ನು ಸುಟ್ಟು ನಾಶ ಮಾಡಿ ಬೆಳ್ವೊಲನಾಡನ್ನು ಪ್ರವೇಶಿಸುತ್ತಾನೆ. ಅಲ್ಲಿ ಅಣ್ಣಿಗೆರೆಯ ಬಸದಿಯನ್ನು ನಾಶ ಮಾಡಿ ಕೊಲ್ಹಾಪುರಕ್ಕೆ ಹೋಗಿ ಲಕ್ಷ್ಮಿದೇವಾಲಯವನ್ನು ಸುಡುತ್ತಾನೆ. ಇದರ ಉಲ್ಲೇಖ ಕೊಲ್ಹಾಪುರದ ಲಕ್ಷ್ಮಿ ವಿಲಾಸ ಅರಮನೆಯ ವಸ್ತು ಸಂಗ್ರಹಾಲಯದ ಆವರಣದಲ್ಲಿ ನೆಟ್ಟ ವೀರಗಲ್ಲಿನಲ್ಲಿ ಹೀಗೆ ಬರುತ್ತದೆ :

*"ಸ್ವಸ್ತಿಶ್ರೀ ಮಹಾಲಕ್ಷ್ಮೀ ದೇವಿಯರಲ್ಲಿಗೆ ಚೋಳಂ*
*ಬನ್ದು ದೇಗುಲಮಂ ಸುಡುವಾಗ ಮಾಲಗಾಱ ಮುಟ್ಟಯ್ಯ*
*ದೇವಗ್ಗೆ ವೇಳಗೋಣ್ಬುಕಾದಿ"*

–ಮರಣ ಹೊಂದುತ್ತಾನೆ. ಚೋಳನ ಈ ದಾಳಿಯಲ್ಲಿ ಮಾಲಗಾಱ ಮುಟ್ಟಯ್ಯ ಲಕ್ಷ್ಮಿದೇವತೆಗೆ ವೇಳೆವಾಳಿಯಾಗಿ ಹೋರಾಡಿ ಮರಣ ಹೊಂದುತ್ತಾನೆ. ಮುಂದೆ 'ಕೊಪ್ಪ'ದಲ್ಲಿ (ಈಗಿನ ಖಿದ್ರಾಪುರ, ಶಿರೋಳ (ತಾ॥) ಕೊಲ್ಹಾಪುರ (ಜಿ) ನಡೆದ ಭೀಕರ ಕದನದಲ್ಲಿ ರಾಜಾಧಿರಾಜನ ಶಿರಚ್ಛೇದ ಮಾಡಲಾಗುತ್ತದೆ. ಅದಕ್ಕಾಗಿಯೇ ಮೇಲಿನ ಗವರವಾಡ ಶಾಸನದಲ್ಲಿ 'ತ್ರೈಲೋಕ್ಯಮಲ್ಲಂಗೆ ಪಂದಲೆಯುಂ ಕೊಟ್ಟಸುವಂ ಬಿಸುಟ್ಟು' ಎಂದು ರಾಜಾಧಿರಾಜನ ಮರಣವನ್ನು ದಾಖಲಿಸಿದೆ.

ಲಕ್ಕುಂಡಿ ಶಾಸನದಲ್ಲಿ ಅತ್ತಿಮಬ್ಬೆ ನಿರ್ಮಿಸಿದ ಜಿನಾಲಯ ಭೂಮಿಗೆ ಕುಸಿದಾಗ ಅದನ್ನು ಭರತಾರ್ಯನೆಂಬವನು ಹೊಸದಾಗಿ ಮಾಡಿಸುತ್ತಾನೆ. ಮುಂದೆ ಅದೇ ಜಿನಾಲಯ 'ಅರಲೆ ಬೆಂದಾಗ' ನಾಕಿ, ಸಿರಿಪಾಳ ಎನ್ನುವವರು ಸುಂದರವಾಗಿ ಮಾಡಿಸುತ್ತಾರೆ. ಹೀಗೆ ಅತ್ತಿಮಬ್ಬೆಯ ಜಿನಾಲಯ ಎರಡು ಬಾರಿ ಜೀರ್ಣೋದ್ಧಾರಗೊಂಡಿದೆ. ಇದು ಬಹುಶಃ ಧರ್ಮಸಂಘರ್ಷ ಕಾರಣವಾಗಿಯೇ ಹಾಳಾಗಿದೆ. ಲಕ್ಕುಂಡಿ ಶಾಸನದಲ್ಲಿ ಜಿನಾಲಯ ನಾಶಗೊಂಡ ಸಂಗತಿ ಹೀಗೆ ಬರುತ್ತದೆ :

*"ನಿರುಪಮತ್ತಿಮಬ್ಬೆಯ ಜಿನೇಂದ್ರ ಗೃಹಂ ಧರಣೀ ತಳಕ್ಕೆ ಬಿಟ್ಟಿರೆ ಹೊಸತಾಗಿ ದೈವಭರತಾರ್ಯ ನಿನಾ ಭರತಾರ್ಯನಿಂ ಬಟಿಕ್ಕಿರದುದು . .ಂದರಲೆ ಬೆಂದಡೆ ಸುಂದರಮಾಗೆ ನಾಕಿಯಿಂ ಪರಮಪರೋಪಕಾರಿ ಸಿರಿಪಾಳನಿನೇಂ ಪರಿಪೂರ್ಣಮಾದುದೋ"*

ಅಬ್ಬಲೂರಿನ ಶಾಸನಗಳು ಶೈವ–ಜೈನ ಸಂಘರ್ಷವನ್ನು ದಾಖಲಿಸಿವೆ. ಏಕಾಂತದ ರಾಮಯ್ಯನಿಗೂ ಮತ್ತು ಜೈನರಿಗೂ ನಡೆದ ಶಿವಪಾರಮ್ಯ, ಜಿನಪಾರಮ್ಯದ ಜಗಳವನ್ನು ದಾಖಲಿಸುತ್ತವೆ. ಏಕಾಂತದ ರಾಮಯ್ಯ ಶಿರಸ್ಸು ಪವಾಡ ಮೆರೆದು ವಿಜಯಿಯಾಗಿ ಜಿನಮೂರ್ತಿಯನ್ನು ನಾಶಮಾಡಿ ಅಲ್ಲಿ ವೀರಸೊಮೇಶ್ವರನನ್ನು ಪ್ರತಿಷ್ಠಾಪಿಸುತ್ತಾನೆ.

*ಬೆಱಗಾಗಿ ಜೈನರೆಲ್ಲಂ ಮಱುಗಿ ಜಿನಪ್ರಳಯವೆಂಬುದಂ*
*ಮಾಡದಿರಿಂನೆಂ ದೆಱಗಿ ಕಾಲ್ವಿಡಿಯೆ ಮಾಣದೆ*
*ಬಱಸಿಡಿಲಂತೆಱಗಿ ಜಿನನ ತಲೆಯಂ ಮುಱಿದಂ*

*ಬಡಿಗೊಂಡೊರ್ಬ್ಬನೆ ಸೊಕ್ಕಿ ಬಾಳೆವನಮಂ ಕಾಡಾನೆ ಪೊಕ್ಕಂತಿರುಕ್ಕಡಗಲು ಕಾಪಿನ ವೀರರಂ ತುರಗಮಂ ಸಾಮನ್ತರಂ ತೂಳ್ದು ಮಾರ್ಪ್ಪಡೆಗಳು ಜೈನರ ಮಾರಿ ಬಂದುದೆನುತುಂ ಬೆಂಗೊಟ್ಟು ಪೋಗಲು ಜಿನಂ*
*ಕೆಡೆವಂನಂ ಬಡಿದಲ್ಲಿ ಕೈಕೊಳಿಸಿದಂ ಶ್ರೀ ವೀರಸೋಮೇಶ್ವರನಂ ॥*

ಎಂದು ಶಾಸನದಲ್ಲಿ ಬರುತ್ತದೆ. ಹೀಗೆ ಜಿನಮೂರ್ತಿಯನ್ನು ಹೊಡೆದು ಲಿಂಗಪ್ರತಿಷ್ಠಾಪಿಸಿದ ಘಟನಾವಳಿಗಳನ್ನು ಸೋಮೇಶ್ವರ ದೇವಾಲಯದ ರಂಗಮಂಟಪದ ಹೊರಭಿತ್ತಿಯ ಮೇಲೆ ಮತ್ತು ದೇವಾಲಯದ ಒಳಭಿತ್ತಿಯ ಮೇಲೆ ಉಬ್ಬುಶಿಲ್ಪಗಳಲ್ಲಿ ಕೆತ್ತಿ ಘಟನೆಯನ್ನು ನಿರೂಪಿಸುವ ಶಾಸನಗಳನ್ನು ಕೆತ್ತಲಾಗಿದೆ. ಅವು ಇಂತಿವೆ :

೧) "ಶ್ರೀಮದ್ ಏಕಾಂತರಾಮಯ್ಯಂಗೆ ಸಂಕಗೌಂಡನ ಓಲೆಯ ಕುಡುವ ಠಾವು"

೨) "ಬ್ರಹ್ಮೇಶ್ವರ ದೇವರದಲ್ಲಿ ಏಕಾಂತದ ರಾಮಯ್ಯ ಬಸದಿಯ ಜಿನನೊಡ್ಡವಾಗಿ ತಲೆಯನರಿದು ಪಡೆದ ಠಾವು" "ಸಂಕಗಾವುಂಡ ಬಸದಿಯನೊಡೆಯಲೀಯದೆ ಆಳು ಕುದುರೆಯನೋಡ್ಡಿರಲು ಏಕಾಂತದ ರಾಮಯ್ಯ ಕಾದಿಗೆಲ್ದು ಜಿನನೊಡೆದು ಲಿಂಗಪ್ರತಿಷ್ಠೆ ಮಾಡಿದಂ"

೩) (ಏ)ಕಾಂತದ ರಾಮಯ್ಯಂಗಳು ಜಿನನ ಒಡೆದು ಲಿಂಗಪ್ರತಿಷ್ಠೆಯಂ ಮಾಡಿದ ಠಾವು"

ಎಂದು ಮುಂತಾಗಿ ಶೈವ–ಜೈನ ಸಂಘರ್ಷವನ್ನು ಅಬ್ಬಲೂರಿನ ಶಾಸನಗಳು ದಾಖಲಿಸುತ್ತವೆ.

ವೀರಶೈವ ಮತ್ತು ಶ್ವೇತಾಂಬರ ಜೈನರ ನಡುವೆ ಯಾವುದೋ ಕಾರಣಕ್ಕೆ ಜಗಳ ನಡೆದುದನ್ನು ಶ್ರೀಶೈಲ ಶಾಸನ ದಾಖಲಿಸುತ್ತದೆ. ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯದ ಧರ್ಮಕರ್ತನಾದಂಥ ಭಿಕ್ಷಾವೃತ್ತಿ ಶಾಂತಲಿಂಗಯ್ಯನು ಜಂಗಮನಾಗಿದ್ದು ಮಠ ಕಟ್ಟಿಸಿದ್ದುದಲ್ಲದೆ ದತ್ತಿ ದಾನ ಬಿಡುತ್ತಾನೆ. ತಾನು ನೆಲೆನಿಂತ ಪ್ರದೇಶದ, ತನ್ನ ಮಠ, ಮಲ್ಲಿಕಾರ್ಜುನ ದೇವಾಲಯದ ಗ್ರಾಮಗಳ ರಕ್ಷಣೆಗಾಗಿ ಕೋಟೆಗಳನ್ನು ನಿರ್ಮಿಸುತ್ತಾನೆ. ಇವನು ರಾಜರ ಹಾಗೆ ರಾಜ್ಯ ಲಾಂಛನಗಳನ್ನು ಧರಿಸಿದ್ದಾನೆ. ಇವನ ಮಗನೇ ಶ್ರೀಶೈಲದ ಭಿಕ್ಷಾವೃತ್ತಿ ಮಠದ ಆಜ್ಞಾಧಾರಕನಾದ (ಆಜ್ಞಾಧಾರಕುಲು) ಕುಮಾರ ಲಿಂಗಯ್ಯ. ಇವನು ಜಂಗಮ ಬ್ರಾಹ್ಮಣರಿಗೆ ದತ್ತಿದಾನ ಬಿಟ್ಟುದಲ್ಲದೆ ಮಲ್ಲಿಕಾರ್ಜುನ ದೇವಾಲಯಕ್ಕೆ ಚಿನ್ನದ ಆಭರಣಗಳನ್ನು ದಾನ ಬಿಡುತ್ತಾನೆ, ಮಹಾಜನರಿಗೆ ಗ್ರಾಮಗಳನ್ನು ದತ್ತಿ ಬಿಡುತ್ತಾನೆ. ಇವನು ಶ್ವೇತಾಂಬರ ಜೈನರ ತಲೆಗಳನ್ನು ಕಡಿದುದನ್ನು ಶಾಸನ ದಾಖಲಿಸುತ್ತದೆ. ಈ ಘಟನೆಯನ್ನು 'ಶ್ರೀಶೈಲಮ್ ಕೈಫಿಯತ್ತು' ಕೂಡ ದಾಖಲಿಸಿದೆ. ಕೊನೆಗೆ ಕೃಷ್ಣದೇವರಾಯನ ಆಜ್ಞೆಯ ಮೇರೆಗೆ ಗನಿತಿಮ್ಮನು ಕುಮಾರಲಿಂಗಯ್ಯನನ್ನು ಸೋಲಿಸಿದನೆಂದು 'ವೆಲುಗೋಟಿವಾರಿ ವಂಶಾವಳಿ' ಹೇಳುತ್ತದೆ. ಶ್ರೀಶೈಲ ಮಲ್ಲಿಕಾರ್ಜುನ ದೇವಾಲಯಕ್ಕೆ ಸಂಬಂಧಿಸಿ ಗ್ರಾಮಗಳಿಗೆ ಕೋಟೆಗಳನ್ನು ಕಟ್ಟಿಸಿದ್ದು ನೋಡಿದರೆ ಪ್ರಸಿದ್ಧ ಶೈವಕ್ಷೇತ್ರಕ್ಕೆ ಅಸುರಕ್ಷತೆ ಉಂಟಾಗಿರ ಬೇಕೆನಿಸುತ್ತದೆ. ಶ್ವೇತಾಂಬರ ಜೈನರ ತಲೆ ಕಡಿದುದಕ್ಕೆ ಕಾರಣಗಳು ತಿಳಿದುಬರುವುದಿಲ್ಲ. ಒಟ್ಟಾರೆ ಧಾರ್ಮಿಕ ಕಾರಣಕ್ಕಾಗಿಯೇ ಈ ಸಂಘರ್ಷ ನಡೆದುದು ಸ್ಪಷ್ಟ.

ಜೈನರಿಗೂ ವೀರಶೈವರಿಗೂ ಧಾರ್ಮಿಕ ಕಾರಣ ಕ್ಕಾಗಿಯೇ ಸಂಘರ್ಷ ನಡೆದು ಕೊನೆಗೆ ಅದು ಶಾಂತಿಯುತ ವಾಗಿ ಬಗೆಹರಿದು ಇಬ್ಬರೂ ಪರಸ್ಪರ ಒಪ್ಪಂದ ಮಾಡಿಕೊಂಡ ಸಂಗತಿಯನ್ನು ಲಕ್ಷ್ಮೇಶ್ವರ ಶಾಸನ ನಿರೂಪಿಸುತ್ತದೆ. ಶಂಖಬಸ್ತಿಯ ಸಂಖಣಾರ್ಯ ಹೇಮಣಾಚಾರ್ಯರು ದಕ್ಷಿಣ ಸೋಮೇಶ್ವರದೇವರ ಆರಾಧಕರಾದ ಕಾಳಹಸ್ತಿ ದೇವರಿಗೆ, ಶಿವರಾಮದೇವರಿಗೆ, ಲಿಂಗಣ್ಣವೊಡೆಯರು ಮಹಾಗಣಂಗಳಿಗೆ ಜಯಪತ್ರ ಬರೆದುಕೊಡುತ್ತಾರೆ. ಏಕೆಂದರೆ ಸೋಮೇಶ್ವರ ದೇವಾಲಯಕ್ಕೆ ಸಲ್ಲುವ ಅಷ್ಟದಿಕ್ಪಾಲಾದಿಗಳು ಧ್ವಜ ಪತಾಕಾದಿಗಳನ್ನು ಇವರ ಶಂಖಬಸ್ತಿಯ ಶಾಂತಿತೀರ್ಥಂಕರ ಉತ್ಸವದಲ್ಲಿ 'ಪ್ರಜ್ಞಾಹೀನತೆ' ಯಿಂದ ಮೆರೆಸಿರುತ್ತಾರೆ. ಇದಕ್ಕೆ ತಕರಾರೆತ್ತಿದ ವೀರಶೈವರಿಗೆ ಜೈನರು 'ನೀವು ಮಾಡಿದ' (ನಿರ್ಣಾಯಿಸಿದ) ಶಿಕ್ಷೆಗೊಳಗಾಗಿ ಇನ್ನು ಮುಂದೆ "ನಾಉ ನಂಮ ಜಿನ ಸಮಯಕ್ಕೆ ಅಷ್ಟದಿಕ್ಪಾಲಾದಿಗಳು ಸಲ್ಲವೆಂದು ಕೊಟ್ಟ ಜಯಪತ್ರಿಕೆ" ಎಂದು ಪತ್ರ ಬರೆದು ಕೊಡುತ್ತಾರೆ. ಈ ಜಯಪತ್ರಿಕೆ ಪಡೆದವರಲ್ಲಿ ಮಠದ ಲಿಂಗಣ್ಣೊಡೆಯರು, ಅನ್ನದಾನಿ ದೇವರು, ಬೋಗವ xxx ದೇವರು, ವೀರಬಸವರಾಜದೇವರು, ನಾಡಕಂಥೆಯದೇವರು ಮೊದಲಾದವರು.

ಉದಯಾವರದ ವೀರಗಲ್ಲು ಕಾಮಕೋಡನು ಶ್ವೇತವಾಹನನ ಅಳಿಯನೊಂದಿಗೆ ನಡೆಸಿದ ಹೋರಾಟದಲ್ಲಿ ಮರಣ ಹೊಂದಿದ್ದುದನ್ನು ಹೇಳುತ್ತದೆ. ಈ ಕಾಮಕೋಡನು ಪಶುಪತಿದೇವರಿಗೆ ಭಕ್ತರಾಗಿಲ್ಲದವರ ನಾಲಗೆಯನ್ನು ಕತ್ತರಿಸಿ ಹಾಕುವನೆಂದೂ ಮತ್ತು ಪಟ್ಟಿಯು ಒಡೆಯುನಿಗೆ ಭಕ್ತರಾಗಿಲ್ಲದವರನ್ನೂ ಮುತ್ತಿಕೊಲ್ಲುತ್ತಿದ್ದನೆಂದೂ ಹೇಳುತ್ತದೆ.[೩]

ಶ್ರವಣಬೆಳ್ಗೊಳದ ಪ್ರಸಿದ್ಧ ಬುಕ್ಕದೇವರಾಯನ ಶಾಸನ ಶ್ರೀವೈಷ್ಣವರ–ಜೈನರ ಸಂಘರ್ಷವನ್ನು ಹೇಳುತ್ತದೆ. *"ಶ್ರೀ ವೀರ ಬುಕ್ಕರಾಯನು ಪೃಥ್ವೀರಾಜ್ಯವ ಮಾಡುವ ಕಾಲದಲ್ಲಿ ಜೈನರಿಗೂ ಭಕ್ತರಿಗೂ ಸಂವಾಜ(ದ)ವಾದಲ್ಲಿ ಆನೆಯಗೊಂದಿ ಹೊಸಪಟ್ಟಣ ಪೆನುಗುಂಡೆ ಕಲ್ಲೆಹದ ಪಟ್ಟಣವೊಳಗಾದ ಸಮಸ್ತನಾಡ ಭವ್ಯಜನಂಗಳು ಆ ಬುಕ್ಕರಾಯಂಗೆ ಭಕ್ತರು ಮಾಡುವ ಅಂನ್ಯಾಯಂಗಳನೂ ಬಿಂನಹಂ ಮಾಡಲಾಗಿ"* ಎಂದು ಶಾಸನದಲ್ಲಿ ಬರುತ್ತದೆ. ಜೈನರು ಶ್ರೀವೈಷ್ಣವರಿಂದ ಆಗಿರುವ ತೊಂದರೆಗಳನ್ನು ಬುಕ್ಕದೇವರಾಯನಿಗೆ ನಿವೇದಿಸಿ ಕೊಳ್ಳುತ್ತಾರೆ. ಆಗ ಬುಕ್ಕದೇವರಾಯನು ತಿರುಮಲೆಯ ಪೆರುಮಾಳ್, ತಿರುನಾರಾಯಣಪುರ ಮುಖ್ಯರಾದ ಸಕಳಾಚಾರ್ಯರೂ, ಸಕಳಸಮಯಿಗಳು, ಶ್ರೀವೈಷ್ಣವ ಸಮಸ್ತರನ್ನು ಕರೆಯಿಸಿ ಶ್ರೀವೈಷ್ಣವರ ಕೈಯಲ್ಲಿ ಜೈನರ ಕೈಹಿಡಿಸಿ ಜೈನದರ್ಶನಕ್ಕೂ ವೈಷ್ಣವದರ್ಶನಕ್ಕೂ ಭೇದವಿಲ್ಲವೆಂದು ಹೇಳಿ ಜೈನದರ್ಶನಕ್ಕೆ ಸಲ್ಲುತ್ತಿದ್ದ ಪಂಚಮಹಾವಾದ್ಯಗಳ, ಕಳಶಗಳ ಮರ್ಯಾದೆ ಸಲ್ಲುತ್ತದೆಂದು ಹೇಳಿ 'ಜೈನ ದರ್ಶನಕ್ಕೆ ಭಕ್ತರ ದೆಸೆಯಿಂದ ಹಾನಿ ವೃದ್ಧಿಯಾದರೂ ವೈಷ್ಣವ ಹಾನಿ ವೃದ್ಧಿಯಾಗಿ ಪಾಲಿಸುವರು... ವೈಷ್ಣವರೂ ಜೈನರೂ ವೊಂದು, ಭೇದವಾಗಿ ಕಾಣಲಾಗದು ಶ್ರೀ ತಿರುಮಲೆಯ ತಾತಯ್ಯಂಗಳು ಸಮಸ್ತರಾಜ್ಯದ ಭವ್ಯಜನಂಗಳ ಅನುಮತದಿಂದ ಬೆಳುಗುಳದ ತೀರ್ಥದಲ್ಲಿ ವೈಷ್ಣವ ಅಂಗರಕ್ಷೆಗೋಸುಕ ಸಮಸ್ತರಾಜ್ಯ ದೊಳಗುಳ್ಳಂತಹ ಜೈನರಾ ಬಾಗಿಲು ಕಟ್ಟಳೆಯಾಗಿ ಮನೆ ಮನೆಗೆ ವರ್ಷಕ್ಕೆ ೧ ಹಣ ಕೊಟ್ಟು ಆಯೆತ್ತಿದ ಹೊನ್ನಿಂಗೆ ದೇವರ ಅಂಗರಕ್ಷೆಗೆ ಯಿಪ್ಪತ್ತಾಳನೂ ಸಂತವಿಟ್ಟು ಮಿಕ್ಕ ಹೊನ್ನಿಂಗೆ ಜೀರ್ಣ ಜಿನಾಲಯಂಗಳಿಗೆ ಸೊದೆಯನಿಕ್ಕೂದು" ಎಂದು ಬುಕ್ಕದೇವರಾಯನು ಶಾಂತಿ ಒಪ್ಪಂದ ಮಾಡಿಸಿ ಆಜ್ಞೆ ಹೊರಡಿಸುತ್ತಾನೆ.

ಇಸ್ಲಾಂ ಧರ್ಮದವರೂ ಜೈನಧರ್ಮೀಯರನ್ನು ಹಿಂಸಿಸಿ ಅವರ ಜಿನಾಲಯಗಳನ್ನು ನಾಶಮಾಡಿದ್ದಾರೆ. ಇಸ್ಲಾಂ ಧರ್ಮದವರು ಮುಳುಗುಂದದ ಪಾರ್ಶ್ವನಾಥ ಬಸದಿಯಲ್ಲಿದ್ದ ಆಚಾರ್ಯ ಸಹಸ್ರಕೀರ್ತಿಯನ್ನು ಲೆಕ್ಕಿಸದೆ ಪಾರ್ಶ್ವನಾಥ ಬಸದಿಯನ್ನು ಸುಡುತ್ತಾರೆ. ಬಸದಿ ನಾಶವಾಗುವುದರೊಂದಿಗೆ ಆಚಾರ್ಯ ಸಹಸ್ರಕೀರ್ತಿಯೂ ಮಡಿಯುತ್ತಾನೆ. ಈ ವಿಷಯ ಶಾಸನದಲ್ಲಿ[೧೦] ಹೀಗೆ ಬರುತ್ತದೆ.

*"ಶ್ರೀಜಿನ ಪಾರ್ಶ್ವನಾಥನ ಮಹಾಚೈತ್ಯಾಲಯಂ ದುರ್ಮುಖರ್ಕಡು ಮೂರ್ಕತ್ತುರುಕರ್ಸುಡಲ್ಕೆ ತೊಲೆಗಳ್ಕಂಭಂಗಳುಂ ಭಿತ್ತಿಗಳ್ಕೆಳೆ ಯಲ್ಕಂಡು ಸುವಜ್ರದಂತ್ಯ ಬಲುಪಂತುಂ ತಾಳ್ದಿರಲ್ಮಡಿದಂ ಪೊಡವೀಖ್ಯಾತ ಸಹಸ್ರಕೀರ್ತಿ ಯತಿಪಂ"*

ಇದೇ ರೀತಿಯಾಗಿ ಇಸ್ಲಾಂ ಧರ್ಮೀಯರಿಂದ ಆದಿನಾಥನ ವಿಗ್ರಹವೂ ನಾಶಗೊಳ್ಳುತ್ತದೆ. ಆಗ ಬನದಾಂಬಿಕೆ ಎಂಬ ಹೆಣ್ಣುಮಗಳು ಹೊಸ ಆದಿನಾಥನ ವಿಗ್ರಹವನ್ನು ಪ್ರತಿಷ್ಠಾಪಿಸುತ್ತಾಳೆ. ಈ ಸಂಗತಿಯು ಮುಳುಗುಂದ ಮೇಲ್ಕಾಣಿಸಿದ ಶಾಸನದಲ್ಲಿಯೇ

*"ದುರುಳಮತಿ ತುರುಕರು ಬಂದರುಹನ ಆಲಯವ ಹೊಕ್ಕು ಕೆಡಿಸಲ್ಮತ್ತಾದೊರೆ ನಾಗಭೂಪನರಸಿಯು ನಿರುತದಿ ನೆಗಳಿದಳು ಪಂಚಕಲ್ಯಾಣವನಂ....ಮುಳುಗುಂದದ ಕುಲಕರಣಿ ನಾಗಭೂಪನ ಮನೋವಲ್ಲಭೆ ಬನದಾಂಬಿಕೆ ಸೀಲಗುಣ ಸಂಪಂನೆ ಶ್ರೀ ಆದಿಪರಮೇಶ್ವರಂಗೆ ಪ್ರತಿಷ್ಠೆಯಂ ಮಾಡಿಸಿ...."*

ಎಂದು ಬರುತ್ತದೆ. ಬೀದರನ[೧೧] ಫರ್ರಾಬಾಗಿಯಲ್ಲಿರುವ ಮಸೀದಿಯ ಶಾಸನದಲ್ಲಿ ದೇವಾಲಯವನ್ನು ನಾಶ ಮಾಡಿ ಅಲ್ಲಿ ಮಸೀದಿ ಸ್ಥಾಪಿಸಿದ ಸಂಗತಿ ಇದೆ. "ಜಾಫರಾಬಾದ್ ಸುಬಾದ ಸುಬೇದಾರ್ ಮುಖ್ತಾರ್‌ಖಾನ್–ಅಲ್–ಹುಸ್ಸೋ ಅಸ್ಸಬ್ಜವಾರೀ ನೇತೃತ್ವದಲ್ಲಿ ದೇವಾಲಯವೊಂದನ್ನು ಅಪವಿತ್ರಗೊಳಿಸಿ, ಆ ಸ್ಥಳದಲ್ಲಿ ಮಸೀದಿ ಹಾಗೂ ತೋಟವೊಂದನ್ನು ನಿರ್ಮಿಸಲಾಯಿತು. ಆ ತೋಟಕ್ಕೆ ಫರ್ರಾಬಾಗ್ (ಬಾಗ್–ಇ–ಫರ್ರಾ) ಎಂದು ಹೆಸರಿಟ್ಟು ಅದನ್ನು (ಆತನ ಮೊಮ್ಮಗ) ಮಿರ್ಜಾ ಖಮರುದ್ದೀನ್ ಮುಹಮ್ಮದನ ಪುತ್ರ ಮಿರ್ಜಾ ನಜ್ಮುದ್ದೀನ್ ಅಹಮ್ಮದನಿಗೆ ವಹಿಸಿಕೊಡಲಾಯಿತೆಂದು" ಮತ್ತು ಇತರ ಸಂಗತಿಗಳನ್ನು ಆ ಶಾಸನ ಹೇಳುತ್ತದೆ.

ಇದೇ ರೀತಿಯಾಗಿ ಬೌದ್ಧ ಧರ್ಮದ ಮೇಲೆ ವೈದಿಕರ ದಾಳಿಯು ನಡೆದಿದೆ. ಮೌರ್ಯರ ಕೊನೆಯ ದೊರೆ ಬೃಹದ್ರಥನನ್ನು ಕೊಂದು ಆಡಳಿತ ವಹಿಸಿಕೊಂಡ ಶುಂಗವಂಶದ ಪುಷ್ಯಮಿತ್ರಶುಂಗ (ಕ್ರಿ.ಪೂ. ೧೮೭–೧೫೧) ಬೌದ್ಧರ ವಿರೋಧಿಯಾಗಿದ್ದ ಬ್ರಾಹ್ಮಣ ಧರ್ಮದ ವಿಶೇಷ ಅಭಿಮಾನಿ, ಸ್ವತಃ ಬ್ರಾಹ್ಮಣನಾದ ಇವನು ಒಬ್ಬ ಬೌದ್ಧನ ಕತ್ತರಿಸಿದ ತಲೆಗೆ ಒಂದು ನೂರು ಬಂಗಾರದ ದಿನಾರುಗಳನ್ನು (ದೀನಾರ ಶತಂ) ಘೋಷಿಸುತ್ತಾನೆ.[೧೨]

ಜೈನಧರ್ಮೀಯರೂ ಬೌದ್ಧರೊಂದಿಗೆ ವಾದ, ವಾಗ್ವಾದಕ್ಕಿಳಿದುದನ್ನೂ ಕೆಲವು ಶಾಸನಗಳು ಹೇಳುತ್ತವೆ. 'ಶ್ರೀ ಮನ್ಮಹಾಮಂಡಳಾಚಾರ್ಯ'ರಾದ 'ಶ್ರೀ ಮುದ್ದೇವಕೀರ್ತಿ ಪಣ್ಡಿತದೇವರ' ಸಾಮರ್ಥ್ಯವನ್ನು ಅವರ ಪ್ರಶಸ್ತಿಯಲ್ಲಿ ಹೇಳಲಾಗಿದೆ. ಈ ಅಂಶ ಶಾಸನದಲ್ಲಿ "ಚಾರ್ವಾಕವಾದಿ ಮಕರಾಕರ ಬಾಡವಾಗ್ನಯೇ ಬೌದ್ಧೋಗ್ರವಾದಿ ತಿಮಿರ ಪ್ರವಿಭೇದ ಭಾನವೇ ಶ್ರೀದೇವಕೀರ್ತಿ ಮುನಯೇ ಕವಿ ವಾದಿ ವಾಗ್ಮಿನೇ[೧೩] ಎಂದು ಬರುತ್ತದೆ. ದೇವಕೀರ್ತಿ ಮುನಿಯು ಕತ್ತಲೆಯೆನ್ನುವ ಬೌದ್ಧೋಗ್ರವಾದಿಗಳನ್ನು ನಿವಾರಿಸುವ ಸೂರ್ಯನಾಗಿದ್ದನು.

ಗೋಪಣನ್ದಿ ಮುನೀಂದ್ರರನ್ನು ಶಾಸನದಲ್ಲಿ[೧೪] ಹೀಗೆ ವರ್ಣಿಸಲಾಗಿದೆ. "ಮಲೆಯ[ದೆ] ಶಾಂಖ್ಯ ಮಟ್ಟವಿರು, ಭೌತಿಕ ಪೊಂಗಿ ಕಡಂಗಿ ಬಾಗದಿರ್ತೊ ಲತೊಲ ಬುದ್ಧ ಬೌದ್ಧಾ ತಲೆದೋಱದೆ ವೈಷ್ಣವಡಂಗುಡಂಗುವಾಗ್ಬಲದ ಪೊಡರ್ಪ್ಪುವೇಡಗಡ, ಚಾರ್ವಾಕ ಚಾರ್ವಾಕ ನಿಮ್ಮದರ್ಪಮಂ ಸಲಿಪನೆ ಗೋಪಣನ್ದಿ ಮುನಿಪುಂಗವನೆಂಬ ಮದಾನ್ಧ ಸಿನ್ಧುರಂ"

(ಸಾಂಖ್ಯ ಮಲೆಯದೆ ಮಡಗಿದ ಹಾಗೆ ಇರು, ಭೌತಿಕ (ವೈದಿಕ–ಪಂಚಭೂತಗಳಲ್ಲಿ ನಂಜಿಕೆಯಿಟ್ಟಿರುವ) ಸೊಕ್ಕಿನಿಂದ ಸಾಹಸ ತೋರಿಸಲು ಹೋಗಿ ಬಾಗಬೇಡ, ಬೌದ್ಧರೇ ನಿಮ್ಮ ತಲೆತೋರದೆ ತೊಲಗಿರಿ, ವೈಷ್ಣವ ಅಡಗು ಅಡಗು ನಿನ್ನ ವಾಗ್ಬಲದ ಹಿರಿಮೆಯನ್ನು ತೋರಿಸಬೇಡ, ಚಾರ್ವಾಕ ನಿಮ್ಮ ದರ್ಪವನ್ನು ಸಹಿಸುವನೆ ಗೋಪಣಂದಿ ಮುನಿಶ್ರೇಷ್ಠನೆಂಬ ಮದಿಸಿದ ಆನೆ). ಇದು ಜೈನಮುನಿಗಳೂ ಇತರ ಧರ್ಮದವರೊಂದಿಗೆ ಸಂಘರ್ಷಕ್ಕಿಳಿಯುತ್ತಿದ್ದುದನ್ನು ಸೂಚಿಸುತ್ತದೆ.

ಶೈವರು, ವೀರಶೈವರೂ ಬೌದ್ಧಧರ್ಮೀಯರ ಮೇಲೆ ದಾಳಿ ನಡೆಸಿದುದನ್ನು ಕಾವ್ಯಗಳು ದಾಖಲಿಸಿವೆ. ಪಾಲ್ಕುರಿಕೆ ಸೋಮನಾಥನ 'ತೆಲುಗು ಪಂಡಿತಾರಾಧ್ಯ ಚರಿತ್ರೆಯಲ್ಲಿ ಪಂಡಿತಾರಾಧ್ಯರಿಗೂ ವೆಂಗಿಮಂಡಳದ ಚೋಳನ ಆಸ್ಥಾನದಲ್ಲಿದ್ದ ಬೌದ್ಧಗುರುವಿಗೂ ನಡೆದ ವಾದದ ವಿವರಗಳಿವೆ. ಅಲ್ಲಿ ಪಂಡಿತಾರಾಧ್ಯರ ಶಿಷ್ಯರು ಬೌದ್ಧರ ಮೇಲೆ ದಾಳಿ ಮಾಡಿದ ವರ್ಣನೆ ಹೀಗಿದೆ.

*ಕೆಡೆ ಕೆಡೆ ಶಿವದ್ರೋಹಿ ಎನುತೆ ಸುರಗಿರಿದು ಮ*
*ತ್ತೊಡಲ ಸೀಳ್ದರ್ ಮುನ್ನೆ ದೀಪಿಕಾಸ್ತಂಭಮಂ*
*ಕಡುಪಿನಿಂ ತಾ ಸೀಳ್ದವೋಲ್ ಪೂಪದಂತಮಂ ವೀರಭದ್ರಂ ಕೋಪದಿಂ*
*ಉಡಿದವೋಲ್ ತದ್ಬೌದ್ಧರದನಮಂ ಕಿಳ್ತರಾ*

*ಕಡುಗಲಿಗಳವರಂದು ವೀರೇಶನಧಟಿನಿಂ*
*ಪೊಡಕರಿಸುವಗ್ನಿ ರಸನೆಗಳ ಕಿಳ್ತಿಕ್ಕಿದಂತವನ ಜಿಹ್ವೆಯಂ ಕಿಳ್ತರು ॥*

ಗೋವೆಯ ಭಾಗದಲ್ಲಿ ಕ್ರೈಸ್ತರಿಂದ ಹಿಂದೂ ದೇವಾಲಯಗಳು ನಾಶವಾಗಿರುವುದನ್ನು ಅಲ್ಲಿಯ ದಾಖಲೆಗಳೇ ನಿರೂಪಿಸುತ್ತವೆ. ಪ್ರಾಚೀನ ಮತ್ತು ಪ್ರಮುಖ ದೇವಾಲಯವಾದ ಸಪ್ತಕೋಟೇಶ್ವರ ದೇವಾಲಯವನ್ನು ಕ್ರೈಸ್ತರು ನಾಶ ಮಾಡುತ್ತಾರೆ. ಇದೇ ರೀತಿ ಇತರ ದೇವಾಲಯಗಳು ಹಿಂದೂಗಳು ಕ್ರೈಸ್ತರ ಹೊಡೆತಕ್ಕೆ ಸಿಕ್ಕು ನಾಶವಾಗಿ ಹೋಗಿದ್ದಾರೆ.

ಈ ಘಟನಾವಳಿಗಳನ್ನು ಗಮನಿಸಿದಾಗ ಧರ್ಮ ಸಂಘರ್ಷಗಳು ಪ್ರಾಚೀನ ಕಾಲದಿಂದಲೇ ಘಟಿಸುತ್ತ ಬಂದಿವೆ. ಇದಕ್ಕೆ ಕಾರಣ ಮೂಲಭೂತವಾದ ತಮ್ಮ ಧರ್ಮವೇ ಶ್ರೇಷ್ಠ, ತಮ್ಮ ದೈವವೇ ಶ್ರೇಷ್ಠ ಎಲ್ಲರೂ ತಮ್ಮ ಧರ್ಮವನ್ನೇ ಅನುಸರಿಸ ಬೇಕೆಂಬ ಮನುಷ್ಯನ ಸಂಕುಚಿತ ಭಾವನೆ. ಪರಧರ್ಮಗಳನ್ನು ಸಹಿಸಿಕೊಳ್ಳದಂಥ ಭಾವನೆಗಳೇ ಧರ್ಮಸಂಘರ್ಷಕ್ಕೆ ಕಾರಣ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *K I II* No. 10, ಕ್ರಿ.ಶ. ೧೦೮೦ ಲಕ್ಕುಂಡಿ, ಗದಗ (ತಾ।) ಜಿಲ್ಲೆ.

೨. *SII XVIII* No. 246, ಕ್ರಿ.ಶ. ೧೨೬೩, ಚೌಡದಾನಪುರ, ರಾಣಿಬೆನ್ನೂರು (ತಾ) ಹಾವೇರಿ.

೩. *EI XV* 23, ಕ್ರಿ.ಶ. ೧೦೭೧, ಗವರವಾಡ, ಗದಗ (ತಾ॥) ಗದಗ (ಜಿ॥)

೪. *Inscriptions from Kolhapur District* No. 27, ಕ್ರಿ.ಶ. ೧೧ನೆಯ ಶತಮಾನ, ಕೊಲ್ಹಾಪುರ.

೫. *EI XV* 23, ಕ್ರಿ.ಶ. ೧೦೭೧, ಗವರನಾಡ, ಗದಗ (ತಾ) ಜಿ.

೬ *SII XI* (ii) 52, ಲಕ್ಕುಂಡಿ, ಗದಗ ತಾ, ಜಿ.

೭. *Epigraphia Andhrica* Vol. I. p. 46-47. "Kumara Lingayya who succeeded on the death of his father to his office, seems to have been a devout and aggressive Veerasaiva. It is stated in his Epigraph at Srisailam cited above that he bestowed agrahara villages on Jangama Brahmans covered Eves of the mukha mandapa of the temple with brilliant gold, granted many ornaments to the God and villages to the mahajans (brahmanas) who resided in Srisailam and cut off the heads of the svetambara (Jains)".

೮. *SII XX* 391, ಕ್ರಿ.ಶ. ೧೫೩೮, ಲಕ್ಷ್ಮೇಶ್ವರ, ಶಿರಹಟ್ಟಿ (ತಾ॥) ಧಾರವಾಡ (ಜಿ) ಹಾವೇರಿ ಜಿ॥)

೯. ಸಾಲೆತೊರೆ (ಬಿ.ಎ.) : **ಏನ್ಸಿಯಂಟ್ ಕರ್ನಾಟಕ** ಸಂ. I ಶೈವಿಜಂ.

೧೦. *E.C.* II, ಶ್ರವಣಬೆಳ್ಗೊಳ ೪೭೫, ಕ್ರಿ.ಶ. ೧೩೬೮, ಶ್ರವಣಬೆಳ್ಗೊಳ, ಹಾಸನ (ಜಿ॥)

೧೧. *SII XV* 695, ಸು. ೧೬ನೆಯ ಶತಮಾನ ಮುಳುಗುಂದ, ಗದಗ ತಾ, ಜಿ.

೧೨. YASEEN (Quddusi CM) and Jahgirdar (sitaram) Eds : *Persian Arabic and urdu Inscriptions of Karnataka*, (ಬೀದರ, ಕ್ರಿ.ಶ. ೧೬೭೧ ಜುಲೈ ೨೨), *Hampi : Kannada university.*

೧೩. ವಸಂತಕುಮಾರ (ತಾಳ್ತಜೆ) : ೧೯೮೮., **ಕರ್ನಾಟಕದಲ್ಲಿ ಬೌದ್ಧ ಸಂಸ್ಕೃತಿ**, ಬೆಂಗಳೂರು.

೧೪. *EC II* ಚಿಕ್ಕಬೆಟ್ಟ ೭೦, ೧೧೬೩, ಶ್ರವಣಬೆಳ್ಗೊಳ, ಹಾಸನ.

೧೫. *E.C. II*, ಚಿಕ್ಕಬೆಟ್ಟ ೭೯, ಸು. ಕ್ರಿ.ಶ. ೧೨ನೇ ಶತಮಾನ : ಕತ್ತಲೆ ಬಸದಿಯ ಬಾಗಿಲ ಬಲಕಡೆ ಕಂಬ, ಶ್ರವಣಬೆಳಗ್ಗೊಳ, ಹಾಸನ (ಜಿ॥)

ಶ್ರೀಮತಿ ಇಂದಿರಾಹೆಗ್ಗಡೆ*

# ಬೆಳ್ಮಣ್ಣಿನ ತಾಮ್ರ ಶಾಸನ : ಒಂದು ಸಾಂಸ್ಕೃತಿಕ ನೋಟ

ಪಡುಬಿದ್ರಿಯಿಂದ ಕಾರ್ಕಳಕ್ಕೆ ಹೋಗುವ ರಸ್ತೆಯಲ್ಲಿ ಬೆಳ್ಮಣ್ಣು ಪೇಟೆ ಇದೆ. ಪೇಟೆಯಿಂದ ಸುಮಾರು ಮೂರು ಕಿಲೋಮೀಟರ್ ಒಳಗೆ ಗುಡ್ಡ ಇಳಿದು ಭತ್ತದ ಬಯಲು ಗದ್ದೆಗಳನ್ನು ದಾಟಿದರೆ ಕಾಣುವ ಎತ್ತರವಾದ ಬೆಟ್ಟ-ಕಾನನದ ಮಧ್ಯಭಾಗದಲ್ಲಿ ವಿಶಾಲವಾದ ದುರ್ಗಾ ದೇವಾಲಯವಿದೆ. ಈ ದೇಗುಲದಲ್ಲಿ ಇಮ್ಮಡಿ ಆಳುವರಸನ ಕ್ರಿ.ಶ. ಸುಮಾರು ೮ನೇ ಶತಮಾನದ ತಾಮ್ರ ಶಾಸನ ೧೮"X೧೮" ಅಳತೆಯ ಕಲ್ಲಿನ ಪೆಟ್ಟಿಗೆಯಲ್ಲಿ ಇತ್ತು. ಕಲ್ಲಿನ ಪೆಟ್ಟಿಗೆ ಈಗಲೂ ಇದೆ. ತುಳುನಾಡಿನ ಅನೇಕ ಪಾಡ್ದನಗಳು ಕಲ್ಲಿನ ಕಲೆಂಬಿಯನ್ನು ಪ್ರಸ್ತಾಪಿಸುತ್ತವೆ.

ಈ ಬೆಟ್ಟದ ದೇವಾಲಯಕ್ಕೆ ಪೂರ್ವ ಪಶ್ಚಿಮ ದಿಕ್ಕಿನಿಂದ ಮೆಟ್ಟಲು ರಚಿಸಲಾಗಿದೆ. ದೇವಸ್ಥಾನದ ಮಗ್ಗುಲಲ್ಲಿ ಪೂರ್ವದಿಂದ ಪಶ್ಚಿಮಕ್ಕೆ ಇಳಿಜಾರಾದ ರಸ್ತೆ ಇದೆ. ಇಲ್ಲಿಯ ಗರ್ಭಗುಡಿ ಬಹಳ ಪುರಾತನ. ಮಾಡಿನವರೆಗೂ ಮುರಕಲ್ಲಿನ ರಚನೆಯಾಗಿರುವುದು ಇಲ್ಲಿನ ವಿಶೇಷ. ಹಳೆ ಕಾಲದ ಸುಣ್ಣ ಬೆಲ್ಲದ ಮಿಶ್ರಣದ ಲೇಪದ ಮಧ್ಯೆ ಮುರಕಲ್ಲುಗಳು ಗೋಚರಕ್ಕೆ ಬರುತ್ತವೆ.

ಇಲ್ಲಿ ಮೂಲತಃ ಹುತ್ತಕ್ಕೆ ಆರಾಧನೆ ಮಾಡಲಾಗುತ್ತಿತ್ತು ಎಂಬುದಕ್ಕೆ ಆಧಾರಗಳಿವೆ. ತುಳುವರ ಆಲಡೆ ಮೂಲ ತಾನ ಆದಿ ಆಲಡೆಯಲ್ಲಿ ಇರುವಂತಹ ಹುತ್ತ ಮತ್ತು ನಾಗ ಬಿರ್ಮೆರ್ (ಬ್ರಹ್ಮ) ಲಿಂಗ (ಪುಟ್ಟ ಲಿಂಗ) ಪ್ರಧಾನ ಗುಡಿಯ ಬಲ ಭಾಗದಲ್ಲಿ ಇದೆ. ಒಂದು ದೊಡ್ಡ ಹುತ್ತ, ಅದರ ಬಳಿ ಮತ್ತೊಂದು ಸಣ್ಣ ಹುತ್ತ ಇದೆ. ಇದರ ಮಟ್ಟ ಪ್ರಧಾನ ಗುಡಿಗಿಂತ ಸುಮಾರು ೬ ಅಡಿ ತಳಭಾಗದಲ್ಲಿ ಇದ್ದು ಇಳಿಯಲು ಮೆಟ್ಟಿಲುಗಳಿವೆ. ಹುತ್ತದ ಸುತ್ತ ಗೋಡೆಕಟ್ಟಿ ಮುಚ್ಚಲಾಗಿದೆ. ಹಾವು ಓಡಾಡಲು ಗೋಡೆಗಳ ಕಲ್ಲುಗಳ ಮಧ್ಯೆ ಬಿಲಗಳ ರಚನೆ ಇದೆ. ಈ ಹುತ್ತವನ್ನು 'ಶಾಸ್ತಾವು' ಎಂದು ಕರೆಯುತ್ತಾರೆ. ನಂದಿಗೋನ, ರಕ್ತೇಶ್ವರಿ ಕ್ಷೇತ್ರಪಾಲ-ಮುಂತಾದ ಪರಿವಾರ ದೈವಗಳು, "ನಾಗಬಿರ್ಮೆರ್-ಶಾಸ್ತಾವು ಗುಂಡ'ಕ್ಕೆಗೆ ಎದುರಾಗಿ ಕೋಣೆಯಲ್ಲಿ ಇವೆ. ಶಿಲಾಶಾಸನ ಒಂದನ್ನು ಒಂದು ದೈವಕ್ಕೆ ಸಂಕೇತಿಸಿದ್ದಾರೆ. ಪ್ರಧಾನ ಗರ್ಭಗುಡಿಯ ದೇವಿಯನ್ನು ದುರ್ಗಾಪರಮೇಶ್ವರಿ ಎಂದೂ ಮಹಿಷಮರ್ದಿನಿ ಎಂದೂ ಕರೆಯುತ್ತಾರೆ.

ತುಳುವರ ಕುಲದೈವ ಬಿರ್ಮೆರ್ ದೈವ ಅರ್ಧನಾರಿ ಶಕ್ತಿ. ಸೊಂಟದ ಕೆಳಭಾಗದಲ್ಲಿ ಹೆಣ್ಣು. ಮೊಗಕ್ಕೆ ಮೀಸೆ ಇದೆ. ಕೆಲವು ಕಡೆ ಬಿರ್ಮೆರನ್ನು ಅಮ್ಮ ಎಂದೇ ಕರೆಯುತ್ತಾರೆ. "ಅತಿನುತೆ ವಿನ್ಧ್ಯವಾಸಿನಿ ಮಹಾಮುನಿ ಸೇವಿತೆ ಬ್ರಹ್ಮ ಮುಖ್ಯರಾನನ್ ಕ್ಷಿತಿಪತಿ ಕಾರ್ವೊಳಕ್ಕೆ ನಿಜಧರ್ಮಪರರ್ಕ್ಕ ಳಪ್ಪೋರಾನ್ ಕೃತು ಶತಮಶ್ವಮೇಧ ಫಲ ಮೆಯ್ದುಗೆ....ಪಾಣ್ಡ್ಯ ಕುಲರ್ಕಳಿನ್ತತಿಶಯ ಮಾಗಿ ನಿಲ್ಕೆ ಧರ್ಮಂ ಜಗದುಳ್ ಆದಿತ್ಯನುಳ್ಳಿನಂ ಯಸ್ಯ ಯಸ್ಯ ಯಸ್ಯ ಯದಾ ಭೂಮಿ ತಸ್ಯ ತಸ್ಯ ತಥಾ ಫಲಂ" *(ರಮೇಶ ಕೆ.ವಿ. ಮತ್ತು ಎಂ.ಜೆ ಶರ್ಮ: ತುಳುನಾಡಿನ ಶಾಸನಗಳು ಸಂ. ೩)* ಎಂದು ಆಕೆ ಎರಡನೆಯ ಆಳುಪ ಅರಸನಿಂದ ಸ್ತುತಿಸಲ್ಪಟ್ಟಿದ್ದಾಳೆ. ತುಳು ದೈವ ನುಡಿಗಟ್ಟಿನಲ್ಲಿ ಹೇಳುವಂತೆ 'ಸೂರ್ಯಚಂದ್ರರಿರುವ ವರೆಗೆ ಧರ್ಮವನ್ನು ಕಾಯುತ್ತೇನೆ' ಎಂಬಂತಹ ಮಾತೂ ಇಲ್ಲೂ ಉಲ್ಲೇಖವಾಗಿದೆ. ತುಳುವರ ಕುಲದೈವ-ಮೂಲತಾನ ಆದಿ ಆಲಡೆಯೂ ಆಗಿದ್ದಿರಬಹುದಾದ ಈ ಕ್ಷೇತ್ರದಲ್ಲಿ ಇರುವ ಹುತ್ತದಸ್ಥಾನದಲ್ಲಿ ಮುಂದೆ ವಿಗ್ರಹ ಸ್ಥಾಪನೆಯಾಗಿರಬೇಕು. ಎರಡನೆಯ ಆಳುವರಸನ ಕಾಲಕ್ಕೆ ಸ್ಥಳೀಯ ಸಂಸ್ಕೃತಿಯ ಮೇಲೆ ವೈದಿಕ ಸಂಸ್ಕೃತಿಯ ಪ್ರಭಾವ ಆಗಿದೆ.

ತುಳುನಾಡಿನಲ್ಲಿ ಅನೇಕ ಕಡೆ ಹುತ್ತ ಇರುವ ಆಲಡೆ ಮೂಲತಾನಗಳು ದುರ್ಗಾಲಯಗಳಾಗಿ ಪರಿವರ್ತನೆ ಆಗಿವೆ. ಬೆಳ್ಮಣ್ಣು ದುರ್ಗಾಪರಮೇಶ್ವರಿ ಕೂಡಾ ಮೂಲತಃ ಸ್ಥಳೀಯ ಸಂಸ್ಕೃತಿಯ ಶಕ್ತಿದೈವಗಳನ್ನು ಒಳಗೊಂಡ ಆದಿ ಆಲಡೆಯಾಗಿದ್ದು ಮುಂದೆ ಆಗಮಸಂಪ್ರದಾಯಕ್ಕೆ ಪರಿವರ್ತನೆಯಾಗಿ ದುರ್ಗಾಲಯವಾಗಿರಬೇಕು. ಈ ದೇವಸ್ಥಾನಕ್ಕೆ ಸಂಬಂಧಪಟ್ಟ ಗುತ್ತು ಮನೆಯನ್ನು 'ಬಿರ್ಮೆರ್ ಗುತ್ತು' 'ದೈವಸ್ಥ'

* ೬, ಕೃಷ್ಣಾ ರೆಸಿಡೆನ್ಸಿ, ಅಮರಜ್ಯೋತಿ ನಗರ, ೪ನೆಯ ತಿರುವು, ವಿಜಯನಗರ, ಬೆಂಗಳೂರು - ೫೬೦ ೦೪೦.

ಎಂಬುದಾಗಿ ಕರೆಯುತ್ತಾರೆ. ಬಿರ್ಮೆರ್ ತುಳುವರ ಕುಲ ದೈವ. ನಾಗನ ಶಕ್ತಿರೂಪ! ಈಗ ಗುತ್ತು ಪಾಳು ಬಿದ್ದಿದೆ. ಗುತ್ತಿನಲ್ಲೂ ಇಲ್ಲೂ ಪಂಚದೈವಗಳಿವೆ. ಆಲಡೆ ತಾಣಗಳಲ್ಲಿ ಇರುವಂತೆ ಕಂಬುಲು ಗದ್ದೆಯೂ ಈ ದೇವಾಲಯದ ಆಡಳಿತ ಮನೆಗಳಿಗೆ ಇದೆ.

ಒಂದು ಕುಟುಂಬ ಪರಂಪರೆಯೊಂದರ 'ತಮ್ಮ ಹಿರಿಯರು ಬದುಕಿ ಬಾಳಿದ, ಅವರು ನಂಬಿದ ಮೂಲ ದೈವಗಳ ನೆಲೆಯನ್ನು ಮೂಲತಾನ ಆದಿ ಆಲಡೆ' ಎಂದು ತುಳುವರು ಇಂದಿಗೂ ನಂಬುತ್ತಾರೆ. ಇಂತಹ ಕ್ಷೇತ್ರಗಳ ಬಳಿ ಫಲವತ್ತಾದ ಭತ್ತದ ಗದ್ದೆಗಳೂ ನಾಗಾರಾಧನೆಯ ಹಿನ್ನಲೆ ಇರುವ ಕಂಬುಲ ಗದ್ದೆಗಳೂ ಇದ್ದು ಮೂಲತಃ ಇವು ನಾಗ ಕ್ಷೇತ್ರ ಆಗಿರುತ್ತವೆ.

ಇಂತಹ ಮೂಲತಾನ ಆಲಡೆ ಕ್ಷೇತ್ರಗಳು ಕಾಲಾನುಗತಿಯಲ್ಲಿ ಬೇರೆ ಬೇರೆ ಕಡೆ ಬೇರೆ ಬೇರೆ ಹೆಸರುಗಳಿಂದ ಕರೆಸಿಕೊಂಡಿದೆ. ಬೆಳ್ಮಣ್ಣಿನ ಈ ಕ್ಷೇತ್ರ ಕೂಡಾ ಈಗಲೂ ಹಲವು ತುಳುವ ಕುಟುಂಬಗಳಿಗೆ ಆಲಡೆ ಮೂಲಸ್ಥಾನವಾಗಿದೆ. ಕೊರಗರು, ಮನ್ಸರು ಮಾತ್ರವಲ್ಲದೆ ಇನ್ನೂ ಅನೇಕರು ಈಗಲೂ ಇಲ್ಲಿಯ ಮೂಲತಾನ ದೈವಕ್ಕೆ ಕಡ್ಡಾಯ ಹರಕೆ ಒಪ್ಪಿಸಲು ಬರುತ್ತಾರೆ. ಆದಿಯಲ್ಲಿ ಇಲ್ಲಿಯ ಮೂಲ ಹುತ್ತವನ್ನು ಆರಾಧಿಸುತ್ತಿದ್ದವಳು ಕೊರಗತಿ ಎನ್ನುತ್ತಾರೆ. ಆಶ್ಚರ್ಯವೆಂದರೆ ತುಳುನಾಡಿನ ಎಲ್ಲಾ ಶಕ್ತಿ ಕೇಂದ್ರಗಳು– ಅದು ಈಶ್ವರ ದೇವಾಲಯವಾಗಿರಲಿ ಅಥವಾ ದುರ್ಗಾಲಯವಾಗಿರಲಿ ಮನ್ಸ ಅಥವಾ ಅವರ ಸಮಾನ ವರ್ಗವಾದ ಕೊರಗರಿಗೆ ಒಲಿದುದು. ಅರ್ಥಾತ್ ಅವರೇ ಆರಾಧನೆ ಮಾಡಿ ಬಂದದು. ಇವರ ಸಮಾನ ಜಾತಿಯ ಬಾಕುಡರ ಪಾಡ್ದನವು ನಾಗರಹಾವು ಮಗುವಿನ ರೂಪದಲ್ಲಿ ಒಲಿದು ತನ್ನನ್ನು 'ಕಲ್ಲುಹಾಕಿ' (ಕಲ್ಲನ್ನು ಇಟ್ಟು ಅದನ್ನು ತನ್ನ ಹೆಸರಲ್ಲಿ ಪೂಜಿಸಲು) ನಂಬಲು ಹೇಳಿ ಸರ್ಪರೂಪ ಧರಿಸಿ ಮಾಯವಾಗುತ್ತದೆ. ಸಾಮಾನ್ಯವಾಗಿ ಎಲ್ಲಾ ಶಕ್ತಿಕೇಂದ್ರಗಳಲ್ಲಿ ಮೂಲತಃ ಇದ್ದುದು ಆಕಾರ ಇಲ್ಲದ ಮುರಕಲ್ಲು, ಪಾದೆಕಲ್ಲು ಹಾಗೂ ಹುತ್ತದ ರೂಪ.

ಇಲ್ಲಿಯ ಜಾತ್ರೆಯೂ ವಿಶಿಷ್ಟವಾಗಿದೆ. ವಾರ್ಷಿಕ ಆರಾಟ (ಜಾತ್ರೆಯಲ್ಲಿ) (ಮಾಯಿ ಹೋಗಿ ಸುಗ್ಗಿಬರುವ ಸಂಕ್ರಾಂತಿಯ ನಾಲ್ಕನೆಯ ದಿನ ಜಾತ್ರ ಆರಂಭ) ದೇವಾಲಯದ ಮುಂಭಾಗದ ಮೆಟ್ಟಿಲ ಬಲಭಾಗದಲ್ಲಿ ನೇಮದ ಕೊಡಿಯಡಿ (ಈಗ ಶಾಶ್ವತ ಕೊಡಿಯಡಿ ಇದೆ) ರಚಿಸುತ್ತಾರೆ. ಒಳಗಿರುವ ಎಲ್ಲಾ ದೈವಗಳಿಗೆ ಕೋಲ ಇದೆ. ಬೆಳ್ಮಣ್ಣು ಮಹಾಲಿಂಗೇಶ್ವರ ದೇವಸ್ಥಾನದ ಬಳಿ ಜಳಕದ ಸ್ನಾನ ಮಾಡಿ ಮರಳುವ ದುರ್ಗೆಗೆ, ದೇವಸ್ಥಾನಕ್ಕೆ ಬರುವಾಗ ಚೆಂಡಿನ ಬಾಕಿಮಾರಿನಲ್ಲಿ ಈ ದೈವಗಳು ಮುಖಾಮುಖಿಯಾಗುತ್ತವೆ. ದೇವಿಯ ದೇವಸ್ಥಾನ ಪ್ರವೇಶಕ್ಕೆ ಪ್ರತಿರೋಧ ಒಡ್ಡುತ್ತವೆ ಈ ಶಕ್ತಿ ದೈವಗಳು.

ಜನವರಿ ತಿಂಗಳಲ್ಲಿ ಒಂದು ದಿನದ ಮಂಡಲ ಪೂಜೆ ಇದೆ. ಇದನ್ನು 'ಅಟ್ಟೆ ಕಟ್ಟುನು' ಎನ್ನುತ್ತಾರೆ. ದೇವರ ಉತ್ಸವಮೂರ್ತಿಯ ಸುತ್ತ ಪಾಂಬೊಡಿ ಎಂಬ ಕೆಂಪು ಬಟ್ಟೆಯ ದಂಡೆ ಕಟ್ಟುವ ಉತ್ಸವ ಇದು.

ತಾಮ್ರಶಾಸನದ ಪ್ರಕಾರ ಇಮ್ಮಡಿ ಆಳುವರಸನು ರಾಜ್ಯವಾಳುತ್ತಿದ್ದಾಗ 'ಮಹಾನಾಡು' ಎಂಬ ಸಭೆಯಲ್ಲಿ ಆಳುವರಸನೂ ಎರೆಯಪ್ಪರಸನೂ ಸ್ವತಃ ಹಾಜರಿದ್ದು ಸೂರ್ಯಗ್ರಹಣದಂದು ಶಿವಳ್ಳಿಯ ಸಭೆಗೆ ಅನ್ವಯಿಸುವಂತೆ ಕಟ್ಟು ಕಟ್ಟಳೆಗಳ ಮರ್ಯಾದೆಯನ್ನು ಬೆಳ್ಮಣ್ಣಿನ ಸಭೆಗೂ ಅನ್ವಯಿಸುವಂತೆ ಆಜ್ಞೆ ಹೊರಡಿಸುತ್ತಾನೆ. ಈ ಆಜ್ಞೆಯನ್ನು ಕಂತಾಪುರದ ಮಾಣಿ (ಈಗಿನ ಕಾಂತಾವರ) ಚೊಕ್ಕ ಪಾಡಿಯ ಬಟ್ಟರು (ಬಂಟರು) ಕಾಪಾಡಿಕೊಂಡು ಬರುವುದು.

ಈ ಶಾಸನದ ರಕ್ಷಕರು ೧ ಕಾಪು ಬೊಯ್ಯವರ್ಮ್ಮನುಂ (ಈಗಿನ ಕಾಪು ಪ್ರದೇಶ) ; ೨ ಬೇಳಾದಾ ನನ್ದನುಂ

೩ ಕುಳಿನೂರ ನಂದ ; ೪ ಸಾಂನ್ತೌರ ಮೀದಿನಿ (ಸಾಂತೂರು) ಮತ್ತು ಉರಪಣನು (*ಮಿವನ್ದಿರ್ಗೆ ಕಾಪು ಕಾವೂರ್ಗೆ ಅನನ್ಯ ಅಶ್ವಮೇಧ ಫಲಮಕ್ಕು ಶಿವಳ್ಳಿಗೆ ಪುಣ್ಯವರ್ಧ್ದನಕ್ಕೆ ಗೋಸಹಸ್ರ ಕೊಟ್ಟ ಫಲಮಕ್ಕುಂ ಇದನಳಿವೋರು ಬಕ್ರಬರ್ಪ್ಪೂರುಂ ಪಂಚಮಹಾ ಪಾತಕರಪ್ಪೋರ್....*) ಈ ಶಾಸನದಲ್ಲಿ ಬರುವ ಎಲ್ಲಾ ಊರುಗಳು ಬೆಳ್ಮಣ್ಣಿಗೆ ಹೊಂದಿಕೊಂಡೇ ಇವೆ.

ಬೇಲಾಡಿ, ಬೋಲ, ಬೆಳ್ಮಣ್ಣು ಇವು ಈ ಪರಿಸರದಲ್ಲಿ ಇರುವ ಸ್ಥಳನಾಮಗಳು. ಶಾಸನದಲ್ಲಿ ಬರುವ ಹೆಸರು. ಬೊಲ್ಯೊಟ್ಟು (ಬೆಳ್ಳಿಬೆಟ್ಟು) ಎಂಬ ಸ್ಥಾನವೂ ಸಾಂತೂರು ಮತ್ತು ಬೆಳ್ಮಣ್ಣಿನ ಮಧ್ಯೇ ಇದೆ. ಅಬ್ಬನಡ್ಕದಲ್ಲಿ ಕುಮಾರ, ಮಾಯವಾದ ಕುಮಾರ ಬೊಲ್ಯೊಟ್ಟಿನಲ್ಲಿ ಬಿಳಿಯ ಹುಂಜವಾಗಿ ನೆಲೆಯಾಗುತ್ತಾನೆ. (ನಾಗ ಮತ್ತು ಕೋಳಿ ಇಲ್ಲಿ ತುಳುನಾಡಿನ ಆರಾಧನೆಯಲ್ಲಿ ಜೊತೆಗೆ ಬರುತ್ತವೆ.) ಮುಂದೆ ಆತನ ತಾಯಿ–ಸಿರಿ ಆತನನ್ನು ಸೇರುತ್ತಾಳೆ ಎಂಬುದು ಪಾಡ್ದನ ಪಾಠ. ಬೇಲಾಡಿಯಲ್ಲಿ ಇದ್ದ ಜೈನರ ಮನೆ ಮುಂದೆ ಕಾಂತಾವರ ಬೀಡಿಗೆ ಸ್ಥಳಾಂತರವಾಗುತ್ತದೆ. ಶಾಸನದಲ್ಲಿ ಉಕ್ತವಾಗಿರುವ 'ಬೇಳ' ಇವುಗಳಲ್ಲಿ ಯಾವುದೂ ಆಗಿರಬಹುದು.ಇವು ಒಂದೇ ಪರಿಸರದಲ್ಲಿದೆ. ಬೇಲಾಡಿಯಲ್ಲೂ ಆದಿಮೂಲಸ್ತಾನ ಮತ್ತು ಕಂಬುಲಗದ್ದೆಗಳಿವೆ. ಅಲ್ಲಿ ಅರಮನೆಯ ಅಡಿಯೂ ಇದೆ. ಬಾಕಿಮಾರು ಗದ್ದೆಯ ಸಾಗುವಳಿಗೆ ಇಲ್ಲಿ ಪನಿಕುಲ್ಲುನು ಆಚರಣೆಯೂ ಇದೆ. ಬೆರ್ಮಸ್ಥಾನದ ನೀರು ಹರಿವ ತೋಡಿನ ಬಳಿ ಕಂಬುಲ ಗದ್ದೆ

ಇದೆ. ಅದರ ಕೆಳಗೆ ಇನ್ನೊಂದು ಕಂಬುಲ ಗದ್ದೆಯೂ ಇದೆ.

ಬೆಳ್ಮಣ್ಣು ನಂದಳಿಕೆಯನ್ನು ಸೇರಿಸಿರುವ ಒಟ್ಟು ನಾಲ್ಕು ಕರೆ ಬೆಳ್ಮಣ್ಣು ಪರಿಸರದಲ್ಲಿ ಇದೆ. ೧ ತಂತ್ರಿ ಕರೆ, ೨ ಸಕ್ರಾಯ ಕರೆ, ೩ ಮುಡ್ಕು ಕರೆ, ೪ ಬ್ರಹ್ಮಸಗತ್ತು ಕರೆ.

ಸ್ಥಳೀಯರು ನೀಡುವ ಮಾಹಿತಿಯಂತೆ ಬೋಲ, ನಂದಳಿಕೆ, ಕೆದಿಂಜೆ, ಸೂಡ, ಬೆಳ್ಮಣ್ಣು ಒಂದೇ ಆಗಿತ್ತು. ನಂದಳಿಕೆ ಸೀಮೆ ದೇವಸ್ಥಾನ ಆಗಿತ್ತು. ಸ್ಥಳೀಯರ ಪ್ರಕಾರ ಬೆಳ್ಮಣ್ಣಿಗೆ ಸೀಮೆ ಇಲ್ಲ. ನಂದಳಿಕೆ ಹೆಗ್ಗಡೆಯವರಿಗೂ ಚೌಟರಿಗೂ ಆದ ಕರಾರಿನಲ್ಲಿ (ಶಕ. ೧೪೫೦) ನಂದಳಿಕೆಯ ದೈವಗಳ ಪ್ರಸ್ತಾಪ ಮಾತ್ರ ಬರುತ್ತದೆ. ಚೌಟರ ಕ್ರಿ.ಶ.೧೪೬೫ರ ಆಮುಳಿಂಜೆಯ ಶಾಸನದ ಕೊನೆಗೂ 'ಈ ಶಾಸನದ ಆಡತಕ್ಕೆ ತಪ್ಪಿದವರುಳ್ಳರೆ ಪೊಳಲದೇವಿಯ ಪ್ರತಿಮೆಯನ್ನು ಛಿನ್ನ ಮಾಡಿದ ದೋಷ, ಕಪಿಲೆಯನು ಕಯ್ಯಾರೆ ವಧಿಸಿದ ದೋಷ' ಎಂಬ ಶಾಪ ವಾಕ್ಯ ಇದೆ. (ಜೈನ ಶಾಪ ವಾಕ್ಯ ಇಲ್ಲ. ಐಗಳು–ಪು ೪೪೨)ಅಲ್ಲದೆ ನಂದಳಿಕೆ ದೈವಗಳ ಪ್ರಸ್ತಾಪ ಇನ್ನೆರಡು ಶಾಸನಗಳಲ್ಲಿ ಉಲ್ಲೇಖವಾಗಿದೆ. ಕ್ರಿ.ಶ.೧೪೪೩ರ ಕಾರ್ಕಳ ತಾಲೂಕಿನ ಉದ್ಯಾವರ ಶಾಸನ –ನಂದಳಿಕೆಯ ದೈವಂಗಳು. (SII. Vol.VII. no. 295) ಕ್ರಿ.ಶ. ೧೪೯೯ರ ಉಡುಪಿ ತಾಲೂಕಿನ ಕಾಪು ಶಾಸನ–ನಂದಳಿಕೆಯ ದೈವಂಗಳು. (SII.,Vol.,VII.,no,273) ಕುಡುಪು ಶಾಸನದಲ್ಲೂ 'ನಂದಳಿಕೆಯ ನಾಡು' ಎಂಬ ಉಲ್ಲೇಖ ಬರುತ್ತದೆ. ಈ ವಿಷಯ ಮುಂದೆ ಬರಲಿದೆ.

ಬೆ(ಬೊ)ಳ್ಮಣ್ಣು 'ಕರೆ' ಆದ ಕೂಡಲೆ ಬೋಲ ಆರಂಭವಾಗುತ್ತದೆ. ಬೋಲದ ಈ ಭಾಗವು ಪಿಲಿಯೂರು ಎಂಬ ಸ್ಥಳನಾಮವಾಗಿ ಪ್ರಸಿದ್ಧಿ ಪಡೆದಿದೆ. ಹೀಗಾಗಿ ಈ ಊರಿನ ಮೂಲಕ ಹರಿಯುವ ನದಿ ಪಿಲಿಯೂರು ನದಿ. ಅರಬ್ಬಿ ಸಮುದ್ರ ಸೇರುವ ಭಾಗದಲ್ಲಿ 'ಶಾಂಭವಿ ನದಿ' ಎಂದು ಹೆಸರು ಪಡೆದಿದೆ. ಪಿಲಿಯೂರಿನ ಪ್ರಾಚೀನ ಪಾಳೆಯ ಪಟ್ಟಿನ ಮನೆ ಪಿಲಿಯೂರು ಪರಾಡಿ.

ತುಳುನಾಡ ಸಿರಿಯ ಪಾಡ್ದನದಲ್ಲಿ ಬರುವ ಕ್ಷತ್ರಿಯ ಬೋಳದ ದೇಸಿಂಗರಸರು ಈ ಭಾಗದಲ್ಲಿ ಬೇಟೆಯಾಡಿದವರು. ಸಿರಿ ಗಂಡನ ಮನೆತೊರೆದು ದೇಶಾಂತರಿ ಆಗಿ ಕುಳಿನೂರು/ಕುಡುಂದೂರಿನ ಸಮೀಪ ಇರುವ 'ಅಬ್ಬನಡ್ಕ' ಬಳಿ ವಿಶ್ರಾಂತಿ ಪಡೆಯುತ್ತಾಳೆ.

ಈ ಶಾಸನದಲ್ಲಿ ಬೇಳದ ನಂದರ ಮತ್ತು ಕುಳಿನೂರ (ಈಗಿನ ಕುಡುಂದೂರು) ನಂದರ ಉಲ್ಲೇಖವಿದೆ. ನಂದಳಿಕೆಯ ತೆಂಕುಭಾಗದಲ್ಲಿ ಕುಳಿನೂರು ಈಗಿನ ಕುಡುಂದೂರು ಇದೆ. ಇಲ್ಲಿ ಪಿಲಿಚಾಮುಂಡಿ ದೈವ ಶಕ್ತಿ ಸ್ವರೂಪಿಣಿಯಾಗಿ ಜನರಿಂದ ಪೂಜೆ ಪಡೆಯುತ್ತಾಳೆ. ಇದು ಬೆಳ್ಮಣ್ಣು ದೇವಸ್ಥಾನದ ಮುಂಭಾಗದ ಕಾಡಿನಲ್ಲಿ ಒಂದು ಕಿಲೋಮೀಟರ್ ಒಳಗೆ ಇದೆ. ಕುಡುಂದೂರು ಗುತ್ತು ನಂದಳಿಕೆಗೆ ಸೇರುತ್ತದೆ. ಕುಡುಂದೂರು ನಂದರು (ಕುಳಿನೂರು) ಕುಂದರನ್ನು ಬಳಿಯವರು. ಇವರ ಆಲಡೆ ಮೂಲತಾನ ನಂದಳಿಕೆ. ಈಗ ಬೆಳ್ಮಣ್ಣು ದೇವಸ್ಥಾನದವರೆಗೆ ನಂದಳಿಕೆ ಗ್ರಾಮ. ದೇವಸ್ಥಾನ ನಂದಳಿಕೆ ಗ್ರಾಮದ ಒಳಗಿಲ್ಲ. ಬೆಳ್ಮಣ್ಣು ದೇವಸ್ಥಾನದ ಜಾತ್ರೆಯಲ್ಲಿ ದೇವರ ಸೇವೆಗಾಗಿ ನಡೆಯುವ ಚೆಂಡು ಆಟದ ಗದ್ದೆ ನಂದಳಿಕೆಯ ಗ್ರಾಮದ ಒಳಗೆ ಬರುತ್ತದೆ. ಬೋಲ ಗ್ರಾಮಕ್ಕೆ ಸೇರಿದ ಸಿರಿಯು ತಂಗಿದ್ದ ಅಬ್ಬನಡ್ಕದ ಬಳಿ ಈ ಗದ್ದೆ ಇದೆ. ಒಂದು ಭಾಗದಲ್ಲಿ ನಂದಳಿಕೆಯವರು, ಮತ್ತೊಂದು ಭಾಗದಲ್ಲಿ ಬೆಳ್ಮಣ್ಣು ಜನರು ಚೆಂಡಾಟ ಆಡುತ್ತಾರೆ. ಅಂದರೆ ನಂದಳಿಕೆ ಒಂದು ಪಾಳೆಯಪಟ್ಟು ; ಬೆಳ್ಮಣ್ಣು ಮತ್ತೊಂದು ಪಾಳೆಯಪಟ್ಟು, ಇಲ್ಲಿ ಇವರಿಬ್ಬರೂ ಎದುರಾಳಿಗಳು.

ಬೆಳ್ಮಣ್ಣು ಬೀಡು ಆ ಊರಿನ ಆಲಡೆ ಮನೆಯಾಗಿದೆ 'ಮುಡ್ಕುರಾಯ' ಎಂಬ ಬ್ರಾಹ್ಮಣರ ಮನೆ. ಈ ಮನೆಯವರು ಕೊರ ಕಂಬುಲದಿಂದ ಇಲ್ಲಿಗೆ ವಲಸೆ ಬಂದವರು. ಇಲ್ಲಿ ಕಂಬುಲ ಆಚರಣೆಗಳು ಇವೆ. ಇವರು ಪುರೋಹಿತರಲ್ಲ. ಆಡಳಿತಶಾಹಿಗಳು ನಂದಳಿಕೆ ಚಾವಡಿ ಅರಸರಿಗೆ ಪಟ್ಟ ಆಗುವಾಗ ಈ ಮುಡ್ಕುರಾಯರು ಜನಿವಾರ ಹಾಕುತ್ತಾರೆ. ನಂದಳಿಕೆ ಚಾವಡಿಯ ಎಲ್ಲಾ ವೈದಿಕ ಕಾರ್ಯಗಳು ಇವರ ನೇತೃತ್ವದಲ್ಲಿ ನಡೆಯುತ್ತದೆ.

ಸಿರಿ ಪಾಡ್ದನದ ಪ್ರಕಾರ ಬೆಳ್ಮಣ್ಣು ಬೀಡಿನಲ್ಲಿ ಸೊನ್ನೆಯ ತಂಗಿ ಗಿಂಡೆ ಹುಟ್ಟುತ್ತಾಳೆ. ಅವಳನ್ನು ಸಾಕುವುದು ಕಾನಬೆಟ್ಟಿನ ಚಂದಬನ್ನ ಪೆರ್ಗಡೆಯ ಅರಮನೆಯವರು. ಸಿರಿಯ ಮಗಳು ಸೊನ್ನೆ ನಂದಳಿಕೆಯ ಕಾನಬೆಟ್ಟಿನವಳು. ಗಿಂಡೆ ಬೆಳೆದುದು ಕಾನಬೆಟ್ಟಿನಲ್ಲಿ ಮುಂದೆ ಚಾವಡಿ ಮನೆ ಕಟ್ಟಿ ಅರಸರ ಶಾಪೆ ಚಾವಡಿಯಲ್ಲಿ ನೆಲಸುತ್ತದೆ. "ತನ್ನ ಅಮ್ಮ ಸರಸ್ವತಿ ಯವರಲ್ಲಿ ನಂದಳಿಕೆಯ ಈಗಿನ ಆಡಳಿತಮುಕ್ತೇಸರರಾದ ಸುಂದರರಾಮ ಹೆಗ್ಗಡೆಯವರು (ವಯಸ್ಸು ಸು.೮೦) ತಾಯಿಯು "ನಮ್ಮ ಮನೆಯಲ್ಲಿ ಸಂತತಿ ಮುಗಿಯಿತು ನಿಮ್ಮ ಮನೆಯ ಒಂದು ಹೆಣ್ಣು ಮಗುವನ್ನು ದತ್ತಕ್ಕೆ ಕೊಡಬೇಕು ಎಂದು ಕೇಳಿದ್ದರು" ಎನ್ನುತ್ತಾರೆ, ಮುಡ್ಕುಮನೆಯ ರಘುಪತಿಭಟ್ಟರು. ಇಲ್ಲಿಯ ಜಾನಪದ ಹಿನ್ನೆಲೆ ಹಾಗೂ ಸಾಂಪ್ರದಾಯಿಕ ಆಚರಣೆಯನ್ನು ನೋಡಿದರೆ ಮುಡ್ಕು ಮನೆ ಬ್ರಾಹ್ಮಣರಿಂದ ದತ್ತು ತರುವ ರೂಢಿ ಇದ್ದಿರಬೇಕು ಎಂದು ಭಾವಿಸಬಹುದು.

ಸೊನ್ನೆಯ ಗಂಡನ ಮನೆ ಕೆದಿಂಜೆ ಪರಾಡಿ. ಇಲ್ಲಿ 'ಮುಜಲೊಟ್ಟು ಬುರಿಬೆರ್ಮೆರ್ ಆಲಡೆ' ಇದೆ. ಇಲ್ಲಿ ಅಬ್ಬಗ

ದಾರಗ, ಕುಮಾರ ನಂದಿಗೋಲಲನ ರೆಕ್ಕಿಸಿರಿ ಇದೆ. ನಾಗ ಬೆರ್ಮೆರಿಗೆ ಲಿಂಗ ಇದೆ. ಕಲ್ಲುಬಂಡೆಗಳ ನಡುವೆ ಇರುವ ಪ್ರಾಚೀನ ಕ್ಷೇತ್ರ ಇದು. ಮೂಲತ ಈ ಪ್ರದೇಶದಲ್ಲಿ ಇದ್ದವರು ಸ್ಥಾನಿಕರು. ಇವರು ನಾಗಬಿರ್ಮೆರ್/ಶಾಸ್ತಾವು/ಸುಬ್ರಹ್ಮಣ್ಯ ಆರಾಧಕರು.

ಕೆದಿಂಜೆ ಗ್ರಾಮವೂ ನಂದಳಿಕೆಯ ಆಡಳಿತಕ್ಕೆ ಒಳಪಟ್ಟಿದೆ. ಮುಂದೆ ಬ್ರಿಟಿಷರ ಕಾಲದಲ್ಲಿ ಕೆದಿಂಜೆಯನ್ನು ನಂದಳಿಕೆಯಿಂದ ಪ್ರತ್ಯೇಕಿಸಿ ಕೆದಿಂಜೆಗೆ ಪಟೇಲತ್ವವನ್ನು ನೀಡುತ್ತಾರೆ.

ನಂದಳಿಕೆ ಆಲಡೆಯ ಆಮಂತ್ರಣ ಪತ್ರಿಕೆಯಲ್ಲಿ " ನಂದಳಿಕೆ ನಾಲ್ಕು ಸ್ಥಾನಗಳು' ಎಂದು ಬರೆಯುವುದು ಪದ್ಧತಿ. ಪರಂಪರೆಯಿಂದ ನಾಲ್ಕು ಸ್ಥಾನಗಳ ಬಗ್ಗೆ ಹೇಳುತ್ತಾರಾದರೂ ನಾಲ್ಕುನೆಯ ಸ್ಥಾನ ಯಾವುದೆಂಬ ಬಗ್ಗೆ ಸ್ಪಷ್ಟತೆ ಇಲ್ಲ. ಆದರೆ ಚೌಟರಿಗೂ ಕಾರ್ಕಳದ ಪಾಂಡ್ಯಪ್ಪರಸರಿಗೂ ಆದ ತಾಮ್ರಶಾಸನದಲ್ಲಿ (ಕ್ರಿ.ಶ.೧೫೪೩ರ ಶಾಸನ) ನಾಲ್ಕು ಸ್ಥಾನದ ಉಲ್ಲೇಖ ಇದೆ. 'ಇದಕ್ಕೆ ತಪ್ಪಿದರೆ ಗುಮುಖನಾಥನೆ, ಸುಲಲಕೀರ್ತಿ ಬಠಾರಕರಿಗೂ ನಂದಳಿಕೆ ನಾಲ್ಕೂ ಸ್ಥಾನದ ದೈವಗಳಿಗೂ ತಪ್ಪಿದವರು' ಎಂಬ ಉಲ್ಲೇಖವಿದೆ. (ಐಗಳು- ಪು. ೪೪೨)

**ನಾಲ್ಕು ಸ್ಥಾನಗಳು :** ೧ ನಂದಳಿಕೆ ಮೂಲತಾನ ೨ ಉರ್ಕಿದೊಟ್ಟು ಮೂಲತಾನ ೩ ಮುಜಲೊಟ್ಟು, ಬಹುಶಃ ೪ನೆಯದು ಬೆಳ್ಮಣ್ಣು ಇರಬಹುದು ಎಂಬುದು ನನ್ನ ಊಹೆ.

ನಂದಳಿಕೆಯ ಜಾತ್ರೆಯ ಮೊದಲು ಸುಮಾರು ಮಾರ್ಚ್ ೧೮ನೆ ತಾರೀಕಿಗೆ (ತುಳು: ಸುಗ್ಗಿಯ ಸಂಕ್ರಾಂತಿ ನಾಲ್ಕನೆಯ ದಿನ) ಬೆಳ್ಮಣ್ಣಿನಲ್ಲಿ ಜಾತ್ರೆ, ನಂತರ ಮುಜಲೊಟ್ಟು ಮೂಲಸ್ಥಾನಗಳಿಗೆ ಉತ್ಸವ. ಅನಂತರ (ಸುಗ್ಗಿ ಹುಣ್ಣಿಮೆಗೆ) ನಂದಳಿಕೆ ದೈವಂಗಳಿಗೆ. ಉರ್ಕಿದೊಟ್ಟು ಅಬ್ಬಗ ದಾರಗ ಸಿರಿಗಳಿಗೆ, ಕೆದಿಂಜೆಯ ನಾಗ ಬಿರ್ಮೆರ್‌ಗೆ ಕೊನೆಗೆ.

ಉರ್ಕಿದೊಟ್ಟು ಕ್ಷೇತ್ರದಲ್ಲಿ ಪಂಚ ದೈವಗಳು ಇಲ್ಲ. ಅಬ್ಬಗ ದಾರಗ ಶಿಲ್ಪಗಳಿಗೆ ಗರ್ಭಗುಡಿ ಇದೆ. ಕುಮಾರನನ್ನು ಸಂಕಲ್ಪಿಸಿ ಅವನಿಗೆ ಪೂಜೆ ಮಾಡುತ್ತಾರೆ.

ನಂದರ ಆಡಳಿತ ನಂದಳಿಕೆಯಿಂದ ನಂದಾವರದ ವರೆಗೆ ಎಂಬ ಹೇಳಿಕೆ ಇದೆ. ಈ ಕೆಳಗಿನ ಶಾಸನವೂ ಈ ಹೇಳಿಕೆಗೆ ಪೂರಕವಾಗುತ್ತದೆ.

"ನಂದಳಿಕೆಯ ನಾಡೊಳಗಣ ಕುಡುಪಿನ ಗ್ರಾಮ.) ಕಾಲ ಕ್ರಿ.ಶ. ೧೩೭೫ SII vol No 27. ಇದು ಮಂಗಳೂರಿನ ಕುಡುಪು ಸುಬ್ರಮಣ್ಯ ದೇವಸ್ಥಾನದ ಬಳಿ ದೊರೆತ ಶಾಸನ.

'ನಂದೆರೆ ಬದ್ಕ್ ನರಿನಾಯಿಗಾಂಡ್' ಎಂಬುದು ರೂಢಿಮಾತು. ನಂದರು ಚರ್ಮದ ನಾಣ್ಯ ಮಾಡಿದ್ದರೆಂದು ಪ್ರತೀತಿ. ನಂದ ವಂಶದ ಪಾಳೆಗಾರರು ಬಂಟ್ವಾಳ ತಾಲೂಕಿನ ಸಜಿಪ ಮಾಗಣೆಯನ್ನು ಆಳಿಕೊಂಡಿದ್ದರು. ಸಜಿಪದಲ್ಲಿ ನಂದ ವಂಶದ ಅರಸರು ಕಟ್ಟಿದ ನಂದಾವರ ದೇವಸ್ಥಾನವಿದೆ.

ನಂದಬಲ್ಲಾಳರ ಮಗಳಾದ ದಾರಕ್ಕದೇವಿಯನ್ನು ಬಂಗರಾಜನು ಮದುವೆಯಾಗಿದ್ದನು. (ಐಗಳು ಪು.೩೯೪.)

ನಂದರ ಬಳಿ (ವಂಶ)ಯ ಸುಮಾರು ಐದು ಕುಟುಂಬ ಗಳು (ಮನೆಗಳು) ನಂದರು ಆಳಿದ ಕಾಸರಗೋಡು ಪರಿಸರ ದಲ್ಲಿವೆ. ಬೋಳದಲ್ಲಿ ನಂದ ವಂಶದವರು ಸದ್ಯಕ್ಕೆ ಕಾಣಬರು ತ್ತಿಲ್ಲ. ಆದರೆ ಬೇಲಾಡಿ ಬಾವದವರು ಬಂದರನ್ನ ಬಳಿಯವರು. ನಂದರ ಬಳಿ ಮುಂದೆ ಬಂದರ ಬಳಿ ಆಗಿರಬಹುದೆ?

ಪಿ.ಎನ್. ನರಸಿಂಹಮೂರ್ತಿಯವರು ಸಂಪಾದಿಸಿದ ಕೊಳಕೆ ಇರ್ವತ್ತೂರು ಶಾಸನದ ಪ್ರಕಾರ ಕ್ರಿ.ಶ. ೧೩೫೫ರ ಕಾಲದಲ್ಲಿ ದೇಸಿಂಗರು ಬೋಲ ಪ್ರದೇಶದ ರಾಜ್ಯ ರಾಜಕೀಯದಲ್ಲಿ ಪ್ರಮುಖರಾಗಿದ್ದರು.

"ಬೋಳ ಗ್ರಾಮದಲ್ಲಿ ದೊರಕಿದ ವಿಜಯನಗರ ಚಕ್ರವರ್ತಿ ವೀರ ಬುಕ್ಕರಾಯನ ಕಾಲದ ಕ್ರಿ.ಶ. ೧೩೫೫ರ ಶಾಸನವೊಂದರಲ್ಲಿ ಬಾರ್ಕೂರು ರಾಜ್ಯಪಾಲ ಗೋಪರಸ ಒಡೆಯನು ಬೋಳದ ದೇಸಿಂಗರಸನಿಗೆ ಬರೆಸಿ ಕೊಟ್ಟ ಶಾಸನ ವಿಷಯದ ವಿವರ ಇದೆ. ಈ ಶಾಸನವು ಇಬ್ಬರು ಬಲ್ಲಾಳುಗಳ ಮೇಲೆ ತಪ್ಪಿನ ಆರೋಪಕ್ಕಾಗಿ ಬಹಿಷ್ಕಾರದ ಕಟ್ಟಳೆ ಆದುದನ್ನು ತಿಳಿಸುತ್ತದೆ. ರಾಜ್ಯಪಾಲ ಗೋಪರಸ ಒಡೆಯನು ಸ್ವತಃ ಬಹಿಷ್ಕಾರದ ಆಜ್ಞೆ ಹೊರಡಿಸಿದ್ದಾನೆ. ಇದಕ್ಕೆ ತಪ್ಪಿದವರು ಅರಮನೆ ಪೊಬ್ಬನ ತಲೆ ಅಯಿದು ಸಾವಿರ ಹೊಂನ ತಪ್ಪ ತೆರುವರು" ಎಂದೂ ಆಜ್ಞೆ ಮಾಡಲಾಗಿದೆ. (ಡಾ. ಪಿ.ಎನ್. ನರಸಿಂಹಮೂರ್ತಿ ಅವರ ಲೇಖನ, **ಇತಿಹಾಸ ದರ್ಶನ**, ಸಂ. ೧೮/೨೦೦೩)

ಸಿರಿಪಾಡ್ದನದಲ್ಲಿ ಕ್ಷತ್ರಿಯ ಅರಸರಾದ ಕರಿಯಕಾಸಿಂಗ ಬಿಳಿಯ ದೇಸಿಂಗರು ಬೋಲದರಸರು. 'ಬೋಲ ಬಾರಿ ಕ್ಷತ್ರಿಲು' ಅಂದರೆ ಬೋಲವನ್ನು ಆಳಿದ ಕ್ಷತ್ರಿಯರು.. ಕರಿಯ ಕಾಸಿಂಗ ಬಿಳಿಯ ದೇಸಿಂಗರು ಅಯೋನಿಜರು. ಬಿಳಿಯ ತಾವರೆಯಲ್ಲಿ ಹುಟ್ಟಿದವರು.

ಸಿರಿ ಗಂಡನ ಹಂಗನ್ನು ತೊರೆದು ತನ್ನ ಮಗು ಮತ್ತು ಸೇವಕಿ ದಾರುವಿನೊಂದಿಗೆ ಬೋಳದ ಅಬ್ಬನಡ್ಕ (ಬೆಳ್ಮಣ್ಣು ದೇವಾಲಯದ ಚೆಂಡಿನ ಗದ್ದೆ ಇಲ್ಲೇ ಇರುವುದು) ಕಾಡಿನಲ್ಲಿ ಕುಳಿತಾಗ ಅಲ್ಲಿಗೆ ಬೇಟೆಗೆ ಬಂದ ದೇಸಿಂಗರಸ ಸೋದರರು (ಕರಿಯ ಕಾಸಿಂಗರಾಯ ಬಿಳಿಯ

ದೇಸಿಂಗರಾಯ) ಊರ ಸಮಸ್ತರನ್ನು ಮುಂದಿಟ್ಟು ಆಕೆಯನ್ನು ತಮ್ಮ ಸೋದರಿಯೆಂದು ಸ್ವೀಕರಿಸಿ ಅರಮನೆಗೆ ಕರೆತರುತ್ತಾರೆ. ಮುಂದೆ ಕೋಟ್ಯಾಡಿ ಬಾಡಿನ ಕೊಡ್ಸರಾಳುವವನಿಗೆ ಆಕೆಯನ್ನು ಮದುವೆ ಮಾಡಿ ಕೊಡುತ್ತಾರೆ.

ಬೇಟೆಯ ಹುಚ್ಚಿನ ಕರಿಯ ಕಾಸಿಂಗ ಮತ್ತು ಬಿಳಿಯ ದೇಸಿಂಗರು ಬೇಟೆಯ ನಾಯಿ ಸಾಕುತ್ತಿದ್ದರು. ಒಮ್ಮೆ ಕೊಡ್ಸರಾಳುವ ಬೋಲಕ್ಕೆ ಬಂದಾಗ ನಾಯಿಯನ್ನು ಬೆನ್ನಟ್ಟಿಸಿದರಂತೆ. ಅಂದಿನಿಂದ ಬೋಲ ಪರಾಡಿಯಲ್ಲಿ ನಾಯಿ ಸಾಕಬಾರದಂತೆ. ಬೋಲ ಪರಾಡಿಯಲ್ಲಿ ಈಗಲೂ ನಾಯಿ ಸಾಕುವುದಿಲ್ಲ.

ಇಲ್ಲಿಯ ಐತಿಹ್ಯದ ಪ್ರಕಾರ ಅವರ ಪಾಂಗೊಲ್ಲ ಬಳಿಯ ಸಂತಾನ ನಿರ್ವಂಶ ಆದಾಗ ಇವರು ತಮ್ಮ ಬೋಲ ಅರಮನೆಯ ಆಸ್ತಿಯನ್ನು ಎರಡು ಭಾಗ ಮಾಡಿ ಒಂದು ಭಾಗವನ್ನು ಏಣಗುಡ್ಡೆಯ ತಮ್ಮದೇ ಪಾಂಗೊಲನ್ನ ವಂಶದವರಿಗೆ ನೀಡುತ್ತಾರೆ. ಮತ್ತೊಂದು ಭಾಗವನ್ನು ಗೌಡಸಾರಸ್ವತರಿಗೆ ನೀಡುತ್ತಾರೆ. ಬೋಳ ದೇವಸ್ಥಾನದ ಅಧಿಕಾರವನ್ನು ಪಾಂಗೊಲನ್ನ ಬಳಿಯವರಿಗೆ ನೀಡುತ್ತಾರೆ. ಅರಮನೆ ಬಿದ್ದು ಹೋಗಿ ಅರಮನೆಯ ಬಳಿ ಪಾಂಗೊಲನ್ನ ಬಳಿಯವರು ಮನೆ ಕಟ್ಟುತ್ತಾರೆ. ಅವರೇ ಬೋಲ ಪರಾಡಿಯವರು. ( ಪರ+ಅಡಿ=ಹಳೆಹಡಿ)

"ಕರಿಯ ಕಾಸಿಂಗ ಬಿಳಿಯ ದೇಸಿಂಗ ಬೇಟೆಗೆ ಹೋಗುತ್ತಾರೆ. ಬೋಂಟೆಯ ಹೊಸ ಕಾಡಿನಿಂದ ಮೂರು ಮೈಲು ದೂರ ಪಾಲಿಂಗೇರೆ ಬಾಕಿಮಾರಿನಲ್ಲಿ ಓಡುವ ಸದ್ದು ಕೇಳುತ್ತದೆ. ಜಿಂಕೆಯ ಓಟವೆಂದು ಬಗೆದು ಹೊಸ ಕಾಡಿನಿಂದ ಪಾಲಿಗೆರೆ ಬಾಕ್ಯಾರಿಗೆ ಬಾಣ ಬಿಡುತ್ತಾರೆ. ಆದರೆ ಅದು ಜಿಂಕೆಯಾಗದೆ ಕಾಮಧೇನು ಹಸು ಆಗಿತ್ತು. ಗೋವು ಕೊಂದ ಪಶ್ಚತ್ತಾಪಕ್ಕೆ ಬಾಕ್ಯಾರಿನಲ್ಲಿ ಗೋವು ಕಲ್ಲು ನಟ್ಟರು. ಪಾಪ ಪರಿಹಾರಕ್ಕೆ ಕಾಶಿಗೆ ಹೋದರು ಈಗ ಪರಾಡಿಯಲ್ಲಿದ್ದ ಸಂಸಾರ ಊರು ಬಿಟ್ಟು ಬಂದಿರುತ್ತದೆ. ಆಗ 'ದೇಸಿಂಗರಸರು ನಾವು ಬರುವವರೆಗೆ ನೀವು ದೇವಸ್ಥಾನದ ಆಡಳಿತ ನೋಡಿಕೊಳ್ಳಬೇಕೆಂದು ಹೇಳಿದರು." (ಐತಿಹ್ಯ-ಹೇಳಿದವರು ಬರೆ ಬೈಲು ಬಾಬು ಜಾತಿ ನಲ್ಕೆ ಪ್ರಾಯ ಸು. ೬೦)

ಬೋಲದಲ್ಲಿ ಸೋಮನಾಥ ದೇವಸ್ಥಾನ 'ರೆಕ್ಕೆಸಿರಿ ನೇಲೆ'. ಕೆಲವು ತುಳು ಕುಟುಂಬಗಳಿಗೆ ಮೂಲಸ್ಥಾನ. ಮೂಲಸ್ಥಾನಕ್ಕೆ ಬರುವವರು ಹೆಚ್ಚಾಗಿ ಸ್ಥಳೀಯವಾಗಿ 'ದಿಕ್ಕ' ಎಂದು ಕರೆಸಿ ಕೊಳ್ಳುವ ಅಸ್ಪೃಶ್ಯರು. ಬೇರೆಯವರಿಗಿಂತ ಇವರ ಸಂಖ್ಯೆ ಹೆಚ್ಚು ಎನ್ನುತ್ತಾರೆ ಪುರೋಹಿತರು. ಜಾತ್ರೆ ಸುಗ್ಗಿ ಹುಣ್ಣಿಮೆಗೆ ನಡೆಯುತ್ತದೆ. ಹುಣ್ಣಿಮೆಯಲ್ಲಿ ನಡೆಯುವ ಜಾತ್ರೆ ನಾಗ-ಸಿರಿಗೆ ಸಂಬಂಧಿಸಿರುತ್ತದೆ. ಸಿಂಪಾಡ್ಲನ ಬಾಬು ನರಾಯಣ ನರಾಯಣ ಎನ್ನುವುದು ಸೂರ್ಯನನ್ನು. ಸೂರ್ಯನಾರಾಯಣನ ಮೂರ್ತಿ ಈ ದೇವಸ್ಥಾನದಲ್ಲಿ ಒಳ ಪ್ರಕಾರದಲ್ಲಿ ಇತ್ತು. ಈಗ ದೇವಳದ ಈಶಾನ್ಯ ಭಾಗದಲ್ಲಿ ಗುಡಿ ಕಟ್ಟಿ ಪ್ರತಿಷ್ಠಾಪಿಸಿದ್ದಾರೆ.

ಜಾತ್ರೆಯ ಮೂರು ದಿನ ಮೊದಲು ಪರಾಡಿ ಮನೆಯ ಬಳಿಯ ಚೆಂಡಿನ ಗದ್ದೆಯಲ್ಲಿ ಚೆಂಡು ಇದೆ.

ಸೋಮನಾಥ ದೇವಸ್ಥಾನದ ಜಾತ್ರೆಯಂದು ದೇವರನ್ನು ಹೊತ್ತ ಬ್ರಾಹ್ಮಣ ಪಾತ್ರಿ ಬೋಲ ಪರಾಡಿ ಮನೆ ಬರುತ್ತಾರೆ. ಬೋಲ ಪರಾಡಿಯ ಚಾವಡಿ ಮುಂದೆ ಒಂದು ಕಟ್ಟೆ ಇದೆ. ಈ ಕಟ್ಟೆಯಲ್ಲಿ ದೇವರನ್ನು ಇಟ್ಟು ಪೂಜೆ ಮಾಡಿದ ಮೇಲೆ ಮೊದಲ ಪ್ರಸಾದವನ್ನು ಮನೆಯ(ಕುಟುಂಬದ) ಹಿರಿಯ ಮುತ್ತೈದೆಗೆ ನೀಡುತ್ತಾರೆ. ಮಹಿಳೆಯ ಸೆರಗಿಗೆ ತುಂಬುತ್ತಾರೆ. ಇದು ನಂಬುಗೆ ನೀಡುವ ಕ್ರಮ.

ಪೂಜೆ ಮುಗಿದ ಮೇಲೆ ಪರಾಡಿಯ ಮುಂದೆ ಇರುವ ಶಾಂಭವಿ ಹೊಳೆಗೆ ಹೋಗಿ ದೇವರು ಜಳಕ ಮಾಡುತ್ತಾರೆ. ಆ ಮೇಲೆ ಪರಾಡಿಯ ಗದ್ದೆಯಲ್ಲಿ ಜಳಕದ ಬಳಿ ಇದೆ.

ಬೋಲ ಪರಾಡಿಯಿಂದ ದೇವರ ದರ್ಶನ ಪಾತ್ರಿ ಮರಳಿ ದೇವಸ್ಥಾನಕ್ಕೆ ಹೋಗುವಾಗ ದೇವಳದ ರೆಕ್ಕೆಸಿರಿ ದೈವ ಹಾಗೂ ಅದರ ಬಂಟ, ಮಾಧ್ಯಮನ ಮೂಲಕ ಬಂದು ದೇವರನ್ನು ದೇವಸ್ಥಾನಕ್ಕೆ ಮರಳದಂತೆ ತಡೆಯುತ್ತದೆ. ಬೆಳ್ಮಣ್ಣಿನಲ್ಲಿ ನಡೆಯುವ ಉತ್ಸವದ ರೀತಿ ಇಲ್ಲಿಯೂ ಇದೆ. ಯುದ್ಧದ ರೀತಿಯಲ್ಲಿ ಈ ಹೋರಾಟ ನಡೆಯುತ್ತದೆ. ಕೊನೆಗೆ ದೇವರ ಪಾತ್ರಿ ತಪ್ಪಿಸಿಕೊಂಡು ಒಳಗೆಹೋಗಬೇಕು.

ಸೋಮನಾಥನ ದೇವಸ್ಥಾನದ ಎದುರು ಭಾಗದಲ್ಲಿ ಮೆಟ್ಟಿಲು ಇಳಿದರೆ ಪಿಲಿಯೂರು ನದಿ (ಶಾಂಭವಿ) ಹರಿಯುತ್ತಿದೆ. ಅದರಾಚೆ ದೇವಸ್ಥಾನದ ಸರಳ ರೇಖೆಯಲ್ಲಿ ಬೋಲ ಮುಗುಳಿ ಬ್ರಹ್ಮನಬೆಟ್ಟ ಇದೆ. ಇದನ್ನು ಉರಿ ಬ್ರಹ್ಮ ಎಂದೂ ಮುಗುಳಿ ಬ್ರಹ್ಮ ಎಂದೂ ಹೇಳುತ್ತಾರೆ. ಬೆಟ್ಟದ ಶಿಖರ ಮುಗುಳಿಯಂತೆ ಕೊನೆಯಾಗುವುದರಿಂದ ಮುಗುಳಿ ಬ್ರಹ್ಮ ಎಂದು ಕರೆಯುತ್ತಾರೆ. ಗುಂಡದ ಒಳಗೆ ಉರಿ ಬ್ರಹ್ಮ ಇದ್ದಾನೆ. ದೇವಸ್ಥಾನದಿಂದ ಸುಮಾರು ೨ ಕಿಲೋಮೀಟರ್ ದೂರ ಇರುವ ಈ ಬೆಟ್ಟಕ್ಕೆ ಹೋಗಬೇಕಾದರೆ ಶಾಂಭವಿ ನದಿಗೆ ಹಾಕಲಾದ ಸೇತುವೆ ಮೂಲಕ ಸುಮಾರು ೫ ಕಿಲೋಮೀಟರ್ ಸುತ್ತಿ ಹೋಗಬೇಕು. ಬೆಟ್ಟಕ್ಕೆ ಹತ್ತಲು ರಸ್ತೆ ಮಾಡಿದ್ದಾರೆ. ಬಲು ಇಕ್ಕಟ್ಟಾದ ರಸ್ತೆ. ತುದಿ ತಲುಪಬೇಕಾದರೆ ಮೆಟ್ಟಿಲು ಹತ್ತಬೇಕು. ಬೆಟ್ಟದ ಮುಗುಳಿಯ ಮೇಲೆ ನಿಂತರೆ ಬೋಲದ ಊರು ಕಾಡು ಎಲ್ಲ ದೃಶ್ಯವೂ ನಯನ ಮನೋಹರ.

ಪರಾಡಿಯ ಮೂಲಸ್ಥಾನ ಕಾಡುಮನೆಯ ಬಳಿ ಸುಮಾರು ಅರ್ಧ ಕಿಲೊಮೀಟರ್ ಒಳಗೆ ಇದೆ. ಸೋಮನಾಥ ದೇವಸ್ಥಾನ ಒಂದು ಕಿಲೋಮೀಟರ್ ದೂರ ಇದೆ. ಮನೆಯ ಬಳಿ ಇರುವ ಬನದಲ್ಲಿ ಮೊದಲು ನಾಗಶಿಲ್ಪಗಳು ಮಾತ್ರ ಇದ್ದುವು. ಅಷ್ಟಮಂಗಳ ಪ್ರಶ್ನೆಯಲ್ಲಿ ಪಂಚ ದೈವಗಳಿಗೆ ಗುಡಿಕಟ್ಟಿದ್ದಾರೆ. ಕಳೆದ ವರ್ಷ ಅಷ್ಟಮಂಗಳದಲ್ಲಿ ಸಿರಿ ತೋರಿ ಬಂದಳೆಂದು ಒಂಟಿ ಸಿರಿಯನ್ನು ಪ್ರತಿಷ್ಠಾಪಿಸಿದ್ದಾರೆ.

ಕಾಪು ಪ್ರದೇಶದಲ್ಲಿ ಜೈನ ಬೀಡು ಇದೆ. ಇದು ಒಂದು ಪಾಳೆಯಪಟ್ಟು ಸಾಂತೂರಿನಲ್ಲಿ ಪ್ರಸಿದ್ಧ ಸುಬ್ರಮಣ್ಯ ದೇವಸ್ಥಾನ ಇದೆ.

ಉಪಸಂಹಾರ : ಒಟ್ಟಿನಲ್ಲಿ ಬೆಳ್ಮಣ್ಣು ಒಂದು ಸಾಂಸ್ಕೃತಿಕ ಸಾಮಾಜಿಕ ಮತ್ತು ರಾಜಕೀಯ ಕೇಂದ್ರವಾಗಿ ೮ನೆಯ ಶತಮಾನಕ್ಕೂ ಹಿಂದಿನಿಂದಲೂ ನಡೆದು ಬಂದಿರಬೇಕು. ಆದರೆ ನಂದಳಿಕೆ ಇದಕ್ಕಿಂತಲೂ ಪ್ರಸಿದ್ಧಿಯಾಗಲು ಅಲ್ಲಿ ನಡೆಯುವ ಸಿರಿ ಜಾತ್ರೆ ಕಾರಣವಾಗಿರಬೇಕು. ಆಲಡೆ ತಾಣಗಳಲ್ಲಿ ಇರುವಂತೆ ಕಂಬುಲ ಗದ್ದೆಯೂ ಈ ದೇವಾಲಯ ಆಡಳಿತ ಮನೆಗಳಿಗೆ ಇದೆ.

"ಬೆಳ್ಮಣ್ಣಿನ ತಾಮ್ರ ಶಾಸನವು ಸಿರಿ ಆರಾಧನೆಯ ಪರಿಸರಕ್ಕೆ ಸಮೀಪವಾಗಿದ್ದು ಆ ಶಾಸನದಲ್ಲಿ ಬ್ರಹ್ಮನಿಂದ ರಕ್ಷಿತನಾದ ಕುಲದಲ್ಲಿ ಅಭಿಮಾನವುಳ್ಳ ಶ್ರೀಮದ್ ಆಳುವರಸರ ಎಂದಿದೆ. ತುಳುರೂಪ ಬೆರ್ಮೆರ್ ಆಳುಪ ದೊರೆಗಳ ಒಂದಿಲ್ಲ ಒಂದು ಕುಲದೈವವಾಗಿರಬೇಕು."(ಕ್ಲಾಸ್ ಪು೧೨೪) ಅಲ್ಲದೆ ನಂದರು ಆಳುಪರಿಗಿಂತಲೂ ಒಂದೆ ಈ ಪರಿಸರವನ್ನು ಆಳುತ್ತಿದ್ದ ಸ್ಥಳೀಯ ಪಾಳೆಯಗಾರರಿರಬೇಕು.

*"The original form of name is Nanda- alike which means the territory of Nanda. This was a seat of a small cheftaincy called the Heggade, of Nandalike. (Gururaja Bhatt. Antiqities of south canara P.16)*

ಆಯಾ ಅರಸರ ಕಾಲದಲ್ಲಿ ಸಾಕಷ್ಟು ಬದಲಾವಣೆಗಳೂ ಆಗಿರಬೇಕು. ಆದರೂ ನಾಗ ಬಿರ್ಮೆರ್ ಮೂಲತಾಣದ ಆರಾಧನೆಯ ವಿಷಯದಲ್ಲಿ ಇಲ್ಲಿಯ ಜನರು ಪರಂಪರೆಯನ್ನು ಬಿಟ್ಟು ಕೊಡುವುದಿಲ್ಲ. ಅಂತಹ ಒಂದು ತಾನ ಬೆಳ್ಮಣ್ಣು ಕ್ಷೇತ್ರ.



ಕೆ.ಎಂ. ಶಿವಲಿಂಗಯ್ಯ*

# ಶಾಸನಗಳಲ್ಲಿ ಹಿಂದುಳಿದವರಿಗೆ ತೆರಿಗೆ ವಿನಾಯಿತಿ

ಬಳ್ಳಾರಿ ಜಿಲ್ಲೆಗೆ ಸಂಬಂಧಿಸಿದಂತೆ ಕೆಲವು ಶಾಸನಗಳನ್ನು ಅವಲೋಕಿಸಿದಾಗ ಹಿಂದುಳಿದವರು ಮತ್ತು ದಲಿತರ ಬಗ್ಗೆ ಕೇವಲ ಉಲ್ಲೇಖ ಮಾತ್ರವಲ್ಲ, ಅವರ ಬಗ್ಗೆ ಅನುಕಂಪ ತೋರಿ, ಅನೇಕ ವಿಧದಲ್ಲಿ ಸಹಾಯ ಮಾಡಿರುವುದು ಕಂಡು ಬರುತ್ತದೆ.

ಸೊಂಡೂರಿನ, ಕುಮಾರಸ್ವಾಮಿ ದೇವಾಲಯದ ಪ್ರವೇಶದ ಎಡಹಸ್ತಿ ಹಸ್ತದಲ್ಲಿನ ಶಾಸನವು ಕ್ರಿ.ಶ. ೫-೪-೧೦೭೪ಕ್ಕೆ ಸೇರಿದ್ದು, ಅದರಲ್ಲಿ **ಕಲ್ಲುಕುಟಿಕರಾದ** ಬಿಯಳಚಟ್ಟ, ಬೆನಗಬೋವ[೧] ಮತ್ತು **ಕಮ್ಮಾರನಾದ** ನಾತನಿಗೆ ಶ್ರೀಸ್ವಾಮಿದೇವ ತಪೋವನಾಧಿಪತಿಗಳಾದ ಗದಾಧರಸರು ಭೂದಾನವಿತ್ತ ಬಗ್ಗೆ ವಿವರಗಳಿವೆ.

ಹರಪನಹಳ್ಳಿ ತಾಲೂಕು ಬಾಗಳಿ ಗ್ರಾಮದ ಮಳೆ-ಮಲ್ಲಪ್ಪ ದೇವಾಲಯದೊಳಗಿರುವ ಶಾಸನವೂ ಕ್ರಿ.ಶ. ೨೮-೧೨-೧೧೧೮ಕ್ಕೆ ಸಂಬಂಧ ಪಟ್ಟಿದ್ದು, ಚಾಲುಕ್ಯ ತ್ರಿಭವನ ಮಲ್ಲನ ಆಳ್ವಿಕೆಯಲ್ಲಿ, ಆತನ ಸಾಮಂತ ತ್ರಿಭುವನ ಮಲ್ಲ ವೀರಪಾಂಡ್ಯನು, ನೊಳಂಬವಾಡಿ-೩೨೦೦೦ಯನ್ನು ಆಳುತ್ತಿರುವಾಗ, ಈತನ ಸಾಮಂತ ವಿಜಯ ಪಾಂಡ್ಯದೇವ, ಇವನ ಪಸಾಯಿತ ವಿಜಯ ಹೆಮ್ಮಾಡಿ ದಂಡನಾಯಕನು, ರಾಜನ ಕರ್ತೃತ್ವಗಳನ್ನು ಪಾಲಿಸುತ್ತಿರಲು, ಮಹಾವಡ್ಡ[೨] ವ್ಯವಹಾರಿ, ಬೆನ್ನಗೆಯ ಕೆಂಚವ್ವೆಯಗೆರೆಯ ಗದ್ದೆಯಲ್ಲಿ ಬಡಗಿ ರೆಬ್ಬೋಜಗೆ, ಬಡಗಿ ಗದ್ದೆಯಾಗಿ ಕೊಟ್ಟಗದ್ದೆ ಕರ್ಮ ೫೦ ಎಂದಿದೆ.

ಬಳ್ಳಾರಿ ತಾಲೂಕು ಯಲ್ವ-ಗ್ರಾಮದ ಆಂಜನೇಯ ದೇವಾಲಯದ ಬಳಿ ಕಲ್ಲಿನ ಮೇಲಿರುವ ಕ್ರಿ.ಶ. ೧೪-೩-೧೫೪೪ಕ್ಕೆ ಸೇರಿದ ಶಾಸನದಲ್ಲಿ ಶ್ರೀ ಮನ್ಮಹಾರಾಜ ರಾಜಾಧಿರಾಜ ರಾಜಪರಮೇಶ್ವರ ಶ್ರೀ ವೀರಪ್ರತಾಪ ಸದಾಶಿವ ಮಹಾರಾಜರ, ಕಾರ್ಯಕರ್ತರಾದಂತಹ ಶ್ರೀ ಮಹಾಮಂಡಲೇಶ್ವರ ರಾಮರಾಜಯ್ಯದೇವ ಮಹಾ ಅರಸುಗಳು, ಯಳವ್ವೆಯಸೀಮೆಯ ನಾಯಿಂದವ್ವೋಜಗಳು ತೆರುವ ಗ್ರಾಮದ ಕಟ್ಟುಸಿದ್ಧಾಯ[೪] ಬಿರಾಡ[೫] ತೆರುವುದೆಲ್ಲವನ್ನು ಸರ್ವಮಾನ್ಯ[೬]ವಾಗಿ ಪಾಲಿಸಿ ಬಿಟ್ಟ ಬಗ್ಗೆ ಉಲ್ಲೇಖವಿದೆ.

ಸೊಂಡೂರಿನ ತಾರಕೇಶ್ವರ ಗುಡಿಯ ಮುಂದೆ ಬಿದ್ದಿರುವ ಶಾಸನದ ಕಾಲ ಕ್ರಿ.ಶ. ೨೬-೫-೧೫೪೪, ಇದರಲ್ಲಿ ಸದಾಶಿವದೇವರಾಯನ ಆಳ್ವಿಕೆಯಲ್ಲಿ, ರಾಮರಾಜದೇವನು ಸೊಂಡೂರು ಸೀಮೆಯ ನಾಯಿಂದರು, ಕೊಡುವ ತೆರಿಗೆ ಎಲ್ಲವನ್ನೂ ಸರ್ವಮಾನ್ಯವಾಗಿ ಬಿಟ್ಟಿರುವ ಬಗ್ಗೆ ವಿವರಗಳಿವೆ.

ಕೊಟ್ಟೂರು ಪಟ್ಟಣದಲ್ಲಿ, ಕೊಟ್ಟೂರೇಶ್ವರ ಮಹಾವಿದ್ಯಾಲಯದಲ್ಲಿರುವ ಶಾಸನದಲ್ಲಿ, ಕೃಷ್ಣಪ್ಪನಾಯಕರ ಕಾರ್ಯಕರ್ತರಾದ ಬೊಪ್ಪಣ್ಣ ನಾಯಕನು, ಕೊಟ್ಟೂರು **ಮಡಿವಾಳರಿಗೆ,** ಪರಾಭವ ಸಂವತ್ಸರದ ಶ್ರಾವಣ ಬಹುಳ ೧೦ರಲ್ಲಿಯ ಶಾಸನದಲ್ಲಿದೆ, ಕೆಲವೂ ತೆರಿಗೆಗಳಿಂದ ವಿನಾಯಿತಿ ನೀಡಿದಂತೆ ಉಲ್ಲೇಖವಿದೆ.

ಹರಪನಹಳ್ಳಿ ತಾಲೂಕು ಬಾಗಳಿ ಗ್ರಾಮದ ಸೂರ್ಯನಾರಾಯಣ ದೇವಾಲಯದ ಹತ್ತಿರದ ಶಾಸನವೊಂದು ಕ್ರಿ.ಶ. ೩೦-೫-೧೫೪೭ನೇ ಇಸ್ವಿಯದಾಗಿದ್ದು ಶ್ರೀ ಮನ್ಮಹಾರಾಜಾಧಿರಾಜ ರಾಜ ಪರಮೇಶ್ವರ ಶ್ರೀ ವೀರ ಪ್ರತಾಪ ಸದಾಶಿವ ಮಹಾರಾಯರು ವಿದ್ಯಾನಗರದಲ್ಲಿ ರತ್ನಸಿಂಹಸನಾರೂಢರಾಗಿ ಪೃಥ್ವೀ ರಾಜ್ಯಂಗೆಯ್ಯುತ್ತಿರುವಾಗ, ರಾಜನಿಯೋಗದ ನಾಯಿಂದರಾದ ತಿಮ್ಮೋಜ, ಕೊಂಡೋಜ ಮುಂತಾದವರಿಗೆ, ಕಾಣಿಕೆ[೭], ಕಡಾಯ, ಬಿಟ್ಟಿ[೮] ಬಿಡಾರ[೯], ಕೊಟಣ, ಏನೂ ಇಲ್ಲವೆಂದು ಹೇಳಿಕೊಟ್ಟ ಸರ್ವಮಾನ್ಯ ಶಾಸನ-ಎಂದು ಇದೆ. ಕೊಟ್ಟೂರು ಸೀಮೆಯೊಳಗಿರುವ ಬಾಗಳಿಯ ನಾಯಿಂದರಿಗೂ, ಕಾಣಿಕೆ ಕಡ್ಡಾಯ ಬಿಟ್ಟಿ, ಕೊಟಣ, ಲಿಂಗದೆರೆ[೧೦]- ಏನೂ ಇಲ್ಲ, ಎಂದಿದೆ.

ಕೊಪ್ಪಳ ಜಿಲ್ಲೆಯ ಯಲಬುರ್ಗಾ ತಾಲೂಕು ಕುಕನೂರು ಗ್ರಾಮದ ಜಾವಡಿಯ ಬಳಿಯಲ್ಲಿರುವ ಶಾಸನ (ಕ್ರಿ.ಶ. ೨೮-೯-೧೫೫೭)ದಲ್ಲಿ ಶ್ರೀಮಹಾರಾಜಾಧಿರಾಜ ರಾಜಪರಮೇಶ್ವರ ವೀರಪ್ರತಾಪ ಶ್ರೀ ಸದಾಶಿವರಾಯ ಮಹಾರಾಯರ

* ನಿವೃತ್ತ ಶಿಕ್ಷಕ, ಹೂವಿನಹಡಗಲಿ, ಬಳ್ಳಾರಿ ಜಿಲ್ಲೆ, ಹೊಳಗುಂದಿ - ೫೮೩ ೨೧೯.

ಕಾರ್ಯಕರ್ತರಾದ ಅಳಿಯ ರಾಮರಾಜಯ್ಯ ದೇವ ಮಹಾಅರಸರು, ಊಳಿಗದ ಕೊಂಡೋಜನು ಬಿನ್ನಹ ಮಾಡಿಕೊಂಡುದಕ್ಕಾಗಿ, ಶ್ರೀ ಸದಾಶಿವ ಮಹಾರಾಯರಿಗೆ ಪುಣ್ಯವಾಗಬೇಕೆಂದು, ಸ್ವಾಮಿಗಳು ಆಳುವ ರಾಜ್ಯದೊಳಗಿರುವ ನಾಯಿಂದರಿಗೆ, ಎಲ್ಲಾ ವಿಧವಾದ ತೆರಿಗೆಗಳನ್ನು ಸರ್ವಮಾನ್ಯ ಮಾಡಿದ ಬಗ್ಗೆ ಉಲ್ಲೇಖವಿದೆ.

ಕೊಟ್ಟೂರು ಪಟ್ಟಣದಲ್ಲಿ ಕರಣಿಕರ ಮನೆಯ ಮುಂದೆ ಗೋಡೆಗೆ ಸೇರಿಸಿದ ಶಾಸನ (ಕ್ರಿ.ಶ. ೩೦-೧-೧೫೪೮), ವು, ಶ್ರೀಮಾನ್ ಮಹಾರಾಜಧಿರಾಜ ರಾಜಪರಮೇಶ್ವರ, ಶ್ರೀವೀರಪ್ರತಾಪ, ಸದಾಶಿವರಾಯರು ವಿದ್ಯಾನಗರಿಯಲ್ಲಿ ರಾಜ್ಯಾಡಳಿತ ಮಾಡುತ್ತಿದ್ದಾಗ ಶ್ರೀ ಮನ್ಮಹಾಮಂಡಲೇಶ್ವರ ಅಳಿಯ ರಾಮರಾಜದೇವ ಮಹಾ ಅರಸುಗಳು, ನಾಯಿಂದರಾದ ತಿಮ್ಮೋಜ ಕೊಂಡೋಜ, ಭದ್ರೋಜ ಮುಂತಾದ ದೇಶ ಭಾಗದ ನಾಯಿಂದರಿಗೆ, ಸರ್ವವೂ ಮಾನ್ಯವಾಗಿ, ತೆರಿಗೆ ಕಡ್ದಾಯ, ಬಿಟ್ಟಿ ಕೊಟ್ಟಣ ಏನೂ ಇಲ್ಲವೆಂದು, ಶಾಸನದ ಸಾರಾಂಶವಿದೆ.

ಹರಪನಹಳ್ಳಿ ತಾಲೂಕು, ಮೈದೂರು ಗ್ರಾಮದ ನಿವೇಶನವೊಂದರಲ್ಲಿ (ಫೆಬ್ರವರಿ ೧೫೪೮) ಮೇಲಿನ ಶಾಸನದಲ್ಲಿ, ಕ್ರಿ.ಶ. ೩೦-೧-೧೫೪೮ರಲ್ಲಿಯ ವಿಷಯವೇ ಪುನರಾವರ್ತನೆಗೊಂಡಿದ್ದಲ್ಲದೇ, ಮೈದೂರು ನಾಯಿಂದರಿಗೂ, ಕಾಣಿಕೆ ಕಡ್ದಾಯವಿಲ್ಲವೆಂದು ಉಲ್ಲೇಖಿಸಲ್ಪಟ್ಟಿದೆ.

ಹರಪನಹಳ್ಳಿ ತಾಲೂಕು ಬಾಗಳಿ ಗ್ರಾಮದ ಕಲ್ಲೇಶ್ವರ ದೇವಾಲಯದ ಆವರಣದಲ್ಲಿನ ಶಾಸನ ಕ್ರಿ.ಶ. ೧೧-೨-೧೫೫೧ ಕಾಲಕ್ಕೆ ಸೇರಿದ್ದು, ಸದಾಶಿವರಾಯರು, (ಬಿರುದಾವಳಿಗಳೊಂದಿಗೆ) ಹಡಪದ ಕೃಷ್ಣಪ್ಪ ನಾಯಕರಿಗೆ, ನೀಡಿದ ಕೊಟ್ಟೂರು ಸೀಮೆಗೆ ಸೇರಿದ ಬಾಗಳಿಯ ಚಾಮನಾಯಕರ ಮಗ ಹೆಳವಿನಾಯಕರು, ಬಾಗಳಿಯ ಕುಮಕರ ಬಸವಿಗೌಂಡನ ಮಗ ಲಿಂಗಗೊಂಡ ಮುಂತಾದ ಕುರಬ ಗೌಡಗಳಿಗೆ ಕುರಿದೆರಿಗೆ ಇಲ್ಲವೆಂದು, ರಾಜರು ಆಜ್ಞೆ ಮಾಡಿದ ಬಗ್ಗೆ ಶಾಸನ ಹೇಳುತ್ತದೆ. ಹಸ್ತಿನಾವತಿಯ ವಳಿತದ ಪಾಂಡ್ಯದನಾಡ ಒಳಗಣ, ಕೋಗಳಿಯ ನಾಡಿಗೆ ಸೇರಿದ ಗ್ರಾಮ-ಉಪಗ್ರಾಮಗಳಲ್ಲಿಯ ಕುರಿಗಳಿಗೆ, ತೆರಿಗೆ ಇಲ್ಲವೆಂದು ಧರ್ಮಶಾಸನ ಮಾಡಿದ ಬಗ್ಗೆ ಉಲ್ಲೇಖವಿದೆ.

ಹರಪನಹಳ್ಳಿ ತಾಲೂಕ ಅರಸಿಕೆರೆ ಗ್ರಾಮದ ಕೆರೆಕಟ್ಟೆಯ ಬಳಿಯ ಹೊಲದಲ್ಲಿ ನಿಂತಿರುವ ಶಾಸನವು ಕ್ರಿ.ಶ. ೧೬-೧೧-೧೬೬೧ರಲ್ಲಿಯದು, ಶ್ರೀ ಮನ್ಮಹಾರಾಜಾಧಿರಾಜ, ರಾಜ ಪರಮೇಶ್ವರ, ಶ್ರೀ ವೀರಪ್ರತಾಪ, ಶ್ರೀರಾಮ ದೇವರಾಯರ, ಕುಮಾರರು ಬುಗುಳೆ ಬಸವಪ್ಪ ನಾಯ್ಕ ಅಯ್ಯನವರು. ಅರಸಿಕೆರೆಯ ಮುರಿಗೆಯ ಸಾಮಂತರಾವುತನೆ ಬಸಯ್ಯನಿಗೆ ರಾವುತ[11] ವೃತ್ತಿಗಾಗಿ ಭೂದಾನ ಮಾಡಿದ ವಿವರಗಳಿವೆ.

ಹರಪನಹಳ್ಳಿ ತಾಲೂಕು ದುಗ್ಗಾವತಿ ಗ್ರಾಮದ ಸೋಮನಾಥ ದೇವಾಲಯದ ಮುಂದೆ ನಿಲ್ಲಿಸಿರುವ ಶಾಸನದಲ್ಲಿ ಬಸದಿ ನಿರ್ಮಾಣ ಮಾಡಿದ ಬಗ್ಗೆ, ವಿವರಗಳ ಜೊತೆಗೆ, ಅಜ್ಜಿಯ ಆಹಾರ ದಾನಕ್ಕೆ ಧಾರಾಪೂರ್ವಕವಾಗಿ ಬಿಟ್ಟ ಗದ್ದೆಯ ಬಗ್ಗೆ ತಿಳಿಸಿದೆ.

ಸಿರುಗುಪ್ಪ ತಾಲೂಕು, ಮುದಟನೂರು ಗ್ರಾಮದ ಸುಂದರಮ್ಮನವರ ಮನೆಯ ಮುಂದೆ, ಸುಮಾರು ೧೮ನೇ ಶತಮಾನಕ್ಕೆ ಸೇರಿದ ಶಾಸನದಲ್ಲಿ ಶ್ರೀ ವೆಂಗಳಪ್ಪ ನಾಯಕರು, ಪಾತ್ರದ ನಾಗಯ್ಯನಿಗೆ ದುಡನೂರು ಎರೆಯ ಹೊಲ, ಸಿಂಗಿನಾಕಟ್ಟೆಯ ಎಲ್ಲಯ್ಯನ ಹೊಲದೊಳಗೆ, ಕೊಟ್ಟ ಎರಡು ಕೊಳಗದ ಮಾನ್ಯ ಎಂದು ಹೆಸರಿಸಲಾಗಿದೆ.

ಬಳ್ಳಾರಿ ಜಿಲ್ಲೆಯ ಶಾಸನಗಳನ್ನು (ಹರಪನಹಳ್ಳಿ ತಾಲೂಕು ಇತ್ತೀಚೆಗೆ ದಾವಣಗೆರೆ ಜಿಲ್ಲೆಗೆ ಸೇರಿದೆ) ಪರಿಶೀಲಿಸಿದಾಗ ಹೆಚ್ಚು ಶಾಸನಗಳು, ವಿಜಯನಗರ ಸಾಮ್ರಾಜ್ಯವನ್ನಾಳಿದ ಸದಾಶಿವರಾಯರು ಮತ್ತು ಅವರ ಕಾರ್ಯಕರ್ತರಾದ ರಾಮರಾಜದೇವರ ರಾಯರಿಗೆ ಸೇರಿವೆ. ಈ ಶಾಸನಗಳಲ್ಲಿ, ಮಡಿವಾಳರು, ಬಡಗಿ, ಕಮ್ಮಾರರು. ನಾಯಿಂದರು, ಪಾತ್ರದವರು ಕುರಿಗಾಯಿಗಳು – ಮುಂತಾದ ಹಿಂದುಳಿದವರ ಬಗ್ಗೆ ಅನುಕಂಪ ತೋರಿ, ಅವರ ಮೇಲಿನ ತೆರಿಗೆಗಳನ್ನು ತೆಗೆದುಹಾಕಿದ ಬಗ್ಗೆ ಮತ್ತು ಅದು ಎಲ್ಲರಿಗೂ ಗೊತ್ತಾಗಲೆಂದು. ಹಾಗೂ ಅದು ಶಾಶ್ವತವಾಗಿ ಎಲ್ಲಾ ಕಾಲಕ್ಕೂ ಇರಲೆಂದು ಶಾಸನಗಳನ್ನು ನಿಲ್ಲಿಸಿರುವುದಕ್ಕೆ ಮೇಲಿನ ಶಾಸನಗಳು ಕೆಲವು ಉದಾಹರಣೆಗಳು ಮಾತ್ರ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಬೋಯಿ-ಪಲ್ಲಕ್ಕಿ ಹೊರುವವನು ಸೇವೆ ಮಾಡುವವನು.
೨. ಪಸಾಯಿತ-ರಾಜನ ಅನುಗ್ರಹಕ್ಕೆ ಪಾತ್ರನಾದ ಅಧಿಕಾರಿ
೩. ವಡ್ಡ-ಹಿರಿಯ, ಪೂಜ್ಯ.
೪. ಸಿದ್ದಾಯ- ಗೊತ್ತು ಪಡಿಸಿದ ತೆರಿಗೆ
೫. ಬಿರಾಡ-ಮನೆ ಮೇಲಿನ ತೆರಿಗೆ.
೬. ಮಾನ್ಯ-ತೆರಿಗೆ ವಿನಾಯಿತಿ
೭. ಕಾಣಿಕೆ-ರಾಜರಿಗೆ ಒಪ್ಪಿಸುವ ಜನರು
೮. ಬಿಟ್ಟಿ-ಮುಕ್ತಟೆ ಕೆಲಸ
೯. ಕೊಟಣ-ಭತ್ತ ಮುಂತಾದವುಗಳನ್ನು ಕುಟ್ಟುವುದು.
೧೦. ಲಿಂಗದೆರೆ-ಲಿಂಗ ಕಟ್ಟಿದವರ ಮೇಲಿನ ತೆರಿಗೆ ಇರಬಹುದು
೧೧. ರಾವುತ-ಕುದುರೆ ಸವಾರ
೧೨. ಪಾತ್ರ-ಅಭಿನಯ ಕಲೆ ಬಲ್ಲವರು.
* **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂಪುಟ ೧.**

ಡಾ. ಬೆಂ.ಶಾ. ಶ್ಯಾಮಲಾ ರತ್ನಕುಮಾರಿ*

# ಬಟವಾಡೆ ಶಾಸನೋಕ್ತ ಯಿಳಕಲ್ಲು ಬೆಟ್ಟ

ತುಮಕೂರು-೪ ಬಡಾವಣೆಗೆ ಸೇರಿದ ಬಟವಾಡೆ ಗ್ರಾಮದ ಚೌಡೇಶ್ವರೀ ದೇವಾಲಯದ ಮುಂದಿರುವ ಶಾಸನದ ವಿವರಗಳನ್ನು **ಇತಿಹಾಸ ದರ್ಶನ** ಸಂಪುಟ ೨೧ರಲ್ಲಿ ಈಗಾಗಲೇ ನೀಡಲಾಗಿದ್ದು ಪ್ರಸ್ತುತ ಆ ಬಟವಾಡೆ ಶಾಸನದಲ್ಲಿ ಉಲ್ಲೇಖಗೊಂಡ ಯಿಳಕಲ್ ಬೆಟ್ಟದ ಐತಿಹಾಸಿಕ ಅವಶೇಷಗಳ ವೀಕ್ಷಣಾ ಕಾರ್ಯದ ವಿವರಗಳನ್ನು ಈ ಲೇಖನದಲ್ಲಿ ನೀಡಲಾಗಿದೆ.

ಬಟವಾಡೆ ಶಾಸನದಲ್ಲಿ ದೇವರಾಯಪಟ್ಟಣದ ತಿಂಮಣ ನಾಯ್ಕರ ಮಗ ಕೆಂಚಸೋಮಣನಾಯ್ಕರು ಯಿಳಕಲ್ಲ ಬೆಟ್ಟದ ರಾಮೇಶ್ವರ ದೇವರ ಅಂಗರಂಗ ವೈಭೋಗಕ್ಕೆ ಸಲ್ಲಬೇಕೆಂದು ಬಟವಾಡೆಯ ಗ್ರಾಮವನ್ನು ಪುರದಗ್ರವಾಗಿ ಬಿಟ್ಟನು ಎಂದಿದೆ.

ಕ್ಯಾತ್ಸಂದ್ರದಿಂದ ಮೈದಾಳಕ್ಕೆ ಹೋಗುವ ರಸ್ತೆಯಲ್ಲಿ ಎಡಬದಿಗೆ ಸಿಕ್ಕುವ ಬೂರುಗಮರದಪಾಳ್ಯ ಗ್ರಾಮದ ರಸ್ತೆಯಲ್ಲಿ ಒಂದು ಕಿ.ಮೀ. ದೂರ ಒಳನಡೆದರೆ ತೋಪಿನ ನಡುವೆ ಸ್ವಲ್ಪ ದೂರದಲ್ಲೇ ಯಿಳಕಲ್ (ಇಳಿಜಾರಾದ ಬಂಡೆ) ಬೆಟ್ಟ ಕಾಣುತ್ತದೆ. ದನಗಾಹಿಗಳ ಕಾಲುದಾರಿಯನ್ನು ಹಿಡಿದು ಐದಾರು ಕಿ.ಮೀ. ಅಲ್ಲಲ್ಲಿ ಮುಳ್ಳು ಪೊದೆಗಳನ್ನು ಹಾದು, ಬಂಡೆಗಳ ಕೊರಕಲಿನಲ್ಲಿ ಪ್ರಯಾಸದಿಂದ ಏರಿ ಹೋಗಬೇಕಾಗುತ್ತದೆ. ಚಾರಣ ಸಾಹಸಿಗಳಿಗೆ ಒಂದು ಪ್ರಮುಖ ತಾಣ ಇದೆಂದು ಪರಿಗಣಿಸಬಹುದಾಗಿದೆ.

ಬೆಟ್ಟದ ಮೇಲೆ ಕಲ್ಲು ತುಂಡುಗಳಿಂದ ನಿರ್ಮಿಸಲ್ಪಟ್ಟ ಎರಡು ಸುತ್ತಿನ ಕೋಟೆ ಹಾಗೂ ಒಂದೆರಡು ಬತೇರಿಗಳು ಕಾಣಸಿಗುತ್ತವೆ. ವರ್ತುಲಾಕಾರವಾಗಿರುವ ಒಳಸುತ್ತಿನ ಕೋಟೆಯಲ್ಲಿ ಪಾಳು ಸ್ಥಿತಿಯಲ್ಲಿರುವ ಚಿಕ್ಕ ಈಶ್ವರ ದೇವಾಲಯ ಕಂಡುಬರುತ್ತದೆ. ದೇವಾಲಯವು ಅಧಿಷ್ಠಾನದಿಂದ ಪ್ರಸ್ತರದವರೆಗೆ ಶಿಲಾಮಯವಾಗಿದ್ದು ವಿಮಾನ ಗೋಪುರವು ಇಟ್ಟಿಗೆ ಗಾರೆಗಳಿಂದ ನಿರ್ಮಾಣಗೊಂಡಿದ್ದು ಪೂರ್ತಿಯಾಗಿ ಕುಸಿದುಬಿಟ್ಟಿದೆ. ಗರ್ಭಗುಡಿಯಲ್ಲಿ ಲಿಂಗವಿಲ್ಲ. ಆದರೆ ಬಸವಣ್ಣನ ವಿಗ್ರಹವಿದೆ. ನವರಂಗದ ಕಂಬಗಳು ಚತುರಸ್ರ, ವರ್ತುಲ, ಅಷ್ಟಪೈಲು ಮುಂತಾದ ವಿಭಿನ್ನ ವಿನ್ಯಾಸದ ವಾಸ್ತುವಿಭಾಗಗಳನ್ನು ಹೊಂದಿದೆ. ಒಳಛತ್ತಿನಲ್ಲಿ ವಿಕಸಿತ ಪುಷ್ಪದ ಶಿಲ್ಪಾಲಂಕರಣವಿದೆ. ಕಂಬಗಳ ಮೇಲಾಗಲೀ, ಭಿತ್ತಿಭಾಗ, ಪ್ರಸ್ತರ ಮತ್ತು ಅಧಿಷ್ಠಾನಗಳು ಯಾವ ಕೆತ್ತನೆಯೂ ಇಲ್ಲದೆ ಸರಳವಾಗಿದೆ. ಅಧಿಷ್ಠಾನವು ಕಪೋತ, ವೇದ ಭಾಗಗಳನ್ನು ಹೊಂದಿದ್ದು ಮಂಚಬಂಧ ವಿನ್ಯಾಸವನ್ನು ಪ್ರತಿನಿಧಿಸುತ್ತಿದೆಯೆಂದು ಹೇಳಬಹುದೆನಿಸುತ್ತದೆ. ಈ ದೇವಾಲಯದ ಒಟ್ಟು ವಾಸ್ತುವಿನ್ಯಾಸದ ಆಧಾರದಿಂದ ಪ್ರಾಯಶಃ ಇದು ಗಂಗರ ಕಾಲದ ಮಾದರಿಗೆ ಸೇರಬಹುದು ಎಂದು ಭಾವಿಸಬಹುದಾಗಿದೆ. ಇದೇ ಶಾಸನೋಕ್ತ ಇಳಕಲ್ ರಾಮೇಶ್ವರ ದೇವಾಲಯವಾಗಿದೆ.



ಈ ದೇವಾಲಯಕ್ಕೆ ಅನತಿ ದೂರದಲ್ಲಿ ಶಿಲಾಸ್ತಂಭ ಮಂಟಪವಿದೆ. ದೇವಾಲಯದ ಹಿಂಭಾಗದಲ್ಲಿ ವರ್ತುಲಾಕಾರದ ಕಟ್ಟಡ ಮತ್ತು ಚೌಕಾಕಾರದ ಒಂದು ಕಟ್ಟಡದ ಅವಶೇಷಗಳ ಜೊತೆಗೆ ಒಂದು ಆಗೇವು ಕಾಣಸಿಗುತ್ತದೆ. ಈ ಒಳ ಆವರಣದಿಂದ ಹೊರಕೋಟೆಗೆ ಬರಲು ಈಗ ಎರಡು ಚಾಂಡುಕಲ್ಲುಗಳನ್ನು ನಿಲ್ಲಿಸಿ ದ್ವಾರದ ರೀತಿ ಪ್ರವೇಶ ಕಲ್ಪಿಸಲಾಗಿದೆ. ಹೊರಕೋಟೆಯ ಮುಂಭಾಗದಲ್ಲಿರುವ ದೊಡ್ಡ ಕೊಳ ಕೆಂದಾವರೆಗಳಿಂದ ಕೂಡಿ ಕಣ್ಮನ ಸೆಳೆಯುತ್ತದೆ.

* ನಿವೃತ್ತ ಇತಿಹಾಸ ಪ್ರವಾಚಕರು, ಬೆಂಗಳೂರು.



ಒಳಕೋಟೆಯಲ್ಲಿನ ದೇವಾಲಯದ ಮುಂಭಾಗದಲ್ಲಿ ಹೊರಕೋಟೆಗೆ ಸೇರಿದಂತೆ ಬಂಡೆಯೊಂದರ ಮೇಲೆ ಬಸವನ ಪ್ರಾಚೀನ ಶಿಲ್ಪ, ಎರಡು ಪಾದಗಳ ಚಿಹ್ನೆಗಳೂ ಕಂಡುಬರುತ್ತವೆ. ಬಸವನ ಶಿಲ್ಪವನ್ನು ಬೇರೆಡೆಯಿಂದ ಇಲ್ಲಿ ತಂದಿಟ್ಟಿದ್ದಾರೆಂದೆನಿಸುತ್ತದೆ. ಈ ಬಂಡೆಯ ಮೇಲಿರುವ ಪಾದಗಳು ರಾಮು, ಸೀತೆಯರದೆಂದು ಜನನಂಬಿಕೆ.



ಒಳಕೋಟೆಯಲ್ಲಿರುವ ಶಿವದೇವಾಲಯದಲ್ಲಿರುವ ಲಿಂಗವನ್ನು ರಾಮನೇ ಪ್ರತಿಷ್ಠಾಪನೆ ಮಾಡಿದ್ದಾನೆಂದೂ, ಅದರಿಂದಲೇ ಅದನ್ನು ರಾಮೇಶ್ವರ ದೇವಾಲಯವೆಂದು ಕರೆಯಲಾಗಿದೆ. ಹಾಗೂ ಬೆಟ್ಟದ ಒಂದು ಭಾಗದಲ್ಲಿ ಕಣಶಿಲೆಯ ಜೊತೆಗೇ ಕಪ್ಪು ಬೆಣಚುಕಲ್ಲಿನ ಪದರವೊಂದು ಕೆಳಗೆ ಹಾಸಿದಂತೆ ಕಾಣುತ್ತದೆ. ಅದನ್ನು ಅಲ್ಲಿಯ ಜನ ಸೀತೆಯು ಸ್ನಾನ ಮಾಡುತ್ತಿದ್ದಾಗ ಯಾರೋ ಅಲ್ಲಿಗೆ ಬಂದರೆಂದು ಆಗ ಗಾಬರಿಯಿಂದೆದ್ದು ಸೀರೆಯನ್ನ ಸುತ್ತಿಕೊಳ್ಳುತ್ತಿದ್ದಾಗ ಆ ಸೀರೆಯ ಸೆರಗು ಬಂಡೆಯ ಮೇಲೆ ಜಾರಿತೆಂದೂ ಹಾಗಾಗಿ ಆ ಕಪ್ಪು ಬೆಣಚು ಕಲ್ಲಿನ ಭಾಗವನ್ನು 'ಸೀತೆಯ ಸೆರಗು' ಎಂದೂ ಕರೆಯುತ್ತಾರೆ. ಅಲ್ಲಿಂದ ಮುಂದೆ ಬಲಕ್ಕೆ ತಿರುಗಿ ಮುಂದುವರಿದರೆ ಜನರು ಸಿದ್ಧಪ್ಪನ ಗವಿಯೆಂದು ಕರೆಯುವ ಭಾಗವು ಸಿಗುತ್ತದೆ. ಆ ಗವಿಯಲ್ಲಿ ಒಂದು ಚಿಕ್ಕ ಶಿವಲಿಂಗ ಮತ್ತು ಬಸವನ ಶಿಲ್ಪಗಳನ್ನು ಒಂದು ಬಂಡೆಯ ಮೇಲೆ ತಂದಿಡಲಾಗಿದೆ. ಅದರ ಪಕ್ಕದಲ್ಲಿ ಐದು ಚಿಕ್ಕ ತುಂಡು ಕಲ್ಲುಗಳನ್ನು ಇಟ್ಟು ಪೂಜೆ ಮಾಡಲಾಗಿದೆ. ಆ ಐದು ಕಲ್ಲುಗಳ ಹಿಂದೆ ಇತ್ತೀಚೆಗೆ ಯಾರೋ ದೊಡ್ಡ ಪಟ್ಟಾಭಿರಾಮನ ಚಿತ್ರಪಟವನ್ನೂ ತಂದಿಟ್ಟಿದ್ದಾರೆ. ಗವಿಯ ಎಡಮೂಲೆಯಲ್ಲಿ



ಬಾವಿಯೊಂದಿದ್ದು ಅದರ ಅಂಚು ಮೂಲೆಗಳಲ್ಲಿ ಬಾಂಡುಗಳನ್ನು ಅಳವಡಿಸಲಾಗಿದೆ. ಇದನ್ನು ಸ್ಥಳೀಯರು ಕಲ್ಯಾಣಿ ಎಂದೇ ಕರೆಯುತ್ತಾರೆ. ಇಲ್ಲಿರುವ ಕಲ್ಯಾಣಿಯಲ್ಲಿ ನೀರು ಈಗ ತೀರ ಕೆಳಗೆ ಹೋಗಿದೆ. ಇವೆಲ್ಲವನ್ನೂ ಗಮನಿಸಿದರೆ ರಸಸಿದ್ಧರು ಈ ಗವಿಯಲ್ಲಿ ನೆಲೆಸಿ ಶಿವನ ಆರಾಧನೆ ಮಾಡುತ್ತಾ ಈ ರಸಭಾವಿಯಿಂದ ಸಾಧನೆ ಮಾಡುತ್ತಿದ್ದಿರಬಹುದೆಂದೂ ಊಹಿಸಬಹುದಾಗಿದೆ.

ಈ ಮೇಲೆ ಹೇಳಿರುವ ಎಲ್ಲ ವಿಷಯಗಳನ್ನೂ ಅವಶೇಷಗಳನ್ನೂ ಪರಿಶೀಲಿಸಿದ ಫಲವಾಗಿ ಈ ಯಿಳಕಲ್ ಬೆಟ್ಟವು ಪೌರಾಣಿಕ ಐತಿಹಾಸಿಕ ಮತ್ತು ಧಾರ್ಮಿಕ ಮಹತ್ವವನ್ನು ಪಡೆದಿದ್ದಿತು ಎಂದು ನಿಶ್ಚಿತವಾಗಿ ಹೇಳಬಹುದಾಗಿದೆ.

ಆದರೆ ಈಗ ಬೆಟ್ಟದ ಮಾರ್ಗವು ಮುಚ್ಚಿಹೋಗಿದೆ. ವರ್ಷಕ್ಕೊಮ್ಮೆ ಕೆಲವು ಕುಟುಂಬಗಳು ತಮ್ಮ ಮನೆದೇವರಾದ ಯಿಳಕಲ್ ರಾಮೇಶ್ವರನಿಗೆ ಪೂಜೆ ಮಾಡಿ ಬರಲು ಪ್ರಾಯಶಃ ರಥಸಪ್ತಮಿ ವೇಳೆಗೆ ಹೋಗುವುದಿದೆಯಂತೆ. ಕೆಲವು ವೇಳೆ ಸಾಹಸಿ ಯುವಕರು, ಬಾಲಕರು ಬೆಟ್ಟ ಹತ್ತಲು ಇಲ್ಲಿಗೆ ಬರುತ್ತಾರೆ. ಇದು ಬಿಟ್ಟರೆ ದನಗಾಹಿಗಳು ಮಳೆಗಾಲದಲ್ಲಿ ಮಾತ್ರ ಹುಲ್ಲು ಮೇಯಿಸಲು ಇಲ್ಲಿ ಬರುತ್ತಾರೆ. ಇತರ ಸಮಯಗಳಲ್ಲಿ ನಿರ್ಜನವಾಗಿರುತ್ತದೆ. ಬೆಟ್ಟದ ಬುಡದಲ್ಲಿ



ದಟ್ಟವಾದ ಅರಣ್ಯವಿದೆ. ಇತ್ತೀಚೆಗೆ ಬೆಟ್ಟದ ಬುಡದಲ್ಲಿರುವ ಬೂರುಗಮರದಪಾಳ್ಯ ಗ್ರಾಮದ ಹೊರ ಅಂಚಿನಲ್ಲಿ ನೀಲಗಿರಿ ಮರಗಳನ್ನು ಸ್ವಲ್ಪ ದೂರದವರೆಗೆ ಸಾಲಾಗಿ ನೆಡಲಾಗಿದೆ. ಕಾಡುಕುರಿ, ಮೊಲ, ನರಿಗಳೂ ಇಲ್ಲಿ ವಾಸವಾಗಿವೆಯೆಂದು ಸ್ಥಳೀಯರು ಹೇಳುತ್ತಾರೆ. ಕಿರುಬಗಳ ಭಯದಿಂದ ಗ್ರಾಮಸ್ಥರು ಬೆಟ್ಟದ ಕಡೆಗೆ ಹೋಗುವುದನ್ನು ಬಿಟ್ಟಿದ್ದಾರಂತೆ.

ಈ ಬೆಟ್ಟಕ್ಕೆ ಏರಲು ರಸ್ತೆ ಮಾರ್ಗವನ್ನು ಮಾಡಿದರೆ ತುಮಕೂರಿಗೆ ಬೆಂಗಳೂರಿಂದ ಹೋಗಿ ಬರುವ ಪ್ರಯಾಣಿಕರಿಗೆ ಇಲ್ಲಿಗೂ ಬಂದು ಹೋಗಲು ಅವಕಾಶವಾಗುತ್ತದೆ. ಬೂರುಗಮರದಪಾಳ್ಯದಲ್ಲಿ ಒಂದೆರಡು ಚಿಕ್ಕ ಹೋಟೆಲು ಗಳನ್ನು ತೆರೆದರೆ, ಕ್ಯಾತ್ಸಂದ್ರದಿಂದ ಬೆಟ್ಟದ ಮೇಲಕ್ಕೆ ಹೋಗಲು ಮೈದಾಳದ ಮಾರ್ಗವಾಗಿ ಹೋಗಬೇಕಾಗುತ್ತದೆ. ಮೈದಾಳದ ವೀರಭದ್ರ ದೇವಾಲಯವೂ ಒಂದು ಪ್ರಾಚೀನ ಗುಡಿಯಾಗಿದೆ. ಆದುದರಿಂದ ಮೈದಾಳವನ್ನೂ, ಬಿಳಿಕಲ್ ಬೆಟ್ಟವನ್ನು ಸಾಹಸಿ ಗಳ ಮತ್ತು ಪ್ರವಾಸಿಗರ ತಾಣವನ್ನಾಗಿ ಮಾಡಬಹುದು.

(ಈ ಕ್ಷೇತ್ರ ವೀಕ್ಷಿಸಲು ಪಥಮಾರ್ಗದರ್ಶನ ಮಾಡಿದ ಬೂರುಗಮರದಪಾಳ್ಯದ ನಿವಾಸಿಯಾದ ಶ್ರೀ ಕರಿಗಂಗಯ್ಯನವರ ಮಗ ಜಯರಾಮರವರಿಗೂ, ಆ ಸಂದರ್ಭದಲ್ಲಿ ನನ್ನ ಜೊತೆಗಿದ್ದ ಗೆಳೆಯರಾದ ಕ್ಯಾತ್ಸಂದ್ರದ ಹನುಮಂತ ಮತ್ತು ಶಿರಾದ ನಂದೀಶರಿಗೂ ನನ್ನ ಕೃತಜ್ಞತೆಗಳು ಸಲ್ಲುತ್ತವೆ.)



ಮಂದರ್ಕೆ ನಿತ್ಯಾನಂದ ಪೈ*

# ಸಾಂತರ, ವೀರನೊಳಂಬ ಹಾಗು ಕೆಲವು ಪಾಳೇಗಾರರ ನಾಣ್ಯಗಳು

ಸಾಂತರರು, ಮಲೆ ಕರ್ನಾಟಕದ ಸಾಮಂತ ಅರಸು ಮನೆತನಗಳಲ್ಲಿ ಪ್ರಮುಖರಾಗಿದ್ದಾರೆ. ಸುಮಾರು ೯೦೦ವರ್ಷಗಳ ಸುದೀರ್ಘ ಆಳ್ವಿಕೆ ನಡೆಸಿದ ಇವರ ಬಗ್ಗೆ ಅಧ್ಯಯನಗಳು ನಡೆದರೂ ಇವರ ನಾಣ್ಯಗಳ ಬಗ್ಗೆ ಪರಾಮರ್ಶೆ ನಡೆದಿಲ್ಲ. ಇವರ ಶಾಸನಗಳಲ್ಲಿ **ಕುಮಾರ ಗದ್ಯಾಣ, ಗದ್ಯಾಣ, ವರಹ, ಹೊನ್ನು, ಹೊಂನು, ಹಣ** ಮುಂತಾದ ಚಿನ್ನದ ನಾಣ್ಯಗಳ ಉಲ್ಲೇಖವಿದ್ದರೂ, ಸಾಂತರರದೆಂದೇ ಹೇಳಬಹುದಾದ ನಾಣ್ಯಗಳನ್ನು ಇದುವರೆಗೂ ಗುರುತಿಸಿಲ್ಲಾ. ಆದರೆ ಇವರದೆಂದು ಹೇಳಬಹುದಾದ ನಾಣ್ಯಗಳನ್ನು ಚಾಳುಕ್ಯರ ನಾಣ್ಯಗಳೆಂದು ದಾಖಲಿಸಲಾಗಿದೆ. ಆ ಹಿನ್ನೆಲೆಯಲ್ಲಿ **'ಸಾಂತರ'**ರ ನಾಣ್ಯಗಳಿಗೆ ನ್ಯಾಯವನ್ನು ಒದಗಿಸುವ ನಿಟ್ಟಿನಲ್ಲಿ ಇದು ಒಂದು ಸಣ್ಣ ಪ್ರಯತ್ನ.

ಸುಮಾರು ಆರು ವರ್ಷಗಳ ಹಿಂದೆ ಕಳಸದಲ್ಲಿ ಸುಮಾರು ೬೫ ಚಿನ್ನದ ನಾಣ್ಯಗಳ ನಿಧಿಯೊಂದು ಲಭ್ಯವಾಗಿತ್ತು. ಈ ನಾಣ್ಯಗಳ ಸರಾಸರಿ ತೂಕ ೨೮೦ಮಿ. ಗ್ರಾಂ. ಆಗಿದ್ದು, ಇವು **'ಹಣ'** (Fanam) ಮಾದರಿಯ ದಾಗಿದ್ದವು. ಸಾಮಾನ್ಯವಾಗಿ ಈ ಎಲ್ಲಾ ನಾಣ್ಯಗಳ ಮುಂಭಾಗದಲ್ಲಿ ಸಿಂಹ ಚಿತ್ರವಿದ್ದು, ಹಿಂಭಾಗದಲ್ಲಿ ಪೂರ್ಣಕುಂಭದ ಎರಡೂ ಬದಿಯಲ್ಲಿ ದೀಪಸ್ತಂಭಗಳಿದ್ದವು. ಸಿಂಹದ ಲಾಂಛನವಿರುವುದರಿಂದ ಈ ನಾಣ್ಯಗಳನ್ನು ಕಲ್ಯಾಣ ಚಾಳುಕ್ಯರಿಗೆ ಸೇರಿದೆಂದು ಗುರುತಿಸಲಾಯಿತು. ನಂತರದ ದಿನಗಳಲ್ಲಿ ನಾಣ್ಯ ಸಂಗ್ರಹಣೆಗೆಂದು ಶಿವಮೊಗ್ಗ, ಹೊಂಬುಚ್ಚು,ತೀರ್ಥಹಳ್ಳಿ,ಶಿಕಾರಿಪುರ ಮುಂತಾದ ಸ್ಥಳಗಳಿಗೆ ಹೋದಾಗ ಇದೇ ಮಾದರಿಯ ಅಂದರೆ ಮುಂಭಾಗದಲ್ಲಿ ಸಿಂಹದ ಲಾಂಛನವಿರುವ ನಾಣ್ಯಗಳು ನೋಡಲು ಮತ್ತು ಸಂಗ್ರಹಣೆಗೆ ದೊರಕಿದವು. ಆದರೆ ಈ ನಾಣ್ಯಗಳ ಹಿಂಭಾಗದಲ್ಲಿ ಛತ್ರ, ಚಾಮರ, ಸ್ವಸ್ತಿಕ, ಪೂರ್ಣಕುಂಭ, ದೀಪದ ಕಂಬಗಳೇ ಮುಂತಾದ ಚಿಹ್ನೆಗಳಿದ್ದವು. ಆದರೆ ಯಾವಾಗ ಇಂತಹ ನಾಣ್ಯಗಳು ತುಳುನಾಡಿನ ಕಾರ್ಕಳ, ಕೆವ್ರಾಶೆ, ರೆಂಜಾಳಗಳಲ್ಲಿ ಲಭ್ಯವಾದವೋ ಆಗ ಈ ನಾಣ್ಯಗಳು ಕಲ್ಯಾಣ ಚಾಳುಕ್ಯರಿಗೆ ಸೇರಿದುವಲ್ಲವೆಂದು ಸಂಶಯ ಮೊಳೆಯಿತ್ತು. ಇದಕ್ಕೆ ಪೂರಕವಾಗಿ ಇದೇ ಮಾದರಿಯ ನಾಣ್ಯಗಳು ಗೇರುಸೊಪ್ಪೆ, ಭಟ್ಕಳ, ಆಗುಂಬೆ, ಬಾರಕೂರು, ಸೋಮೇಶ್ವರ, ವರಂಗ, ಉದ್ಯಾವರಗಳಲ್ಲಿ ಲಭ್ಯವಾದವು. ಆದರೆ ಆಳೂಪರ ಅಧೀನದಲ್ಲಿದ್ದ ವರಂಗ, ಬಾರಕೂರ, ಉದ್ಯಾವರದಲ್ಲಿ ದೊರಕಿರುವ ನಾಣ್ಯಗಳು ಸ್ವಲ್ಪ ವಿಭಿನ್ನವಾಗಿದ್ದವು. ಈ ನಾಣ್ಯಗಳ ಮುಂಭಾಗದಲ್ಲಿ ಸಿಂಹ ಲಾಂಛನವಿದ್ದು, ಹಿಂಭಾಗದಲ್ಲಿ ಶಂಖವಿದೆ. (ಆಳೂಪರ "ಹಾಗ" ಮೌಲ್ಯದ ಚಿನ್ನದ ನಾಣ್ಯಗಳ ಮೇಲು ಬದಿಯಲ್ಲಿ ಮೀನಿನ ಚಿತ್ರವಿದ್ದು, ಹಿಂಬದಿಯಲ್ಲಿ ಶಂಖದ ಚಿತ್ರವಿದೆ.) ವರಂಗದಲ್ಲಿ ದೊರಕಿರುವ ಇನ್ನೊಂದು 'ಹಣ'ವು ಬಹಳ ಮಹತ್ವ ಪೂರ್ಣವಾಗಿದೆ. ಇದರ ಒಂದು ಬದಿಯಲ್ಲಿ **ಆಳೂಪರ ಜೋಡಿ ಮೀನಿನ ಚಿತ್ರವಿದ್ದು, ಹಿಂಬದಿಯಲ್ಲಿ ಸಾಂತರ ಲಾಂಛನ ಸಿಂಹವಿದೆ.** ಸಾಂತರರಿಗೂ ಆಳೂಪರಿಗೂ ವರಂಗದ ನಂಟು ಗೊತ್ತಿರುವ ವಿಷಯವೇ ಆಗಿದೆ.

## ಯಾರು ಈ ಸಾಂತಳಿಗೆಯ ಸಾಂತರರು ?

*ಉದಧಿರೀತ ಭೂಮಿರಮಣೀ ರಮಣೀಯ್ಯ ಮುಖಾರವಿಂದದಂದದೆ*

**ಸೊಗಯಿಪ್ಪ ಸಾನ್ತಲಿಗೆ ಸಾಸಿರಮಂ**

ಅಂದರೆ ಸಮುದ್ರದ ದಡದವರೆಗೆ ಮೈ ಚಾಚಿ ಹರಡಿಕೊಂಡಿರುವ ಭೂಮಿಯೆಂಬ ಸ್ತ್ರೀಯ ಚೆಲುವಾದ ಮುಖಕಮಲವೋ ಎಂಬಂತೆ **'ಸಾಂತಳಿಗೆ'**ಯ ಸೌಂದರ್ಯ ವಿತ್ತಂತೆ.

ಜಗವೆಂಬೀವನಿತೆಗೆ ನಗೆ
ಮೊಗಮೆನೆಸಂದಿರ್ದ್ದ ಸಾ(ನ್ತಳಿ)ಗೆ ಸಾಸಿರಮಂ
ಜಗದೊಳ್ಪಡೆದಂ ನೃಪನೆಂ
ತುಗಡೆನೆ ಕಿತ್ತಳೆ ಕದಳೀ ನಾರಂಗಫಲಂ......

*ಗಣೇಶ್ ಎಂಟರ್‌ಪ್ರೈಸಸ್, ಮೂಡಬಿದರೆ, ೫೭೪ ೨೨೭.

ಜಗತ್ತು ಎಂಬ ವನಿತೆಗೆ ನಗು ಮುಖವೆಂಬ ಹಾಗೆ ಸಾಂತಳಿಗೆ ಸಾಸಿರನಾಡಿತ್ತು. ಕಿತ್ತಲೆ, ಬಾಳೆ, ತೆಂಗು ಫಲಗಳಿಂದ ಕೂಡಿದ ಈ ನಾಡನ್ನು (ಗೋನರಸ) ನೃಪನು ಪಡೆದನು. ಹೀಗೆ ಶಾಸನಗಳಲ್ಲಿ ಸಾಂತಳಿಗೆ ಸಾಸಿರನಾಡನ್ನು ವರ್ಣಿಸಿ ಅದರ ಆಗಿನ ಚೆಲುವನ್ನು ನಮ್ಮ ಕಣ್ಣಿಗೆ ಕಟ್ಟುವಂತೆ ಸಾಂತಳಿಗೆಯ ನಿಸರ್ಗದ ಸಿರಿಯನ್ನು ಕಾವ್ಯ ಶೈಲಿಯಲ್ಲಿ ವರ್ಣಿಸಲಾಗಿದೆ. ಈ ಶಾಸನಗಳಿಂದ ಸಾಂತಳಿಗೆ ನಾಡಿನಲ್ಲಿ ಅನೇಕ ಬಗೆಯ ಸುಗಂಧ ಪುಷ್ಪಗಳಿದ್ದು, ಪ್ರಣವಬೀಜಾಕ್ಷರ, ಓಂಕಾರ, ವೇದ ಶಾಸ್ತ್ರಾಧ್ಯಯನಗಳಿಂದ ಪವಿತ್ರವಾಗಿತ್ತು. ತುಂಬಿದ ಕೆರೆಗಳು, ವಿಶಾಲವಾದ ಹೊಲ ಗದ್ದೆಗಳು, ಬಗೆಬಗೆಯ ಕಾಡುಗಳು, ಅಪೂರ್ವವಾದ ದೇವಾಲಯ, ಜಿನಾಲಯ, ಅಗ್ರಹಾರಗಳಿಂದ ತುಂಬಿತ್ತು ಎಂದು ಗೊತ್ತಾಗುತ್ತದೆ.

ಸಾಂತರರು ಆಳಿದ ಪ್ರದೇಶಗಳನ್ನು 'ಸಾಂತಳಿಗೆ ಸಾಯಿರ' ಎಂದು ಕರೆಯಲಾಗಿದೆ. ಈಗಿನ ಶಿವಮೊಗ್ಗ ಜಿಲ್ಲೆಗೆ ಸೇರಿದ ಸಾಗರ, ಸೊರಬ, ತೀರ್ಥಹಳ್ಳಿ, ಹೊಸನಗರ, ಚಿಕ್ಕಮಗಳೂರು ಜಿಲ್ಲೆಯ ಮೂಡಿಗೆರೆ ತಾಲೂಕಿನ ಕಳಸದ ಸುತ್ತಮುತ್ತಲಿನ ಪ್ರದೇಶ ಹಾಗೂ ಕೊಪ್ಪ ತಾಲೂಕಿನ ಕಿಗ್ಗದ ನೆರೆಹೊರೆಯ ಪ್ರದೇಶಗಳನ್ನೊಳಗೊಂಡ ಪ್ರದೇಶವು **'ಸಾಂತಳಿಗೆ ಸಾಯಿರ'** ಎಂಬ ಪುಟ್ಟ ರಾಜ್ಯವಾಗಿತ್ತು. ಸಾ(ಶಾ)ಂತಳಿಗೆ ಎಂಬುದು ಒಂದು ಸ್ಥಳವಾಚಿ ಶಬ್ಧ. ಇದು ಈಗಿನ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲೂಕಿನ **'ಶಾಂತವೇರಿ'** ಎಂಬ ಪುಟ್ಟ ಹಳ್ಳಿ.

ಪೂಂಬುಚ್ಚ, ಹೊಂಬುಚ್ಚ, ಹೊಂಬುರ್ಚ (ಎಂದರೆ ಚಿನ್ನವನ್ನು ಹೊರತೆಗೆಯುವ ಸ್ಥಳ ಎಂದರ್ಥ ), ಹೊಂಬುಜ, ಹುಂಚ ಎಂದು ಕರೆಯಲ್ಪಡುವ ಈ ಪ್ರದೇಶ ಶಿವಮೊಗ್ಗ ಜಿಲ್ಲೆಯ ಆಗ್ನೇಯ ದಿಕ್ಕಿಗೆ ಸುಮಾರು ೬೦ಕಿ.ಮೀ. ದೂರದಲ್ಲಿದೆ. ಜೈನರ ಪ್ರಮುಖ ಧಾರ್ಮಿಕ ಕೇಂದ್ರ. ಪದ್ಮಾವತೀ ಅಮ್ಮನವರು ಇಲ್ಲಿಯ ಪ್ರಮುಖ ದೇವತೆ. ೮ನೆ ಶತಮಾನದಲ್ಲಿ ಮಲೆನಾಡಿನ ಮಾಂಡಲಿಕರ ರಾಜಧಾನಿಯಾಗಿ 'ಹೊಂಬುಜ'ವು ಮೆರೆದಿತ್ತು. ಈ ಮಾಂಡಲಿಕರನ್ನೇ 'ಸಾಂತರ'ರು ಎಂದು ಇತಿಹಾಸವು ಗುರುತಿಸಿದೆ. ಇವರು ಆಳ್ವಿಕೆ ಮಾಡಿದ ಪ್ರದೇಶವೇ 'ಸಾಂತಳಿಗೆ ಸಾಯಿರ'. ಈ ಪೊಂಬುಚ್ಚುವನ್ನು ಜಿನದತ್ತನು ವಶಪಡಿಸಿಕೊಂಡಿದ್ದನು.

**ಸಾಂತರರ ಪರಿಚಯ**

* ಪೊಂಬುಚ್ಚ ಪುರವರಾಧೀಶರಾದ ಸಾಂತರರು ಮೃಗರಾಜ (*ಸಿಂಹ*) ಲಾಂಛನರು, ವಾನರಧ್ವಜರು. ಜಕ್ಕಿಯಬ್ಬೆ (ಪದ್ಮಾವತೀ ಅಮ್ಮ) ಮೆಚ್ಚಿ ಸಿಂಗಲಾಂಛನಮಂ ಕೊಟ್ಟಳ್ ನಾರಾಯಣಂ ಮೆಚ್ಚಿ ಏಕ ಶಂಕಮುಮಂ, ಅಣುವನ್ ಪರಿಯಿಗೆಯುಮಂ ಕೊಟ್ಟಂ]. ಸಾಂತರರಂತೆಯೇ ಕದಂಬರದ್ದು ಸಹ ಸಿಂಹಲಾಂಛನ, ವಾನರಧ್ವಜ. ಸಾಂತರರಂತೆ ಜೈನರಾಗಿದ್ದ ಕಡೂರಿನ ಸೇನಾವರ ಮತ್ತು ಸಗರದ ಮಣಲೆಯರಿಗೂ ಸಿಂಹ ಲಾಂಛನವಿತ್ತು.
* ಸಾಂತರರು ಸುಮಾರು ೯೦೦ವರ್ಷಗಳಿಗಿಂತಲೂ ಸುದೀರ್ಘ ಆಳ್ವಿಕೆ ಮಾಡಿದ್ದರು. ಇವರ ಆಳ್ವಿಕೆ ಶಿವಮೊಗ್ಗ, ಚಿಕ್ಕಮಗಳೂರು, ಆಗಿನ ದಕ್ಷಿಣ ಕನ್ನಡ ಮತ್ತು ಉತ್ತರ ಕನ್ನಡದ ಭಾಗಗಳಿಗೆ ಮಾತ್ರ ಸೀಮಿತವಾಗಿತ್ತು.
* ಇವರು ಕ್ರಿ.ಶ. ೭ನೇ ಶತಮಾನದಲ್ಲಿ ಉತ್ತರದ ಮಧುರೆಯಿಂದ ಹೊಂಬುಜಕ್ಕೆ ಬಂದ ಮಹಾ ಉಗ್ರವಂಶಜರು.
* ತಮ್ಮ ಆಳ್ವಿಕೆಯ ಅವಧಿಯಲ್ಲಿ ಇವರು ಅನೇಕ ಸಲ ರಾಜಧಾನಿಯನ್ನು ಬದಲಾಯಿಸಿದ್ದರು. ಹೊಂಬುಜ ಸಾಂತರರ ಆರಂಭದ ನೆಲೆವೀಡು. ಅದೇ ಸಮಯದಲ್ಲಿ ಕಳಸ ಇವರ ಎರಡನೇಯ ನೆಲೆಯಾಗಿತ್ತು. ೧೨ನೆ ಶತಮಾನದ ಅಂತ್ಯದಲ್ಲಿ ಹೊಸಗುಂದ, ಸೇತು(೨) ಎಂಬಲ್ಲಿಗೆ ಸ್ಥಳಾಂತರವಾಯಿತು. ಅಂತಿಮವಾಗಿ ಇವರ ನೆಲೆವೀಡು ತುಳುನಾಡಿನ ಕಾರ್ಕಳ, ಶಿಶಿಲ ಉತ್ತರ ಕನ್ನಡ ಜಿಲ್ಲೆಯ ಗೇರುಸೊಪ್ಪೆ, ನಗರ, ಹಾಡುವಳ್ಳಿ (ಸಂಗೀತಪುರ), ಹೊನ್ನಾವರ (ಸುವರ್ಣವಲ್ಲಿ)ಗಳಿಗೆ ಹೊರಳಿತು.
* ಮಹಾ ಉಗ್ರವಂಶ, ಸಾಂತರ/ಶಾಂತರ, ಭೈರರಸ, ವೀರ ಪಾಂಡ್ಯರಸ ಎಂಬ ನಾಲ್ಕು ವಂಶಗಳ ಹೆಸರುಗಳನ್ನು ಇವರು ಹೊಂದಿದ್ದರು. ಇವುಗಳಲ್ಲಿ ಮೊದಲೆರಡು ಹೆಸರುಗಳು ಘಟ್ಟದ ಆಳ್ವಿಕೆಯ ಅವಧಿಯಲ್ಲೂ, ಕಡೆಯ ಎರಡು ಹೆಸರುಗಳು ಘಟ್ಟದ ಕೆಳಗಿನ ಆಡಳಿತ ಅವಧಿಯಲ್ಲಿ ಬಳಕೆಯಾಗಿದ್ದವು.
* ಸಾಂತರರು ಜೈನ ಧರ್ಮೀಯರಾಗಿದ್ದರೂ ಅವರಲ್ಲಿ ಧರ್ಮಾಂಧತೆ ಇರಲಿಲ್ಲ. ಸಮಚಿತ್ತರಾಗಿ ಆಳಿದ್ದರು. ನೊಕ್ಕಿಯಬ್ಬೆ (ಪದ್ಮಾವತಿ), ಪಾರ್ಶ್ವನಾಥ ಸ್ವಾಮಿಯನ್ನು ಕುಲದೈವವೆಂದು ಆರಾಧಿಸಿದರೂ, ಭಿಲ್ಲೇಶ್ವರ, ಕಮ್ಮಟೇಶ್ವರ, ಕಳಸನಾಥ ದೇವರುಗಳನ್ನು ಭಕ್ತಿಯಿಂದ ಕಂಡಿದ್ದರು.
* ಸಾಂತರರು ಮಹಾದಾನಿಗಳು, ಯುದ್ಧವೀರರು. ಇವರ ಸಾಹಸ ಗುಣಗಳು ಅವರ ಹೆಸರುಗಳಲ್ಲಿ ಮೇಳೈಸಿವೆ.

ವೀರ ಶಾನ್ತರ, ವಿಕ್ರಮ ಶಾನ್ತರ, ವಿಕ್ರಮಾದಿತ್ಯ ಶಾನ್ತರ, ಭುಜಬಳ ಶಾನ್ತರ, ತ್ರಿಭುವನಮಲ್ಲ ಶಾನ್ತರ ಎಂಬ ಹೆಸರುಗಳು ಅವರ ಪರಾಕ್ರಮಗಳಿಗೆ ಸಾಕ್ಷಿಯಾಗಿವೆ. ಇವರು ಅನೇಕ ಕಲೆಗಳಲ್ಲಿ ಪ್ರವೀಣರು.ಕುದುರೆ, ಆನೆಗಳ ಕುರಿತ ವಿದ್ಯೆ, ರತ್ನ ಪರೀಕ್ಷೆ, ಅಂಗಜ ಶಾಸ್ತ್ರ, ವಾದ್ಯ ಶಾಸ್ತ್ರ, ಗಾಯನ ಶಾಸ್ತ್ರ, ಅರ್ಥಶಾಸ್ತ್ರ, ಹೀಗೆ ನಾನಾ ಶಾಸ್ತ್ರಗಳಲ್ಲಿ ಪರಿಣತರು. ಅಲ್ಲದೇ ಕ್ರೀಡಾಸಕ್ತರು ಆಗಿದ್ದರು.

* ಇವರು ಸ್ತ್ರೀಪರ ನಿಲುಮೆಯಿದ್ದವರು. ಸಾಂತರ ರೊಂದಿಗೆ ಅವರ ರಾಣಿಯರೂ ಸಮಾನ ಅಧಿಕಾರ, ಸ್ವಾತಂತ್ರ್ಯ ಹೊಂದಿದ್ದರು.
* ಪ್ರಾರಂಭದಲ್ಲಿ ಆಳೂಪರನ್ನೂ ಸೋಲಿಸಿ ಹೊಂಬುಜ ವನ್ನು ಜಿನದತ್ತನು ವಶಪಡಿಸಿಕೊಂಡರೂ ಅಲ್ಲಿಂದ ಆಳುತ್ತಿರುವವರೆಗೂ ಗಂಗ, ರಾಷ್ಟ್ರಕೂಟ, ಚಾಳುಕ್ಯರ ಸಾಮಂತರಾಗಿದ್ದರು. ಕಲಶ (ಕಳಸ)ಕ್ಕೆ ಹೋದೊಡನೆ ಅಂದರೆ ಕ್ರಿ.ಶ. ೧೨೦೦ರಲ್ಲಿ ಹೊಯ್ಸಳರ ಸಾಮಂತರಾದರು. ಕಲಶದಿಂದ ಕಾರ್ಕಳಕ್ಕೆ ನೆಲೆಯಾದ ಮೇಲೆ ಕ್ರಿ.ಶ. ೧೪೦೦ ರಿಂದ ವಿಜಯನಗರದ ಮಾಂಡಲಿಕರಾದರು.
* ಕ್ರಿ.ಶ. ೯ನೇ ಶತಮಾನದ ಅಂತ್ಯಕ್ಕೆ ಬಹಳ ಪ್ರಾಬಲ್ಯ ಹೊಂದಿದ ಇವರು ಆಳೂಪರ ನಾಡಿಗೂ ಲಗ್ಗೆ ಇಟ್ಟು ಉದಯಾವರ, ಬಾರಕೂರ, ಮಂಗಳೂರಿನವರೆಗೂ ತಮ್ಮ ಪ್ರಭಾವ ಬೀರಿದ್ದರು. ಈ ರಾಜಕೀಯ ಸಂಘರ್ಷಗಳನ್ನು ನಿಲ್ಲಿಸಲು ಆಳೂಪರು ಸಾಂತರ ರೊಂದಿಗೆ ವೈವಾಹಿಕ ಸಂಬಂಧವನ್ನು ಸ್ಥಾಪಿಸಿದರು. ಹೊಯ್ಸಳರ ಧಾಳಿಯಿಂದ ಸಾಂತರರು, ಆಳೂಪರು ಒಂದಾದರು.
* ಕೊನೆಯ ಘಟ್ಟದಲ್ಲಿ ಕಳಸವನ್ನು ತೊರೆದು ಕಾರ್ಕಳಕ್ಕೆ ಬಂದ ಇವರು ತುಳುನಾಡಿನ ಒಡೆಯರಾಗಿ **ಭೈರರಸ** ರೆಂದು ಪ್ರಸಿದ್ಧರಾದರು.

**ಸಾಂತರರ ನಾಣ್ಯಗಳು**

ಇದುವರೆಗೆ ಸಿಕ್ಕಿರುವ ಸಾಂತರರದ್ದೆನ್ನಬಹುದಾದ ಎಲ್ಲಾ ಚಿನ್ನದ ನಾಣ್ಯಗಳು 'ಹಣ' ಮೌಲ್ಯದವಾಗಿದ್ದು (೧ ಗದ್ಯಾಣ = ೧೦ ಹಣ) ಇವುಗಳ ಸರಾಸರಿ ತೂಕ ೨೮೦ಮಿ.ಗ್ರಾಂ ಮತ್ತು ವ್ಯಾಸ ಸುಮಾರು ೬ಮಿ.ಮಿ ಆಗಿದೆ. ಈ ನಾಣ್ಯಗಳು ಲಭ್ಯವಾಗಿರುವ ಪ್ರದೇಶ ಮತ್ತು ಅವುಗಳ ಮೇಲಿರುವ ಚಿಹ್ನೆಗಳ ಆಧಾರದ ಮೇಲೆ ವಿಂಗಡಿಸಲಾಗಿದೆ.

**ಸಾಗರ, ಹೊಂಬುಚ, ಸೊರಬದಲ್ಲಿ ಸಿಕ್ಕಿರುವ ನಾಣ್ಯಗಳು**

**ಮುಂಭಾಗ** : ಬಲಗಡೆಗೆ ಮುಖ ಮಾಡಿ ಕುಳಿತಿರುವ ವಾನರನ ಚಿತ್ರವಿದೆ.



**ಹಿಂಭಾಗ** : ಪೂರ್ಣಕುಂಭ, ಶಂಖ ಮತ್ತು ಚೌರಿ, ಪೂರ್ಣಕುಂಭ ಇಕ್ಕೆಲಗಳಲ್ಲಿ ದೀಪದ ಕಂಬಗಳನ್ನು ಕಾಣಬಹುದು.



*ಪೂರ್ಣಕುಂಭ ಶಂಖ ಮತ್ತು ಚೌರಿ ಪೂರ್ಣಕುಂಭ ಇಕ್ಕೆಲಗಳಲ್ಲಿ ದೀಪದ ಕಂಬ*

*ಹೊಂಬುಚ, ಕಳಸ, ಶಿವಮೊಗ್ಗ, ನಗರ, ತೀರ್ಥಹಳ್ಳಿ ಆಗುಂಬೆ, ಸೊಮೇಶ್ವರ, ಗೇರುಸೊಪ್ಪೆಯಲ್ಲಿ ಸಿಕ್ಕಿರುವ ನಾಣ್ಯಗಳು :*

**ಮುಂಭಾಗ** : ಈ ನಾಣ್ಯಗಳ ಮೇಲೆ ಸಿಂಹ ಲಾಂಛನವಿದೆ.



**ಹಿಂಭಾಗ:** ಪದ್ಮಾವತಿ ಅಮ್ಮನವರ ಲಾಂಛನವಾದ ಕುಕ್ಕುಟ, ಸ್ವಸ್ತಿಕ, ಶಂಖ, ಚಕ್ರ, ಮುಕ್ಕೊಡೆ, ಅಂಕುಶ ಮುಂತಾದ ಜೈನ ಮತ್ತು ಹಿಂದೂಧರ್ಮದ ಚಿಹ್ನೆಗಳಿವೆ. ಇವುಗಳಲ್ಲಿ ಕೆಲವು ಚಿಹ್ನೆಗಳು ಪದ್ಮಾವತಿ ಅಮ್ಮ ಮತ್ತು ಭೈರವ, ಪದ್ಮಾವತಿ ದೇವಿಯ ಆಯುಧಗಳು (೩)



*ತುಳುನಾಡಿನ ಕಾರ್ಕಳ, ಕೆರವಾಸೆ, ರೆಂಜಾಳಗಳಲ್ಲಿ ಲಭಿಸಿರುವ ನಾಣ್ಯಗಳು :*

ಇಲ್ಲಿ ಸಿಕ್ಕಿರುವ ಸುಮಾರು ೯ ನಾಣ್ಯಗಳಲ್ಲಿ ಒಟ್ಟು ಮೂರನ್ನು ಅಧ್ಯಯನಕ್ಕೆ ತೆಗೆದುಕೊಂಡಿದ್ದೇನೆ.

**ಮುಂಭಾಗ** : ಇತರ ನಾಣ್ಯಗಳಂತೆ ಮುಂಭಾಗದಲ್ಲಿ ಬಲಕ್ಕೆ ಮುಖ ಮಾಡಿ ನಿಂತಿರುವ ಸಿಂಹದ ಚಿತ್ರವಿದೆ.



**ಹಿಂಭಾಗ :** ಪೂರ್ಣಕುಂಭದ ಎರಡೂ ಬದಿಗಳಲ್ಲಿ ಅಂಕುಶ ಮತ್ತು ದೀಪದ ಕಂಭ, ಶಂಖ ಮತ್ತು ದೀಪದ ಕಂಬವನ್ನು ಕಾಣಬಹುದು.



*ಬಾರಕೂರು ಮತ್ತು ಉದ್ಯಾವರದಲ್ಲಿ ದೊರಕಿರುವ ನಾಣ್ಯಗಳು :*

ಆಳೂಪರ ರಾಜಧಾನಿಗಳಾಗಿದ್ದ ಆಗಿನ ಬಾರಹ ಕನ್ಯಾಪುರ (ಬಾರಕೂರು) ಮತ್ತು ಉದಯಪುರ (ಉದ್ಯಾವರ)ದಲ್ಲಿ ಲಭ್ಯವಾದ ಮೂರು ನಾಣ್ಯಗಳು ಸಾಧಾರಣ ಒಂದೇ ರೀತಿಯಲ್ಲಿ ಇರುವುದರಿಂದ ಕೇವಲ ಒಂದನ್ನು ಆರಿಸಿಕೊಂಡಿದ್ದೇನೆ.

**ಮುಂಭಾಗ** : ಬಲಬದಿಗೆ ಮುಖ ಮಾಡಿರುವ ಸಿಂಹದ ಚಿತ್ರವಿದೆ.



**ಹಿಂಭಾಗ :** 'ಶಂಖ'ದ ಚಿಹ್ನೆ ಇದೆ.( ಆಳೂಪರ ಚಿನ್ನದ ನಾಣ್ಯಗಳಾದ ಗದ್ಯಾಣ ಮತ್ತು ಹಣ ಮೌಲ್ಯದ ನಾಣ್ಯಗಳಲ್ಲಿರುವ 'ಜೋಡಿ ಮೀನಿ'ನ ಬದಿಯಲ್ಲಿ ಸಾಮಾನ್ಯವಾಗಿ, ಮತ್ತು 'ಹಾಗ' ಮೌಲ್ಯದ ನಾಣ್ಯದ ಹಿಂಭಾಗದಲ್ಲಿ ಶಂಖದ ಚಿಹ್ನೆಯಿದೆ.).



**ವರಂಗದಲ್ಲಿ ದೊರಕಿರುವ ನಾಣ್ಯಗಳು :** ವರಂಗದಲ್ಲಿ ದೊರಕಿರುವ ೪ ನಾಣ್ಯಗಳಲ್ಲಿ ೩ ನಾಣ್ಯಗಳು ಬಾರಕೂರು, ಉದಯಾವರದಲ್ಲಿ ದೊರಕಿರುವ ನಾಣ್ಯಗಳಂತೆ ಇದೆ. ನಾಲ್ಕನೇ ನಾಣ್ಯವು ಬಹಳ ವೈಶಿಷ್ಟ ಪೂರ್ಣವಾಗಿದೆ.

ಈ ನಾಣ್ಯವನ್ನು ಆಭರಣದಲ್ಲಿ ಪದಕ ರೂಪವಾಗಿ ಉಪಯೋಗಿಸಲು **'ಕೊಂಡಿ'** (hook) ಯನ್ನು ಕಟ್ಟಲಾಗಿದೆ. ಸಿಂಹದ ಚಿಹ್ನೆಗೆ ಪ್ರಾಶಸ್ತ್ಯವನ್ನು ಕೊಟ್ಟಿರುವುದರಿಂದ ಸಿಂಹದ ಚಿತ್ರವು ಮಧ್ಯಕ್ಕೆ ಬರುವ ಹಾಗೆ ಕೊಂಡಿಯನ್ನು ಕಟ್ಟಲಾಗಿದೆ.

ಈ ನಾಣ್ಯದ ತೂಕ (ಕೊಂಡಿಯನ್ನು ಸೇರಿ) ಸುಮಾರು ೬೦೦ ಮಿ.ಗ್ರಾಂ. ವ್ಯಾಸ ೭ ಮಿ.ಮಿ.





**ಸಾಂತರ 'ಸಿಂಹ' ಲಾಂಛನ ಆಳೂಪರ 'ಜೋಡಿ ಮೀನಿ' ಲಾಂಛನ**

ಮಧ್ಯಯುಗೀನ ಆಳೂಪರ ಪ್ರಮುಖ ಸಾಮಂತರು ಹೊಂಬುಚ್ಚದ ಈ ಸಾಂತರರು. ಉದ್ಯಾವರದ ಕ್ರಿ.ಶ. ೪ರ ಶಾಸನ ಸಾಂತರರನ್ನು ಉಲ್ಲೇಖಿಸುತ್ತದೆ. ಆಳೂಪ ಸಾಂತರರ ವೈವಾಹಿಕ ಸಂಬಂಧಗಳನ್ನು ತುಳುನಾಡಿನ ಶಾಸನಗಳು ಉಲ್ಲೇಖಿಸುತ್ತವೆ. ವಿಕ್ರಮ ಸಾಂತರನ ಪುತ್ರ ಚಾಗಿಸಾಂತರನು ಆಳೂಪ ರಣಂಜಯನ ಮಗಳಾದ ರೆಂಜಲದೇವಿಯನ್ನು, ಒಂದನೇಯ ಬಂಕಿದೇವನು ಸಾಂತರ ಅಮ್ಮಣ್ಣನ ಮಗಳಾದ

ಬೀರಲದೇವಿಯನ್ನು ಮದುವೆಯಾಗಿ, ತನ್ನ ಮಗಳಾದ ಮಂಕಬ್ಬರಸಿಯನ್ನು ಸಾಂತರ ತೈಲಪ ದೇವನಿಗೆ ಮಾಡಿಕೊಟ್ಟಿದ್ದ. ಒಂದನೇ ವೀರ ಕುಲಶೇಖರ (ಕ್ರಿ.ಶ. ೧೧೭೦-೧೨೨೦)ನು ಸಂಬಂಧಿ ಸಾಂತರ ಜಯದೇವನಿಗೆ ಯುದ್ಧದಲ್ಲಿ ಸಹಾಯ ಮಾಡಿದ್ದ. ಕುಲಶೇಖರನ ನಂತರ ಸಿಂಹಾಸನಕ್ಕೆ ಉತ್ತರಾಧಿಕಾರಿಯಾಗಿ ಇಮ್ಮಡಿ ವಲ್ಲಭದೇವ ದತ್ತಾಳುಪ ಆಳಬೇಕಾಗಿತ್ತು. ಆದರೆ ಸಾಂತರ ಕುಂದಣನು ಸುಮಾರು ೧೦ವರ್ಷಗಳ ಕಾಲ ಇಮ್ಮಡಿ ವಲ್ಲಭ ದತ್ತಾಳದೇವಪನ ಪ್ರತಿನಿಧಿಯಾಗಿ ರಾಜ್ಯವನ್ನು ಆಳಿದ (ಕ್ರಿ.ಶ. ೧೨೨೦-೧೨೩೦). ಈ ಎಲ್ಲಾ ಸಂದರ್ಭಗಳ ಫಲಶ್ರುತಿಯೋ ಎಂಬಂತೆ ಆಳೂಪ ಮತ್ತು ಸಾಂತರರ ರಾಜಲಾಂಛನವಿರುವ ನಾಣ್ಯವು ಮುದ್ರಿಸಲ್ಪಟ್ಟಿರಬೇಕು. ಈ ಎಲ್ಲಾ ವಿಷಯಗಳನ್ನು ಅಂದರೆ ಈ ಮೇಲೆ ಚರ್ಚಿಸಿರುವ ನಾಣ್ಯಗಳು ಸಿಕ್ಕಿರುವ ಪ್ರದೇಶ ಮತ್ತು ಅವುಗಳಲ್ಲಿರುವ (ವಾನರ) ಮತ್ತು (ಸಿಂಹ) ಲಾಂಛನಗಳಿಂದ ಆ ನಾಣ್ಯಗಳನ್ನು **'ಸಾಂತಳಿಗೆಯ ಸಾಂತರ'**ರ ನಾಣ್ಯಗಳೆಂದೇ ಪರಿಗಣಿಸಬಹುದು.

**ವೀರನೊಳಂಬನ ಚಿನ್ನದ ಗದ್ಯಾಣ :** ನೊಳಂಬ, ನೊಡಂಬ, ನೊಣಂಬ, ನೊಂಬ, ನೊಣಬ ಎಂದು ನೊಳಂಬರನ್ನು ಇತಿಹಾಸದಲ್ಲಿ ಗುರುತಿಸಿದೆ. ಸುಮಾರು ೮ನೇ ಶತಮಾನದಿಂದ ೧೧ನೇ ಶತಮಾನದವರೆಗೆ ಆಳಿದ ಇವರ ರಾಜಧಾನಿ ಹೆಂಜೇರು (ಆಂದ್ರಪ್ರದೇಶದ ಮಡಕಶಿರಾ ತಾಲೂಕಿನ ಈಗಿನ ಹೇಮಾವತಿ), ಇವರು ಗಂಗ, ರಾಷ್ಟ್ರಕೂಟ, ಕಲ್ಯಾಣ ಚಾಳುಕ್ಯರ ಸಾಮಂತರಾಗಿದ್ದು ಕಂಚಿ ಪಲ್ಲವರ ಪರಂಪರೆಯವರು. ನೊಳಂಬರಿಗೂ ಕಂಚಿ ಪಲ್ಲವರಿಗೂ ಇರುವ ವ್ಯತ್ಯಾಸವನ್ನು ತಿಳಿಸಲು ಇವರನ್ನು ನೊಳಂಬರು ಅಥವಾ ನೊಳಂಬ ಪಲ್ಲವರು ಎಂದು ಕರೆಯುತ್ತಾರೆ. ನಂದಿ ಇವರ ರಾಜಲಾಂಛನ.

ಇದುವರೆಗೆ ಶ್ರೀ ನೊಳಂಬನಾರಾಯಣ (ಮಹೇಂದ್ರ ೧) ಇಮ್ಮಡಿ ನೊಳಂಬ ನಾರಾಯಣ (ಇಮ್ಮಡಿ ಮಹೇಂದ್ರ) ಮತ್ತು ನನ್ನಿನೊಳಂಬ (ತ್ರೈಲೋಕ್ಯ ಮಲ್ಲ ಇಮ್ಮಡಿ ನನ್ನಿನೊಳಂಬ) ಬಿರುದಿರುವ ನಾಣ್ಯಗಳು ಬೆಳಕಿಗೆ ಬಂದಿವೆ. ಇದರಲ್ಲಿ ಮೊದಲೆರಡು ನಾಣ್ಯಗಳು ದ್ವಿಮುದ್ರಾ ವಿಧಾನ (Double Die Struck)ದ ನಾಣ್ಯಗಳು, ಕೊನೆಯದು ಏಕಮುಖ ಮುದ್ರಾ ನಾಣ್ಯ (Uniface Punch mark)ಗಳು.

ಪ್ರಸ್ತುತ ಈ ನಾಣ್ಯವು ದ್ವಿಮುದ್ರಾ (Double Die Struck) ವಿಧಾನದ್ದಾಗಿದೆ.

**ನಾಣ್ಯದ ವಿವರ**

ಲೋಹ: ಚಿನ್ನ, ಆಕಾರ: ವೃತ್ತಾಕಾರ, ತೂಕ : ೩.೬೮. ಗ್ರಾಂ. ವ್ಯಾಸ : ೧೪ಮಿ.ಮೀ



ಮುಂಭಾಗ : ಎಡಗಡೆಗೆ ಮುಖಮಾಡಿ ಕುಳಿತಿರುವ ಆಲಂಕೃತ ನಂದಿ (ವೃಷಭ)ಯ ಚಿಹ್ನೆಯಿದ್ದು ಮೇಲೆ ಸೂರ್ಯ ಚಂದ್ರರಿದ್ದಾರೆ. ಕೆಳಗಡೆ ಬಳ್ಳಿ ಆಕಾರದ ವಿನ್ಯಾಸವಿದೆ.



ಶ್ರೀ ವಿರ
ನೊಳಂಬ

**ಹಿಂಭಾಗ :** ಶ್ರೀ ವೀರ, ನೊಳಂಬ ಎಂಬ ೨ ಸಾಲಿನ ಕನ್ನಡ ಲಿಪಿ ಶಾಸನದ ನಡುವೆ ಚುಕ್ಕೆಗಳ ಗೆರೆಯಿದೆ.

ಗಂಗ ದೊರೆ ಇಮ್ಮಡಿ ಮಾರಸಿಂಹನು ಕ್ರಿ.ಶ. ೯೭೦ರ ಸುಮಾರಿಗೆ ನೊಳಂಬರನ್ನು ವಿವಿಧ ಪ್ರದೇಶಗಳಲ್ಲಿ ನಾಶ ಮಾಡಿ **ನೊಳಂಬ ಕುಲಾಂತಕ** ಎಂಬ ಬಿರುದನ್ನು ಪಡೆದನು. ಈ ಯುದ್ಧದಲ್ಲಿ ಕೊಲ್ಲಲ್ಪಟ್ಟ ಇಮ್ಮಡಿ ಪೊಳಲ್ಚೋರನ ಮಗನೇ ಇಮ್ಮಡಿ ಮಹೇಂದ್ರ (ಕ್ರಿ.ಶ. ೯೭೫-೯೮೧). ಇವನು ಅಜ್ಜನಾದ ಛಲದಂಕಕಾರ ನನ್ನಿನೊಳಂಬನ ನಂತರ ಸಿಂಹಾಸನವನ್ನು ಏರಿದ. ಇಮ್ಮಡಿ ಮಹೇಂದ್ರನು ಸಮರ್ಥನಾದ ದೊರೆಯಾದರೂ ತನ್ನ ಅಸ್ತಿತ್ವವನ್ನು ಉಳಿಸಲು ಕಲ್ಯಾಣ ಚಾಳುಕ್ಯ ದೊರೆ ಇಮ್ಮಡಿ ತೈಲನ ಸಹಾಯವನ್ನು ಯಾಚಿಸಿ, ಇಮ್ಮಡಿ ಮಾರಸಿಂಹನಿಂದ ನಾಶವಾದ ನೊಳಂಬ ಸಾಮ್ರಾಜ್ಯವನ್ನು ಪುನಃ ಕಟ್ಟಲು ಸಮರ್ಥನಾದ. ಚಿತ್ತೂರು ಜಿಲ್ಲೆಯ ಶಾಸನದ ಪ್ರಕಾರ ಇವನು ಚೋಳದೇಶಕ್ಕೆ ಹೋದ ಕಾರಣ ಗೊತ್ತಾಗದಿದ್ದರೂ, ಚಾಳುಕ್ಯ ದೊರೆ ಇಮ್ಮಡಿ ತೈಲನ ಸಹಾಯಕ್ಕೆ ಹೋಗಿರಬಹುದು ಎಂದು ಊಹಿಸಲಾಗಿದೆ. ಈ ಇಮ್ಮಡಿ ಮಹೇಂದ್ರನೇ ವೀರನೊಳಂಬನೆಂಬ ಬಿರುದನ್ನು ಹೊಂದಿದ್ದನು.

ಇಮ್ಮಡಿ ಮಹೇಂದ್ರನು ಕ್ರಿ.ಶ. ೯೭೭ರ ಹೊತ್ತಿಗೆ ಸಿಂಹಾಸನವನ್ನು ಏರಿದ್ದನು. **"ವೀರ ನೊಳಂಬ"** ಬಿರುದು

ಕಲ್ಯಾಣ ಚಾಲುಕ್ಯ ದೊರೆ ಆಹವಮಲ್ಲ (ಇಮ್ಮಡಿ ತೈಲ)ನ ಕಾಲದ 'ಕಂಚಗಾರ ಬೆಳಗಲ್ಲು' ಶಾಸನದಲ್ಲಿ ಕಂಡು ಬರುತ್ತದೆ. ಈ ಶಾಸನದ ಕಾಲ ಶಕ. ೯೦೩. ಅಂದರೆ ಕ್ರಿ.ಶ.೯೮೧ರ ಸೋಮವಾರ ಎಪ್ರಿಲ್ ೨೨ಕ್ಕೆ ಸರಿ ಹೊಂದುತ್ತದೆ. ಈ ಶಾಸನದಲ್ಲಿ ವೀರನೊಳಂಬ ಪಲ್ಲವ ಪೆರ್ಮನಡಿಯ ಹೆಂಡತಿ ರೇವಲಾದೇವಿಯು ಸ್ಥಳೀಯ ವಿಷ್ಣು ದೇವಸ್ಥಾನಕ್ಕೆ ದಾನವನ್ನು ಕೊಟ್ಟ ವಿವರಗಳಿವೆ. ಇದನ್ನು ಬಿಟ್ಟರೆ ಬೇರಾವ ವಿವರಗಳು ಈ ಶಾಸನದಲ್ಲಿ ಕಂಡು ಬರುವುದಿಲ್ಲಾ. ಈ ವೀರನೊಳಂಬ ಪಲ್ಲವಪೆರ್ಮನಡಿಯು ಆಹವಮಲ್ಲನ ಕೆಳಗೆ ಆಳ್ವಿಕೆ ಮಾಡಿಕೊಂಡಿದ್ದ ಇಮ್ಮಡಿ ಪೊಳಲ್ಚೋರನ ಮಗನಾದ 'ಇಮ್ಮಡಿ ಮಹೇಂದ್ರನೇ' ಆಗಿದ್ದಾನೆ. ಈ ವೀರ ಪದವನ್ನು ನೊಳಂಬರಸರು ಸಾಮಾನ್ಯವಾಗಿ ತಮ್ಮ ಹೆಸರುಗಳೊಂದಿಗೆ ಉಪಯೋಗಿಸುತ್ತಿದ್ದರು. "ಕರ್ಷಣಾಪಳ್ಳಿ" ಶಾಸನವು ಇಮ್ಮಡಿಮಹೇಂದ್ರನನ್ನು 'ವೀರ ಮಹೇಂದ್ರ'ನೆಂದೇ ಉಲ್ಲೇಖಿಸಿದೆ. 'ಕಂಚಗಾರ ಬೆಳಗಲ್ಲು ಶಾಸನದ ಕಾಲ ಕ್ರಿ.ಶ. ೯೮೧ ಆಗಿದ್ದು ಇದು ಇಮ್ಮಡಿ ಮಹೇಂದ್ರನ ಕಾಲಕ್ಕೆ (ಕ್ರಿ.ಶ. ೯೭೫-೯೮೧) ಸರಿಹೊಂದುತ್ತದೆ. ಆದ್ದರಿಂದ ಶಾಸನೋಕ್ತ "ವೀರ ನೊಳಂಬ"ನು ಇಮ್ಮಡಿ ಮಹೇಂದ್ರನೇ ಆಗಿದ್ದಾನೆ (ಉ) ಇಮ್ಮಡಿ ಮಹೇಂದ್ರನಿಗೆ 'ವೀರನೊಳಂಬ 'ನೆಂಬ ಬಿರುದಲ್ಲದೇ ಪಲ್ಲವಾಭರಣ, ಆಹವದುರ್ಗ, ಅಹಿತ ರಾಜವ, ಅಮೋಘವಾಕ್ಯ, ನೊಳಂಬನಾರಾಯಣ ನೊಳಂಬಾಧಿರಾಜ ಏಕವಾಕ್ಯ ಮುಂತಾದ ಬಿರುದುಗಳಿದ್ದವು. ತಮಿಳುನಾಡಿನ ಸವಿತ್ಯಗ್ರಾಮದಲ್ಲಿ ಸಿಕ್ಕಿರುವ ೧೦ನೇ ಶತಮಾನದ ವೀರಗಲ್ಲಿನಲ್ಲಿ 'ವೀರನೊಳಂಬ'ನ ಉಲ್ಲೇಖವಿದೆ.

**ಬೇಲೂರು ನಾಯಕರ ನಾಣ್ಯ:**



ಲೋಹ: ತಾಮ್ರ ಆಕಾರ: ವೃತ್ತಾಕಾರ ವ್ಯಾಸ : ೧.೨ಸೆ,ಮಿ ತೂಕ ೧.೧೨೦ ಗ್ರಾಂ

ಮುಂಬದಿ:- ಎಡಬದಿಗೆ ಮುಖಮಾಡಿ ನಿಂತಿರುವ ಬಸವನ ಚಿತ್ರವಿದೆ. ಬಸವನ ಚಿತ್ರವು, ನಾಣ್ಯದ ಗಾತ್ರಕ್ಕಿಂತಲೂ ದೊಡ್ಡದಾಗಿರುವುದರಿಂದ ಇದರ ಮುಖವು ನಾಣ್ಯವನ್ನು ಟಂಕಿಸುವಾಗ ಮೂಡಿಬಂದಿಲ್ಲ.

ಹಿಂಬದಿ : ೨ ಸಮಾನಾಂತರ ಗೆರೆಯ ನಡುವೆ 'ಯುಗಚಿ' ಎಂಬ ಸು. ೧೫-೧೬ನೇ ಶತಮಾನದ ವಿಜಯನಗರ ಕಾಲದ ಕನ್ನಡ ಲಿಪಿಯಿದ್ದು ಈ ಎರಡೂ ಸಮಾನಂತರ ಗೆರೆಯ ಹೊರಬದಿಯಲ್ಲಿ ಚುಕ್ಕೆಗಳ ಸಾಲಿದೆ.

ಕರ್ನಾಟಕದಲ್ಲಿ ಹಲವಾರು ನದಿಗಳು ಹುಟ್ಟಿ ಹರಿದು ಕೆಲವೊಂದು ಸಾಮ್ರಾಜ್ಯಗಳು ಹುಟ್ಟಿ ಬೆಳೆಯುದಕ್ಕೆ ಜೀವಂತ ಸಾಕ್ಷಿಯಾಗಿ ನಿಂತಿವೆ. ಈ ಜೀವನದಿಗಳ ದೆಸೆಯಿಂದ ನಾಡಿನ ಅಭಿವೃದ್ಧಿಯಾಗಿದೆ. ಈ ಜೀವನದಿಗಳು ಮಳೆಗಾಲದಲ್ಲಿ ತುಂಬಿ ಹರಿದಾಗ ಅವುಗಳನ್ನು ಪೂಜಿಸಿ, ಬಾಗಿನಗಳನ್ನು ಅರ್ಪಿಸಿ ಕೃತಜ್ಞತೆಯನ್ನು ಅರ್ಪಿಸುತ್ತಾರೆ. ಆದರೆ ಬೇಲೂರಿನ ನಾಯಕ ವಂಶಸ್ಥರ ತಮ್ಮ ನಾಡನ್ನು ಬಂಗಾರದ ಬೀಡನ್ನಾಗಿ ಮಾಡಿದ 'ಯುಗಚಿ'ಯ ಹೆಸರಿನ ನಾಣ್ಯವನ್ನು ಮುದ್ರಿಸಿ ತಮ್ಮ ಕೃತಜ್ಞತೆಯನ್ನು ತೋರಿಸಿದ್ದಾರೆ. ಕರ್ನಾಟಕದ ನಾಣ್ಯ ಇತಿಹಾಸದಲ್ಲೇ ಇದೊಂದು ಅಪರೂಪದ ಮತ್ತು ಏಕೈಕ ಉದಾಹರಣೆಯಾಗಿದೆ.

ಯಗಚಿ ನದಿಯು ಬದರಿ ಎಂಬ ಹೆಸರಿನಿಂದಲೂ ಪ್ರಸಿದ್ಧವಾಗಿದೆ. ಈ ನದಿಯು ಚಿಕ್ಕಮಗಳೂರು ಜಿಲ್ಲೆಯ ಬಾಬಾಬುಡನಗಿರಿಯಲ್ಲಿ ಹುಟ್ಟಿ ದಕ್ಷಿಣಾಭಿಮುಖವಾಗಿ ಹರಿದು, ಬೇಲೂರು ತಾಲೂಕಿನ ನಿರಿಘಟ್ಟ ಎಂಬಲ್ಲಿ ಹಾಸನ ಜಿಲ್ಲೆಯನ್ನು ಪ್ರವೇಶಿಸಿ ಗೊರೂರು ಗ್ರಾಮದ ಹತ್ತಿರ ಹೇಮಾವತಿಯನ್ನು ಸೇರಿಸಿಕೊಳ್ಳುತ್ತದೆ. ಈ ನದಿಯ ಉದ್ದ ೭೫ ಕಿ.ಮಿ. ವಾಟೆ ಹೊಳೆ ಮತ್ತು ಬೀರಂಬೆಹಳ್ಳ ಯಗಚಿಯ ಉಪನದಿಗಳು. ಈ ನದಿಯಿಂದ ಬೇಲೂರು, ಹಾಸನ ಪಟ್ಟಣಗಳಿಗೆ ಕುಡಿಯುವ ನೀರಿನ ಸರಬರಾಜಾಗುತ್ತದೆ.

ಈ ನದಿಯ ದೆಸೆಯಿಂದ ಹೊಯ್ಸಳರು ತಮ್ಮ ಸಾಮ್ರಾಜ್ಯದ ರಾಜಧಾನಿಯನ್ನು ಶಶಕಪುರದಿಂದ ಬೇಲೂರಿಗೆ ವರ್ಗಾಯಿಸಿದರು. ಅಲ್ಲದೇ ಬೇಲೂರು ಅಭಿವೃದ್ಧಿಗೆ ಈ 'ಯಗಚಿ'ಯೇ ಕಾರಣವಾಯಿತು. ಕರ್ನಾಟಕದಲ್ಲಿ ಒಂದು ಸಾಮ್ರಾಜ್ಯ, ವೈಷ್ಣವ ಧರ್ಮ ಹಾಗೂ ಸಂಸ್ಕೃತಿಗಳು ಬೇಲೂರಿನಲ್ಲಿ ಬೆಳೆಯಲು ಈ ಯಗಚಿ ನದಿಯೇ ಕಾರಣ (ಊ).

ಪ್ರಸ್ತುತ ಈ ನಾಣ್ಯವು ಬೇಲೂರಿನಲ್ಲಿಯೆ ನನಗೆ ಸಿಕ್ಕಿದ್ದುದರಿಂದ ಇದನ್ನು ಬೇಲೂರು ನಾಯಕರೇ ಟಂಕಿಸಿರಬಹುದೆಂದು ಹೇಳಬಹುದು. ಈ ಬೇಲೂರು ನಾಯಕರನ್ನು ಬಲಂನಾಯಕರು, ಐಗೂರು ನಾಯಕರು, ಹೊಳೆ ನರಸೀಪುರ ಪ್ರಭುಗಳೆಂದು ಕರೆಯುತ್ತಾರೆ.

E.C IX ರಲ್ಲಿ ಇವರ ೬೩ ಶಾಸನಗಳಿದ್ದು ಹೆಚ್ಚಿನ ಶಾಸನಗಳಲ್ಲಿ ಈ ಚರಿತ್ರೆ ಬಯಪ್ಪ ನಾಯಕ (ಕ್ರಿ.ಶ. ೧೫೦೬-೨೮)ನ ಪುತ್ರ ಎರಕೃಷ್ಣಪ್ಪನಾಯಕ (ಕ್ರಿ.ಶ. ೧೫೨೪-೧೫೬೦)ನಿಂದ ಪ್ರಾರಂಭವಾಗುತ್ತದೆ. ಇದಕ್ಕೆ ಕಾರಣ

ಬೇಲೂರ ಅಮರ ಮಾಗಣೆಯನ್ನು ವಿಜಯನಗರದ ಕೃಷ್ಣದೇವರಾಯನು ಎರಕೃಷ್ಣಪ್ಪ ನಾಯಕನಿಗೆ ಮೊದಲ ಬಾರಿಗೆ ದಯಪಾಲಿಸಿದ್ದು, ಬೇಲೂರಿಗೆ ಬರುವ ಮೊದಲು ಇವರು ಸಿಂಧನಾಡೆನಿಸಿದ ಬಾಗಡಗೆ ೭೦ರಲ್ಲಿ ಬಾದಾಮಿ ಮುಂತಾದ ಪ್ರದೇಶಗಳಲ್ಲಿದ್ದರು. ಇವರಿಗೆ ಮಣಿನಾಗಪುರವರಾಧೀಶ್ವರ, ಸಿಂಧ ಗೋವಿಂದ, ಧವಳಾಂಕ ಭೀಮ, ಸಿತಕರಗಂಡ ಮತ್ತು ಬಾರೀದ ಸಪ್ತಾಂಗ ಹರಣ ಎಂಬ ಬಿರುದುಗಳಿವೆ. ಸಿಂಧ ಗೋವಿಂದ ಎಂಬ ಬಿರುದು ಇವರು ಮೂಲತಃ 'ಸಿಂಧ' ಮನೆತನದವರೆಂದು ಸೂಚಿಸುತ್ತದೆ. ಸಿಂಧ ಗೋವಿಂದ ಮತ್ತು ಸಿತಕರಗಂಡ ಬಿರುದುಗಳು ಸಿಂಧರಾಚಮಲ್ಲ ದೊರೆಗೆ ಇದ್ದುದ್ದು ಕುರುಗೋಡ ಶಾಸನದಿಂದ ತಿಳಿದು ಬರುತ್ತದೆ.(ಯ) ಶೃಂಖಲಾ ಬದ್ಧ ಸಂಬಂಧಗಳನ್ನು ತೋರಿಸಲು ಸಾಧ್ಯವಿಲ್ಲದಿದ್ದರೂ ಇವರು ಒಂದೇ ವಂಶದವರೆಂಬುದಕ್ಕೆ ಆಧಾರವಿದೆ. ಐಗೂರ ಸೀಮೆಯನ್ನು ಈ ಕೃಷ್ಣಪ್ಪ ನಾಯಕನಿಗೆ ಕೊಟ್ಟಿತ್ತೆಂಬುದು ಸಕಲೇಶಪುರ ೩ನೇ ಶಾಸನದಿಂದ ವಿದಿತ. ಅದು ಬೇಲೂರು ರಾಜ್ಯದ ಒಳಗಿತ್ತು ಎಂದು ಈ ಶಾಸನದಲ್ಲಿ ಕಾಣುತ್ತದೆ. ಈ ನಾಣ್ಯವನ್ನು ಯಾವ ಬೇಲೂರ ನಾಯಕರು ಟಂಕಿಸಿದ್ದಾರೆ ಎಂದು ಹೇಳಲು ಕಷ್ಟವಾಗುತ್ತದೆ. ಆದರೆ ಕೆಲವೊಂದು ಊಹೆಗಳನ್ನು ಮಾಡಬಹುದು. ಕರ್ನಾಟಕದ ಸಾಮಂತರುಗಳು ತಮ್ಮ ಪ್ರಭುಗಳ ನಾಣ್ಯ ಮಾದರಿಯಲ್ಲಿಯೇ ನಾಣ್ಯಗಳನ್ನು ಮುದ್ರಿಸುವುದು ಚಾಳುಕ್ಯರ ಕಾಲದಲ್ಲೂ ಕಾಣಬಹುದಾಗಿದೆ. ಅಲ್ಲದೇ ವಿಜಯನಗರ ಸಾಮ್ರಾಜ್ಯದ ನಾಣ್ಯಗಳು ಅವುಗಳ ವೈವಿಧ್ಯತೆಯಿಂದ, ದೈವದೇವತೆಗಳ ಚಿತ್ರಗಳಿಂದ ಧಾರ್ಮಿಕ ಚಿಹ್ನೆಗಳಿಂದ ಸುಂದರ ಬರಹಗಳಿಂದ ಮತ್ತು ಕಲಾತ್ಮಕತೆ ಹಾಗೂ ತಾಂತ್ರಿಕ ಮೇಲ್ಮೆಯಿಂದ ಜನಮನ್ನಣೆ ಗಳಿಸಿದ್ದವು. ಇಂತಹ ಶ್ರೀಮಂತ ನಾಣ್ಯಗಳನ್ನು ಅನುಕರಿಸಬೇಕೆಂಬ ಅಪೇಕ್ಷೆ ಅನಂತರ ಆಳಿದ ನಾಯಕರು ಮತ್ತು ಪಾಳೇಗಾರರಿಗೆ ಉಂಟಾದದ್ದು ಸಹಜವೇ ಆಗಿದೆ. (ಎ)

ಈ ದಿಸೆಯಲ್ಲಿ 'ಯಗಚಿ' ಹೆಸರಿನ ನಾಣ್ಯವನ್ನು ಪರಿಶೀಲಿಸಿದಾಗ ಆ ನಾಣ್ಯದ ಹಿಂಬದಿಯ ವಿನ್ಯಾಸವು ವಿಜಯನಗರದ ಅಚ್ಯುತರಾಯನ (ಕ್ರಿ.ಶ. ೧೫೨೯-೧೫೪೨) ತಾಮ್ರದ ನಾಣ್ಯವನ್ನು ಹೋಲುತ್ತದೆ.(ಏ)



ಈ ನಾಣ್ಯದ ಮುಂಭಾಗದಲ್ಲಿ ವೈಷ್ಣವನಾಮದ ಚಿಹ್ನೆಯಿದ್ದು ಹಿಂಬದಿಯಲ್ಲಿ **'ಯಗಚಿ'** ನಾಣ್ಯದ ವಿನ್ಯಾಸದಂತೆಯೇ ಚುಕ್ಕೆ ಮತ್ತು ಗೆರೆಗಳ ನಡುವೆ **'ಅಚುತ'** ಎಂಬ ಕನ್ನಡಲಿಪಿ ಇದೆ. ಈ ಎರಡೂ ನಾಣ್ಯಗಳ ಹಿಂಬದಿಯ ವಿನ್ಯಾಸಗಳು ಶತಃಪ್ರತಿ ಶತ ಒಂದಕ್ಕೊಂದು ಹೋಲುವುದರಿಂದ ಅಚ್ಯುತರಾಯನ ಸಮಕಾಲೀನ, ವಿಜಯನಗರದ ಪಾಳೇಗಾರನಾದ **ಎರಕೃಷ್ಣಪ್ಪನಾಯಕ** (ಕ್ರಿ.ಶ.೧೫೨೪-೧೫೭೦)ನು ಈ ನಾಣ್ಯವನ್ನು ಟಂಕಿಸಿರಬಹುದೆಂದು ಊಹಿಸಬಹುದು. ಏನೇ ಆದರೂ ಒಂದು ನದಿಯ ಹೆಸರಿನಲ್ಲಿ ನಾಣ್ಯವನ್ನು ಮುದ್ರಿಸಿ, ತಮ್ಮ ಕೃತಜ್ಞತೆಯನ್ನು ಅರ್ಪಿಸಿದ ಬೇಲೂರ ನಾಯಕರು ಧನ್ಯರಾಗಿದ್ದಾರೆ.

**ಚನ್ನಪಟ್ಟಣ ಪಾಳೇಗಾರರ ನಾಣ್ಯ**



ಲೋಹ: ತಾಮ್ರ, ಆಕಾರ: ವೃತ್ತಾಕಾರ ತೂಕ: ೩.೨೩೦ಗ್ರಾಂ ವ್ಯಾಸ: ೧.೮ಸೆಂ.ಮಿ.

ವಿಜಯನಗರದ ನಾಣ್ಯದ ಮೇಲೆ ಈ ನಾಣ್ಯವು ಪುನಃ ಟಂಕಿಸಲ್ಪಟ್ಟಿದ್ದು. ವಿಜಯನಗರ ನಾಣ್ಯದ ಮುಂಬದಿ ಮತ್ತು ಹಿಂಬದಿಯ ಮೇಲೆ ಪ್ರಸ್ತುತ ನಾಣ್ಯದ ಹಿಂಬದಿ ಮತ್ತು ಮುಂಬದಿಯನ್ನು ಕಾಣಬಹುದು.

**ಮುಂಬದಿ:**- ಪ್ರಭಾವಳಿಯ ಒಳಗೆ ಕುಳಿತುಕೊಂಡಿರುವ **'ಯಾಳಿ'** (ಸಿಂಹಮುಖದ ಕಾಲ್ಪನಿಕ ಪ್ರಾಣಿ)ಯ ಚಿತ್ರವಿದ್ದು ಹಿನ್ನೆಲೆಯಲ್ಲಿ ಮೂಲ ನಾಣ್ಯದ ನಾಗರೀ ಲಿಪಿಯನ್ನು ಕಾಣಬಹುದು.

**ಹಿಂಬದಿ:**- ಗೆರೆಗಳ ನಡುವೆ **'ಜಗದೆ'** ಎಂಬ ಕನ್ನಡ ಲಿಪಿಇದ್ದು ಉಳಿದ ಅಕ್ಷರಗಳು ಭಾಗಶಃ ಕಾಣುತ್ತವೆ. ಇದರೊಂದಿಗೆ ಮೂಲನಾಣ್ಯದ ಕಿನ್ನರಿ (ಸೊಂಟದ ಮೇಲ್ಭಾಗ ಸ್ತ್ರೀ, ಕೆಳಭಾಗ ಹಂಸ)ಯ ತಲೆಕೆಳಗಾದ ಚಿತ್ರ ಕಾಣಬಹುದು.

**ಜಗದೇವರಾಯನು** ಚನ್ನಪಟ್ಟಣ ಪಾಳೇಗಾರರ ವಂಶದ ದೊರೆಯಾಗಿದ್ದು (೧೬ನೆಯ ಶತಮಾನ) ಅವನಿಗೆ ಮುಖ್ಯ ಮಂತ್ರಿಯಾಗಿ ಸಹೋದರನಾದ 'ಅಂಕುಶರಾಯ'ನೆಂಬ

ವೀರನಿದ್ದನು. ಇವನು ನಾಗಮಂಗಲದಲ್ಲಿ ನಡೆದ ಯುದ್ಧದಲ್ಲಿ ಮೈಸೂರು ದೊರೆ ಬೆಟ್ಟದ ಅರಸನನ್ನು ಸೋಲಿಸಿದ. ಆದರೆ ಕೆಲವೇ ಸಮಯದ ನಂತರ ಮೈಸೂರು ದೊರೆ ಚಾಮರಾಜ ಒಡೆಯರು ಜಗದೇವರಾಯನನ್ನು ಸೋಲಿಸಲು ದೊಡ್ಡ ಸೈನ್ಯವನ್ನು ಕಳುಹಿಸಿದನು. ಆಗ ನಡೆದ ಯುದ್ಧದಲ್ಲಿ ಅಂಕುಶ ರಾಯನು ವೀರ ಮರಣವನ್ನಪ್ಪಿದನು. ಜಗದೇವರಾಯನ ತಾಮ್ರದ ನಾಣ್ಯವು ಈಗಾಗಲೇ ಪ್ರಕಟಿಸಲ್ಪಟ್ಟಿದೆ (ಐ). ಈ ನಾಣ್ಯದ ಮುಂಭಾಗದಲ್ಲಿ ಗಂಡಭೇರುಂಡ ಚಿತ್ರವಿದ್ದು, ಹಿಂಬದಿಯಲ್ಲಿ ಗೆರೆಗಳ ನಡುವೆ ಜಗದೇವರಾಯ ಎಂಬ ಕನ್ನಡ ಲೇಖವಿದೆ. ಇದರ ತೂಕ ೨.೭೦ಗ್ರಾಂ. ವ್ಯಾಸ ೧.೫ ಸೆ.ಮಿ. ಆದರೆ ಈ ಕನ್ನಡ ಲಿಪಿಯು ಇತ್ತೀಚಿನ ಕಾಲಕ್ಕೆ ಸೇರಿದ್ದು, ಈ ನಾಣ್ಯವನ್ನು ಪ್ರಾಚೀನ ಕಾಲದ ಜಗದೇವರಾಯನಿಗೆ ಸಂಬಂಧಿಸಿದುದೆಂದು ಹೇಳಲು ಸಾಧ್ಯವಿಲ್ಲವೆಂದು ಡಾ। ಎ.ವಿ. ನರಸಿಂಹಮೂರ್ತಿಗಳು ಹೇಳುತ್ತಾರೆ (ಓ). ಆದರೆ ಪ್ರಸ್ತುತ ಈ ನಾಣ್ಯದ ಲಿಪಿಯು ೧೬ನೆಯ ಶತಮಾನದ ಲಿಪಿಗೆ ಹೋಲುವುದರಿಂದ ಇದು ಜಗದೇವರಾಯನ ನಾಣ್ಯವೆಂದು ಹೇಳಬಹುದು. ಅಲ್ಲದೇ ಮುಂಬದಿಯಲ್ಲಿ 'ಯಾಳಿ' ಇರುವುದರಿಂದ ಇದು ಜಗದೇವರಾಯನ ಅಪ್ರಕಟಿತ ನಾಣ್ಯವಾಗಿದೆ. ಎಲ್ಲಕ್ಕಿಂತಲೂ ಮುಖ್ಯವಾಗಿ ಇದನ್ನು ಮುಂಬದಿಯಲ್ಲಿ 'ಕಿನ್ನರಿ' ಹಿಂಬದಿಯಲ್ಲಿ ನಾಗರೀ ಲಿಪಿ ಇರುವ ವಿಜಯನಗರದ ನಾಣ್ಯದ ಮೇಲೆ ಪುನಃ ಟಂಕಿಸಲ್ಪಟ್ಟಿರುವುದು ವಿಶೇಷವಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಆಳೂಪರನ್ನು ಸೋಲಿಸಿ ಆಳ್ವಖೇಡವನ್ನು ಜಿನದತ್ತನು ವಶಪಡಿಸಿಕೊಂಡಿದ್ದನು ಎಂಬ ಬಿ.ಎಲ್.ರೈಸ್, ಡಾ॥ಗುರುರಾಜ್ ಭಟ್, ಡಾ। ಹಂಪ ನಾಗರಾಜಯ್ಯನವರ ಅಭಿಪ್ರಾಯವನ್ನು ಡಾ। ಪಿ.ಎನ್. ನರಸಿಂಹಮೂರ್ತಿಯವರು ಅಲ್ಲಗಳೆದಿದ್ದಾರೆ. ಏಕೆಂದರೆ ಈ ಎರಡೂ ವಂಶಗಳ ಒಳಗೆ ವೈವಾಹಿಕ ಸಂಬಂಧಗಳನ್ನು, ಸನ್ಮಿತ್ರ ಸಂಬಂಧ ಬೆಳೆದಿದ್ದನ್ನು ಪ್ರಾರಂಭದಲ್ಲಿಯೇ ಕಾಣಬಹುದೆಂದು ಇವರು ಅಭಿಪ್ರಾಯಪಟ್ಟಿದ್ದಾರೆ. (ತುಳು ಕರ್ನಾಟಕ ಅರಸು ಮನೆತನಗಳು ಆಳೂಪರು ಒಂದು ಸಂಕ್ಷಿಪ್ತ ಅವಲೋಕನ ಡಾ. ಪಿ.ಎನ್. ನರಸಿಂಹಮೂರ್ತಿಯವರ ಪ್ರಬಂಧ)

೨. 'ಸೇತು' ಈ ಪ್ರದೇಶ ಲಿಂಗಮಕ್ಕಿ ಜಲಾನಯನ ಪ್ರದೇಶದಲ್ಲಿ ಮುಳುಗಡೆಯಾಗಿದೆ.

೩. ಭೈರವ ಪದ್ಮಾವತಿಯು ದೇವಿಯ ಇನ್ನೊಂದು ರೂಪ. ಕ್ರಿ.ಶ. ೧೧ನೇ ಶತಮಾನದಲ್ಲಿ ಆಚಾರ್ಯ ಮಲ್ಲಿಷೇಣರು ವಿಖ್ಯಾತ ಮಂತ್ರ ಶಾಸ್ತ್ರಕೃತಿಯಾದ 'ಭೈರವ ಪದ್ಮಾವತಿ ಕಲ್ಪ'ವನ್ನು ರಚಿಸಿದರು. ಇದರಲ್ಲಿ ಈಕೆ ತ್ರಿಲೋಚನೆಯಾಗಿ ತ್ರಿಪುರ ಭೈರವಿಯೆಂದು ವರ್ಣಿತಳಾಗಿದ್ದಾಳೆ. ೨೪ ಭುಜಗಳ ಭೈರವ ಪದ್ಮಾವತಿಗೆ ಅಸಿ,ಚಕ್ರ, ಧನುಷ್,ಶಕ್ತಿ, ಪಾಶ, ಅಂಕುಶ,ಬಾಣ,ಮುಸುಲ, ಖೇಟಕ, ತ್ರಿಶೂಲ, ಪರಶು, ಗದೆ ಮುಂತಾದ ಆಯುಧಗಳಿವೆ. ಈ ಭೈರವ ಪದ್ಮಾವತಿಯ ಉಪಾಸಕರಾದ ಸಾಂತರರ ಒಂದು ಶಾಖೆ ಭೈರರಸರೆಂದು ಪ್ರಖ್ಯಾತರಾಗಿ ಕಳಸ–ಕಾರ್ಕಳದಿಂದ ೧೫–೧೬ನೇ ಶತಮಾನದಲ್ಲಿ ಆಳ್ವಿಕೆ ನಡೆಸಿದ್ದರು.


(ಅ) ಡಾ॥ ಹಂಪ ನಾಗರಾಜಯ್ಯ, **ಸಾಂತರರು ಒಂದು ಅಧ್ಯಯನ** – ಪ್ರಸ್ತುತ ಪ್ರಬಂಧದಲ್ಲಿ ಸಾಂತರರ ಬಗೆಗಿನ ಎಲ್ಲಾ ಉಲ್ಲೇಖಗಳನ್ನು ಈ ಗ್ರಂಥದಿಂದ ಆರಿಸಲಾಗಿದೆ.

(ಆ) ಡಾ॥ ಹಂಪ ನಾಗರಾಜಯ್ಯ, **ಸಚಿತ್ರ ಹೊಂಬುಜ.**

(ಇ) ಜಿ. ಸರ್ವಮಂಗಳ ಇವರ ಪ್ರಬಂಧ 'ಹೊಂಬುಜದ ಸಾಂತರರು', **ಮಲೆಕರ್ನಾಟಕದ ಅರಸು ಮನೆತನಗಳು.**

(ಈ) ಡಾ॥ ಬಿ. ವಸಂತ ಶೆಟ್ಟಿ, **ಉಡುಪಿ ತಾಲೂಕಿನ ಶಾಸನಗಳು.**

(ಉ) Dr. M S.Krishnamurthy The *Nolambas-A political and cultural Study.* (c. 750-1050 A.D.)

(ಊ) ಡಾ॥ ಎ. ಸೋಮಶೇಖರ ಅವರ ಲೇಖನ., **ಇತಿಹಾಸ ದರ್ಶನ** ಸಂ. ೧೭/೨೦೦೨

(ಋ) S.I.I. IX PL -I P. 318.

(ಎ) ಡಾ॥ ಎ.ವಿ. ನರಸಿಂಹಮೂರ್ತಿ., **ಕರ್ನಾಟಕ ನಾಣ್ಯ ಪರಂಪರೆ** ಪುಟ ೧೯೧–೧೯೨.

(ಏ) M.V.Krishnappa - S.I.S.I.C Vol XII Page 52-54.

(ಐ) K Ganesh & Dr Girijapathy - *Karnataka Numismatic Studies* (Page 69-70)

(ಒ) ಡಾ॥ ಎ.ವಿ. ನರಸಿಂಹಮೂರ್ತಿ., ಅದೇ, ಪು. ೨೨೪.

ಡಾ. ಸ್ಮಿತಾ ಸುರೇಬಾನಕರ*

# ಬೆಳಗಾವಿ ಪರಿಸರದ ಶಾಸನೋಕ್ತ ತೆರಿಗೆ ಸಂಗ್ರಹಕಾರ ಅಧಿಕಾರಿ ವರ್ಗ

ಒಂದು ಪ್ರದೇಶದ ತೆರಿಗೆ ವ್ಯವಸ್ಥೆ; ಆಯಾ ಪ್ರದೇಶಗಳನ್ನಾಳಿದ ರಾಜಸಂತತಿಗಳು ಅನುಸರಿಸಿದ ತೆರಿಗೆ ನೀತಿಯಷ್ಟೇ ಅಲ್ಲದೇ ತೆರಿಗೆ ಸಂಗ್ರಹಣೆಗಾಗಿ ನೇಮಿಸಲ್ಪಟ್ಟ ಅಧಿಕಾರಿವರ್ಗದ ಮೇಲೆ ಅವಲಂಬಿತವಾಗಿರುತ್ತದೆ.

ಬೆಳಗಾವಿ ನಗರವನ್ನೊಳಗೊಂಡು ಈ ಪರಿಸರದ ಅನೇಕ ಪ್ರದೇಶಗಳು ನಿಜಾನ್ವಯದ ರಾಜಧಾನಿಗಳಾಗಿ, ನೆಲೆವೀಡಾಗಿ, ಪಟ್ಟಣಗಳಾಗಿ, ನಗರಗಳಾಗಿ ಇತಿಹಾಸದ ಕಾಯಕಲ್ಪದಲ್ಲಿ ಬೆಳೆದು ಬರಲು ಆದಾಯ, ತೆರಿಗೆಗಳು ಮತ್ತು ತೆರಿಗೆ ಸಂಗ್ರಹಣಾ ಅಧಿಕಾರಿ ವರ್ಗವೂ ಕಾರಣೀಭೂತರಾಗಿರಬಹುದು.

ಅರ್ಥವ್ಯವಸ್ಥೆಯ ಪ್ರಮುಖ ಭಾಗಗಳಾದ ಕೃಷಿ, ಕೈಗಾರಿಕೆ ಮತ್ತು ವಾಣಿಜ್ಯೋದ್ಯಮಗಳ ಮೇಲೆ ಭೂಕಂದಾಯ ವಾಣಿಜ್ಯ ತೆರಿಗೆ, ಆದಾಯಕರ, ವೃತ್ತಿ ತೆರಿಗೆ, ಉತ್ಪಾದನಾ ಸುಂಕ, ಆಸ್ತಿ–ಪಾಸ್ತಿಗಳ ಮೇಲಿನ ತೆರಿಗೆ, ಸಾಮಾಜಿಕ ಮತ್ತು ಸಮುದಾಯ ತೆರಿಗೆ ಇತ್ಯಾದಿ ತೆರಿಗೆಗಳಿದ್ದವು. ವಿಕೇಂದ್ರೀಕರಣ ವ್ಯವಸ್ಥೆಯೂ ಭೂಕಂದಾಯ ಸಂಗ್ರಹಣೆಯನ್ನು ಆಯಾ ಗ್ರಾಮಗಳ ಮುಖ್ಯಸ್ಥರ ಉಸ್ತುವಾರಿಯಲ್ಲಿ ಸಂಗ್ರಹಿಸುತ್ತಿದ್ದು, ವ್ಯಾಪಾರ–ವಾಣಿಜ್ಯೋದ್ಯಮಕ್ಕೆ ಸಂಬಂಧಪಟ್ಟ ತೆರಿಗೆಯನ್ನು ಕೇಂದ್ರಾಡಳಿತದಿಂದ ನೇಮಿಸಲ್ಪಟ್ಟ ಅಧಿಕಾರಿವರ್ಗ ನಿರ್ವಹಿಸುತ್ತಿದ್ದರೆಂದು ಅಪ್ಪಾದೊರೈ ಮತ್ತು ಕುಪ್ಪುಸ್ವಾಮಿ ಅಭಿಪ್ರಾಯಪಡುತ್ತಾರೆ.[1] ದೇಶವನ್ನು ರಕ್ಷಿಸುವುದಕ್ಕೆ ಪ್ರಜೆಗಳು ಕೊಡುವ ಪ್ರತಿಫಲವೇ ತೆರಿಗೆಗಳೆಂದು ಪರಿಗಣಿಸಲ್ಪಟ್ಟದ್ದರಿಂದ ಆ ವ್ಯವಸ್ಥೆಯ ಬಹುಮುಖ್ಯ ಅಂಗವಾದ ಅಧಿಕಾರಿವರ್ಗ ಈ ಆಡಳಿತ ವ್ಯವಸ್ಥೆಯಲ್ಲಿ ಗಣನೀಯ ಪಾತ್ರವಹಿಸಿದ್ದಿರಬಹುದು. ಬೆಳಗಾವಿ ಪರಿಸರದ ಮಧ್ಯಯುಗದ ಶಾಸನಗಳ ಹಿನ್ನೆಲೆಯಲ್ಲಿ ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿವರ್ಗವನ್ನು ಅಭ್ಯಸಿಸಲಾಗಿದೆ. ವಿಧಾನ, ಸಂಗ್ರಹಿಸಿದ ತೆರಿಗೆಯನ್ನು ದಾಖಲೀಕರಿಸುವ ರೀತಿ, ತೆರಿಗೆಗಳ ವಿವರಗಳನ್ನು ಬರೆದಿಡಲಾದ ಕಡತಗಳು ಅದರ ಜೊತೆಗೆ ವೈವಿಧ್ಯಮಯವಾದ ತೆರಿಗೆಗಳನ್ನೊಳಗೊಂಡ ತೆರಿಗೆ ವ್ಯವಸ್ಥೆ ತುಂಬ ಜಟಿಲವಾಗಿತ್ತು. ಇಂತಹ ಜಟಿಲವಾದ ತೆರಿಗೆ ವ್ಯವಸ್ಥೆಯ ಉಸ್ತುವಾರಿಗಾಗಿ ಪ್ರತ್ಯೇಕವಾಗಿ ನೇಮಿಸಲ್ಪಟ್ಟ ಅಧಿಕಾರಿ ವರ್ಗವಿತ್ತು. ದೇಶದ ಜಿಲ್ಲೆಗಳಂತಹ ಒಂದೊಂದು ಭಾಗಕ್ಕೆ ಸುಂಕವೆರ್ಗಡೆ, ಸುಂಕಾಧಿಕಾರಿಗಳನ್ನು ಕೇಂದ್ರಾಡಳಿತ ನೇಮಿಸುತ್ತಿತ್ತು. ಇಂತಹ ಮೇಲಿನ ಅಧಿಕಾರಿಗಳ ಅಧೀನದಲ್ಲಿದ್ದುಕೊಂಡು ತೆರಿಗೆಗಳನ್ನು ಸಂಗ್ರಹಿಸುವ ಕಾರ್ಯಕ್ಕಾಗಿ ದೊಡ್ಡ ದೊಡ್ಡ ವ್ಯಾಪಾರಿ ಕೇಂದ್ರಗಳಲ್ಲಿ ಬೇರ ಬೇರೆ ಅಧಿಕಾರಿಗಳನ್ನು ನೇಮಿಸುತ್ತಿದ್ದರು. ಉದಾಹರಣೆಗೆ ಕರ್ನಾಟಕ ಶಾಸನೋಕ್ತರಾದ ಸುಂಕವೆರ್ಗಡೆ ದಾಸಯ್ಯ, ಸುಂಕಾಧಿಪ ವತ್ಸಯ್ಯ, ಪೆರ್ಜುಂಕದ ವೆಣ್ಣಮಯ್ಯ, ವಡ್ಡರಾವುಳದ ಬೆಚಯ್ಯ ಮುಂತಾದವರು[2].

ಕೇಂದ್ರ ಮತ್ತು ಪ್ರಾಂತೀಯ ಸರಕಾರಗಳಿಂದ ನೇಮಕಗೊಂಡ ತೆರಿಗೆ ಅಧಿಕಾರಿಗಳ ಉಲ್ಲೇಖ ಬೆಳಗಾವಿ ಪ್ರದೇಶದ ಶಾಸನಗಳಲ್ಲಿ ಕಾಣಸಿಗುತ್ತದೆ. ಉದಾಹರಣೆಗೆ ಸುಂಕಾಧಿಕಾರಿ, ಸುಂಕವೆರ್ಗಡೆ, ವಡ್ಡರಾವುಳ ಪೆರ್ಗಡೆ, ಪೆರ್ಜುಂಕದ ಅಧಿಕಾರಿ ಮುಂತಾದವರು ತೆರಿಗೆ ಅಧಿಕಾರಿಗಳಿಗೆ ತೆರಿಗೆ ಸಂಗ್ರಹಣೆಗಾಗಿ ತಮ್ಮದೇ ಆದ ಪ್ರತ್ಯೇಕ ಸಹಾಯಕವರ್ಗ ಇರುತ್ತಿತ್ತು. ಸುಂಕದ ಮಾಧವರಾಜ ದಂಡನಾಥ ಮತ್ತು ಆತನ ಸಹಾಯಕ ಆಚರಸ ಇವರ ಉಲ್ಲೇಖ ಪಲಾಸಿಕಾ ಪನ್ನಿರ್ಚ್ಛಾಸಿರದ ಶಾಸನಗಳಲ್ಲಿ ದೊರೆಯುತ್ತದೆ[3]. ಸುಂಕದ ಅಧಿಕಾರಿ ದಿನಕರನಾಯಕ, ಸುಂಕಾಧಿಕಾರಿ ದೇವಯ್ಯ ಮತ್ತು ಚಂದ್ರಯ್ಯ ಇವರೂ ಶಾಸನೋಲ್ಲೇಖಿತರು[4] ಸುಂಕವೆರ್ಗಡೆ ನೇಮಪ್ಪಯ್ಯ, ಸುಂಕದಂಡಾಧಿಪ ಬೇಚಣ್ಣ ಇವರ ಉಲ್ಲೇಖ ರಟ್ಟರ ಶಾಸನಗಳಲ್ಲಿದೆ[5]. ಸ್ತ್ರೀಯರನ್ನು ತೆರಿಗೆ ಅಧಿಕಾರಿಗಳಾಗಿ ನೇಮಿಸುತ್ತಿದ್ದ ಅತ್ಯಂತ ಅಪರೂಪದ ಮಾಹಿತಿ ಗೋವೆಕದಂಬರ ಹಲಸಿ ಪ್ರದೇಶದ ಶಾಸನದಿಂದ ವಿದಿತವಾಗುತ್ತದೆ. ಸುಂಕಾಧಿಕಾರಿ ಲಕ್ಷ್ಮಾದೇವಿ ಹಲಸಿಗೆ–

*ಪ್ರವಾಚಕರು, ರಾಣಿ ಪಾರ್ವತಿದೇವಿ ಮಹಾವಿದ್ಯಾಲಯ, ಬೆಳಗಾವಿ.

೧೨೦೦೦ ಪ್ರದೇಶದ ಸುಂಕಸಂಗ್ರಹಣೆಯ ಉಸ್ತುವಾರಿ ಮಾಡುತ್ತಿದ್ದ ಅಂಶವನ್ನು ಶಾಸನ ತಿಳಿಸುತ್ತದೆ.[೧] ಇದು ಸ್ತ್ರೀಯರನ್ನು ಸುಂಕಾಧಿಕಾರಿಗಳಂಥ ಜವಾಬ್ದಾರಿಯುತ ಹುದ್ದೆಗೆ ನೇಮಿಸುತ್ತಿದ್ದರೆಂಬ ಮಾಹಿತಿಯನ್ನು ಒದಗಿಸುವುದರ ಜೊತೆಗೆ ಅರ್ಥವ್ಯವಸ್ಥೆಯಲ್ಲಿ ಮಹಿಳೆಯರು ಸಕ್ರಿಯವಾಗಿ ಭಾಗವಹಿಸುತ್ತಿದ್ದ ಬಗ್ಗೆ ಬೆಳಕು ಚೆಲ್ಲುತ್ತದೆ. ಕೆಲವು ಸಲ ಒಬ್ಬನೇ ಅಧಿಕಾರಿ ವಿಶಾಲ ಆಡಳಿತ ವಿಭಾಗಗಳ ತೆರಿಗೆ ವ್ಯವಸ್ಥೆ ನಿರ್ವಹಿಸುತ್ತಿದ್ದ ಅಂಶ ಶಾಸನಗಳಿಂದ ವಿದಿತವಾಗುತ್ತದೆ. ಬನವಾಸಿ-೧೨೦೦೦ದ ತೆರಿಗೆ ಅಧಿಕಾರಿ ಅನಂತಪಾಲಯ್ಯನ ಸಹೋದರ ನಾರಣ ಪಲಸಿಗೆ-೧೨೦೦೦ ಮತ್ತು ನೊಳಂಬವಾಡಿ-೩೨೦೦೦ ವಿಭಾಗಗಳ ಪಣ್ಣಾಯದ ಸುಂಕದ ಅಧಿಷ್ಠನಾಯಕ ಪೆರ್ಗಡೆಯಾಗಿದ್ದನು.[೭]

ತೆರಿಗೆ ಅಧಿಕಾರಿಗಳನ್ನು ಒಂದು ನಾಡಿನಿಂದ ಇನ್ನೊಂದು ನಾಡಿಗೆ ವರ್ಗಾವಣೆ ಮಾಡುತ್ತಿದ್ದ ಕುರಿತು ಶಾಸನಗಳು ಬೆಳಕು ಚೆಲ್ಲುತ್ತವೆ. ಬಹುಶಃ ಕಂದಾಯ ಮತ್ತು ತೆರಿಗೆ ಆಡಳಿತ ನಿರ್ವಹಣೆಯನ್ನು ಸಮರ್ಥವಾಗಿ ನಿರ್ವಹಿಸುವ ದೃಷ್ಟಿಯಿಂದ ಒಂದೇ ವಿಭಾಗದಲ್ಲಿ ಒಬ್ಬನೇ ಅಧಿಕಾರಿಯನ್ನು ಮುಂದುವರೆಸುವುದರಿಂದ ಆಗಬಹುದಾದ ಏಕಸಾಮ್ಯತೆಯ ಕಲ್ಪನೆ ಇದ್ದುದರಿಂದ ತೆರಿಗೆ ಅಧಿಕಾರಿಗಳನ್ನು ವರ್ಗಾಯಿಸುತ್ತಿದ್ದಿರಬಹುದು. ಕ್ರಿ.ಶ. ೧೧೧೨ ರಲ್ಲಿ ಸುಂಕವೆರ್ಗಡೆ ಮಹಾಸಾಮಂತ ಅನಂತಪಾಲಯ್ಯ ಬನವಾಸಿ-೧೨೦೦೦ ಮತ್ತು ಹಲಸಿ-೧೨೦೦೦ದ ವಡ್ಡರಾವುಳ ಸುಂಕದ ಮೇಲ್ವಿಚಾರಕನಾಗಿ ಕಾರ್ಯನಿರ್ವಹಿಸುತ್ತಿದ್ದ[೮]. ಆದರೆ ಕ್ರಿ.ಶ. ೧೧೨೫ರಲ್ಲಿ ಆತನ ಸಹೋದರ ನಾರಣ ಎಂಬಾತ ಪಲಸಿಗೆ ಪನ್ನಿರ್ಚ್ಛಾಸಿರದ ತೆರಿಗೆ ಅಧಿಕಾರಿಯಾಗಿದ್ದನು[೯]. ಅದೇ ತರಹ ಸುಂಕಾಧಿಕಾರಿ ಬೊಂಪ ಕ್ರಿ.ಶ. ೧೦೮೭ರಲ್ಲಿ ವೇಣುಗ್ರಾಮ-೭೦ರ ತೆರಿಗೆ ಸಂಗ್ರಹದಲ್ಲಿ ನಿರತನಾಗಿದ್ದ ಬೊಂಪಣನನ್ನು ಕ್ರಿ.ಶ. ೧೧೯೨ರ ಶಾಸನ ನಿಜಾನ್ವಯ ನೆಲೆವೀಡು ಸುಗಂಧವರ್ತಿಯ ಸುಂಕಾಧಿಪ ಎಂದು ವರ್ಣಿಸಿದೆ[೧೦]. ಇದರಿಂದ ತೆರಿಗೆಗಳನ್ನು ಸಂಗ್ರಹಿಸುವ ಅಧಿಕಾರಿವರ್ಗವನ್ನು ಒಂದು ವಿಭಾಗದಿಂದ ಇನ್ನೊಂದು ವಿಭಾಗಕ್ಕೆ ವರ್ಗಾಯಿಸುತ್ತಿದ್ದರೆಂಬುದು ಖಚಿತವಾಗುತ್ತದೆ.

ಹೆಗ್ಗಡೆ, ಪೆರ್ಗಡೆ, ಮಹಾಸಾಮಂತ, ನಾಡಗಾವುಂಡ, ರಾಜ್ಯಧಿಪ ಮುಂತಾದ ಹುದ್ದೆ ಸೂಚಕ ಪದಗಳು ತೆರಿಗೆ ಅಧಿಕಾರಿಗಳ ಹೆಸರಿನ ಹಿಂದೆ ಬರುತ್ತಿದ್ದುದರಿಂದ, ಇವರನ್ನು ತೆರಿಗೆ ಅಧಿಕಾರಿಗಳಾಗಿ ನೇಮಿಸುತ್ತಿದ್ದಿರಬಹುದು. ಇವರು ತೆರಿಗೆ ಅಧಿಕಾರಿಗಳಾಗಿ, ರಾಜಕೀಯ ಏಜಂಟರಾಗಿ ದ್ವಿವಿಧ ಕಾರ್ಯನಿರ್ವಹಿಸುತ್ತಿದ್ದರು. ಪ್ರಾಂತಾಧಿಕಾರಿಗಳನ್ನು ತೆರಿಗೆ ಅಧಿಕಾರಿಗಳನ್ನಾಗಿ ನೇಮಿಸುತ್ತಿದ್ದು, ಅವರಿಗೆ ತೆರಿಗೆ ಸಂಗ್ರಹದಲ್ಲಿ ಪೆರ್ಗಡೆ ಮತ್ತು ನಾಡಗಾವುಂಡರು ಸಹಾಯ ಹಸ್ತವನ್ನೀಯುತ್ತಿದ್ದರು. ಉದಾಹರಣೆಗೆ ಮಹಾಸಾಮಂತ ವಡ್ಡರಾವುಳ ಅನಂತಪಾಲಯ್ಯ, ವಡ್ಡರಾವುಳದ ಪೆರ್ಗಡೆ ಬೊಂಕಯ್ಯ, ಸುಂಕದ ಮಾಧವರಾಜ ದಂಡನಾಯಕ, ರಾಜ್ಯಾಧಿಪ ಚಂದ್ರಯ್ಯ ಮುಂತಾದವರು. ಕೆಲವು ಸಲ ರಾಜನ ಸಂಬಂಧಿಕರು, ಯುವರಾಜ ಮತ್ತು ಕೆಲವು ತೆರಿಗೆ ಅಧಿಕಾರಿಗಳ ಸಂಬಂಧಿಕರು ತೆರಿಗೆ ಉಸ್ತುವಾರಿಗೈಯುತ್ತಿದ್ದ ಅಂಶ ಶಾಸನಗಳಿಂದ ವಿದಿತವಾಗುತ್ತದೆ.[೧೧]

ಆಯಾ ಅಧಿಕಾರಿಗಳು ಸಂಗ್ರಹಿಸಿದ ತೆರಿಗೆಯ ನಿರ್ದಿಷ್ಟ ಭಾಗವನ್ನು ವೇತನವಾಗಿ ಕೊಡುವ ಪದ್ಧತಿಯಿತ್ತು. ಸುಂಕವೆರ್ಗಡೆಗಳು ತಾವು ಸಂಗ್ರಹಿಸಿದ ಸುಂಕದಲ್ಲಿ ರಾಜನ ಅಪ್ಪಣೆಯಿಲ್ಲದೇ ದತ್ತಿ ದಾನಗಳನ್ನಿತ್ತರೆ ಅವರ ವೇತನದಲ್ಲಿ ಬಿಟ್ಟುಕೊಟ್ಟ ಸುಂಕದ 'ದಶವಂದ' ಅಂದರೆ ಹತ್ತರಲ್ಲೊಂದು ಭಾಗವನ್ನು ಬಿಟ್ಟುಕೊಟ್ಟ ಬಗ್ಗೆ ಉಲ್ಲೇಖವಿದೆ[೧೨]. ಸುಂಕವೆರ್ಗಡೆಗಳು ಸುಂಕಮಂ ಬಿಟ್ಟ ವಿಷಯ ಶಾಸನಗಳಲ್ಲಿದೆ.[೧೩]

ತೆರಿಗೆ ಸಂಗ್ರಹಿಸುವ ಕಾರ್ಯ ಸುಲಭವಾಗಿರಲ್ಲಿಲ. ತೆರಿಗೆಗಳನ್ನು ಅನ್ಯಾಯವಾಗಿ ಹೆಚ್ಚಿಸಿದಾಗ, ಕೇಳಬಾರದ ಕಡೆ ಕೇಳಿದಾಗ, ತೆರಿಗೆ ವಸೂಲಿಗಾಗಿ ಹಿಂಸಿಸಿದಾಗ ಜನತೆ ಪ್ರತಿಭಟಿಸಿರುವ ಕುರುಹುಗಳು ಶಾಸನಗಳಲ್ಲಿ, ಸಮಕಾಲೀನ ಸಾಹಿತ್ಯದಲ್ಲಿ ದೊರೆಯುತ್ತದೆ. ತೆರಿಗೆಯನ್ನು ಕೊಡಲು ಹಿಂಸಿಸಿದಾಗ ಅದನ್ನು ಪ್ರತಿಭಟಿಸಿ ವೀರನೊಬ್ಬನು ಹೋರಾಡಿ ಮಡಿದಂತೆ ಚಿತ್ರಿತವಾಗಿದೆ[೧೪]. ಆಳುವವರು ಅನ್ಯಾಯ ವೆಸಗಿದಾಗ ಜನತೆ ಅದನ್ನು ಮೌನವಾಗಿ ಸಹಿಸಿಕೊಳ್ಳದೆ ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ಪ್ರತಿಭಟಿಸುತ್ತಿದ್ದರೆಂಬುದಕ್ಕೆ ಶಾಸನಗಳಲ್ಲಿ ನಿದರ್ಶನಗಳಿವೆ[೧೫] ಬ್ರಾಹ್ಮಣರಿಗೆ ಅಕರವಾಗಿ ಅಗ್ರಹಾರವನ್ನು ದಾನಮಾಡುತ್ತಿದ್ದು ಅದರಿಂದ ತೆರಿಗೆ ಸಂಗ್ರಹಿಸಲು ಯತ್ನಿಸುವುದು ಶಿಕ್ಷಾರ್ಹವಾಗಿತ್ತು. ದೇಗಾವೆ ಅಗ್ರಹಾರವನ್ನು ಗೋವೆ ಕದಂಬರ ರಾಣಿ ಕಮಲಾದೇವಿ ಬ್ರಾಹ್ಮಣರಿಗೆ 'ಸುಂಕದ ಮರ್ಯಾದೆಯಂ ತಪ್ಪಿಸಿ' ದಾನವಾಗಿತ್ತಳೆಂದು, ಯಾವುದೇ ಅಧಿಕಾರಿ ತೆರಿಗೆಗಾಗಿ ಬ್ರಾಹ್ಮಣರನ್ನು ಪೀಡಿಸಿದರೆ ಅವರು ಶಿಕ್ಷಾರ್ಹರೆಂಬ ತಾತ್ಪರ್ಯ ದೇಗಾವೆ ಶಾಸನದಲ್ಲಿವೆ[೧೬].

ತೆರಿಗೆ ಅಧಿಕಾರಿಗಳನ್ನು ನೇಮಿಸುವಾಗ ಅನುಸರಿಸುತ್ತಿದ್ದ ಕ್ರಮ, ಅವರಿಗೆ ಇರಬೇಕಾದ ಗುಣಾರ್ಹತೆ ಅಧಿಕಾರ ವಂಶಪಾರಂಪರ್ಯವಾಗಿತ್ತೊ ಅಥವಾ ನೇಮಕಾತಿಯಿತ್ತೊ- ಈ ವಿವರಗಳ ಬಗ್ಗೆ ಶಾಸನಗಳು ಮೌನವಾಗಿವೆ.

ಕರ್ನಾಟಕದ ವಿವಿಧೆಡೆ ಹೆಚ್ಚು ಕಡಿಮೆ ಈ ತರಹದ ತೆರಿಗೆಗಳ ಅಧಿಕಾರಿವರ್ಗ ಕಾರ್ಯನಿರ್ವಹಿಸುತ್ತಿದ್ದಿರಬಹುದು.

ಹಲಸಿಗೆ-೧೨೦೦೦ ಮತ್ತು ಸುಗಂಧವರ್ತಿಯಂತಹ ರಾಜಧಾನಿಗಳಿಗೆ ಸ್ಯಾಟಲೈಟ ಟೌನ್ ಅಗಿದ್ದ ಬೆಳಗಾವಿ ವಿಶಿಷ್ಠ ರಾಜಕೀಯ ಮತ್ತು ವಾಣಿಜ್ಯಕೇಂದ್ರವಾಗಿತ್ತು. ಈ ಪ್ರದೇಶದಲ್ಲಿದ್ದ ವೈವಿಧ್ಯಮಯ ತೆರಿಗೆಗಳ ಆಡಳಿತ ನಿರ್ವಹಣೆಯಲ್ಲಿ ತೆರಿಗೆ ಅಧಿಕಾರಿಗಳು ಮಹತ್ವಪೂರ್ಣ ಪಾತ್ರವಹಿಸಿ ಬೆಳಗಾವಿ ಪರಿಸರದ ಆರ್ಥಿಕ ಅಭಿವೃದ್ಧಿಗೆ ಕಾರಣೀಭೂತರಾಗಿರ ಬಹುದು.

ಶಾಸನಗಳಲ್ಲಿ ಅನಿಂಯಂತ್ರಿತವಾಗಿ ಮತ್ತು ಅನಿಯಮಿತವಾಗಿ ತೂರಿಬರುವ ಅನೇಕ ಅಸ್ಪಷ್ಟ ವಿವರಗಳಿಂದ ನಿಖರವಾದ ಮಾಹಿತಿ ದೊರೆಯುವುದಿಲ್ಲ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Appadoray, A., *Economic Conditions in South India,* vol. II, Madras,1936,p.116.
Kuppuswamy G.I., *Economic Conditions in Karnataka,* Dharwad, 1975, p. 151.

೨. ಚಿದಾನಂದಮೂರ್ತಿ ಎಂ., ೨೦೦೨, ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ, ಬೆಂಗಳೂರು. ಪು. ೪೪೯.

೩ *Karnatak Inscription, vol,* V, nos. 33,63,64,113.

೪. ಅದೇ.,

೫. *South Indian Inscriptions,* vol. xx, no. 248.

೬ Gurav R.N., *Kadambas of Goa and their Inscriptions,* unpub.Thesis, Karnatak University, Dharwad. p.334.

೭. *South Indian Inscriptions,* vol. xiv No.188.

೮ **ಅದೇ,** nos 146,147,149,

೯ **ಅದೇ,** vol.x x No. 247.

೧೦. ಅದೇ

೧೧. Surebankar Smita, "Taxation in Halasi 1200", *Indian History Congress proceeding vol.Culcata.* 2000, p. p.247

೧೨. *Mysore Archaeological Reports,* 1933, p. 265.

೧೩. *Journal of Bombay Branch of Royal Asiatic Society,* vol.ix.no.30

೧೪. ಅದೇ

೧೫. Kundangar K.G. (ed,) *Inscriptions of North Karnatak and Kolhapur,* p. 73.

೧೬. ಅದೇ

೧೭. *Karnatak Inscriptions,* vol. iv, no. 55.

೧೮. *Journal of Bombay Branch of Royal of Asiatic Society,* vol. ix, no. 33.

ಡಾ|| ಕೂ.ಸ. ಅಪರ್ಣ*

# "ಶೈವ ಪರಿವಾರಾಲಯಗಳು ಮತ್ತು ಪರಿವಾರ ದೇವತೆಗಳು"

ದೇವಾಲಯಗಳಲ್ಲಿ ಪ್ರಧಾನ ದೇವರಿಗೆ ಸಂಬಂಧಿಸಿದ ಇತರ ದೇವತೆಗಳಿಗಾಗಿ ಕಟ್ಟಿದ ಆಲಯವನ್ನು 'ಪರಿವಾರಾಲಯ' ಎನ್ನಬಹುದು. ಶಿವ ಮತ್ತು ವಿಷ್ಣುವಿನ ದೇವಾಲಯಗಳು ಹಾಗೂ ದೇವಿಯ ಆಲಯಗಳು ಅನೇಕ ಬಾರಿ ಆ ದೇವತೆಗಳ ಪರಿವಾರದಿಂದ ಸುತ್ತುವರಿದಿರುತ್ತವೆ. ಪರಿವಾರ ದೇವತೆಗಳೆಂದಾಗ, ಪುರಾಣಗಳು ಗುರುತಿಸುವ ಪ್ರಧಾನ ದೇವರ ಕುಟುಂಬ, ದ್ವಾರಪಾಲಕರು, ದಿಕ್ಪಾಲಕರು, ಗಣನಾಯಕರು, ಸೇನಾಪತಿಗಳು, ಋಷಿಗಳು, ಭಕ್ತರು ಎಲ್ಲ ದೇವತೆಗಳನ್ನೂ ಅದು ಒಳಗೊಳ್ಳುತ್ತದೆ.[೧] ಈ ದೇವತೆಗಳಿಗಾಗಿ ದೇವಾಲಯದ ಸುತ್ತ ನಿರ್ಮಿತವಾದ ಆಲಯವೇ 'ಪರಿವಾರಾಲಯ'. ಈ ಪರಿವಾರಾಲಯಗಳನ್ನು ಎಲ್ಲಿ ಕಟ್ಟಬೇಕು, ಹೇಗೆ ಕಟ್ಟಬೇಕು, ಅಲ್ಲಿರಬೇಕಾದ ದೇವತೆಗಳು ಯಾರ್‍ಯಾರು, ಅವರು ಯಾವ ದಿಕ್ಕಿನಲ್ಲಿರಬೇಕು, ಅವರ ಸ್ಥಳ ಯಾವುದು ಮುಂತಾದ ಎಲ್ಲ ವಿವರಗಳೂ ಶಾಸ್ತ್ರ ಗ್ರಂಥಗಳಲ್ಲಿವೆ.[೨] ಮಾನಸಾರ (ಅಧ್ಯಾಯ-೩೨), ಮಯಮತ (ಅಧ್ಯಾಯ-೨೩), ಕಾಶ್ಯಪಶಿಲ್ಪ (ಅಧ್ಯಾಯ ೪೬) ಮುಂತಾದ ವಾಸ್ತುಗ್ರಂಥಗಳಲ್ಲದೆ, ಕಾರಣಾಗಮ (ಅ. I, ೬೦), ಕಾಮಿಕಾಗಮ (ಅ. I, ೭೧) ಸುಪ್ರಭೇದಾಗಮ (ಅ. I, ೩೯), ಅಜಿತಾಗಮ (ಕ್ರಿಯಾ ಅ. ೩೯) ದೀಪ್ತಾಗಮ (ಅ. ೧೧), ವೀರಾಗಮ (ಅ. ೪೧), ಯೋಗಜಾಗಮ (ಅ. ೧೭) ಮುಂತಾದ ಆಗಮ ಗ್ರಂಥಗಳಲ್ಲಿ ಈ ಬಗ್ಗೆ ವಿವರಗಳಿವೆ.[೩]

ಮೂಲ ಪ್ರಾಸಾದದ (ದೇವಾಲಯ) ಹೊರಗೆ ಪರಿವಾರವನ್ನು ಸ್ಥಾಪಿಸಬೇಕು ಎಂದು ದೀಪ್ತಾಗಮವು ಹೇಳಿದ್ದರೆ,[೪] ಮತ್ತು ಕಾರಣಾಗಮವು ಆಲಯದ ಸುತ್ತ ಸ್ಥಾಪಿಸಬೇಕೆಂದಿದೆ.[೫] ಪರಿವಾರಾಲಯಗಳನ್ನು ಪ್ರಾಕಾರ ಭಿತ್ತಿಯ ಆಶ್ರಯದಲ್ಲಿ, ಅಂತರಾಲದಲ್ಲಿ ಅಥವಾ ಅಂತರ್ಮಂಡಲದಲ್ಲಿ ಮಾಡಬಹುದು.[೬] ಅಂತರ್ಮಂಡಲದಲ್ಲಿ (ಮೊದಲ ಪ್ರಾಕಾರ) ಎಲ್ಲಾ ಪರಿವಾರ ದೇವತೆಗಳಿಗೂ ಸ್ಥಾನ ಕಲ್ಪಿಸಬಾರದೆಂದು ಹೇಳಿರುವ ಕಾಶ್ಯಪಶಿಲ್ಪವು, ಆಯಾ ಪ್ರಾಕಾರಗಳ ಮಧ್ಯದಲ್ಲಿ ಅಥವಾ ಪ್ರಾಕಾರಗೋಡೆಯ ಆಶ್ರಯದಲ್ಲಿ ಮಾಡಬಹುದೆಂದಿದೆ.[೭] ಇದನ್ನು ಪ್ರಾಕಾರದ ಆಶ್ರಯದಲ್ಲಿ ಮಾಡಬೇಕು ಎಂದು ವಿಮಾನಾರ್ಚನಕಲ್ಪವು ಹೇಳಿದೆಯಲ್ಲದೆ,[೮] ಕೂಟಗಳಲ್ಲೂ, ಮಾಡಬೇಕೆಂದು ಹೇಳಿದೆ.[೯] ವಾಸ್ತುನಕ್ಷೆ ಅಥವಾ ವಾಸ್ತುಮಂಡಲವು ಸಮಚೌಕದಿಂದ ಕೂಡಿರಲಿ ಅಥವಾ ಅಸಮ ಚೌಕದಿಂದಿರಲಿ, ಪರಿವಾರಾಲಯವನ್ನು ಪ್ರಾಕಾರದ ಗೋಡೆಗೆ ಹೊಂದಿಸಿ ಕಟ್ಟಲಾಗುತ್ತದೆ ಅಥವಾ ಪ್ರತ್ಯೇಕವಾಗಿ ಚೌಕದ ಪದದ ಮಧ್ಯೆ ಸ್ಥಾಪಿಸಬಹುದೆಂದು ಮಯಮತವು ಹೇಳಿದೆ.[೧೦] ಪರಿವಾರಗಳನ್ನು ಮುಖ್ಯ ದೇವಾಲಯ ಮತ್ತು ಗೋಪುರದ ಸುತ್ತ ಸ್ಥಾಪಿಸಬೇಕು ಎಂದು ಮಾನಸಾರವು ಹೇಳಿದೆ.[೧೧]

ಪರಿವಾರ ದೇವತೆಗಳ ಆಲಯಗಳು ಮೂಲ ದೇವಾಲಯದಂತೆ ಇರಬೇಕು ಅಥವಾ ಮಂಟಪ/ಶಾಲಾ/ಸಭಾಕಾರದಲ್ಲಿರಬೇಕು; ಪ್ರತಿಯೊಂದಕ್ಕೂ (ಊರ್ಧ್ವಮುಖಿಯಾಗಿ) ಎಲ್ಲಾ ಅಂಗಗಳೂ ಇರಬೇಕು.[೧೨] ಇದನ್ನು ಏಕತಲದಲ್ಲಿ ಮಾಡಬೇಕೆಂದು ಅಜಿತಾಗಮವು ಹೇಳಿದೆ.[೧೩]

ಪರಿವಾರಾಲಯಗಳಲ್ಲಿ ಸ್ಥಾಪಿಸುವ ಪರಿವಾರ ದೇವತೆಗಳ ಎತ್ತರವು ನಿಯಮದ ಪ್ರಕಾರ ಇರಬೇಕು ಮತ್ತು ಆಯಾ ದೇವತೆಗಳ ಪ್ರತ್ಯೇಕ ಲಕ್ಷಣದೊಂದಿಗೆ ಇರಬೇಕು; ಇವು ನಿಂತಿರಬಹುದು ಅಥವಾ ಕುಳಿತಿರಬಹುದು.[೧೪] ಪರಿವಾರಾಲಯಗಳಲ್ಲಿ ಪ್ರತಿಷ್ಠಾಪಿಸಿರುವ ಕೌತುಕ ಬೇರುಗಳಿದ್ದರೆ 'ಉತ್ತಮ ವರ್ಗ'ದ್ದೆಂದೂ, ಅದರ ಬದಲು, ಅದರ ಸ್ಥಾನದಲ್ಲಿ ಪೀಠವನ್ನು ಮಾಡಿ ಅರ್ಚಿಸಿದರೆ 'ಮಧ್ಯಮ ವರ್ಗ'ದ್ದೆಂದೂ ವಿಮಾನಾರ್ಚನಕಲ್ಪವು ಹೇಳಿದೆ. ಇದರೊಂದಿಗೆ, ಕೌತುಕ ಬೇರವಿರದಿದ್ದರೆ, ಆ ಪ್ರದೇಶದಲ್ಲಿ ದ್ವಾದಶಾಂಗುಲ ಎತ್ತರವಾದ ಮತ್ತು ಅದರ ಎರಡರಷ್ಟು ಅಗಲವಾದ ೩ ವೇದಿಕೆಗಳುಳ್ಳ ಪೀಠವನ್ನು ಮಾಡಿ ಅರ್ಚಿಸಬೇಕು ಅಥವಾ ಉದ್ದವಾದ ಒಂದೇ ವೇದಿಕೆ ರಚಿಸಿ

* ೧೬೭೬, ೫ನೇ 'ಎ' ಅಡ್ಡರಸ್ತೆ, ೧೦ನೇ ಮುಖ್ಯರಸ್ತೆ, ಬನಶಂಕರಿ ೨ನೇ ಬ್ಲಾಕ್, ಮೊದಲನೇ ಹಂತ, ಬೆಂಗಳೂರು-೫೦.

ಪೀಠವನ್ನಾದರೂ ಮಾಡಬೇಕೆಂದೂ, ಇದು 'ಅಧಮವರ್ಗ'ವೆಂದೂ ಅದು ಹೇಳಿದೆ. ಇದಾವುದೂ ಇಲ್ಲದಿದ್ದರೆ ಮಹತ್ತರವಾದ ದೋಷವುಂಟಾಗುತ್ತದೆ ಎಂದೂ ಎಚ್ಚರಿಸಿದೆ.[೧೫] ಇದರಂತೆ ಪರಿವಾರ ದೇವತೆಗಳ ಬಿಂಬ ಅಥವಾ ಪೀಠ ಯಾವುದಾದರೂ ಇರಬಹುದೆಂದು ಕಾಮಿಕಾಗಮ, ಕಾರಣಾಗಮ ಮತ್ತು ಅಜಿತಾಗಮಗಳು ಹೇಳಿವೆ.[೧೬] ಈ ಪೀಠಕ್ಕೆ ಸುಣ್ಣ ಹಚ್ಚಿರಬೇಕು; ಈ ಗುಡಿಗಳಿಗೆ ವಿಮಾನ ಇರಬಹುದು ಅಥವಾ ಇಲ್ಲದಿರಬಹುದು.[೧೭]

ಆಗಮಗಳು ಒಂದೊಂದು ದೇವತೆಗೂ ಬೇರೆ ಬೇರೆ ಆಕಾರದ ಆಲಯಗಳನ್ನು ಹೇಳಿವೆ. ಅದರಂತೆ, ಪರಿವಾರ ದೇವತೆ ಮತ್ತು ಆ ದೇವತೆಗಳಿಗೆ ಆಗಮಗಳು ಸೂಚಿಸುವ ಆಲಯಗಳ ಆಕಾರವನ್ನು ಈ ಪಟ್ಟಿಕೆಯಲ್ಲಿ ನೋಡಬಹುದಾಗಿದೆ.[೧೭ಎ]

ಇವುಗಳನ್ನು ಮಂಟಪ, ಸಭಾ ಅಥವಾ ನಂದ್ಯಾವರ್ತಾಕೃತಿಯಲ್ಲಿ ಮಾಡಬಹುದೆಂದೂ ಯೋಗಜಾಗಮ ಮತ್ತು ಕಾರಣಾಗಮಗಳು ಹೇಳಿವೆ. ಇದರೊಂದಿಗೆ, ದೇವೀ ಆಲಯವು ಗೋಪುರಾಕಾರದಲ್ಲಿರಬೇಕೆಂದು ಸುಪ್ರಭೇದಾಗಮವು ಹೇಳಿದೆ.[೧೮]

ಪರಿವಾರ ದೇವತೆಗಳು/ಆಲಯಗಳು ೮, ೧೬ ಅಥವಾ ೩೨ ಇರಬಹುದೆಂದು ಗ್ರಂಥಗಳು[೧೯] ಸೂಚಿಸಿದ್ದು, ಇವುಗಳ ಸ್ಥಾನವನ್ನು ವಿವಿಧ ಪ್ರಾಕಾರಗಳಲ್ಲಿ ಹೇಳಿವೆ. ಅದರಂತೆ, ಪ್ರಾಕಾರಗಳ ಸಂಖ್ಯೆ/ಹೆಸರು ಮತ್ತು ಅಲ್ಲಿರಬೇಕಾದ ಪರಿವಾರಗಳ ಸಂಖ್ಯೆಯನ್ನು ಈ ಕೆಳಗಿನಂತೆ ಹೇಳಬಹುದು:

ಅಷ್ಟ ಪರಿವಾರವು ಪ್ರಾಕಾರಭಿತ್ತಿಯಿಂದ ಕೂಡಿ ಅಂತರಾಲದ ಆಶ್ರಯದಲ್ಲಿರಬೇಕೆಂದು ಕಾರಣಾಗಮವು ಹೇಳಿದೆ.[೨೧]

| | ದೇವತೆಗಳು | ಅಜಿತಾಗಮ | ಯೋಗಜಾಗಮ | ಕಾರಣಾಗಮ |
|---|---|---|---|---|
| ೧. | ಚಂಡೇಶ | ಮಂಡಲಾಕಾರ | ನಂದ್ಯಾವರ್ತ | ಶ್ರೀಕರ ವಿಮಾನ |
| ೨. | ವೃಷಾ | ಮಂಟಪಾಕಾರ | ಮಂಟಪಾಕಾರ | – |
| ೩. | ಬ್ರಹ್ಮ | ಚೌಕಾಕಾರ | – | (ಪೂರ್ವಾಭಿಮುಖ) |
| ೪. | ಮಾತೃ | ಗೋಪುರಾಕಾರ | ಶಾಲಾಕಾರ | – |
| ೫. | ಗಣೇಶ | ಹಸ್ತಿಪೃಷ್ಠ | ಗಜಪೃಷ್ಠ | ಗಜಪೃಷ್ಠ |
| ೬. | ಗುಹಾ | ನಿವೇಶ | ಕೂಟಾಕಾರ | ಅಂಡಾಕಾರ (Oval) |
| ೭. | ಜ್ಯೇಷ್ಠಾ | ನಾಗರ | ಗೃಹಾಕಾರ | – |
| ೮. | ದುರ್ಗಾ | ನಾಗರ | ಸ್ವಸ್ತಿಕ | ಸ್ವಸ್ತಿಕ |
| ೯. | ವಿಷ್ಣು | ದ್ರಾವಿಡ | ವಿಷ್ಣುಕಾಂತ | ವಿಷ್ಣುಕಾಂತ |
| ೧೦. | ಅರ್ಕ | ವಿಧಾನವತ್ | ನಂದ್ಯಾವರ್ತ | ನಂದ್ಯಾವರ್ತ |

| *ಗ್ರಂಥಗಳು* | *ಅಷ್ಟಪರಿವಾರ(೮)* | *ಷೋಡಶ ಪರಿವಾರ(೧೬)* | *ದ್ವಾತ್ರಿಂಶತ್ ಪರಿವಾರ (೩೨)* |
|---|---|---|---|
| **ಮಾನಸಾರ** | *ಅಂತರ್ಹಾರ* | *ಎರಡು/ಮೂರನೇ ಪ್ರಕಾರ* | *ಮೂರು/ಕೊನೆಯ ಪ್ರಾಕಾರ* |
| **ದೀಪ್ತಾಗಮ** | *ಅಂತರ್ಹಾರ* | *ಮಧ್ಯಹಾರ* | *ಮರ್ಯಾದಾಭಿತ್ತಿ* |
| **ಕಾಶ್ಯಪಶಿಲ್ಪ** | *ಅಂತರ್ಮಂಡಲ* | – | *ನಾಲ್ಕನೇ ಪ್ರಾಕಾರ* |
| **ಅಜಿತಾಗಮ** | *ಅಂತರ್ಮಂಡಲಕ್ಕೆ ಹಿಂದೆ (?)[೨೦]* | *ಅಂತರ್ಹಾರದ ಮುಂದೆ* | *ಮಧ್ಯಹಾರ* |
| **ಕಾರಣಾಗಮ** | *ಎರಡನೇ ಪ್ರಾಕಾರ/ ಅಂತರಾಲ* | *ಮರ್ಯಾದಿ ಭಿತ್ತಿ* | – |
| **ಮಯಮತ** | *ಅಂತರ್ಮಂಡಲ/ಅಂತರ್ಹಾರ/ಮಧ್ಯಹಾರ* | – <br> – | – <br> – |
| **ಯೋಗಜಾಗಮ** | *ಅಂತರ್ಮಂಡಲ* | *ಮರ್ಯಾದಾಭಿತ್ತಿ* | – |
| **ವೀರಾಗಮ** | *ಅಂತರ್ಮಂಡಲ/ ಅಂತರ್ಹಾರ* | – | – |

ಸಾಮಾನ್ಯವಾಗಿ ಗ್ರಂಥಗಳು, ೮ ಪರಿವಾರ ದೇವತೆಗಳನ್ನು ಮೊದಲನೇ ಪ್ರಾಕಾರದಲ್ಲೂ, ೧೬ ಪರಿವಾರ ದೇವತೆಗಳಿದ್ದರೆ ಅದನ್ನು ಎರಡನೇ ಪ್ರಾಕಾರದಲ್ಲೂ, ೩೨ ಪರಿವಾರಗಳಿದ್ದಲ್ಲಿ ಮೂರನೆಯ ಅಥವಾ ಕೊನೆಯ ಪ್ರಾಕಾರದಲ್ಲಿ ನಿರ್ಮಿಸಬೇಕೆಂದೂ ಹೇಳಿವೆ. ಪ್ರಾಕಾರದ ಹೆಸರುಗಳಲ್ಲಿ ಗ್ರಂಥಗಳಲ್ಲಿ ವ್ಯತ್ಯಾಸವಿದ್ದು, ಆ ಗ್ರಂಥಗಳ ಹಿನ್ನೆಲೆಯಲ್ಲಿ ಅದು ಎಷ್ಟನೆಯದೆಂದು ಗುರುತಿಸಿಕೊಳ್ಳ ಬೇಕಾಗುತ್ತದೆ.[೨೨] ಮೂರು ಅಥವಾ ಐದು ಪ್ರಾಕಾರಗಳಿರುವ ದೇವಾಲಯಗಳಲ್ಲಿ ಅಷ್ಟಪರಿವಾರ ದೇವತೆಗಳನ್ನು 'ಅಂತರ್ಹಾರ' ಅಥವಾ 'ಮಧ್ಯಹಾರ'ದಲ್ಲಿ ಸ್ಥಾಪಿಸಬೇಕು ಎಂಬುದು ಮಯಮತದ ನಿಯಮ.[೨೩] ಅಂದರೆ, ಸಂಪಾದಕರು ಹೇಳುವಂತೆ, ದೇವಾಲಯದಲ್ಲಿ ಮೂರು ಪ್ರಾಕಾರಗಳಿದ್ದರೆ, ಮೊದಲ ಪ್ರಾಕಾರದಲ್ಲಿ ಪರಿವಾರ ದೇವತೆಗಳಿರುವುದಿಲ್ಲ ; ಅಂತೇ, ಐದು ಪ್ರಾಕಾರಗಳಿದ್ದರೆ, ಒಂದು ಮತ್ತು ಎರಡನೇ ಪ್ರಾಕಾರದಲ್ಲಿ ಪರಿವಾರಾಲಯ ಗಳಿರುವುದಿಲ್ಲ.[೨೪] ಮಾನಸಾರವು ೩೨ ವೈಷ್ಣವ ಪರಿವಾರದ ಬಗ್ಗೆ ಹೇಳುವಾಗ ಮೂರು ಪ್ರಾಕಾರದೊಳಗೇ ಆಲಯ ನಿರ್ಮಿಸಿರುವುದು ಚಿತ್ರದಿಂದ ಸ್ಪಷ್ಟವಾಗುತ್ತದೆ.

ಶಿವ, ವಿಷ್ಣು, ದೇವಿ – ಈ ಎಲ್ಲ ದೇವತೆಗಳಿಗೂ ಪರಿವಾರ ಆಲಯಗಳು ಎಂಟು, ಹದಿನಾರು ಅಥವಾ ಮೂವತ್ತೆರಡು ಇರಬಹುದೆಂದು ಗ್ರಂಥಗಳು ಹೇಳಿವೆ. ಇದರೊಂದಿಗೆ, ಆಯಾ ಪರಿವಾರಗಳ ಗುಂಪಿನಲ್ಲಿ ಇರುವ ದೇವತೆಗಳನ್ನೂ ಅವು ಹೇಳಿದ್ದು, ಇಲ್ಲಿ ಶೈವ ದೇವಾಲಯಗಳ ಪರಿವಾರ ದೇವತೆಗಳು ಮತ್ತು ಆಲಯಗಳ ಬಗ್ಗೆ ಮಾತ್ರ ಗಮನಹರಿಸಲಾಗಿದೆ.

**(ಅ) ಅಷ್ಟಪರಿವಾರ ದೇವತೆಗಳು / ಆಲಯಗಳು :** ದೀಪ್ತಾಗಮ, ಯೋಗಜಾಗಮ, ವೀರಾಗಮ ಮತ್ತು ಮಾನಸಾರ ಗ್ರಂಥಗಳು[೨೫] ದೇವಾಲಯಗಳಲ್ಲಿರಬೇಕಾದ ಅಷ್ಟಪರಿವಾರಗಳನ್ನು ಈ ಕೆಳಗಿನಂತೆ ಹೇಳಿವೆ :

| ದಿಕ್ಕುಗಳು | ಪರಿವಾರ ದೇವತೆಗಳು |
|---|---|
| ಪೂರ್ವ | ವೃಷಭ |
| ಆಗ್ನೇಯ | ದುರ್ಗಾ |
| ದಕ್ಷಿಣ | ಸಪ್ತಮಾತೃಕಾ |
| ನೈಋತ್ಯ | ವಿನಾಯಕ |
| ಪಶ್ಚಿಮ | ಸ್ಕಂಧ |
| ವಾಯವ್ಯ | ಜ್ಯೇಷ್ಠಾ |
| ಉತ್ತರ | ವಿಷ್ಣು |
| ಈಶಾನ್ಯ | ಭಾಸ್ಕರ/ಚಂಡೇಶ |

ಉಳಿದ ಕೆಲವು ಗ್ರಂಥಗಳು, ಇವುಗಳ ಸ್ಥಾನ/ದಿಕ್ಕನ್ನು ಬೇರೊಂದು ರೀತಿಯಲ್ಲಿ ಹೇಳಿವೆ.[೨೬]

| ದಿಕ್ಕುಗಳು | ಕಾರಣಾಗಮ | ಮಯಮತ | ಕಾಶ್ಯಪ ಶಿಲ್ಪ | ಅಜಿತಾಗಮ |
|---|---|---|---|---|
| ಪೂರ್ವ | ವೃಷಭ | ವೃಷಭ | ವೃಷಭ | ವೃಷಭ |
| ಆಗ್ನೇಯ | ಅಗಸ್ತ್ಯ | ಗಣಾಧಿಪ | – | ಬ್ರಹ್ಮ |
| ದಕ್ಷಿಣ | ಕಾತ್ಯಾಯಿನೀ | ಬ್ರಹ್ಮ | – | ಮಾತೃಗಣ |
| ನೈಋತ್ಯ | ಗಣೇಶ | ಮಾತೃ | ವಿನಾಯಕ | ವಿನಾಯಕ |
| ಪಶ್ಚಿಮ | ಬ್ರಹ್ಮ | ಗುಹಾ | ಗುಹಾ ಮತ್ತು ಜ್ಯೇಷ್ಠಾ | ಸ್ಕಂಧ |
| ವಾಯುವ್ಯ | ಷಣ್ಮುಖ | ಆರ್ಯ | ಸಪ್ತಮಾತೃಕಾ | ಜ್ಯೇಷ್ಠಾ |
| ಉತ್ತರ | ಕೇಶವ | ಅಚ್ಯುತ | ಕೇಶವ ಮತ್ತು ಕಾತ್ಯಾಯಿನಿ | ಕೌಶಿಕ ಮತ್ತು ವಿಷ್ಣು |
| ಈಶಾನ್ಯ | ಭಾಸ್ಕರ / ಚಂಡೇಶ? | ಚಂಡೇಶ | – | ರವಿ |

ಅಂತರ್ಮಂಡಲದಲ್ಲಿ ಚತುರ್ದ್ವಾರದ ಮಂಟಪದಲ್ಲಿ ವೃಷಾಭಾಲಯ ಇರಬೇಕೆಂದು ಕೆಲವೆಡೆ ಹೇಳಿದೆ.[೨೭]

ದೇವಾಲಯವು ಚಿಕ್ಕದಾಗಿದ್ದರೆ, ಒಂದು ಪ್ರಾಕಾರವನ್ನು ಮಾಡಿ ಅಷ್ಟ ಪರಿವಾರಗಳನ್ನು ಸ್ಥಾಪಿಸಬೇಕು ಎಂದು ಮಯಮತದಲ್ಲಿದೆ.[೨೮] ಎಲ್ಲ ಗ್ರಂಥಗಳೂ ಪರಿವಾರಗಳ ಸ್ಥಾನವನ್ನು ದಿಕ್ಕಿನ ಮೂಲಕ ಹೇಳಿದ್ದರೆ, ಮಯಮತವು ದಿಕ್ಕಿನ ಬದಲು, ಆ ದಿಕ್ಕು/ಸ್ಥಾನದಲ್ಲಿರುವ (ವಾಸ್ತು ಮಂಡಲದ) ವಾಸ್ತುದೇವತೆಯ ಹೆಸರಿನಲ್ಲಿ ಹೇಳಿದೆ.[೨೯] ಈ ಅಷ್ಟಪರಿವಾರವನ್ನು 'ಪೀಠ' ರೀತಿಯ (೯ ಚೌಕಗಳ) ಮಂಡಲದಲ್ಲಿ ಮಾಡಬೇಕೆಂದೂ 'ಆರ್ಯಕ'ದಿಂದ ಆರಂಭಿಸಿ ಮಾಡಬೇಕೆಂದೂ ಅದು ನಿಯಮಿಸಿದೆ[೩೦] 'ಪೀಠ' ನಕ್ಷೆಯಲ್ಲಿ 'ಆರ್ಯಕ'ಕ್ಕೆ ಸ್ಥಾನ ಇಲ್ಲದಿದ್ದರೂ, 'ಆರ್ಯಕ'ವು ಪೂರ್ವದಿಕ್ಕಿನ ಚೌಕದ ಒಂದು ವಾಸ್ತುದೇವತೆ ಎಂದು ಬೇರೊಂದು ನಕ್ಷೆಯಿಂದ ತಿಳಿಯಬಹುದಾಗಿದೆ. ಅದು ಉಳಿದಂತೆ

ಹೇಳಿರುವ ವಾಸ್ತುದೇವತೆಗಳ ಹೆಸರುಗಳನ್ನು ಗಮನಿಸಿ, ಇವು ೨೫ ಚೌಕಗಳ 'ಉಪಪೀಠ' ರೀತಿಯ ನಕ್ಷೆಯ ಒಳಭಾಗದಲ್ಲಿರುವ ವಾಸ್ತುದೇವತೆಗಳೆಂದು ಸಂಪಾದಕರು ಗುರುತಿಸಿದ್ದಾರೆ[೩೧] ಹೀಗೆ, ಆ ಗ್ರಂಥವು ಒಂದೊಂದು ಪರಿವಾರ ದೇವತೆಗೂ ಹೇಳುವ ವಾಸ್ತುದೇವತೆಯ ಸ್ಥಾನವು ಯಾವ ದಿಕ್ಕಿನಲ್ಲಿದೆಯೋ ಅದನ್ನೇ ಆ ಪರಿವಾರ ದೇವತೆ ಇರುವ ದಿಕ್ಕೆಂದು, ಚಿತ್ರದಲ್ಲಿರುವಂತೆ ಪರಿಗಣಿಸಬಹುದಾಗಿದೆ.[೩೧ಅ]

ಪರಿವಾರಾಲಯಗಳು ಪ್ರಧಾನ ಆಲಯದ ಸುತ್ತ ಇರುವುದರಿಂದ ಯಾವ ದಿಕ್ಕಿನ ಆಲಯಗಳು ಯಾವ ಕಡೆಗೆ ಮುಖ ಮಾಡಿರಬೇಕೆಂದು ಗ್ರಂಥಗಳು ಹೇಳಿವೆ. ಅದರಂತೆ, ಈಶಾನ್ಯದಿಂದ ಆಗ್ನೇಯದವರೆಗಿನ ಆಲಯಗಳು ಪಶ್ಚಿಮಾಭಿಮುಖವಾಗಿಯೂ, ನೈಋತ್ಯದಿಂದ ವಾಯವ್ಯದವರೆಗಿನ ಆಲಯಗಳು ಪೂರ್ವಾಭಿಮುಖವಾಗಿಯೂ, ದಕ್ಷಿಣ ದಿಕ್ಕಿನ ಆಲಯಗಳು ಉತ್ತರಾಭಿಮುಖವಾಗಿಯೂ, ಉತ್ತರ ದಿಕ್ಕಿನ ಆಲಯಗಳು ದಕ್ಷಿಣಾಭಿಮುಖವಾಗಿಯೂ ಇರಬೇಕೆಂದು ಕಾರಣಾಗಮವು[೩೨] ಹೇಳಿದೆ. ಪರಿವಾರ ದೇವತೆಗಳ ಸ್ಥಾನವನ್ನು, ದಿಕ್ಕಿನ ಬದಲು, ವಾಸ್ತುದೇವತೆಗಳ ಸ್ಥಾನದ ಮೂಲಕ ಹೇಳಿರುವ ಮಯಮತವು, ದೇವಾಲಯವು ಯಾವ ದಿಕ್ಕಿಗೆ ಅಭಿಮುಖವಾಗಿದೆ ಎನ್ನುವುದರ ಆಧಾರದ ಮೇಲೆ ಈ ಸ್ಥಾನಗಳು ಬದಲಾಗುತ್ತದೆಂದೂ ಸೂಚಿಸಿದೆ. ಮುಖ್ಯ ದೇವಾಲಯವು ಪಶ್ಚಿಮಕ್ಕೆ ಅಭಿಮುಖವಾಗಿದ್ದರೆ, ವೃಷಭನು 'ಮಿತ್ರ' 'ಪದ'ದಲ್ಲಿರುತ್ತಾನೆ; ಅಂದರೆ ಪೂರ್ವದ ಬದಲು ಪಶ್ಚಿಮದಲ್ಲಿರುತ್ತಾನೆ. ಅದರಂತೇ ಇನ್ನೂ ಕೆಲವು ದೇವತೆಗಳ 'ಪದ'ಗಳೂ ಬದಲಾಗುತ್ತವೆ; ಅಂದರೆ, ಬ್ರಹ್ಮನು ದಕ್ಷಿಣದ ಬದಲು ಉತ್ತರ ದಿಕ್ಕಿನಲ್ಲೂ, 'ಗುಹಾ'ನು ಪಶ್ಚಿಮದ ಬದಲು ಪೂರ್ವದಲ್ಲೂ, ಹರಿಯು ಉತ್ತರದ ಬದಲು ದಕ್ಷಿಣದಲ್ಲೂ ಇರುತ್ತಾರೆ.[೩೩] ಈ ನಾಲ್ಕು ಪರಿವಾರ ದೇವತೆಗಳ ಗುಡಿಯ ಅಭಿಮುಖವು ಈಶ್ವರನ ಗುಡಿಯು ಅಭಿಮುಖವಾಗಿರುವ ದಿಕ್ಕಿನಂತೇ ಇರಬೇಕು; ಉಳಿದ ದೇವತೆಗಳ ಗುಡಿಯು ಅದರದರ ಸ್ಥಾನದಿಂದಲೇ ದೇವಾಲಯಕ್ಕೆ ಅಭಿಮುಖವಾಗಿರಬೇಕೆಂಬುದು ಮಯಮತದ ನಿಯಮ.[೩೪] ದೇವಾಲಯವು ಪೂರ್ವ ಅಥವಾ ಪಶ್ಚಿಮ–ಯಾವ ದಿಕ್ಕಿಗೆ ಅಭಿಮುಖವಾಗಿದೆಯೋ, ಅದರ ಪ್ರಕಾರ 'ವೃಷ'ನು ಶಿವನಿಗೆ ಅಭಿಮುಖವಾಗಿರುತ್ತಾನೆ ಅಥವಾ ಅವನ ಹಿಂಭಾಗವು ಶಿವನಿಗೆ ಅಭಿಮುಖವಾಗಿರುತ್ತದೆ ; ಇದರೊಂದಿಗೆ, ಚಂಡೇಶ, ಗಣೇಶ– ಇವರು ದಕ್ಷಿಣ ಮತ್ತು ಉತ್ತರಕ್ಕೆ ಕ್ರಮವಾಗಿ ಅಭಿಮುಖವಾಗಿರುತ್ತದೆ.[೩೫] 'ಮಾಲಿಕಾ' ರೀತಿಯ ಪರಿವಾರ ರಚನೆಯಲ್ಲಿ, ಪರಿವಾರ ದೇವತೆಗಳಿಗೆ ನಿಯಮಿಸಿರುವ ಚೌಕದಲ್ಲಿ 'ಆರ್ಯ' (ಪೂರ್ವ ದಿಕ್ಕು) ಚೌಕದಿಂದ ಆರಂಭಿಸಿ ರಚಿಸಬೇಕೆಂದೂ, ಅವೆಲ್ಲವೂ ದೇವಾಲಯದೆಡೆಗೆ ಮುಖ ಮಾಡಿರಬೇಕೆಂದೂ ಮಯಮತದಲ್ಲಿದೆ.[೩೬]

**(ಆ) ದ್ವಾದಶ ಪರಿವಾರ ದೇವತೆಗಳು :** ಮಯಮತವು, ೧೨ ಪರಿವಾರ ದೇವತೆಗಳನ್ನು ಹೇಳುವಲ್ಲಿ, ಮೊದಲ ಸ್ಥಾನದಲ್ಲಿ ವೃಷ, ಕಮಲಜ, ಗುಹ ಮತ್ತು ಹರಿಯನ್ನು ಸ್ಥಾಪಿಸಬೇಕೆಂದೂ, ಎರಡನೇ ಸ್ಥಾನದಲ್ಲಿ ರವಿ, ಗಜವದನ, ಯಮ, ಮಾತೃಕೆಯರು, ಜಲೇಶ, ದುರ್ಗಾ, ಧನದ ಮತ್ತು ಚಂಡ ಇವರನ್ನು 'ಸೂರ್ಯ' ಚೌಕದಿಂದ ಆರಂಭಿಸಿ ಬಲಗಡೆಯಿಂದ ಸ್ಥಾಪಿಸಬೇಕೆಂದು ಹೇಳಿದೆ.[೩೭] 'ಉಪಪೀಠ' ನಕ್ಷೆಯಲ್ಲಿ ೧೨ ಪರಿವಾರಗಳನ್ನು ಸ್ಥಾಪಿಸಬೇಕೆಂದು ಈ ಗ್ರಂಥದಲ್ಲಿದೆ. ಈ ನಕ್ಷೆಯಲ್ಲಿ ೨೫ 'ಪದ'/ಚೌಕಗಳಿದ್ದು, ಇದರಲ್ಲಿ ೧೨ ದೇವತೆಗಳಿಗೆ ಯಾವ ರೀತಿಯಲ್ಲಿ ಸ್ಥಾನವನ್ನು ಹೊಂದಿಸಬೇಕೆಂಬುದು ಸ್ಪಷ್ಟವಾಗಿಲ್ಲ. ಉಪಪೀಠ ನಕ್ಷೆಯನ್ನು ಪ್ರಾಕಾರ ರಚನೆಗೆ ಅನ್ವಯಿಸಿ ಹೇಳಿಲ್ಲ ಎಂದಿರುವ ಸಂಪಾದಕರು, ಇದು ಒಂದಕ್ಕಿಂತ ಹೆಚ್ಚಿನ ಪ್ರಾಕಾರಗಳಿಗೆ ಅನ್ವಯಿಸುವುದೇ ಎಂದು ಅನುಮಾನ ವ್ಯಕ್ತಪಡಿಸಿದ್ದಾರೆ; ಅಲ್ಲದೆ, ೧೨ ಪರಿವಾರಗಳ ಆಲಯವು ಅಪರೂಪವೆಂದೂ ಹೇಳಿದ್ದಾರೆ.[೩೮]

**(ಇ) ಷೋಡಶ ಪರಿವಾರ ದೇವತೆಗಳು :** ೧೬ ಪರಿವಾರ ದೇವತೆಗಳನ್ನು ಸ್ಥಾಪಿಸುವಲ್ಲಿ, ಹಿಂದೆ ವಿವರಿಸಿದ ೮ ದೇವತೆಗಳೊಂದಿಗೆ (ಅಥವಾ ಬೇರೆ ೮ ದೇವತೆಗಳೊಂದಿಗೆ) ಇನ್ನೂ ೮ ದೇವತೆಗಳನ್ನು ಸ್ಥಾಪಿಸಬೇಕು. ಶೈವ ದೇವಾಲಯಗಳಿಗೆ ಸಂಬಂಧಿಸಿದಂತೆ ಗ್ರಂಥಗಳಲ್ಲಿ[೪೦] ಹೇಳಿರುವ ೧೬ ಪರಿವಾರ ದೇವತೆಗಳೆಂದರೆ :

ಈ ಪಟ್ಟಿಯನ್ನು ಗಮನಿಸಿದರೆ, ಅಷ್ಟಪರಿವಾರ ದೇವತೆಗಳಂತಲ್ಲದೆ, ಹದಿನಾರು ಪರಿವಾರ ದೇವತೆಗಳನ್ನು ಗ್ರಂಥಗಳು ಬೇರೆ ಬೇರೆಯಾಗಿ ಗುರುತಿಸಿರುವುದು ಸ್ಪಷ್ಟವಾಗುತ್ತದೆ. ಯಾವುದೇ ಎರಡು ಗ್ರಂಥಗಳು ಹೇಳುವ ದೇವತೆಗಳೂ ಒಂದೇ ಆಗಿಲ್ಲ ಎಂದು ಸದ್ಯಕ್ಕೆ ನನಗೆ ದೊರೆತಿರುವ ದೇವತೆಗಳ ಪಟ್ಟಿಯಿಂದ ಹೇಳಬಹುದಾಗಿದೆ. ಸರಸ್ವತೀ, ಲಕ್ಷ್ಮೀ, ವಿನಾಯಕ, ದುರ್ಗಾ, ಸಪ್ತಮಾತೃಕೆ, ಕುಮಾರ ಮುಂತಾದ ದೇವತೆಗಳು ಮತ್ತು ಅಷ್ಟದಿಕ್ಪಾಲಕರು (ಇವರು ಅಷ್ಟಪರಿವಾರದಲ್ಲಿ ಇರುವುದಿಲ್ಲ) ಹೆಚ್ಚು ಉಲ್ಲೇಖಿತರಾಗಿದ್ದಾರೆ. ಅಲ್ಲದೆ, ಅಷ್ಟಪರಿವಾರದಲ್ಲಿರುವ ದೇವತೆಗಳೂ, ಷೋಡಶ ಪರಿವಾರದಲ್ಲಿರುವ ದೇವತೆಗಳೂ ಬೇರೆ ಬೇರೆಯಾಗಿರುವುದನ್ನು (ಮಯಮತ ಮತ್ತು ಕೆಲಮಟ್ಟಿಗೆ ಮಾನಸಾರ ಬಿಟ್ಟು) ಗಮನಿಸಬಹುದು. ಈ ದೇವತೆಗಳ ಸ್ಥಾನದ ಬಗ್ಗೆ ಅಜಿತಾಗಮ ಮತ್ತು ಮಾನಸಾರಗಳು ದಿಕ್ಕನ್ನು

ಹೀಗೆ, ೧೬ ಪರಿವಾರ ದೇವತೆಗಳಿದ್ದಾಗ, ದಿಕ್ಕು-ದಿಕ್ಕುಗಳಲ್ಲಿ ಮಾತ್ರವಲ್ಲದೆ, ಪಟ್ಟಿಯಲ್ಲಿ ಸೂಚ್ಯವಾಗಿರುವಂತೆ, ಅವುಗಳ ನಡುವೆಯೂ ದೇವತೆಗಳ ಆಲಯವಿರು ತ್ತದೆಂಬುದನ್ನು ಗಮನಿಸಬಹುದು. ಇದನ್ನು ಸ್ಪಷ್ಟವಾಗಿ ಸೂಚಿಸಿರುವ ಮಾನಸಾರದಲ್ಲಿ ದೇವತೆಗಳ ಹೆಸರುಗಳಲ್ಲಿ ಸ್ವಲ್ಪ ವ್ಯತ್ಯಾಸವಾಗಿದೆ. ಇದನ್ನೇ ಇನ್ನೊಂದು ರೀತಿಯಲ್ಲಿ ಹೇಳಿರುವ ಅಜಿತಾಗಮದಲ್ಲೂ ಒಂದೆಡೆ ದಿಕ್ಕು ತಪ್ಪಾಗಿರುವಂತೆ ತೋರುತ್ತದೆ. ಇದರಲ್ಲಿರುವಂತೆ ರಚಿಸಿದರೆ, ವಿದಿಕ್ಕಿನಲ್ಲಿರುವ ಈಶಾನನ ಅಕ್ಕಪಕ್ಕ ನಾರದ, ಬ್ರಹ್ಮ ಮತ್ತು ಸೂರ್ಯ, ಅಗಸ್ತ್ಯರು-ಇಬ್ಬಿಬ್ಬರು ಸ್ಥಾಪಿತರಾಗುತ್ತಾರೆ; ದಕ್ಷಿಣ ದಿಕ್ಕಿನ (ಯಮ) ಅಕ್ಕಪಕ್ಕ ಯಾವ ಪರಿವಾರ ದೇವತೆಯನ್ನೂ ಇದರಲ್ಲಿ ಸೂಚಿಸಿಲ್ಲ; ಆದ್ದರಿಂದ ಈಶಾನನ ಅಕ್ಕಪಕ್ಕದ ನಾರದ ಮತ್ತು ಅಗಸ್ತ್ಯರು ದಕ್ಷಿಣ ದಿಕ್ಕಿನ ಯಮನ ಅಕ್ಕಪಕ್ಕದ ಪರಿವಾರ ದೇವತೆಗಳಾಗಿರುತ್ತಾರೆ ಎಂದು ತಿಳಿಯುವುದು ಸೂಕ್ತವೆನಿಸುತ್ತದೆ.

**(ಈ) ದ್ವಾತ್ರಿಂಶತ್ ಪರಿವಾರ ದೇವತೆಗಳು :** ೧೬ ದೇವತೆಗಳಲ್ಲದೆ, ಮತ್ತೊಂದು ಪ್ರಾಕಾರದಲ್ಲಿ ಇನ್ನೂ ೧೬ ಪರಿವಾರ ದೇವತೆಗಳನ್ನು ಸ್ಥಾಪಿಸಿದರೆ, ಅದು 'ದ್ವಾತ್ರಿಂಶತ್' ಪರಿವಾರ ದೇವತಾಲಯ ಎನಿಸಿಕೊಳ್ಳುತ್ತದೆ. ಗ್ರಂಥಗಳು[೪೪] ಸೂಚಿಸಿರುವ ೩೨ ಪರಿವಾರ ದೇವತೆಗಳನ್ನು ಈ ಕೆಳಗಿನ ಪಟ್ಟಿಯಲ್ಲಿ ನೋಡಬಹುದು :

ಮೂವತ್ತೆರಡು ದೇವತೆಗಳ ಪರಿವಾರಾಲಯವನ್ನು 'ಸ್ಥಂಡಿಲ' ನಕ್ಷೆ ಇರುವಲ್ಲಿ (೪೯ ಚೌಕಗಳು), ಒಂಭತ್ತು ಚೌಕದ ಬ್ರಹ್ಮನ ಸುತ್ತ ಸ್ಥಾಪಿಸಬೇಕೆಂದು ಮಯಮತ ಮತ್ತು ಕಾಮಿಕಾಗಮಗಳು ಹೇಳಿವೆ.[೪೬] ಮಯಮತ ಮತ್ತು ಮಾನಸಾರಗಳು ಪರಿವಾರ ದೇವತೆಗಳ ಸ್ಥಾನವನ್ನು ಹಿಂದಿನಂತೆಯೇ ನಕ್ಷೆಯ ವಾಸ್ತುದೇವತೆಗಳ ಹೆಸರಿನಲ್ಲಿ ಹೇಳಿದ್ದು, ಅದರಂತೆ ದಿಕ್ಕನ್ನು ಪಟ್ಟಿಯಲ್ಲಿರುವಂತೆ ಗುರುತಿಸಿಕೊಳ್ಳಬಹುದಾಗಿದೆ.[೪೭] ಮಾನಸಾರದಲ್ಲಿ ೩೨ ದೇವತೆಗಳ ಪಟ್ಟಿಯಲ್ಲಿ ಇಪ್ಪತ್ತೊಂದು ದೇವತೆಗಳನ್ನು ಮಾತ್ರ ಹೆಸರಿಸಿದ್ದು, ಉಳಿದಂತೆ ವಿವಿಧ ಕಾರ್ಯೋದ್ದೇಶದ ಮಂಟಪಗಳನ್ನು ಹೇಳಿದೆ. ಈ ಪಟ್ಟಿಯಲ್ಲಿ ಕಂಡುಬರುವಂತೆ, ಹದಿನಾರು ದೇವತೆಗಳಿದ್ದಾಗ, ನಾಲ್ಕು ದಿಕ್ಕುಗಳ ಅಕ್ಕಪಕ್ಕ ಮಾತ್ರ ದೇವತೆಗಳಿದ್ದರೆ, ಮೂವತ್ತೆರಡು ದೇವತೆಗಳಿದ್ದಾಗ, ವಿದಿಕ್ಕುಗಳ ಅಕ್ಕಪಕ್ಕದಲ್ಲೂ ಪರಿವಾರ ದೇವತೆಗಳಿರುತ್ತಾರೆ.

ಮೂವತ್ತೆರಡು ದೇವತೆಗಳ ಬಗ್ಗೆ ಹೇಳುವಾಗಲೂ ಗ್ರಂಥಗಳಲ್ಲಿ ವ್ಯತ್ಯಾಸವಿರುವುದು ಕಂಡುಬರುತ್ತದೆ. ಅಜಿತಾಗಮ ಮತ್ತು ಶೈವ ಸಿದ್ಧಾಂತ ಸಂಗ್ರಹಗಳು, ಅಷ್ಟವಸು, ಅಷ್ಟಪ್ರಮಥರು ಮುಂತಾದವರನ್ನು ಈ ಪರಿವಾರ ದೇವತೆಗಳಲ್ಲಿ ಸೇರಿಸಿವೆ. ಇದರೊಂದಿಗಿರುವ ಅಷ್ಟನಾಗಗಳ ಬಗ್ಗೆ ಹೇಳುವಾಗ, ಅದನ್ನು ಪುರುಷಾಕೃತಿಯಲ್ಲಿ ಮಾಡಬೇಕೆಂದೂ, ಕೆಳಭಾಗವು ಸರ್ಪಾಕಾರದಲ್ಲಿರಬೇಕೆಂದೂ ಅಜಿತಾಗಮವು ಹೇಳಿದೆ. ಅಂತರ್ಹಾರದಲ್ಲಿ ಈಶಾನ್ಯದಲ್ಲಿ ಕ್ಷೇತ್ರಪಾಲನಿರಬೇಕೆಂದೂ ಅಜಿತಾಗಮ ಮತ್ತು ಕಾರಣಾಗಮಗಳು ಹೇಳಿವೆ.[೪೮] ಕಾಮಿಕಾಗಮ, ಮಾನಸಾರ ಮತ್ತು ಮಯಮತಗಳು ಇದಕ್ಕಿಂತ ಭಿನ್ನವಾಗಿ ದೇವತೆಗಳ ಪಟ್ಟಿಯನ್ನು ನೀಡಿದ್ದು, ಅವುಗಳಲ್ಲಿ ಸ್ವಲ್ಪ ಹೋಲಿಕೆ ಇದೆ.

೮, ೧೬ ಅಥವಾ ೩೨ ದೇವತೆಗಳ ಪಟ್ಟಿಯ ನಡುವೆಯೂ ಕೆಲವು ವ್ಯತ್ಯಾಸಗಳಿವೆ. ಅಜಿತಾಗಮದಲ್ಲಿ ಅಷ್ಟಪರಿವಾರ ೮ ದೇವತೆಗಳಿಗೂ, ೧೬ ಮತ್ತು ೩೨ ಪರಿವಾರದ ದೇವತೆಗಳಿಗೂ ವ್ಯತ್ಯಾಸವಿದೆ. ಅಂದರೆ, ಅಷ್ಟಪರಿವಾರದಲ್ಲಿ ಸ್ಥಾನ ಪಡೆದಿರುವ ದೇವತೆಗಳೂ, ೧೬ ಪರಿವಾರದಲ್ಲಿ ಸ್ಥಾನ ಪಡೆಯುವ ದೇವತೆಗಳೂ ಭಿನ್ನರಾಗಿರುತ್ತಾರೆ. ಮಯಮತ ಮತ್ತು ಮಾನಸಾರಗಳ ಪ್ರಕಾರ ಈ ಎಲ್ಲ ಸಂದರ್ಭಗಳಲ್ಲೂ ಆಯಾ ದೇವತೆಗಳೇ ಸ್ಥಾನ ಪಡೆದಿದ್ದಾರೆ. ಪರಿವಾರಾಲಯಗಳು ೮, ೧೬, ೩೨ ಯಾವುದೇ ಇದ್ದರೂ, ದೇವತೆಗಳ ಸಂಖ್ಯೆಯೂ, ಅದಕ್ಕೆ ತಕ್ಕಂತೆ ಪ್ರಾಕಾರಗಳ ಸಂಖ್ಯೆಯೂ ಹೆಚ್ಚುತ್ತಾ ಹೋಗುತ್ತದೆಯೇ ಹೊರತು ದೇವತೆಗಳು ಬದಲಾಗುವುದಿಲ್ಲ. ಅಂದರೆ, ಅಷ್ಟಪರಿವಾರದ ಗುಂಪಿನಲ್ಲಿರುವ ದೇವತೆಗಳೇ ೧೬ ಪರಿವಾರಾಲಯಗಳನ್ನು ಸ್ಥಾಪಿಸಿದಾಗಲೂ ಇರುತ್ತಾರೆ) ಅಂತೇ ೩೨ ಪರಿವಾರಾಲಯಗಳನ್ನು ಸ್ಥಾಪಿಸಿದಾಗ ೧೬ ಪರಿವಾರದಲ್ಲಿರುವ ದೇವತೆಗಳೇ ಸ್ಥಾಪಿತರಾಗಿರುತ್ತಾರೆ. ಮಾನಸಾರದ ಈ ನಿಯಮವು ಮಯಮತಕ್ಕೂ ಅನ್ವಯಿಸುವುದಾದರೂ ಅದರಲ್ಲಿ ೧೬ ಪರಿವಾರ ದೇವತೆಗಳ ಸ್ಥಾನಕ್ಕೂ, ೩೨ ಪರಿವಾರ ದೇವತೆಗಳ ಸ್ಥಾನಕ್ಕೂ ವ್ಯತ್ಯಾಸವಿದೆ. ಎಷ್ಟೇ ಸಂಖ್ಯೆಯ ಪರಿವಾರ ದೇವತೆಗಳಿದ್ದರೂ, ಒಳಪ್ರಾಕಾರದ ೪ ದಿಕ್ಕಿನ ದೇವತೆಗಳ ಸ್ಥಾನ ಮಾತ್ರ ನಿಶ್ಚಿತವಾಗಿದೆ.[೪೯]

ಪರಿವಾರಾಲಯಗಳ ಉಗಮ-ವಿಕಾಸದ ಬಗ್ಗೆ ಬರೆಯುತ್ತಾ ಟಿ.ವಿ. ಮಹಾಲಿಂಗಂ ಅವರು, 'ಎಲ್ಲ ಮುಖ್ಯ ದೇವತೆಗಳನ್ನು ಪೂಜಿಸುವ 'ಪಂಚಾಯತನ' ಪೂಜಾ ಸಂಪ್ರದಾಯದಿಂದ ಈ ಪರಿವಾರ ದೇವತೆಗಳ ಕಲ್ಪನೆಯು ಬೆಳೆಯಿತೆಂದು ಹೇಳಿದ್ದಾರೆ; ಹಾಗೂ ಕ್ರಿ.ಶ. ೬ನೇ ಶತಮಾನದಿಂದಲೇ ಇದರ ಆರಂಭವನ್ನು ಉತ್ತರ ಮತ್ತು ದಕ್ಷಿಣ ಭಾರತದಲ್ಲಿ ಗುರುತಿಸುತ್ತಾ, ಉದಾಹರಣೆಯಾಗಿ, ಉತ್ತರದಲ್ಲಿ ಭೂಮರ ಮತ್ತು ದಕ್ಷಿಣದಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವನ್ನು ಹೇಳಿದ್ದಾರೆ.[೫೦] ಪಟ್ಟದಕಲ್ಲಿನ ಈ ದೇವಾಲಯದಲ್ಲಿ ಬಹುಶಃ ಮೂವತ್ತೆರಡು ಪರಿವಾರ

ಶಿವಾಲಯಗಳ ೩೨ ಪರಿವಾರ ದೇವತೆಗಳು : (ಚಿತ್ರ – ೨ ನೋಡಿ)

| | ಕಾಮಿಕಾಗಮ | ಅಜಿತಾಗಮ | ಶೈವ ಸಿದ್ಧಾಂತ ಸಂಗ್ರಹ | ಮಯಮತ | ಮಾನಸಾರ |
|---|---|---|---|---|---|
| ೧. | ಅವಿತ್ರ | ೧–೮ ಅಷ್ಟವಸುಗಳು | | ೧. ವೃಷಭ (ಪೂ) | ೧. ವೃಷಭ |
| ೨. | ಉದಕ | ಧರೋ, ಧ್ರುವ, | (ಅಜಿತಾಗಮ | ೨. ಶ್ರೀ (ಆ) | ೨. ನಂದಿಕ (ಪೂ) |
| ೩. | ಗಂಗಾ | ಸೋಮ, ಅಪ್, | ದಂತೇ) | ೩. ಕಮಲಜ (ದ) | ೩. ಈಶ |
| ೪. | ವಹ್ನಿ | ಅನಿಲ, ಅನಲ, | | ೪. ಜ್ಯೇಷ್ಠಾ (ನೈ) | ೪. ಭುವನೇಶ |
| ೫. | ನಾಗ | ಪ್ರತ್ಯೂಷ, ಪ್ರಭಾಸ | | ೫. ಗುಹಾ (ಪ) | ೫. ಇಂದಿರಾ |
| ೬. | ಅಗಸ್ತ್ಯಕ | ೯–೧೬ಅಷ್ಟಮರುತರು | ಅಜಿತಾಗಮ | ೬. ಉಮಾ (ವಾ) | ೬. ಏಕದಂತ |
| ೭. | ಯಮ | ಗಗನ, ಸ್ಪರ್ಶನ | ದಂತೇ ಇದ್ದರೂ | ೭. ಹರಿ (ಉ) | ೭. ವರುಣ |
| ೮. | ಸುಕಾಂತ | ವಾಯು, ಅನಿಲ | 'ಗಗನ'ದ ಬದಲು | ೮. ಸರಸ್ವತೀ (ಈ) | ೮. ಚಾಮುಂಡಾ (ದ) |
| ೯. | ಭೂತೇಶ | ಮರುತ, ಪ್ರಾಣ | 'ಗರ್ಭಾಗ್ನಿ'ಯನ್ನೂ | ೯. ಸುರಪತಿ (ಪೂ) | ೯. ವಿನಾಯಕ (ವಾ) |
| ೧೦. | ಭಾರತೀ | ಪ್ರಾಣೇಶ, ಜೀವೇಶ | 'ಮರುತ'ದ | ೧೦. ಮಹಾಕಾಲ | ೧೦. ಮೊಳೆಯಂತಹ ದಂಡ (Spike) |
| ೧೧. | ಶ್ರೀ | ೧೭–೨೪ಅಷ್ಟನಾಮಗಳು | ಬದಲು 'ಜಗತ' | ೧೧. ದಿನಕರ | ೧೧. ತ್ರಿಮೂರ್ತಿ |
| ೧೨. | ಜಲೇಶ | ಅನಂತ, ವಾಸುಕೀ | ನನ್ನೂ ಹೇಳಿದೆ. | ೧೨. ವಹ್ನಿ (ಆ) | ೧೨. ಅರ್ಧನಾರೀಶ್ವರ(ಪ) |
| ೧೩. | ಸ್ಕಂದ | ತಕ್ಷ, ಕಾರ್ಕೋಟಕ | | ೧೩. ಬೃಹಸ್ಪತಿ | ೧೩. ಷಣ್ಮುಖ (ವಾ) |
| ೧೪. | ದುರ್ಗಾ | ಗುಲಿಕ,ಶಂಖಪಾಲ | (ಅಜಿತಾಗಮ | ೧೪. ಗಜವದನ | ೧೪. ಪಾರ್ವತೀ |
| ೧೫. | ಜ್ಯೇಷ್ಠಾ | ಮಹಾಪದ್ಮ, ಪದ್ಮ | ದಂತೇ) | ೧೫. ಯಮ (ದ) | ೧೫. ವಿಷ್ಣು/ಕಾಮ |
| ೧೬. | ಮನೋನ್ಮಣಿ | | | ೧೬. ಭೃಂಗಿರಿಟಿ | ೧೬. ದಕ್ಷಿಣಾಮೂರ್ತಿ |
| ೧೭. | ಬ್ರಹ್ಮ | ೨೫–೩೨ಅಷ್ಟಪ್ರಮಥರು | | ೧೭. ಚಾಮುಂಡಾ | ೧೭. ದಾನವ |
| ೧೮. | ವಿಷ್ಣು | ವಿಕೃತಿ, ವಿವೃತ | ಜ್ವರ, ಕುಂಡೋ | ೧೮. ನಿರುತಿ (ನೈ) | ೧೮. ರುದ್ರ |
| ೧೯. | ಕಾಶ್ಯಪ | ಪವನ, ಗಣ | ದರ,ಶಂಖುಕರ್ಣ | ೧೯. ಅಗಸ್ತ್ಯ | ೧೯. ಭಾಸ್ಕರ |
| ೨೦. | ನಂದಿ | ಪಾವನ, ಪ್ರಮಥ | ಮಹಾಬಲ | ೨೦. ವಿಶ್ವಕರ್ಮ | ೨೦. ಪಾಶುಪತ/ಶಿವ |
| ೨೧. | ಕ್ಷೇತ್ರಜ | ಮಥಕಾರಿಶ್ಚ | ಜಿಹ್ವಾಶಿಖ, ಶಿಖಿ | ೨೧. ಜಲಪತಿ (ಪ) | ೨೧. ಭಕ್ತ |
| ೨೨. | ವಿಮಲಾ | ಮರುತ | ಜಿಹ್ವಾ, ಪಾದಾಕ್ಷ | ೨೨. ಭೃಗು | |
| ೨೩. | ಗಜೇಂದ್ರ | ಮಹೇಂದ್ರ | ಅಕ್ಷಪಾದಕ | ೨೩. ಪ್ರಜಾಪತಿ | |
| ೨೪. | ಅನಂತ | [ಅಷ್ಟವಸುಗಳು | ['ಪ್ರೇತಜಿಹ್ವ' | ೨೪. ವಾಯು (ವಾ) | |
| | ೨೫–೩೨ | ೮ ದಿಕ್ಕಿನಲ್ಲೂ | ನನ್ನು 'ಪ್ರಮಥ | ೨೫. ದುರ್ಗಾ | |
| | ಅಷ್ಟವಸು | ಅಷ್ಟ ನಾಗಗಳು | ರಾಜ' ಎಂದಿದೆ.] | ೨೬. ವೀರಭದ್ರ | |
| | ಗಳು ಅಥವಾ | ಮರುತರ | | ೨೭. ಧನದ (ಉ) | |
| | ಋಷಿಗಳು/ | ಬಲಕ್ಕೂ, ಅಷ್ಟ | | ೨೮. ಚಂಡೇಶ್ವರ | |
| | ವಿದ್ಯೇಶ್ವರರು | ಪ್ರಮಥರು | | ೨೯. ಶುಕ್ರ | |
| | | ಅಷ್ಟಮರುತರ | | ೩೦. ಈಶ (ಈ) | |
| | | ಎಡಕ್ಕೂ | | ೩೧. ಶಶಿನ್ | |
| | | ಇರುತ್ತಾರೆ) | | ೩೨. ನಂದಿಕೇಶ್ವರ | |
| | | | | [೧ರಿಂದ ೮ರವರೆಗಿನ ದೇವತೆಗಳು ಒಳ ಚೌಕದಲ್ಲಿರುತ್ತಾರೆ; ಅಂದರೆ, ಒಳಪ್ರಾಕಾರ ದಲ್ಲಿರುತ್ತಾರೆ] | |

**ಚಿತ್ರ ೨ – ಶಿವಾಲಯದ ದ್ವಾತ್ರಿಂಶತ್ ಪರಿವಾರ ದೇವತೆಗಳು (ಮಯಮತದಂತೆ)**

| ವಾಯು | ದುರ್ಗಾ | ವೀರ ಭದ್ರ | ಧನದ | ಚಂಡೇಶ್ವರ | ಶುಕ್ರ | ಈಶ |
|---|---|---|---|---|---|---|
| ಪ್ರಜಾಪತಿ | ಉಮಾ | ಹರಿ | | | ಸರಸ್ವತಿ | ಶಶಿನ್ |
| ಭೃಗು | ಗುಹ | ಶಿವ | | | ವೃಷ | ನಂದಿಕೇಶ್ವರ |
| ಜಲಪತಿ | | | | | | ಸುರಪತಿ |
| ವಿಶ್ವಕರ್ಮನ್ | | | | | | ಮಹಾಕಾಲ |
| ಅಗಸ್ತ್ಯ | ಜ್ಯೇಷ್ಠಾ | ಕಮಲಜ | | | ಶ್ರೀ | ದಿನಕರ |
| ನಿರುತಿ | ಚಾಮುಂಡ | ಭೃಂಗಿರಿಟಿ | ಯಮ | ಗಜವದನ | ಬೃಹಸ್ಪತಿ | ವಹ್ನಿ |

ದೇವತೆಗಳ ಆಲಯಗಳು ರಚನೆಯಾದಂತೆ ತೋರುತ್ತದೆ.[೫೧] ಈಗ ಅನೇಕವು ಹಾಳಾಗಿವೆ. ಎಲ್ಲೋರದ ಕೈಲಾಸನಾಥ ದೇವಾಲಯದಲ್ಲಿ ಗಣೇಶ, ಭೈರವ, ಪಾರ್ವತೀ, ಚಂಡಿಕೇಶ್ವರ, ಸಪ್ತಮಾತೃಕಾ–ಈ ಪರಿವಾರಾಲಯಗಳ ಆಲಯಗಳಿವೆ. ಇವು ಪ್ರತ್ಯೇಕವಾಗಿ ಮೂಲ ಆಲಯದಂತೇ ಪೂರ್ಣ ರೂಪದಲ್ಲಿ ನಿರ್ಮಾಣವಾಗಿರುವುದು ಗಮನಾರ್ಹವಾಗಿದೆ.

ಬೂದಿಕೋಟೆಯ (ಕೋಲಾರ ಜಿಲ್ಲೆ) ಸೋಮೇಶ್ವರ ದೇವಾಲಯದಲ್ಲಿ ಪರಿವಾರಾಲಯಗಳಿವೆ. ಇದರಲ್ಲಿ, ದಕ್ಷಿಣಾಮೂರ್ತಿ, ವಿಷ್ಣು, ಮಹಿಷಮರ್ದಿನಿ, ಬ್ರಹ್ಮ, ಚಂಡಿಕೇಶ್ವರ, ಭೈರವ, ಸೂರ್ಯ ಮತ್ತು ನಂದಿ ಇದೆ (MAR) ನಂಜನಗೂಡಿನ ನಂಜುಂಡೇಶ್ವರ ದೇವಾಲಯದಲ್ಲಿ ಎರಡು ಪ್ರಾಕಾರಗಳಿದ್ದು, ಅದರಲ್ಲಿ ದಕ್ಷಿಣಾಮೂರ್ತಿ, ಗಣಪತಿ, ಸ್ಕಂಧ, ವಿಷ್ಣು, ದುರ್ಗಾ, ಶಿವನ ಪಂಚವಿಂಶತಿ ಲೀಲಾಮೂರ್ತಿಗಳು, ಮುನಿಗಳು, ಚಂಡಿಕೇಶ್ವರ, ವಿವಿಧ ಹೆಸರಿನ ಲಿಂಗಗಳು ಸ್ಥಾನ ಪಡೆದಿವೆ. (ಇಲ್ಲಿ ಪ್ರತ್ಯೇಕವಾಗಿ ಇವುಗಳಿಗೆ ಆಲಯುಗಳನ್ನು ರಚಿಸಿಲ್ಲ). ಚಾಮರಾಜನಗರದ ಚಾಮರಾಜೇಶ್ವರ ದೇವಾಲಯದ ಶಾಸನದಲ್ಲಿ ಅಲ್ಲಿ ಶಿವನ ಪಂಚವಿಂಶತಿ ಲೀಲಾ ಮೂರ್ತಿಗಳನ್ನು ಸ್ಥಾಪಿಸಿದ ಉಲ್ಲೇಖವಿದೆ.[೫೨] ಈ ಲೀಲಾ ಮೂರ್ತಿಗಳನ್ನು ಗ್ರಂಥಗಳು ಪರಿವಾರದಲ್ಲಿ ಹೇಳಿಲ್ಲವೆಂಬುದನ್ನು ಗಮನಿಸಬೇಕು (ಇನ್ನೂ ಕೆಲವು ದೇವಾಲಯಗಳಲ್ಲಿ ಪರಿವಾರಾಲಯಗಳಿರುವುವಾದರೂ, ಸ್ಥಳಾಭಾವದಿಂದ ಅದನ್ನಿಲ್ಲಿ ವಿವರಿಸಿಲ್ಲ).

ಶೈವ ದೇವಾಲಯಗಳಲ್ಲಿರಬೇಕಾದ ೩೨ ಪರಿವಾರ ದೇವತೆಗಳನ್ನು ಗ್ರಂಥಗಳು ನಿಖರವಾಗಿ ಹೇಳಿವೆ. ಆದರೆ, ಗ್ರಂಥದಲ್ಲಿ ಹೇಳಿರುವುದಕ್ಕಿಂತ ಹೆಚ್ಚಿನ ಸಂಖ್ಯೆಯ ಪರಿವಾರಗಳನ್ನೂ, ಬೇರೆ ಬೇರೆ ದೇವತೆಗಳ ಪರಿವಾರಾಲಯಗಳನ್ನೂ ನಿರ್ಮಿಸಿರುವುದು ಮಾತ್ರವಲ್ಲದೆ, ವಿವಿಧ ಪರಿವಾರಗಳ ಹೆಸರಿನಲ್ಲಿ ಲಿಂಗವನ್ನೇ ಸ್ಥಾಪಿಸಿರುವುದೂ ಕಂಡುಬರುತ್ತದೆ. ಇದು ಒಂದು ರೀತಿಯಲ್ಲಿ ಬದಲಾವಣೆಯ ಸೂಚಕವಾಗಿದೆ. ಇದು ಈ ಬಗ್ಗೆ ಇನ್ನೂ ಹೆಚ್ಚಿನ ಅಧ್ಯಯನಕ್ಕೆ ಆಹ್ವಾನ ನೀಡುತ್ತಿದೆ. ಕ್ಷೇತ್ರ ಕಾರ್ಯದಿಂದ ಪರಿವಾರಾಲಯಗಳ ಕಾಲಾನುಕ್ರಮ ಬೆಳವಣಿಗೆ, ಬದಲಾವಣೆ ಮುಂತಾದ ಅನೇಕ ಅಂಶಗಳ ಬಗ್ಗೆ ಬೆಳಕು ಚೆಲ್ಲುವ ಸಾಧ್ಯತೆ ಇದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. S.K. Ramachandra Rao, *Vastu-Silpa-Kosha*, p. 167.

೨. ಇವುಗಳಲ್ಲಿ ಶೈವಸಿದ್ಧಾಂತ ಸಾರಸಂಗ್ರಹದ ವಿವರಗಳನ್ನು ರಾಮಚಂದ್ರರಾಯರ ಪೂರ್ವೋಕ್ತ ಗ್ರಂಥದಿಂದಲೂ, ಯೋಗಜಾಗಮ, ಕಾರಣಾಗಮ, ದೀಪ್ತಾಗಮ, ವೀರಾಗಮ ಮುಂತಾದುವನ್ನು ಅಜಿತಾಗಮದ ಅಡಿಟಿಪ್ಪಣಿಯಲ್ಲಿರುವ ಶ್ಲೋಕಗಳಿಂದಲೂ ಸಂಗ್ರಹಿಸಿದ್ದೇನೆ.

೩. **ಕೌರವಾಗಮದ** ಅ. ೨೩ ಮತ್ತು ೨೪ರಲ್ಲಿರುವ ಆವರಣ ದೇವತೆಗಳ ವಿವರಗಳು ನನಗೆ ಸ್ಪಷ್ಟವಾಗಿಲ್ಲ.

೪೧. **ಕಾಮಿಕಾ–I**, ೭೧.೮೪, ಬಿ.–೮೮ ಎ.

೪೨. **ಮಯ**–೨೩.೪೨ ಬಿ, ೪೩. **ಮಯ**–೨೩.೪೩–೪೫ಎ.

೪೪. **ಕಾಮಿಕಾ–I**, ೭೧.೮೪–೮೮, **ಅಜಿತಾ**–೩೯.೨೭–೩೩, ಶೈವಸಿದ್ಧಾಂತ ಸಾರಸಂಗ್ರಹ–ಪು. ೪೩೮–೪೪೪, **ಮಯ**–೨೩.೪೫ಜಿ–೫೨, **ಮಾನ**–೩೨.೧೬೬.

೪೫. ಮಹಾಕಾಲ ಮತ್ತು ನಂದಿಕೇಶ್ವರ – ಇವರು ಶಿವನ ದೇವಾಲಯಗಳ ಮುಖ್ಯ ದ್ವಾರಪಾಲಕರಾಗಿದ್ದು, ಮುಖ್ಯಪ್ರವೇಶ ದ್ವಾರದ ಎರಡೂ ಪಕ್ಕಗಳಲ್ಲಿರುತ್ತಾರೆ.

೪೬ **ಮಯ**–೨೩.೪೫ಬಿ, **ಕಾಮಿಕಾ–I**, ೭೧.೮೮.

೪೭. ವಾಸ್ತುಮಂಡಲದಲ್ಲಿರುವ / ಗ್ರಂಥದಲ್ಲಿಲ್ಲದ ಕೆಲವು ವಾಸ್ತುದೇವತೆಗಳ ಹೆಸರನ್ನು ಮಯಮತವು ಹೇಳಿದೆ. ಉದಾ.ಗೆ, 'ಜೋಧನ' ಎಂಬ ವಾಸ್ತುದೇವತೆಯನ್ನು ಗ್ರಂಥಗಳು ಹೇಳಿಲ್ಲ. 'ಜೋಧನ' ಎಂದರೆ ಬುಧ ಗ್ರಹ ಎಂದೂ, ಇದರಿಂದಾಗಿ ಅದು 'ದೌವಾರಿಕಾ' / 'ಸುಗ್ರೀವ' 'ಪದ' ಎನಿಸಿಕೊಳ್ಳುತ್ತದೆ ಎಂದೂ ಹೇಳಲಾಗಿದೆ (ಮಯ–ಪು. ೩೯೯, ಅಡಿಟಿಪ್ಪಣಿ, ೨೨). ಅಂತೇ, 'ಗೃಹಕ್ಷತ' ಮತ್ತು 'ಯಕ್ಷ'ರ ಚೌಕಗಳನ್ನು ವಾಸ್ತುದೇವತೆಗಳ ಪಟ್ಟಿಯಲ್ಲಿ ಮಯಮತವು ಹೇಳಿಲ್ಲ. ಮಾನಸಾರವು, ಯಮ ಮತ್ತು ವಿತಥ ಎಂಬ ವಾಸ್ತುದೇವತೆಗಳ ಸ್ಥಾನ/ಚೌಕದ ಮಧ್ಯೆ 'ಗೃಹಕ್ಷತ' ದೇವತೆಯ ಸ್ಥಾನವನ್ನು ಹೇಳಿದೆ; ಅದೇ, ಮಯಮತವು ಈ 'ಪದ' / ಸ್ಥಾನವನ್ನು 'ರಾಕ್ಷಸ' ಎಂದು ಗುರುತಿಸಿದೆ. ಅಂತೇ 'ಯಕ್ಷ' 'ಪದ'ವನ್ನು ಶೋಷ ಮತ್ತು ರೋಗದ ಮಧ್ಯೆ ಇರುವುದೆಂದು ಬೃಹತ್ಸಂಹಿತೆಯು ಗುರುತಿಸಿದೆ.

೪೮. **ಅಜಿತಾ** – ೩೯.೩೪, **ಕಾರಣಾ** –I, ೬೦.೩೨ಎ, ೩೫ಎ.

೪೯. ಗ್ರಂಥಗಳಲ್ಲಿ ಪರಿವಾರ ಬಲಿಯ ಬಗ್ಗೆಯೂ ವಿವರವಿದೆ : **ಅಜಿತಾ** – ೩೯.೩೬ ಬಿ–೪೦, **ಕಾರಣಾ**–I, ೬೬.೭೮–೧೨೩.

೫೦. T.V. Mahalingam, P.cit., p-61. ಆದರೂ ಅದರಲ್ಲೇ ಒಂದೆಡೆ (p. 63) ಅವರು, ಕ್ರಿ.ಶ. ೮ನೇ ಶತಮಾನದ ಕಂಚಿಯ ಕೈಲಾಸನಾಥ ದೇವಾಲಯವನ್ನು ದಕ್ಷಿಣ ಭಾರತದಲ್ಲಿ ಪರಿವಾರ ದೇವಾಲಯಗಳಿರುವ ಮೊದಲ ದೇವಾಲಯ ಎಂದು ಹೇಳಿದ್ದಾರೆ. ಆದರೆ, ಅವರೇ ಸೂಚಿಸಿರುವಂತೆ, ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯವು ಇದಕ್ಕೂ ಪ್ರಾಚೀನವಾದ್ದರಿಂದ, ಇದನ್ನೇ ಇಂತಹ ಮೊದಲ ದೇವಾಲಯ ಎಂದು ಗುರುತಿಸಬೇಕಾಗುತ್ತದೆ.

೫೧. Encyclopaedia of Indian Temple Architecture, Vol. I, pt. II, p.80.

೫೨. ಎಕ. IV (ಪ), ಚಾನ. ೫೨, ಚಾಮರಾಜನಗರ, ಕ್ರಿ.ಶ. ೧೯ನೇ ಶತಮಾನ.

* * *


೧. ಬ್ರೂನೋ ಡಗೆನ್ಸ್ (ಸಂ., ಅನು) **ಮಯಮತಂ** – ನವದೆಹಲಿ, ೧೯೯೪.

೨. ಪಿ.ಕೆ. ಆಚಾರ್ಯ (ಸಂ, ಅನು) – **ಮಾನಸಾರ** – ಸಂ. III, IV, ನವದೆಹಲಿ, ೧೯೭೯, ೧೯೮೦.

೩. ಎನ್.ಆರ್. ಭಟ್ – (ಸಂ), ಅಜಿತಾಗಮ, ಪಾಂಡಿಚೇರಿ – ೧೯೬೪.

೪. ಸಿ. ಸ್ವಾಮಿನಾಥ ಶಿವಾಚಾರ್ಯ – (ಸಂ), ಕಾಮಿಕಾಗಮ (ಪೂರ್ವ ಭಾಗ), ಮದ್ರಾಸು, ೧೯೭೫.

೫. ಡಿ. ಕೃಷ್ಣರಾಯ ಮತ್ತು ಗಣೇಶ ಆಪ್ಟೆ (ಸಂ) ಕಾಶ್ಯಪಶಿಲ್ಪ ೧೯೨೬.

೬ ಡಾ. ಎಂ.ಜಿ. ನಾಗರಾಜ ಮತ್ತು ಡಾ. ಪಿ.ವಿ. ಕೃಷ್ಣಮೂರ್ತಿ., (ಸಂ.) **ಇತಿಹಾಸ ದರ್ಶನ**, ಸಂ. ೨೨, ಬೆಂಗಳೂರು ೨೦೦೭.

೮. T.V. Mahalingam - *Studies in the South Indian Temple Complex*, Dharwar 1970.

೯. S.K. Ramchandra Rao - *Vastu Silpa Kosha* - Bangalore, 2001.

೧೦. M.A. Dhaky and M.W. Meister (Ed) - *Encyclopaedia of Indian Temple Architecture*, Vol. I, pt. II, Delhi.

ಆದಪ್ಪ ಪಾಸೋಡಿ*

# ಇಂಗಳೇಶ್ವರದ ಪ್ರಾಚೀನ ದೇವಾಲಯಗಳು

ಬಸವನ ಬಾಗೇವಾಡಿಯಿಂದ ಈಶಾನ್ಯ ದಿಕ್ಕಿಗೆ ಸುಮಾರು ೧೦ ಕಿ.ಮೀ. ಅಂತರದಲ್ಲಿರುವ ಗ್ರಾಮ ಇಂಗಳೇಶ್ವರ ; ವೀರಶೈವ ಧರ್ಮ ಸುಧಾರಕ ಅದಕ್ಕೂ ಮಿಗಿಲಾಗಿ ಸಮಾಜ ಸುಧಾರಕ ಬಸವೇಶ್ವರರಿಂದ ಇವೆರಡೂ ಸ್ಥಳಗಳು ಸುಪ್ರಸಿದ್ಧ. ರಾಷ್ಟ್ರಕೂಟರು, ಕಲ್ಯಾಣದ ಚಾಲುಕ್ಯರು, ಕಲಚೂರಿಗಳು ಮತ್ತು ಯಾದವರ ಕಾಲದಲ್ಲಿ ಈ ಇಂಗಳೇಶ್ವರ ಬಾಗೇವಾಡಿ ಪ್ರದೇಶವು 'ತರ್ದವಾಡಿ ಸಾಸಿರ'ದ ಮುಂಬಾಡ ಕಂಪಣಕ್ಕೊಳಪಟ್ಟಿತು.[೧] ೧೯೯೩ರಲ್ಲಿ ಹಂಪಿ ಕನ್ನಡ ವಿಶ್ವವಿದ್ಯಾಲಯದ ಸಂಶೋಧಕ ಸಹಾಯಕರಾದ ಶ್ರೀ ವಾಸುದೇವ ಬಡಿಗೇರ ಅವರು ಇಂಗಳೇಶ್ವರದಲ್ಲಿ ಒಂದು ಪ್ರಾಗೈತಿಹಾಸಿಕ ಕಾಲದ ನೆಲೆಯನ್ನು ಶೋಧಿಸಿದ್ದಾರೆ. ಅದು ಮಧ್ಯ ಮತ್ತು ಅಂತ್ಯ ಹಳೆಯ ಶಿಲಾಯುಗದ ನೆಲೆಯೆಂದು ಡಾ. ಅ. ಸುಂದರ ಅಭಿಪ್ರಾಪಟ್ಟಿದ್ದಾರೆ.[೨]

ಡೋಣಿ ನದಿ ದಂಡೆಯ ಮೇಲಿರುವ ಡೋಣೂರು ಸೂಕ್ಷ್ಮ ಶಿಲಾಯುಗದ ಬೆಲೆಯಾದರೆ; ಕೋಲ್ಹಾರ, ಚಿಮ್ಮಲಗಿ, ವಡವಡಗಿ ಮತ್ತು ಹೆಬ್ಬಾಳ ಇವು ಇತಿಹಾಸ ಆರಂಭ ಕಾಲದ ನೆಲೆಗಳಾಗಿವೆ. ಆದರೆ ಇಂಗಳೇಶ್ವರ ಇವೆರಡೂ ಕಾಲಗಳಿಗೆ ಸಂಬಂಧಿಸಿದ ಮಹತ್ವದ ನೆಲೆಯಾಗಿದೆ.[೩] ಇಲ್ಲಿ ಜನರು ತಮ್ಮ ದಿನನಿತ್ಯದ ಕೆಲಸಗಳಿಗೆ ಬೇಕಾಗುವ ಕಲ್ಲಿನ ಉಪಕರಣಗಳನ್ನು ತಯಾರಿಸಿಕೊಂಡಂತೆ ಕಾಣುತ್ತದೆ. ಈ ಉಪಕರಣಗಳಿಗಾಗಿ ಬಳಸಿದ ಉತ್ತಮ ಚರ್ಟ್ ಕಲ್ಲೂ ಕೂಡ ಈ ನೆಲೆಯ ಸಮೀಪದಲ್ಲಿ ಸಿಗುತ್ತದೆ. ಉಪಕರಣಗಳನ್ನು ಮಾಡುವಾಗ ಎಬ್ಬಿಸಿದ ಕಲ್ಲು ಚಕ್ಕೆಗಳು, ಅಪೂರ್ಣ ಉಪಕರಣಗಳನ್ನು ಮತ್ತು ಕೆಲವು ಪೂರ್ಣ ಉಪಕರಣಗಳು ಸಿಕ್ಕಿರುವುದರಿಂದ ಇದೊಂದು ಉಪಕರಣಗಳ ಕೈಗಾರಿಕಾ ನೆಲೆಯಾಗಿತ್ತೆಂದು ಹೇಳಬಹುದು.[೪] ಇಂಗಳೇಶ್ವರದಿಂದ ಅರ್ಧ ಕಿ.ಮೀ. ದೂರದಲ್ಲಿರುವ 'ಟಿಂಗಳೇಶ್ವರ' ಎಂಬುದು ಪ್ರಾಚೀನ ನೆಲೆಯಾದರೆ, ಅಲ್ಲೇ ಹತ್ತಿರದ ಗುಡ್ಡದ ಕಪ್ಪಲಿನಲ್ಲಿ ಈ ಪ್ರಾಗೈತಿಹಾಸ ಕಾಲದ ನೆಲೆಯಿದೆ.

ವಿಭಿನ್ನ ಧರ್ಮಗಳಿಗೆ ಸೇರಿದ ಒಟ್ಟು ಸುಮಾರು ಎಂಟು ದೇವಾಲಯಗಳು ಇಲ್ಲಿದ್ದು, ರತಿನಾಥ-ಮಲ್ಲಿನಾಥ ಬಸದಿ, ಗೋಪಾಳದೇವ, ತ್ರಿಕೂಟದ ನೀಲಕಂಠೇಶ್ವರ ದೇವಾಲಯಗಳು ಹಾಳಾಗಿವೆ. ನಾರಾಯಣ, ಕಲ್ಮೇಶ್ವರ, ಶೋಭನದೇವ ಹಾಗೂ ಸೋಮೇಶರ್ವರ ದೇವಾಲಯಗಳು ಇನ್ನೂ ಉತ್ತಮ ಸ್ಥಿತಿಯಲ್ಲಿರುತ್ತವೆ.

**ಸೋಮೇಶ್ವರ ದೇವಾಲಯ** : ಪಶ್ಚಿಮಾಭಿಮುಖವಾಗಿರುವ ಸೋಮೇಶ್ವರ ದೇವಾಲಯವು ಇಂಗಳೇಶ್ವರ ಗ್ರಾಮದ (ಮಧ್ಯಭಾಗ) ಡೋಣೂರ ಅವರ ಓಣಿಯಲ್ಲಿದೆ. ಸ್ಥಳೀಯವಾಗಿ 'ದೇಗುಲ ಗುಡಿ' ಎಂದೇ ಕರೆಯಲ್ಪಡುವ ಈ ದೇವಾಲಯವು ದೊಡ್ಡ ದೊಡ್ಡ ಕಟೆದ ಕಲ್ಲುಗಳಿಂದ ನಿರ್ಮಿತವಾಗಿದೆ. ಇದರ ಮೇಲ್ಛಾವಣಿಗೂ ಕಲ್ಲಿನ ಹಲಗೆಗಳನ್ನು ಜೋಡಿಸಲಾಗಿದೆ. ಛಾವಣಿಗಳ ಸಂದುಗಳನ್ನು ಗಚ್ಚಿನಿಂದ ತುಂಬಿದ್ದು, ಇತ್ತೀಚೆಗಷ್ಟೆ ಅದು ಒಡೆದು ಹಾಳಾಗಿದ್ದರಿಂದ ಅದರ ಮೇಲೆ ಮಣ್ಣು ಹರವಲಾಗಿದೆ. ದೇವಾಲಯದ ಎಲ್ಲ ಭಾಗಗಳೂ ಶಿಥಿಲಾವಸ್ಥೆಯಲ್ಲಿದ್ದು ಗರ್ಭಗೃಹದ ಹೊರಗೋಡೆಯನ್ನು ಜೀರ್ಣೋದ್ಧಾರ ಮಾಡಲಾಗಿದೆ.

ಆಂಧ್ರ ಪ್ರದೇಶ ರಾಜ್ಯದ ರಾಜಧಾನಿ ಹೈದ್ರಾಬಾದ ಹತ್ತಿರದ ಕೊಲ್ಲಿಪಾಕಿ ಸೋಮನಾಥನೇ ಇಲ್ಲಿ ಸೋಮೇಶ್ವರನಾಗಿ ಉದ್ಭವಿಸಿದನೆಂದು ಕಥೆಯಿದೆ. ಕಕ್ಷಾಸನಗಳುಳ್ಳ ಮುಖಮಂಟಪದ ಬಲಭಾಗದಲ್ಲಿ ೧.೬೫ ಮೀಟರ್ ಉದ್ದ ಹಾಗೂ ೧.೧೧ ಮೀಟರ್ ಅಗಲದ ಒಂದು ಶಿಲಾಶಾಸನವಿದೆ.

ಈ ದೇವಾಲಯದಲ್ಲಿ ಮೂರು ಪ್ರವೇಶ ದ್ವಾರಗಳುಳ್ಳ ಮುಖಮಂಟಪ, ವಿಶಾಲವಾದ ಸಭಾಮಂಟಪ, ಮೂರು ಗರ್ಭಗೃಹಗಳು ಹಾಗೂ ಅವುಗಳ ಮುಂದೆ ಅಂತರಾಳ ಭಾಗಗಳಿರುತ್ತವೆ.

**ಮುಖಮಂಟಪ** : ೧೬ ಪೂರ್ಣ ಕಂಬಗಳು ಹಾಗೂ ೨ ಅರ್ಧಕಂಬಗಳಿಂದಾದ ಮುಖಮಂಟಪವು ಹೆಚ್ಚು ಕಡಿಮೆ

* ಶಿಕ್ಷಣ ಸಂಯೋಜಕ, ಕ್ಷೇತ್ರ ಶಿಕ್ಷಣಾಧಿಕಾರಿಗಳ ಕಛೇರಿ, ಬೆಂಗಳೂರು ದಕ್ಷಿಣ ವಲಯ-೪, ಕೃಷ್ಣರಾಜಪುರ, ಬೆಂಗಳೂರು



ಸಭಾಮಂಟಪದಷ್ಟೆ ಇದೆ. ಮುಖಮಂಟಪದ ಬಲಬದಿಗೆ ಶಾಸನಕಲ್ಲು ನಿಲ್ಲಿಸಿರುವ ಸ್ಥಳವನ್ನು ಹೊರತುಪಡಿಸಿ ಸುತ್ತಲೂ ಕಕ್ಷಾಸನಗಳಿವೆ. ಕಕ್ಷಾಸನಗಳ ಅಧಿಷ್ಠಾನದಲ್ಲಿ ಉಪಾನ, ಜಗತಿಗಳನ್ನು ತೋರಿಸಲಾಗಿದೆ. ಮುಖಮಂಟಪದ ಮಧ್ಯಭಾಗವು ನಾಲ್ಕು ಕಂಬಗಳಿಂದ ಆವೃತವಾಗಿದ್ದು ೧೫ ಸೆಂ.ಮಿ.ಗಳಷ್ಟು ಎತ್ತರಿಸಲಾಗಿದೆ. ನೆಲವು ಕರಿಕಲ್ಲುಗಳಿಂದ ಹಾಸಲ್ಪಟ್ಟಿದೆ. ಮುಖಮಂಟಪದ ಮಧ್ಯಭಾಗದಲ್ಲಿರುವ ಕಂಬಗಳು ೨.೦೧ ಮೀಟರ್ ಸುತ್ತಳತೆಯ ಪೀಠದ ಮೇಲೆ ನಿಂತಿವೆ. ಕಂಬಗಳ ಕಾಂಡ ಭಾಗವು ೧.೫೦ ಮೀಟರ್ ಸುತ್ತಳತೆಯನ್ನು ಹೊಂದಿವೆ.

ಕಕ್ಷಾಸನದಲ್ಲಿ ಮರೆಯಾಗಿರುವ ಕಂಬಗಳು ಹಾಗೂ ಅವುಗಳ ಪೀಠಗಳು ಯಾವುದೇ ಅಲಂಕಾರಗಳನ್ನು ಹೊಂದಿರುವುದಿಲ್ಲ. ಛತ್ತಿನಲ್ಲಿ ಒಟ್ಟು ಹನ್ನೆರಡು ಅಂಕಣಗಳು ಇದ್ದು, ಮಧ್ಯಭಾಗದ ಅಂಕಣದ ಛತ್ತಿನಲ್ಲಿ ಅಷ್ಟದಿಕ್ಪಾಲಕರನ್ನು ಕಂಡರಿಸಲಾಗಿದೆ. ಕೇಂದ್ರ ಭಾಗದಲ್ಲಿ ೫ ಸುತ್ತುಗೆರೆಗಳನ್ನು ಹೊಂದಿದ ಪದಕವಿದೆ. ಛತ್ತಿನ ಎಲ್ಲ ೧೨ ಅಂಕಣಗಳೂ ಕತ್ತರಿಗಲ್ಲುಗಳಿಂದ ಹೊದಿಸಲ್ಪಟ್ಟಿದೆ. ಮುಖಮಂಟಪವು ೯.೦೫ ಮೀಟರ್ ಉದ್ದ ಹಾಗೂ ೭.೭೫ ಮೀಟರ್ ಅಗಲ ವಿಸ್ತೀರ್ಣವನ್ನು ಹೊಂದಿದೆ. ಇದರ ಅಧಿಷ್ಠಾನವು ೮೨ ಸೆಂ.ಮೀ. ಎತ್ತರವಿದ್ದು, ಅಕ್ಕಪಕ್ಕದ ಕಕ್ಷಾಸನದ ಕಟ್ಟೆಗಳು ನೆಲದಿಂದ ೧.೬೦ ಮೀ. ಎತ್ತದಲ್ಲಿವೆ.

**ಸಭಾಮಂಟಪ :** ಮುಖಮಂಟಪವನ್ನು ದಾಟಿ ಸಭಾಮಂಟಪವನ್ನು ಪ್ರವೇಶಿಸುವುದು ದ್ವಾರದ ಮೂಲಕ. ಈ ದ್ವಾರಬಂಧಕ್ಕೆ ಐದು ದ್ವಾರಶಾಖೆಗಳಿರುತ್ತವೆ. ಇಕ್ಕೆಲಗಳ ನಾಲ್ಕನೆಯ ದ್ವಾರಶಾಖೆಗಳಲ್ಲಿ ಕಿಂಪುರುಷರನ್ನು ಕಂಡರಿಸಲಾಗಿದೆ. ಈ ದ್ವಾರದ ಲಲಾಟ ಮತ್ತು ಉತ್ತರಾಂಗದಲ್ಲಿ ಯಾವ ದೇವತೆಗಳನ್ನೂ ತೋರಿಸಿಲ್ಲ.



೧೨ ಪೂರ್ಣಕಂಬಗಳು ಹಾಗೂ ೧೦ ಮೂಲೆ ಕಂಬಗಳನ್ನೊಳಗೊಂಡ ಸಭಾಮಂಟಪವು ೫.೭೦ ಮೀಟರ್ ಚಚ್ಚೌಕದ ವಿಸ್ತೀರ್ಣ ಹೊಂದಿದೆ. ಮಧ್ಯಭಾಗದ ನೆಲವು ಇಲ್ಲಿಯೂ ಎತ್ತರಿಸಲ್ಪಟ್ಟಿದ್ದು ನೆಲಕ್ಕೆ ಕರಿಕಲ್ಲುಗಳನ್ನು ಹಾಸಲಾಗಿದೆ. ಮುಖಮಂಟಪದ ಕಂಬಗಳಿಗಿಂತ ಈ ಸಭಾಮಂಟಪದಲ್ಲಿರುವ ಕಂಬಗಳು ಸ್ವಲ್ಪ ಭಿನ್ನವಾಗಿವೆ. ಮುಖಮಂಟಪದ ಮಧ್ಯಭಾಗದ ನಾಲ್ಕು ಕಂಬಗಳಿಗೆ ರುದ್ರಾಕ್ಷಿಯಾಕಾರದ ಎರಡು ಸುತ್ತುಗಳ ಅಲಂಕಾರವೂ, ಇದರ ನಡುವೆ ಅಷ್ಟಭುಜಾಕೃತಿಯ ಕೆತ್ತನೆ ಇದ್ದರೆ, ಇಲ್ಲಿ ಕಾಂಡದ ಕೆಳಭಾಗ ಚೌಕನಾಗಿದೆ. ನಡುವೆ ಎರಡು ಸ್ತರಗಳಲ್ಲಿ ಚಿಕ್ಕ ಗೂಡುಗಳನ್ನು ಕೊರೆಯಲಾಗಿದೆ. ಅದರ ಮೇಲೆ, ಮತ್ತೆ ಕಾಂಡದ ಚೌಕನಾದ ಭಾಗ, ಕಲಶ, ತಾಡಿ, ಕುಂಭ ಇದಜಿ ಹಾಗೂ ಫಲಕಗಳಿರುತ್ತವೆ.

ಸಭಾಮಂಟಪದ ನಾಲ್ಕು ಕಂಬಗಳ ಮೇಲೆ ತರಂಗ ಬೋದಿಗೆಗಳಿದ್ದು ಉಳಿದ ಎಲ್ಲ ಕಂಬಗಳಿಗೆ ಸಾದಾ ಬೋದಿಗೆಗಳಿರುತ್ತವೆ. ಛತ್ತು ಒಟ್ಟು ಒಂಭತ್ತು ಅಂಕಣಗಳಿಂದಾಗಿದ್ದು ಪ್ರತಿ ಅಂಕಣವೂ ಕತ್ತರಿಗಲ್ಲುಗಳನ್ನು ಒಳಗೊಂಡಿದೆ. ಅಂಕಣಗಳಿಗೊಂದರಂತೆ ಛತ್ತಿನಲ್ಲಿ ಮಧ್ಯ ಪದಕಗಳಿವೆ. ಕೇಂದ್ರ ಛತ್ತು ವಿಶೇಷ ಅಲಂಕಾರದ ಅಂತರಾಳ ಕಮಲವನ್ನು ಹೊಂದಿದೆ. ಸಭಾಮಂಟಪದಲ್ಲಿ ಒಟ್ಟು ೬ ಖಾಲಿ

ದೇವಕೋಷ್ಠಕಗಳಿವೆ. ಅವುಗಳ ಎಡ-ಬಲಕ್ಕೆ ಕಂಬಗಳ ಮಾದರಿಗಳನ್ನು ತೋರಿಸಲಾಗಿದೆ.

**ಗರ್ಭಗೃಹಗಳು :** ಈ ದೇವಾಲಯದ ತ್ರಿಕೂಟ ಮಾದರಿಯಾಗಿದ್ದು, ಮೂರು ಗರ್ಭಗೃಹಗಳ ದ್ವಾರಗಳ ಮುಂದೆ ಸಭಾಮಂಟಪದ ಕೊನೆಯ ಅಂಚಿನಿಂದ ೧.೯೫ ಮೀಟರ್ ಉದ್ದದ ಮೂರು ಅಂತರಾಳಗಳಿವೆ. ಇದು ಸಭಾಮಂಟಪದ ಕಾರ್ಯಕ್ರಮಗಳಿಗೆ ಗರ್ಭಗೃಹಗಳ ವಿಧಿಗಳಿಗೆ ಅನುಕೂಲಿಸುವಂಥ ರಚನೆ. ಈ ಮೂರೂ ಗರ್ಭಗೃಹಗಳ ಲಲಾಟದಲ್ಲಿಯ ಗಜಲಕ್ಷ್ಮಿಯ ಇಕ್ಕೆಲಗಳಲ್ಲಿ ಎರಡು ಆನೆಗಳು ತಮ್ಮ ಸೊಂಡಿಲನ್ನು ಎತ್ತಿ ಹಿಡಿದಿವೆ. ಗಜಲಕ್ಷ್ಮಿಯು ಕೈಗಳಲ್ಲಿ ಕಮಲಗಳನ್ನು ಹಿಡಿದ ಚಿತ್ರಣವಿದೆ. ಮೂರೂ ಗರ್ಭಗೃಹಗಳ ದ್ವಾರಶಾಖೆಗಳು ಸಾಮಾನ್ಯವಾಗಿ ಒಂದನ್ನೊಂದು ಹೋಲುವಂತಿದ್ದು ಎಡಬಲಗಳ ದ್ವಾರಗಳಿಗಿಂತ ಎದುರಿನ ಗರ್ಭಗೃಹದ ದ್ವಾರಶಾಖೆಗಳು ವಿಶೇಷ ಅಲಂಕಾರವನ್ನು ಹೊಂದಿವೆ. ಇಲ್ಲಿಯ ಕಲ್ಮೇಶ್ವರ ದೇವಾಲಯದ ಗರ್ಭಗೃಹದ ದ್ವಾರಶಾಖೆಯಲ್ಲಿದ್ದಂತೆ ಈ ದೇವಾಲಯದ ದ್ವಾರಶಾಖೆಗಳ ಅಡಿ ಭಾಗಗಳಲ್ಲಿಯೂ ದ್ವಾರಪಾಲಕರ ಶಿಲ್ಪಗಳನ್ನು ಕಂಡರಿಸಲಾಗಿದೆ.

ಪಶ್ಚಿಮ ದಿಕ್ಕಿಗೆ ಮುಖ ಮಾಡಿರುವ ಮುಖ್ಯ ಗರ್ಭಗೃಹದ ದ್ವಾರಶಾಖೆಯಡಿ ಇಕ್ಕೆಲಗಳಲ್ಲಿ ವೈಷ್ಣವ ದ್ವಾರಪಾಲಕರನ್ನು ಕಂಡರಿಸಿದ್ದು, ಅವರ ಕೈಯಲ್ಲಿ ಶಂಖ, ಚಕ್ರ ಮತ್ತು ಗದೆಗಳನ್ನು ತೋರಿಸಲಾಗಿದೆ. ದ್ವಾರಪಾಲಕರಿಗೆ ಕರ್ಣಕುಂಡಲ, ಕಂಠಹಾರ ಹಾಗೂ ಯಜ್ಞೋಪವೀತಗಳಿವೆ. ತಲೆಯ ಮೇಲೆ ಕರಂಡವನ್ನು ತೋರಿಸಲಾಗಿದೆ. ದ್ವಾರಪಾಲಕರ ಎಡಬಲಗಳಲ್ಲಿರುವ ಚಾಮರಧಾರಿಣಿಯರು ಸ್ತನಹಾರಗಳನ್ನು ಧರಿಸಿದ್ದು, ತಲೆಯ ಹಿಂದೆ ಪ್ರಭಾವಳಿಯಂತಹ ಅಲಂಕರಣ ತೋರಿಸಿದೆ. ಗರ್ಭಗೃಹದಲ್ಲಿ ಎತ್ತರವಾದ ಲಿಂಗವಿದ್ದು, ಛತ್ತಿನ ಕೇಂದ್ರದಲ್ಲಿ ಕತ್ತರಿಗಲ್ಲುಗಳು ಅಷ್ಟಭುಜಾಕೃತಿಯಲ್ಲಿವೆ. ಗರ್ಭಗೃಹವು ೨.೪೦ ಮೀಟರ್ ಚಚ್ಚೌಕದ ವಿಸ್ತೀರ್ಣವನ್ನೊಳಗೊಂಡಿದೆ.

ದಕ್ಷಿಣಕ್ಕೆ ಮುಖ ಮಾಡಿರುವ ಗರ್ಭಗೃಹದ ಇಕ್ಕೆಲಗಳ ದ್ವಾರಶಾಖೆಯಡಿ ಡಮರುಗಧಾರಿ ಶಿವದ್ವಾರಪಾಲಕರಿದ್ದು, ಅವರ ಪಕ್ಕ ಚಾಮರಧಾರಿಣಿಯರಿದ್ದಾರೆ. ಈ ಗರ್ಭಗೃಹದ ವಿಸ್ತೀರ್ಣವು ೨.೯೫ ಮೀಟರ್ ಇದ್ದು, ಲಿಂಗ ಮಾತ್ರ ಮುಖ್ಯ ಗರ್ಭಗೃಹದಲ್ಲಿರುವ ಲಿಂಗಕ್ಕಿಂತ ಚಿಕ್ಕದಾಗಿದೆ.

ಉತ್ತರ ದಿಕ್ಕಿಗೆ ಮುಖ ಮಾಡಿರುವ ಗರ್ಭಗೃಹದ ಇಕ್ಕೆಲಗಳ ದ್ವಾರಶಾಖೆಯಡಿ ಬಿಲ್ಲು ಮತ್ತು ಬಾಣಗಳನ್ನು ಹಿಡಿದಿರುವ ದೇವತೆಗಳ ಪಕ್ಕದಲ್ಲಿ ಇಬ್ಬಿಬ್ಬರು ಸ್ತ್ರೀಯರನ್ನು ಕಂಡರಿಸಲಾಗಿದೆ. ಇಲ್ಲಿಯ ವೈಶಿಷ್ಟ್ಯವೆಂದರೆ ಬಲದ್ವಾರ



ಶಾಖೆಯಡಿ ಬಿಲ್ಲು-ಬಾಣಗಳನ್ನು ಹಿಡಿದ ದೇವನನ್ನು ಮತ್ತು ಅವನಿಗೆ ಚಾಮರಧಾರಿಣಿಯರನ್ನು ತೋರಿಸಿದರೆ, ಎಡದ್ವಾರ ಶಾಖೆಯಡಿ ದೇವತೆಯು ಬಿಲ್ಲು-ಬಾಣಗಳನ್ನು ಹಿಡಿದಿದ್ದಾಳೆ. ಅವಳ ಅಕ್ಕಪಕ್ಕ ಚಾಮರಧಾರಿಣಿಯರಿದ್ದಾರೆ. ಹೀಗೆ ಬಾಗಿಲುವಾಡದಲ್ಲಿ ಉಷಾ ಮತ್ತು ಪ್ರತ್ಯುಷಾರನ್ನು ತೋರಿಸಿರುವ ಅಂಶ ಗಮನಾರ್ಹವಾಗಿದೆ. ರಾಷ್ಟ್ರಕೂಟರ ಕಾಲದಲಿ ಸಾಮಾನ್ಯವಾಗಿ ಬ್ರಹ್ಮ, ವಿಷ್ಣು, ಮಹೇಶ್ವರರ ತ್ರಿಕೂಟ ದೇವಾಲಯಗಳಿದ್ದವು. ಆದರೆ ಕಲ್ಯಾಣ ಚಾಲುಕ್ಯರ ಅವಧಿಯಿಂದ ಬ್ರಹ್ಮನ ಬದಲಾಗಿ ಸೂರ್ಯನನ್ನು ಆರಾಧಿಸುವ ಪರಂಪರೆ ಬೆಳೆದು ಸೂರ್ಯ, ವಿಷ್ಣು ಮತ್ತು ಶಿವನನ್ನು ಒಳಗೊಂಡ ೧೧ನೆಯ ಶತಮಾನದ ವಿಶಿಷ್ಟ ಮಾದರಿಯ ತ್ರೈಪುರುಷ ದೇವಾಲಯವಿದಾಗಿದೆ.

ಈ ಮೂರು ಗರ್ಭಗೃಹಗಳ ಲಲಾಟಪಟ್ಟಿಯ ಮೇಲ್ಗಡೆ ಅಂದರೆ ಉತ್ತರಾಂಗ ಭಾಗದಲ್ಲಿ ಕಪೋತದಂತಹ ಮುಂಚಾಚು ಇದ್ದು ಅದರ ಮೇಲೆ ದೇವಾಲಯದ ಶಿಖರ ಮಾದಿರಗಳನ್ನು ಕಂಡರಿಸಿದೆ. ಈ ಶಿಖರ ಮಾದರಿಗಳ ಇಕ್ಕೆಲಗಳಲಿ ಸಿಂಹಗಳನ್ನು ತೋರಿಸಲಾಗಿದೆ. ಸಿಂಹಗಳು ತಮ್ಮ ಮುಂದಿನ ಕಾಲುಗಳನ್ನು ಶಿಖರ ಮಾದರಿಗಳ ಮೇಲಿಟ್ಟು ಎದುರು ನೋಡುತ್ತಿವೆ. ಪ್ರತಿಯೊಂದು ಗರ್ಭಗೃಹದ ಉತ್ತರಾಂಗದಲ್ಲಿ ಐದೈದು ಶಿಖರ ಮಾದರಿಗಳಿರುತ್ತವೆ.

ಇಲಿಯ ಕಲ್ಮೇಶ್ವರ ದೇವಾಲಯದಂತೆ ಇದೂ ಕೂಡ ನಿರಂಧಾರ ಮಾದರಿಯಾಗಿದೆ.

**ಕಕ್ಷಾಸನಗಳು :** ಮುಖಮಂಟಪದ ಬಲಭಾಗದ ಕಕ್ಷಾಸನಗಳು ಬಿದ್ದುಹೋಗಿದ್ದು, ಅಧಿಷ್ಠಾನವು ಮಣ್ಣಿನಲ್ಲಿ ಹೂತುಹೋಗಿದೆ. ಎದುರಿನ ಹಾಗೂ ಎಡಭಾಗದ ಅಧಿಷ್ಠಾನದಲ್ಲಿ ಉಪಾನ, ಜಗತಿಗಳ ಭಾಗಗಳಿದ್ದು ಅದರ ಮೇಲೆ ಎರಡು ಸ್ತರಗಳ ಅತ್ಯುತ್ತಮ ಶಿಲ್ಪವಿನ್ಯಾಸದ ಚಿಕ್ಕ ಪ್ರಮಾಣದ ಶಿಲಾಬಾಲಿಕೆಯರನ್ನು ಕಂಡರಿಸಲಾಗಿದೆ. ಆದರೆ ಕಕ್ಷಾಸನದ ಬೆನ್ನು ಯಾವುದೇ ಅಲಂಕಾರಗಳನ್ನು ಒಳಗೊಂಡಿರುವುದಿಲ್ಲ. ಗರ್ಭಗೃಹಗಳ ಅಧಿಷ್ಠಾನವು ತ್ರಿರಥ ವಿನ್ಯಾಸವನನು ಹೊಂದಿದೆ. ಅದರ ಮೇಲಿನ ಸ್ತರದ ಗೋಡೆಯನ್ನು ಇತ್ತೀಚೆಗೆ ಕಟ್ಟಿದಂತಿದೆ.

ಅಧಿಷ್ಠಾನ ಹಾಗೂ ಕಕ್ಷಾಸನಗಳ ಮಧ್ಯದಲ್ಲಿರುವ ಎರಡು ಸ್ತರಗಳಲ್ಲಿ ಕಾಮಕೇಳಿಯಲ್ಲಿರುವ ಸ್ತ್ರೀ-ಪುರುಷರನ್ನು ತೋರಿಸಲಾಗಿದೆ. ಮುಖಮಂಟಪದ ಎಡಬಾಗದ ಹೊರಗೋಡೆಯಲ್ಲಿ ಒಬ್ಬ ಪುರುಷ ತನ್ನ ಗುಪ್ತಾಂಗವನ್ನು ಇಳಿಬಿಟ್ಟು ಎರಡು ಕೈಗಳನ್ನು ಮೊಣಕಾಲುಗಳ ಮೇಲೆ ಇಟ್ಟಿರುವುದಿದೆ. ಮತ್ತೊಬ್ಬ ಪುರುಷ ತನ್ನ ಎಡಗೈಯನ್ನು ತಲೆಯ ಮೇಲಿರಿಸಿ. ಬಲಗೈಯಲ್ಲಿ ಡಮರುಗಳನ್ನು ಹಿಡಿದು ಮುಂದೆ ಸಾಗುತ್ತಿದ್ದಾನೆ. ಡೋಲು ಬಡಿಯುವ ಪುರುಷನ ಶೈಲಿ ಬಹಳ ಸಹಜವಾಗಿದೆ. ಮುಂದಿನ ಭಾಗದಲ್ಲಿ ಒಬ್ಬ ಪುರುಷ ತನ್ನ ಬಲ ಮೊಣಕಾಲೂರಿ ಶಿಶ್ನವನ್ನು ಎಡಗೈಯಲ್ಲಿ ಹಿಡಿದು ಬಾಯಿಯಿಂದ ಚೀಪುತ್ತಿರುವ ದೃಶ್ಯ ಸ್ವಲ್ಪ ಅಸಹ್ಯವಾಗಲೂಬಹುದು. ಅಪಾರ ಕೇಶರಾಶಿಯನ್ನು ಹೊಂದಿದ ತುರುಬು ಕಟ್ಟಿದ ಸ್ತ್ರೀಯೊಬ್ಬಳು ಪುರುಷನ ಶಿಶ್ನವನ್ನು ತನ್ನ ಗುಪ್ತಾಂಗದಲ್ಲಿ ಹಾಕಿಕೊಳ್ಳುತ್ತಿರುವುದು. ಇನ್ನೊಬ್ಬ ಸ್ತ್ರೀ ತನ್ನ ಬಲಗೈಯನ್ನು ಗಲ್ಲಕ್ಕಿಟ್ಟುಕೊಂಡು ಎಡಗೈಯಿಂದ ಗುಪ್ತಾಂಗವನ್ನು ಮುಚ್ಚಿಕೊಂಡಿರುವುದು. ಸ್ತ್ರೀಯೊಬ್ಬಳು ತನ್ನೆರಡೂ ಕೈಗಳನ್ನು ಮಂಡೆಯ ಮೇಲೂರಿ ತುದಿಗಾಲಿನಲ್ಲಿ ಕುಳಿತಿರುವುದನ್ನು ನೋಡಿದರೆ ಪ್ರಸವ ವೇದನೆಯ ಸ್ತ್ರೀಯಾಗಿರಬಹುದೆಂದು ತೋರುತ್ತದೆ.

ಮುಖಮಂಟಪದ ಮುಂಭಾಗದ ಅಂದರೆ ಪಶ್ಚಿಮಕ್ಕಿರುವ ಪ್ರವೇಶ ದ್ವಾರದ ಬಲಗಡೆ ಮಗುವನ್ನು ಅಪ್ಪಿಕೊಂಡು ಹೋಗುತ್ತಿರುವ ಸ್ತ್ರೀ ಹಾಗೂ ತನ್ನ ಪುರುಷನ ಬರುವಿಗಾಗಿ ಕಾದು ಸುಸ್ತಾದ ದ್ವಿಭಂಗಿಯಲ್ಲಿ ನಿಂತಿರುವ ಸ್ತ್ರೀ ಮತ್ತು ಎಡಭಾಗದಲ್ಲಿ ತ್ರಿಭಂಗಿಯಲ್ಲಿ ದರ್ಪಣ ಸ್ತ್ರೀಯ ಶಿಲ್ಪಗಳನ್ನು ಬಹು ಸುಂದರವಾಗಿ ಕಂಡರಿಸಲಾಗಿದೆ.

ದೇವಾಲಯದ ಮಾಳಿಗೆಯನ್ನು ಹತ್ತಿ ಮೇಲಿನಿಂದ ವೀಕ್ಷಿಸಿದಾಗ ಅದರ ನೋಟ ಹೋಗೆ ಕಾಣುತ್ತದೆ.



ತ್ರಿಕೂಟ ದೇವಾಲಯವಾದ ಇದರ ಮೂರೂ ಗರ್ಭಗೃಹಗಳ ಮೇಲಿನ ಶಿಖರಗಳು ಬಿದ್ದುಹೋಗಿರುವಂತಿದೆ. ಬಾದಾಮಿಯ ಜಂಬುಲಿಂಗ ದೇವಾಲಯದಂತೆ ಇಲ್ಲಿಯೂ ಮುಖಮಂಟಪದಲ್ಲಿ ಕಕ್ಷಾಸನಗಳನ್ನು ಸಭಾಮಂಟಪದಲ್ಲಿ ಮೂರು ಗರ್ಭಗೃಹಗಳ ದ್ವಾರಗಳಿವೆ.

ಮುಖಮಂಟಪದ ಹೊರಗೋಡೆಯಲ್ಲಿರುವ ಶಿಲಾಬಾಲಿಕೆಯರು ಮತ್ತು ಕಾಮಕೇಳಿಯಲ್ಲಿರುವ ಸ್ತ್ರೀ ಪುರುಷರ ಚಿಕಣಿ ಶಿಲ್ಪಗಳು ಬೇಲೂರಿನ ಶಿಲಾಬಾಲಿಕೆಯರ ಹಾಗೂ ಹಂಪೆಯ ವಿಜಯವಿಠ್ಠಲನ ಗುಡಿಯಲ್ಲಿರುವ ಪತಿಯ ಆಗಮನಕ್ಕಾಗಿ ಕಾಯುತ್ತಿರುವ ಸ್ತ್ರೀ ವಿಗ್ರಹಗಳನ್ನು ನೆನಪಿಗೆ ತರುತ್ತವೆ.

ಈ ದೇವಾಲಯಕ್ಕೆ ಜಾಲಂಧ್ರಗಳಿಲ್ಲದ ಪ್ರಯುಕ್ತ ವಾತಾಯುನ ವ್ಯವಸ್ಥೆ ಅಷ್ಟು ಚೆನ್ನಾಗಿಲ್ಲವೆಂದೇ ಹೇಳಬೇಕಾಗುತ್ತದೆ.

**ನಾರಾಯಣನ ಗುಡಿ :** ಇಂಗಳೇಶ್ವರ ಗ್ರಾಮದಲ್ಲಿರುವ ಬಸವಣ್ಣನವರ ಇತ್ತೀಚಿನ ಪುತ್ಥಳಿಯ ಹತ್ತಿರದಲ್ಲಿ ಮೇಲ್ನೋಟಕ್ಕೆ ವಾಸದ ಮನೆಯಂತೆ ಕಾಣುವ ಪ್ರವೇಶ ದ್ವಾರವನ್ನು ಒಳಹೊಕ್ಕರೆ ತ್ರಿಕೂಟ ಮಾದರಿಯ ನಾರಾಯಣನ ಗುಡಿಯಲ್ಲಿ ವಿಶಿಷ್ಟ ರಾಚನಿಕ ವಿನ್ಯಾಸವನ್ನು ಕಾಣುತ್ತೇವೆ. ದೇವಾಲಯದ ಕಂಬ, ತೊಲೆ, ದ್ವಾರಶಾಖೆ ಹಾಗೂ ಛತ್ತಿನ ಭಾಗಗಳು ಕರಿಕಲ್ಲಿನಿಂದಾಗಿದ್ದರೆ, ಹೊರಗೋಡೆಯನ್ನು ಮಾತ್ರ ೨೩ ಸೆಂ.ಮಿ. ಉದ್ದ, ೨೧ ಸೆಂ.ಮೀ. ಅಗಲ ಹಾಗೂ ೭ ಸೆಂ.ಮೀ. ಎತ್ತರದ ಇಟ್ಟಿಗೆಗಳಿಂದ ಕಟ್ಟಿ, ಅದರ ಮೇಲೆ ಗಚ್ಚು ಸಾರಿಸಿ ಸಮತಟ್ಟಾಗಿ ಮಾಡಲಾಗಿದೆ. ಸದ್ಯ ಅಲ್ಲಲ್ಲಿ ಗಚ್ಚು ಉದುರಿ ಬಿದ್ದು ಇಟ್ಟಿಗೆಗಳು ಕಾನಿಸುತ್ತಿವೆ.

ದೇವಾಲಯಕ್ಕೆ ದಾನ ಬಿಟ್ಟ ೧೦ ಎಕರೆ ಹೊಲದಿಂದ ಬರುವ ಆದಾಯದಲ್ಲಿ ಸದ್ಯದ ಖರ್ಚು-ವೆಚ್ಚಗಳು ನಿಭಾಯಿಸಲ್ಪಡುತ್ತವೆ. ಮುಖಮಂಟಪದಿಂದ ಸಭಾಮಂಟಪಕ್ಕಿರುವ ಪ್ರವೇಶದ್ವಾರದ ಹೊರಗೋಡೆಯಲ್ಲಿರುವ ಶಾಸನದಲ್ಲಿ

'ವಡ್ಡರಖೇರಿ' 'ತ್ರಿಕೂಟದ ಶ್ರೀ ನೀಲಕಂಠೇಶ್ವರ' ಎಂಬ ಕನ್ನಡ ಪದಗಳಿವೆ. ಸಭಾಮಂಟಪದ ಬಲಭಾಗದ ಹೊರಗೋಡೆಯಲ್ಲಿ ೪೮ ಸಾಲುಗಳು ಮತ್ತೊಂದು ಶಾಸನವಿದೆ. ಅದರಲ್ಲೂ 'ಚಕನಬಾವಿಯ ದಾರಿಯು' ಎಂಬ ಉಲ್ಲೇಖವಿದೆ.

ಈ ದೇವಾಲಯದ ಸುತ್ತಲೂ ಪ್ರಾಕಾರದ ಬಯಲು ಮುಖಮಂಟಪ. ಸಭಾಮಂಟಪ, ಅಂತರಾಳ ಹಾಗೂ ಮೂರು ಗರ್ಭಗೃಹಗಳು ಇದ್ದು ಅವುಗಳಿಗೆ ಶಿಖರಗಳಿರುವುದಿಲ್ಲ.

**ಮುಖಮಂಟಪ :** ೨.೪೦ ಮೀ. ಅಳತೆಯ ಚಚ್ಚೌಕದ ವಿಸ್ತೀರ್ಣವನ್ನು ಹೊಂದಿದ ಮುಖಮಂಟಪವು ನಾಲ್ಕು ಪೂರ್ಣ ಕಂಬಗಳ ಮೇಲೆ ನಿಂತಿದ್ದು, ಕಂಬಗಳ ಕೆಳಗಿರುವ ಪೀಠಗಳು ಒರಟಾಗಿವೆ. ಕಂಬಗಳ ಅಡಿಭಾಗವು ಚೌಕಾಗಿದ್ದು, ನಡುವಿನ ಭಾಗದಲಿ ಅಷ್ಟಭುಜಾಕೃತಿ ಹಾಗೂ ವೃತ್ತಾಕಾರದ ಅಲಂಕಾರಗಳನ್ನು ಮಾಡಲಾಗಿದೆ. ಮೇಲೆ ಮತ್ತೆ ಚೌಕಾಕಾರ ನಂತರ ಅದೇ ವೃತ್ತಾಕಾರದ ಪುನರಾವರ್ತನೆಯಾಗಿದೆ. ಕಂಬಗಳ ಮೇಲೆ ತರಂಗ ಬೋದಿಗೆಗಳಿದ್ದು, ತೊಲೆಗಳಿಗೆ ಯಾವುದೇ ಅಲಂಕಾರಗಳಿರುವುದಿಲ್ಲ. ಮಳೆಯ ನೀರು ಮುಖಮಂಟಪಕ್ಕೆ ತಾಕದಂತೆ ಕಲ್ಲಿನ ಛಜ್ಜಾಭಾಗವನ್ನು ಇಳಿಜಾರಾಗಿ ಮಾಡಲಾಗಿದೆ. ಛತ್ತು ಕತ್ತರಿಗಲ್ಲುಗಳಿಂದ ಹೊದಿಸಲ್ಪಟ್ಟಿದ್ದು ಅಷ್ಟಭುಜಾಕೃತಿಯನ್ನುಂಟುಮಾಡಿದೆ. ಅರಳಿದ ಅರ್ಧ ಕಮಲದ ಮೂರು ಪಕಳೆಗಳನ್ನು ಛತ್ತಿನ ಎಂಟು ಕಡೆಗಳಲ್ಲಿ ಕಂಡರಿಸಲಾಗಿದೆ.

ಮುಖಮಂಟಪದಲ್ಲಿ ೧ ಮೀಟರ್ ಎತ್ತರ, ೭೮ ಸೆಂ.ಮೀ. ಅಗಲ ಹಾಗೂ ೨.೮೫ ಮೀ. ಉದ್ದದ ಕಕ್ಷಾಸನಗಳಿವೆ. ಮುಖಮಂಟಪದ ಸಭಾಮಂಟಪಕ್ಕಿರುವ ಪ್ರವೇಶ ದ್ವಾರದಲ್ಲಿ ಎಡ ಬಲಕ್ಕೆ ನಾಲ್ಕು ಸಾದಾ ದ್ವಾರಶಾಖೆಗಳಿದ್ದು, ಹಣೆಪಟ್ಟಿಯ ೩ ದ್ವಾರಶಾಖೆಗಳಲ್ಲಿ ರತ್ನಶಾಖೆ ಹಾಗೂ ಬಳ್ಳಿಯ ವಿನ್ಯಾಶವನ್ನು ಕಂಡರಿಸಿದೆ. ಲಲಾಟದಲ್ಲಿ ಮಂಡೆಯೂರಿ ಕುಳಿತ ಗರುಡನಿದ್ದು ಉತ್ತರಾಂಗದಲ್ಲಿ ಐದು ಶಿಖರ ಮಾದರಿಗಳು, ಇಕ್ಕೆಲಗಳಲ್ಲಿ ಎರಡು ಕಾಲುಗಳನ್ನು ಶಿಖರ ಮಾದರಿಗಳ ಮೇಲಿಟ್ಟ ಸಿಂಹಗಳನ್ನು ಕಂಡರಿಸಲಾಗಿದೆ. ಲಲಾಟಪಟ್ಟಿಯ ಮೇಲ್ಭಾಗದಲ್ಲಿ ಕಪೋತದಂತಹ ಮುಂಚಾಚಿದ ಕಲ್ಲಿನಲ್ಲಿ ಆಕಳ ಮೊಲೆಗಳಂತೆ ಗೊಂಚಲುಗಳನ್ನು ಶಿಲ್ಪಿಸಲಾಗಿದೆ. ಸಭಾಮಂಟಪಕ್ಕೆ ಇರುವ ಈ ಪ್ರದೇಶ ದ್ವಾರದಡಿಯಲ್ಲಿ ವೈಷ್ಣವ ದ್ವಾರಪಾಲಕರಿದ್ದಾರೆ.

**ಸಭಾಮಂಟಪ :** ೫.೧೫ ಮೀ. ಚಚ್ಚೌಕದ ವಿಸ್ತೀರ್ಣವನ್ನೊಳಗೊಂಡ ಸಭಾಮಂಟಪದ ಮಧ್ಯದ ನಾಲ್ಕು ಪೂರ್ಣ ಕಂಬಗಳು ಇಲ್ಲಿನ ಸೋಮೇಶ್ವರ ದೇವಾಲಯದ ಸಭಾಮಂಟಪದ ಕಂಬಗಳಂತಿವೆ. ಕಂಬಗಳ ಕೆಳಗೆ ೧೫ ಸೆಂ.ಮೀ. ಎತ್ತರದ ಪೀಠಗಳಿದ್ದು ಅವುಗಳ ಸುತ್ತಳತೆ ಸುಮಾರು ೫ ಮೀ. ಇದೆ. ಕಾಂಡದ ಅಡಿ ಭಾಗ ಚೌಕನಾಗಿದ್ದು ಮಧ್ಯಭಾಗದಲ್ಲಿ ಚಿಕ್ಕ ಚಿಕ್ಕ ಗೂಡುಗಳನ್ನು ಎರಡು ಸ್ತರಗಳಲ್ಲಿ ಕೆತ್ತಲಾಗಿದೆ. ಈ ಎರಡೂ ಸ್ತರಗಳ ಗೂಡುಗಳ ನಡುವೆ ನಕ್ಷತ್ರ ಆಕಾರದ ಶಿಲ್ಪವಿನ್ಯಾಸವಿದೆ. ಸಭಾಮಂಟಪದ ಮಧ್ಯದ ಅಂಕಣದ ಛತ್ತಿನಲ್ಲಿ ಅಷ್ಟಭುಜಾಕೃತಿಯ ವಿನ್ಯಾಸದೊಳಗೆ ವೃತ್ತಾಕಾರದ ಪದಕವಿದೆ. ಮುಖಮಂಟಪದಲ್ಲಿರುವಂತೆ ಇಲ್ಲಿಯೂ ಕೂಡ ಛತ್ತಿನ ಮಧ್ಯಭಾಗದಲ್ಲಿ ಮೂರು ಪಕಳೆ(ದಳ)ಗಳ ಎಂಟು ಅರಳಿದ ಕಮಲಗಳನ್ನು ತೋರಿಸಿದೆ. ಸಭಾಮಂಟಪದ ಛತ್ತು ಕಲ್ಲಿನ ಚಪ್ಪಡಿಗಳಿಂದ ಹೊದಿಸಲ್ಪಟ್ಟಿದ್ದು ನೆಲಕ್ಕೆ ಗಾರೆ ಹಾಕಲಾಗಿದೆ.

ಸಭಾಮಂಟಪದ ಪ್ರತಿಯೊಂದ ಕಂಬಗಳು ಪೀಠವನ್ನೊಗಳಗೊಂಡು, ತೊಲೆಯತನಕ ೨.೩೦ ಮೀ. ಎತ್ತರವಾಗಿದೆ. ಇಲ್ಲಿರುವ ದೇವಕೋಷ್ಠಗಳು ೧.೦೭ ಮೀ. ಉದ್ದ ಹಾಗೂ ೫೨ ಸೆಂ.ಮೀ. ಅಗಲವಿದ್ದು, ಅವುಗಳ ಮೇಲೆ ಭೂಮಿಜ ಶಿಖರ ಮಾದರಿಗಳನ್ನು ಕಂಡರಿಸಿ ಎರಡೆರಡು ಮಕರಗಳನ್ನು ತೋರಿಸಲಾಗಿದೆ. ದೇವಕೋಷ್ಠಗಳ ಇಕ್ಕೆಲಗಳಲ್ಲಿ ಕಂಬ ಮಾದರಿಗಳಿವೆ.

**ಅಂತರಾಳ :** ಇದು ತ್ರಿಕೂಟ ದೇವಾಲಯವಾದ್ದರಿಂದ ಗರ್ಭಗೃಹಗಳ ಮುಂದೆ ಅಂತರಾಳಗಳು ಸೃಷ್ಟಿಸಲ್ಪಟ್ಟಿವೆ. ಇವುಗಳ ಛತ್ತಿನಲ್ಲಿ ಪದಕಗಳಿವೆ. ಆದರೆ ವಿಷ್ಣು ಪ್ರತಿಷ್ಠಾಪಿತ ಗರ್ಭಗೃಹದ ಮುಂದೆ ಇರುವ ಅಂತರಾಳದ ಛತ್ತಿನಲ್ಲಿ ಹೆಚ್ಚಿನ ವಿನ್ಯಾಸಾಲಂಕಾರದ ಪದಕವಿದೆ. ಅಂತರಾಳಗಳು ೨.೪೫ ಮೀ. ಉದ್ದ ಹಾಗೂ ೧.೭೨ ಮೀ. ಅಗಲವಾಗಿದ್ದು, ಅವುಗಳ ಮುಂದೆ ಪ್ರತ್ಯೇಕವಾದ ಎರಡೆರಡು ಕಂಬಗಳನ್ನು ನಿಲ್ಲಿಸಿದ್ದರಿಂದ ಅಂತರಾಳಗಳಿಗೆ ವಿಶೇಷ ಸ್ಥಾನ ಕಲ್ಪಿಸಿಕೊಟ್ಟಂತಾಗಿದೆ. ಈ ಕಂಬಗಳು ಸಭಾಮಂಟಪದಲ್ಲಿರುವ ಕಂಬಗಳ ಗಾತ್ರಕ್ಕಿಂತ ಚಿಕ್ಕವು.

**ಗರ್ಭಗೃಹ :** ದಶಾವತಾರದ ವಿಷ್ಣುವಿನ ವಿಗ್ರಹವಿರುವ ಮುಖ್ಯ ಗರ್ಭಗೃಹವು ೨.೪೭ ಮೀ. ವಿಸ್ತೀರ್ಣವನ್ನೊಳಗೊಂಡಿದ್ದು ದ್ವಾರದಲ್ಲಿ ಮೂರು ದ್ವಾರಶಾಖೆಗಳಿವೆ. ಪ್ರಥಮವಾಗಿ ರತ್ನಶಾಖೆಯು ಹಾಗೂ ಎರಡನೆಯ ದ್ವಾರಶಾಖೆಯಲ್ಲಿ ಕಂಬ ಮಾದರಿಗಳಿವೆ. ದ್ವಾರಶಾಖೆಯ ಅಡಿಭಾಗಗಳಲ್ಲಿ ದ್ವಿಭಂಗಿಯಲ್ಲಿರುವ ವೈಷ್ಣವ ದ್ವಾರಪಾಲಕರು ಮತ್ತು ಅವರಿಗೆ ಚಾಮರಧಾರಿಣಿಯರಿದ್ದಾರೆ. ದ್ವಾರಪಾಲಕರ ಕೊರಳಲ್ಲಿ ಹಾರ, ಕಟಿಬಂಧಗಳನ್ನು ವಿಶೇಷ ಜಾಲರಿಗಳಿಂದ ತೋರಿಸಲಗಿದೆ. ಕಾಲುಗಳಿಗೆ ಪಾದವಲಯ, ಕೈಗಳಲ್ಲಿ ಶಂಖ,

ಚಕ್ರ, ಗದೆಗಳಿವೆ. ಬಲ ಕೆಳಗಿನ ಕೈ ಅಭಯ ಮುದ್ರೆಯಲ್ಲಿದೆ. ಚಾಮರಧಾರಿಣಿಯರು ಕಂಠಹಾರ, ಸ್ತನಹಾರಗಳನ್ನು ಧರಿಸಿದ್ದಾರೆ. ಅವರ ತಲೆಯ ಮೇಲೆ ಪ್ರಭಾವಳಿಯಿರುತ್ತವೆ.

ಮುಖ್ಯ ಗರ್ಭಗೃಹದ ಲಲಾಟದಲ್ಲಿ ಸೋಮೇಶ್ವರ ದೇವಾಲಯವಿದ್ದಂತೆ ಗಜಲಕ್ಷ್ಮಿ ಮತ್ತು ಲಲಾಟದ ಮೇಲೆ ಮುಂಚಾಚಿದ ಕಪೋತದಂತಹ ಭಾಗ ಅದರ ಮೇಲೆ ಇರುವ ಉತ್ತರಾಂಗದಲ್ಲಿ ಶಿಖರ ಮಾದರಿಗಳಿರುತ್ತವೆ. ಎಡ ಬಲಗಳಲ್ಲಿರುವ ಇನ್ನೆರಡು ಗರ್ಭಗೃಹಗಳಲ್ಲಿ ಲಿಂಗಗಳಿವೆ.

**ಗರ್ಭಗೃಹದಲ್ಲಿರುವ ವಿಷ್ಣು ವಿಗ್ರಹ :** ಎದುರು ಭಾಗದ ಮುಖ್ಯ ಗರ್ಭಗೃಹದಲ್ಲಿರುವ ವಿಷ್ಣುವಿನ ಮೂರ್ತಿ ಮಾತ್ರ ಬಹಳ ವಿಶೇಷವೆನಿಸಿದೆ. ೧.೨೭ ಮೀ. ಎತ್ತರದ ಈ ವಿಗ್ರಹವು ಕಪ್ಪು ಬಳಪದ ಶಿಲೆಯಲ್ಲಿ ಬಹು ಸೂಕ್ಷ್ಮವಾಗಿ ಕೆತ್ತಲ್ಪಟ್ಟಿದ್ದು, ಹೊಯ್ಸಳ ವಾಸ್ತುಶಿಲ್ಪವನ್ನು ನೆನಪಿಸಿಕೊಡುವುದು.

ವಿಷ್ಣುವಿನ ತಲೆಯ ಮೇಲೆ ಕರಂಡ, ಕಿವಿಯಲ್ಲಿ ಮಕರಕುಂಡಲ, ಕೊರಳಲ್ಲಿ ಅಸಂಖ್ಯಾತ ಸೂಕ್ಷ್ಮ ವಿನ್ಯಾಸದ ಹಾರಗಳು, ಯಜ್ಞೋಪವೀತ, ಮುಕ್ತಾಯಜ್ಞೋಪವೀತ ಅರ್ಧೋರುಕಗಳನ್ನು ಕಂಡರಿಸಲಾಗಿದೆ. ಸೊಂಟದಲ್ಲಿ ಕಟ್ಟಿದ ಕಟಿಬಂಧದ ಗಂಟಿನಲ್ಲಿ ಸಿಂಹದ ಮುಖವನ್ನು ತೋರಿಸಿದೆ. ವಿಷ್ಣುವಿನ ಕಾಲಗುಳಲ್ಲಿ ಪಾದವಲಯಗಳು ಹಾಗೂ ಪಾದರಸಗಳಿವೆ. ಕಾಲಿನ ಹೆಬ್ಬೆರಳಿನ ಪಕ್ಕದ ಬೆರಳಿಗೆ ಎರಡು ನಿರಿಗೆಗಳ ಉಂಗುರಗಳನ್ನು ಧರಿಸಿದ ವಿಷ್ಣು ಸಮಭಂಗಿಯಲ್ಲಿ ನಿಂತಿರುತ್ತಾನೆ. ಮುಂದಿನ ಬಲಗೈ ಅಭಯಹಸ್ತದಲ್ಲಿ, ಹಿಂದಿನ ಬಲಗೈಯಲ್ಲಿ ಶಂಖವನ್ನು ಹಾಗೂ ಮುಂದಿನ ಎಡಗೈಯಲ್ಲಿ ಗದೆಯೂ ಹಿಂದಿನ ಎಡಗೈಯಲ್ಲಿ ಚಕ್ರವನ್ನು ತೋರಿಸಲಾಗಿದೆ. ಇದು ಪದ್ಮಪುರಾಣದ 'ಪಾತಾಳಖಂಡ' ಪ್ರಕಾರ ವಿಷ್ಣುವಿನ ಕೇಶವನ ರೂಪವನ್ನು ಪ್ರತಿನಿಧಿಸುತ್ತದೆ.

ಕೆಳಭಾಗದಲ್ಲಿ ನರಸಿಂಹನನ್ನು ಕಂಡರಿಸಲಾಗಿದೆ. ಪೇಶ್ವೆಗಳ ಆಡಳಿತಾವಧಿಯಲ್ಲಿ ಈ ವಿಷ್ಣುವಿಗ್ರಹ ಪ್ರತಿಷ್ಠಾಪಿಸಿದೆ; ಇದಕ್ಕೂ ಮುಂಚೆ ಅಲ್ಲಿ ಗೋಪಿನಾಥನ ವಿಗ್ರಹವಿತ್ತು.[8]

ವಿಷ್ಣುವಿನ ಕೈಗಳಲ್ಲಿ ಕಡಗಗಳು ಹಾಗೂ ಕೈಗಳ ನಡುವಿನ ಬೆರಳುಗಳನ್ನು ಹೊರತುಪಡಿಸಿ, ಉಳಿದೆಲ್ಲ ಬೆರಳುಗಳಲ್ಲಿ ವಿವಿಧ ಸೂಕ್ಷ್ಮ ವಿನ್ಯಾಸಗಳುಳ್ಳ ಉಂಗುರಗಳನ್ನು ತೊಡಿಸುವಲ್ಲಿ ಶಿಲ್ಪಿಯು ತೋರಿಸಿದ ಕೈಚಳಕವನ್ನು ಮೆಚ್ಚಲೇಬೇಕು. ಅಭಯ ಹಸ್ತದಲ್ಲಿರುವ ಮುಂದಿನ ಬಲಗೈಯ ಹೆಬ್ಬೆರಳು ಮತ್ತು ತೋರುಬೆರಳುಗಳ ಮಧ್ಯೆ ಒಂದು ಕಡಗವನ್ನು ತೋರಿಸಿರುವುದೂ ವೈಶಿಷ್ಟ್ಯವೇ ತೋಳುಗಳಿಗೆ ಕೇಯೂರಗಳು, ತಲೆಯ ಮೇಲೆ ಎರಡು ಸ್ತರಗಳಲ್ಲಿರುವ ಕೊಡೆಯು ಇದ್ದು, ಅದು ಮುಕ್ಕೊಡೆಯೆನಿಸದು. ಆ ಕೊಡೆಯ ಮೇಲ್ಭಾಗದಲ್ಲಿ ವಿಶಲವಾದ ಪ್ರಭಾವಳಿಯುಂಟು.

ಪ್ರಭಾವಳಿಯ ಅಡಿಯಲ್ಲಿ ಮಕರಗಳಿದ್ದು, ಮಕರದ ಬಾಯಿಯಿಂದಲೇ ವಿಷ್ಣುವಿನ ದಶಾವತಾರದ ಆಕೃತಿಗಳು ಹೊರಬರುತ್ತಿರುವಂತೆ ತೋರಿಸಲಾಗಿದೆ. ಪ್ರಭಾವಳಿಯ ಬಲಭಾಗದಿಂದ ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ಶ್ರೀರಾಮ, ಬಲರಾಮ, ಬುದ್ಧ ಮತ್ತು ಕಲ್ಕಿಯ ಅವತಾರಗಳನ್ನು ಬಹು ಸೂಕ್ಷ್ಮವಾಗಿ ಕಂಡರಿಸಿದ್ದು ವಿಶೇಷ. ಮಕರದ ಶರೀರ ಹಾಗು ಬಾಲವು ನಿರಿಗೆ ನಿರಿಗೆಯಾಕಾರದಲ್ಲಿ ಹಾವಿನ ತೆವಳಿಕೆಯಂತೆ ವಿಷ್ಣುವಿನ ವಿಗ್ರಹದ ಪ್ರಭಾವಳಿಯ ಒಂದು ಭಾಗವಾಗಿ ವಿಶೇಷ ಮೆರಗು ನೀಡಿದೆ. ವಿಗ್ರಹದ ಎಡ ಬಲ ಪಾರ್ಶ್ವಗಳಲ್ಲಿ ಮೂರು ಅಂಕಣಗಳನ್ನು ಮಾಡಿ, ಒಂದೊಂದು ಅಂಕಣದಲ್ಲಿ ಇಬ್ಬಿಬ್ಬರಂತೆ ಕುಳಿತ ಭಂಗಿಯಲ್ಲಿ ವಿಷ್ಣುವಿನ ವಿಗ್ರಹದ ಪ್ರಭಾವಳಿಯ ಒಂದು ಭಾಗವಾಗಿ ವಿಶೇಷ ಮೆರಗು ನೀಡಿದೆ. ವಿಗ್ರಹದ ಎಡ ಬಲ ಪಾರ್ಶ್ವಗಳಲ್ಲಿ ಮೂರು ಅಂಕಣಗಳನ್ನು ಮಾಡಿ, ಒಂದೊಂದು ಅಂಕಣದಲ್ಲಿ ಇಬ್ಬಿಬ್ಬರಂತೆ ಕುಳಿತ ಭಂಗಿಯಲ್ಲಿ ವಿಷ್ಣುವಿನ ಚಿಕಣಿ ಶಿಲ್ಪಗಳನ್ನು ತೋರಿಸಲಾಗಿದೆ. ವಿಷ್ಣುವಿನ ಬಲಪಾದದ ಹತ್ತಿರ ೨೨ ಸೆಂ.ಮೀ. ಎತ್ತರದ ಬಲಗಾಲ ಮಂಡೆಯೂರಿ ಎಡಪಾದವನ್ನು ನೆಲದ ಮೇಲಿಟ್ಟು, ತನ್ನೆರಡೂ ಕೈಗಳನ್ನು ಜೋಡಿಸಿ ಕುಳಿತ ವಿನಮ್ರ ಭಾವದ ಗರುಡನನ್ನು ಬಹು ಅಂದವಾಗಿ ಶಿಲ್ಪಿಸಲಾಗಿದೆ. ಗರುಡನ ತಲೆಯ ಮೇಲೂ ಕರಂಡ, ಕರ್ಣಕುಂಡಲ, ಭುಜಕೀರ್ತಿ ಮತ್ತು ಕೈಯಲ್ಲಿ ಕಂಕಣಗಳಿವೆ. ಅವನು ತೋರುಬೆರಳು, ಕಿರುಬೆರಳುಗಳಲ್ಲಿ ಉಂಗುರಗಳನ್ನು ಧರಿಸಿದ್ದಾನೆ.

ವಿಷ್ಣುವಿನ ಎಡ–ಬಲಗಳಲ್ಲಿ ೩೫ ಸೆಂ.ಮೀ. ಎತ್ತರದ ಚಾಮರಧಾರಿಣಿಯರ ಶಿಲ್ಪಗಳಿವೆ. ಅವರು ಒಂಟಿಕಾಲ ಮೇಲೆ ಶರೀರದ ಭಾರವನ್ನೆಲ್ಲ ಹಾಕಿ, ಇನ್ನೊಂದು ಪಾದವನ್ನು ವಿರಾಮ ಸ್ಥಿತಿಯಲ್ಲಿಟ್ಟಿದ್ದಾರೆ. ಚಾಮರಧಾರಿಣಿಯರ ಕೇಶಾವಲಂಕಾರವಂತೂ ಶಿಲ್ಪಿಯು ವಿಪರೀತವಾಗಿಸಿದ್ದಾನೆ. ನಮ್ಮ ತಲೆಯ ನೈಜ ಕೂದಲುಗಳಷ್ಟೇ ಸೂಕ್ಷ್ಮವಾಗಿರುವ ಕೂದಲು, ತುರುಬು ಹಾಗೂ ಕೇಶಪಾಶಗಳ ಬಹು ಸ್ಪಷ್ಟವಾಗಿ ಮೂಡಿದೆ. ಬೈತಲೆಯ ಮಧ್ಯ ಸೀಮಂತಮಣಿ, ಕಿವಿಗಳೇ ಕಾಣದಂತಿರುವ ಕೇಶಪಿನ್ನುಗಳನ್ನು ಅತಿ ಸೂಕ್ಷ್ಮವಾಗಿ ಕೆತ್ತುವಲ್ಲಿ ಶಿಲ್ಪಿಯ ತಾಳ್ಮೆ ಮೆಚ್ಚುವಂಥದ್ದು–ತೋಳಬಂದಿ ಕಂಠಹಾರ ಹಾಗೂ ಸ್ತನಹಾರಗಳನ್ನು ಮುತ್ತುಗಳಲ್ಲಿ ತೋರಿಸಿದೆ. ತ್ರಿಭಂಗಿಯಲ್ಲಿದ್ದ ಚಾಮರಧಾರಿಣಿಯರು ಕಟಿಬಂಧ ಮಾತ್ರ ಧರಿಸಿದ್ದು, ಬರಿಮೈಯಲ್ಲಿದ್ದಾರೆ. ಕಟಿಬಂಧದ ನಿರಿಗೆಗಳು ವಿರಾಮ ಸ್ಥಿತಿಯಲ್ಲಿಟ್ಟ ಕಾಲಿನ ಮಂಡಿಯನ್ನು ಮುಟ್ಟಿವೆ. ತೊಡೆಯ ಭಾಗದಿಂದ ಕೆಳಗೆ ಯಾವುದೇ ವಸ್ತ್ರಗಳಿರುವುದಿಲ್ಲ. ಒಂದು ಕೈಯಲ್ಲಿ ಚಾಮರ ಹಾಗೂ ಮತ್ತೊಂದು ಕೈಯಲ್ಲಿ

ಹಣ್ಣು ಹಿಡಿದಿರುವಂತೆ ತೋರುತ್ತದೆ. ವಿಷ್ಣುವಿನ ಅಂಗೈಯಲ್ಲಿರುವ ಗೆರೆಗಳು, ಚಾಮರಧಾರಿಣಿಯರ ಕೇಶವಿನ್ಯಾಸ, ಶಂಖದ ಮೇಲಿನ ಗೆರೆಗಳನ್ನು ನೋಡಿದರೆ ಸೂಕ್ಷ್ಮಾತಿಸೂಕ್ಷ್ಮತೆ ಪದೇ ಪದೇ ಎದ್ದು ಕಾಣುವ ಅಂಶವಾಗಿದೆ. ಒಟ್ಟಿನಲ್ಲಿ ವಿಷ್ಣುವಿನ ಮಂದಸ್ಮಿತ ಭಾವ, ಗರುಡನ ವಿನಮ್ರ ಭಾವ ಹಾಗೂ ಚಾಮರಧಾರಿಣಿಯರ ಹಸನ್ಮುಖಿ ಭಾವಗಳನ್ನು ಶಿಲ್ಪಿ ಮಾರ್ಮಿಕವಾಗಿ ಕೆತ್ತಿದ್ದಾನೆ.

ಗರ್ಭಗೃಹದ ಛತ್ತಿನಲ್ಲಿರುವ ಅಷ್ಟಭುಜಾಕೃತಿಯ ಅಲಂಕಾರ ಮತ್ತು ಪದಕಗಳನ್ನು ನೋಡಿದರೆ ಇವು ಸಭಾಮಂಟಪದ ಅಲಂಕೃತ ಪದಕಗಳಂತಿಲ್ಲವೆಂಬುದು ತಿಳಿಯುಬರುತ್ತದೆ. ಛತ್ತಿನ ಕೇಂದ್ರ ಭಾಗಗಳ ಖಾಲಿ ಇದ್ದು, ಅದಕ್ಕೆ ಬದಲಾಗಿ ನಾಲ್ಕು ಮೂಲೆಗಳಲ್ಲಿ ಸಾದಾ ಪದಕಗಳನ್ನು ರಚಿಸಲಾಗಿದೆ. ಅಕ್ಕ ಪಕ್ಕದ ಇನ್ನೆರಡು ಗರ್ಭಗೃಹಗಳಲ್ಲಿ ಲಿಂಗಗಳಿದ್ದು, ಅವುಗಳ ದ್ವಾರಗಳ ಲಲಾಟಪಟ್ಟಿಯಲ್ಲಿ ಗಜಲಕ್ಷ್ಮಿಯನ್ನು ಕಂಡರಿಸಿದೆ. ಉಳಿದೆಲ್ಲ ಭಾಗಗಳು ವಿಷ್ಣು ಪ್ರತಿಷ್ಠಾಪಿತ ಗರ್ಭಗೃಹದಂತೆ ಇರುತ್ತದೆ. ಈ ಎರಡೂ ಗರ್ಭಗೃಹಗಳು ೨.೪೦ ಮೀ. ಚಚ್ಚೌಕದ ವಿಸ್ತೀರ್ಣವನ್ನು ಹೊಂದಿದ್ದು, ಛತ್ತಿನ ನಾಲ್ಕು ಮೂಲೆಗಳಲ್ಲಿ ಹಾಗೂ ಮಧ್ಯಭಾಗದಲ್ಲಿ ಸಣ್ಣ ಸಣ್ಣ ಪದಕಗಳಿರುತ್ತವೆ. ಬಹುಶಃ ಮುಖ್ಯ ಗರ್ಭಗೃಹದ ಛತ್ತಿನಲ್ಲಿರುವ ಮಧ್ಯಭಾಗದ ಪದಕವನ್ನು ಕಂಡರಿಸಲಾಗಿದ್ದ ಕಲ್ಲು ಕಳಚಿ ಬಿದ್ದಿರಬಹುದೆಂದು ತೋರುತ್ತದೆ. ಎಲ್ಲ ಗರ್ಭಗೃಹಗಳು, ಸಭಾಮಂಟಪ ಹಾಗೂ ಮುಖಮಂಟಪಗಳ ಒಳಗೋಡೆಗಳಲ್ಲಿ ಕರಿಕಲ್ಲು ಬಳಸಲಾಗಿದೆ.

**ಕಕ್ಷಾಸನಗಳ ಹೊರಮೈ :** ಕಕ್ಷಾಸನಗಳ ಹೊರಮೈಯನ್ನು ಮುಖ್ಯವಾಗಿ ಎರಡು ಹಂತಗಳಲ್ಲಿ ನಿರ್ಮಿಸಲಾಗಿದೆ. ಮೊದಲನೆಯ ಹಂತದ ಪೀಠ ಭಾಗವು ೨೮ ಸೆಂ.ಮೀ. ಎತ್ತರವಾಗಿದ್ದು, ಎರಡನೆಯ ಹಂತದ ಬೆನ್ನು ಅನಿಸುವ ಭಾಗವು ೩೭ ಸೆಂ.ಮೀ. ನಷ್ಟು ಎತ್ತರವಾಗಿದೆ. ಪೀಠ ಭಾಗದ ಹೊರಮೈ ನೇರವಾಗಿದ್ದು, ಅದರಲ್ಲಿ ಶಿಖರ ಮಾದರಿಗಳನ್ನು ಕಂಡರಿಸಲಾಗಿದೆ. ಬೆನ್ನು ಅನಿಸುವ ಭಾಗವು ಇಳಿಜಾರಾಗಿದ್ದು, ಅದರ ಹೊರಬದಿಗೆ ಮೂರು ಗೆರೆಗಳು ಮತ್ತು ಇಂಗ್ಲೀಷಿನ 'ಎಸ್' ಆಕಾರದ ರೇಖಾ ವಿನ್ಯಾಸಗಳನ್ನು ತೋರಿಸಲಾಗಿದೆ.

**ದೇವಾಲಯದ ಹೊರಗೋಡೆ :** ದೇವಾಲಯದ ಹೊರಗೋಡೆಯು ಸಂಪೂರ್ಣವಾಗಿ ಇಟ್ಟಿಗೆ ಮತ್ತು ಗಾರೆಯಿಂದ ನಿರ್ಮಿಸಲ್ಪಟ್ಟಿದ್ದು ಅದರಲ್ಲೇ ಹಿಂಚಾಚು-ಮುಂಚಾಚುಗಳನ್ನು ತೋರಿಸಿದೆ. ಪ್ರತಿಯೊಂದು ಗರ್ಭಗೃಹದ ಹೊರಗೋಡೆಗಳಲ್ಲಿ ನಿಮಿತ್ತ ಮಾತ್ರಕ್ಕೆ ದೇವಕೋಷ್ಠಗಳ (ಬ್ಲೈಂಡ್ ಪೋರ್ಚ್) ಮಾದರಿಗಳನ್ನು ನಿರ್ಮಿಸಲಾಗಿದೆ. ಗಾರೆಯಲ್ಲಿಯೇ ಈ ದೇವಕೋಷ್ಠಗಳ ಇಕ್ಕೆಲಗಳಲ್ಲಿ ಕಂಬಗಳ ಮಾದರಿಯನ್ನು ಮಾಡಲಾಗಿದೆ. ಹೊರಗೋಡೆಗೆ ತುಸು ದೊಡ್ಡ ಗಾತ್ರದ ಆಕಿಯಾಗಿ ಸುಟ್ಟ ಇಟ್ಟಿಗೆಗಳನ್ನು ಬಳಸಲಾಗಿದೆ.

ಜನವಸತಿ ಮನೆಗಳ ಹಿಂದಿನ ಗೋಡೆಯೇ ಪ್ರಾಕಾರ ಗೋಡೆಯಂತೆ ಕೆಲಸ ನಿರ್ವಹಿಸುತ್ತಿದೆ ಎಂದರೆ ತಪ್ಪಾಗಲಿಕ್ಕಿಲ್ಲ. ಏಕೆಂದರೆ ಈ ಜನವಸತಿ ಮನೆಗಳ ಹಿಂಗೋಡೆಗಳಲ್ಲೇ ಗಣಪ, ನಾಗ ಮತ್ತು ನವಗ್ರಹಗಳ ಶಿಲ್ಪಗಳನ್ನು ಜೋಡಿಸಲಾಗಿದೆ. ಪ್ರವೇಶ ದ್ವಾರದ ಇಕ್ಕೆಲಗಳಲ್ಲಿ ಯಾಳಿಗಳಿವೆ.

ದೇವಾಲಯದ ಮುಂದೆ ಸ್ತ್ರೀ ಶಿಲ್ಪವೊಂದಿದ್ದು ಅವಳ ಬಲಗೈಯಲ್ಲಿ ಖಡ್ಗ, ಎಡಗೈಯಲ್ಲಿ ಬಟ್ಟಲು ಮತ್ತು ಡಮರು ತೋರಿಸಲಾಗಿದೆ. ಎಡಗಾಲಿನ ತೊಡೆ ನೆಲಕ್ಕೆ ತಾಕಿದ್ದು, ಬಲಗಾಲಿನ ಪಾದವನ್ನು ನೆಲದ ಮೇಲೆ ಇಟ್ಟಿದ್ದಾಳೆ. ಪಾದವಲಯ, ಕಂಠಹಾರ, ಬಳೆ-ಇವು ಈ ದೇವತೆಯ ಆಭರಣಗಳು, ನೆಟ್ಟನೆಯ ಮೂಗು, ಭಯ ಹುಟ್ಟಿಸುವ ಕಣ್ಣು, ತುಂಬು ಸ್ತನಗಳನ್ನು ಕಂಡರಿಸಲಾಗಿದೆ. ತಲೆಯ ಮೇಲೆ ಕರಂಡ, ಹೊಟ್ಟೆಗೆ ಕಟ್ಟಿದ ಬಟ್ಟೆಯು ಅರ್ಧೋರಕದಂತೆ ಇಳಿಬಿದ್ದಿದೆ.

ಈ ದೇವಾಲಯದ ಮಾಳಿಗೆಗೆ ಕಲ್ಲುಗಳನ್ನು ಹೊದಿಸಿ ಅದರ ಮೇಲೆ ಗಾರೆ ಹಾಕಲಾಗಿದೆ. ಮಾಳಿಗೆಗೆ ಹತ್ತಿ ಹೋಗಲು ದೇವಾಲಯದ ಸಭಾಮಂಟಪದ ಎಡಭಾಗದಲ್ಲೊಂದು ಮೆಟ್ಟಿಲುಗಳುಳ್ಳ ಕಿಂಡಿಯಿರುತ್ತದೆ. ಇದನ್ನು ಹತ್ತಿ ಮೇಲೆ ಹೋದಾಗ ದೇವಾಲಯದ ಗೋಡೆಯ ಮೇಲೆ ೧.೩೬ ಮೀ. ಎತ್ತರದ ಕುಂಬಿಯಾಕಾರದ ಗೋಡೆಯನ್ನು ಕಟ್ಟಿರುವ ಅಂಶ ತಿಳಿಯುತ್ತದೆ. ಈ ಗೋಡೆಗೆ ಬಳಸಿರುವ ಇಟ್ಟಿಗೆಗಳು ೨೭ ಸೆಂ.ಮೀ. ಉದ್ದ, ೨೨ ಸೆಂ.ಮೀ. ಅಗಲ ಹಾಗೂ ೧೦ ಸೆಂ.ಮೀ. ಎತ್ತರವಾಗಿದೆ.

ಮುಖಮಂಟಪ ಹಾಗೂ ಸಭಾಮಂಟಪಗಳ ಮಧ್ಯದ ಗೋಡೆಯು ಇತ್ತೀಚೆಗೆ ಕಟ್ಟಲ್ಪಟ್ಟಿದ್ದೆಂದು ಸ್ಪಷ್ಟವಾಗಿ ಗೋಚರಿಸುತ್ತದೆ. ಇದರಲ್ಲಿ ಮುಚ್ಚಿಹೋಗಿರುವ ಕಂಬಗಳು ಮೂಲತಃ ಪೂರ್ಣಕಂಬಗಳಾಗಿದ್ದು, ಈ ಗೋಡೆಯನ್ನು ದೇವಾಲಯ ಕಟ್ಟುವಾಗಲೇ ಕಟ್ಟಿದ್ದರೆ ಇಲ್ಲಿ ಪೂರ್ಣ ಕಂಬಗಳ ಬದಲಾಗಿ ಅರ್ಧಕಂಬಗಳನ್ನು ನಿಲ್ಲಿಸಲಾಗಿರುತ್ತಿತ್ತು.

ನಾರಾಯಣನ ಗುಡಿಯು ಇದೇ ಊರಿನ ಸೋಮೇಶ್ವರ ದೇವಾಲಯದಂತೆ ತ್ರಿಕೂಟ ಮಾದರಿಯ ದೇವಾಲಯವಾಗಿದ್ದು, ಕಲ್ಯಾಣ ಚಾಲುಕ್ಯರ ಕಾಲದ ಸಾಮಾನ್ಯ ವಾಸ್ತು ಲಕ್ಷಣಗಳಲ್ಲೊಂದಾದ ಲಲಾಟ ಪಟ್ಟಿಯಲ್ಲಿ ಗಜಲಕ್ಷ್ಮಿಯನ್ನು ಕಂಡರಿಸಿರುವುದರಿಂದ ಇದರ ಕಾಲಮಾನವನ್ನು ೧೧ ರಿಂದ ೧೨ನೆಯ ಶತಮಾನಕ್ಕೆ

ಸೀಮಿತಗೊಳಿಸಬಹುದು. ಅಲ್ಲದೆ ಬ್ರಹ್ಮನ ಬದಲಾಗಿ ಸೂರ್ಯನನ್ನು ಆರಾಧಿಸುವ ಪರಂಪರೆಯೂ ಇದೇ ಅವಧಿಯಲ್ಲಿ ಬೆಳೆಯಿತೆಂಬುದನ್ನು ಇಲ್ಲಿಯ ಸೋಮೇಶ್ವರ ದೇವಾಲಯದ ಎಡಗಡೆಯ ಗರ್ಭಗೃಹದ ದ್ವಾರಶಾಖೆಯಡಿ ಬಿಲ್ಲು ಬಾಣಗಳನ್ನು ಹಿಡಿದ ದೇವ–ದೇವತೆಯರನ್ನು ಉಷಾ ಮತ್ತು ಪ್ರತ್ಯುಷೆಯರೆಂದು ಗುರುತಿಸುವುದರ ಮೂಲಕ ತಿಳಿಯಬಹುದು ; ಹಾಗೂ ಇದೊಂದು ತ್ರೈಪುರುಷ ದೇವಾಲಯವೆಂದು ಪರಿಗಣಿಸಲ್ಪಟ್ಟಿದೆ. ಆದರೆ ನಾರಾಯಣನ ಗುಡಿಯ ಎಡ–ಬಲಗಳಲ್ಲಿರುವ ಇನ್ನೆರಡು ಗರ್ಭಗೃಹಗಳ ದ್ವಾರಶಾಖೆಗಳ ಅಡಿ ಭಾಗವನ್ನು ಸೂಕ್ಷ್ಮವಾಗಿ ಪರಿಶೀಲಿಸಿದಾಗ ಮಾತ್ರ ಇದೊಂದು ತ್ರೈಪುರುಷ ದೇವಾಲಯವು ಹೌದೋ? ಅಲ್ಲವೋ ? ಎಂಬುದನ್ನು ನಿಶ್ಚಿತವಾಗಿ ಹೇಳಬಹುದು.

**ಶೋಭನದೇವರ ಗುಡಿ :** ಇಂಗಳೇಶ್ವರ ಗ್ರಾಮದಿಂದ ದಕ್ಷಿಣಕ್ಕೆ 'ಟಿಂಗಳೇಶ್ವರ' ಎಂಬ ಐತಿಹಾಸಿಕ ಜನವಸತಿ ಪ್ರದೇಶವಾಗಿದ್ದ ನೆಲೆಗೆ ಹೋಗುವ ಮಾರ್ಗದ ಎಡಭಾಗದಲ್ಲಿರುವ ಶ್ರೀ ಮಲ್ಲಪ್ಪ ಗಿರೆಪ್ಪ ಅವಟಿಯವರ ತೋಟದಲ್ಲಿ ಮಣ್ಣಿನ ದಿಬ್ಬದ ಮೇಲೆ ಪೂರ್ವಾಭಿಮುಖ ಮಾಡಿದ ಶೋಭನದೇವರ ಗುಡಿ ಇದೆ. ಸ್ಥಳೀಯವಾಗಿ 'ಸೋಬಂದೇವರ ಗುಡಿ' ಎಂದು ಕರೆಯಲಾಗುತ್ತದೆ. ಈ ಗುಡಿಯ ಸಭಾಮಂಟಪದ ಒಳಭಾಗ, ಎಡಗಡೆಯ ಭಿತ್ತಿಭಾಗ ಹಾಗೂ ಗರ್ಭಗೃಹದ ಮುಂಭಾಗಗಳು ಮಾತ್ರ ಸುಸ್ಥಿತಿಯಲ್ಲಿವೆ. ಈ ದೇವಾಲಯದ ಕಟ್ಟಡಕ್ಕೆ ಕರಿಕಲ್ಲುಗಳನ್ನು ಬಳಸಿದೆ.

ಹಿಂದೆ ಪ್ಲೇಗು, ಮಹಾಮಾರಿಯಂಥ ಕಾಯಿಲೆಗಳು ಬಂದು ಒಬ್ಬರಿಂದೊಬ್ಬರಿಗೆ ಹರಡುವ ಭಯದಿಂದ ಜನರು ಊರು ಬಿಟ್ಟು ಹೋಗುತ್ತಿದ್ದರು. ಇಂಥ ಒಂದು ಪ್ರಸಂಗ ಬಂದಾಗ ಸಾಂಕ್ರಾಮಿಕ ಕಾಯಿಲೆಯಿಂದ ತಪ್ಪಿಸಿಕೊಳ್ಳಲು ಕುಟುಂಬವೊಂದರ ಸದಸ್ಯರು ಈ ಗುಡಿಯಲ್ಲಿ ವಾಸವಿದ್ದಾಗ ಸ್ತ್ರೀಯೊಬ್ಬಳ ಶೋಭನ ಕಾರ್ಯಕ್ರಮವು ಇಲ್ಲಿ ಜರುಗಿತು. ಪ್ರಯುಕ್ತ ಈ ಗುಡಿಗೆ 'ಶೋಭನ ದೇವರ ಗುಡಿ' ಎಂಬ ಹೆಸರು ಬಂದಿತೆಂದು ಸ್ಥಳೀಯರು ಅಭಿಪ್ರಾಯಪಡುತ್ತಾರೆ. ಗರ್ಭಗೃಹದಲ್ಲಿರುವ ಲಿಂಗ ಹಾಗೂ ಭಿತ್ತಿನಲ್ಲಿರುವ ನಟರಾಜನ ವಿಗ್ರಹವನ್ನು ಪರಿಶೀಲಿಸಿದಾಗ ಮೂಲತಃ ಇದು ಶೈವ ದೇವಾಲಯವಾಗಿತ್ತೆನ್ನಬಹುದು. ಆದರೆ 'ಶೋಭನ ದೇವರ ಗುಡಿ' ಎಂಬ ಹೆಸರು ಬರಲು ಕಾರಣ ನೀಡುವ ಯಾವುದೇ ಶಾಸನಗಳು ಲಭ್ಯವಿಲ್ಲ.

೪.೫೦ ಮೀ. ವಿಸ್ತೀರ್ಣದ ಸಭಾಮಂಟಪದಲ್ಲಿ ೮ ಪೂರ್ಣಕಂಬಗಳು, ೪ ಅರ್ಧಕಂಬಗಳು ಹಾಗೂ ೬ ಮೂಲೆಕಂಬಗಳಿರುತ್ತವೆ. ಕಲ್ಲಿನ ಕಂಬಗಳ ಅಡಿಯಲ್ಲಿ ಮಾತ್ರ ಕಲ್ಲು ಚಪ್ಪಡಿಗಳನ್ನು ಹಾಸಲಾಗಿದೆ. ಸಭಾಮಂಟಪದ ಮಧ್ಯದ ನಾಲ್ಕು ಅಲಂಕೃತ ಕಂಬಗಳ ಪೀಠಗಳ ಸುತ್ತಳತೆಯ ೨.೨೦ ಮೀ. ಇದ್ದು ಕಂಬಗಳು ೧.೬೫ ಮೀ. ಸುತ್ತಳತೆಯನ್ನು ಹೊಂದಿವೆ. ಮಧ್ಯದ ನಾಲ್ಕು ಕಂಬಗಳನ್ನು ಹೊರತುಪಡಿಸಿ, ಇನ್ನುಳಿದ ಸಾದಾ ಕಂಬಗಳು ೧.೨೫ ಮೀ. ಸುತ್ತಳತೆಯನ್ನೊಳಗೊಂಡಿವೆ.

ದೇವಾಲಯದ ಸಭಾಮಂಟಪದ ಬಲಭಾಗದಲ್ಲಿ ದ್ವಾರಕ್ಕೋಸ್ಕರ ಸ್ಥಳಾವಕಾಶವನ್ನೊದಗಿಸಲಾಗಿದೆ. ಸದ್ಯ ಇದು ಮುಚ್ಚಲ್ಪಟ್ಟಿದೆ. ವಾತಾಯನ ವ್ಯವಸ್ಥೆಗೆ ಸಭಾಮಂಟಪದ ಬಲ ಮುಂಭಾಗದಲ್ಲಿ ೫೦ ಸೆಂ.ಮೀ. ಎತ್ತರ ಹಾಗೂ ೩೫ ಸೆಂ.ಮೀ. ಅಗಲವಾದ ಒಂದು ಜಾಲಂಧ್ರವನ್ನು ಬಿಡಲಾಗಿದೆ. ಸಭಾಂಗಣದ ಒಳಗೋಡೆಯಲ್ಲಿ ಎರಡು ದೇವಕೋಷ್ಠಕಗಳಿದ್ದು ಖಾಲಿಯಿವೆ. ಅವು ೧.೨೩ ಮೀ. ಎತ್ತರ ಹಾಗೂ ೧.೦೫ ಮೀ. ಅಗಲವಾಗಿದೆ. ಇಲ್ಲಿ ಮಧ್ಯದಲ್ಲಿರುವ ನಾಲ್ಕು ಕಂಬಗಳು ಕೆಳಭಾಗದಲ್ಲಿ ಚೌಕನಾಗಿದ್ದು ನಡುವೆ ನಾರಾಯಣನ ಗುಡಿಯ ಕಂಬಗಳಂತೆ ಚಿಕ್ಕ ಚಿಕ್ಕ ಗೂಡುಗಳನ್ನು ಕೆತ್ತಲಾಗಿದೆ. ಆದರೆ ಆ ಗೂಡುಗಳ ಎತ್ತರ ಕಡಿಮೆ ಮಾಡಿ, ನಡುವಿನ ನಕ್ಷತ್ರಾಕಾರದ ಅಲಂಕರಣೆ ಮಾತ್ರ ಎದ್ದು ಕಾಣುವಂತೆ ಮಾಡಲಾಗಿದೆ. ಕಾಂಡದ ಮೇಲ್ಭಾಗದಲ್ಲಿ ಚೌಕಾಕಾರದ ಪುನರಾವರ್ತನೆಯಾಗಿ, ಚೈತನ್ಯಗಳನ್ನು ವಿಶೇಷವಾಗಿ ಅಲಂಕರಿಸಲಾಗಿದೆ. ಇಲ್ಲಿಯ ಒಂದು ಕಂಬದ ಮೇಲೆ ಶಾಸನವಿತ್ತು.[೬] ನನ್ನ ಕ್ಷೇತ್ರಕಾರ್ಯದಲ್ಲಿ ಅದು ಕಾಣಸಿಗಲಿಲ್ಲ.

ಸಭಾಮಂಟಪದ ಮಧ್ಯದಂಕಣದ ಛತ್ತಿನಲ್ಲಿ ದಕ್ಷಿಣೋತ್ತರವಾಗಿ ಜೋಡಿಸಿದ ಪ್ರಥಮ ಹಾಗೂ ಕೊನೆಯ ತೊಲೆಗಳಿಗೆ ಇಕ್ಕೆಲಗಳಲ್ಲಿ ಮಕರಗಳು ಮತ್ತು ಅವುಗಳ ಮೇಲೆ ಸವಾರರನ್ನು ಕಂಡರಿಸಿದ್ದು, ಮಕರತೋರಣದ ನಡುವೆ ನೃತ್ಯಗಾರರನ್ನು ತೋರಿಸಲಾಗಿದೆ. ಸೋಮೇಶ್ವರ ದೇವಾಲಯದಲ್ಲಿದ್ದಂತೆ, ಇಲ್ಲಿಯೂ ಮಧ್ಯದ ಅಂಕಣದ ಛತ್ತಿನಲ್ಲಿ ಅಷ್ಟದಿಕಾಲ್ಪಕರನ್ನು ಅವರೆಲ್ಲರ ನಡುವೆ ನೃತ್ಯಭಂಗಿಯಲ್ಲಿರುವ ನಟರಾಜನು ತನ್ನ ಬಲಗಾಲನ್ನು ಅಜ್ಞಾನಿಯಾದ ಅಪಸ್ಮಾರ ಪುರುಷನ ಮೇಲೆ ಇಟ್ಟಿರುವುದನ್ನು ಬಹು ಸುಂದರವಾಗಿ ಕಂಡರಿಸಿದೆ. ನಟರಾಜನ ಬಲಗಡೆಗೆ ನಂದಿ, ಎಡಗಡೆ ಗಣಪ ಹಾಗೂ ಆಕಾಶದಲ್ಲಿ ಹಾರುತ್ತಿರುವ ಗಂಧರ್ವ ಕನ್ನೆಯರನ್ನು ತೋರಿಸಿರುವ ಸನ್ನಿವೇಶ ಅಪರೂಪ.

ತೊಲೆಯ ಮೇಲೆ ಒಂದು ಪಟ್ಟಿಯಲ್ಲಿ ಒಬ್ಬ ಪುರುಷ ಮಲಗಿ ವಿರಮಿಸುತ್ತಿರುವುದು. ಅವನ ಹೆಂಡತಿಯು ಪತಿಯ ಕಾಲಿನ ಮೇಲೆ ಕೈಯಿಟ್ಟಿರುವ ಭಂಗಿಯು ಪತಿಸೇವೆಯಲ್ಲಿರುವ ಸ್ತ್ರೀ ಎಂಬುದನ್ನು ದೃಢಪಡಿಸುತ್ತದೆ. ಇದೇ ತೊಲೆಯಲ್ಲಿ ಆಮೆ, ಮಸಳೆ ಹಾಗೂ ನಿಸರ್ಗ ಸೌಂದರ್ಯ ಕುರಿತಾದ ಚಿಕಣಿ ಶಿಲ್ಪಗಳನ್ನು ತೋರಿಸಲಾಗಿದೆ. ಗರ್ಭಗೃಹದ ಮುಂದೆ

೧.೭೦ ಮೀ. ಉದ್ದ ಹಾಗೂ ೧.೩೦ ಮೀ. ಅಗಲವಾದ ಅಂತರಾಳ ಭಾಗವು ನಿರ್ಮಾಣಗೊಂಡಿದ್ದು, ಇದರ ಛತ್ತು ಸಪಾಟಾಗಿದೆ. ಲಲಾಟಪಟ್ಟಿಯಲ್ಲಿ ಗಜಲಕ್ಷ್ಮಿ ಹಾಗೂ ಇಕ್ಕೆಲಗಳಲ್ಲಿ ಆನೆಗಳು ತಮ್ಮ ಸೊಂಡಿಲುಗಳನ್ನು ಎತ್ತಿಹಿಡಿದಿವೆ. ಮಧ್ಯದಲ್ಲಿ ತೋರಿಸಲಾಗಿರುವ ಲಕ್ಷ್ಮಿಯು ತನ್ನೆರಡು ಕೈಗಳಲ್ಲಿ ಕಮಲಗಳನ್ನು ಹಿಡಿದಿರುವಳು. ೧.೯೦ ಮೀ ವಿಸ್ತೀರ್ಣದ ಈ ಗರ್ಭಗೃಹವು ಅತಿ ಚಿಕ್ಕದಾಗಿದ್ದು ಎತ್ತರ ತೀರ ಕಡಿಮೆಯೆನಿಸುತ್ತದೆ. ಇದರಲ್ಲಿ ಲಿಂಗವಿದ್ದು ನೆಲಕ್ಕೆ ಬಂಡೆಗಳನ್ನು ಹಾಸಲಾಗಿದೆ.

ಗರ್ಭಗೃಹದಲ್ಲಿ ಈ ದೇವಾಲಯಕ್ಕೆ ಸಂಬಂಧಿಸಿದ ಅಥವಾ ಬೇರೆ ಇನ್ನಾವುದೋ ಸ್ಥಳದಿಂದ ತಂದು ಇಟ್ಟಿರುವ ೮೨ ಸೆಂ.ಮೀ. ಉದ್ದ ಹಾಗೂ ೪೫ ಸೆಂ.ಮೀ. ಅಗಲವಾದ ಒಂದು ವೀರಗಲ್ಲು ಇದೆ. ಇದರಲ್ಲಿ ಎರಡು ಭಾಗಗಳಿದ್ದು, ಅಡಿ ಭಾಗದಲ್ಲಿ ಗೋವುಗಳು ಮತ್ತು ವೀರನೊಬ್ಬ ಸ್ತ್ರೀಯ ಕೇಶವನ್ನು ಹಿಡಿದೆಳೆಯುತ್ತಿದ್ದ ದೃಶ್ಯ ಹಾಗೂ ಮೇಲ್ಭಾಗದಲ್ಲಿ ಅವಳು ಗಂಧರ್ವ ಕನ್ಯೆಯರೊಡಗೂಡಿ ಸ್ವರ್ಗಕ್ಕೆ ಹೋಗುತ್ತಿರುವುದನ್ನು ಕಂಡರಿಸಲಾಗಿದೆ. ಒಟ್ಟಿನಲ್ಲಿ ಇದೊಂದು ವೀರಗಲ್ಲಾಗಿದೆ.

ಸಭಾಮಂಟಪದ ಎಡ ಹೊರಗೋಡೆಯು ಬಾಗೇವಾಡಿಯ ಬಸವೇಶ್ವರ ದೇವಾಲಯದ ಗರ್ಭಗೃಹದ ಹೊರಗೋಡೆಯಂತಿದೆ. ಭಿತ್ತಿಯಲ್ಲಿ ೪೫ ಸೆಂ.ಮೀ. ಗೊಂದರಂತೆ ಅರ್ಧ ಕಂಬಗಳ ಮಾದರಿಗಳನ್ನು ಕಂಡರಿಸಲಾಗಿದೆ. ಉಪಾನವೇ ಕಂಬ ಮಾದರಿಗಳಿಗೆ ಪೀಠದಂತೆ ಕಾಣುತ್ತದೆ. ಇವುಗಳಲ್ಲಿ ಕಾಂಡ, ಅರ್ಧ ಗಂಟಾಕೃತಿ, ದಿಂಬು ಸಾದಾ ಬೋದಿಗೆ ಹಾಗೂ ಮೇಲೆ ತೊಲೆಗಳ ಅಂಚುಗಳನ್ನು ತೋರಿಸಲಾಗಿದೆ. ಹೀಗೆ ಕಾಣುವ ಸಾದಾ ಬೋದಿಗೆ ಹಾಗು ತೊಲೆಗಳ ಅಂಚುಗಳು ನೈಜವಾದ ಭಾಗಗಳೇ ಹೊರಚಾಚಿವೆಯೆ ? ಎಂಬ ಸಂಶಯ ಮೂಡಿಸುತ್ತವೆ. ಆದರೆ ಇವು ಭಿತ್ತಿ ಭಾಗಕ್ಕೆ ವಿಶೇಷ ಸೌಂದರ್ಯವನ್ನೊದಗಿಸಿದ ಮಾದರಿಗಳಾಗಿವೆ.

ಭಿತ್ತಿಯ ಮೇಲ್ಭಾಗದಲ್ಲಿ ಗಳ, ಕಪೋತಗಳನ್ನು ಮಾಡಿ, ಮೇಲ್ಛಾವಣಿಗೆ ಕರಿಕಲ್ಲಿನ ಚಪ್ಪಡಿಗಳನ್ನು ಹಾಗೂ ಅವುಗಳ ಮಧ್ಯ ಅಲ್ಲಲ್ಲಿ ೩೦ ಸೆಂ.ಮೀ. ಉದ್ದ ೨೨ ಸೆಂ.ಮೀ. ಅಗಲವಾದ ವಿಶಿಷ್ಟ ಗಾತ್ರದ ಇಟ್ಟಿಗೆಗಳನ್ನು ಬಳಸಲಾಗಿದೆ.

ಮಾಳಿಗೆಯ ಮೇಲಿನಿಂದ ವೀಕ್ಷಿಸಿದಾಗ ಭಿತ್ತಿಯ ಹಾಗೂ ಗರ್ಭಗೃಹದ ಪಾರ್ಶ್ವ ಭಾಗಗಳು ಬಿದ್ದು ಹೋಗಿರುವಲ್ಲಿ ಕೆಳಗಿನ ಸ್ತರದ ಮತ್ತು ಮಲಿನ ಸ್ತರದ ಕಲ್ಲುಗಳಿಗೆ ಬಿಗಿಯಾಗಿ ಬಂಧಿಸಲು ಉಪಯೋಗಿಸಿದ ತಾಂತ್ರಿಕ ಗುರುತುಗಳು ನಮಗೆ ಕಾಣಿಸುತ್ತವೆ. ಇಲ್ಲಿಯೂ ಮಧ್ಯಭಾಗದ ಮಾಳಿಗೆಯು ಎತ್ತರವಿದ್ದು, ಅಂಚಿಗೆ ಇಳಜಾರಾಗಿರುವುದನ್ನು ಕಾಣುತ್ತೇವೆ. ಈ ದೇವಾಲಯವನ್ನು ದಿಬ್ಬದ ಮೇಲೆ ಕಟ್ಟಲಾಗಿದ್ದು ಗುಡಿಯ ಸುತ್ತಲೂ ಕಲ್ಲಿನ ರಾಶಿ ಬಿದ್ದಿದೆ. ದೇವಾಲಯದ ಹಿಂಭಾಗ ಮತ್ತು ಬಲಭಾಗವು ಸಂಪೂರ್ಣವಾಗಿ ಶಿಥಿಲವಾಗಿದ್ದು ಜೀರ್ಣೋದ್ಧಾರವಾದ ಅಗತ್ಯವಿದೆ. ಗುಡಿಯ ಎಡಗಡೆಯ ಭಿತ್ತಿ ಭಾಗ ಮತ್ತು ಅದರ ರಾಚನಿಕ ವಿನ್ಯಾಸಗಳು ಬಾಗೇವಾಡಿಯ ಬಸವೇಶ್ವರ ದೇವಾಲಯದ ಗರ್ಭಗೃಹದ ಭಿತ್ತಿಯನ್ನು ಹೋಲುವುದರಿಂದ ಬಹುಶಃ ಇದೂ ಕೂಡ ೧೧-೧೨ನೆಯ ಶತಮಾನದಲ್ಲಿ ಕಟ್ಟಿಸಿರಬಹುದಾದ ದೇವಾಲಯವಾಗಿದೆ.

## ಉಪಸಂಹಾರ

ಬಾಗೇವಾಡಿ ತಾಲ್ಲೂಕಿನ ಇಂಗಳೇಶ್ವರ ಮತ್ತು ಸುತ್ತಮುತ್ತಲು ಇರುವ ಪ್ರಾಚೀನ ದೇವಾಲಯಗಳು ಕಲ್ಯಾಣ ಚಾಲುಕ್ಯರು, ಕಲಚುರ್ಯರು ಮತ್ತು ಯಾದವ ಅರಸರ ಕಾಲದಲ್ಲಿ ನಿರ್ಮಾಣವಾದವುಗಳು. ಇಂಗಳೇಶ್ವರದಲ್ಲಿರುವ ಸೋಮೇಶ್ವರ ದೇವಾಲಯದ ನಿರ್ಮಿತಿ ಕಲಚುರಿದೊರೆ ವೀರಕುಂತಳಪತಿ ಸೋವಿದೇವನ ಆಡಳಿತಾವಧಿಗೆ ಸಂಬಂಧಿಸಿದ್ದಾಗಿದೆ.[೭] ಪಶ್ಚಿಮಾಭಿಮುಖವಾಗಿರುವ ಈ ದೇವಾಲಯವು ತ್ರಿಕೂಟಾಚಲ ಮಾದರಿಯದು. ದೇವಾಲಯದ ಹರವು ಮತ್ತು ಸಂಖ್ಯೆ ಹೆಚ್ಚಾಗಲು ಕಾರಣ ಇಲ್ಲದಿಲ್ಲ. ಅದು ನಮ್ಮ ಪೂರ್ವಜರ ಸಮನ್ವಯ ಭಾವನೆಗಳ ಸಂಕೇತವೂ ಹೌದು. ಮೂಲದೇವರ ಆರಾಧನೆಯೊಂದಿಗೆ ಇತರ ದೇವತೆಗಳ ಉಪಾಸನೆ ಪ್ರಾರಂಭವಾಯಿತು.

ಕದಂಬ, ಚಾಲುಕ್ಯ ಮತ್ತು ರಾಷ್ಟ್ರಕೂಟರ ಕಾಲದಿಂದಲೂ ಬ್ರಹ್ಮ, ವಿಷ್ಣು, ಮಹೇಶ್ವರರ ತ್ರಿಕೂಟಾಚಲ ದೇವಾಲಯಗಳಿದ್ದವು. ಮುಂದೆ ಬರ ಬರುತ್ತ ಇಂಥವೇ ದೇವತೆಗಳು ಇರಬೇಕೆಂಬ ನಿಯಮದ ಸಡಿಲಿಕೆಯಾಗಿದೆ. ಉದಾಹರಣೆಗೆ ಸೋಮೇಶ್ವರ ದೇವಾಲಯದ ಮುಖ್ಯ ಗರ್ಭಗೃಹಕ್ಕೆ ವೈಷ್ಣವ ದ್ವಾರಪಾಲಕರಿರುವುದರಿಂದ ಅಲ್ಲಿ ವಿಷ್ಣು, ದಕ್ಷಿಣಕ್ಕೆ ಮುಖ ಮಾಡಿರುವ ಗರ್ಭಗೃಹದ ದ್ವಾರಶಾಖೆಯಡಿ ಡಮರುಗಧಾರಿ ಶಿವದ್ವಾರಪಾಲಕರಿರುವುದರಿಂದ ಅಲ್ಲಿ ಶಿವ ಮತ್ತು ಉತ್ತರಕ್ಕೆ ಮುಖ ಮಾಡಿರುವ ಗರ್ಭಗೃಹದ ಬಲದ್ವಾರ ಶಾಖೆಗೆ ಬಿಲ್ಲು ಬಾಣಗಳನ್ನು ಹಿಡಿದ ದೇವನು ಮತ್ತು ಎಡದ್ವಾರ ಶಾಖೆಗೆ ಬಿಲ್ಲು ಬಾಣಗಳನ್ನು ಹಿಡಿದ ದೇವತೆಯನ್ನು ಕಂಡರಿಸಲಾಗಿದೆ. ಹೀಗೆ ಬಾಗಿಲುವಾಡದಲ್ಲಿ ಉಷಾ ಮತ್ತು ಪ್ರತ್ಯುಷಾರವನ್ನು ತೋರಿಸಿರುವ ಅಂಶ ಅಪರೂಪದ ಸಂಗತಿಯಾಗಿದೆ. ಕಲ್ಯಾಣ ಚಾಲುಕ್ಯರ ಅವಧಿಯಿಂದ ಇತ್ತೀಚೆಗೆ ಬ್ರಹ್ಮನ ಬದಲಾಗಿ

ಸೂರ್ಯನನ್ನು ಪೂಜಿಸುವ ಪರಂಪರೆ ಬೆಳೆದು ಬಂದಿರುವುದು ಇದರಿಂದ ದೃಢಪಡುತ್ತದೆ.

ವಿದ್ಯಾಸಂಸ್ಥೆಗಳು ದೇವಾಲಯಗಳಿಗೆ ಹೊಂದಿಕೊಂಡು ವಿಶೇಷವಾಗಿ ತ್ರೈಪುರುಷ ದೇವಾಲಯಗಳ ಜೊತೆಗೆ ಇರುತ್ತಿದ್ದವು. ಹೀಗಿದ್ದಾಗ ತ್ರಿಕೂಟಾಚಲ ದೇವಾಲಯಗಳಲ್ಲಿ ಶಿವ, ವಿಷ್ಣು ಮತ್ತು ಆದಿತ್ಯ ಅಥವಾ ಸರಸ್ವತಿಯರ ಗರ್ಭಗೃಹಗಳು ಇರುತ್ತಿದ್ದವು. ಬ್ರಹ್ಮನ ಸ್ಥಾನದಲ್ಲಿ ವಿದ್ಯಾದೇವತೆಯಾದ ಸರಸ್ವತಿಯೂ ಸ್ಥಾನ ಪಡೆದಿರುವುದು ಉಂಟು.[೮] ಆದರೆ ಸೋಮೇಶ್ವರ ದೇವಾಲಯದಲ್ಲಿ ಮಾತ್ರ ಸೂರ್ಯದೇವನೇ ಇದ್ದಾನೆ.

ಕಲೆ ಮತ್ತು ವಾಸ್ತುಶಿಲ್ಪದ ದೃಷ್ಟಿಯಿಂದ ಈ ದೇವಾಲಯವು ಒಂದು ಉತ್ತಮ ಕಲಾಕೃತಿಯಾಗಿದ್ದು, ಕಾಲಾಂತರದಲ್ಲಿ ಇದರ ಮುಂಭಾಗವನ್ನು ವಿಸ್ತರಿಸಲಾಗಿದೆ. ಆದರೆ ವಿಸ್ತರಿಸಿದ ಭಾಗದ ಕಾಲಮಾನ ಹಾಗೂ ಮೂಲ ದೇವಾಲಯದ ಕಾಲಮಾನಗಳ ಮಧ್ಯೆ ಬಹಳ ಅಂತರವಿಲ್ಲ.

ಇಂಗಳೇಶ್ವರದ ಮಧ್ಯಸ್ಥಾನದಲ್ಲಿರುವ ಸೋಮೇಶ್ವರ (ಸೋಮನಾಥ) ದೇವರ ಕೃಪೆಯಿಂದ ಭುಜಬಲ ಚಕ್ರವರ್ತಿ ರಾಯಮುರಾರಿಯು ಸೋಮೇಶ್ವರರ ದೇವರ ರಾಜ್ಯದ ಉತ್ತರೋತ್ತರ ಅಭಿವೃದ್ಧಿಗಾಗಿ – ಪ್ರವರ್ಧಮಾನಕ್ಕಾಗಿ ಶ್ರಮಿಸುತ್ತಿರುವುದನ್ನು ಶಾಸನದಲ್ಲಿ ಹೀಗೆ ಹೇಳಲಾಗಿದೆ.

**ಸ್ವಸ್ತಿ ಶ್ರೀ ಮತ್ಕಳಚುರ್ಯ್ಯ ಭುಜಬಲ ರಾಯ**
**ಮುರಾರಿ ಸೋಮೇಶ್ವರ ದೇವರ ರಾಜ್ಯಮುತ್ತರೋ**
**ತ್ತರಾಭಿವೃದ್ಧಿ ಪ್ರವರ್ಧಮಾನ ಮಾ ಚಂದ್ರಾರ್ಕತಾರಂಸಲುತ್ತಮಿರ........**[೯]

'ಯಮ ನಿಯಮಾಸನ, ಪ್ರಾಣಾಯಾಮ, ಪ್ರತ್ಯಾಹಾರ, ಧ್ಯಾನಧಾರಣ ಸಮಾಧಿ. ರೂಪಾಷ್ಟಾಂಗಯೋಗ ಸಂಪನ್ನರು, ನಯವಿನಯ ಮಹಿಮಾ ಸಂಪನ್ನರುಂ ಗುರವಾಚರ ಎಂದು ಗುರುವಿನ ಬಗ್ಗೆ ಇದೇ ಶಾಸನದಲ್ಲಿ ಉಲ್ಲೇಖಿಸಲಾಗಿದೆ.

ನಾರಾಯಣ ಗುಡಿಯೂ ಕೂಡ ತ್ರಿಕೂಟಾಚಲ ಮಾದರಿಯಾಗಿದ್ದು, ಇದರ ಕಂಬ, ತೊಲೆ, ದ್ವಾರಶಾಖೆ ಹಾಗೂ ಭಿತ್ತಿನ ಭಾಗಗಳು ಗಟ್ಟಿಯಾದ ಕಪ್ಪುಶಿಲೆಯಿಂದ ಮಾಡಲಾಗಿದೆ. ಹೊರಗೋಡೆಯ ಇಟ್ಟಿಗೆಗಳಿಂದಾಗಿದೆ. ಸೋಮೇಶ್ವರ ದೇವಾಲಯದಂತೆ ಇದರ ನಿರ್ಮಿತಿಯೂ ಕೂಡ ಎಂದು ಅವಧಿಗಳಲ್ಲಿ ಆಗಿದೆಯೆಂದು ತಿಳಿದುಬರುತ್ತದೆ. ಇಲ್ಲಿಯ ಮುಖ್ಯ ಗರ್ಭಗೃಹದಲ್ಲಿರುವ ಸುಂದರವಾದ ವಿಷ್ಣುಮೂರ್ತಿಯು ಕಪ್ಪು ಬಳಪದ ಶಿಲೆಯಿಂದಾಗಿದೆ. ದೇವಾಲಯದ ವಾಸ್ತುಶಿಲ್ಪ ಹಾಗೂ ವಿಷ್ಣುವಿಗ್ರಹದ ಸೂಕ್ಷ್ಮತೆಯನ್ನು ಗಮನಿಸಿದರೆ, ವಿಷ್ಣುಮೂರ್ತಿಯು ಈ ದೇವಾಲಯಕ್ಕೆ ಸಂಬಂಧಿಸಿದ್ದಲ್ಲವೆಂದು ತಿಳಿಯುತ್ತದೆ. ಇದರ ಪೂರ್ವದ ಗೋಡೆಯಲ್ಲಿರುವ ಶಾಸನದಲ್ಲಿ ಊರೊಡೆಗೇರಿಯ ಗೋಪಿನಾಥನಿಗೆ ಇಂಗಳೇಶ್ವರ ಸಾವಿರ ಮಹಾಜನರಿಂದ ಭೂದಾನ, ಅಂಗಡಿ ಹಾಗೂ ಎಣ್ಣೆ ಗಾಣಗಳ ದಾನ ಬಿಟ್ಟ ಬಗ್ಗೆ ಉಲ್ಲೇಖವಿದೆ. ಪೇಶ್ವೆಗಳ ಕಾಲದಲ್ಲಿ ಗೋಪಿನಾಥನ ವಿಗ್ರಹದ ಬದಲಾಗಿ ವಿಷ್ಣು ವಿಗ್ರಹ ಪ್ರತಿಷ್ಠಾಪಿಸಿರುವುದರಿಂದ[೧೦] ಸದ್ಯ ಇದನ್ನು ನಾರಾಯಣ ಗುಡಿ ಎಂದೇ ಕರೆಯಲಾಗುತ್ತಿದೆ. ಅಂದರೆ ಸದ್ಯದ ನಾರಾಯಣಗುಡಿಯೇ ಗೋಪಿನಾಥನ ಗುಡಿಯೆಂದಾಯಿತು. ಅಲ್ಲದೆ ಶಾಸನದಲ್ಲಿರುವ 'ಗೋಪಾಳಕ್ರಷ್ಣಂ ಸಲಹುವನೆರಡ್ಯೆನೂರ್ವ್ವರಂ ಪ್ರೇಮದಿಂದಂ',[೧೧] ಹಾಗೂ ಇದೇ ದೇವಾಲಯದ ಇನ್ನೊಂದು ಶಾಸನದಲ್ಲಿ 'ಶ್ರೀ ಗೋಪಾಳದೇವರಿಗೆ ಶ್ರೀ ಮತ್ತು ಸಾಳವಾಡಿಗೆಯ ನಾಲ್ಕು[೧೨] ಎಂಬ ಸಾಲುಗಳು ಮೇಲಿನ ಅಂಶವನ್ನು ಸ್ಪಷ್ಟಪಡಿಸುತ್ತವೆ. ಈ ದೇವಾಲಯದ ಪ್ರವೇಶ ದ್ವಾರದಲ್ಲಿ ಯಾಳಿಗಳು, ದೇವಸ್ಥಾನದ ಮಾಳಿಗೆಗೆ ಹೋಗಲು ಒಳಭಾಗದಲ್ಲೇ ಇಟ್ಟಿಗೆಯ ಮೆಟ್ಟಿಲುಗಳು ಹಾಗೂ ಹೊರಗೋಡೆಯ ಭಿತ್ತಿಯಲ್ಲಿ ಚಿಕಣಿ ಮಿಥುನ ಶಿಲ್ಪಗಳಿರುವುದು–ಇಲ್ಲಿಯ ಎಲ್ಲ ದೇವಾಲಯಗಳಿಗಿಂತ ಭಿನ್ನವಾದ ಅಂಶಗಳು.

ಶೋಭನದೇವರ ಗುಡಿಯಲ್ಲಿ ಒಂಗು ಗರ್ಭಗೃಹ ಮಾತ್ರ ಇದ್ದು, ಸಭಾಮಂಟಪದ ತೊಲೆಗಳ ಮೇಲೆ ಪತಿಯ ಸೇವೆಯಲ್ಲಿರುವ ಸ್ತ್ರೀ, ಆಮೆ, ಮೊಸಳೆ ಹಾಗೂ ನಿಸರ್ಗ ಸೌಂದರ್ಯದ ಕೆತ್ತನೆ ಇದೆ. ಮಾಳಿಗೆಗೆ ಹೊದಿಸಿದ ಕಲ್ಲು ಚಪ್ಪಡಿಗಳ ನಡುವೆ ಬಿಗಿ ಬಂಧಕ್ಕಾಗಿ ಉಪಯೋಗಿಸಲಾದ ತಾಂತ್ರಿಕ ಗುರುತುಗಳಿವೆ. ಈ ದೇವಾಲಯಕ್ಕೆ 'ಶೋಭನದೇವ' ಎಂಬ ಹೆಸರು ಬರಲು ಅದಕ್ಕೊಂದು ಜನಪದ ಕಥೆ ಮಾತ್ರ ಇದೆ. ಈ ಮೇಲಿನ ಅಂಶಗಳನ್ನು ಪ್ರಥಮ ಬಾರಿಗೆ ಬೆಳಕಿಗೆ ತರಲಾಗಿದೆ.

ಇಂಗಳೇಶ್ವರದಲ್ಲಿರುವ ಕಲ್ಮೇಶ್ವರ ದೇವಾಲಯ, ಬೆಟ್ಟದ ಮೇಲಿರುವ ಸದ್ಯದ ರೇವಣಸಿದ್ಧೇಶ್ವರ ಗುಡಿಯ ಅಕ್ಕಪಕ್ಕದ ಶಿಲ್ಪಗಳು ಹಾಗೂ ಊರಿನ ಹಲವು ರಸ್ತೆಗಳಲ್ಲಿ ಮತ್ತು ಹೊಲಗಳಲ್ಲಿ ಸಾಮಾನ್ಯವಾಗಿ ಕಂಡುಬರುವ ಮೂರ್ತಿಶಿಲ್ಪಗಳು ಮತ್ತು ವೀರಗಲ್ಲುಗಳ ಅಧ್ಯಯನ ಇನ್ನು ನಡೆಯಬೇಕಿದೆ.

(ಪ್ರಬಂಧ ಮಂಡಿಸಿ, ಲೇಖನ ಸಿದ್ಧಪಡಿಸಲು ಮಾರ್ಗದರ್ಶನ ಮಾಡಿದ ಪೂಜ್ಯ ಗುರುಗಳಾದ ಡಾ. ಪಿ.ವಿ. ಕೃಷ್ಣಮೂರ್ತಿ ಹಾಗೂ ಡಾ. ಎಂ.ಜಿ. ನಾಗರಾಜ್‌ರವರಿಗೆ ಉಪಕೃತ.)



# ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ. ಕೊಪ್ಪ ಎಸ್.ಕೆ., ೧೯೯೦, ತರ್ದವಾಡಿ ನಾಡು–ಒಂದು ಅಧ್ಯಯನ, ಪ್ರತಿಭಾ ಪ್ರಕಾಶನ, ಇಂಡಿ, ಪು. ೨೦.

೨. ಡಾ. ಸುಂದರ ಅ., ೧೯೯೫, ನಾಯಕರತ್ನ ಶ್ರೀ ಬಿ.ಕೆ. ಗುಡದಿನ್ನಿ ಅವರ ಅಭಿನಂದನ ಗ್ರಂಥ ; ಬಿಜಾಪುರ ಜಿಲ್ಲೆಯ ಪ್ರಾಗೈತಿಹಾಸ : [illegible] ವರ್ಧಂತಿ ಮಹೋತ್ಸವ ಸಮಿತಿ, ವಿಜಾಪುರ, ಪು. ೧೯೨.

೩. ಪಡಿಗೇರ ವ್ಹಿ.ಎಸ್. 'ಬಸವನ ಬಾಗೇವಾಡಿ ತಾಲ್ಲೂಕಿನಲ್ಲಿಯ ಪುರಾತತ್ವ ಅವಶೇಷಗಳು', ೧೯೯೪, **ಇತಿಹಾಸ ದರ್ಶನ**, ಸಂ. ೯, ಕರ್ನಾಟಕ ಇತಿಹಾಸ ಅಕಾದೆಮಿ (ರಿ.) ಬೆಂಗಳೂರು, ಪು. ೭೫.

೪. ಅದೇ., ಪು. ೭೬.

೫. **ಮೈಸೂರು ಸ್ಟೇಟ್ ಗ್ಯಾಸೆಟಿಯರ್**, ೧೯೬೬, ಬಿಜಾಪುರ ಜಿಲ್ಲೆ, ಸರಕಾರಿ ಮುದ್ರಣಾಲಯ, ಬೆಂಗಳೂರು, ಪು. ೫೦೯.

೬. ಅದೇ., ಪು. ೫೦೯.

೭. ಡಾ. ದೇಸಾಯಿ ಪಿ.ಬಿ. ಮತ್ತು ಇತರರು (ಪುನರ್ಮುದ್ರಣ) ೧೯೮೬ ; ಪು. ೧೬೩, ಶಾಸನ ೧೨೯, ಸಾಲು ೮.

೮. ಗೋಪಾಲರಾವ್ ಹೆಚ್.ಎಸ್., ೧೯೯೩, ಪು. ೧೬೬.

೯. ಡಾ. ದೇಸಾಯಿ ಪಿ.ಬಿ. ಮತ್ತು ಇತರರು (ಪುನರ್ಮುದ್ರಣ) ೧೯೮೬), ಪೂರ್ವೋಕ್ತ, ಪು. ೧೬೫, ಶಾಸನ ೧೨೯, ಸಾಲು ೩೯–೪೦–೪೧.

೧೦. **ಮೈಸೂರು ಸ್ಟೇಟ್ ಗ್ಯಾಸೆಟಿಯರ್**, ವಿಜಾಪುರ ಜಿಲ್ಲೆ, ೧೯೬೬, ಪು. ೫೦೯.

೧೧. ಡಾ. ದೇಸಾಯಿ ಪಿ.ಬಿ. ಮತ್ತು ಇತರರು ೧೯೮೬, ಪೂರ್ವೋಕ್ತ ಪು. ೨೪೩, ಶಾಸನ–೧೯೬, ಸಾಲು ೪–೫.

೧೨. ಅದೇ, ಪು. ೩೯೨. ಶಾಸನ ೬೦೧, ಸಾಲು ೭–೮–೯.

ಡಾ. ರಾಮು ಹಸನಪ್ಪ ಸಜ್ಜನ*

# ಕೋಟದ ರಾಮಲಿಂಗೇಶ್ವರ ಮತ್ತು ಹಿರೇಹೆಸರೂರ ಸಂಗಮೇಶ್ವರ ದೇವಾಲಯಗಳು

ರಾಯಚೂರ ಜಿಲ್ಲೆ ಲಿಂಗಸೂಗುರು ತಾಲೂಕಿನ ಕೋಟ ಮತ್ತು ಹೀರೆಹೆಸರೂರು ಗ್ರಾಮಗಳಲ್ಲಿ ಕಂಡುಬರುವ ರಾಮಲಿಂಗೇಶ್ವರ ಮತ್ತು ಸಂಗಮೇಶ್ವರ ದೇವಾಲಯಗಳ ವಾಸ್ತುಶಿಲ್ಪ ಕಲೆಯು ವಿಶಿಷ್ಟವಾಗಿರುವಲ್ಲಿ ಸದ್ಯ ಅತ್ತ ಗಮನಸೆಳೆಯಲಾಗಿದೆ.

**ಕೋಟದ ರಾಮಲಿಂಗೇಶ್ವರ ದೇವಾಲಯ :** ಕೋಟ ಗ್ರಾಮವು ಲಿಂಗಸೂಗೂರಿನಿಂದ ಉತ್ತರಕ್ಕೆ ೧೦ ಕಿ.ಮೀ. ದೂರವಿದೆ. ಇಲ್ಲಿ ಕ್ರಿ.ಶ. ೧೧ನೇಯ ಶತಮಾನಕ್ಕೆ ಸೇರಿದ ಒಂದು ತ್ರುಟಿತ ಶಾಸನವಿದೆ. ಇದು ಕಲ್ಯಾಣದ ಚಾಲುಕ್ಯ ಅರಸರ ಕಾಲಕ್ಕೆ ಸರಿ ಹೊಂದುತ್ತದೆ. ಸ್ಥಳೀಯರು ಹೇಳುವಂತೆ ಈ ಗ್ರಾಮಕ್ಕೆ ಮೇದರಾಯಪುರ ಅಥವಾ ಮೇದರಾಯನಕೋಟೆ ಎಂದು ಕರೆಯುತ್ತಿದ್ದರು. ಇಲ್ಲಿ ಕಲ್ಯಾಣದ ಚಾಲುಕ್ಯ ಅರಸರ ವಾಸ್ತುಶೈಲಿಯನ್ನು ಹೋಲುವ ಸುಂದರವಾದ ದೇವಾಲಯವಿದೆ. ದೇವಾಲಯಕ್ಕೆ ರಾಮಲಿಂಗೇಶ್ವರ ದೇವಾಲಯವೆಂದು ಈಗಲೂ ಕರೆಯುತ್ತಾರೆ. ದೇವಾಲಯವು ಗ್ರಾಮದ ಪಶ್ಚಿಮಕ್ಕೆ ಹೀರೆಹಳ್ಳದ ಬಲದಂಡೆಯ ಮೇಲೆ ಪೂರ್ವಕ್ಕೆ ಮುಖ ಮಾಡಿ ಕಟ್ಟಲಾಗಿದೆ. ದೇವಾಲಯವು ಕಪ್ಪು ಮತ್ತು ಮರಳು ಮಿಶ್ರಿತ ಬೆಣಚು ಶಿಲೆ ಬಳಸಿ ನಿರ್ಮಿಸಲಾಗಿದೆ.

ಈ ದೇವಾಲಯದ ತಲವಿನ್ಯಾಸ ಏಕಕೂಟ ಮಾದರಿಯಾಗಿದ್ದು ಗರ್ಭಗೃಹ, ಅಂತರಾಳ ನವರಂಗ ಮಂಟಪವನ್ನು ಹೊಂದಿದೆ. ಗರ್ಭಗೃಹದಲ್ಲಿರುವ ಲಿಂಗವನ್ನು ಬೇರೆಡೆ ಸ್ಥಳಾಂತರಿಸಲಾಗಿದೆ. ಗರ್ಭಗೃಹದ ದ್ವಾರಬಂಧವು ಐದು ಶಾಖೆಗಳನ್ನು ಹೊಂದಿದೆ. ಶಾಖೆಗಳಲ್ಲಿ ಪದ್ಮಚಿಕಣಿ ವ್ಯಾಳಶಿಲ್ಪ, ಕಂಬ, ಲತಾಬಳ್ಳಿ, ವಜ್ರಲೇಪನದ ಕೆತ್ತನೆಗಳಿಂದ ಅಲಂಕರಿಸಲಾಗಿದೆ. ಈ ಶಾಖೆಗಳ ಕೆಳಭಾಗದ ತೋರಣದಲ್ಲಿ ನಿಂತ ಶೈವ ದ್ವಾರಪಾಲಕರ ಶಿಲ್ಪಗಳು, ಕೀರ್ತಿಮುಖ, ಚೌರಿಧಾರಿಣಿಯರ ಶಿಲ್ಪಗಳನ್ನು ಕೆತ್ತಲಾಗಿದೆ. ಮೇಲಿನ ಮಂಗಲ ಫಲಕದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ. ಅಂತರಾಳದ ಮೇಲಿನ ತೊಲೆ ಬಿದ್ದುಹೋಗಿದ್ದು ಅದರ ಹೊಸ್ತಿಲು ಮಾತ್ರ ಉಳಿದುಕೊಂಡಿದೆ.



ನವರಂಗ ಮಂಟಪದ ಸುತ್ತಲು ಕಟಾಂಜನ (ಕಕ್ಷಾಸನ)ವಿದ್ದು ಅದರ ಮೇಲೆ ಸುತ್ತಲು ಹತ್ತು ಕಂಬಗಳಿವೆ. ನವರಂಗ ಮಂಟಪದ ಮಧ್ಯ ನಾಲ್ಕು ಕಂಬಗಳಿವೆ. ಒಟ್ಟು ಹದಿನಾಲ್ಕು ಕಂಬಗಳಿವೆ. ಮಂಟಪದ ಮಧ್ಯದ ಕಂಬಗಳು ಪೀಠಚೌಕ ಪಟ್ಟಿಕೆ.ಕೋನಾಕಾರ ಕಾಂಡಪಟ್ಟಿಕೆ, ಗೋಲಾಕಾರ ಮುಚ್ಚಳ, ಚೌರಶಿಲಾ ಫಲಕ, ಸಾದಾಬೋದುಗೆ ಹೊಂದಿದೆ. ಕಟಾಂಜನದ ಒಳಭಾಗದಲ್ಲಿ ಹೂ ಕೆತ್ತನೆಯಿಂದ ಅಲಂಕರಿಸಲಾಗಿದೆ. ಮಧ್ಯದ ಕಂಬಗಳ ಪಟ್ಟಿಕೆಗಳ ಮೇಲೆ ಗಣೇಶ ಭೈರವ ಶಿಲ್ಪಗಳನ್ನು ಕೆತ್ತಲಾಗಿದೆ. ಈ ಮಂಟಪದ ದಕ್ಷಿಣ ಮತ್ತು ಪೂರ್ವಕ್ಕೆ ಎರಡು ಪ್ರವೇಶ ದ್ವಾರಗಳಿವೆ. ಹೊರ ಕಂಬಗಳ ಮೇಲೆ ಮುಂಚಾಚಿದ ಛಾವಣಿಗಳಿವೆ. ಇಲ್ಲಿ ದೊಡ್ಡ ಎರಡು ನಾಗಶಿಲ್ಪಗಳನ್ನು ಪ್ರತಿಷ್ಠಾಪಿಸಲಾಗಿದೆ.

* ಶಿಕ್ಷಕರು, ಸರ್ಕಾರಿ ಪ್ರಾಥಮಿಕ ಶಾಲೆ, ಸಿಂಗನಹಳ್ಳಿ, ಧಾರವಾಡ – ೦೩

ಹೊರಭಾಗದ ಅಲಂಕಾರದಲ್ಲಿ ಅಧಿಷ್ಠಾನ ಪ್ರಮುಖವಾಗಿದ್ದು, ಅದರಲ್ಲಿ ಉಪಾನ, ಜಗತಿ, ಕಂಪ, ಕಂಠ, ತ್ರಿಪಟ್ಟಿ ಕುಮುದ, ಕಪೋತ, ವ್ಯಾಳಮಾಲಪಟ್ಟಿಕೆ ವೇದಿಕೆ ಭಾಗಗಳಿವೆ. ಮಂಟಪದ ಕೆಳಗಿನ ಅಧಿಷ್ಠಾನದಲ್ಲಿ ಎರಡು ಸಾಲಿನ ಹೂ ಪಟ್ಟಿಕೆಯಿದೆ. ಅಧಿಷ್ಠಾನದ ಮೇಲೆ ಗೋಡೆ ನಿರ್ಮಾಣವಾಗಿದ್ದು ಹಿಂಬಣಿ–ಮುಂಬಣಿ ಹೊಂದಿದೆ. ಹಿಂಬಣಿಯಲ್ಲಿ ದ್ರಾವಿಡಶಿಖರ ಹೊಂದಿದ ಕಂಬ ಪಂಜರಗಳಿವೆ. ಮುಂಬಣಿಯಲ್ಲಿ ದ್ರಾವಿಡಶಿಖರ ಹೊಂದಿದ ಕಂಬ ಪಂಜರಗಳಿವೆ. ಮುಂಬಣಿಯಲ್ಲಿ ಎರಡು ಕಂಬಗಳು ದ್ರಾವಿಡ ಸ್ತೂಪಿಯುಳ್ಳ ಪರಿಸರ ಕೋಷ್ಠಕಗಳಿವೆ. ಗೋಡೆಯ ಮೇಲೆ ಇರುವ ಕುಂಬೆ (ಮೊದುಗೆ) ಬಿದ್ದು ಹೋಗಿದೆ. ದೇವಾಲಯು ಪೂಜೆಯಿಲ್ಲದೆ ಇರುವುದರಿಂದ ಶಿಥಿಲಾವಸ್ಥೆಯಲ್ಲಿದೆ.

**ಹೀರೆಹೆಸರೂರ ಸಂಗಮೇಶ್ವರ ದೇವಾಲಯ :** ಹೀರೆಹೆಸರೂರು ಗ್ರಾಮವು ಲಿಂಗಸೂಗೂರು ತಾಲೂಕಿನ ಪೂರ್ವಕ್ಕೆ ೧೬ ಕಿ.ಮೀ. ದೂರದಲ್ಲಿದೆ. ಕ್ರಿ.ಶ. ೧೨ನೆಯ ಶತಮಾನಕ್ಕೆ ಮತ್ತು ಕ್ರಿ.ಶ. ೧೩ನೆಯ ಶತಮಾನಕ್ಕೆ ಸಂಬಂಧಿಸಿದ ಎರಡು ಶಾಸನಗಳಿದ್ದು, ಅವು ಭಾಗಶಃ ತ್ರುಟಿತಗೊಂಡಿವೆ. ಗೌಡ ಮಾಜಿಸೆಟ್ಟಿ, ಸೋಮಿಸೆಟ್ಟಿ, ಪಾರಿಸೆಟ್ಟಿ, ಪುಗ್ಗಿಸೆಟ್ಟಿಗಳು, ಉತ್ತರಾಯಣ ಸಂಕ್ರಾಂತಿಯಂದು ಯಾವುದೋ ಕಾರ್ಯಕ್ಕೆ ಎಲೆ ಅಡಕೆ, ಮುಂತಾದ ವಸ್ತುಗಳನ್ನು ತೆರಿಗೆಗಳ ರೂಪದಲ್ಲಿ ದಾನ ಬಿಟ್ಟಂತೆ ತಿಳಿಯುತ್ತದೆ. ಕ್ರಿ.ಶ. ೧೦೨೦ರ ಶಾಸನವು ಕರಡಿಕಲ್ಲು ಮೂನ್ನೂರು ನಾಡಿಗೆ ಸೇರಿದ ಹೀರೆಹೆಸರೂರ ಗ್ರಾಮದ ಜೈನಬಸದಿಗೆ ಮೊಸಂಗಿಯ (ಮಸ್ಕಿ) ತಂತ್ರಪಾಳನಾದ ಕಡಳಿನೊಗೆತ್ತಯ್ಯನು ಕೆಲವು ಮತ್ತರ ಭೂಮಿಯನ್ನು ದಾನಬಿಟ್ಟ ವಿಷಯ ಉಲ್ಲೇಖಿಸುತ್ತದೆ. ಕಲ್ಯಾಣದ ಚಾಲುಕ್ಯ ಅರಸರ ಕಾಲಕ್ಕೆ ಸರಿಹೊಂದುವ ಗ್ರಾಮದ ಹೊರಗೆ ಪೂರ್ವಕ್ಕೆ ಮುಖಮಾಡಿ ಕಟ್ಟಲಾದ ಸಂಗಮೇಶ್ವರ ದೇವಾಲಯವನ್ನು ಕಪ್ಪು ಮಿಶ್ರಿತ ಬೆಣಚುಕಲ್ಲು ಬಳಸಿ ಕಟ್ಟಲಾಗಿದೆ.

ಈ ದೇವಾಲಯ ಏಕಕೂಟ ತಲವಿನ್ಯಾಸ ಮಾದರಿ ಹೊಂದಿದೆ. ತಲವಿನ್ಯಾಸದಲ್ಲಿ ಗರ್ಭಗೃಹ, ಅರ್ಧ ಮಂಟಪ, ನವರಂಗ ಮಂಟಪ ಹೊಂದಿದೆ. ಮುಂದಿನ ಮುಖಮಂಟಪವು ಬಿದ್ದುಹೋಗಿದೆ. ಗರ್ಭಗೃಹದಲ್ಲಿ ಯೋನಿಪಾಣಿಪೀಠದ ಮೇಲೆ ಈಶ್ವರ ಲಿಂಗವಿದೆ. ಗರ್ಭಗೃಹದ ದ್ವಾರದ ಶಾಖೆಯಲ್ಲಿ ವಜ್ರ, ಸೂರಳಬಳ್ಳಿಯ ಚಿಕಣಿಶಿಲ್ಪ ಗಂಧರ್ವಶಿಲ್ಪ ಕಂಬ, ವ್ಯಾಳಶಿಲ್ಪ, ಸಾದಾಪದ್ಮ ಕೆತ್ತನೆಯ ಐದು ಶಾಖೆಗಳಿವೆ. ಗರ್ಭಗೃಹದ ಮೇಲಿನ ಮಂಗಲ ಫಲಕದಲ್ಲಿ ಗಜಲಕ್ಷ್ಮಿ ಶಿಲ್ಪವಿದೆ. ಕೆಳಗಡೆ ಶೈವದ್ವಾರಪಾಲಕರು, ಚೌರಿಧಾರಿಣಿಯರ ಶಿಲ್ಪದ ಕೆತ್ತನೆಯನ್ನು ಮಾಡಲಾಗಿದೆ. ನವರಂಗ ಮಂಟಪದಲ್ಲಿ ನಾಲ್ಕು ಕಂಬಗಳಿದ್ದು, ಸಾದಾ ಕೆತ್ತನೆಯನ್ನು ಹೊಂದಿವೆ. ದೇವಾಲಯದ ಹೊರಗೋಡೆಯಲ್ಲಿ ದ್ರಾವಿಡ ಶಿಖರ ಸ್ತೂಪಿಯುಳ್ಳ ಎರಡು ದೇವಕೋಷ್ಠಗಳಿವೆ. ಒಂದರಲ್ಲಿ ಮಹಿಷಮರ್ದಿನಿಯ ಶಿಲ್ಪ ಇನ್ನೊಂದರಲ್ಲಿ ವಿಷ್ಣುಶಿಲ್ಪವನ್ನು ಪ್ರತಿಷ್ಠೆ ಮಾಡಲಾಗಿದೆ. ನವರಂಗ ಮಂಟಪದಲ್ಲಿ



ನಾಲ್ಕು ಕಂಬಗಳಿದ್ದು, ಪೀಠ, ಪಟ್ಟಿಕೆ, ಎಂಟು ಮತ್ತು ೧೬ ಕೋನಕಾಂಡ ಪಟ್ಟಿಕೆ, ವೃತ್ತ ಚೌಕಫಲಕ, ಸಾದಾ ಬೋದುಗೆ ಭಾಗಗಳನ್ನು ಹೊಂದಿವೆ, ನವರಂಗ ಮಂಟಪದ ಪೂರ್ವ ಮತ್ತು ದಕ್ಷಿಣವಾಗಿ ಎರಡು ದ್ವಾರಗಳಿವೆ. ದಕ್ಷಿಣದ್ವಾರ ಸಂಪೂರ್ಣ ಬಿದ್ದುಹೋಗಿದೆ. ಅಧಿಷ್ಠಾನವು ಎತ್ತರವಾದ ಉಪಾನ, ಜಗತಿ, ಕಂಪ, ಕಂಠ ತ್ರಿಪಟ್ಟಕುಮುದ, ಕಂಪ, ಕಂಠ, ಕಪೋತಗಳನ್ನು ಹೊಂದಿದೆ. ಇದರ ಮೇಲಿನ ಗೋಡೆಯ ಹಿಂಬಣಿ–ಮುಂಬಣಿ ಹೊಂದಿದ್ದು ಅವುಗಳು ಅರ್ಧಗಂಬದ ಮೇಲೆ ದ್ರಾವಿಡ ಶೈಲಿಯ ಶಿಖರವುಳ್ಳ ಕಂಬ ಮಂಜರಗಳಿವೆ. ಮೇಲಿನ ಕಪೋತ ಸ್ವಲ್ಪ ಮಂದಕ್ಕೆ ಚಾಚಿದೆ. ಇದರ ಮೇಲಿನ ಭಾಗ ಬಿದ್ದು ಹೋಗಿದೆ.

ಈ ದೇವಾಲಯವು ಇಂದಿಗೂ ಪೂಜೆ ಪುನಸ್ಕಾರ ಗೊಳ್ಳುವುದರಿಂದ ಗರ್ಭಗೃಹದ ಭಾಗವು ಸುಸ್ಥಿತಿಯಲ್ಲಿದೆ. ಒಟ್ಟಿನಲ್ಲಿ ಈ ಎರಡು ದೇವಾಲಯಗಳು ವಾಸ್ತುಶಿಲ್ಪಕಲೆಯ ದೃಷ್ಟಿಯಿಂದ ಒಂದೇ ಮಾದರಿ (ಶೈಲಿ)ಯವಾಗಿವೆ. ಇವುಗಳ ರಕ್ಷಣೆಯನ್ನು ಮಾಡುವುದು ಇಂದಿನ ಅವಶ್ಯಕತೆಯಾಗಿದೆ.



ಶಿವಪ್ಪ ನ. ನೀಲರಗಿ*

# ತಾಳಿಕೋಟೆಯ ದೇಗುಲಗಳು

## ಪೀಠಿಕೆ

ಹಗರಟಗಿ-೩೦೦ರ ನಾಡಿನಲ್ಲಿಯ ತಾಳಿಕೋಟೆಯು ಬಿಜಾಪುರ ಜಿಲ್ಲೆಯ ತಾಲೂಕು ಸ್ಥಳ. ಮುದ್ದೇಬಿಹಾಳದಿಂದ ಈಶಾನ್ಯಕ್ಕೆ ಸುಮಾರು ೩೫ ಕಿ.ಮೀ.ಗಳ ಅಂತರದಲ್ಲಿ ಪವಿತ್ರ ದೋಣಿ ನದಿ ದಡದಲ್ಲಿದೆ. ಕ್ರಿ.ಶ.೧೫೬೫ ರ ತಾಳಿಕೋಟೆಯ ಯುದ್ಧದಿಂದಲೂ ಈ ಊರು ಪ್ರಸಿದ್ಧವಾಗಿದೆ. ತಾಳಿಯಕೋಟೆ, ತಳೆಕೋಟೆ (ತಡೆಕೋಟೆ), ತಾಳಿಕೋಟೆ ಎಂದು ಪ್ರಾಚೀನ ಶಾಸನಗಳಲ್ಲಿಯೂ ಮತ್ತು ಜನಪದಿಗರ ಹಾಡಿನಲ್ಲಿಯೂ ಈ ಊರಿನ ಹೆಸರು ಪ್ರಯೋಗವಾಗಿದೆ.ಈ ಊರಿನಲ್ಲಿರುವ ರಾಷ್ಟ್ರಕೂಟರ ಕಾಲದ ಉತ್ತರಾರ್ಧಕ್ಕೆ ಸೇರಿದ ರಾಮಲಿಂಗೇಶ್ವರ (ಸೋಮನಾಥ) ದೇಗುಲ (ಕ್ರಿ.ಶ.೧೧೮೧), ಸಿದ್ದೇಶ್ವರ ದೇಗುಲ, ಬೈಸೇಶ್ವರ ದೇಗುಲ (ಗಣಮಠ ಕ್ರಿ.ಶ.೧೧೮೪), ರಾಜೇವಾಡೆಯಲ್ಲಿರುವ ಹಿಂದೂ ದೇಗುಲ, ಮಹಾದೇವಮಠ ಹಾಗೂ ನಗರದ ಮಧ್ಯದಲ್ಲಿರುವ ಆಂಜನೇಯ ಗುಡಿಯಲ್ಲಿರುವ ಸುಂದರ ಮತ್ತು ವಿಶೇಷವಾದ ಮಕರ ತೋರಣ ಪರಿಚಯವಿಲ್ಲಿದೆ.

**ರಾಷ್ಟ್ರಕೂಟರ ರಾಮಲಿಂಗೇಶ್ವರ ದೇಗುಲ :** 'ತೆವರೆಲ್ಲಂ ದೇವತಾಮಂದಿರಂ' ಎಂಬ ಭಾರತೀಯರ ಉಕ್ತಿಯಂತೆ ದೋಣಿ ನದಿ ದಡದ ಪವಿತ್ರ ಹಾಗೂ ವಿಶಾಲವಾದ ಈ ದೇಗುಲವು ನಿರ್ಮಿತವಾಗಿದೆ. ಈ ದೇಗುಲದ ಕಂಬದಲ್ಲಿರುವ ಕ್ರಿ.ಶ. ೧೧೮೧ರ ಕಲಚೂರ್ಯರ ಅಹವಮಲ್ಲನ ಕಾಲದ ಶಾಸನವು ಈ ದೇಗುಲವನ್ನು ಸೋಮನಾಥ ದೇಗುಲವೆಂದು ಕರೆದಿದ್ದು ಹಗರಟಗೆನಾಡ ರಾಜಾಧಿಕಾರಿ ದಂಡನಾಯಕ ಪದ್ಮರಸನು ಮಹಾಪ್ರಧಾನ ಲಕ್ಷ್ಮೀದೇವರಸನ ಅನುಮತಿಯಿಂದ ಹಗರಟ್ಟಿಗೆ-೩೦೦ರ ನಾಡಿನಲ್ಲಿಯ ಪ್ರತಿ ಹಳ್ಳಿಯಿಂದ ಒಂದು ಹೊನ್ನು ಕೂಡಿಸಿ ತಾಳಿಕೋಟೆಯ ಸೋಮನಾಥ ದೇವರಿಗೆ ದಾನ ನೀಡಿದುದನ್ನು ಈ ದೇಗುಲದ ಸ್ತಂಭ ಶಾಸನದಿಂದ ನಮಗೆ ತಿಳಿದುಬರುವುದು. ಅಹವಮಲ್ಲನ ಶಾಸನವು ಈ ದೇಗುಲವನ್ನು ಉಲ್ಲೇಖಿಸುವ ಅತ್ಯಂತ ಪ್ರಾಚೀನ ಶಾಸನವಾಗಿದ್ದು, ದೇಗುಲಕ್ಕೆ ದಾನಗೈದುದನ್ನು ಹೇಳುತ್ತದೆ. ಹೊರತಾಗಿ, ಈ ದೇಗುಲದ ನಿರ್ಮಾಣದ ಬಗ್ಗೆ ಮೌನವಾಗಿರುವುದರಿಂದ ಕ್ರಿ.ಶ. ೧೧೮೧ ಕ್ಕಿಂತಲೂ ಪೂರ್ವದಲ್ಲಿಯೇ ಈ ದೇಗುಲದ ನಿರ್ಮಾಣವಾಗಿರಬಹುದಾಗಿದೆ. ಅದೇ ರೀತಿಯಾಗಿ ಕ್ರಿ.ಶ. ೧೨೨೫ರ ದೇವಗಿರಿ ಯಾದವರ ಸಿಂಘಣನ ಕಾಲದ ಶಾಸನವು ಮಹಾ ಮಾಂಡಳಿಕ ಮಗರಮುರಾರಿ, ಚೈತಪಾಳ ನಾಯಕ ಮತ್ತು ಮಾಣಿಕಾದೇವಿಯರಿಂದ ಆ ದೇಗುಲವನ್ನು ಸೋಮನಾಥ ದೇವರಿಗೆ ಭೂದಾನ ಮಾಡಿದ ವಿವರಣೆ ಇದೆ. ಹೀಗೆ ಮೇಲಿನ ಎರಡೂ ಶಾಸನಗಳು ಈ ದೇಗುಲವನ್ನು ಸೋಮನಾಥ ದೇಗುಲವೆಂದು ಕರೆದಿವೆಯಲ್ಲದೇ ೧೨ ಮತ್ತು ೧೩ನೇ ಶತಮಾನದಲ್ಲಿ ಈ ತ್ರಿಕೂಟಾಚಲ ದೇಗುಲವು ಉಚ್ಛ್ರಾಯ ಸ್ಥಿತಿಯಲ್ಲಿ ಇದ್ದುದನ್ನು ತಿಳಿಸುತ್ತವೆಯಲ್ಲದೇ ಈ ಎರಡು ಶಾಸನಗಳು ದತ್ತಿ ದಾನಗಳನ್ನು ದೇವಾಲಯಕ್ಕೆ ನೀಡಿದ್ದನ್ನು ಸ್ಪಷ್ಟಪಡಿಸುತ್ತವೆ.

ಈ ರಾಮಲಿಂಗೇಶ್ವರ ದೇಗುಲವು ಪೂರ್ವಾಭಿಮುಖವಾಗಿದ್ದು, ಮೂರು ಗರ್ಭಗೃಹಗಳು, ಮೂರು ಅಂತರಾಳಗಳು ಹಾಗೂ ಒಂದು ನವರಂಗ ಮಂಟಪವನ್ನೊಳಗೊಂಡಿವೆ. ಆದರೆ ದಕ್ಷಿಣ ಗರ್ಭಗೃಹವು ನಾಶವಾಗಿದ್ದು, ದ್ವಾರ ಬಾಗಿಲು ಮತ್ತು ಅಂತರಾಳದ ಎರಡು ಕಂಬಗಳು ಮಾತ್ರ ಉಳಿದಿವೆ. ಈ ಕಂಬಗಳು ಸಿಂಹಮುಖ, ಹಂಸ, ಗಂಧರ್ವರ ಯಾನದೃಶ್ಯ ಮುಂತಾದವುಗಳಿಂದ ಕೂಡಿವೆ.

ದೇಗುಲದ ಪೂರ್ವಕ್ಕೆ ಮುಖಮಾಡಿದ ಗರ್ಭಗೃಹದ ಪ್ರವೇಶದ್ವಾರದ ಲಲಾಟದಲ್ಲಿ ಗಜಲಕ್ಷ್ಮಿ ಶಿಲ್ಪವಿದ್ದು, ದ್ವಾರಕ್ಕೆ ಪದ್ಮ ಅರ್ಧಗಂಬ. ಇಕ್ಕೆಲಗಳಲ್ಲಿ ಶೈವ ದ್ವಾರಪಾಲಕರಿದ್ದಾರೆ. ಈ ದೇಗುಲವು ಒಟ್ಟು ೨೪ ಸ್ತಂಭಗಳಿಂದೊಡಗೂಡಿದ ತ್ರಿಕೂಟಾಚಲ ದೇಗುಲವಾಗಿದೆ. ಕ್ರಿ.ಶ. ೧೧೮೧ ರ ಕಲಚೂರ್ಯರ ಅಹವಮಲ್ಲನ ಶಾಸನದ ಪ್ರಕಾರ ಇದೊಂದು ಸೋಮನಾಥ ದೇಗುಲವಾಗಿದ್ದು, ಮೂಲತಃ ಈ ದೇಗುಲದ

*ಉಪವಿದ್ಯುತ್ ಪರಿವೀಕ್ಷಕ ಕಛೇರಿ, ೨೪೦, ಜಿಲ್ಲಾ ಆಡಳಿತ ಭವನ (ಮಿನಿ ವಿಧಾನಸೌಧ) ನವನಗರ, ಬಾಗಲಕೋಟೆ.

ಗರ್ಭಗೃಹದಲ್ಲಿ ಮೊದಲು ಶಿವಲಿಂಗವೇ ಇದ್ದಿರಬಹುದಾಗಿದೆ. ನಂತರ ಕಾಲದಲ್ಲಿ ಈ ದೇಗುಲದ ಜಗತಿಯ ಮೇಲೆ ಅಮೃತ ಶಿಲೆಯಲ್ಲಿ ನಿರ್ಮಿಸಿದ ರಾಮ, ಸೀತೆ ಹಾಗೂ ಲಕ್ಷ್ಮಣರ ಮೂರ್ತಿಗಳನ್ನು ಪ್ರತಿಷ್ಠಾಪಿಸಿದ್ದರಿಂದಾಗಿ ಈ ದೇಗುಲವನ್ನು ರಾಮಲಿಂಗೇಶ್ವರ ದೇಗುಲವೆಂದು ಕರೆದಿರಬಹುದಾಗಿದೆ. ಮೂರ್ತಿಗಳ್ಳರು ಈ ಮೂರ್ತಿಗಳ ಕಾಲನ್ನು ಕತ್ತರಿಸಿ ಮೇಲ್ಭಾಗವನ್ನು ಕದ್ದು ಒಯ್ದಿದ್ದರಿಂದಾಗಿ ಇಂದಿನವರೆಗೂ ಈ ದೇಗುಲ ಗರ್ಭಗೃಹದ ಜಗತಿಯ ಮೇಲೆ ರಾಮ, ಸೀತೆ ಹಾಗೂ ಲಕ್ಷ್ಮಣರ ಅಮೃತ ಶಿಲೆಯ ಕಾಲುಗಳು ಮಾತ್ರ ಉಳಿದಿವೆ. ನಕ್ಷತ್ರ ಮಾದರಿಯ ಅಧಿಷ್ಠಾನ, ಉಪಾನ, ಜಗತಿ, ಕಂಪಕಂಠ, ಕಪೋತ ಪಟ್ಟಿಕೆಗಳನ್ನು ಹೊಂದಿದ ಈ ದೇಗುಲ ತಲ ವಿನ್ಯಾಸದ ದೃಷ್ಟಿಯಿಂದ ಅತ್ಯಂತ ಮಹತ್ವದ ದೇಗುಲವಾಗಿದೆ.

ದಕ್ಷಿಣಕ್ಕೆ ಮುಖ ಮಾಡಿರುವ ಗರ್ಭ ಗೃಹದಲ್ಲಿ ಇತ್ತೀಚೆಗೆ ಸ್ಥಾಪಿಸಿದ ಶಿವಲಿಂಗವಿದೆ. ಗರ್ಭಗೃಹದ ಲಲಾಟದಲ್ಲಿ ಗಜಲಕ್ಷ್ಮೀ ಶಿಲ್ಪವಿದ್ದು, ಮೇಲ್ಭಾಗದಲ್ಲಿ ವೇಸರ ಶೈಲಿಯ ಮೂರು ಶಿಖರಗಳಿಂದ ಕೂಡಿದೆಯಲ್ಲದೇ ಆ ಶಿಖರಗಳು ಬಿಳಿಜೋಳದ ತೆನೆಯಂತಿವೆ. ಇಕ್ಕೆಲಗಳಲ್ಲಿ ತ್ರಿಶೂಲ, ಡಮರು ಹಿಡಿದು ನಿಂತಿರುವ ಶೈವ ದ್ವಾರಪಾಲಕರಿದ್ದಾರೆ. ಅಂತರಾಳದ ಪ್ರವೇಶದಲ್ಲಿ ಚೈತ್ಯಾಕಾರದ ಕೆತ್ತನೆಗಳಿಂದ ಕೂಡಿದ ಎರಡು ಕಂಬಗಳಿದ್ದು, ವಾಸ್ತುಶಿಲ್ಪ ಲಕ್ಷಣಗಳಿಂದ ಬದಾಮಿ ಚಾಲುಕ್ಯರ ಶೈಲಿಯನ್ನೊಳಗೊಂಡಿವೆ. ದೇಗುಲದ ಎಲ್ಲ ಅಂತರಾಳಗಳಲ್ಲಿ (ಭುವನೇಶ್ವರಿ) ಅಲಂಕಾರಿಕವಾದ ಕಮಲದ ಮೊಗ್ಗನ್ನು ಕೆತ್ತಲಾಗಿದ್ದು, ಇವೂ ಸಹ ಬದಾಮಿ ಚಾಲುಕ್ಯರ ಶಿಲ್ಪವನ್ನು ಹೋಲುತ್ತವೆ. ತ್ರಿಕೂಟಾಚಲ ದೇಗುಲದ ಗೋಪುರ ಮತ್ತು ಶಿಖರಗಳು ಬಿದ್ದುಹೋಗಿದ್ದು, ಅವುಗಳ ಮೂಲ ಸ್ವರೂಪ ಯಾವ ರೀತಿಯಾಗಿತ್ತೆಂಬುದು ತಿಳಿದು ಬರುವುದಿಲ್ಲವಾದರೂ, ದೇಗುಲದ ಹೊರಗೋಡೆಯ ಮೇಲೆ ಕೆತ್ತಿರುವ ಉಬ್ಬುಶಿಲ್ಪದ ದೇಗುಲದ ಮಾದರಿ ನಕ್ಷೆಯನ್ನು (Master Plan) ವೀಕ್ಷಿಸಿದರೆ, ಇವು ದ್ರಾವಿಡ ಶೈಲಿಯ ಗೋಪುರಗಳಾಗಿದ್ದು, ಗೋಪುರದ ಪಕ್ಕದಲ್ಲಿ ನೆಗೆಯುವ ಭಂಗಿಯಲ್ಲಿರುವ ಸಿಂಹಗಳ ಶಿಲ್ಪವನ್ನು ಕೆತ್ತಲಾಗಿದೆ. ಉಬ್ಬುಶಿಲ್ಪ ದಲ್ಲಿ ದೇಗುಲದ ಕಳಸವನ್ನೂ ಸಹ ತೋರಿಸಲಾಗಿದೆ. ಈ ಉಬ್ಬುಶಿಲ್ಪದ ಪಕ್ಕದಲ್ಲಿಯೇ ಸುಂದರವಾದ ಒಂದು ವೀರಗಲ್ಲು ಇದೆ.

**ವಿಶೇಷವಾದ ಮಕರ ತೋರಣ :** ಗರ್ಭಗೃಹ ಮತ್ತು ನವರಂಗ ಮಂಟಪದ ಮಧ್ಯದ ತೆರೆದ ಅಂತರಾಳದ ಪ್ರವೇಶದಲ್ಲಿ ಎರಡೆರಡು (೪) ಕಂಬಗಳು ಹೊಂದಿಕೊಂಡು ಅವುಗಳ ಮೇಲ್ಭಾಗದಲ್ಲಿ ಸುಂದರವಾದ ಮಕರ ತೋರಣವಿದೆ. ಹೂಬಳ್ಳಿ, ಹಾರ, ಮಕರ ತೋರಣಗಳು ಮತ್ತು ಚಾಮರಧಾರೆಯರಿಂದ ಅಲಂಕೃತಗೊಂಡಿರುವ ಇದರ ಮಧ್ಯದಲ್ಲಿ ನೃತ್ಯಭಂಗಿಯಲ್ಲಿರುವ ನಟರಾಜ, ಎಡಬಲದಲ್ಲಿ ಗದೆ, ಪಾಶ ಮತ್ತು ಪದ್ಮ ಹಿಡಿದ ಬ್ರಹ್ಮ ಮತ್ತು ವಿಷ್ಣುವಿನ ಶಿಲ್ಪಗಳು ಇವೆ. ಮಕರ ತೋರಣದ ಬಲಭಾಗದಲ್ಲಿ ಸುಂದರವಾದ ನೃತ್ಯ ಗಣಪತಿ ಹಾಗೂ ಎಡಭಾಗದಲ್ಲಿ ಉಗ್ರನರಸಿಂಹನು ಹಿರಣ್ಯಕಶಿಪುವನ್ನು ತನ್ನ ತೊಡೆಯ ಮೇಲಿರಿಸಿಕೊಂಡು ಹೊಟ್ಟೆಯನ್ನು ಬಗೆಯುತ್ತಿರುವ ದೃಶ್ಯವಿದೆ. ಸುಂದರವಾದ ಮಕರಗಳ ಮೇಲ್ಗಡೆ ಗಂಧರ್ವ ದಂಪತಿಗಳ ಯಾನ ದೃಶ್ಯವಿದೆ. ಮಕರಗಳ ಬಾಲವನ್ನು ಶಿಲ್ಪಿಯು ಅಲಂಕಾರಿಕವಾಗಿ ಕೆತ್ತಿದ್ದಾನೆ. ಶಿಲ್ಪಕಲಾ ಲಕ್ಷಣಗಳಿಂದ ಈ ಮಕರ ತೋರಣ ಹಾಗೂ ಈ ತೋರಣವನ್ನು ಹೊತ್ತು ನಿಂತ ಕಂಬಗಳು ಕ್ರಿ.ಶ. ಸುಮಾರು ೯ಳ೫ರ ರಾಷ್ಟ್ರಕೂಟರ ಕಾಲದ ಉತ್ತರಾರ್ಧಕ್ಕೆ ಸೇರಿದವುಗಳಾಗಿವೆ ಎಂದು ಹೇಳಬಹುದಾಗಿದೆ. ಬಹುಶಃ ಹಾಳಾದ ಬದಾಮಿ ಚಾಲುಕ್ಯರ ಹಾಗೂ ರಾಷ್ಟ್ರಕೂಟರ ದೇಗುಲಗಳ ಅವಶೇಷಗಳಿಂದ ಈ ದೇಗುಲವನ್ನು ನಿರ್ಮಿಸಿರಬಹುದೆಂದು ಹೇಳಬಹುದು.

**ಕಾಳಾಮುಖ ಯತಿಯ ಶಿಲ್ಪ :** ಸುಮಾರು ೭ನೇ ಶತಮಾನದಿಂದಲೂ ಕರ್ನಾಟಕದಲ್ಲಿ ತಾಂತ್ರಿಕ ಪದ್ಧತಿಯ ಆಚರಣೆಯ ಕೌಳ ಮತ್ತು ಕಾಪಾಲಿಕ ಮತಗಳು ಪ್ರಚಲಿತದಲ್ಲಿದ್ದು, ಈ ಪಂಥೀಯರು ವಿಶೇಷವಾಗಿ ಭೈರವನನ್ನು ಪೂಜಿಸುತ್ತಿದ್ದರೆಂದು ತಿಳಿದುಬರುತ್ತದೆ. ತಾಳಿಕೋಟೆಯು ರಾಷ್ಟ್ರಕೂಟರ ಕಾಲದಿಂದಲೂ ಪಾಶುಪತ, ಕೌಳ, ಕಾಳಾಮುಖ ಮತ್ತು ಕಾಪಾಲಿಕ ಮುಂತಾದ ಶೈವ ಪರಂಪರೆಯ ಮತಗಳ ಕೇಂದ್ರವಾಗಿತ್ತೆಂಬುದಕ್ಕೆ ಈ ಊರಿನಲ್ಲಿ ದೊರೆತಿರುವ ಭೈರವನ ಮೂರ್ತಿಗಳೇ ಸಾಕ್ಷಿಯಾಗಿವೆ. ಈ ಊರಿನ ಪಶ್ಚಿಮದ ದೋಣಿ ನದಿ ದಂಡೆಯ ಭೀಮನ ಭಾವಿಯಲ್ಲಿರುವ ಭೈರವನ ಮೂರ್ತಿಯು ಅತ್ಯಂತ ಸುಂದರವಾಗಿದೆ. ಅದೇ ರೀತಿಯಾಗಿ ಮಹದೇವ ಮಠದಲ್ಲಿ ಎರಡು ಸುಂದರವಾದ ಭೈರವನ ಮೂರ್ತಿಗಳಿವೆ. ಊರಿನ ಭಾಗದ ಹಾಳಾದ ದೇಗುಲವೊಂದರಲ್ಲಿ ಚತುರ್ಭುಜಗಳಿಂದ ಕೂಡಿದ ಭೈರವ ಮತ್ತು ಭೈರವಿಯರ ಮೂರ್ತಿಗಳಿವೆ. ಅದೇ ರೀತಿಯಾಗಿ ದೋಣಿ ನದಿ ದಡದಲ್ಲಿರುವ ಸೋಮನಾಥ ದೇಗುಲದ ದೋಣಿ ಆಂಜನೇಯ ಗುಡಿಯ ಬೆನ್ನುಗೋಡೆಯಲ್ಲಿ ವೀರಗಲ್ಲನ್ನು ಹೋಲುತ್ತಿರುವ ಸುಂದರ ಶಿಲ್ಪವೊಂದರಲ್ಲಿ ಬಹುಶಃ ಕೈಲಾಸವಾಸಿಯಾಗಿರಬಹುದಾದ ಕಾಳಾಮುಖ ಯತಿಯನ್ನು ಅತ್ಯಂತ ಸುಂದರವಾಗಿ ಕೆತ್ತಲಾಗಿದೆ. ಎರಡನೇ ಹಂತದಲ್ಲಿ ಆ ಯತಿಯನ್ನು ದೇವಕನ್ನಿಕೆಯರು ಸ್ವರ್ಗಕ್ಕೆ ಒಯ್ಯುವ ಯಾನ ದೃಶ್ಯವಿದ್ದು, ಆ ಕನ್ನಿಕೆಯರು ಅಲಂಕಾರಿಕ ತುರುಬನ್ನು ಕಟ್ಟಿದ್ದಾರೆ. ಮುಂದಿನ ಹಂತದಲ್ಲಿ ಸ್ವರ್ಗವಾಸಿ



ಯತಿಯು ಪದ್ಮಾಸನದಲ್ಲಿ ಶಿವಲಿಂಗದ ಮುಂದೆ ಕಣ್ಮುಚ್ಚಿ ಕೊಂಡು ಕುಳಿತಿರುವಂತೆ ಕಂಡರಿಸಲಾಗಿದೆ. ಇನ್ನೊಬ್ಬ ಯತಿಯು ಶಿವಲಿಂಗದ ಮುಂದೆ ತನ್ನ ಮೂಗಿನ ಹೊರಳೆಗಳನ್ನಿಡಿದುಕೊಂಡು ಪ್ರಾಣಾಯಾಮ ಮಾಡುವಂತೆ ಕೆತ್ತಲಾಗಿದೆ, ಈ ಯತಿಯು ಸುರಳಿಯಾಕಾರದ ರುಮಾಲನ್ನು (Turban) ತನ್ನ ತಲೆಗೆ ಸುತ್ತುಕೊಂಡಿದ್ದಾನೆ. ಇಬ್ಬರು ಯತಿಗಳು ಕೌಪೀನವನ್ನು (ಲಂಗೋಟಿ) ಧರಿಸಿದ್ದಾರೆ. ವೀರಗಲ್ಲಿ ನಂತಿರುವ ಈ ಶಿಲ್ಪವು ತುಂಬಾ ತ್ರುಟಿತವಾಗಿದ್ದರೂ ಅತ್ಯಂತ ಸುಂದರ ಮತ್ತು ಅಪರೂಪದ್ದಾಗಿದೆ. ಈ ಶಿಲ್ಪದಲ್ಲಿರುವ ಶಿವಲಿಂಗವನ್ನೂ ಕೂಡ ಶಿಲ್ಪಿಯು ಅತ್ಯಂತ ಸುಂದರವಾಗಿ ಕೆತ್ತಿದ್ದಾನೆ. ತಾಳಿಕೋಟೆಯಲ್ಲಿ ದೊರೆತಿರುವ ಅಪರೂಪದ ಕಾಳಾಮುಖ ಯತಿಯ ಶಿಲ್ಪವು ಇದಾಗಿದೆ.

**ಸಿದ್ಧಲಿಂಗೇಶ್ವರ ದೇಗುಲ :** ದೋಣಿ ನದಿ ದಡದಲ್ಲಿರುವ ಈ ದೇಗುಲವು ನೆಲಮಾಳಿಗೆಯಲ್ಲಿರುವ (Under ground) ದೇಗುಲವಾಗಿದೆ. ಜನರು ರೂಢಿಯಲ್ಲಿ ಈ ದೇಗುಲವನ್ನು ಸಿದ್ಧೇಶ್ವರ ದೇಗುಲವೆಂದು ಕರೆಯುತ್ತಾರೆ. ಈ ದೇಗುಲವು ಗರ್ಭಗೃಹ ಮತ್ತು ಸಭಾಮಂಟಪಗಳನ್ನೊಳಗೊಂಡಿದೆ.



ಗರ್ಭಗೃಹದ ಪ್ರವೇಶ ದ್ವಾರಕ್ಕೆ ಪೂರ್ಣಕುಂಭಗಳಿವೆ. ಮುಂಭಾಗದಲ್ಲಿ ತೆರೆದ ಅಂತರಾಳವನ್ನು ನಿರ್ಮಿಸಲಾಗಿದೆ. ಸಭಾಮಂಟಪದ ಪ್ರವೇಶ ದ್ವಾರ, ಪದ್ಮ, ಅರ್ಧಗಂಬ, ಹೂವಿನ ದಳಗಳಲ್ಲಿ ಕುಬ್ಜ ಶಿಲ್ಪಗಳಿವೆ. ಅಲಂಕೃತ ಅರ್ಧಗಂಬ ಸಿಂಹಯಾಳಿಗಳಿಂದ ಕೂಡಿದ್ದು, ಪ್ರಾರಂಭದಲ್ಲಿ ಆನೆ ಇದೆ. ಮುಂಭಾಗದಲ್ಲಿ ತೆರೆದ ಅಂತರಾಳವನ್ನು ನಿರ್ಮಿಸಲಾಗಿದೆ. ಲಲಾಟ ಬಿಂಬದಲ್ಲಿ ಸುಂದರವಾದ ಗಜಲಕ್ಷ್ಮಿ ಶಿಲ್ಪವಿದ್ದು, ಇಕ್ಕೆಲಗಳಲ್ಲಿ ಪಾಶ, ಖಟ್ವಾಂಗ, ಗದೆ ಹಿಡಿದು ನಿಂತ ದ್ವಾರಪಾಲಕರು ಮತ್ತು ಚಾಮರಧಾರೆಯರ ಶಿಲ್ಪಗಳಿವೆ. ಮಧ್ಯದ ಕಂಬಗಳು ಹಾಳಾಗಿದ್ದು ಗೋಡೆಯಲ್ಲಿ ಪದ್ಮದಳಗಳ ಸಾಲುಗಳಿವೆ. ದೇಗುಲದ ಪಶ್ಚಿಮ ಗೋಡೆಯ ಮೇಲೆ ಸುಂದರವಾದ ಪೂರ್ಣಕುಂಭ ಕಲಶವಿದೆ. ಮಧ್ಯದ ಗರ್ಭಗೃಹದ ಹೊರಮೈಯು ಅತ್ಯಂತ ಸುಂದರವಾದ ಮೆಟ್ಟಿಲು



ಮೆಟ್ಟಲಿನಾಕಾರದಲ್ಲಿ ಮೇಲೆರುತ್ತಾ ಕಿರಿದಾಗಿ ಕದಂಬನಾಗರ ಶೈಲಿಯಲ್ಲಿದ್ದು, ಈ ದೇಗುಲವು ಬದಾಮಿ ಚಾಲುಕ್ಯರ ಪೂರ್ವಾರ್ಧದ ದೇವಾಲಯಗಳ ಲಕ್ಷಣಗಳನ್ನೊಳ ಗೊಂಡಿದೆ. ಗಾರೆಗಚ್ಚಿನಿಂದ ನಿರ್ಮಿತವಾದ ಈ ದೇಗುಲದ ಗೋಪುರವನ್ನು ನಿಧಿಗಳ್ಳರು ಧರೆಗುರುಳಿಸಿದ್ದು ದೇಗುಲದ ಹಿಂದೆಯೇ ಬಿದ್ದಿದೆ. ದೋಣಿನದಿ ತೀರದ ಪವಿತ್ರ ಮತ್ತು ಸುಂದರವಾದ ಈ ಬಯಲು ಪ್ರದೇಶವನ್ನು ಸಾರ್ವಜನಿಕರು ಬಹಿರ್ದೆಶೆಗೆ ಉಪಯೋಗಿಸುತ್ತಿದ್ದು, ಜಾಲಿಯ ಮುಳ್ಳು ಕಂಟಿಗಳಿಂದ ಈ ಸ್ಥಳವು ಆವೃತ್ತವಾಗಿದೆ. ಇಲ್ಲಿನ ಜನತೆ ಪುನಃ ಈ ಕ್ಷೇತ್ರದ ಸ್ವಚ್ಛತೆ ಮತ್ತು ಪಾವಿತ್ರ್ಯತೆ ಕಾಪಾಡಬೇಕಾಗಿದೆ.

ರಾಸ್ತೆವಾಡೆಯಲ್ಲಿರುವ ದೇಗುಲ : ತಾಳಿಕೋಟೆಯ ರಾಸ್ತೆವಾಡೆಯಲ್ಲಿರುವ ಈ ದೇಗುಲವು ಅತ್ಯಂತ ಸುಂದರವಾದ ಕೆತ್ತನೆಯಿಂದ ಕೂಡಿದೆ ಹಾಗೂ [illegible] ಸ್ತಂಭ ಮತ್ತು ಬೋದಿಗೆಗಳಿಂದ ಕೂಡಿದ್ದು, ಪೂರ್ವಾಭಿಮುಖಿ



ವಾಗಿದೆ. ಕರಿ ಕಲ್ಲಿನಲ್ಲಿ (black granite) ನಿರ್ಮಾಣ ಗೊಂಡಿದೆಯಲ್ಲದೇ ತುಂಬಾ ಜೀರ್ಣಾವಸ್ಥೆಯಲ್ಲಿದೆ. ಶಿಲ್ಪಕಲಾ ಲಕ್ಷಣಗಳಿಂದ ಇದೊಂದು ಕಲ್ಯಾಣದ ಚಾಲುಕ್ಯರ ಪೂರ್ವಾರ್ಧಕ್ಕೆ ಸೇರಿದ್ದೆಂದು ಹೇಳಬಹುದಾದರೂ ವಿದ್ವಾಂಸರು, ಈ ದೇಗುಲವು ನೊಳಂಬರ ಕಾಲಕ್ಕೆ ಸೇರಿದ್ದೆಂದು ಹೇಳುವುದುಂಟು. ದೇಗುಲದ ಹಿಂಭಾಗದಲ್ಲಿ ಚೌರಿ ಹಿಡಿದು ನಿಂತ ಭಂಗಿಯಲ್ಲಿರುವ ತ್ರಿಮೂರ್ತಿಗಳು ತುಂಬಾ ಹಾಳಾಗಿವೆ. ಕ್ರಿ.ಶ. ೧೧೮೪ರ ನಾಲ್ಕನೇ ಸೋಮೇಶ್ವರನ ಶಾಸನವು "....ಮುರಿವರುಂ ಪರಸಮಯ *ಗಿರಿವಜ್ರದಂಡರುಂ ಜಗದಲುದ್ದಂಡರಂ ಜಿನಸಮುಯ ವನದಹನದಾವಾನಳರುಂ ಮುನಿದರ್ಗೆ* [illegible] *ಸಮಯ ವಿಧ್ವಂಸನ* [illegible]*ರುಂ* [illegible] *ಅನ್ಯಸಮಯಿಗಳ ಬೆನ್ನಬಾರನೆತ್ತುವರುಂ ಸೆಣಸುವರ ನೆತ್ತರುಂ* [illegible] *ಪರಸಮಯ ಘರಟ್ಟರುಂ* [illegible]*ರುಕು[ಪ್ಪ]ರವಟ್ಟರುಂ ಕಾಲನ ನಾಲಗೆಯಂ ಕೀಳ್ವರುಂ*" ಎಂದು ಮುಂತಾಗಿ ಹೇಳುವುದರಿಂದ ಮೇಲಿನ ಶಾಸನದ ಪ್ರಕಾರ ಈ ಪ್ರದೇಶದಲ್ಲಿ ವೀರಮಾಹೇಶ್ವರರು, ಜೈನ ಮತ್ತು ಬೌದ್ಧ ದೇಗುಲಗಳನ್ನು ನಾಶಗೊಳಿಸಿ ಅವುಗಳ ಅವಶೇಷಗಳ ಮೇಲೆ ಶಿವಲಿಂಗ ಸಿಂಹಾಸನವನ್ನು ಪ್ರತಿಷ್ಠಾಪಿಸಿ ವೀರಮಾಹೇಶ್ವರ ನಿಷ್ಠೆಯನ್ನು ಮೆರೆದರೆಂದು ಹೇಳುವದರಿಂದ ಇದೊಂದು ಜೈನ ದೇಗುಲವಾಗಿರಬಹುದು. ಈ ಸ್ಥಳವನ್ನು ಉತ್ಖನನಕ್ಕೆ ಒಳಪಡಿಸಿದರೆ ಜೈನ ಹಾಗೂ ಬೌದ್ಧ ಧರ್ಮದ ದೇಗುಲಗಳು ಇಲ್ಲಿ ಸಿಗಬಹುದಾಗಿವೆ. ಈ ದೇಗುಲದ ಸ್ತಂಭ, ಬೋದಿಗೆಗಳು ಅಗ್ನಿಶಿಲೆಯಲ್ಲಿ ನಿರ್ಮಾಣಗೊಂಡಿದ್ದರೆ, ಗೋಡೆಗಳು ಇತ್ತೀಚಿನ ಸೇದಿಕಲ್ಲಿನಿಂದ ನಿರ್ಮಾಣಗೊಂಡಿದೆ.

**ಮಹದೇವಮಠ :** ತಾಳಿಕೋಟೆಯ ರಾಸ್ತೆವಾಡೆಯ ಉತ್ತರಕ್ಕೆ ಸ್ವಲ್ಪ ಅಂತರದಲ್ಲಿ ಮಹಾದೇವಮಠವೆಂದು ಕರೆಯುವ ಈ ದೇಗುಲವಿದೆ. ಇದು ನೆಲಮಾಳಿಗೆಯ ದೇಗುಲವಾಗಿದೆ. ಬಾಗಿಲುವಾಡದಲ್ಲಿ ಗಜಲಕ್ಷ್ಮೀ ಶಿಲ್ಪವಿದೆ.



ದೇಗುಲದ ಗರ್ಭಗೃಹದಲ್ಲಿ ಅತ್ಯಂತ ಪ್ರಾಚೀನ ಕಾಲದ ಬ್ರಹ್ಮಸೂತ್ರವಿರುವ ಈಶ್ವರಲಿಂಗವಿದೆ. ದೇಗುಲದ ಒಳಗೆ ಏಳು ಹೆಡೆಗಳಿಂದ ಕೂಡಿದ ಸುಂದರ ನಾಗಮೂರ್ತಿ, ಎರಡು ಸುಂದರವಾದ ಭೈರವನ ಮೂರ್ತಿಗಳು, ಚಿಕ್ಕದಾದ ಗಣೇಶಮೂರ್ತಿ ಹಾಗೂ ಗೆಜ್ಜೆಪಟ್ಟಿಯಿಂದ ಅಲಂಕೃತ ಗೊಂಡಿರುವ ಮಟ್ಟಸವಾದ ನಂದಿ ಮತ್ತು ಸಾದಾ ಕೆತ್ತನೆ ಗಳಿಂದೊಡಗೂಡಿದ ಬೋದಿಗೆ ಹಾಗೂ ಕಂಬಗಳಿವೆ. ಉತ್ತರಾಯಣ ಪುಣ್ಯಕಾಲದ ಸಂಕ್ರಮಣದಂದು ಸೂರ್ಯನ ಕಿರಣಗಳು ಗರ್ಭಗುಡಿ ಯಲ್ಲಿರುವ ಶಿವಲಿಂಗದ ಮೇಲೆ ಬೀಳುವಂತೆ ಈ ದೇವಾಲಯ ವನ್ನು ನಿರ್ಮಿಸಲಾಗಿದೆ. ಇತ್ತೀಚಿಗೆ ಈ ದೇಗುಲವನ್ನು ನವೀಕರಿಸಲಾಗಿದೆ.

**ಶ್ರೀ ವೀರಭೈಯ್ಸೇಶ್ವರ ದೇಗುಲ (ಘನಮಠ-ಕ್ರಿ.ಶ. ೧೧೮೪) :** ತಾಳಿಕೋಟೆಯ ಅಂಬಾಭವಾನಿ ಗುಡಿಯ ಮುಂದೆ ಸುಂದರವಾದ ಲೇಥವರ್ಕಿನಿಂದ ಕೂಡಿದ ಒಟ್ಟು ನಾಲ್ಕು ಸ್ತಂಭಗಳಿವೆ. ಇವುಗಳಲ್ಲಿ ಎರಡು ಶಾಸನೋಕ್ತ ಸ್ತಂಭಗಳಾಗಿದ್ದು, ಕ್ರಿ.ಶ. ೧೧೮೪ರ ನಾಲ್ಕನೇ ಸೋಮೇಶ್ವರನ ಆಡಳಿತ ಕಾಲದ ೩ನೇ ವರ್ಷದಲ್ಲಿ ಹೊರಡಿಸಿದ ಶಾಸನವಾಗಿದೆ. ಕ್ರಿ.ಶ. ೧೩೨೯ ರಲ್ಲಿ ಈ ಸ್ತಂಭಗಳು ತಾಳಿಕೋಟೆಯ ರಾಜವಾಡೆಯ ಪ್ರವೇಶದ್ವಾರದಲ್ಲಿರುವ ಕಂಬಗಳೆಂದೇ ವರದಿಯಾಗಿದೆ. ಈ ಊರಿನ ಹಿರಿಯರು ಕೂಡ ಈ ನಾಲ್ಕು ಸ್ತಂಭಗಳು ಒಳಕೋಟೆಯ ಅಗಸೆ ಬಾಗಿಲಿನ ಎದುರಿಗೆ ಇದ್ದವೆಂದು ಹೇಳುವುದರಿಂದ ಈ ಶಾಸನೋಕ್ತ ಹಾಗೂ ಇತರೆ ಸ್ತಂಭಗಳಿರುವ ಈ ವೀರಭೈಯ್ಸೇಶ್ವರ ಘನಮಠವು ಇದೇ ಒಳಕೋಟೆಯ ಭವಾನಿ ಮಂದಿರದ ಎದುರಿಗಿರುವ ಬಯಲು ಸ್ಥಳ. ನಗರಖಾನಾ ಹಾಗೂ ಪಂಚಪೀರ ಶಹೀದ ದರ್ಗಾ ಮತ್ತು ಸಾರ್ವಜನಿಕ ಬಹಿರ್ದೆಸೆಗೆ ಉಪಯೋಗಿಸುವ ಸ್ಥಳಗಳೆಲ್ಲವೂ ಈ ವೀರಭೈಯ್ಸೇಶ್ವರ ಘನಮಠದ ನಿವೇಶನವಿರುವ ಸ್ಥಳವಾಗಿದೆ. ಕೆಲವು ಕಂಬಗಳಲ್ಲಿ ಸುಂದರವಾಗಿ ದರ್ಪಣ ಸುಂದರಿಯರನ್ನು ಹಾಗೂ ಶಿವನ ಪರಿವಾರವನ್ನು ಕೆತ್ತಲಾಗಿದೆ. ಒಟ್ಟಿನಲ್ಲಿ ಈ ದೇಗುಲದ ಸ್ವರೂಪ ಹೇಗಿತ್ತೆಂದೂ ತಿಳಿಯದಿದ್ದರೂ, ಈಗ ದೊರೆತ ಮಠದ ಸ್ತಂಭಗಳಿಂದ ಈ ಮಠದ ಸ್ವರೂಪವನ್ನು ಊಹಿಸಬಹುದಾಗಿದೆ. ಈ ವೀರಭೈಯ್ಸೇಶ್ವರನು (ನಂದಿ) ಮಹಾಮಂಡಳೇಶ್ವರ ವಿರೂಪರಸನ ಆರಾಧ್ಯ ದೈವವಾಗಿದ್ದು, ಕಲಿಕೇರಿ ಶಾಸನವು (ಕ್ರಿ.ಶ.೧೧೮೭) "ಭೈಯ್ಸಕುಳಾಂಬರ ಭಾನು" ವೆಂದು ಹೊಗಳಿದರೆ ಮಿಣಜಗಿಯ ಶಾಸನವು (ಕ್ರಿ.ಶ. ೧೧೮೪) "ಭೈಯ್ಸಕುಳಕಮಳಮಾರ್ತಂಡ, ಶ್ರೀಮತ್ ಕಪಾಳೇಶ್ವರ ದೇವರ ಪಾದಾರಾಧಕಂ" ಎಂದು ವಿರೂಪರಸನನ್ನು ಹೊಗಳಿದೆ. ಈ ವಿರೂಪರಸನು ಹಗರಟಗಿ ಮುನ್ನೂರರ ನಾಡಿನ ಪ್ರತಿಯೊಂದು ಗ್ರಾಮದಿಂದ ಒಂದೊಂದು ಗದ್ಯಾಣವನ್ನು ಸಂಗ್ರಹಿಸಿ ಈ ಘನಮಠಕ್ಕೆ ದಾನಗೈದನೆಂದು ನಮಗೆ ಮೇಲಿನ ೪ನೇ ಸೋಮೇಶ್ವರನ ಶಾಸನದಿಂದ ತಿಳಿದುಬರುವುದಲ್ಲದೇ ಈ ಶಾಸನವು ವೀರದಾಸ, ವೀರದಾಸನ ವಂಶಜ ವೈಜವ್ವೆ, ದಸವಂದ ಸಂಕಯ್ಯ, ಮಾರುಡುಗೆ ನಾಚಯ್ಯ, ವರದಾನಿ ಗುಡ್ಡಮಾಂಜೆ ಹಾಗೂ ಕೆಂಭಾವಿ ಭೋಗಣ್ಣ ಮುಂತಾದ 'ಪುರಾತನ ನೂತನರೆನಿಸಿದ' ಅಸಂಖ್ಯಾತ ಗಣಂಗಳನ್ನು ಉಲ್ಲೇಖಿಸುತ್ತದೆ. ಹಾಗೂ ಅನೇಕ ಸ್ಥಳಗಳಲ್ಲಿ ಜೈನ ಹಾಗೂ ಬೌದ್ಧ ಧರ್ಮೀಯರೊಡನೆ ನಡೆದ ಹೋರಾಟದಲ್ಲಿ ವೀರ ಮಾಹೇಶ್ವರರು ಜಯಶಾಲಿಗಳಾದರೆಂದು ನಮಗೆ ಮಾಹಿತಿಯನ್ನೊದಗಿಸುತ್ತದೆ. "ಶ್ರೀಮನುಮಹಾಮಂಡಳೇಶ್ವರಂ ವಿರುಪರಸದೇವರು ವೀರದಾಸಂಗೆ ಗಣಮಠವಾಗಿ ಕೊಟ್ಟ ಕೆಯಿ ತಾಳಿಯ ಕೋಟೆಯಿಂದ ಬಡಗಲು ಬಂಮ್ಮನಹಳ್ಳಿಯಿಂ ಮೂಡಲು ಕಾರೆಗನೂರಿಗೆ ಹೋದ ದಾರಿಯಿಂದ ಉಪ್ಪುವಳ್ಳ ತೆಂಕಣ ಸೀಮೆಯಾಗಿ ಮಾಣಿಕೇಶ್ವರದ ಕೋಲಲು ಚದುರಸು ಮತ್ತರು ೧೦೦ ದೇವರ ಪೌಳಿಯಿಂದ ಸಂದ್ರಿ ಹೊರಗೆ ತೆಂಕಲರಮನೆಯ ಬೀದಿ ಮೇರೆಯಾಗಿ ನೀಳಹಸ್ತ ೨೭ ಅಗಲ ಹಸ್ತ ೨೦ರ ನಿವೇಶಂ ೧, ಅಂಗಡಿ ೧, ಊರಿಂ ದೋಣಿಯಿಂ ಪಡವಲು ತೋಟ ೧" ಎಂದು ಹೀಗೆ ಶಾಸನವು ಮುಂದುವರೆಯುತ್ತದೆ.

ಒಟ್ಟಿನಲ್ಲಿ ಮಹಾಮಂಡಳೇಶ್ವರ ವಿರುಪರಸನು ಈ ಭೈಯ್ಸೇಶ್ವರ ಗಣಮಠದ ಅಧಿಕಾರಿ ವೀರದಾಸನಿಗೆ ತಾಳಿಕೋಟೆಯಿಂದ ಬೊಮ್ಮನಹಳ್ಳಿ, ಬೊಮ್ಮನಹಳ್ಳಿಯಿಂದ ಕಾರೆಗನೂರಿಗೆ ಹೋಗುವ ದಾರಿಯ ಉಪ್ಪುವಳ್ಳದವರೆಗೆ ೧೦೦ ಮತ್ತರು ಭೂಮಿ, ತೆಂಕಲರಮನೆಯ ಬೀದಿ ಮೇರೆಯಾಗಿ ನಿವೇಶಣ ೧, ಅಂಗಡಿ ೧, ಊರಿನಿಂದ ದೋಣಿಯ ತೋಟವೊಂದನ್ನು ಈ ಭೈಯ್ಸೇಶ್ವರ ಘನಮಠಕ್ಕೆ ದಾನಗೈದನೆಂದು ನಮಗೆ ೪ನೇ ಸೋಮೇಶ್ವರನ ಶಾಸನದಿಂದ ತಿಳಿದುಬರುತ್ತದೆ.

**ತ್ರೈಪುರುಷ ದೇಗುಲದ ವಿಶೇಷ ಮಕರ ತೋರಣ :** ನಗರದ ಮಧ್ಯದಲ್ಲಿರುವ ಆಂಜನೇಯ ಗುಡಿಯ ಬಾಗಿಲುವಾಡದಲ್ಲಿ ಬ್ರಹ್ಮ, ವಿಷ್ಣು, ಮಹೇಶ್ವರರಿಂದೊಡಗೂಡಿದ ಸುಂದರವಾದ ತ್ರೈಪುರುಷರಿರುವ ಶಿಲ್ಪ ಹಾಗೂ ಕೆಲವು ಕಂಬಗಳನ್ನು ಎಲ್ಲಿಂದಲೋ ತಂದು ಈ ದೇವಸ್ಥಾನದಲ್ಲಿ ಅಳವಡಿಸಲಾಗಿದೆ. ಬಾಗಿಲುವಾಡದ ಬಲಕ್ಕೆ ಬ್ರಹ್ಮ, ಮಧ್ಯದಲ್ಲಿ ಶಿವ ಹಾಗೂ ಎಡಕ್ಕೆ ವಿಷ್ಣುವಿನ ಶಿಲ್ಪಗಳನ್ನು ಕೆತ್ತಲಾಗಿದೆ. ಮಕರತೋರಣದ ಬಲಕ್ಕೆ ಕೆತ್ತಿರುವ ಬ್ರಹ್ಮನ ಶಿಲ್ಪದಲ್ಲಿ ಸುಂದರವಾದ ಮೂರು ಮುಖಗಳಿವೆ. ತಲೆಗೆ ಕರಂಡ ಮುಕುಟವಿದೆ, ಬ್ರಹ್ಮನ ಕೈಯಲ್ಲಿ ಪಾಶ, ಚಕ್ರ, ಮತ್ತು ವಿಶೇಷ ಗದೆ ಇದೆ. ಮೂರ್ತಿಯ ಕೆಳಗೆ ಬಲಭಾಗದಲ್ಲಿ ಬ್ರಹ್ಮನ ವಾಹನವಾದ ಸುಂದರವಾದ ಹಂಸವನ್ನು ಕೆತ್ತಲಾಗಿದೆ.



ಶಿಲ್ಪದ ಮಧ್ಯದಲ್ಲಿ ಜಟಾಧಾರಿಯಾದ ಶಿವನನ್ನು ಕೆತ್ತಲಾಗಿದ್ದು, ಜಡೆಯಲ್ಲಿ ಗಂಗಾವತರಣ ಹಾಗೂ ಚಂದ್ರನನ್ನುಕೆತ್ತಲಾಗಿದ್ದು, ಶಿವನು ಚರ್ಮಾಂಬರಧಾರಿಯಾಗಿದ್ದಾನೆ. ಶಿವನ ಎಡಗೈಯಲ್ಲಿ ತ್ರಿಶೂಲ, ಬಲಗೈಯಲ್ಲಿ ರುದ್ರಾಕ್ಷಿ ಮಾಲೆಗಳಿವೆ. ಕೆಳಗಡೆ ಬಲಭಾಗದಲ್ಲಿ ಶಿವನ ವಾಹನವಾದ ನಂದಿ ಇದೆ.

ಬಾಗಿಲುವಾಡದ ಎಡಭಾಗದಲ್ಲಿ ವಿಷ್ಣುವಿನ ಶಿಲ್ಪವಿದ್ದು, ಕೈಯಲ್ಲಿ ಶಂಖ-ಚಕ್ರ, ಎಡಗೈಯಲ್ಲಿ ಗದೆಯನ್ನು ಕೆತ್ತಲಾಗಿದ್ದು, ಮೂರ್ತಿಯು ತಲೆಗೆ ಕರಂಡಮುಕುಟವನ್ನು ಧರಿಸಿದೆ. ಕೆಳಗಡೆ ಬಲಭಾಗದಲ್ಲಿ ವಿಷ್ಣುವಿನ ವಾಹನವಾದ ಗರುಡನನ್ನು ಕೆತ್ತಲಾಗಿದೆ. ಬಾಗಿಲುವಾಡದ ಎಡ ಮತ್ತು ಬಲಭಾಗಕ್ಕೆ ಕೆಳಗೆ ಎರಡೆರಡು ಸುಂದರವಾದ ಶೈವ ಹಾಗೂ ವೈಷ್ಣವ ದ್ವಾರಪಾಲಕರನ್ನು ಕೆತ್ತಲಾಗಿದೆ. ಬಾಗಿಲುವಾಡದ ಬಲ ಹಾಗೂ ಎಡಕ್ಕೆ ಎರಡು ಮಕರಗಳು ರಾಜಗಾಂಭೀರ್ಯದಿಂದ ಸುಂದರವಾದ ಕಮಲದ ಮೊಗ್ಗಿನ ಮಾಲೆಯನ್ನು ತ್ರೈಪುರುಷರ ಮೇಲೆ ಹಿಡಿದುಕೊಂಡು ನಿಂತಿವೆ. ಆ ಮಕರಗಳ ಮೇಲ್ಗಡೆ ಗಂಧರ್ವ ದಂಪತಿಗಳ ಯಾನ ದೃಶ್ಯವಿದೆ.

ಮಿಣಜಗಿಯ ಮಹಾಪ್ರಭು ಮಾಚರಸನು ಕಟ್ಟಿಸಿದ ತ್ರೈಪುರುಷ ದೇಗುಲಕ್ಕೆ ಮುದ್ರಹಸ್ತ ವಿಠ್ಠರಸರ ವಿನಂತಿಯ ಮೇರೆಗೆ ಮನ್ನೆಯ ವಿರೂಪದೇವರಸ ಹಾಗೂ ಅವನ ಹಿರಿಯ ಹೆಗ್ಗಡೆ ದೇಶಿಯ ದಂಡನಾಯಕ ನನ್ನರಸ, ಕರ್ಣ ತಂತ್ರಪಾಳ ಚಿಕ್ಕಯ್ಯ, ಎಂಟು ಹಿಟ್ಟು ಮೊದಲಾದವರಿಂದ ಭೂಮಿ, ನಿವೇಶನ, ಗಾಣ ಮತ್ತು ಆದಾಯ ದಾನವನ್ನು ಬಿಡಲಾಯಿತೆಂದು ಮಿಣಜಗಿಯ ನಾಲ್ಕನೇ ಸೋಮೇಶ್ವರನ ಶಾಸನದಿಂದ ತಿಳಿದುಬರುವುದು (ಕ್ರಿ.ಶ. ೧೧೮೪). ಆದುದರಿಂದ ಈ ಆಂಜನೇಯ ಗುಡಿಯಲ್ಲಿರುವ ವಿಶೇಷವಾದ ಮಕರ ತೋರಣವನ್ನು ಮಿಣಜಗಿಯಿಂದಲೇ ತಂದು ಕಟ್ಟಿರಬಹುದಾಗಿದೆ.

**ದ್ವಿಬಾಹು ಗಣೇಶ :** ಈ ಗಣೇಶನ ಮೂರ್ತಿಯು ದೋಣಿನದಿಯ ದಡದಲ್ಲಿರುವ ಈ ಮೂರ್ತಿಯು ದ್ವಿಬಾಹುಗಳನ್ನು ಹೊಂದಿದ್ದು, ಸುಖಾಸನದಲ್ಲಿದೆ. ಎಡಗಾಲನ್ನು ಅಡ್ಡಲಾಗಿ ಮಡಿಚಿ, ಬಲಗಾಲನ್ನು ಲಂಬವಾಗಿ ಮಡಚಿ ಚಪ್ಪಟೆಯಾದ ಆಸನದ ಮೇಲೆ ಕುಳಿತಿರುವಂತೆ ಕೆತ್ತಲಾಗಿದೆ. ಈ ಗಣೇಶನ ವಿಗ್ರಹವು ಒಂದು ದುಂಡು ಶಿಲ್ಪವಾಗಿದೆ. ದ್ವಿಭುಜಗಳನ್ನು ಹೊಂದಿದ್ದ ಗಣೇಶನ ಎಡಗೈಯು ತನ್ನ ದೊಡ್ಡದಾದ ಸೊಂಡಿಲವನ್ನು ಸ್ವಲ್ಪ ಎತ್ತಿ ಹಿಡಿದಂತೆ ಹಾಗೂ ಬಲಗೈಯಲ್ಲಿ ಮೋದಕವನ್ನು ಹಿಡಿದಿರುವಂತೆ ಶಿಲ್ಪಿಯು ಮೂರ್ತಿಗಳನ್ನು ಕೆತ್ತಿದ್ದಾನೆ. ಗಣೇಶನ ಕಾಲಿನ ಕಾಲ್ಗಡಗ, ಕೈಯಲ್ಲಿ ಕೈಗಡಗಗಳಿವೆ. ತಲೆಯ ಮೇಲ್ಭಾಗದಲ್ಲಿ ಚಿಕ್ಕದಾದ ಕಿರೀಟವಿದೆ ಹಾಗೂ ಅಗಲವಾದ ಶಿರಶ್ಚಕ್ರವಿದೆ. ಅಲ್ಲದೆ, ಅಗಲವಾದ ಚೂಪಾಗಿರುವ ಉದ್ದವಾದ ಗಜ, ಕಿವಿಗಳು, ದೊಡ್ಡಮುಖ, ದಪ್ಪನಾದ ಉದರಭಾಗ, ಅತ್ಯಂತ ಸುಂದರವಾಗಿ ಕೆತ್ತಿರುವ ಕಾಲುಗಳು ಮತ್ತು ಪಾದಗಳು ಶಿಲ್ಪಿಯ ಜಾಣ್ಮೆಯನ್ನು ತೋರಿಸುತ್ತದೆ. ಈ ಗಣೇಶ ಶಿಲ್ಪದಲ್ಲಿ ಕಂಡುಬರುವ ವಿಶೇಷತೆ ಏನೆಂದರೆ, "ನಾಗಉದರಬಂಧ" ವಿದೆ. ಈ ತರಹದ ಲಕ್ಷಣಗಳಿರುವ ಶಿಲ್ಪಗಳು ವಿಶೇಷವಾಗಿ ಬದಾಮಿ ಚಾಲುಕ್ಯರ ಕಾಲದಲ್ಲಿವೆ. ಶೈಲಿಯ ದೃಷ್ಟಿಯಿಂದ ಈ ಗಣೇಶನನ್ನು ಚಾಲುಕ್ಯ ಶೈಲಿಯ ಚೌಕಟ್ಟಿನೊಳಗೆ ಸೇರಿಸಬಹುದಾಗಿದೆ. ಅಲ್ಲದೆ ರಾಷ್ಟ್ರಕೂಟರ ಕಾಲದ ಕೆಲವು ಗಣೇಶ ಶಿಲ್ಪಗಳನ್ನು ಗಮನಿಸಿದರೆ (ಎಲ್ಲೋರದ ಕೈಲಾಸನಾಥ ದೇವಾಲಯ) ಚಿಕ್ಕ ಕಿರೀಟ,ಅಗಲವಾದ ಶಿರಶ್ಚಕ್ರ ಮತ್ತು ಅನುರೂಪವಾದ ದೇಹಕೃತಿಗಳನ್ನು ಹೊಂದಿವೆ. ಇವುಗಳು ಪ್ರಸ್ತುತ ವಿಗ್ರಹಕ್ಕೆ ಶೈಲಿಯ ದೃಷ್ಟಿಯಿಂದ ತೀರಾ ಹತ್ತಿರವಾದವು ಗಳಾಗಿವೆ. ಆದುದರಿಂದ ತಾಳಿಕೋಟೆಯ ಈ ಗಣೇಶನ ವಿಗೃಹವನ್ನು ಸುಮಾರು ಕ್ರಿ.ಶ. ೮ನೇ ಶತಮಾನದ್ದೆಂದು ಹೇಳಬಹುದಾಗಿದೆ.

**ಸುಂದರ ನಾಗಶಿಲ್ಪ :** ಇದೇ ಮಠದಲ್ಲಿಯೇ ಸುಮಾರು ಎರಡು ಅಡಿಯ, ಏಳು ಹೆಡೆಗಳಿಂದ ಕೂಡಿದ ಸುಂದರವಾದ ನಾಗರ ಶಿಲ್ಪವಿದ್ದು, ಇದು ಕೂಡ ಈ ದ್ವಿಬಾಹು ಗಣೇಶನ ಸಮಕಾಲಿನದ್ದಾಗಿದೆ. ಈ ನಾಗರ ಶಿಲ್ಪವನ್ನು ಕೆಂಪು ಮರಳುಗಲ್ಲಿನಲ್ಲಿ ಕೆತ್ತಲಾಗಿದೆ.

**ಪಂಚಪೀರ ಶಹೀದ ದರ್ಗಾ :** ತಾಳಿಕೋಟೆಯ ರಾಜವಾಡೆಯ ದುರ್ಗಾದೇವಿ ಗುಡಿಯ ಮುಂದಿನ ಬಲಮೂಲೆಯಲ್ಲಿರುವ ಈ ದೇಗುಲವನ್ನು ಪಂಚಪೀರ ಶಹೀದ ದರ್ಗಾ ಎಂದು ಕರೆಯುತ್ತಾರೆ. ಈ ದರ್ಗಾವು ತಾಳಿಕೋಟೆಯಲ್ಲಿರುವ ಅತ್ಯಂತ ಪ್ರಾಚೀನ ಮಸೀದಿ ಆಗಿದೆ. ಐದು ಜನ ಸೂಫಿ ಸಂತರ ಬೃಹತ್ ಮಝಾರಗಳು ಈ ಮಸೀದಿಯಲ್ಲಿವೆ. ಶೇಖ ಮಿಡ್ಡಣ, ಹಸನ್, ಹುಸೇನ್, ಇಬ್ರಾಹಿಂ ಮತ್ತು ಕರೀಮ್ ಎಂಬ ಐದು ಜನ ಸೂಫಿ ಸಂತರು ವೃತ್ತಿಯಿಂದ ಸೈನಿಕರಾಗಿದ್ದು, ಕಂಪಿಲ ದುರ್ಗದ ಕುಮಾರರಾಮನನ್ನು ಸೋಲಿಸಿ ಜೀವಂತ ಸೆರೆಹಿಡಿದು ತರುತ್ತೇವೆಂದು ಪ್ರತಿಜ್ಞೆಗೈದು ವೀರಾವೇಶದಿಂದ ಹೊರಡುತ್ತಾರೆ. ದಾರಿಯಲ್ಲಿ ಒಬ್ಬ ಹೆಣ್ಣುಮಗಳು ನೀವು ಕುಮಾರರಾಮನನ್ನು ಸೆರೆ ಹಿಡಿದು ತರುವುದು ಇರಲಿ, ನೀವೆ ಹೆಣವಾಗಿ ಹಿಂದಿರುಗುವಿರೆಂದು ಭವಿಷ್ಯ ನುಡಿಯುತ್ತಾಳೆ. ಅವಳ ಮಾತನ್ನು ಲೆಕ್ಕಿಸದೇ ಹೊರಟ ಈ ವೀರರು ಅವಳ ಭವಿಷ್ಯವಾಣಿಯಂತೆ ರಣಾಂಗಣದಲ್ಲಿ ಕುಮಾರರಾಮನ ಕೈಯಲ್ಲಿ ಹತರಾಗಿದ್ದರಿಂದ ಹೆಣವಾಗಿ ಅವರ ಮೃತದೇಹಗಳು ಮಾತ್ರ ತಾಳಿಕೋಟೆಗೆ ಮರಳುತ್ತವೆ. ಆದುದರಿಂದಲೇ ಜನರು

ಇದನ್ನು ಪಂಚಪೀರ ಶಹೀದ್ ದರ್ಗಾವೆಂದು ಕರೆಯುತ್ತಾರೆ. ಹಿಂದು-ಮುಸ್ಲಿಂ ಎರಡೂ ಧರ್ಮದ ಜನರೂ ಈ ಮಸೀದಿಗೆ ನಡೆದು ಕೊಳ್ಳುವುದರಿಂದ ಇದೊಂದು ಹಿಂದು-ಮುಸ್ಲಿಂ ಧರ್ಮ ಸಮನ್ವಯದ ಪ್ರತೀಕವಾಗಿದೆ ಎಂದು ಹೇಳಬಹುದು. ಈ ಮಸೀದಿಯ ಲಕ್ಷಣಗಳನ್ನು ಇಲ್ಲಿರುವ ಅವಶೇಷಗಳನ್ನು ಗಮನಿಸಿದರೆ, ಹಿಂದೆ ಇದೊಂದು ದೇಗುಲ ಆಗಿರಬಹುದೆಂದು ಕಂಡುಬರುತ್ತದೆ.

**ಮುಕ್ತಾಯ :** ಮೇಲಿನ ಲೇಖನದಲ್ಲಿಯ ಎಲ್ಲಾ ದೇಗುಲಗಳ ಮೂರ್ತಿ ಶಿಲ್ಪಗಳ ಲಕ್ಷಣಗಳನ್ನು ಅವಲೋಕಿಸಿದರೆ, ತಾಳಿಕೋಟೆಯು ಬದಾಮಿ ಚಾಲುಕ್ಯರ, ರಾಷ್ಟ್ರಕೂಟರ, ಕಲ್ಯಾಣದ ಚಾಲುಕ್ಯರ, ನೊಳಂಬರ, ಬಿಜಾಪೂರ ಸುಲ್ತಾನರ ಹಾಗೂ ಪೇಶ್ವೆಯರೇ ಮುಂತಾದ ಅರಸುಮನೆತನಗಳ ದೇಗುಲಗಳು, ಶಾಸನಗಳು, ಶಿಲ್ಪಗಳು, ಮಸೀದಿ-ಮಂದಿರಗಳು ಈ ಊರಿನಲ್ಲಿವೆ. ಹಾಗೂ ಈ ಮೇಲಿನ ಎಲ್ಲ ಅರಸರ ಆಡಳಿತಕ್ಕೆ ತಾಳಿಕೋಟೆಯು ಒಳಪಟ್ಟಿತ್ತೆಂದು ನಮಗೆ ತಿಳಿದುಬರುವುದಲ್ಲದೆ, ವಿಶೇಷವಾಗಿ ಕಲ್ಯಾಣದ ಚಾಲುಕ್ಯರ ವೈಭವಯುತವಾದ ಶಿಲ್ಪಕಲೆಗೆ ತಾಳಿಕೋಟೆಯಲ್ಲಿರುವ ದೇಗುಲಗಳು ಪ್ರಸಿದ್ಧವಾಗಿವೆ ಎಂದು ಹೇಳಬಹುದಾಗಿದೆ.

(ಈ ಲೇಖನವನ್ನು ಸಿದ್ಧಪಡಿಸಲು ಕ್ಷೇತ್ರ ಕಾರ್ಯದಲ್ಲಿ ನೆರವಾದ ಶ್ರೀ ರಾಜಣ್ಣ, ಫೋಟೋಗ್ರಾಫರ, ಶ್ರೀ ದೇವರಾಜ ಬಾಗೇವಾಡಿ, ಶ್ರೀ ಎಂ.ಬಿ. ಅಲ್ಲಾಳ, ಶಿಕ್ಷಕರು, ತಾಳಿಕೋಟೆ ಮತ್ತು ಕುಮಾರ ಸಿಂಗರಾಜು ನೀರಲಗಿ ಹಾಗೂ ಈ ಲೇಖನವನ್ನು ತಯಾರಿಸಲು ಸಲಹೆ-ಸೂಚನೆಗಳನ್ನಿತ್ತ ನನ್ನ ಗುರುಗಳಾದ ಡಾ. ದೇವರಕೊಂಡಾರೆಡ್ಡಿ, ಕ.ವಿ.ವಿ. ಹಂಪಿ, ಡಾ. ಬಿ. ರಾಜಶೇಖರಪ್ಪ, ಚಿತ್ರದುರ್ಗ, ಡಾ. ಹೆಚ್. ಚಂದ್ರಶೇಖರ ಮತ್ತು ಡಾ. ಎಸ್. ರಾಜೇಂದ್ರಪ್ಪ, ಬೆಂಗಳೂರು ಇವರೆಲ್ಲರಿಗೂ ಲೇಖಕರ ಕೃತಜ್ಞತೆಗಳು)



## ಆಧಾರಸೂಚಿ


೧. ಡಾ. ಎಂ. ಚಿದಾನಂದಮೂರ್ತಿ., **ಕನ್ನಡ ಶಾಸನಗಳ ಸಾಂಸ್ಕೃತಿಕ ಅಧ್ಯಯನ**.

೨. ಡಾ. ಎಂ.ಎಂ. ಕಲಬುರ್ಗಿ., **ಬಿಜಾಪೂರ ಜಿಲ್ಲೆಯ ಶಾಸನ ಸೂಚಿ ಮತ್ತು ಶಾಸನ ವ್ಯಾಸಂಗ**.

೩. **ಇತಿಹಾಸ ದರ್ಶನ ಸಂ**. ೧೮ ಮತ್ತು ೨೨, ಪು. ೧೨ ಮತ್ತು ೨೨೩ ನೇ ಪುಟದಲ್ಲಿನ ಶಿವಪ್ಪ ಎಸ್. ನೀರಲಗಿಯವರ ಲೇಖನ.

೪. **ಬಿಜಾಪೂರ ಜಿಲ್ಲೆಯ ಗ್ಯಾಸೆಟಿಯರ್-ಪ್ರೇಕ್ಷಣಿಯ ಸ್ಥಳಗಳು** : (ಸಂ) ಎಸ್.ಎ. ಜಗನ್ನಾಥ.

೫. ಡಾ. ವಾಸುದೇವ ಬಡಿಗೇರ., **ಕರ್ನಾಟಕ ದೇವಾಲಯ ಕೋಶ** - ಬಿಜಾಪೂರ ಜಿಲ್ಲೆ.

೬. ಡಾ. ಹೆಚ್. ತಿಪ್ಪೆರುದ್ರಸ್ವಾಮಿ., **ಕರ್ನಾಟಕ ಸಂಸ್ಕೃತಿ ಸಮೀಕ್ಷೆ**.

೭. **ದಕ್ಷಿಣ ಭಾರತದ ಶಾಸನ ಸಂಪುಟಗಳು** : (SII-Volumes).

ಪ್ರೊ. ಆರ್. ರಂಗಸ್ವಾಮಿ*

# ಕೃಷ್ಣರಾಜಪೇಟೆ ತಾಲ್ಲೂಕು ಶಾಸನೋಕ್ತ ಶೈವ ದೇವಾಲಯಗಳು

## ಪೀಠಿಕೆ

ಕನ್ನಡನಾಡಿನ ಸಂದರ್ಭದಲ್ಲಿ ಪ್ರತಿಯೊಂದು ಧರ್ಮಗಳು (ಶೈವ, ವೈಷ್ಣವ, ಜೈನ, ಬೌದ್ಧ ಇತ್ಯಾದಿ) ತಮ್ಮನ್ನು ರಕ್ಷಿಸಿ ಕೊಳ್ಳುವುದರೊಂದಿಗೆ ತಮ್ಮ ವಲಯವನ್ನು ವಿಸ್ತರಿಸಿಕೊಳ್ಳುವ ಕಾರ್ಯದಲ್ಲಿಯೂ ನಿರತವಾಗುತ್ತ ಬಂದಿರುವುದು ಸಮಕಾಲೀನ ಶಾಸನಗಳು ಮತ್ತು ಸಾಹಿತ್ಯಿಕ ಕುರುಹುಗಳಿಂದ ಸ್ಪಷ್ಟವಾಗುತ್ತದೆ. ಈ ವಿಸ್ತರಿಸಿಕೊಳ್ಳುವಿಕೆ ಎನ್ನುವುದು ತಾನು ಸಬಲವಾಗುವುದು ಮತ್ತು ತನ್ನ ಪ್ರತಿಸ್ಪರ್ಧಿ ಧರ್ಮವನ್ನು ದುರ್ಬಲಗೊಳಿಸುವುದು ಎಂಬೆರಡು ಕವಲುಗಳಲ್ಲಿ ಗೋಚರಿಸುತ್ತದೆ. ಅನ್ಯಧರ್ಮೀಯರನ್ನು ಸ್ವವಲಯಕ್ಕೆ ಮತಾಂತರಿಸಿಕೊಳ್ಳುವುದು ತನ್ನನ್ನು ಸಬಲ ಮಾಡಿಕೊಳ್ಳುವುದಾದರೆ, ಹಾಗೆ ಒಳಗೆ ಬರದೆ ಹೊರಗೆ ಉಳಿದವರಲ್ಲಿ ತನ್ನ ಸಂಸ್ಕೃತಿಯನ್ನು ಬೆರೆಯಿಸುವುದು ಮತ್ತು ಅವರ ನಿರ್ಮಾಣಗಳನ್ನು (ದೇವಾಲಯಗಳು, ಶಿಲ್ಪಗಳು ಇತ್ಯಾದಿ) ನಾಶ ಮಾಡುವುದು ಅನ್ಯವನ್ನು ದುರ್ಬಲಗೊಳಿಸುವುದಾಗಿದೆ. ಇವುಗಳಲ್ಲಿ ದೇವಾಲಯಗಳ ನಾಶವೆನ್ನುವುದು ಅವುಗಳ ಸಮೂಲನಾಶ ಕ್ರಿಯೆ, ರೂಪಾಂತರ ಕ್ರಿಯೆ ಮತ್ತು ನಾಶ ಪ್ರಯತ್ನ ಎಂಬ ಮೂರು ಬಗೆಗಳಲ್ಲಿ ಜರುಗಿರುವಂತೆ ತೋರುತ್ತದೆ. ರೂಪಾಂತರ ಕ್ರಿಯೆಯು ವಿರೋಧಿಗಳಿಂದ ಘಟಿಸಿರಬಹುದು. ಇಲ್ಲವೇ ಯಾವುದೋ ಒಂದು ಕಾರಣಕ್ಕಾಗಿ ಸಾಮೂಹಿಕವಾಗಿ ಮತಾಂತರವಾದ ಒಂದು ಗ್ರಾಮದ ಒಂದು ಮತೀಯರು ತಮ್ಮ ದೇವಾಲಯವು ನಿಷ್ಪ್ರಯೋಜಕವಾಗಿ ಉಳಿಯಬಾರದೆಂದು ತಾವೇ ಅದನ್ನು ರೂಪಾಂತರಿಸಿರಬಹುದು. ದೇವಾಲಯದ ಸಮೂಲನಾಶ, ರೂಪಾಂತರ ಮತ್ತು ನಾಶ ಪ್ರಯತ್ನಗಳಿಗೆ ಮತದ್ವೇಷಗಳು ಕಾರಣವಾಗಿದ್ದರೂ ಕೆಲವೊಮ್ಮೆ ಪರಸ್ಪರ ಧರ್ಮೀಯರಲ್ಲಿ ಜರುಗುತ್ತಿದ್ದ ವಾದ-ಸ್ಪರ್ಧೆಯ ಸೋಲೂ ಕಾರಣವಾಗಿರುತ್ತದೆ.[1] ಮಂಡ್ಯ ಜಿಲ್ಲೆಯಲ್ಲಿಯೂ ಈ ಕ್ರಿಯೆಗಳು ಜರುಗುತ್ತ ಬಂದಿರುವುದನ್ನು ಸಮಕಾಲೀನ ಸಾಹಿತ್ಯ, ಶಾಸನ ಮತ್ತು ವಾಸ್ತು ಶಿಲ್ಪಾವಶೇಷಗಳು ದೃಢಪಡಿಸುತ್ತವೆ. ಪ್ರಸ್ತುತ ಈ ಜಿಲ್ಲೆಯ ಕೃಷ್ಣರಾಜಪೇಟೆ ತಾಲ್ಲೂಕಿನ ಶಾಸನೋಕ್ತ ಶೈವ ಧರ್ಮದ ದೇವಾಲಯಗಳ ಕುರಿತು ಚರ್ಚಿಸುವುದು ಈ ಲೇಖನದ ಆಶಯವಾಗಿದೆ.

ಕೃಷ್ಣರಾಜಪೇಟೆ ತಾಲ್ಲೂಕಿನ ಶಾಸನೋಕ್ತ ಶೈವ ಧರ್ಮದ ಅನೇಕ ದೇವಾಲಯಗಳು ಕಾಲಾಂತರದಲ್ಲಿ ಜರುಗಿದ ಧಾರ್ಮಿಕ ಘರ್ಷಣೆಗಳಲ್ಲಿ ಸಮೂಲನಾಶವಾಗಿವೆ. ಹಾಗೆಯೇ ಕೆಲವು ದೇವಾಲಯಗಳ ನಾಶಕ್ಕೆ ರಾಜಕೀಯ ದಾಳಿಗಳು, ನೈಸರ್ಗಿಕ ವಿಕೋಪಗಳು (ಮಳೆ, ಗಾಳಿ, ಬಿಸಿಲು ಇತ್ಯಾದಿ) ಹಾಗೂ ಸಂಬಂಧಿಸಿದ ಇಲಾಖೆಗಳ ಮತ್ತು ಜನಸಾಮಾನ್ಯರ ನಿರ್ಲಕ್ಷ್ಯತನಗಳೂ ಕಾರಣಗಳೆಂಬುದನ್ನು ಮರೆಯುವಂತಿಲ್ಲ. ಆ ದೇವಾಲಯಗಳಲ್ಲಿ ಕೆಲವು ಕಾಲದಿಂದ ಕಾಲಕ್ಕೆ ಜೀರ್ಣೋದ್ಧಾರವಾಗುತ್ತ ತಮ್ಮ ಮೂಲ ವಾಸ್ತು ಸ್ವರೂಪವನ್ನು ಕಳೆದುಕೊಂಡು ಬೇರೆ ಬೇರೆ ಹೆಸರಿನಿಂದ ಕರೆಯಲ್ಪಡುತ್ತಿವೆ. ಇನ್ನೂ ಕೆಲವು ಪೂಜೆ-ಪುನಸ್ಕಾರಗಳಿಲ್ಲದೇ ಜೀರ್ಣಾವಸ್ಥೆಯಲ್ಲಿವೆ. ಆ ದೇವಾಲಯಗಳ ನಿರ್ಮಾತೃ, ಕಾಲಮಾನ, ದಾನ-ದತ್ತಿಗಳು, ಸ್ಥಾನಾಚಾರ್ಯ, ವಾಸ್ತು ಲಕ್ಷಣಗಳು, ಇಂದಿನ ಸ್ಥಿತಿ-ಗತಿ ಮೊದಲಾದ ವಿಚಾರಗಳು ಈ ಕೆಳಗಿನಂತಿವೆ.

**ಅಕ್ಕಿಹೆಬ್ಬಾಳು ಕೊಂಕಳೇಶ್ವರ ದೇವಾಲಯ :** ಸ್ಥಳೀಯ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು ಹೆಬ್ಬೊಳಲದ (ಅಕ್ಕಿಹೆಬ್ಬಾಳು) ಕೊಂಗಳೇಶ್ವರ ದೇವಾಲಯದ ನಂದಾದೀವಿಗೆಗಾಗಿ ಸುಂಕದ ಅಧಿಕಾರಿ ಹೆಮ್ಮಾಡಿಯಣ್ಣನು ಒಂದು ಗದ್ಯಾಣವನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[2] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ದ್ವಿಕೂಟ ವಿನ್ಯಾಸದಲ್ಲಿರುವ ಇದು ಎರಡು ಗರ್ಭಗೃಹಗಳು, ಎರಡು ಅಂತರಾಳಗಳು, ಒಂದು ಸಭಾಮಂಟಪ ಮತ್ತು ಒಂದು ಮುಖಮಂಟಪವನ್ನು

* ಇತಿಹಾಸ ವಿಭಾಗ, ಮಹಾರಾಣಿ ಕಲಾ ಮಹಿಳಾ ಕಾಲೇಜು, ಮೈಸೂರು - ೫.

ಒಳಗೊಂಡಿದೆ. ಈ ದೇವಾಲಯವು ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್ ಮತ್ತು ಸ್ಥಳೀಯರ ಸಹಕಾರದೊಂದಿಗೆ ಜೀರ್ಣೋದ್ಧಾರವಾಗಿದೆ.

**ಕಡಂಬಿಗೆ ಅಂಕಕಾರ ದೇವಾಲಯ :** ಸ್ಥಳೀಯ ಕ್ರಿ.ಶ. ಸುಮಾರು ೧೨-೧೩ನೆಯ ಶತಮಾನದ ಶಾಸನವು ಅಂಕಕಾರ ದೇವಾಲಯಕ್ಕೆ ಹೆಮ್ಮೆಗೆಯ ಚಿಕ್ಕಗಾವುಂಡನು ಮೂರು ಸಲಗೆ ಗದ್ದೆ ಮತ್ತು ಒಂದು ಸಲಗೆ ಜೆದ್ದಲೆ ಭೂಮಿಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯದ ಹೆಸರೇ ಸೂಚಿಸುವಂತೆ ಇದನ್ನು ಸ್ಥಳೀಯ ಅಂಕಕಾರರು (ಅರಸನ ನೆಚ್ಚಿನ ಸೇವಕರು, ಸಹಾಯಕರು, ಬಂಟರು) ಕಟ್ಟಿಸಿದ್ದಾರೆ. ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ, ನವರಂಗವನ್ನು ಒಳಗೊಂಡಿದೆ. ಈ ದೇವಾಲಯವು ಈಗ ಜೀರ್ಣಾವಸ್ಥೆಯಲ್ಲಿದೆ.

**ಕಿಕ್ಕೇರಿಯ ಬ್ರಹ್ಮೇಶ್ವರ ದೇವಾಲಯ :** ಈ ದೇವಾಲಯವನ್ನು ಹೊಯ್ಸಳ ಮನೆತನದ ಒಂದನೆಯ ನರಸಿಂಹನ ಮಹಾಸಾಮಂತ ಬರ್ಮ್ಮಯ್ಯನ ಧರ್ಮಪತ್ನಿ ಬಮ್ಮವ್ವೆ ನಾಯಕಿತಿಯು ಕ್ರಿ.ಶ. ೧೧೭೧ರಲ್ಲಿ ಕಟ್ಟಿಸಿದ್ದಾಳೆ.[೪] ಹೊಯ್ಸಳ ಮನೆತನದ ವಿಷ್ಣುವರ್ಧನನು ಕ್ರಿ.ಶ. ೧೦೯೫-೯೭ರಲ್ಲಿ ಈ ದೇವಾಲಯಕ್ಕೆ ಹದಿನೈದು ಖಂಡುಗ ಗದ್ದೆ ಮತ್ತು ಭುವನಹಳ್ಳಿ ಗ್ರಾಮವನ್ನು ದತ್ತಿ ನೀಡಿದ್ದಾನೆ. ಇದೇ ದೇವಾಲಯಕ್ಕೆ ಜಿಣ್ಣಮ್ಮನ ಸುಪುತ್ರ ಸಾಮಂತ ಭೀಮಣ್ಣನು ಅಡಿಕೆ ತೋಟವನ್ನು ಹಾಗೂ ಕಾಳಾಮುಖ ಪಂಥದ ಬ್ರಹ್ಮರಾಶಿ ಪಂಡಿತನ ಶಿಷ್ಯ (?) ಪೆರ್ಗ್ಗಡೆ ಮಲ್ಲಿಯಣ್ಣನು ಕೆರೆಯನ್ನು ಕಟ್ಟಿಸಿ ದಾನ ಮಾಡಿದ್ದಾರೆ.[೫] ಹೊಯ್ಸಳ ಮನೆತನದ ಒಂದನೆಯ ನರಸಿಂಹದೇವನು ತಿಲಯನಾಯಕ ಹೆಗ್ಗಡೆಯರ ಬಿನ್ನಹದ ಮೇರೆಗೆ ಈ ದೇವಾಲಯದ ಜೀರ್ಣೋದ್ಧಾರ, ನಿತ್ಯಪೂಜೆ, ನಿತ್ಯಭೋಗ, ನೈವೇದ್ಯಕ್ಕೆಂದು ಈ ದೇವಾಲಯದ ಸ್ಥಾನಾಚಾರ್ಯನಾಗಿದ್ದ ಕಾಳಾಮುಖ ಪಂಥದ ಬ್ರಹ್ಮರಾಶಿಜೀಯ ಆಚಾರ್ಯನ ಸನ್ನಿಧಿಯಲ್ಲಿ ಭುವನಹಳ್ಳಿ ಗ್ರಾಮವನ್ನು ಪುನರ್ದತ್ತಿ ನೀಡಿದ್ದಾನೆ.[೬] ಕಿಕ್ಕೇರಿಯ ಧರಣಿದೇವ, ಚವುಡಯ್ಯ ಮತ್ತು ಕಾಮತಮ್ಮ ಕ್ರಿ.ಶ. ಸುಮಾರು ೧೨ನೆಯ ಶತಮಾನದಲ್ಲಿ ಈ ದೇವಾಲಯದ ನಂದಾದೀವಿಗೆಗಾಗಿ ಸ್ಥಳೀಯ ಸುಂಕದೊಳಗೆ ಒಂದು ಗದ್ಯಾಣ ಮತ್ತು ಎರಡು ಹಣವನ್ನು ದಾನ ಮಾಡಿದ್ದಾರೆ.[೭] ಹೀಗೆ ಕಾಲದಿಂದ ಕಾಲಕ್ಕೆ ದಾನ-ದತ್ತಿಗಳನ್ನು ಪಡೆಯುತ್ತ ಜೀರ್ಣೋದ್ಧಾರವಾಗುತ್ತ ಬಂದಿರುವ ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗಲೂ ಇದನ್ನು ಬ್ರಹ್ಮೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಸುಖನಾಸಿ, ನವರಂಗ, ಮುಖಮಂಟಪ ಮತ್ತು ನಂದಿಮಂಟಪವನ್ನು ಒಳಗೊಂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದೆ.

**ಕಿಕ್ಕೇರಿಯ ವೀರಭದ್ರ ದೇವಾಲಯ :** ಸ್ಥಳೀಯ ಕ್ರಿ.ಶ. ೧೧೭೧ರ ಶಾಸನವು ವಡ್ಡವ್ಯವಹಾರಿ, ಪಟ್ಟಣಸ್ವಾಮಿ, ದೇಶಿಸೆಟ್ಟಿ ಮೊದಲಾದ ನಖರರು (ವ್ಯಾಪಾರಸ್ಥರು) ವೀರಭದ್ರ ದೇವಾಲಯಕ್ಕೆ ಹೊಂಗೆ ವೀಸ ಹಣವನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೮] ಈ ದೇವಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಜೊತೆಗೆ ಇದರ ಕುರಿತು ಹೆಚ್ಚಿನ ವಿವರಗಳೂ ಲಭ್ಯವಿಲ್ಲ.

**ಕಿಕ್ಕೇರಿಯ ಭೀರಾದೇವಿ ದೇವಾಲಯ :** ಸ್ಥಳೀಯ ಕ್ರಿ.ಶ. ಸುಮಾರು ೧೬ನೆಯ ಶತಮಾನದ ಶಾಸನವು ನೀರುಗುಂಡಿಯ ರಾಮಚಂದ್ರದೇವ ಆಚಾರ್ಯನ(?) ಸನ್ನಿಧಿಯಲ್ಲಿ ಸ್ಥಳೀಯ ಗಾವುಂಡರು ಮತ್ತು ಸೇನಬೋವರು ಬೀರಾದೇವಿ ದೇವಾಲಯದ (?) ಜಾತ್ರೆಯ ಪ್ರಯುಕ್ತ ಒಂದು ಗ್ರಾಮವನ್ನು ಕೆಲವು ತೆರಿಗೆಗಳಿಂದ ಮುಕ್ತಗೊಳಿಸಿ ದತ್ತಿ ನೀಡಿದ್ದಾರೆ.[೯] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಕಿಕ್ಕೇರಮ್ಮನ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಇದರ ಹೊರಭಾಗವು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಬಂದಿರುವುದರಿಂದ ಮೂಲ ವಾಸ್ತು ಲಕ್ಷಣಗಳಲ್ಲಿ ಕೆಲವು ಬದಲಾವಣೆಗಳಾಗಿವೆ.

**ರಾಮನಾಥ ದೇವಾಲಯ ಗೋವಿಂದನಹಳ್ಳಿ :** ಸ್ಥಳೀಯ ಕ್ರಿ.ಶ. ೧೨೩೬ರ ಶಾಸನವು ವಿವಿಧ ಗೋತ್ರದ ಮತ್ತು ಸೂತ್ರದ ಬ್ರಾಹ್ಮಣರಿಗೆ ಸೇತುವಿನ ರಾಮನಾಥದೇವರ ಸನ್ನಿಧಿಯಲ್ಲಿ ಕಬ್ಬಾಹುನಾಡಿನಲ್ಲಿದ್ದ ಸೋಮನಾಥಪುರ ಎಂಬ ಪ್ರತಿನಾಮಧೇಯ ಅಗ್ರಹಾರ ತೆಂಗಿನಕಟ್ಟದಲ್ಲಿ ಅರವತ್ತೆರಡು ವೃತ್ತಿ ಭೂಮಿ ಮತ್ತು ತೆರಿಗೆಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೧೦] ಈ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೨-೧೩ನೆಯ ಶತಮಾನದಲ್ಲಿ ನಿರ್ಮಾಣವಾಗಿರುವ ಪಂಚಲಿಂಗೇಶ್ವರ ದೇವಾಲಯವಿದೆ. ಇದು ಪ್ರಾಯಶಃ ಪ್ರಸ್ತುತ ಶಾಸನೋಕ್ತ ಸೇತುವಿನ ರಾಮನಾಥ ದೇವಾಲಯವಾಗಿರಬಹುದು. ಪಂಚಕೂಟ ವಿನ್ಯಾಸದಲ್ಲಿರುವ ಈ ದೇವಾಲಯವು ಐದು ಗರ್ಭಗೃಹಗಳು, ಐದು ಸುಖನಾಸಿಗಳು, ಒಂದು ನವರಂಗ ಮತ್ತು ಎರಡು ಮುಖಮಂಟಪಗಳಿಂದ ಕೂಡಿದೆ. ಪ್ರತಿಯೊಂದು ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರಗಳಿವೆ. ಈ ಶಿಖರಗಳ ಮುಂಭಾಗದಲ್ಲಿ

ಸುಖನಾಸಿಗಳಿವೆ. ಈ ದೇವಾಲಯದ ಹೊರಭಿತ್ತಿಯ ಮೇಲೆ ಸುಂದರವಾದ ಶೈವ ಮತ್ತು ವೈಷ್ಣವ ಧರ್ಮದ ವಿವಿಧ ಶಿಲ್ಪಗಳಿವೆ.

**ಜಾಕನಕೆರೆ ದಮ್ಮೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ೧೨೪೨ರ ಶಾಸನವು ಬೆಳ್ಳಿ ಕುಲದ ಕಲ್ಲಗಾವುಂಡನು ತನ್ನ ಅಜ್ಜ ದಮ್ಮಗಾವುಂಡನ ಪರೋಕ್ಷ ವಿನಯಾರ್ಥವಾಗಿ ಆತನ ಹೆಸರಿನಲ್ಲಿ ದಮ್ಮೇಶ್ವರ ದೇವಾಲಯವನ್ನು ಕಟ್ಟಿಸಿ ಅದಕ್ಕೆ ಐದು ಸಲಗೆ ಗದ್ದೆಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ತೆರೆದ ಅಂತರಾಳ ಮತ್ತು ನವರಂಗವನ್ನು ಒಳಗೊಂಡಿದೆ. ಇದರ ಹೊರಭಾಗವು ಕಾಲಾಂತರದಲ್ಲಿ ಜೀರ್ಣೋದ್ಧಾರವಾಗುತ್ತ ಬಂದಿರುವುದರಿಂದ ಮೂಲ ವಾಸ್ತು ಲಕ್ಷಣಗಳಲ್ಲಿ ಕೆಲವು ಬದಲಾವಣೆಗಳಾಗಿವೆ.

**ತೆಂಗಿನಘಟ್ಟದ ಹೊಯ್ಸಳೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ೧೧೧೭ರ ಶಾಸನವು ತೆಂಗಿನಘಟ್ಟದ ಹಡವಳ ಕೊಳ್ಳಿಅಯ್ಯ ಮತ್ತು ಚಾವುಂಡವ್ವೆ ದಂಪತಿಗಳ ಸುಪುತ್ರ ಹಡವಳ ಕಾವಣ್ಣ ಮತ್ತು ಇತರರು ಜೊತೆಗೂಡಿ ಹೊಯ್ಸಳೇಶ್ವರ ದೇವಾಲಯವನ್ನು ನಿರ್ಮಿಸಿ, ಅದಕ್ಕೆ ಎರಡು ಸಲಗೆ ಮತ್ತು ಹತ್ತು ಕೊಳಗ ಗದ್ದೆ, ಎರಡು ಸಲಗೆ ಮತ್ತು ಹದಿನಾಲ್ಕು ಕೊಳಗ ಬೆದ್ದಲೆ ಭೂಮಿಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಇಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ. ಈ ದೇವಾಲಯವು ಈಗ ಭಗ್ನಾವಸ್ಥೆಯಲ್ಲಿದೆ.

**ತೋಣಚಿಯ ನಗರೀಶ್ವರ ದೇವಾಲಯ** : ಕ್ರಿ.ಶ. ಸುಮಾರು ೧೦-೧೧ನೆಯ ಶತಮಾನದ ಸ್ಥಳೀಯ ಶಾಸನವು ಪೆರಾಳ್ಕೆ ಹೆಗ್ಗಡೆ ಚನ್ದಯ ಮತ್ತು ತೊಳಂಜೆಯ ಗೋಳಗಾವುಂಡ ಜೊತೆಗೂಡಿ ಅಂಕಕಾರ ದೇವಾಲಯಕ್ಕೆ ಮೂವತ್ತು ಕೊಳಗ ಭೂಮಿಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಇದೇ ದೇವಾಲಯಕ್ಕೆ ಹೊಯ್ಸಳ ಮನೆತನದ ವಿನಯಾದಿತ್ಯನು ಕ್ರಿ.ಶ. ೧೦೪೮-೪೯ರಲ್ಲಿ ಜೀರವಣಾ ವೃತ್ತಿ ತೆರಿಗೆಯನ್ನು ದಾನ ಮಾಡಿದ್ದಾನೆ. ಈ ದೇವಾಲಯವನ್ನು ಅಂಕಕಾರ ನಗರೀಶ್ವರ ಎಂದು ಕರೆದಿರುವುದರಿಂದ ಇದನ್ನು ಸ್ಥಳೀಯ ನಗರರು (ವ್ಯಾಪಾರಿಗಳು) ಕಟ್ಟಿಸಿರುವಂತೆ ತೋರುತ್ತದೆ. ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಬಸವೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ.

**ತೋಣಚಿಯ ಸಿದ್ಧನಾಥ ದೇವಾಲಯ** : ಸ್ಥಳೀಯ ಕ್ರಿ.ಶ. ೧೧೩೧ರ ಶಾಸನವು ಹೊಯ್ಸಳ ಮನೆತನದ ಇಮ್ಮಡಿ ವೀರಬಲ್ಲಾಳದೇವ ಮತ್ತು ತೊಳಂಜೆಯ ಸ್ಥಳೀಯ ಪ್ರಭುಗಾವುಂಡರು ಸಿದ್ಧನಾಥ ದೇವಾಲಯದ ಅಂಗಭೋಗ, ರಂಗಭೋಗ, ನೈವೇದ್ಯ ಮತ್ತು ಜೀರ್ಣೋದ್ಧಾರಕ್ಕೆ ಈ ದೇವಾಲಯದ ಮುಂಭಾಗದ ನಜುವಲಹಾಳದ ಭೂಮಿಯೊಳಗೆ ನಾಲ್ಕು ಸಾವಿರ ಭೂಮಿಯನ್ನು (?) ಮತ್ತು ಹಿರಿಯ ಕೆರೆಯ ಕೆಳಗೆ ಎರಡು ಸಲಗೆ ಗದ್ದೆ ಮತ್ತು ಕಿರಿಯ ಕೆರೆಯ ಕೆಳಗೆ ನಾಲ್ಕು ಸಲಗೆ ಗದ್ದೆಯನ್ನು ತೆರಿಗೆಯಿಂದ ಮುಕ್ತಗೊಳಿಸಿ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ತೆರೆದ ಮುಖಮಂಟಪದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದೆ.

**ತೋಣಚಿಯ ಮಹಾದೇವ ದೇವಾಲಯ** : ಸ್ಥಳೀಯ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು ತೊಳಂಜೆಯ ಮಹಾದೇವ ದೇವಾಲಯದ ನಂದಾದೀವಿಗೆಗಾಗಿ ಸುರಿಗೆಯ ನಾಗಯ್ಯ ಮತ್ತು ಸುಂಕದ ನರವಣ ಹೆಗ್ಗಡೆ ಜೊತೆಗೂಡಿ ಗಾಣದ ತೆರಿಗೆಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ತೋಣಚಿಯ ಕರಿದೇವ ದೇವಾಲಯ** : ಭದ್ರನಕೊಪ್ಪಲಿನ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು ಹೊಯ್ಸಳ ಮನೆತನದ ವಿಷ್ಣುವರ್ಧನನು ತೊಳಂಜೆಯ ಕರಿದೇವ ದೇವಾಲಯಕ್ಕೆ ಭೂಮಿ ಹೊಲಸೇವೆ, ಪಟ್ಟಣದ ಬಡಗಲು ಮತ್ತು ಗ್ರಾಮದ ಮುಂಭಾಗದಲ್ಲಿರುವ ಜಿಳಕ್ತಿಹೊಲ, ಹಿರಿಯ ಕೆರೆಗಳನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯವನ್ನು ಕುರಿತು ಹೆಚ್ಚಿನ ವಿವರಗಳು ಲಭ್ಯವಿಲ್ಲ. ಪ್ರಾಯಶಃ ಈ ದಾನವು ಈ ಮೇಲಿನ ಅಂಕಕಾರ ನಗರೀಶ್ವರ ದೇವಾಲಯಕ್ಕೆ ಸಂಬಂಧಪಟ್ಟಿರ ಬಹುದಾಗಿದೆ.

**ನಾಗರಘಟ್ಟ ಮಹಾದೇವ ದೇವಾಲಯ** : ಸ್ಥಳೀಯ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು ಸೇನಾಪತಿ ಕೇರಾಳನಾಯಕನು ನಾಗರಘಟ್ಟದ ಮಹಾದೇವ ದೇವಾಲಯಕ್ಕೆ ಹತ್ತು ಸಲಗೆ ಗದ್ದೆ, ಮೂವತ್ತು ಕೊಳಗ ಗದ್ದೆ ಮತ್ತು ಕಾಡಾಕ್ಕಿ (ಕಾಡು) ಭೂಮಿಯನ್ನು ದಾನ

ಮಾಡಿರುವುದನ್ನು ಉಲ್ಲೇಖಿಸುತ್ತದೆ.[೧೮] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಮಲ್ಲೇಶ್ವರ ದೇವಾಲಯುವೆಂದು ಕರೆಯುಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದೆ.

**ಭೈರಾಪುರ ಭೈರಮೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ೧೩೧೨ರ ಕ್ರಯಪತ್ರ ಶಾಸನವು ಅನಾದಿ ಅಗ್ರಹಾರ ಭಯಿರಮೇಶ್ವರಪುರ ಪ್ರತಿನಾಮಧೇಯ ಭೈಯಿರಾಪುರದ ಮಹಾಜನರು ಸ್ಥಾನಿಕ ಬೊಮ್ಮಣ್ಣ ಮತ್ತು ಸ್ಥಳೀಯ ಪ್ರಜೆಗಳು ಭೈಯಿರಾಪುರದಲ್ಲಿ ದಾನ ಮಾಡಿದ (ಈ ದಾನ ಯಾರಿಗೆ ಮತ್ತು ಯಾವುದಕ್ಕೆ ಎಂಬುದು ಸ್ಪಷ್ಟವಿಲ್ಲ) ಗದ್ದೆಯ ಕುರಿತು ಕ್ರಯಪತ್ರವನ್ನು ತಮ್ಮೆಲ್ಲರ ಒಪ್ಪಿಗೆಯ ಮೇರೆಗೆ ಸ್ಥಳೀಯ ಬಯಿರಮೇಶ್ವರ ದೇವರ ಸನ್ನಿಧಿಯಲ್ಲಿ ಬರೆದುಕೊಟ್ಟಿರುವುದನ್ನು ಉಲ್ಲೇಖಿಸುತ್ತದೆ.[೧೯] ಈ ಗ್ರಾಮದಲ್ಲಿ ಕ್ರಿ.ಶ. ಸುಮಾರು ೧೨-೧೩ನೆಯ ಶತಮಾನದಲ್ಲಿ ನಿರ್ಮಾಣವಾಗಿರುವ ಈಶ್ವರ ದೇವಾಲಯವಿದೆ. ಇದು ಪ್ರಾಯಶಃ ಪ್ರಸ್ತುತ ಶಾಸನೋಕ್ತ ಬಯಿರಮೇಶ್ವರ ದೇವಾಲಯವಾಗಿರಬಹುದು. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಸುಖನಾಸಿ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ.

**ಭೈರಾಪುರ ಕಾಳಿಕಾದೇವಿ ದೇವಾಲಯ** : ಸ್ಥಳೀಯ ಕ್ರಿ.ಶ. ೧೩೧೨ರ ಕ್ರಯಪತ್ರ ಶಾಸನವು ಅನಾದಿ ಅಗ್ರಹಾರ ಭಯಿರಮೇಶ್ವರಪುರ ಪ್ರತಿನಾಮಧೇಯ ಭಯಿರಾಪುರದ ಮಹಾಜನರು ಸ್ಥಾನಿಕ ಬೊಮ್ಮಣ್ಣ ಮತ್ತು ಸ್ಥಳೀಯ ಪ್ರಜೆಗಳು ಭೈಯಿರಾಪುರದಲ್ಲಿ ದಾನ ಮಾಡಿದ (ಈ ದಾನ ಯಾರಿಗೆ ಮತ್ತು ಯಾವುದಕ್ಕೆ ಎಂಬುದು ಸ್ಪಷ್ಟವಿಲ್ಲ) ಗದ್ದೆಯ ಕುರಿತು ಕ್ರಯಪತ್ರವನ್ನು ಹೊಣೆಕಾರರ ಒಪ್ಪಿಗೆಯ ಮೇರೆಗೆ ಸ್ಥಳೀಯ ಕಾಳಿಕಾದೇವಿಯ ಸನ್ನಿಧಿಯಲ್ಲಿ ಬರೆದುಕೊಟ್ಟಿರುವುದನ್ನು ಉಲ್ಲೇಖಿಸುತ್ತದೆ.[೨೦] ಈ ದೇವಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ಭೈರಾಪುರ ಅಮೃತೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ೧೩೧೨ರ ಕ್ರಯಪತ್ರ ಶಾಸನವು ಅನಾದಿ ಅಗ್ರಹಾರ ಭಯಿರಮೇಶ್ವರಪುರ ಪ್ರತಿನಾಮಧೇಯ ಭೈಯಿರಾಪುರದ ಮಹಾಜನರು ಸ್ಥಾನಿಕ ಬೊಮ್ಮಣ್ಣ ಮತ್ತು ಸ್ಥಳೀಯ ಪ್ರಜೆಗಳು ಭೈಯಿರಾಪುರದಲ್ಲಿ ದಾನ ಮಾಡಿದ (ಈ ದಾನ ಯಾರಿಗೆ ಮತ್ತು ಯಾವುದಕ್ಕೆ ಎಂಬುದು ಸ್ಪಷ್ಟವಿಲ್ಲ) ಗದ್ದೆಯ ಕುರಿತು ಕ್ರಯಪತ್ರವನ್ನು ಸಾಕ್ಷಿಗಳ ಒಪ್ಪಿಗೆಯ ಮೇರೆಗೆ ಸ್ಥಳೀಯ ಅಮೃತೇಶ್ವರ ಸನ್ನಿಧಿಯಲ್ಲಿ ಬರೆದುಕೊಟ್ಟಿರುವುದನ್ನು ಉಲ್ಲೇಖಿಸುತ್ತದೆ.[೨೧] ಈ ದೇವಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ಭೈರಾಪುರ ಸೋಮನಾಥ ದೇವಾಲಯ** : ಸ್ಥಳೀಯ ಕ್ರಿ.ಶ. ೧೪೨೪ರ ಶಾಸನವು ಬುಕ್ಕಣ ಒಡೆಯ ಮತ್ತು ಮಲ್ಲಾಂಬಿಕೆ ದಂಪತಿಗಳ ಸುಪ್ರತ್ರನು (ಹೆಸರು ತ್ರುಟಿತವಾಗಿದೆ) ಅನಾದಿ ಅಗ್ರಹಾರ ಭಯಿರಮೇಶ್ವರಪುರದ ಮಹಾಜನರಿಂದ ಸರ್ವಸಾಮಾನ್ಯ ಕ್ರಯವಾಗಿ ಗದ್ದೆಯನ್ನು ಖರೀದಿಸಿ ಸ್ಥಳೀಯ ಸೋಮನಾಥ ದೇವಾಲಯಕ್ಕೆ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೨] ಈ ದೇವಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ.

**ಮಾಳಗೂರು ಕಮ್ಮಟೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ೧೧೧೭ರ ಶಾಸನವು ಬಲ್ಲೆಯನಾಯಕ ಮತ್ತು ಸ್ಥಳೀಯ ಗಾವುಂಡರು ಕಮ್ಮಟೇಶ್ವರ ದೇವಾಲಯುದ ನಂದಾದೀವಿಗೆಗಾಗಿ ಊರಿನ ಹಿರಿಯರು ಕೆರೆಯ ಕಿಬ್ಬ ಪಲತ್ತಿಗಾಲದಲ್ಲಿ ಮೂವತ್ತು ಕೊಳಗ ಗದ್ದೆ, ಆ ಹಿರಿಯ ಕೆರೆಯ ಹಡುವಣ ಕೋಡಿಯಲ್ಲಿ ಹತ್ತು ಕೊಳಗ ಬೆದ್ದಲ ಭೂಮಿ ಮತ್ತು ದೇವಾಲಯದ ಮುಂದಣ ಕೆರೆಯ ಅಂಚಿನ ತೋಟದ ಮಣ್ಣು ಮತ್ತು ಹಳ್ಳದ ಹತ್ತಿರದ ಗದ್ದೆಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೩] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ.

**ಮೆಳ್ಳಹಳ್ಳಿ ಶಿವನ ದೇವಾಲಯ** : ಸ್ಥಳೀಯ ಕ್ರಿ.ಶ. ೧೧೧೪-೧೫ರ ಶಾಸನವು ಸೆಟ್ಟಿಗಾವುಂಡ ಮತ್ತು ಇತರರು ಮೈದುನಹಳ್ಳಿಯ (ಮೆಳ್ಳಹಳ್ಳಿ) ಶಿವ ದೇವಾಲಯಕ್ಕೆ ಐವತ್ತು ಮಣ್ಣು (ಭೂಮಿಯನ್ನು) ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೪] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಮತ್ತು ನವರಂಗದಿಂದ ಕೂಡಿದೆ. ಈ ದೇವಾಲಯವು ಈಗ ಭಗ್ನಾವಸ್ಥೆಯಲ್ಲಿದೆ.

**ಸಂತೇಬಾಚಹಳ್ಳಿ ವೀರಭದ್ರ ದೇವಾಲಯ** : ಸ್ಥಳೀಯ ಕ್ರಿ.ಶ. ೧೫೫೩ರ ಶಾಸನವು ಕಾರ್ಯಕರ್ತ ರಂಗಪ್ಪಯ್ಯನು ಬಾಚಿಹಳ್ಳಿಯ ವೀರಭದ್ರ ದೇವಾಲಯದ ಸ್ಥಾನಿಕ ಹೊನ್ನಹಲಗೆಯ ಲಿಂಗಣ್ಣನಿಗೆ ಕಾಣಾಚಿಯ ಭೂಮಿ, ಕೇಸವಿನಕಟ್ಟೆ ಮತ್ತು ಹಲಸಿನಹಳ್ಳಿ ಗ್ರಾಮಗಳು,

ಲೋಕನಹಳ್ಳಿಯ ಕೆರೆಯ ಕೆಳಗೆ ಒಂದು ಖಂಡುಗ ಬೀಜ, ಬಾಚಿಹಳ್ಳಿ ಸ್ಥಳದ ಗದ್ದೆ, ಹೊಲ, ತೋಟ, ಮನೆಯನ್ನು ತೆರಿಗೆಗಳಿಂದ ಮುಕ್ತಗೊಳಿಸಿ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೫] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ವೀರಭದ್ರೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದೆ.

**ಸಾಸಲು ಭೋಗೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ೧೧೨೧ರ ಶಾಸನವು ಹೊಯ್ಸಳ ಮನೆತನದ ಬಿಟ್ಟಿದೇವನು (ವಿಷ್ಣುವರ್ಧನ) ತನ್ನ ಗೋತ್ರದ ಶುದ್ಧಿಗಾಗಿ ಭೋಗೇಶ್ವರ ದೇವಾಲಯಕ್ಕೆ ಎರಡು ಖಂಡುಗ ಗದ್ದೆ, ಕೆರೆಯ ಮೂಡಣ ಕೋಡಿಯಲ್ಲಿ ಮೂವತ್ತು ಕೊಳಗ ಗದ್ದೆ, ಮೂಡಣ ಏರಿಯಲ್ಲಿ ಒಂದು ಖಂಡುಗ ಗದ್ದೆಗಳನ್ನು ಆ ದೇವಾಲಯದ ಸ್ಥಾನಾಚಾರ್ಯ ಕಾಳಾಮುಖ ಪಂಥದ ಕಚಿಕಂಠಜೀಯ ಆಚಾರ್ಯನ ಸನ್ನಿಧಿಯಲ್ಲಿ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೬] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಶಂಭುಲಿಂಗೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ, ನವರಂಗ ಮತ್ತು ತೆರೆದ ಮುಖಮಂಟಪದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ದ್ರಾವಿಡ ಶೈಲಿಯ ಶಿಖರವಿದೆ.

**ಸಾಸಲು ಸೋಮೇಶ್ವರ ದೇವಾಲಯ** : ಸ್ಥಳೀಯ ಕ್ರಿ.ಶ. ಸುಮಾರು ೧೭-೧೮ನೆಯ ಶತಮಾನದ ಶಾಸನವು ಲಿಂಗದೇವ ಮಹಾ ಅರಸರು ಸೋಮೇಶ್ವರ ದೇವಾಲಯದ ಮಧ್ಯಾಹ್ನದ ನೈವೇದ್ಯಕ್ಕೆ ಹೊನ್ನೇನಹಳ್ಳಿಯಲ್ಲಿ ಭೂದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೭] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಸೋಮಲಿಂಗೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಗರ್ಭಗೃಹದ ಮೇಲ್ಭಾಗದಲ್ಲಿ ಫಾಂಸನಾ ಶೈಲಿಯ ಶಿಖರವಿದೆ.

**ಸಿಂದಘಟ್ಟ ಸಂಗಮೇಶ್ವರ ಮತ್ತು ಜನ್ನೇಶ್ವರ ದೇವಾಲಯ:** ಸ್ಥಳೀಯ ಕ್ರಿ.ಶ. ೧೨೫೫ರ ಶಾಸನವು ಸಿಂಧಘಟ್ಟದ ಮಹಾಜನರು ಸಂಗಮೇಶ್ವರ ಮತ್ತು ಜನ್ನೇಶ್ವರ ದೇವಾಲಯದ ಧಾರ್ಮಿಕ ಹಾಗೂ ಸಾಮಾಜಿಕ ಚಟುವಟಿಕೆಗಳಿಗೆ ಎರಡು ವೃತ್ತಿ ಭೂಮಿಯನ್ನು ಮತ್ತು ಎಂಬತ್ತೈದು ವರಾಹ ನಾಣ್ಯಗಳನ್ನು ಮಚನಕಟಕದ ಸ್ಥಾನಪತಿಯಾದ ಹಿರಿಯ ಭಂಡಾರದ ಚಿಕ್ಕಮಲ್ಲೆಯ ನಾಯಕನ ಪುತ್ರ ಮಲೆಯನಾಯಕನ ಉಪಸ್ಥಿತಿಯಲ್ಲಿ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ದೇವಾಲಯದ ಅಮೃತಪಡಿಗೆ ಸಲ್ಲುತ್ತಿದ್ದ ಹೊನ್ನನ್ನು ಸ್ಥಳೀಯ ಮಹಾಜನರು ಪ್ರತಿವರ್ಷ ತಾವೇ ಸಂಗ್ರಹಿಸುತ್ತ, ಜೊತೆಗೆ ಈ ದೇವಾಲಯಕ್ಕೆ ಸಂದ ಎರಡು ವೃತ್ತಿ ಭೂಮಿಯಿಂದ ಬರುತ್ತಿದ್ದ ಸಿದಾಯ (ನಿಯಮಿತವಾಗಿ ಕೊಡಬೇಕಾದ ನಿರ್ದಿಷ್ಟ ಹಣ ಅಥವಾ ದಾನ್ಯ ರೂಪದ ಕರ), ಸೇಸೆ (?), ಖಾಣ (ಮೇಪಿನ ಮೇಲಿನ ಕರ), ಕಟಕಸೇಸೆ (ಸೈನ್ಯದ ಠಾಣೆಯ ನಿರ್ವಹಣೆಗಾಗಿ ಕೊಡುವ ಕರ), ಆನೆಯ ಸೇಸೆ (ಆನೆಯ ದಂಡಿನ ನಿರ್ವಹಣೆಗಾಗಿ ಕೊಡುವ ಕರ), ಬಾಸಿಗದೆಱೆ (ಮದುವೆಯಕರ) ಮೊದಲಾದ ತೆರಿಗೆಗಳನ್ನು ಆ ದೇವಾಲಯದ ಧಾರ್ಮಿಕ, ಆರ್ಥಿಕ, ಸಾಮಾಜಿಕ ಚಟುವಟಿಕೆಗಳಿಗೆ ವಿನಿಯೋಗಿಸುತ್ತಿದ್ದರು.[೨೮] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಈಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ದ್ವಿಕೂಟ ವಿನ್ಯಾಸದಲ್ಲಿರುವ ಇದು ಎರಡು ಗರ್ಭಗೃಹಗಳು, ಎರಡು ಅಂತರಾಳಗಳು, ಒಂದು ನವರಂಗ ಮತ್ತು ಎರಡು ಮುಖಮಂಟಪಗಳಿಂದ ಕೂಡಿದೆ. ಇದರ ಹೊರಭಾಗವು ಸಂಪೂರ್ಣ ಜೀರ್ಣೋದ್ಧಾರವಾಗಿರುವುದರಿಂದ ಮೂಲ ವಾಸ್ತು ಸ್ವರೂಪದಲ್ಲಿ ಕೆಲವು ಬದಲಾವಣೆಗಳಾಗಿವೆ. ಈ ದೇವಾಲಯವು ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್ ಮತ್ತು ಸ್ಥಳೀಯರ ಸಹಕಾರದೊಂದಿಗೆ ಜೀರ್ಣೋದ್ಧಾರವಾಗಿದೆ.

**ಹಿರೀಕಳಲೆ ಸ್ವಯಂಭೂ ದೇವಾಲಯ** : ಸ್ಥಳೀಯ ಕ್ರಿ.ಶ. ಸುಮಾರು ೧೨ನೆಯ ಶತಮಾನದ ಶಾಸನವು ಚೆಣ್ಣಮ್ಮನು ಸ್ವಯಂಭೂ ದೇವಾಲಯಕ್ಕೆ ಹಿರಿಯ ಕೆರೆಯ ತುಂಬಿನ ಹತ್ತಿರ ಎರಡು ಸಲಗೆ ಗದ್ದೆ, ದೇವಾಲಯದ ಮುಂದಣ ಕೆರೆಯ ಹತ್ತಿರ ಮೂರು ಸಲಗೆ ಗದ್ದೆ, ಕೀಳೇರಿಯಲ್ಲಿ ದೇವಾಲಯದ ತೆಂಕಣ ದಿಕ್ಕಿನಲ್ಲಿ ನಾಲ್ಕು ಸಲಗೆ ಗದ್ದೆ, ಅಡುವಿನ ಮಣ್ಣು ಗದ್ದೆ, ತೆಂಕಲು ದಿಕ್ಕಿನಲ್ಲಿ ಎರಡು ಸಲಗೆ ಗದ್ದೆಯನ್ನು ಕಾಳಮುಖ ಪಂಥದ ಸೋಮರಾಶಿ ಆಚಾರ್ಯನ ಸನ್ನಿಧಿಯಲ್ಲಿ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೨೯] ಇದೇ ದೇವಾಲಯಕ್ಕೆ ಏಚಗಾವುಂಡನು ದತ್ತಿ ನೀಡಿದ್ದಾನೆ.[೩೦] ಇದೇ ದೇವಾಲಯದ ನಂದಾದೀವಿಗೆಗೆ ಹಿರಿಯ ಹೆಗ್ಗಡೆ ಹರಿಯಣ್ಣನು ಕ್ರಿ.ಶ. ಸುಮಾರು ೧೩ನೆಯ ಶತಮಾನದಲ್ಲಿ ಪನ್ನಾಯದಿಂದ (ಪನ್ನಾಯ = ವೀಳೆದೆಲೆಯ ವ್ಯಾಪಾರದ ಮೇಲಿನ ಕರ) ಬರುವ ಆದಾಯವನ್ನು ದಾನ ಮಾಡಿದ್ದಾನೆ.[೩೧] ಇದೇ ದೇವಾಲಯದ ನಂದಾದೀವಿಗೆಗಾಗಿ ವ್ಯಕ್ತಿಯೊಬ್ಬನು (ಹೆಸರು ತ್ರುಟಿತವಾಗಿದೆ) ಕಾಳಾಮುಖ ಪಂಥದ ಲಕ್ಕಜೀಯ

ಆಚಾರ್ಯನ ಪಾದ ತೊಳೆದು ದಾನ ಮಾಡಿದ್ದಾನೆ.[೩೨] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಬಸವೇಶ್ವರ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ, ನವರಂಗ ಮತ್ತು ಮುಖಮಂಟಪದಿಂದ ಕೂಡಿದೆ. ಈ ದೇವಾಲಯವು ಈಗ ಭಗ್ನಾವಸ್ಥೆಯಲ್ಲಿದೆ.

**ಹುಬ್ಬನಹಳ್ಳಿ ಮಾಕೇಶ್ವರ ದೇವಾಲಯ :** ಸ್ಥಳೀಯ ಕ್ರಿ.ಶ. ೧೧೪೦ರ ಶಾಸನವು ಮಹಾಸಾಮಂತ ಮಾಚಯ್ಯ ನಾಯಕನು ಕೆರೆಯನ್ನು ಮತ್ತು ಮಾಕೇಶ್ವರ ದೇವಾಲಯವನ್ನು ಮಾಡಿಸಿ, ಈ ದೇವಾಲಯಕ್ಕೆ ಜರಹದ ಹಿರಿಯ ಕೆರೆಯ ಹತ್ತಿರ ಮೂರು ಸಲಗೆ ಗದ್ದೆ, ನೇರಲ ಕೆರೆಯ ಹತ್ತಿರ ಒಂದು ಸಲಗೆ ಗದ್ದೆ, ನಿತ್ಯ ನೈವೇದ್ಯಕ್ಕೆ ಒಂದು ಸಲಗೆ ಬೆದ್ದಲ ಭೂಮಿಗಳನ್ನು ಕಾಳಾಮುಖ ಪಂಥದ ಬ್ರಹ್ಮರಾಶಿ ಆಚಾರ್ಯನ ಸನ್ನಿಧಿಯಲ್ಲಿ ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ.[೩೩] ಈ ದೇವಾಲಯವು ಇಂದಿಗೂ ಅಸ್ತಿತ್ವದಲ್ಲಿದೆ. ಈಗ ಇದನ್ನು ಮಲ್ಲಿದೇವ ದೇವಾಲಯವೆಂದು ಕರೆಯಲಾಗುತ್ತಿದೆ. ಏಕಕೂಟ ವಿನ್ಯಾಸದಲ್ಲಿರುವ ಇದು ಗರ್ಭಗೃಹ, ಅಂತರಾಳ ಮತ್ತು ನವರಂಗದಿಂದ ಕೂಡಿದೆ. ಈ ದೇವಾಲಯವು ಈಗ ಭಗ್ನಾವಸ್ಥೆಯಲ್ಲಿದೆ.

**ಹೊಸಹೊಳಲು ಸೋಮನಾಥ ದೇವಾಲಯ :** ಸ್ಥಳೀಯ ಕ್ರಿ.ಶ. ೧೩೦೬ರ ಶಾಸನವು ಸಪ್ಪೆಯ ಕೇತಯ್ಯನ ಸುಪುತ್ರ ಹುಲಿಗೆಜೀದೇವನು ಸೋಮನಾಥ ದೇವಾಲಯದ ನೈವೇದ್ಯಕ್ಕಾಗಿ ಸೋಮಯ್ಯನ ಉಪಸ್ಥಿತಿಯಲ್ಲಿ ಕೆರೆಯ ಕೆಳಗಣ ಭೂಮಿಯನ್ನು ದಾನ ಮಾಡಿರುವುದನ್ನು ಉಲ್ಲೇಖಿಸುತ್ತದೆ. ಈ ಮಹಾದಾನವು ಪ್ರಧಾನ ಮಾದಿ(ಸೇ)ದೇವಣ್ಣಾಯಕ ಮತ್ತು ಸೇನಬೋವ ಪದುಮಣ್ಣನ ಅಧಿಕಾರಿ ಹೊಸಹೊಳಲಿನ ಪಂದಲದೇವ ದೇಕಣ್ಣ ಮತ್ತು ಹೊಇಸನಾಡು, ಕೊಂಗನಾಡು ಇತ್ಯಾದಿ ನಾಡುಗಳ ಮಹಾಜನರ ಅನುಮತಿಯಿಂದ ಕೊಡಲ್ಪಟ್ಟಿದೆ.[೩೪] ಈ ದೇವಾಲಯವು ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿದೆ. ಗ್ರಾಮದ ಕೆರೆಯ ಅಂಚಿನಲ್ಲಿ ಸಮಕಾಲೀನ ವಾಸ್ತು ಕುರುಹುಗಳು ಹರಡಿಕೊಂಡಿವೆ. ಪ್ರಾಯಶಃ ಈ ಕುರುಹುಗಳು ಶಾಸನೋಕ್ತ ಸೋಮನಾಥ ದೇವಾಲಯಕ್ಕೆ ಸಂಬಂಧಪಟ್ಟಿರಬಹುದಾಗಿದೆ.

ಹೀಗೆ ಕೃಷ್ಣರಾಜಪೇಟೆ ತಾಲ್ಲೂಕಿನಲ್ಲಿ ಶೈವಧರ್ಮಕ್ಕೆ ಸಂಬಂಧಿಸಿದಂತೆ ಈವರೆಗೆ ಬೆಳಕಿಗೆ ಬಂದಿರುವ ಶಾಸನಗಳಲ್ಲಿ ಒಟ್ಟು ೨೬ ದೇವಾಲಯಗಳ ಉಲ್ಲೇಖಗಳು ದೊರೆಯುತ್ತವೆ. ಈ ತಾಲ್ಲೂಕಿನಲ್ಲಿ ಉಳಿದ ಧರ್ಮಗಳ ದೇವಾಲಯಗಳಿಗಿಂತ ಶೈವ ಧರ್ಮದ ದೇವಾಲಯಗಳ ಸಂಖ್ಯೆಯೇ ಅಧಿಕವಾಗಿದೆ. ಇದರಿಂದ ಈ ತಾಲ್ಲೂಕಿನ ಪರಿಸರದಲ್ಲಿ ಶೈವ ಧರ್ಮದ ಕಾಳಾಮುಖ ಪಂಥದ ಪ್ರಭಾವ ಹೆಚ್ಚಿನ ಪ್ರಮಾಣದಲ್ಲಿ ತುಂಬಿದ್ದು ಸ್ಪಷ್ಟವಾಗುತ್ತದೆ. ಪ್ರಸ್ತುತ ಶಾಸನೋಕ್ತ ದೇವಾಲಯಗಳಲ್ಲಿ ೨೧ ದೇವಾಲಯಗಳು ಇಂದಿಗೂ ಉಳಿದು ಬಂದಿವೆ. ಕೇವಲ ೫ ದೇವಾಲಯಗಳು ಮಾತ್ರ ಯಾವುದೋ ಒಂದು ಕಾಲಘಟ್ಟದಲ್ಲಿ ಸಮೂಲನಾಶವಾಗಿವೆ. ಈಗ ಉಳಿದು ಬಂದಿರುವ ದೇವಾಲಯಗಳು ಈ ತಾಲ್ಲೂಕಿನ ಶೈವ ಧರ್ಮದ ವಾಸ್ತುಕಲೆಯ ಅಧ್ಯಯನಕ್ಕೆ ಅಪರೂಪದ ಕೊಡುಗೆಗಳಾಗಿವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಕಲಬುರ್ಗಿ ಎಂ.ಎಂ., "ಪ್ರಾಚೀನ ಕರ್ನಾಟಕದಲ್ಲಿ ದೇವಾಲಯಗಳ ನಾಶ". ಮಾರ್ಗ ಸಂ. ಮೂರು (೧೯೯೮). ಪು. ೩೯-೪೦.
೨. **ಎ.ಕ.ಸಂ. VI**, ಶಾ.ಸಂ. ೧೨.
೩. ಅದೇ, ಶಾ.ಸಂ. ೪೭.
೪. ಅದೇ, ಶಾ.ಸಂ. ೨೭.
೫. ಅದೇ, ಶಾ.ಸಂ. ೩೭.
೬ ಅದೇ, ಶಾ.ಸಂ. ೨೭.
೭. ಅದೇ, ಶಾ.ಸಂ. ೨೮.
೮. ಅದೇ, ಶಾ.ಸಂ. ೨೭.
೯. ಅದೇ, ಶಾ.ಸಂ. ೩೮.
೧೦. ಅದೇ, ಶಾ.ಸಂ. ೩೯.
೧೧. ಅದೇ, ಶಾ.ಸಂ. ೬೯.
೧೨. ಅದೇ, ಶಾ.ಸಂ. ೪೨.
೧೩. ಅದೇ, ಶಾ.ಸಂ. ೫೦.
೧೪. ಅದೇ, ಶಾ.ಸಂ. ೪೮.
೧೫. ಅದೇ,
೧೬. ಅದೇ, ಶಾ.ಸಂ. ೫೪.
೧೭. ಅದೇ, ಶಾ.ಸಂ. ೫೬.
೧೮. ಅದೇ, ಶಾ.ಸಂ. ೬೦.
೧೯. ಅದೇ, ಶಾ.ಸಂ. ೯೫.
೨೦. ಅದೇ, ಶಾ.ಸಂ. ೯೫.
೨೧. ಅದೇ.
೨೨. ಅದೇ, ಶಾ.ಸಂ. ೯೬.
೨೩. ಅದೇ, ಶಾ.ಸಂ. ೬೬.
೨೪. ಅದೇ, ಶಾ.ಸಂ. ೧೧೪.
೨೫. ಅದೇ, ಶಾ.ಸಂ. ೬೪.
೨೬ ಅದೇ, ಶಾ.ಸಂ. ೫೯.
೨೭. ಅದೇ, ಶಾ.ಸಂ. ೫೭.
೨೮. ಅದೇ, ಶಾ.ಸಂ. ೯೦.
೨೯. ಅದೇ, ಶಾ.ಸಂ. ೭೩.
೩೦. ಅದೇ, ಶಾ.ಸಂ. ೭೪.
೩೧. ಅದೇ, ಶಾ.ಸಂ. ೭೫.
೩೨. ಅದೇ, ಶಾ.ಸಂ. ೭೬.
೩೩. ಅದೇ, ಶಾ.ಸಂ. ೬೨.
೩೪. ಅದೇ, ಶಾ.ಸಂ. ೮.

ಬಿ.ಸಿ. ಸುರೇಶ್*
ಶಲ್ವಪಿಳ್ಳೆ ಅಯಂಗಾರ್**

# ವರಕೋಡು ವರದರಾಜ ದೇವಾಲಯದ ವಾಸ್ತುಶಿಲ್ಪ

ವರಕೋಡು ಮೈಸೂರು ಜಿಲ್ಲೆಯ ಮತ್ತು ತಾಲ್ಲೂಕಿನ ಒಂದು ಗ್ರಾಮ. ಮೈಸೂರಿನಿಂದ ಸುಮಾರು ೧೫ ಕಿ.ಮೀ. ದೂರದಲ್ಲಿ ತಿ. ನರಸೀಪುರಕ್ಕೆ ಹೋಗುವ ಮಾರ್ಗದ ಎಡಭಾಗದಲ್ಲಿ ಈ ಗ್ರಾಮ ಇದೆ. ಈ ಗ್ರಾಮದ ಮಧ್ಯಭಾಗದಲ್ಲಿರುವ ವರದರಾಜಸ್ವಾಮಿಯ ಗ್ರಾನೈಟ್ ಕಟ್ಟಡದ ದೇವಾಲಯ ಪೂರ್ವಾಭಿಮುಖವಾಗಿದೆ. ಮುಖ್ಯದ್ವಾರವು ವಿಜಯನಗರ ಕಾಲದ್ದು. ಇಲ್ಲಿ ವ್ಯಾಳ ಹಸ್ತ ಸೋಪಾನವಿದೆ. ದ್ವಾರದ ಮೇಲ್ಭಾಗದ ಲಲಾಟಬಿಂಬದಲ್ಲಿ ಗಜಲಕ್ಷ್ಮಿಯ ಚಿತ್ರವಿದೆ. ದ್ವಾರದ ಎರಡು ಕಡೆಯೂ ಸೋಪಾನವಿದೆ. ದೇವಾಲಯದ ಒಳಭಾಗದಲ್ಲಿ ಒಂದು ಸುಂದರ ಬಲಿಪೀಠವಿದೆ. ಅದರ ಪಕ್ಕದಲ್ಲಿ ಪಾದುಕೆಗಳಿವೆ. ದೇವಾಲಯದ ಮುಂಭಾಗದ ಹಜಾರದಲ್ಲಿ ನಾಲ್ಕು ಹೊಯ್ಸಳ ಮಾದರಿಯ ಕಂಬಗಳಿವೆ. ಈ ಕಂಬಗಳನ್ನು ಚರಕಿ ಯಂತ್ರದಿಂದ ದುಂಡಗೆ ಕಡೆಯಲ್ಪಟ್ಟಿದ್ದು ಇವು ಶ್ರೀಕರ ಮಾದರಿಯ ಕಂಬಗಳಾಗಿವೆ. ಮಧ್ಯದ ಎರಡು ಕಂಬಗಳಲ್ಲಿ ಕ್ರಿ.ಶ. ೧೬೦೫[೧] ಮತ್ತು ಕ್ರಿ.ಶ. ೧೬೧೧ರ[೨] ಶಾಸನಗಳಿವೆ. ಹಜಾರವು ಕಪೋತವನ್ನು ಹೊಂದಿದ್ದು ಅದರ ಮೇಲ್ಭಾಗದಲ್ಲಿ ಇಟ್ಟಿಗೆಯಿಂದ ಚಿಕ್ಕದಾದ ಗೋಡೆಯನ್ನು ಕಟ್ಟಿದ್ದಾರೆ. ಇದು ಬಹುಶಃ ಮೈಸೂರು ಒಡೆಯರ ಕಾಲದಲ್ಲಿ ಕಟ್ಟಿರಬಹುದು.[೩] ಹಜಾರದ ಎಡಭಾಗದ ಗೋಡೆಯಲ್ಲಿ ಒಂದು ಪಂಚತಂತ್ರ ಕಥೆಯ ಶಿಲ್ಪವಿದೆ. ಮೊಸಳೆಯ ಬಾಯಿಯಿಂದ ವ್ಯಕ್ತಿಯು ಹೊರಬರುತ್ತಿರುವ ಚಿತ್ರವಿದೆ.

ವೀರಶೈವ ಮೂಲಗಳ ಪ್ರಕಾರ ಸಿದ್ಧರಾಮ ಎಂಬುವವನು ಮೊಸಳೆ ಬಾಯಿಯಿಂದ ಒಳಗೆ ಹೋಗಿ ಅಪಾಯವಿಲ್ಲದೆ ಹೊರ ಬಂದನೆಂದು ಸಿದ್ಧರಾಮನ ಪವಾಡಗಳಲ್ಲಿ ಹೇಳಲಾಗಿದೆ; ಬಹುಶಃ ಈ ಕಥೆಯನ್ನು ಪ್ರತಿನಿಧಿಸುತ್ತಿರಬಹುದು[೪]. ಈ ಭಿತ್ತಿಯ ಎರಡು ಮೂಲೆಗಳಲ್ಲಿ ಚೌಕಾಕಾರವಾದ ಕಂಬಗಳಿದ್ದು ಇವುಗಳಲ್ಲಿ ಕೆಲವು ಶಿಲ್ಪಗಳನ್ನು



ಕೆತ್ತಲಾಗಿದೆ. ದೇವಾಲಯದ ಬಲಭಾಗದಲ್ಲಿ ಒಂದು ಚಿಕ್ಕದಾದ ಹೊಯ್ಸಳ ಮಾದರಿಯ ಕಂಬವಿದೆ. ಮೇಲ್ಭಾಗದಲ್ಲಿ ಕಲ್ಲಿನಲ್ಲಿ ಮಾಡಿರುವ ಚಿಕ್ಕದಾದ ತೊಟ್ಟಿಯಿದ್ದು ಇಲ್ಲಿ ತುಳಸಿ ಗಿಡವನ್ನು ಹಾಕಲಾಗಿದೆ. ಜನರು ಇದನ್ನು ತುಳಸಿಕಟ್ಟೆ ಎಂದು ಇಂದಿಗೂ ಕರೆಯುತ್ತಿದ್ದಾರೆ. ದೇವಾಲಯದ ಎರಡು ಕಡೆಯಲ್ಲಿಯೂ ಶಿವಗಣದ ಭೃಂಗಿ ಮತ್ತು ನಂದಿಯ ಶಿಲ್ಪವಿದೆ. ದ್ವಾರಪಾಲಕರ ಮೇಲ್ಭಾಗದಲ್ಲಿ ಇತರ ಶೈವ ದೇವತೆಗಳನ್ನು ಕೆತ್ತಲಾಗಿದೆ. ದೇವಾಲಯವು ಗರ್ಭಗೃಹ, ಶುಕನಾಸಿ, ನವರಂಗ, ಹಜಾರ, ಒಳಕೈಸಾಲೆಯನ್ನು ಹೊಂದಿದೆ.

**ಗರ್ಭಗೃಹ :** ಗರ್ಭಗೃಹವು ಚೌಕಾಕಾರವಾಗಿದೆ ಇದು ಸುಮಾರು ೧೦ x ೧೦ ಅಡಿ ವಿಸ್ತಾರವನ್ನು ಹೊಂದಿದೆ. ಪೀಠದ ಮಧ್ಯಭಾಗದಲ್ಲಿ ಗರುಡನನ್ನು ತೋರಿಸಲಾಗಿದೆ. ಇಲ್ಲಿ ಸುಮಾರು ೬ ಅಡಿ ಎತ್ತರದ ವರದರಾಜಸ್ವಾಮಿಯ ಶಿಲ್ಪವಿದೆ. ಚತುರ್ಭುಜವನ್ನು ಹೊಂದಿರುವ ವರದರಾಜ ಸ್ವಾಮಿಯು ಎಡ ಹಸ್ತದಲ್ಲಿ ಶಂಖ ಮತ್ತು ಗದೆಯನ್ನು ಹಿಡಿದಿದ್ದು ಬಲ ಹಸ್ತದಲ್ಲಿ ಚಕ್ರ ಮತ್ತು ವರದಹಸ್ತವನ್ನು ಹೊಂದಿದೆ. ವರದ ಹಸ್ತದಲ್ಲಿ ಚಿಕ್ಕದಾದ ಕಮಲ ಅಥವಾ ಪದ್ಮವನ್ನು ಹಿಡಿದಿರುವುದರಿಂದ ಇವನನ್ನು ವರದರಾಜ

* ಸಂಶೋಧನಾ ವಿದ್ಯಾರ್ಥಿ, ಪ್ರಾಚೀನ ಇತಿಹಾಸ ಮತ್ತು ಪುರಾತತ್ತ್ವ ವಿಭಾಗ, ಮೈಸೂರು ವಿಶ್ವವಿದ್ಯಾನಿಲಯ, ಮಾನಸಗಂಗೋತ್ರಿ ಮೈಸೂರು.
** ಇತಿಹಾಸ ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಹುಣಸೂರು, ಮೈಸೂರು.



ಪುಷ್ಪಭುವನೇಶ್ವರಿಯು ಕಮಲದ ಅಕೃತಿಯಲ್ಲಿ ಅಲಂಕರಿಸಲಾಗಿದೆ. ಇದನ್ನು ಬಿಟ್ಟರೆ ಉಳಿದ ಭಾಗಗಳು ಸಾಮಾನ್ಯವಾಗಿವೆ. ಗರ್ಭಗೃಹದ ದ್ವಾರವು ಸರಳ ನಿರಾಡಂಬರವಾಗಿದೆ.

**ಶುಕನಾಸಿ :** ಶುಕನಾಸಿಯು ಸುಮಾರು ೫ ಅಡಿ ಅಗಲ ಹಾಗೂ ೬ ಅಡಿ ಉದ್ದವನ್ನು ಹೊಂದಿದೆ. ಇದು ಸಾಮಾನ್ಯವಾಗಿದ್ದು ಇಲ್ಲಿ ಯಾವ ರೀತಿಯ ವಿಶೇಷ ಲಕ್ಷಣಗಳು ಕಂಡುಬರುವುದಿಲ್ಲ. ಇಲ್ಲಿಯು ಹೊರಭಿತ್ತಿಯನ್ನು ಅರೆಗಂಬಗಳಿಂದ ಅಲಂಕರಿಸಿದ್ದಾರೆ.

**ನವರಂಗ :** ನವರಂಗದಲ್ಲಿ ಎಡ ಮತ್ತು ಬಲ ಭಾಗಗಳಲ್ಲಿ ಎರಡು ಸಣ್ಣ ಗುಡಿಗಳಿವೆ. ಬಲಭಾಗದ ಗುಡಿಯಲ್ಲಿ ಯಾವ ಮೂರ್ತಿಯೂಯಿಲ್ಲ. ಎಡ ಭಾಗದ ಗುಡಿಯಲ್ಲಿ ವಿಶ್ವಕ್ಸೇನ ದೇವರ ವಿಗ್ರಹವಿದೆ. ನಾಲ್ಕು ಕೈಗಳನ್ನು



ಹೊಂದಿರುವ ಈ ಚಿತ್ರದಲ್ಲಿ ಶಂಖ, ಚಕ್ರ, ಗದೆ ಮತ್ತು ತರ್ಜನಿಯ ಹಸ್ತ ಮತ್ತು ವೇತ್ರ ಹಸ್ತನಾಗಿರುತ್ತಾನೆ. ವೇತ್ರ ಎಂದರೆ ದಂಡ. ವಿಶ್ವಕ್ಸೇನನನ್ನು ಶತ್ರುಗಳನ್ನು ನಿಯಂತ್ರಿಸಲು ನಿಯೋಜಿಸುವುದರಿಂದ ಅವನು ಕೈಯಲ್ಲಿ ದಂಡವನ್ನು ಹಿಡಿದು

ಎಂದು ಗುರುತಿಸಲಾಗಿದೆ. ವರದರಾಜ ಎಂದರೆ ವರಗಳನ್ನು ಕೊಡುವವರಲ್ಲಿ ರಾಜ ಎಂದರ್ಥ. ಈ ವರದರಾಜ ಸ್ವಾಮಿಯ ಪೌರಾಣಿಕ ಹಿನ್ನೆಲೆಯು ಹೀಗಿದೆ. ಗಜೇಂದ್ರಮೋಕ್ಷ ಕಥೆಗೆ ಸಂಬಂಧಿಸಿರುವುದರಿಂದ "ಕರಿರಾಜವರದ" ಎಂದು ಸಹ ಹೇಳಲಾಗುತ್ತದೆ. ಸರೋವರದಲ್ಲಿ ಮೊಸಳೆಯು ಆನೆಯ ಕಾಲನ್ನು ಹಿಡಿಯಲಾಗಿ ಆನೆಯು ರಕ್ಷಣೆಗಾಗಿ ವಿಷ್ಣುವನ್ನು ಕರೆಯಿತು ವಿಷ್ಣುವು ಬಂದು ತನ್ನ ಚಕ್ರದಿಂದ ಮೊಸಳೆಯನ್ನು ಕತ್ತರಿಸಿ ಆನೆಯನ್ನು ಕಾಪಾಡಿದನು. ಆಗ ಆನೆಯು ತನ್ನ ಸೊಂಡಿಲಿನಿಂದ ಒಂದು ಕಮಲದ ಪುಷ್ಪವನ್ನು ವಿಷ್ಣುವಿಗೆ ನೀಡಿತು. ಅದನ್ನು ವಿಷ್ಣು ಕೈಯಲ್ಲಿ ಧರಿಸಿದ್ದಾನೆ. ಇಲ್ಲಿ "ಕರಿರಾಜ" ಎಂದರೆ ಆನೆ. ಆನೆಗೆ ವರವನ್ನು ನೀಡಿದುದರಿಂದ ಇವನನ್ನು ಕರಿರಾಜವರದ ಎಂದು ಕರೆಯಲಾಗುತ್ತದೆ. ವರದರಾಜನಿಗೂ ಮತ್ತು ವಿಷ್ಣುವಿಗೂ ಇರುವ ವ್ಯತ್ಯಾಸ ಎಂದರೆ ವಿಷ್ಣುವಿನ ಮೂರ್ತಿಯ ಅಭಯಹಸ್ತದಲ್ಲಿ ಕಮಲವು ಇರುವುದಿಲ್ಲ. ಇಲ್ಲಿ ಕಮಲ ಪುಷ್ಪವಿರುವುದರಿಂದ ನಾವು ಸುಲಭವಾಗಿ ವರದರಾಜ ಎಂದು ಗುರುತಿಸಬಹುದು.[೫] ಈ ವರದರಾಜಸ್ವಾಮಿಯ ಮೂರ್ತಿ ಕರ್ನಾಟಕದ ಹಲವು ಅರಸರಿಂದ ಪ್ರತಿಷ್ಠಾಪಿತವಾಗಿದ್ದರೂ ಕೂಡ ವಿಜಯನಗರ ಕಾಲದಲ್ಲಿ ಈ ಮೂರ್ತಿಯ ಸ್ಥಾಪನೆಯು ಹೆಚ್ಚಿನ ಸಂಖ್ಯೆಯಲ್ಲಿ ಕಂಡುಬರುತ್ತದೆ. ಮೂಲತಃ ವರದರಾಜಸ್ವಾಮಿಗೆ ತಮಿಳುನಾಡಿನ ಕಾಂಚಿಪುರವು ಪ್ರಸಿದ್ಧವಾಗಿದೆ.[೬]

ನಿಯಂತ್ರಿಸುತ್ತಾನೆ ಎಂದು ಆಗಮಗಳಲ್ಲಿ ಹೇಳಲ್ಪಟ್ಟಿದೆ[2]. ಆದುದರಿಂದ ಇವನನ್ನು ವಿಷ್ಣುವಿನ ಸೇನಾಧಿಪತಿ ಎಂದು ಹೇಳಬಹುದು. ಇವನ ಮೂರ್ತಿಗಳನ್ನು ವೈಷ್ಣವ ಪ್ರಮುಖ ದೇವಾಲಯಗಳಲ್ಲಿ ಕಾಣಬಹುದು. ನವರಂಗದಲ್ಲಿ ನಾಲ್ಕು ಸ್ವತಂತ್ರ ಕಂಬಗಳಿದ್ದು ಇವು ಚೌಕಾಕಾರವಾಗಿದೆ. ಪ್ರತಿ ಕಂಬಗಳ ನಾಲ್ಕು ಭಾಗಗಳಲ್ಲಿಯೂ ವಿವಿಧ ರೀತಿಯ ಪೌರಾಣಿಕ ಕಥೆಗಳನ್ನು ತಿಳಿಸುವಂತಹ ಶಿಲ್ಪಗಳನ್ನು ಚಿತ್ರಿಸಲಾಗಿದೆ. ಇಲ್ಲಿ ಎಡ ಭಾಗದಲ್ಲಿ ಕೊಳಲನ್ನು ಹಿಡಿದು ನುಡಿಸುತ್ತಿರುವ ವೇಣುಗೋಪಾಲನನ್ನು ಚಿತ್ರಿಸಲಾಗಿದೆ. ಅಕ್ಕ ಪಕ್ಕದಲ್ಲಿ ಗೋವುಗಳನ್ನು ಸಹ ಚಿತ್ರಿಸಲಾಗಿದೆ. ಎರಡು ಸಿಂಹದ ಜೋಡಿಗಳು ಹಿಮ್ಮುಖವಾಗಿ ಒಂದಕ್ಕೊಂದು ತಿರುಗಿಕೊಂಡಿರುವುದು, ಕುದುರೆಮುಖವನ್ನು ಹೊಂದಿರುವ ವ್ಯಕ್ತಿಯು ಡಮರುಗವನ್ನು ಬಾರಿಸುತ್ತಿರುವುದು, ಸ್ತ್ರೀ ಮುಖ ಪ್ರಾಣಿ ದೇಹವಿರುವ ಚಿತ್ರ, ನಾಟ್ಯಗಣಪತಿ, ಅರ್ಜುನನು ದ್ರೌಪದಿಯನ್ನು ವರಿಸಲು ಮತ್ಸ್ಯವನ್ನು ಭೇದಿಸುತ್ತಿರುವುದು (ಮತ್ಸ್ಯಯಂತ್ರ ಭೇದನ). ಉಗ್ರನರಸಿಂಹ (ಹಿರಣ್ಯಕಶಿಪುವಿನ ವಧೆ), ವಿಷ್ಣು, ನರ್ತಕಿಯರು ಹಾಗೂ ಇನ್ನಿತರ ಶಿಲ್ಪಗಳನ್ನು ಕೆತ್ತಲಾಗಿದೆ. ನವರಂಗದ ಮೇಲ್ಭಾಗವನ್ನು ಕಲ್ಲು ಚಪ್ಪಡಿಗಳಿಂದ ಮುಚ್ಚಲಾಗಿದೆ. ಯಾವುದೇ ರೀತಿಯ ಕೆತ್ತನೆಗಳಿಲ್ಲ. ನವರಂಗದಿಂದ ಹೊರ ಹೋಗಲು ದಕ್ಷಿಣ ಹಾಗೂ ಪೂರ್ವದಲ್ಲಿ ದ್ವಾರಗಳಿವೆ. ದಕ್ಷಿಣ ಭಾಗದ ದ್ವಾರದಲ್ಲಿ ಎರಡು ಕಂಬಗಳಿರುವ ಚಿಕ್ಕ ಮಂಟಪವಿದೆ. ಈ ಕಂಬಗಳು ದುಂಡಗಿದ್ದು ದ್ವಾರಗಳಿವೆ. ದಕ್ಷಿಣ ಭಾಗದ ದ್ವಾರದಲ್ಲಿ ಎರಡು ಕಂಬಗಳಿರುವ ಚಿಕ್ಕ ಮಂಟಪವಿದೆ. ಈ ಕಂಬಗಳು ದುಂಡಗಿದ್ದು ಅಲಂಕರಣೆಯನ್ನು ಹೊಂದಿವೆ.

ದೇವಾಲಯದ ಸುತ್ತಲೂ ಅನೇಕ ಕಂಬಗಳಿಂದ ನಿರ್ಮಿತವಾಗಿರುವ ಒಳಮುಖದ ಕೈಸಾಲೆಯಿದೆ, ಈ ಎಲ್ಲಾ ಕಂಬಗಳು ವಿವಿಧ ಶೈಲಿಯಲ್ಲಿವೆ. ಕೆಲವು ಚೌಕಕಾರವಾಗಿವೆ, ಮತ್ತೆ ಕೆಲವು ದುಂಡಗಿವೆ, ಮತ್ತೆ ಕೆಲವು ಆರು ಮುಖ ಹಾಗು ಎಂಟು ಮುಖಗಳನ್ನು ಹೊಂದಿವೆ. ಕೆಲವು ಕಂಬಗಳಲ್ಲಿ ಶಿಲ್ಪವನ್ನು ಕೆತ್ತಲಾಗಿದೆ. ದಕ್ಷಿಣ ಮತ್ತು ಉತ್ತರ ಭಾಗದ ಕೈಸಾಲೆಯು ಒಂದು ಸಾಲು ಕಂಬಗಳನ್ನು ಹೊಂದಿದ್ದು, ಪಶ್ಚಿಮ ಭಾಗದಲ್ಲಿ ಮೂರು ಸಾಲುಗಳ ಕಂಬಗಳನ್ನು ಹೊಂದಿರುವ ಕೈಸಾಲೆಯಿದೆ. ದೇವಾಲಯದ ಒಳಕೈಸಾಲೆಯ ಸುತ್ತಲೂ ಕಪೋತವನ್ನು ಮಾಡಿದ್ದು ಇಟ್ಟಿಗೆಗಳಿಂದ ಮೇಲ್ಛಾವಣಿಯಲ್ಲಿ ಸಣ್ಣ ಗೋಡೆಯನ್ನು ಕಟ್ಟಿದ್ದಾರೆ. ಇದನ್ನು ಬಹುಶಃ ಮೈಸೂರು ಅರಸರ ಕಾಲದಲ್ಲಿ ಕಟ್ಟಿರಬಹುದು. ದೇವಾಲಯದ ನೈರುತ್ಯ ಭಾಗದಲ್ಲಿ ದೇವಾಲಯದ ಮೇಲ್ಭಾಗಕ್ಕೆ ಹೋಗಲು ಸೋಪಾನವನ್ನು ನಿರ್ಮಿಸಿದ್ದಾರೆ.



ಇದರ ಪಕ್ಕದಲ್ಲಿ ಎರಡು ಸಣ್ಣ ಗುಡಿಗಳಿದ್ದು, ಒಂದರಲ್ಲಿ ಯಾವುದೇ ವಿಗ್ರಹವಿಲ್ಲದೆ ಒಂದು ಗರುಡಪೀಠವಿದೆ, ಮತ್ತೊಂದು ಗುಡಿಯಲ್ಲಿ ಗರುಡಪೀಠದಲ್ಲಿ ಲಕ್ಷ್ಮಿಯ (ಅಮ್ಮನವರ) ವಿಗ್ರಹವಿದೆ. ಲಕ್ಷ್ಮಿಯು ಚತುರ್ಭುಜವನ್ನು ಹೊಂದಿದ್ದು ಮೇಲಿನ ಕೈಗಳಲ್ಲಿ ಪದ್ಮ ಮತ್ತು ಶಂಖವನ್ನು ಕೆಳಭಾಗದ ಕೈಗಳಲ್ಲಿ ಅಭಯ ಹಾಗೂ ವರದ ಹಸ್ತಗಳನ್ನು ಹೊಂದಿದೆ. ಇದು ಮಹಾಲಕ್ಷ್ಮಿಯ ಸಾಮಾನ್ಯ ರೂಪವಾಗಿದ್ದು ವರದರಾಜನ ದೇವಾಲಯದಲ್ಲಿ ಇರುವುದರಿಂದ ಪೆರುಂದೇವಿ (ಹಿರಿಯದೇವಿ) ಅಮ್ಮನವರು ಎಂದು ಕರೆಯುತ್ತಾರೆ. ಇದು ಪ್ರಭಾವಳಿಯಿಂದ ಅಲಂಕೃತವಾಗಿದೆ. ಕರ್ನಾಟಕದ ಕೆಲವು ಶಾಸನಗಳಲ್ಲಿ ವರದರಾಜನನ್ನು ಅಲ್ಲಾಳನಾಥ ದೇವರು ಎಂದು ಕರೆಯಲಾಗುತ್ತದೆ, ಆದುದರಿಂದ ಅಮ್ಮನವರನ್ನು ಅಲ್ಲಾಳದೇವಿ ಎಂದೂ ಸಹ ಕರೆಯಲಾಗುತ್ತದೆ. ಕರ್ನಾಟಕದಲ್ಲಿ ಅಮ್ಮನವರಿಗೆ ಪ್ರತ್ಯೇಕವಾದ ಗುಡಿಯನ್ನು ನಿರ್ಮಿಸುವ ಸಂಪ್ರದಾಯವು ರಾಮಾನುಜರ ನಂತರದ ಕಾಲದಲ್ಲಿ ಆಗಿದ್ದರೂ ವಿಜಯನಗರ ಅರಸರ ಕಾಲದ ದೇವಾಲಯಗಳಲ್ಲಿ ಈ ಅಂಶವು ಹೆಚ್ಚಾಗಿ ಮೂಡಿಬಂದಿತು. ಹೊಯ್ಸಳರ ಕಾಲದಲ್ಲೂ ಸಹ ಪ್ರತ್ಯೇಕವಾಗಿ ಅಮ್ಮನವರ ದೇವಾಲಯಗಳನ್ನು ನಿರ್ಮಿಸಲಾಯಿತು. ವಾಯುವ್ಯ ಭಾಗದಲ್ಲಿ ಎರಡು ಸಣ್ಣ ಗುಡಿಗಳಿದ್ದು ಅವುಗಳಲ್ಲಿಯೂ ವಿಗ್ರಹವಿಲ್ಲದ ಗರುಡಪೀಠವಿದೆ. ಹಾಗೆಯೇ ಆಗ್ನೇಯ ಮತ್ತು ಈಶಾನ್ಯ ಭಾಗಗಳಲ್ಲಿ ಮಂಟಪಗಳ ರಚನೆ ಕಂಡುಬರುತ್ತದೆ. ಆಗ್ನೇಯ ಭಾಗದಲ್ಲಿ ಪಾಕಶಾಲೆಯಿದ್ದು ಈಗ ಇದು ಶಿಥಿಲವಾಗಿದೆ. ಪಾಕಶಾಲೆ ಎಂದು ಹೇಳಲು ಕಲ್ಲಿನ ತೊಟ್ಟಿ, ಕಲ್ಲಿನ ಒರಳು ಮತ್ತು ಹೊಗೆ ಕಿಂಡಿಗಳು ಸಾಕ್ಷಿಯಾಗಿವೆ. ಮತ್ತೊಂದು ಮುಖ್ಯವಾದ ಅಂಶವೆಂದರೆ ಪಾಕಶಾಲೆಗೆ ಹೋಗಲು ಮಾಡಿರುವ ದ್ವಾರದ ಲಲಾಟಬಿಂಬದಲ್ಲಿ ಜಿನನ ವಿಗ್ರಹವಿದೆ. ಕ್ರಿ.ಶ. ೧೧೯೯–೧೨೦೦ರ ಶಾಸನದಲ್ಲಿ ವರಕೋಡಿನ ಬಸದಿಗೆ ಹೊಯ್ಸಳ ರಾಜ

ವಿಷ್ಣುವರ್ಧನನ ಸಂಧಿವಿಗ್ರಹಿಯಾದ ಪುಣಿಸಮಯ್ಯನು ಗದ್ದೆಯನ್ನು ದಾನ ನೀಡಿದ ಉಲ್ಲೇಖವಿದೆ[೯]. ಆದರೆ ಈ ಊರಿನಲ್ಲಿ ಈಗ ಯಾವುದೇ ಬಸದಿಯೂ ಇರುವುದಿಲ್ಲ. ಹಾಗಾಗಿ ಹೊಯ್ಸಳರ ಕಾಲದಲ್ಲಿ ಕಟ್ಟಿರುವ ಬಸದಿಯು ನಾಶವಾಗಿದ್ದು ಅಲ್ಲಿ ಬಳಸಿದ ಕಲ್ಲುಚಪ್ಪಡಿ ಹಾಗೂ ಕಂಬಗಳನ್ನು ಈ ದೇವಾಲಯದ ನಿರ್ಮಾಣಕ್ಕೆ ಬಳಸಿರಬಹುದು. ಅದರ ಪಕ್ಕದಲ್ಲಿ ಚಿಕ್ಕ ಗುಡಿಯಿದ್ದು ಅದರ ದ್ವಾರದಲ್ಲಿ ಎರಡು ಚಿಕ್ಕದಾದ ಶೈವ ದ್ವಾರಪಾಲಕರನ್ನು ಕೆತ್ತಲಾಗಿದೆ. ಈ ದ್ವಾರದ ಲಲಾಟಬಿಂಬದಲ್ಲಿ ನಂದಿಯ ವಿಗ್ರಹವಿದೆ. ಈಶಾನ್ಯ ಭಾಗದಲ್ಲಿಯು ಸಹ ೧೨ ಕಂಬಗಳಿರುವ ಒಂದು ಹಜಾರವನ್ನು ಹೊಂದಿದೆ. ಬಹುಶಃ ಇದು ದೇವಾಲಯದ ಖಜಾನೆ ಅಥವಾ ಕಚೇರಿಯಾಗಿರಬಹುದು ಆದರೆ ಇಲ್ಲಿಯ ಬಹು ಭಾಗ ಶಿಥಿಲವಾಗಿದೆ. ವರಕೋಡಿನಿಂದ ಸುಮಾರು ೨ ಕಿ.ಮೀ. ದೂರದಲ್ಲಿ ವರುಣ ಗ್ರಾಮವಿದೆ. ಇಲ್ಲಿ ಪಾರ್ಶ್ವನಾಥ ಹಾಗೂ ಯಕ್ಷ, ಯಕ್ಷಿಯರ ಶಿಲ್ಪಗಳಿವೆ. ಬಸದಿಯು ಸಂಪೂರ್ಣವಾಗಿ ನಾಶವಾಗಿದೆ. ಇಲ್ಲಿರುವ ಶಿಲ್ಪಗಳು ಸುಮಾರು ೬ ಅಡಿ ಎತ್ತರವನ್ನು ಹೊಂದಿವೆ. ಈ ಬಸದಿಯ ಕಂಬಗಳು ಹಾಗೂ ಕಲ್ಲು ಚಪ್ಪಡಿಗಳನ್ನು ವರದರಾಜಸ್ವಾಮಿಯ ದೇವಾಲಯದ ಜೀರ್ಣೋದ್ಧಾರಕ್ಕೆ ಉಪಯೋಗಿಸಿಕೊಂಡಿದ್ದಾರೆ[೧೦].

ದೇವಾಲಯದ ಏರು ನಕ್ಷೆಯಲ್ಲಿ ಅಧಿಷ್ಠಾನ, ಭಿತ್ತಿ, ಕಪೋತ ಕಂಡುಬಂದಿದ್ದು ಪ್ರಸ್ತರ, ಶಿಖರ ಇತ್ಯಾದಿಗಳು ಸಂಪೂರ್ಣವಾಗಿ ನಾಶವಾಗಿವೆ. ಗರ್ಭಗೃಹದ ಹೊರಭಾಗದಲ್ಲಿ ವಿಶಾಲವಾದ ದೇವಾಲಯದ ಕುರುಹುಗಳಿವೆ. ಈಗಿರುವ ಗರ್ಭಗೃಹದ ಹೊರ ರಚನೆಯಲ್ಲಿ ದಪ್ಪ ದಪ್ಪ ಉಂಡೆಕಲ್ಲುಗಳನ್ನು ಹಾಕಿ ಅದರ ಸುತ್ತಲೂ ಚಪ್ಪಡಿಗಳಿಂದ ಮುಚ್ಚಲಾಗಿದೆ. ಈ ರೀತಿಯ ಲಕ್ಷಣಗಳನ್ನು ಹೆಚ್ಚಾಗಿ ಚೋಳರ ಕಾಲದ ವಾಸ್ತುಶೈಲಿಯಲ್ಲಿ ಕಾಣಬಹುದು. ದೇವಾಲಯದ ಗರ್ಭಗೃಹ ಮತ್ತು ಶುಕನಾಸಿಯು ಸಂಧಿಸುವ ವಾಯುವ್ಯ ಹೊರಭಾಗದ ಭಿತ್ತಿಯಲ್ಲಿ ಉತ್ತರ ಮತ್ತು ಪೂರ್ವ ದಿಕ್ಕಿಗೆ ಇರುವಂತೆ ವೈಷ್ಣವ ದ್ವಾರಪಾಲಕರ ಶಿಲ್ಪವಿರುವ ಚಪ್ಪಡಿ ಕಲ್ಲನ್ನು ಒಂದಕ್ಕೊಂದು ಸಂಬಂಧವಿಲ್ಲದಂತೆ ಬೇರೆ ಬೇರೆ ದಿಕ್ಕಿನಲ್ಲಿ ಭಿತ್ತಿಯ ನಿರ್ಮಾಣಕ್ಕೆ ಹಾಕಿದ್ದಾರೆ. ಬಹುಶಃ ಇವುಗಳನ್ನು ದೇವಾಲಯದ ಜೀರ್ಣೋದ್ಧಾರದ ಸಮಯದಲ್ಲಿ ಈ ರೀತಿಯಲ್ಲಿ ಜೋಡಿಸಿರಬಹುದು.

ಪ್ರಸ್ತುತ ಈ ದೇವಾಲಯದ ಪೂಜಾ ವಿಗ್ರಹಗಳನ್ನು ಗಮನಿಸಿದಾಗ ಇದು ಶ್ರೀ ವೈಷ್ಣವ ಸಂಪ್ರದಾಯಕ್ಕೆ ಸೇರಿದ್ದೆಂದು ಹೇಳಬಹುದು. ಮೈಸೂರು ಅರಸರು ಕಾಲಾಂತರದಲ್ಲಿ ರಾಮಾನುಜರ ಸಿದ್ಧಾಂತವನ್ನು ಅವಲಂಬಿಸಿ ಶ್ರೀ ವೈಷ್ಣವರಾಗಿದ್ದರು. ಈ ದೇವಾಲಯದ ನಿರ್ಮಾಣದಲ್ಲಿ ಚೋಳರು, ಹೊಯ್ಸಳರು, ವಿಜಯನಗರ ಅರಸರು, ಮೈಸೂರು ಒಡೆಯರ್‌ರವರು ಕಾಲಾನುಕ್ರಮಣಿಕೆಯಲ್ಲಿ ಜೀರ್ಣೋದ್ಧಾರ ಕಾರ್ಯದಲ್ಲಿ ಪಾಲ್ಗೊಂಡಿದ್ದರೆಂಬುದು ಅವರ ಶಾಸನಗಳಿಂದ ಹಾಗೂ ವಾಸ್ತು ಲಕ್ಷಣಗಳಿಂದ ತಿಳಿಯಬಹುದು.

ಈ ಎಲ್ಲಾ ಲಕ್ಷಣಗಳನ್ನು ನೋಡಿದರೆ ಶಿಥಿಲವಾದ ದೇವಾಲಯದ ಭಾಗಗಳು ಹಾಗೂ ಬಸದಿಯ ಭಾಗಗಳನ್ನು ತಂದು ಈ ದೇವಾಲಯದ ಜೀರ್ಣೋದ್ಧಾರ ಮಾಡಿದಂತೆ ಕಂಡುಬರುತ್ತದೆ. ಇಲ್ಲಿ ಗಮನಿಸಬೇಕಾದ ಅಂಶವೆಂದರೆ ವಾಸ್ತುಲಕ್ಷಣಗಳನ್ನು ಅಭ್ಯಸಿಸಿದರೆ ಚೋಳ[೧೧], ಹೊಯ್ಸಳ[೧೧], ವಿಜಯನಗರ ಹಾಗೂ ಮೈಸೂರು ಅರಸರ[೧೨] ವಾಸ್ತುಲಕ್ಷಣಗಳು ಒಂದಕ್ಕೊಂದು ಬೆಸೆದುಕೊಂಡಂತಿವೆ.



## ಆಧಾರಸೂಚಿ


೧. ಎ.ಕ. ಸಂ. ೫, ಮೈ-೧೨೪, ಪು. ೨೭೧.
೨. ಎ.ಕ. ಸಂ. ೫, ಮೈ-೧೩೫, ಪು. ೨೭೫.
೩. ಎ.ಕ. ಸಂ. ೫, ಮೈ-೧೩೧, ಪು. ೨೭೩.
೪. ಸಿ.ಎಸ್. ಪಾಟೀಲ್., ೧೯೯೪, **ಕರ್ನಾಟಕ ಶಿಲ್ಪಗಳಲ್ಲಿ ಪಂಚತಂತ್ರ,** ಮೈಸೂರು.
೫. **ಭಾಗವತ ಮಹಾಪುರಾಣ** ಸ್ಕಂದ, ಭಾಗ-೭.
೬. **ಶ್ರೀ ತತ್ವನಿಧಿ,** ಸಂ. ೨, ವಿಷ್ಣುನಿಧಿ, ಪು. ೨೨೨.
೭. ಎಸ್.ಕೆ. ರಾಮಚಂದ್ರರಾವ್., **ವಿಷ್ಣು ತತ್ವನಿಧಿ,** ಪ್ರತಿಮಾಕೋಶ, ಈಶ್ವರ ಸಂಹಿತೆ, ಪಾದ್ಮ ಸಂಹಿತೆ.
೮. ಎ.ಕ. ಸಂ. ೫, ಮೈ-೧೩೦, ಪು. ೨೭೩.
೯. ಎಂ.ಎ.ಆರ್. ೧೯೧೬, ಪು. ೨೭.
೧೦. ಎ.ಕ. ಸಂ. ೫, ಮೈ-೧೨೬, ೧೨೭, ೧೨೮, ಪು. ೨೭೧-೭೨.
೧೧. ಎ.ಕ. ಸಂ. ೫, ಮಯ-೧೨೩, ಪು. ೨೭೦.
೧೨. ಎ.ಕ. ಸಂ. ೫, ಮೈ-೧೩೧, ಪು. ೨೭೩.

ಡಾ. ಡಿ.ಜಿ. ಕುಲಕರ್ಣಿ*

# ಹಾವೇರಿ ಜಿಲ್ಲೆಯ ಪರೋಕ್ಷ ವಿನಯ / ವ್ಯಕ್ತಿನಾಮ ತ್ರಿಕೂಟ ದೇವಾಲಯಗಳು

'ದೇವಾಲಯಗಳು ಸಾರ್ವಜನಿಕ ಪವಿತ್ರ ಪೂಜಾ ಸ್ಥಳಗಳು. ವಿವಿಧ ಧಾರ್ಮಿಕ ಚಟುವಟಿಕೆಗಳ ಕೇಂದ್ರಗಳು. ದೇವಾಲಯಗಳ ಪಾತ್ರ ಈಗಿನದಕ್ಕಿಂತಲೂ ಮಧ್ಯಯುಗೀನ ಸಮಾಜದಲ್ಲಿ ಹೆಚ್ಚು ಮಹತ್ವಪೂರ್ಣವಾಗಿತ್ತು. ಕಲ್ಯಾಣ ಚಾಲುಕ್ಯ ಹಾಗೂ ಹೊಯ್ಸಳರ ಕಾಲದಲಂತೂ ಇವುಗಳ ವೈಭವ ಉತ್ತುಂಗಕ್ಕೇರಿತ್ತು. ಆ ಸಮಾಜದ ಪ್ರತಿಯೊಂದು ಚಟುವಟಿಕೆಗೂ ದೇವಾಲಯವೇ ಮೂಲವಾಗಿ, ಸುವ್ಯವಸ್ಥಿತವಾದ ಸಂಸ್ಥೆಗಳಾಗಿದ್ದವು. ಧಾರ್ಮಿಕ ಚಟುವಟಿಕೆಗಳ ಮುಖ್ಯ ಕೇಂದ್ರಗಳಾಗಿ, ವಿದ್ಯಾ, ವಾಣಿಜ್ಯ ಸಂಸ್ಥೆಗಳಾಗಿ, ಸಾಹಿತ್ಯ, ನೃತ್ಯ, ಸಂಗೀತ, ನಾಟಕ, ಶಿಲ್ಪಕಲೆ ಮುಂತಾದ ಸಾಂಸ್ಕೃತಿಕ ಚಟುವಟಿಕೆಗಳ ಆಶ್ರಯತಾಣವಾಗಿ, ಅನ್ನಛತ್ರ, ವೈದ್ಯಕೀಯ ಸೌಲಭ್ಯಗಳನ್ನು ಹೊಂದಿದ್ದು ಸಮಾಜದ ಪ್ರತಿಯೊಂದು ಆಗುಹೋಗುಗಳಿಗೆ ಇವು ನೇರವಾಗಿ ಸ್ಪಂದಿಸುತ್ತಿದ್ದವು. ಸಮಾಜದ ಎಲ್ಲಾ ವರ್ಗದ ಜನರನ್ನು ಒಂದೆಡೆ ಸೇರಿಸುವ ಕಾರ್ಯದಲ್ಲಿ ಮತ್ತು ಶ್ರೀಮಂತ ವರ್ಗಗಳಿಂದ ದಾನರೂಪದಲ್ಲಿ ಹರಿದುಬಂದ ಹಣ ಸಮಾಜದ ಏಳಿಗೆಗಾಗಿ ಸದ್ವಿನಿಯೋಗಗೊಳ್ಳುವಲ್ಲಿ ದೇವಾಲಯಗಳು ಮಹತ್ವದ ಪಾತ್ರ ನಿರ್ವಹಿಸಿವೆ. ಆದಕ್ಕೆಂದೇ ಮೊದಲಿಗೆ ಒಂದು ಗರ್ಭಗೃಹ ಇದಕ್ಕೆ ಹೊಂದಿಕೊಂಡಂತೆ ಸುಖನಾಸಿ/ಅಂತರಾಳ ಹೀಗೆ ಕನಿಷ್ಠ ಅವಶ್ಯಕತೆಯೊಡನೆ ರೂಪುಗೊಂಡ ದೇವಾಲಯಗಳು ಕಾಲಾಂತರದಲ್ಲಿ ಅವಶ್ಯಕತೆಗೆ ತಕ್ಕಂತೆ ಹೆಚ್ಚು ಹೆಚ್ಚಿನ ವಾಸ್ತು ರಚನೆಗಳನ್ನು ಮೈಗೂಡಿಸಿಕೊಂಡು ಹಂತ ಹಂತವಾಗಿ ಬೆಳೆಯುತ್ತ ಬೃಹತ್ ಗಾತ್ರದಲ್ಲಿ ಮೈತಳೆದು ನಿಂತುದು ವಾಸ್ತವ. ಈ ಪ್ರಗತಿ ಪಥದಲ್ಲಿ ಏಕಗರ್ಭಗೃಹ ದೇವಾಲಯಗಳು ಒಂದೇ ದಿಕ್ಕಿನಲ್ಲಿ ಏಕಮುಖವಾಗಿ ಬೆಳೆಯುವದರ ಜೊತೆಗೆ ಅಕ್ಕ ಪಕ್ಕದಲ್ಲೂ ವ್ಯಾಪಿಸಿ ದ್ವಿಕೂಟ, ತ್ರಿಕೂಟ, ಚತುಷ್ಕೂಟ, ಪಂಚಕೂಟ, ನವಕೂಟ ದೇವಾಲಯಗಳು ನಿರ್ಮಾಣ ಗೊಂಡಿರುವುದು ವಿಶೇಷ.

ಹಳೆಯ ಧಾರವಾಡ ಜಿಲ್ಲೆಯ ದಕ್ಷಿಣದ ೭ ತಾಲೂಕುಗಳನ್ನು ಹೊಂದಿ ರೂಪಗೊಂಡ ನೂತನ ಹಾವೇರಿ ಜಿಲ್ಲೆಯಲ್ಲಿ ಕ್ಷೇತ್ರಕಾರ್ಯ ಕೈಗೊಂಡಾಗ ಪರೋಕ್ಷ ವಿನಯ/ವ್ಯಕ್ತಿನಾಮದ ಹಿನ್ನೆಲೆಯಲ್ಲಿ ೬ ತ್ರಿಕೂಟ ದೇವಾಲಯಗಳು ನಿರ್ಮಾಣಗೊಂಡದ್ದು ತಿಳಿದುಬಂದಿತು. ಅವು ಜಿಲ್ಲೆಯ ಹಾವೇರಿ ತಾಲ್ಲೂಕಿನ ***ಹರಳಹಳ್ಳಿಯ ಸೋಮನಾಥ ದೇವಾಲಯ***, ರಾಣಿಬೆನ್ನೂರು ತಾಲೂಕಿನ ***ಹೊನ್ನತ್ತಿಯ ರಾಮಲಿಂಗೇಶ್ವರ ದೇವಾಲಯ***, ಹಾನಗಲ್ಲ ತಾಲೂಕಿನ ***ದಶರಥಕೊಪ್ಪದ ಸೋಮನಾಥ ದೇವಾಲಯ***, ಹಿರೇಕೆರೂರ ತಾಲೂಕಿನ ***ಅಬ್ಬಲೂರಿನ ಸೋಮನಾಥ ದೇವಾಲಯ***, ಅದೇ ತಾಲ್ಲೂಕಿನ ***ರಟ್ಟಿಹಳ್ಳಿ ಕಡಂಬೇಶ್ವರ ದೇವಾಲಯ***, ಸವಣೂರು ತಾಲೂಕಿನ ***ಕಾರಡಗಿಯ ಡೋಳ್ಳೇಶ್ವರ ದೇವಾಲಯ***.

ವ್ಯಕ್ತಿನಾಮ/ಪರೋಕ್ಷ ವಿನಯಕ್ಕಾಗಿ ಲಿಂಗಗಳನ್ನು ಪ್ರತಿಷ್ಠಾಪಿಸುವ ಪದ್ಧತಿಯು ಬಹು ಪ್ರಾಚೀನವಾದುದು.[೧] ಬಾದಾಮಿ ಚಾಲುಕ್ಯರ ಕಾಲದಲ್ಲಿ ವಿಜಯಾದಿತ್ಯ ಸತ್ಯಾಶ್ರಯನು ಪ್ರತಿಷ್ಠಾಪಿಸಿದ ದೇವರು ***ವಿಜಯಾದಿತ್ಯ ಭಟ್ಟಾರಕ***[೨], ಲೋಕಮಹಾದೇವಿಯು ಕಟ್ಟಿಸಿದ ದೇವಾಲಯ ***ಲೋಕೇಶ್ವರ ಭಟ್ಟಾರಕ ದೇವಸ್ಥಾನ್***[೩] ಎಂಬುದನ್ನು ಇಲ್ಲಿ ನೆನೆಯಬಹುದು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಇಂತಹ ದೇವಾಲಯಗಳನ್ನು ಸಾಕಷ್ಟು ನೋಡುತ್ತೇವೆ. ಹಾವೇರಿ ಜಿಲ್ಲೆ ಹಾಗೂ ಅದರ ದಕ್ಷಿಣ ದಿಕ್ಕಿನಲ್ಲಿರುವ ಬಳ್ಳಿಗಾಂವೆಯ ಪ್ರದೇಶದಲ್ಲಿ ದೇವಾಲಯ ಸಂಸ್ಕೃತಿಯನ್ನು ಮುಖ್ಯವಾಗಿಸಿಕೊಂಡು, ಶೈವ ಮತಾವಲಂಬಿಗಳಾಗಿದ್ದ ಕಾಳಾಮುಖ ಯತಿಗಳು, ದೇವಾಲಯಗಳು ದೊಡ್ಡ ಸಂಖ್ಯೆಯಲ್ಲಿ ಬೆಳೆಯಲು ವ್ಯಕ್ತಿನಾಮ ಲಿಂಗಗಳ ಪ್ರತಿಷ್ಠಾಪನೆಗೆ ಧರ್ಮ ಸಮ್ಮತವಾದ ಒಪ್ಪಿಗೆ ನೀಡಿದರು. ಜೊತೆಗೆ "ತನ್ನ ಹೆಸರಿನಲ್ಲಿ ಶಿವಲಿಂಗ ಸ್ಥಾಪಿಸಿದ ವ್ಯಕ್ತಿ ದೇವರೇ ಆಗುತ್ತಾನೆ" ಎಂಬ ಭಾವನೆಯನ್ನು ಜನರಲ್ಲಿ ಬಿತ್ತಿದರು. ಇದಕ್ಕೆ ಉತ್ತಮ ಉದಾಹರಣೆ ಎಂದರೆ ಶಿರಸಂಗಿಯ ಶಾಸನವು[೪] ಎಲ್ಲಾ ಸಂಪತ್ತುಗಳ್ಗ(ಳ್ಗೆ) ಪ್ರ್ಯಾಪ್ತಮೇ

* ಇತಿಹಾಸ ಅಧ್ಯಾಪಕ, ನರಸಾಪುರ ಕಲಾ ಹಾಗೂ ಶಿರೂರ ವಾಣಿಜ್ಯ ಮಹಾವಿದ್ಯಾಲಯ, ಬಾಗಲಕೋಟೆ.

ಮೊದಲಾ ಪುಂಣ್ಯಕ್ಕೆಲ್ಲವೀಶ್ವರ ಪ್ರತಿಷ್ಠೆಯೇ ಮೊತ್ತ ಮೊದಲೆಂತಲೂ ಪುಂಣ್ಯದ ಬಳಿವಿಡಿದೆಲ್ಲಾ ಪುಂಣ್ಯಂಗಳುಂ ದೊರಕೊಳ್ಗುಂ ಮತ್ತೆವೆಲ್ಲಾ ಪ್ರತಿಮೆಗಳಂ ಪ್ರತಿಷ್ಠೆ ಮಾಡಿದೊಡವಾ ದೇವರ್ಕಳ ಪೆಸರೆಯಕ್ಕುಮೀಶ್ವರ ಪ್ರತಿಷ್ಠೆಯಂ ಮಾಡಿದವನೀಶ್ವರನೆಯಕ್ಕುವೆಂಬದನಾ ದೇವರ ಪೆಸರಾತಿನ ಪೆಸರಕ್ಕುವೆಂದಲಿದು....

ಹೀಗೆ ಈಶ್ವರನ ಜೊತೆಗೆ ಸೇರಿಕೊಂಡ ವ್ಯಕ್ತಿಯು ದೇವರಾಗುತ್ತಾನೆ. ಮಧ್ಯಯುಗಿನ ಶೈವಸಂಪ್ರದಾಯದ ಗಟ್ಟಿಬೇರುಗಳ ಬಗ್ಗೆ ಚರ್ಚಿಸುತ್ತಾ ರಾಜಾರಾಂ ಹೆಗಡೆಯವರು "....ಶಿವಲಿಂಗವು ಅಮೂರ್ತ ರೂಪವನ್ನು ಹೊಂದಿರುವುದು ಕೂಡಾ ಶೈವಸಂಪ್ರದಾಯಗಳ ಸ್ಥಿತಿಸ್ಥಾಪಕ ಶಕ್ತಿಯನ್ನು ವರ್ಧಿಸಿತು. ಅಂದರೆ ದೇವರ ಹೆಸರನ್ನು ಎಷ್ಟೇ ಅಶಾಸ್ತ್ರೀಯ ಮೂಲದಿಂದಲಾದರೂ ತೆಗೆದುಕೊಳ್ಳಬಹುದು. ಆ ಹೆಸರಿಗೆ ಒಂದು ಮೂರ್ತ ವಿವರ ಬೇಕಿಲ್ಲ....ಎನ್ನುತ್ತಾರೆ.[೫]

ಇದರಿಂದ ಸಾಮಾನ್ಯರ ದೃಷ್ಟಿಯಲ್ಲಿ ಎಲ್ಲೋ ಒಂದೆಡೆ ಇದ್ದ ದೇವರು ಈಗ ಅವರ ಕೈಗೆ ಎಟುಕುವಂತಾದ. ತಾವು ಗಳಿಸಿದ ಸಂಪತ್ತು ಸದ್ವಿನಿಯೋಗವಾಗಬೇಕು, ಪುಣ್ಯಪ್ರಾಪ್ತಿಯಾಗಬೇಕು, ಜೊತೆಗೆ ತಮ್ಮ ಹೆಸರಿನಲ್ಲಿ ಲಿಂಗವನ್ನು ಪ್ರತಿಷ್ಠಾಪಿಸಿ ತಾವು ಶಿವನೇ ಆಗಿಬಿಡಬೇಕು ಎಂಬ ಸದುದ್ದೇಶದಿಂದ ಅರಸರು, ಧನಿಕರು, ಆಡಳಿತ ವರ್ಗದವರು ಶ್ರೀಸಾಮಾನ್ಯರು, ಹೆಂಗಸರು, ಗಂಡಸರು ತಮ್ಮ ತಮ್ಮ ಆರ್ಥಿಕ ಶಕ್ತಿಗೆ ಅನುಗುಣವಾಗಿ ದೇವಾಲಯಗಳನ್ನು ನಿರ್ಮಿಸಿದರು. ಇದು ಮಧ್ಯಯುಗಿನ ಕಾಲದಲ್ಲಿ ಬಹುಸಂಖ್ಯೆಯ ದೇವಾಲಯ ನಿರ್ಮಾಣಕ್ಕೆ ಪ್ರಮುಖ ಕಾರಣವಾಯಿತು.

ಇಲ್ಲಿ ಅಧ್ಯಯನಕ್ಕೆ ಒಳಪಡಿಸಿದ ತ್ರಿಕೂಟ ದೇವಾಲಯಗಳ ಲಿಂಗಗಳು ವ್ಯಕ್ತಿಯ ಹೆಸರಿನಲ್ಲಿ ಸ್ಥಾಪಿತಗೊಂಡಿವೆ. ಈ ಲಿಂಗಗಳು ಸ್ಥಾಪನೆಗೆ ಕಾರಣನಾದ ವ್ಯಕ್ತಿಯ ಹೆಸರಿನಲ್ಲಿರದೆ ಬೇರೆಯವರ ಹೆಸರಿನಲ್ಲಿ ಸ್ಥಾಪನೆಗೊಂಡಿವೆ. ಅಂದರೆ 'ಪರೋಕ್ಷ ವಿನಯ'ಕ್ಕಾಗಿ ರೂಪಗೊಂಡ ದೇವಾಲಯಗಳು ಎಂದು ಹೇಳಬಹುದು. 'ಪರೋಕ್ಷ' ಮತ್ತು 'ವಿನಯ' ಪದಗಳಿಗೆ ಅರ್ಥವಿದೆ. 'ಪರೋಕ್ಷ'ದ ಅರ್ಥ 'ಕಣ್ಣಿಗೆ ಕಾಣದಿರುವುದು' invisible ಎಂದೂ, ವಿನಯಕ್ಕೆ leading, leading away, guidance, discipline, good behaviour, decorum, reference, ನಮ್ರತೆ, ಸೌಜನ್ಯ, ಮಾರ್ಗದರ್ಶನ, ಇತ್ಯಾದಿ ಅರ್ಥಗಳು ದೊರೆಯುತ್ತವೆ. ಒಟ್ಟು 'ಪರೋಕ್ಷ ವಿನಯ'ಕ್ಕೆ ಕಣ್ಣಿಗೆ ಕಾಣದಿರುವ ವಸ್ತು ಅಥವಾ ವ್ಯಕ್ತಿಗೆ ಸಲ್ಲುವ ಸೌಜನ್ಯ ಅಥವಾ ನಮ್ರತೆಯ ಕೃತಜ್ಞತೆ ಎಂದು ಅರ್ಥೈಯಿಸಬಹುದು.[೬]

ಆರ್. ಶೇಷಶಾಸ್ತ್ರಿಯವರು ಈ ಪದ ಪ್ರಯೋಗದ ಹಿನ್ನೆಲೆಯ ಬಗ್ಗೆ ಅಭ್ಯಸಿಸಿ 'ಪರೋಕ್ಷ ವಿನಿಯ' ಎಂದರೆ ವ್ಯಕ್ತಿಯೊಬ್ಬನು ಯಾವುದೋ ಕಾರಣಕ್ಕಾಗಿ ಮಡಿದಿರಲಿ ಅವನು ತಮ್ಮ ಎದುರಿಗೆ ಇಲ್ಲವೆಂದು ಅಲಕ್ಷ್ಯದಿಂದ ಕಾಣದೆ, ಆತನ ಪರೋಕ್ಷದಲ್ಲಿ, ಆತನ ಮರಣೋತ್ತರ ಜೀವನದ ಶ್ರೇಯಸ್ಸಿಗೆ ಆತನಿಂದ ಉಪಕೃತರಾದವರು ಮಾಡುವ ಕೃತಜ್ಞತಾ ಪೂರ್ವಕ ಕ್ರಿಯೆಗಳು ಎಂಬುದಾಗಿ ಅರ್ಥ ಮಾಡಬಹುದೆಂದು ತೋರುತ್ತದೆ ಎನ್ನುತ್ತಾರೆ.[೭] ವ್ಯಕ್ತಿಯ ಸಾವಿನ ನಂತರ ಅವನಿಗೆ ಸದ್ಗತಿ ದೊರೆಯಲೆಂಬ ಉದ್ದೇಶದಿಂದ ಮಾಡುವ ದಾನ 'ಪರೋಕ್ಷ ವಿನಯದಾನ' ಎಂದು ಎಂ. ಚಿದಾನಂದಮೂರ್ತಿಯವರು ಸೂಚಿಸಿದ್ದಾರೆ. ಇವರ ಈ ಅಭಿಪ್ರಾಯಗಳು ವ್ಯಕ್ತಿಯ ಸಾವಿನ ನಂತರದ ಬದುಕನ್ನು ಕುರಿತಾಗಿವೆ. 'ಪರೋಕ್ಷ ವಿನಯವು ಸಾವಿನ ನಂತರದ ಬದುಕಿನ ಜೊತೆಗೆ ಸಾವಿನ ಮೊದಲಿನ ಬದುಕಿಗೂ ವ್ಯಕ್ತಿಯ ಪರೋಕ್ಷದಲ್ಲಿ ಸಲ್ಲಿಸುವ ವಿನಯ ಎಂದು ತಿಳಿಯುವುದು ಸೂಕ್ತ' ಎಂಬ ಅಭಿಪ್ರಾಯವೂ ಇದೆ.[೮] ಅದು ಏನೇ ಇದ್ದರೂ ಸತ್ತ ಒಳ್ಳೆಯ ವ್ಯಕ್ತಿಯ ಪರೋಕ್ಷದಲ್ಲಿ ಅವನ ಮರಣಾಪೂರ್ವ ಬದುಕಿನ ಹೆಸರು ಚಿರಕಾಲ ಉಳಿಯಲಿ, ಯಶಸ್ಸು, ಶ್ರೇಯಸ್ಸು ಅಮರವಾಗಲಿ, ಮರಣೋತ್ತರದಲ್ಲಿ ಅವನಿಗೆ ಸದ್ಗತಿ ದೊರೆಯುವುದರ ಜೊತೆಗೆ ಅವನ ಹೆಸರು ಬದುಕಿದ್ದ ಸಮಯದಲ್ಲಿ ಪ್ರಖ್ಯಾತವಾಗಿದ್ದಂತೆ ಅನಂತರವೂ ಇರಲಿ ಎಂಬ ಸದುದ್ದೇಶವು ಈ ಪರೋಕ್ಷ ವಿನಯದಲ್ಲಿದೆ.

ಪರೋಕ್ಷ ವಿನಯ/ವ್ಯಕ್ತಿನಾಮದ ತಾತ್ವಿಕ ಹಿನ್ನೆಲೆಯಲ್ಲಿ ಹಾವೇರಿ ಜಿಲ್ಲೆಯಲ್ಲಿ ೬ ದೇವಾಲಯಗಳು ನಿರ್ಮಾಣಗೊಂಡದ್ದು ಶಾಸನ ಹಾಗೂ ವಾಸ್ತು ಅಂಶಗಳಿಂದ ತಿಳಿದುಬರುತ್ತದೆ. ಈ ದೇವಾಲಯಗಳು ತ್ರಿಕೂಟ ಮಾಟವನ್ನು ಬಳಸಿಕೊಂಡದ್ದು ಇನ್ನೂ ವಿಶೇಷವಾಗಿದೆ. ಹಾವೇರಿ ತಾಲೂಕಿನ ಹರಳಹಳ್ಳಿಯ ಶಾಸನವು ಈ ಗ್ರಾಮವನ್ನು ವಿಕ್ರಮಪುರವೆಂದು ಉಲ್ಲೇಖಿಸಿದೆ. ಇದು ಗುತ್ತರ ರಾಜಧಾನಿಯಾದ ಗುತ್ತಲದ ಒಂದು ಭಾಗವಾಗಿತ್ತು. ಇಲ್ಲಿಯ ಸ್ವಯಂಭು ಸೋಮನಾಥ ದೇವರು ಗುತ್ತರ ಕುಲದೇವರಾಗಿತ್ತು. ಕ್ರಿ.ಶ. ೧೧೮೮ರ ಶಾಸನದಲ್ಲಿ[೯] ಹರಳಹಳ್ಳಿಯು ಸೋಮೇಶ್ವರಪುರವೆಂದು ಉಲ್ಲೇಖಗೊಂಡಿದೆ. "ಧಾತ್ರಿಯೊಶಿ....ಲಕ್ಷ್ಮಿಕ್ಷೇತ್ರ" ಎಂದೂ, 'ದಕ್ಷಿಣ ವಾರಣಾಸಿ' ಎಂದೂ, ಎದುರಿಗೆ ಹರಿಯುವ ತುಂಗಭದ್ರಾ ನದಿಯನ್ನು ಶಿವಗಂಗೆ ಎಂದೂ ವರ್ಣಿಸಲಾಗಿದೆ. ಇದೇ ಶಾಸನವು ದೇವಾಲಯ ನಿರ್ಮಾಣದ ಬಗ್ಗೆ ಮಾಹಿತಿಯನ್ನು ಒದಗಿಸುತ್ತದೆ. ೧೨೦ ಸಾಲುಗಳನ್ನು ಒಳಗೊಂಡ ಈ

ಸುದೀರ್ಘ ಶಾಸನವು ಕಾವ್ಯದಂತೆ ತೋರುತ್ತದೆ. ಶಾಸನದ ೯೫ನೇ ಸಾಲಿನಲ್ಲಿ '....ಕಲ್ಯಾಣಶಕ್ತಿ ದೇವರ ಶ್ರೀಪಾ(ದಪ)ದ್ಮಂಗಳ ಪೂಜಿಸಿ ಧಾರಾಪೂರ್ವಕವಾಗಿ ಶ್ರೀ ಸ್ವಯಂಭೂ ಸೋಮನಾಥ ದೇವರ ವಿಕ್ರಮೇಶ್ವರ, ಗುತ್ತೇಶ್ವರ ದೇವತಾ ಪ್ರತಿಷ್ಠಾತಿಶಯದ ತ್ರಿಕೂಟವೆಂ ಖಂಡಸ್ಫುಟಿತ ಜೀರ್ಣೋದ್ಧಾರಕಂ ದೇವರಂಗಭೋಗ...'(ದಾನ ಬಿಟ್ಟ ವಿವರಣೆ) ಶ್ರೀಮದ್ ರಾಜಗುರು ಕಲ್ಯಾಣಶಕ್ತಿಯ ಆದೇಶದ ಮೇರೆಗೆ ಜೋಯಿದೇವರಸನು ತುಂಗಭದ್ರಾ ತೀರದಲ್ಲಿ ವಿಕ್ರಮಪುರ ಗ್ರಾಮವನ್ನು ನಿರ್ಮಿಸಿ, ಸ್ವಯಂಭೂ ಸೋಮನಾಥನ ಇಕ್ಕೆಲಗಳಲ್ಲಿ ವಿಕ್ರಮೇಶ್ವರ ಹಾಗೂ ಗುತ್ತೇಶ್ವರ ಲಿಂಗಗಳನ್ನು ಸ್ಥಾಪಿಸಿ ತ್ರಿಕೂಟಾಚಲವನ್ನು ನಿರ್ಮಿಸಿ ದಾನ ಬಿಟ್ಟದ್ದನ್ನು ವಿವರಿಸುತ್ತದೆ. ಇದರಂತೆ ಜಿಲ್ಲೆಯ ರಾಣಿಬೆನ್ನೂರು ತಾಲೂಕಿನ ಹೊನ್ನತ್ತಿಯ ರಾಮಲಿಂಗೇಶ್ವರ ದೇವಾಲಯವು ಮತ್ತೊಂದು ತ್ರಿಕೂಟಾಚಲ ದೇವಾಲಯವಾಗಿದೆ. ಇಲ್ಲಿನ ಶಾಸನವು[೧೦]....ಶ್ರೀಮಮ್ಮಾಹ ಪ್ರಧಾನಂ ಸರ್ವಾಧಿಕಾರಿ ಬೀಟೆಶಟಿಯರ ಹೇಳಿಕೆಯಿಂ ಸರ್ವ್ವ ಪ್ರಧಾನ ತಿಪ್ಪರಸರು ಹೊನವತಿಯ ಚಾವೇಶ್ವರ ದೇವರ ಸಮೀಪದಲು ರಾಜೇಶ್ವರ ದೇವರ ಪ್ರತಿಷ್ಠೆಯ ಮಾಡಿದನು, ಎಂದು ಉಲ್ಲೇಖವಿದೆ. ಸರ್ವಾಧಿಕಾರಿ ಬೀಟಿಶೆಟ್ಟಿಯ ಅಪೇಕ್ಷೆಯಂತೆ ತಿಪ್ಪರಸನು ಈಗಾಗಲೇ ದ್ವಿಕೂಟವಾಗಿದ್ದ ದೇವಾಲಯವನ್ನು ಚಾಮೇಶ್ವರ ದೇವರ ಬಳಿ ರಾಜೇಶ್ವರ ದೇವರ ಪ್ರತಿಷ್ಠಾಪನೆ ತ್ರಿಕೂಟ ಮಾಡಿಸಿದನೆಂದು ಶಾಸನವು ಉಲ್ಲೇಖಿಸಿದೆ.

ಜಿಲ್ಲೆಯ ಹಿರೇಕೆರೂರ ತಾಲೂಕಿನ ಅಬ್ಬಲೂರಿನ ವೀರಸೋಮನಾಥ ದೇವಾಲಯವು ಜೈನ ಹಾಗೂ ಶೈವ ಧರ್ಮದ ಸಂಘರ್ಷದ ಭೌತಿಕ ಸಾಕ್ಷಿಯಾಗಿದೆ. ಹಾಗೂ ಜೈನ ಮತ ಸೋತು ಶೈವಮತ ಜಯ ಪಡೆದ ಸಂಕೇತದ ಸ್ಮಾರಕವಾಗಿದೆ. ಶಾಸನಗಳು[೧೧] ಈ ಗ್ರಾಮವನ್ನು 'ಅಬ್ಬಲೂರು' ಎಂದು ಉಲ್ಲೇಖಿಸಿವೆ. ಈ ದೇವಾಲಯಕ್ಕೆ ಸಂಬಂಧಿಸಿದ ಶಾಸನವು ೧೦೪ ಪಂಕ್ತಿ ಉಳ್ಳದ್ದಾಗಿದ್ದು ದೇವಾಲಯದ ಬಗ್ಗೆ ಸಮಗ್ರ ಮಾಹಿತಿಯನ್ನು ಒದಗಿಸುತ್ತದೆ'....ಜಿನನೊಡೆದು ಬಸದಿಯುನಳಿದು ಬಿಸುಟು ನೆಲವುಂಖ(ಂ)ಡಿಸಿ ವೀರಸೋವುನಾಥ ದೇವರಂ ಪ್ರತಿಷ್ಠೆ ವೂಡಿ ಶಿವಾಗಮೋಕ್ತವಾಗಿ ಪೆರ್ಬ್ಬ (ರ್ವ್ವ) ತ ಪ್ರಮಾಣದ ದೇಗುಲಂ ತ್ರಿಕೂಟವಾಗಿ ಮಾಡಿಸಿದರೆಂಬುದು (ಕೇ)ಳ್ದು....ಅಂದರೆ ಬಸದಿಯನ್ನು ಒಡೆದು ವೀರಸೋಮನಾಥ ದೇವಾಲಯವನ್ನು ನಿರ್ಮಿಸಿ ಏಕಾಂತದ ರಾಮಯ್ಯನು ತನ್ನ ಹೆಸರಿನಲ್ಲಿ ಹಾಗೂ ತನ್ನ ಗುರುವಾದ ಅಗ್ನಿ ಹೊನ್ನಯ್ಯನ ಹೆಸರಿನಲ್ಲಿ ವೀರಸೋಮನಾಥನ ಅಕ್ಕಪಕ್ಕದಲ್ಲಿ ಲಿಂಗ ಸ್ಥಾಪಿಸಿ ಏಕ ಗರ್ಭಗೃಹ ದೇವಾಲಯುವನ್ನು ತ್ರಿಕೂಟವನ್ನಾಗಿ ಮಾಡಿಸಿದನೆಂದು ಉಲ್ಲೇಖವಿದೆ. ಇದೇ ತಾಲ್ಲೂಕಿನ ರಟ್ಟಿಹಳ್ಳಿ ಕಡಂಬೇಶ್ವರ ದೇವಾಲಯದ ಶಾಸನವು[೧೨] ಕಡಂಬೇಶ್ವರ ತ್ರಿಕೂಟ ದೇವಾಲಯದ ಬಗ್ಗೆ ಮಾಹಿತಿಯನ್ನು ನೀಡುತ್ತದೆ. '....ಶ್ರೀ ಹೊಂನಬಂಮಿ ಶೆಟಿಯರು ಅಖಿಳ ಪ್ರಧಾನ ಪರಿಜನ ಪರಿವೀತರಾಗಿದ್ದೊಂದು ದಿವಸಂ ಧರ್ಮಕಥಾ ಪ್ರಸಂಗದೊಳು ವಿಜಯ ವನಿತಾ ಕರುಷಣಸಮು (ದ್ಯತ)ರಂತು ಧರ್ಮಂ ಬಲುವಿಡಿವಿಡವ ಬಗೆಯಿಂ ಕಡಂಬರಾಜ್ಯ ಲಕ್ಷ್ಮೀ ಭುವನಕ್ಕಧಿಷ್ಠಾನವಾಗಿರ್ದ ಕಡಂಬೇಶ್ವರ ದೇವರ ಪ್ರಾಸ್ತದಲ್ಲಿ ಮಲ್ಲೇಶ್ವರ ರಾಜೇಶ್ವರ ದೇವರ ಪ್ರತಿಷ್ಟೆಯಂ ಮಾಡಿ ಧರ್ಮ ಉರ್ಜಿತಂ ಮಾಡಿ....' ಎಂದು ಶಾಸನವು ಉಲ್ಲೇಖಿಸುತ್ತದೆ. ಮೂರು ಬಾವಿ ದೇವರು ಕಡಂಬೇಶ್ವರ ದೇವಾಲಯವನ್ನು ತ್ರಿಕೂಟಾಚಲವನ್ನಾಗಿ ಮಾಡಲು ಮಂತ್ರಿ ಬೊಮ್ಮಿಶೆಟ್ಟಿಗೆ ಉಪದೇಶಿಸಿದಾಗ ಅವನು ತನ್ನ ತಂದೆ ಮಲ್ಲಶೆಟ್ಟಿ ಹಾಗೂ ತಾಯಿ ರಾಜಲೆಯ ಹೆಸರಿನಲ್ಲಿ ಮಲ್ಲೇಶ್ವರ ಹಾಗೂ ರಾಜೇಶ್ವರ ಲಿಂಗಗಳನ್ನು ಸ್ಥಾಪಿಸಿ ತ್ರಿಕೂಟ ಮಾಡಿಸಿದನು. ಮುಖ್ಯ ದೇವಾಲಯಕ್ಕೂ ಹಾಗೂ ಅಕ್ಕಪಕ್ಕದ ದೇವಾಲಯ ನಿರ್ಮಾಣಕ್ಕೂ ೬೪ ವರ್ಷಗಳ ಅಂತರವಿದ್ದದು ಶಾಸನಗಳಿಂದ ತಿಳಿದುಬರುತ್ತದೆ.

ಜಿಲ್ಲೆಯ ಹಾನಗಲ್ಲ ತಾಲೂಕಿನ ದಶರಥಕೊಪ್ಪದ ಸೋಮನಾಥ ದೇವಾಲಯ ಹಾಗೂ ಸವಣೂರ ತಾಲೂಕಿನ ಕಾರಡಗಿಯ ಡೊಳ್ಳೇಶ್ವರ ದೇವಾಲಯಗಳ ಶಾಸನಗಳು ಲಭ್ಯವಿಲ್ಲ. ಆದರೆ ಈ ಮೇಲೆ ವಿವರಿಸಿದ ದೇವಾಲಯಗಳ ವಾಸ್ತುವನ್ನೆ ಈ ದೇವಾಲಯಗಳು ಹೋಲುವುದರಿಂದ ಇವುಗಳು ಸಹ ಪರೋಕ್ಷ ವಿನಯಕ್ಕಾಗಿಯೇ ನಿರ್ಮಾಣ ಗೊಂಡ ದೇವಾಲಯಗಳು ಎಂದು ಊಹಿಸಬಹುದು.

ಈ ಎಲ್ಲಾ ೬ ಪರೋಕ್ಷ ವಿನಯ / ವ್ಯಕ್ತಿನಾಮ ತ್ರಿಕೂಟ ದೇವಾಲಯಗಳ ವಾಸ್ತು ಭಾಗಗಳು ಒಂದೇ ಮಾದರಿಯಲ್ಲಿ ಇರುವುದು ಗಮನಾರ್ಹವಾಗಿದೆ. ಈ ಎಲ್ಲ ದೇವಾಲಯುಗಳು ಉನ್ನತ ಹುದ್ದೆಯುಲ್ಲಿದ್ದವರಿಂದ ನಿರ್ಮಾಣಗೊಂಡಿದ್ದು ಶಾಸನಗಳಿಂದ ತಿಳಿದುಬರುತ್ತದೆ. ಎತ್ತರವಾದ ಅಧಿಷ್ಠಾನ, ಹೆಚ್ಚು ಅಲಂಕರಣೆಯನ್ನು ಹೊಂದಿದ್ದು ನುರಿತ ಶಿಲ್ಪಿಗಳಿಂದ ಇವು ನಿರ್ಮಾಣಗೊಂಡಿವೆ. ಈ ದೇವಾಲಯುಗಳು ಪಶ್ಚಿಮ, ಉತ್ತರ ಹಾಗೂ ದಕ್ಷಿಣ ದಿಕ್ಕುಗಳಲ್ಲಿ ಗರ್ಭಗೃಹಗಳನ್ನು ಹೊಂದಿದೆ. ಮೂರು ಗರ್ಭಗೃಹಗಳು ಹಾಗೂ ಮೂರು ಅರ್ಧ ಮಂಟಪಗಳು ಸಮಾನ ಅಳತೆಯಲ್ಲಿರುವುದು ಗಮನೀಯ. ಪೂರ್ವ ದಿಕ್ಕಿನಲ್ಲಿ ಮಹಾಮಂಟಪ/ಮುಖಚತುಷ್ಕೋಣದಂತಹ ಹೆಚ್ಚಿನ ವಾಸ್ತು ರಚನೆಗಳು ಇರುವುದು ಈ ದೇವಾಲಯಗಳ ವಾಸ್ತು ವಿಶೇಷ. ಇಲ್ಲಿಯ ಮೂರು ಗರ್ಭಗೃಹಗಳಲ್ಲಿ ಲಿಂಗಗಳಿದ್ದು,





ತಳವಿನ್ಯಾಸ ರೇಖಾಚಿತ್ರ-೬, ಕಡಂಬೇಶ್ವರ ದೇವಾಲಯ, ರಟ್ಟಿಹಳ್ಳಿ (ತಾ. ಹಿರೇಕೆರೂರೂ)
೧. ಗರ್ಭಗೃಹ, ೨. ಅಂತರಾಳ, ೩. ನವರಂಗ, ೪. ಮುಖಮಂಟಪ



ತಳವಿನ್ಯಾಸ ರೇಖಾಚಿತ್ರ-೭, ಸೋಮೇಶ್ವರ ದೇವಾಲಯ, ಹರಳಹಳ್ಳಿ (ತಾ. ಹಾವೇರಿ) ೧) ಗರ್ಭಗೃಹ, ೨) ಅರ್ಧಮಂಟಪ, ೩) ನವರಂಗ, ೪) ಮುಖಮಂಟಪ
ಕೃಪೆ : ದ ಚಾಲುಕ್ಯನ್ ಆರ್ಕಿಟೆಕ್ಚರ್ ಆಫ್ ದ ಕನರೇಸಾ ಡಿಸ್ಟಿಕ್ಟ್

ಮುಖ್ಯಗರ್ಭಗೃಹದಲ್ಲಿ ಪ್ರತಿರೂಪದ ಲಿಂಗವನ್ನು, ಹಾಗೂ ಅಕ್ಕಪಕ್ಕದ ಗರ್ಭಗೃಹಗಳಲ್ಲಿ ಪರೋಕ್ಷ ವಿನಯ/ವ್ಯಕ್ತಿನಾಮದ ಹಿನ್ನೆಲೆಯಲ್ಲಿ ಸ್ಥಾಪಿತಗೊಂಡ ಲಿಂಗಗಳಿವೆ.

ಈ ದೇವಾಲಯಗಳನ್ನು ಆಳರಸರು ಕಟ್ಟಿಸಿದೆ ಸಮಾಜದ ಒಂದು ವರ್ಗಕ್ಕೆ ಸೇರಿದವರಿಂದ ನಿರ್ಮಾಣಗೊಂಡದ್ದು ವಿಶೇಷ. ಈ ದೇವಾಲಯಗಳು ಗಾತ್ರದಲ್ಲಿ ವಿಶಾಲವಾಗಿ, ಸದೃಢವಾಗಿ, ಕಲಾತ್ಮಕವಾಗಿ ರೂಪಗೊಂಡಿವೆ. ಇವುಗಳಿಗೆ ಸಂಬಂಧಿಸಿದ ಶಾಸನಗಳನ್ನು ಗಮನಿಸಿದರೆ ದೇವಾಲಯಗಳನ್ನು ನಿರ್ಮಿಸಿದವರೇ ದಾನ ನೀಡಿರುವುದು ಹಾಗೂ ಅವರ ವಂಶಜರೇ ದಾನಗಳನ್ನು ಮುಂದುವರೆಸಿಕೊಂಡು ಹೋಗಿರುವುದು ವಿಶೇಷವಾಗಿದೆ.

(ಈ ಲೇಖನವನ್ನು ಸಿದ್ಧಪಡಿಸಲು ಮಾರ್ಗದರ್ಶನ ನೀಡಿದ ಹಂಪಿ ಕನ್ನಡ ವಿಶ್ವವಿದ್ಯಾಲಯದ ಅಧ್ಯಾಪಕರಾದ ಡಾ. ಸಿ.ಎಸ್. ವಾಸುದೇವನ್, ಡಾ. ಕೆ.ಜಿ. ಭಟ್ಟಸೂರಿ ಅವರಿಗೆ ಹಾಗೂ ನೆರವಾದ ನನ್ನ ಶ್ರೀಮತಿ ಸುರೇಖಾಳಿಗೂ ಧನ್ಯವಾದಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಈ ಪದ್ಧತಿಯು ಬಹು ಪ್ರಾಚೀನವೆಂಬುದರಲ್ಲಿ ಸಂದೇಹವಿಲ್ಲ. ಶ್ರೀರಾಮನು ಪ್ರತಿಷ್ಠಾಪಿಸಿದನೆಂದು ನಂಬಿರುವ 'ರಾಮೇಶ್ವರ'ವನ್ನು ಇಲ್ಲಿ ನೆನೆಯಬಹುದು.
೨. **ಎಪಿಗ್ರಾಫಿಯಾ ಇಂಡಿಕಾ,** ಸಂ. III ಪು. ೪.
೩. ಅದೇ.,
೪. **ಕರ್ನಾಟಕ ಇನ್ಸ್‌ಕ್ರಿಪ್ಶನ್ಸ್,** ಸಂ. I, ಶಾ.ಸಂ. ೨೫.
೫. ರಾಜಾರಾಂ ಹೆಗಡೆ, **'ಲೌಕಿಕ ಅಲೌಕಿಕ',** ಪು. ೨೦.
೬ ಗೋಪಾಲರಾವ ಎಚ್.ಎಸ್., **'ಶಾಸನಗಳ ಹಿನ್ನೆಲೆಯಲ್ಲಿ ಕಲ್ಯಾಣ ಚಾಲುಕ್ಯ ದೇವಾಲಯಗಳು.** ಪು. ೫೪.
೭. ಶೇಷಶಾಸ್ತ್ರೀ ಆರ್., **'ಕರ್ನಾಟಕದ ವೀರಗಲ್ಲುಗಳು'** ಪು. ೬೬.
೮. ಗೋಪಾಲರಾವ ಎಚ್.ಎಸ್. ಪೂರ್ವೋಕ್ತ.
೯. **ಸೌತ್ ಇಂಡಿಯನ್ ಇನ್ಸ್‌ಕ್ರಿಪ್ಶನ್ಸ್,** ಸಂ. XVIII., ಶಾ.ಸಂ. ೨೯೫.
೧೦. ಅದೇ ಶಾ.ಸಂ. ೨೨೪ ಮತ್ತು ೩೦೨.
೧೧. **ಎಪಿಗ್ರಾಫಿಯಾ ಇಂಡಿಕಾ.,** ಸಂ. v, ಪು. ೨೪೫-೫೨.
೧೨. **ಕರ್ನಾಟಕ ಇನ್ಸ್‌ಕ್ರಿಪ್ಶನ್ಸ್,** ಸಂ vi, ಶಾ. ಸಂ. ೪೪.

ಡಾ. ಎಂ.ಕೆ. ದುರುಗಪ್ಪ*

# ಬದಲಾವಣೆಯ ನೆಲೆಯಲ್ಲಿ ಕುಮಾರರಾಮ ದೇವಾಲಯಗಳು

ಮಧ್ಯಕಾಲೀನ ಕರ್ನಾಟಕ ಚರಿತ್ರೆಯಲ್ಲಿ ಗುರುತಿಸಲ್ಪಟ್ಟ ವೀರರಲ್ಲಿ ಕುಮಾರರಾಮನೂ ಒಬ್ಬ. ಈತನು ಕುಮ್ಮಟದುರ್ಗದ ವೀರಕಂಪಿಲರಾಯನ ಮಗ. ಈತನ ತಾಯಿ ಹರಿಯಲಾದೇವಿ ಕನಕಗಿರಿ ನಾಯಕರ ಮಗಳು. ಮುಮ್ಮಡಿ ಸಿಂಗನಾಯಕನು ಈ ಕುಮ್ಮಟ ನಾಯಕರ ಮೂಲಪುರುಷ. ವಿಜಯನಗರ ಸಾಮ್ರಾಜ್ಯಕ್ಕೆ ಭದ್ರ ಬುನಾದಿಯನ್ನು ಹಾಕಿದ ಶ್ರೇಯಸ್ಸು ಈ ನಾಯಕರಿಗೆ ಸಲ್ಲುತ್ತದೆ. ಕುಮಾರರಾಮನು 'ಗಂಡುಗಲಿ ಕುಮಾರರಾಮ', 'ಪರನಾರಿ ಸಹೋದರ' ಎಂದೇ ಈ ನಾಡಿನಲ್ಲಿ ಪ್ರಸಿದ್ಧ. ಪೌರಾಣಿಕ, ಜಾನಪದ ಮತ್ತು ಚಾರಿತ್ರಿಕ ನೆಲೆಯಲ್ಲಿ ಗುರುತಿಸಲ್ಪಟ್ಟ ಕುಮಾರರಾಮನ ಹುಟ್ಟು, ಜೀವನ, ಸಾಧನೆ ಇವೆಲ್ಲವುಗಳಲ್ಲಿ ಒಂದಲ್ಲ ಒಂದು ವೈಶಿಷ್ಟ್ಯವನ್ನೇ ಕಾಣುತ್ತೇವೆ. ಕುಮಾರರಾಮ, ಕುಮಾರರಾಮಸ್ವಾಮಿ, ರಾಮಸ್ವಾಮಿ, ಕುಮಾರಸ್ವಾಮಿ, ರಾಮನಾಥ ಗಿಳಿರಾಮನಾಥ, ಗಿಳಿರಾಮ, ರಾಮಣ್ಣ ಹಸ್ತರಾಯ, ಚನ್ನಿಗರಾಮ, ರಘುರಾಮ, ಜಟ್ಟಂಗಿರಾಮ, ಕುಮ್ಮಟರಾಮ ಮುಂತಾದ ಹೆಸರುಗಳಲ್ಲಿ ಜನಪದರು ಕುಮಾರರಾಮನನ್ನು ಕರೆಯುತ್ತಾರೆ. ಈ ವೀರನಾಯಕನ ಕುರಿತು ನಂಜುಂಡ ಕವಿಯು "ಕುಮಾರ ರಾಮನ ಚರಿತೆ (ಕ್ರಿ.ಶ. ೧೫೧೨) ಪಾಂಚಾಳಗಂಗನ "ಚೆನ್ನರಾಮನ ಸಾಂಗತ್ಯ (ಕ್ರಿ.ಶ. ೧೬೫೦) ಮಹಾಲಿಂಗಸ್ವಾಮಿಯ ಬಲರಾಮನ ಸಾಂಗತ್ಯ (ಕ್ರಿ.ಶ. ೧೭೫೦) ಎಂಬ ಅತ್ಯಮೂಲ್ಯ ಕೃತಿಗಳು ರಚನೆಗೊಂಡಿವೆ. ಅಲ್ಲದೆ ಈಚಿನ ವರ್ಷಗಳಲ್ಲಿ ಕುಮಾರರಾಮನ ಕುರಿತಂತೆ ಬಹುಮುಖಿ ಅಧ್ಯಯನಗಳು ನಡೆಯುತ್ತಲಿವೆ.

## ಕುಮಾರರಾಮನ ಜನನದ ಹಿನ್ನಲೆ

ಕುಮಾರರಾಮನ ಜನನ, ಬಾಲ್ಯ, ಅವನ ಹೋರಾಟಗಳ ಹಿಂದೆ ಅನೇಕ ಪವಾಡಗಳು, ಜಾನಪದೀಯ, ಪೌರಾಣಿಕ ಕಥನಗಳು ಕಾಣಸಿಗುತ್ತವೆ. ಈ ಪ್ರಕಾರ ಕುಮಾರರಾಮನು ಒಬ್ಬ ಚಾರಿತ್ರಿಕ ಪುರುಷ ಅನ್ನುವುದಕ್ಕಿಂತ ಅವತಾರ ಪುರುಷನೆಂದೇ ಜನರು ಭಾವಿಸಿದ್ದಾರೆ. ಕುಮಾರರಾಮನು ಮಹಾಭಾರತದಲ್ಲಿ ಕಾಣುವ ಮಧ್ಯಮ ಪಾಂಡವ ಅರ್ಜುನ ಸ್ವರೂಪನೆಂದು ಹೇಳಲಾಗುತ್ತಿದೆ. ಹಾಗೆಯೇ ಮುಂದುವರೆದು ಶಿವ ಮತ್ತು ಪಾರ್ವತಿ ನಡುವೆ ಏರ್ಪಟ್ಟ ಸ್ಪರ್ಧೆಯ ಹಿನ್ನೆಲೆಯಲ್ಲಿ ಜಟ್ಟಂಗಿರಾಮನ ಅನುಗ್ರಹದಿಂದ ಜನಿಸಿ ಬಂದವನೆಂದೂ, ಊರ್ವಶಿಯು ರತ್ನಾಜಿಯಾಗಿ, ದ್ರೌಪದಿ ಸುಲ್ತಾನನ ಮಗಳು ಬಾಬಮ್ಮಳಾಗಿ ಗಾಂಧಾರಿಯು ಮಾತಂಗಿಯಾಗಿ ಜನಸಿದವರೆಂಬುದು ತಿಳಿಯುವುದು.

ಮಹಾಲಿಂಗಸ್ವಾಮಿ ಕವಿಯು, ಪರಶುರಾಮನು ಕುಮಾರರಾಮನಾಗಿ ರೇಣುಕೆ ರತ್ನಾಜಿಯಾಗಿ, ಜಮದಗ್ನಿ ಕಂಪಿಲರಾಯನಾಗಿ, ಕಾರ್ತೀರ್ವೀರ್ಯ ಸುಲ್ತಾನನಾಗಿ ಜನಿಸಿದರೆಂದು ಹೇಳುತ್ತಾರೆ. ಒಟ್ಟಾರೆ, ಕುಮಾರರಾಮನ ಪೌರುಷಕ್ಕೆ ಸರಿಸಮಾನ ಕಥನಗಳು ಆತನ ಬದುಕಿನ ನಂತರದಲ್ಲಿ ರಚನೆಗೊಂಡವೆಂದು ಹೇಳಬಹುದು. ಇವೆಲ್ಲವುಗಳಿಗಿಂತಲೂ ಜನಪದರ ನಡುವೆ ಅತೀ ಹೆಚ್ಚು ಜೀವಂತಿಕೆ ಪಡೆದಂತಹ ಹೇಳಿಕೆಯೆಂದರೆ ಮದುವೆಯಾದ ನಂತರ ಪಟ್ಟದರಸಿ ಹರಿಯಲಾದೇವಿಗೆ ಬಹಳ ದಿನವಾದರೂ ಮಕ್ಕಳಾಗಲಿಲ್ಲ ಆದರೆ ನಂತರದಲ್ಲಿ ಮನೆದೇವರ ಕೃಪಾಶೀರ್ವಾದದಿಂದ ಕುಮಾರರಾಮ ಜನಿಸಿದನೆಂದು ಹೇಳುತ್ತಾರೆ. ಮನೆದೇವರಾದ ಜಟ್ಟಂಗಿರಾಮ ದೇವಾಲಯಕ್ಕೆ ಒಮ್ಮೆ ಹರಿಯಲಾದೇವಿ ಹೋದಾಗ ಅಲ್ಲಿ ಪ್ರಸಾದವಾಗಿ ನೀಡಿದ ಬಾಳೆಹಣ್ಣನ್ನು ತಿಂದು ಕುಮಾರರಾಮನಿಗೆ ಜನ್ಮ ನೀಡಿದಳೆಂದೂ, ಆ ಬಾಳೆಹಣ್ಣಿನ ಸಿಪ್ಪೆಯನ್ನು ತಿಂದ ಅವಳ ಸೇವಕಿ ಹೋಲಿಕೆರಾಮನಿಗೆ ಜನ್ಮ ನೀಡಿದಳೆಂದು, ನೋಡಲು ಇವರಿಬ್ಬರಲ್ಲಿ ಯಾವುದೇ ವ್ಯತ್ಯಾಸಗಳಿರಲಿಲ್ಲ ಎಂದು ಹೇಳಲಾಗುವುದು.

ಕುಮಾರರಾಮನು ಪ್ರೌಢ ವಯಸ್ಸಿಗೆ ಬಂದಂತೆ ಅವನ ಸೌಂದರ್ಯ ಹಾಗೂ ಬಲವನ್ನು ಮೀರಿಸುವ ವೀರರಿರಲಿಲ್ಲ. ಅವನ ಮಲತಾಯಿ ರತ್ನಾಜಿ ಅವನ ಜೀವಕ್ಕೆ ಮುಳುವಾದಳು

* ಇತಿಹಾಸ ಉಪನ್ಯಾಸಕ, ಸರ್ಕಾರಿ ಪದವಿ ಪೂರ್ವ ಕಾಲೇಜು, ಕನಕಗಿರಿ, ಗಂಗಾವತಿ ತಾಲ್ಲೂಕು, ಕೊಪ್ಪಳ ಜಿಲ್ಲೆ.

ಮಾತ್ರ ಶೋಚನೀಯ. ಇಳಿವಯಸ್ಸಿನ ಕಂಪಿಲರಾಯ ರತ್ನಾಜಿ ಎಂಬ ಡೊಂಬರ ಹುಡುಗಿಯನ್ನು ಮದುವೆ ಮಾಡಿಕೊಂಡು ಅರಮನೆಗೆ ಕರೆತಂದ. ಈಕೆ ಕುಮಾರರಾಮನ ರೂಪ, ಲಾವಣ್ಯ ಕಂಡು ಬೆರಗಾಗಿ ಮೋಹಿತಳಾದಳು. ಪರನಾರಿಯರಿಗೆ ಸಹೋದರನಾಗಿ ಬಾಳುವೆ ಎಂದು ತಾಯಿಗೆ ಮಾತಿಟ್ಟು ಬದುಕುತ್ತಿದ್ದ ಕುಮಾರರಾಮನಿಗೆ ರತ್ನಾಜಿ ತಾಯಿಯಷ್ಟೆ ಪವಿತ್ರಳು. ಆದರೆ ಅವಳು ಮಾತ್ರ ಕುಮಾರರಾಮನನ್ನು ಮಗನೆಂದು ಭಾವಿಸಲಿಲ್ಲ. ಒಮ್ಮೆ ಮುತ್ತಿನ ಚೆಂಡಿನಾಟ ಸಮಯ ಬಳಸಿಕೊಂಡ ರತ್ನಾಜಿ ಕುಮಾರರಾಮನನ್ನು ಮಲಗುವ ಮಂಚಕ್ಕೆ ಕರೆದಳು. ಅದನ್ನು ತಿರಸ್ಕರಿಸಿದ ಕುಮಾರರಾಮನು ಕೊನೆಗೆ ತಂದೆಯಿಂದಲೇ ಕತ್ತು ಕತ್ತರಿಸುವ ಶಿಕ್ಷೆಗೆ ಗುರಿಯಾದದ್ದು ದುರಂತ ಕಥೆ. ಈ ನಡುವೆ ಮುಂದಾಲೋಚನೆ ಮಾಡಿದ ಬುದ್ಧಿವಂತ, ಸೇವಾನಿಷ್ಠ ಮಂತ್ರಿ ಬೈಚಪ್ಪ ಕುಮಾರರಾಮನನ್ನು ನೆಲಮಾಳಿಗೆಯೊಳಗೆ ಅಡಗಿಸಿಟ್ಟ. ಆತನಿಗೆ (ಕುಮಾರರಾಮನಿಗೆ) ಬಂದ ಈ ಶಿಕ್ಷೆಯನ್ನು ಮನಃಪೂರ್ವಕ ಸ್ವೀಕರಿಸಿದ ಹೋಲಿಕೆ ರಾಮನ ತಲೆ ನೋಡಿದ ಕಂಪಿಲರಾಯ ತೃಪ್ತನಾದರೂ ದೆಹಲಿ ಸುಲ್ತಾನರ ದಾಳಿ ಮತ್ತು ರತ್ನಾಜಿಯ ಕುತಂತ್ರ ಅರಿತು ಮಮ್ಮಲ ಮರುಗುತ್ತಾ ಮಗ ಕುಮಾರನನ್ನು ನೆನೆದನು. ಈ ನಡುವೆ ನೆಲಮಾಳಿಗೆಯಿಂದ ಹೊರಬಂದ ಕುಮಾರರಾಮ ದೆಹಲಿ ಸುಲ್ತಾನನ ಸೈನ್ಯವನ್ನು ನುಚ್ಚುನೂರು ಮಾಡಿದ ವಿಷಯ ತಿಳಿದ ಕಂಪಿಲರಾಯ ಪಶ್ಚಾತ್ತಾಪಕ್ಕೆ ಗುರಿಯಾದ. ಕೊನೆಗೆ ವೀರಗಾಸೆಯಾಕಿ ರಣಭೂಮಿಯಲ್ಲಿ ಪ್ರತ್ಯಕ್ಷಳಾದ ಹೆಣ್ಣೊಬ್ಬಳ (ಮಾತಂಗಿ) ಯುದ್ಧ ಆಹ್ವಾನಕ್ಕೆ ಕುಮಾರರಾಮ ತಿರಸ್ಕರಿಸಿ ಹಿಂತಿರುಗಿ ಹೊರಟಾಗ ಆಕೆಯಿಂದ ತಲೆ ಕತ್ತರಿಸಲ್ಪಟ್ಟ. ಜೊತೆಯಲ್ಲಿ ಆತನ ಬಲಗೈ ಬಂಟರ ತಲೆಗಳನ್ನು ಕತ್ತರಿಸಹಾಕಲಾಯಿತು. ಈ ತಲೆಗಳು ದೆಹಲಿಗೆ ಕೊಂಡೊಯ್ಯಲಾಯಿತು. ದೆಹಲಿ ಸೇರಿದ ಕುಮಾರರಾಮನ ತಲೆಗೆ ದೈವಿ ಸ್ವರೂಪ ಕಂಡುಬಂದಿತು. ದೆಹಲಿ ಜನರನ್ನೆಲ್ಲಾ ಮಲಗಿಸಿತು. ಈ ತಲೆಗಳು ಕಾಡುತ್ತಿದ್ದುದನ್ನು ಕಂಡು ಬೇಸತ್ತ ತುಘಲಕ್ ದೊರೆ ಈ ಎಲ್ಲಾ ತಲೆಗಳನ್ನು ಸಂಡೂರಿಗೆ (ಹೊಸಮಲೆದುರ್ಗ) ಆನಂತರ ಅವುಗಳನ್ನು ಕುಮ್ಮಟದುರ್ಗಕ್ಕೆ ಕಳುಹಿಸಿದ ಎಂದು ಹೇಳಲಾಗುತ್ತಿದೆ. ಕುಮಾರರಾಮನ ಮತ್ತು ಆತನ ಸ್ನೇಹಿತರ ಸಮಾಧಿಗಳನ್ನು ಕುಮ್ಮಟದುರ್ಗದ ಕೋಟೆಯೊಳಗೆ ಈಗಲೂ ನೋಡಬಹುದು. ಕುಮಾರರಾಮನ ತಲೆಯನ್ನು ನೋಡಿದ ಹರಿಯಲಾದೇವಿ ಕುಲಕ್ಕೆಲ್ಲಾ ದೇವರಾಗು ಎಂದು ಹರಸಿದಳೆಂದು ತಿಳಿದುಬರುತ್ತದೆ. ಅಂದಿನಿಂದ ಕುಮಾರರಾಮನು ಜಾತಿ ಭೇದವಿಲ್ಲದೇ ಕರ್ನಾಟಕದ ಮೂಲೆ ಮೂಲೆಯಲ್ಲಿ ದೇವರಾಗಿ ಆರಾಧನೆಗೊಳ್ಳುತ್ತಾ ಬಂದಿರುವುದು ವಾಸ್ತವ. ಕುಮಾರರಾಮನ ತಲೆಗಳನ್ನು ಹೋಲುವಂತಹ ಕಲ್ಲುಗುಂಡುಗಳ, ಮುಖವಾಡಗಳ, ವೀರಗಲ್ಲುಗಳ ಆರಾಧನೆ ಸಂಪ್ರದಾಯ ವಿಜಯನಗರ ಅರಸರ ಕಾಲದಲ್ಲಿ ಇನ್ನಷ್ಟು ಮಹತ್ವ ಪಡೆಯಿತು ಮತ್ತು ಕುಮಾರರಾಮನಿಗೆ ಅನೇಕ ದೇವಾಲಯಗಳೂ ರೂಪುಗೊಂಡವು ಎಂಬುದನ್ನು ನೋಡುತ್ತೇವೆ. ಕುಮಾರರಾಮನ ಬಿಲ್ಲು, ಬಾಣ, ಬತ್ತಳಿಕೆ, ಕಟ್ಟಿಗೆ ಮುಖವಾಡಗಳನ್ನು ಗರ್ಭಗೃಹದಲ್ಲಿಟ್ಟು ಆರಾಧಿಸುವ ಸಂಪ್ರದಾಯಕ್ಕೆ ವಿಜಯನಗರ ಅರಸರು ಪ್ರೋತ್ಸಾಹಿಸಿದರು.

## ಬದಲಾವಣೆಯತ್ತ ಕುಮಾರರಾಮು ದೇವಾಲಯಗಳು

ಕರ್ನಾಟಕ ಸಾಂಸ್ಕೃತಿಕ ವೀರಪುರುಷರಾದ ಮಾದೇಶ್ವರ, ಮಂಟೇಸ್ವಾಮಿ, ಮೈಲಾರಲಿಂಗ, ಜುಂಜಪ್ಪ, ಕಾಳಿಂಗರಾಯ, ಮುಂತಾದವರು ತಮ್ಮ ಮೂಲ ಹೆಸರಿನಲ್ಲಿ ಹಾಗೂ ಮೂಲ ಸಂಸ್ಕೃತಿಯಲ್ಲಿ ಇಂದಿಗೂ ಆರಾಧಿಸಲ್ಪಡುತ್ತಿದ್ದಾರೆ ಆದರೆ, ಅವರಂತೆಯೇ ಸಾಂಸ್ಕೃತಿಕ, ಚಾರಿತ್ರಿಕ ಮಹತ್ವವನ್ನು ಹೊಂದಿದ ಕುಮಾರರಾಮನ ಸಂಸ್ಕೃತಿ, ಆರಾಧನೆ ಬದಲಾವಣೆಯ ಕ್ರಿಯೆಗೆ ಗುರಿಯಾಗುತ್ತಾ ಬಂದಿರುವುದು ಸಮರ್ಥನಾರ್ಹವಲ್ಲ. ಈಚಿನ ದಿನಗಳಲ್ಲಿ ಕುಮಾರರಾಮನ ದೇವಾಲಯಗಳು ಶ್ರೀರಾಮ, ರಾಮಲಿಂಗೇಶ್ವರ ಕುಮಾರರಸ್ವಾಮಿ ದೇವಾಲಯಗಳಾಗಿ ಪರಿವರ್ತನೆಯಾಗುತ್ತಾ ನಡೆದಿರುವುದನ್ನು ಈ ಪ್ರಬಂಧದಲ್ಲಿ ಗುರುತಿಸಲು ಪ್ರಯತ್ನಿಸಲಾಗಿದೆ.

ಬಳ್ಳಾರಿ ಜಿಲ್ಲೆ ಸಂಡೂರು ಮತ್ತು ಹಗರಿಬೊಮ್ಮನಹಳ್ಳಿ ತಾ॥ ದಶಮಾಪುರ ಗ್ರಾಮಗಳಲ್ಲಿರುವ ಕುಮಾರರಾಮಸ್ವಾಮಿ ದೇವಾಲಯಗಳ ಬದಲಾವಣೆಯ ಅಂಶಗಳು ಕಂಡುಬರುತ್ತಿವೆ. ಒಂದು ಕಾಲಕ್ಕೆ ಕುಮಾರರಾಮಸ್ವಾಮಿ ದೇವಾಲಯವಾಗಿದ್ದ ಸಂಡೂರಿನ ಕುಮಾರಸ್ವಾಮಿ ದೇವಾಲಯವು ಕುಮಾರರಾಮನಿಗೆ ಸಂಬಂಧಿಸಿದುದಾಗಿದೆ. ಅದೇ ಸಂಡೂರಿನ ನಾಯಕರ ಓಣಿಯಲ್ಲಿರುವ ರಾಮಸ್ವಾಮಿ ದೇವಾಲಯ ಈಚೀನ ದಿನಗಳಲ್ಲಿ ರಾಮಲಿಂಗೇಶ್ವರ ದೇವಾಲಯವಾಗಿ ಕರೆಸಿಕೊಳ್ಳುತ್ತಿದೆ. ಹಳೆಯ ತಲೆಮಾರಿನ ಜನರಲ್ಲಿ ಮಾತ್ರ ಈ ದೇವಾಲಯ ಕುಮಾರರಾಮಸ್ವಾಮಿ ದೇವಾಲಯ ಅಷ್ಟೇ. ರಾಮಸ್ವಾಮಿ ಅಂದರೆ ರಾಮಲಿಂಗೇಶ್ವರ ಇವರಿಬ್ಬರೂ ಒಂದೇ ಎನ್ನುತ್ತಾರೆ ಅಲ್ಲಿನ ಕೆಲವು ಹಿರಿಯರು. ಈ ದೇವಾಲಯದ ನಿರ್ಮಾಣ ಈಚೀನ ದಿನಗಳಲ್ಲಾದದ್ದು. ಗರ್ಭಗೃಹದಲ್ಲಿ ಶಿವಲಿಂಗ ಮತ್ತು ಇದರ ಮುಂಭಾಗದಲ್ಲಿನ ನಂದಿ ವಿಗ್ರಹಗಳೆಲ್ಲವೂ ನಿನ್ನೆ ಮೊನ್ನೆಯದೇ. ಈ ಶಿವಲಿಂಗದ ಹಿಂಭಾಗದ ಪೆಟ್ಟಿಗೆ ಮತ್ತು ಪೆಟ್ಟಿಗೆಯೊಳಗಿನ ಕಟ್ಟಿಗೆಯ ಮುಖವಾಡ ಈ ಹಿಂದಿನಿಂದಲೂ ಪೂಜಿಸಲ್ಪಟ್ಟವುಗಳು. ಅವುಗಳಿಗೆ ಅಷ್ಟೇನೂ ಪ್ರಾಮುಖ್ಯತೆ ಕಾಣುತ್ತಿರಲಿಲ್ಲ. ಕುಮಾರರಾಮನ ಕಟ್ಟಿಗೆಯ ಮುಖವಾಡದಲ್ಲಿರುವಂತೆಯೇ

ಬೆಳ್ಳಿಯ ಕವಚವನ್ನು ಶಿವಲಿಂಗದ ಮೇಲೆ ಹಾಕಿ ಪೂಜಿಸುತ್ತಿರುವ ಅಂಶ ಮಾತ್ರ ಸ್ವಲ್ಪ ನೆಮ್ಮದಿಯನ್ನು ತರುವಂತಿತ್ತು. ಪೆಟ್ಟಿಗೆಯೊಳಗಿನ ಮುಖವಾಡವನ್ನು ವರ್ಷಕ್ಕೊಮ್ಮೆ ಗಂಗೆ ಪೂಜೆಗೆ ಕೊಂಡೊಯ್ಯಲಾಗುತ್ತಿತ್ತು. ಈ ಸಂಪ್ರದಾಯ ಮೊದಲಿನಷ್ಟು ಮೌಲ್ಯವನ್ನು ಹೊಂದಿಲ್ಲವೆಂದು ಅಲ್ಲಿನ ಹೇಳಿಕೆಯಲ್ಲಿ ಕಾಣುತ್ತಿತ್ತು. ಈ ದೇವಾಲಯವನ್ನು ಗಣಿ ಉದ್ಯಮಿ ಶಾಸಕ ಸಂತೋಷಲಾಡ್ ನಿರ್ಮಿಸಿಕೊಟ್ಟರೆ, ದೇವಾಲಯದೊಳಗಿನ ಮೂರ್ತಿಗಳನ್ನು ಅದೇ ಊರಿನ ವೀರಶೈವ ಮುಖಂಡ ಲಿಂಗನಗೌಡ್ರು ಕೆತ್ತಿಸಿಕೊಟ್ಟಿದ್ದಾರೆ. ಆದರೂ ಹೊಸಮಲೆ ದುರ್ಗ ಮತ್ತು ಸಂಡೂರಿನೊಡನೆ ಸಂಪರ್ಕ ಇರುವ ಜನರಲ್ಲಿ ಕುಮಾರರಾಮನೇಕೆ ರಾಮಲಿಂಗೇಶ್ವರಾಗಿ ಪೂಜಿಸಲ್ಪಡುತ್ತಾನೆ ಎಂಬ ಅಂಶಗಳ ಬಗೆ ತಲಸ್ಪರ್ಶಿ ಅಧ್ಯಯನ ಅತ್ಯಗತ್ಯ. ಕುಮಾರರಾಮ ದೇವಾಲಯವಿದು, ಕುಮಾರರಾಮನ ಕಟ್ಟಿಗೆ ಮುಖವಾಡವಿದು ಎಂದು ಹೇಳಿದರೆ ಅಲ್ಲ ಬಿಡ್ರಿ ರಾಮಲಿಂಗೇಶ್ವರ ಎನ್ನುವವರೇ ಅತ್ಯಧಿಕ. ಡಾ. ಜೆ.ಎಂ. ನಾಗಯ್ಯ ಅವರು ತಮ್ಮ "ಬಳ್ಳಾರಿ ಜಿಲ್ಲೆಯ ಸಾಂಸ್ಕೃತಿಕ ಇತಿಹಾಸ ಸಂಪುಟ ಒಂದು ಕೃತಿಯಲ್ಲಿ ಕುಮಾರರಾಮನ ಬದಲಾಗಿ ಶ್ರೀರಾಮಚಂದ್ರನ ವಿಗ್ರಹವನ್ನು ಕೆತ್ತಿಡಲಾಗಿದೆ ಎಂದು ಹೇಳುತ್ತಾರೆ (ಪು. ೧೪೦) ಆದರೆ ಅಲ್ಲಿ ಶ್ರೀರಾಮಚಂದ್ರನ ವಿಗ್ರಹ ಇರುವುದು ಕಾಣಲಿಲ್ಲ.



ಇದೇ ಬಳ್ಳಾರಿ ಜಿಲ್ಲೆಯ ಹಗರಿಬೊಮ್ಮನಹಳ್ಳಿ ತಾಲೂಕಿನ **ದಶಮಾಪುರ ಗ್ರಾಮದ ರಾಮಸ್ವಾಮಿ ದೇವಾಲಯ** ಈಗ ಸಂಪೂರ್ಣ ಬದಲಾಗಿ ನಿಂತಿದೆ. ಗರ್ಭಗೃಹ, ಅಲ್ಲಿರುವ ವಿಗ್ರಹಗಳು, ದೇವಾಲಯ ಎಲ್ಲವೂ ನವನೂತನ. ಈ ದೇವಾಲಯದ ಗರ್ಭಗೃಹದೊಳಗೆ ಮೊದಲಿದ್ದ ಗುಂಡುಕಲ್ಲು, ಕುಮಾರರಾಮನ ಬಿಲ್ಲು, ಬಾಣ, ಬತ್ತಳಿಕೆ, ಮಂಟಪ ಇವೆಲ್ಲವೂ ಕಾಲಕ್ಕೆ ಸೇರಿ ಎಷ್ಟೋ ವರ್ಷಗಳಾಗಿವೆ ಎಂದು ಅಲ್ಲಿನ ಜನರ ಮಾತಿನಲ್ಲಿ ಗುರುತಿಸಲಾಗುತ್ತದೆ. ಗರ್ಭಗೃಹದಲ್ಲಿ ಶ್ರೀರಾಮ, ಲಕ್ಷ್ಮಣ, ಸೀತೆ, ಆಂಜನೇಯ ವಿಗ್ರಹಗಳಿವೆ.



ಸಂಡೂರು, ಹೊಸಮಲೆದುರ್ಗಕ್ಕೆ ಸಂಬಂಧವಿರದ ಈ ದೇವಾಲಯ, ಈ ಊರಿನ ಜನರಲ್ಲಿ ಸಾಕಷ್ಟು ಬದಲಾವಣೆಗಳಾದುದು ಕಂಡುಬರುತ್ತದೆ. ಈ ರಾಮಸ್ವಾಮಿ ಕುಮಾರರಾಮನಲ್ಲವೇ? ಎಂದು ಅಲ್ಲಿನ ಜನರನ್ನು ಕೇಳಿದರೆ ಅದ್ಯಾವ ಕುಮಾರರಾಮ ಎನ್ನುತ್ತಾರೆ ! ಇದೇ ಜನರು ತಾವು ಮಾಡುವ ರಾಮಸ್ವಾಮಿ ಹಬ್ಬಗಳಲ್ಲಿ ಕುಮಾರರಾಮನಿಗೆ ಸಂಬಂದಿಸಿದ ಆಚಾರ ವಿಚಾರಗಳನ್ನು ಪರಿಪಾಲಿಸುವುದು ಕಂಡುಬರುತ್ತದೆ. ಈ ಮೊದಲಿದ್ದ ದೇವಲಯದ ಗರ್ಭಗೃಹದೊಳಗೆ ಗುಂಡುಕಲ್ಲುಗಳಿದ್ದು ಅವುಗಳಿಗೆ ಬಟ್ಟೆಯನ್ನು ಸುತ್ತಿಟ್ಟಿದ್ದು ಅವುಗಳನ್ನು ಈ ಮೊದಲು ಪೂಜಿಸಲಾಗುತ್ತಿತ್ತು ಎಂಬಂಶವನ್ನು ದಿವಂಗತ ಮಾಳಿಗೆ ದೊಡ್ಡತಿಮ್ಮಪ್ಪ ಅವರಿಂದ ಕೇಳಿ ತಿಳಿದಿದ್ದೆ. ಹಾಗೂ ಕುಮಾರರಾಮನ ಬಿಲ್ಲು, ಬಾಣ, ಬತ್ತಳಿಕೆಗಳನ್ನು ದಶಮಾಪುರದಲ್ಲಿ ರುಂಡವನ್ನು, ಗರಗದಲ್ಲಿ ಮುಂಡವನ್ನು, ರಾಮನಮಲೆ (ಹೊಸಮಲೆದುರ್ಗ) ಯಲ್ಲಿ ಇಟ್ಟು ಪೂಜಿಸಲಾಗುತ್ತಿತ್ತು ಎಂದು ದಿವಂಗತ ಮಾಳಿಗೆ ಹನುಮಂತಮ್ಮ ಅಜ್ಜಿ ಹೇಳುತ್ತಿದ್ದುದು ನನಗೆ ಇನ್ನೂ ನೆನಪಿದೆ.

ದಶಮಾಪುರದಿಂದ ಪ್ರತಿ ವರ್ಷ ರಾಮಸ್ವಾಮಿ ದೇವರನ್ನು ಗಂಗೆಪೂಜೆಗೆ ತುಂಗಾಭದ್ರ ನದಿಗೆ ಕೊಂಡೊಯ್ಯುವ ಸಂಪ್ರದಾಯವಿದೆ. ಆಗ ರಾಮನಮಲೆ, ಗರಗ ಗ್ರಾಮಗಳಿಗೆ ಬೇಟೆ ನೀಡಿಯೇ ಹಿಂದಿರುಗುತ್ತಿದ್ದರು. ಸಂಡೂರು ಈ ಭಾಗದ ನಾಯಕ ಜನರಿಗೆ ಗುರುಮನೆ ಮತ್ತು ಕಟ್ಟೆಮನೆ ಯಾಗಿದ್ದು ಈ ಮೊದಲಿನಿಂದಲೂ ಅವಿನಾಭಾವ ಸಂಬಂಧ ವಿದೆ. ರಾಮಸ್ವಾಮಿ ದೇವರ ಪೂಜಾರಿಗೆ ಪಟ್ಟ ಕಟ್ಟುವಿಕೆ ಮತ್ತು ಮಕ್ಕಳಿಗೆ ಮುದ್ರೆ ಹಾಕುವ ಸಂಪ್ರದಾಯಗಳು ಇಲ್ಲಿಯೇ ನಡೆಯುತ್ತಿದ್ದವು. ಈ ಸಂಪ್ರದಾಯಗಳು ಆಯಾಯ ಗ್ರಾಮಗಳಿಗೆ ಸೀಮಿತವಾಗಿದ್ದು ಗುರುಮನೆ ಮತ್ತು ಕಟ್ಟೆ ಮನೆಗಳು ತಮ್ಮ ಮೊದಲಿನ ಪ್ರಾಮುಖ್ಯತೆಯನ್ನು ಕಳೆದುಕೊಂಡಿವೆ. ರಾಮನ ಮನೆ ಮೇಲಿರುವ ರಾಮಸ್ವಾಮಿ ದೇವರಿಗೆ ಬೇಟೆ (ಪ್ರಾಣಿಬಲಿ) ಮಾಡುವ ಸಂಪ್ರದಾಯವಿದ್ದು ನನಗೆ ನೆನಪಿರುವಂತೆ ದಶಮಾಪುರದ ಕೆಲವರು ಅಲ್ಲಿಗೆ ಹೋಗಿ ಬೇಟೆ ಮಾಡಿಕೊಂಡು ಬಂದಿರುವುದುಂಟು. ಕುಮ್ಮಟದುರ್ಗದ ರಾಮಸ್ವಾಮಿ ಜಾತ್ರೆಯಂತೆ ಇಲ್ಲೂ ಜಾತ್ರೆ ನಡೆಯುತ್ತದೆ ಎಂದು ಹೇಳುತ್ತಾರೆ. ಈ ರೀತಿಯ ಪ್ರಾಣಿಯ ಬಲಿಯನ್ನು ರಾಮಸ್ವಾಮಿಗೆ ಅರ್ಪಿಸುವುದನ್ನು ಕುಮ್ಮಟದುರ್ಗದಲ್ಲಿ ಕಣ್ಣಾರೆ ನಾನು ನೋಡಿರುವೆ. ಕುಮ್ಮಟದುರ್ಗ, ಸಂಡೂರು, ಗರಗ, ಹೊಸಮಲೆದುರ್ಗ ಮುಂತಾದ ಸ್ಥಳಗಳಲ್ಲಿರುವಂತೆಯೇ ದಶಮಾಪುರದಲ್ಲಿ ರಾಮಸ್ವಾಮಿ ದೇವಾಲಯದ ಮುಂಭಾಗದಲ್ಲಿ ಭರಮಪ್ಪ ದೇವರು ಇದ್ದಾನೆ.



**ಸಂಡೂರು ರಾಮಸ್ವಾಮಿ ದೇವಾಲಯ ಮತ್ತು ದಶಮಾಪುರ ರಾಮಸ್ವಾಮಿ ದೇವಾಲಯ** ಮತ್ತು ಗರ್ಭಗೃಹದಲ್ಲಿರುವ ಶಿಲಾವಿಗ್ರಹಗಳು ಸಂಪೂರ್ಣ ಹೊಸತು. ದಶಮಾಪುರದಲ್ಲಂತೂ ಗರ್ಭಗೃಹದಲ್ಲಿ ಕುಮಾರರಾಮನ ಯಾವ ಅವಶೇಷಗಳೂ ಕಾಣಸಿಗುವುದಿಲ್ಲ. ಶ್ರೀರಾಮನೇ ಇಲ್ಲಿಯ ಜನರ ಆರಾಧ್ಯದೇವ. ಆತ ಕುಮಾರರಾಮನೇ



ಎಂದರೆ ಗೊತ್ತಿಲ್ಲ. ಶ್ರೀರಾಮ, ಲಕ್ಷ್ಮಣ, ಸೀತೆ, ಆಂಜನೇಯ ವಿಗ್ರಹಗಳು ಗರ್ಭಗೃಹದಲ್ಲಿ ಇಂದು ನಿತ್ಯ ಪೂಜಿಸಲ್ಪಡುತ್ತಿವೆ. ಭರತಹುಣ್ಣಿಮೆ ಮತ್ತು ಗೌರಿಹುಣ್ಣಿಮೆ ಸಮಯದಲ್ಲಿ ರಾಮಸ್ವಾಮಿ ಜಾತ್ರೆಯನ್ನು ದಶಮಾಪುರದ ಜನರು ಆಚರಿಸುತ್ತಾರೆ. ಈ ಹಬ್ಬದ ಸಮಯದಲ್ಲಿ ಗುಗ್ಗರಿ, ಬಾಳೆಹಣ್ಣುಗಳನ್ನು ಪ್ರಸಾದವಾಗಿ ಹಂಚುತ್ತಾರೆ. ಗುಗ್ಗರಿಯನ್ನು ಬೇಯಿಸುವಾಗ ಮಡಿಯಿಂದ ಪುರುಷನೊಬ್ಬ ತನ್ನ ಮೂಗಿಗೆ ಬಟ್ಟೆಯನ್ನು ಕಟ್ಟಿಕೊಂಡು ಗುಗ್ಗರಿಯನ್ನು ಬೇಯಿಸುತ್ತಾನೆ. ಆ ವ್ಯಕ್ತಿಯ ಉಸಿರು ಸಹಾ ಆ ಗುಗ್ಗರಿಗೆ (ಹುರುಳಿಕಾಳು) ತಾಗಬಾರದೆಂಬುದು ಜನರ ನಂಬಿಕೆ. ಹರಿಯಾಲದೇವಿ ಜಟ್ಟಂಗಿ ರಾಮೇಶ್ವರ ದೇವಾಲಯದಲ್ಲಿ ಪ್ರಸಾದ ರೂಪದಲ್ಲಿ ನೀಡಲಾದ ಬಾಳೆಹಣ್ಣನ್ನು ತಿಂದು ಕುಮಾರರಾಮನಿಗೆ ಜನ್ಮವಿತ್ತಳೆಂದು ನೆನಪಿಸಿಕೊಂಡಾಗ, ಈ ಊರಿನ ರಾಮಸ್ವಾಮಿ ಜಾತ್ರೆಯಲ್ಲಿ ಕಡ್ಡಾಯವಾಗಿ ಬಾಳೆಹಣ್ಣನ್ನು ಮನೆ ಮನೆಗೆ ಪ್ರಸಾದವಾಗಿ ನೀಡುತ್ತಾರೆ. ಹರಿಯಾಲದೇವಿ ಬೆಡಗಿನ ಗುಜ್ಜಲೋರು ಹೆಚ್ಚು ಜನ ಈ ಊರಿನಲ್ಲಿ ಸಿಗುತ್ತಾರೆ. ಹರಿಯಮ್ಮ ಹರಿಯವ್ವ, ಕೆಂಪಣ್ಣ, ಕಾಟಣ್ಣ ಎಂಬ ನಾಮ ಸೂಚಕದವರೂ ಇಲ್ಲುಂಟು.



ಗರಗದ ರಾಮಸ್ವಾಮಿ ದೇವಾಲಯದ ಸಂಪ್ರದಾಯಗಳಲ್ಲಿ ಬದಲಾವಣೆಗಳೇನೂ ಕಾಣುವುದಿಲ್ಲ. ಹೊಸಮಲೆ ದುರ್ಗದ ಮೇಲಿನ ರಾಮಸ್ವಾಮಿ ದೇವಾಲಯವನ್ನು ಮತ್ತು ಈ ಊರಿನ ರಾಮಸ್ವಾಮಿ ದೇವಾಲಯ ಕ್ರಿ.ಶ. ೧೫೨೭ರಲ್ಲಿ ಗೋತಾಯಿ ಮತ್ತು ಆಕೆಯ ತಮ್ಮ ರಾಮಣ್ಣನು ಸೇರಿ ಕಟ್ಟಿಸಿದರೆಂದು ಶಿಲಾಶಾಸನ ತಿಳಿಸುತ್ತದೆ. ಈ ದೇವಾಲಯದಲ್ಲಿ ವೀರಗಲ್ಲು (ಕುದುರೆ ಏರಿದ ವೀರ) ಮತ್ತು ಪೆಟ್ಟಿಗೆ (ಹೊಲ್ಕಿರಾಮ ಮತ್ತು ಕುಮಾರರಾಮರ ಕಟ್ಟಿಗೆ ಮುಖವಾಡವಿರುವ) ಯನ್ನು ಪೂಜಿಸಲಾಗುತ್ತಿದೆ. ಈ ಊರಿನಲ್ಲಿ ರುಂಡಾಡುವ ಹಬ್ಬವನ್ನು ಹೆಣ್ಣೊಬ್ಬಳು ಹೋಳ್ಕಿರಾಮ ಮತ್ತು ಕುಮಾರರಾಮ ಕಟ್ಟಿಗೆ ಮುಖವಾಡಗಳನ್ನು ತನ್ನ ಕೈಯಲ್ಲಿ ಹಿಡಿದು ಕುಣಿಯುತ್ತಿದ್ದಳೆಂದು ಜನರು ಹೇಳುತ್ತಾರೆ. ಆ ಹೆಣ್ಣು ದಶಮಾಪುರ ಗ್ರಾಮದ ಮೂಲದವಳು ಎಂದು ತಿಳಿಸುತ್ತಾರೆ ಆ ಊರಿನ ಗ್ರಾಮಸ್ಥರು.

ಒಟ್ಟಿನಲ್ಲಿ ಚಾರಿತ್ರಿಕ ನೆಲೆಯಲ್ಲಿ ನಿರ್ಮಾಣವಾದಂತಹ ಕುಮಾರಸ್ವಾಮಿ ದೇವಾಲಯಗಳು ತಮ್ಮ ಮೂಲನೆಲೆಯಲ್ಲಿಯೇ ಉಳಿಯಬೇಕಾದ ಅನಿವಾರ್ಯತೆ ಎದ್ದು ಕಾಣುತ್ತದೆ. ಇಲ್ಲವಾದಲ್ಲಿ ಕುಮಾರರಾಮನ ಐತಿಹಾಸಿಕ ಸಂಪ್ರದಾಯಗಳಿಗೆ ಧಕ್ಕೆಯಾಗಬಹುದು. ಈ ಮೊದಲಿನಂತೆ ದೇವಾಲಯಗಳ ಅಭಿವೃದ್ಧಿಯಾಗಿ ಜನರು ಮತ್ತು ಸರಕಾರ ಯೋಚಿಸಿದಾಗ ಜಾತಿ/ಭೇದ ಮರೆತು ಜನ ಪುನಃ ಕುಮಾರರಾಮನನ್ನು ನೆನೆಯಬಹುದು. ಈ ಬದಲಾವಣೆಗಳಿಗೆ ಕಾರಣಗಳನ್ನು ಹುಡುಕಿ ಅವುಗಳಿಗೆ ಸೂಕ್ತ ಕ್ರಮಗಳನ್ನು ಕೈಗೊಳ್ಳಬೇಕಾದ ಅನಿವಾರ್ಯತೆ ನಮ್ಮ ಮುಂದಿದೆ.

(ಈ ಲೇಖನ ಸಿದ್ಧಪಡಿಸಿ ಹಗರಿಬೊಮ್ಮನಹಳ್ಳಿಯಲ್ಲಿ ನಡೆದ ಇತಿಹಾಸ ಅಕಾದೆಮಿ ಸಮ್ಮೇಳನದಲ್ಲಿ ಮಂಡಿಸಲು ಕಾರಣೀಭೂತರಾದ ಗುರುಗಳಾದ ಪ್ರೊ॥ ಲಕ್ಷ್ಮಣತೆಲಗಾವಿ ಅವರಿಗೆ, ಹಿರಿಯರಾದ ಶ್ರೀ ಗುರುಮೂರ್ತಿ ಪೆಂಡಕೂರು ಅವರಿಗೂ ಮತ್ತು ಕ್ಷೇತ್ರ ಕಾರ್ಯಕ್ಕೆ ಜೊತೆಯಾಗಿ ಬಂದು ಸಹಕರಿಸಿದ ಸ್ನೇಹಿತ ಎಂ.ಟಿ. ಪ್ರಭುಸ್ವಾಮಿ ಹಾಗೂ ಅಣ್ಣ ಹನುಮಂತಪ್ಪ ಎಂ.ಕೆ. ಅವರುಗಳನ್ನು ಈ ಸಮಯದಲ್ಲಿ ನೆನೆಯುವೆ)



ಡಾ. ಜಗದೀಶ*

# ದೇವಾಲಯ ನಿರ್ಮಾಣದಲ್ಲಿ ರೂವಾರಿಗಳ ಕಾರ್ಯ ವಿಂಗಡಣೆ

ದೇವಾಲಯಗಳ ನಿರ್ಮಾಣದಲ್ಲಿ ಅನೇಕ ರೂವಾರಿಗಳು ಕಾರ್ಯನಿರ್ವಹಿಸುತ್ತಾರೆ. ಶಾಸನಗಳನ್ನು ರಚಿಸುವ, ಕಂಡರಿಸುವ, ತಿದ್ದುವ ಮತ್ತು ನಿಲ್ಲಿಸುವ ಕಾರ್ಯದಲ್ಲಿ ಹೇಗೆ ವಿವಿಧ ವ್ಯಕ್ತಿಗಳು ಕಾರ್ಯನಿರ್ವಹಿಸುವರೋ ಹಾಗೆ ದೇವಾಲಯ ನಿರ್ಮಾಣದಲ್ಲೂ ನಿರ್ಮಾತೃ, ಸೂತ್ರಧಾರ, ರೂವಾರಿ ಮುಂತಾದವರು ಕೆಲಸ ನಿರ್ವಹಿಸುತ್ತಾರೆ. ಕೆಲವು ಬಾರಿ ದೇವಾಲಯದಲ್ಲಿ ಇಬ್ಬರು ರೂವಾರಿಗಳು ಕೆಲಸ ನಿರ್ವಹಿಸಿರುವುದು ಕಂಡುಬರುತ್ತದೆ. ದಿಕ್ಕುಗಳನ್ನು ಅನುಸರಿಸಿ ಇವರು ಕಾರ್ಯ ಹಂಚಿಕೊಂಡಿರುವುದು ಕಂಡುಬರುತ್ತದೆ.

ಇಮ್ಮಡಿ ವಿಕ್ರಮಾದಿತ್ಯನ (೭೩೩–೭೪೪) ಕಾಲದಲ್ಲಿ ಪಟ್ಟದಕಲ್ಲಿನ ವಿರೂಪಾಕ್ಷ ದೇವಾಲಯ ಮತ್ತು ಎರಡನೆಯ ಕೀರ್ತಿವರ್ಮನ (೭೪೪–೭೫೬) ಕಾಲದಲ್ಲಿ ಪಾಪನಾಥ ದೇವಾಲಯಗಳು ನಿರ್ಮಾಣವಾದವು. ವಕ್ಕಲೇರಿಯ ಶಾಸನದಂತೆ ಎರಡನೆಯ ವಿಕ್ರಮಾದಿತ್ಯನು ಕಾಂಚಿಯಲ್ಲಿನ ರಾಜಸಿಂಹೇಶ್ವರ ದೇವಾಲಯಕ್ಕೆ ಭೇಟಿ ನೀಡಿ ಅಲ್ಲಿನ ಸುಂದರವಾದ ಶಿಲ್ಪಗಳನ್ನು ನೋಡಿ ಮೆಚ್ಚಿದನು. ಕಾಂಚಿಯ ಅತ್ಯುತ್ತಮ ಶಿಲ್ಪಿಗಳಲ್ಲಿ ಕೆಲವರನ್ನು ತನ್ನ ಜೊತೆಯಲ್ಲಿ ಪಟ್ಟದಕಲ್ಲಿಗೆ ಬರುವಂತೆ ಪ್ರಚೋದಿಸಿರಬೇಕು ಎಂದು ಕಸಿನ್ಸ್ ಊಹಿಸಿದ್ದು, ಇದನ್ನು ಬೆಂಜಮಿನ್ ಹೊಲಂಡ್ ಅನುಮೋದಿಸಿದ್ದರು. ಆದರೆ ಪರ್ಸಿ ಬ್ರೌನ್ ಇದನ್ನು ಒಪ್ಪಿರಲಿಲ್ಲ. ವಿರೂಪಾಕ್ಷ ದೇವಾಲಯದಲ್ಲಿ ಸರ್ವ ಸಿದ್ಧಿ ಆಚಾರ್ಯನ ಉಲ್ಲೇಖವಿರುವ ಎರಡು ಶಾಸನಗಳಿವೆ. ಎರಡೂ ಶಾಸನ ಅವನನ್ನು ತೆಂಕಣ ದಿಶೆಯ ಸೂತ್ರಧಾರಿ ಎಂದು ಉಲ್ಲೇಖಿಸಿವೆ. ಅವನನ್ನು ದಕ್ಷಿಣ ದೇಶದಿಂದ ಬಂದ ವಾಸ್ತುಶಿಲ್ಪಿ ಎಂದು ವಿದ್ವಾಂಸರು ಹೇಳುವುದನ್ನು ತಪ್ಪು ದಾರಿಗೆಳೆಯುವ ವಿವರವೆಂದೂ – ಶಾಸನದ ಸಂದರ್ಭವನ್ನು ಗಮನಿಸಿ ಈ ಮಾತು ವಾಸ್ತವವಾಗಿ ದೇವಾಲಯದ ದಕ್ಷಿಣ ಭಾಗ ಎಂದಷ್ಟೆ ಅರ್ಥ ಎಂದು ಪ್ರೊ. ಸಿಂದಗಿ ರಾಜಶೇಖರ ಅಭಿಪ್ರಾಯಪಡುತ್ತಾರೆ (***ಕರ್ನಾಟಕ ಚರಿತ್ರೆ ಮಾಲೆ*** *೧, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೧೯೯೭, (ಸಂ.) ಬಿ. ಶೇಕ್ ಅಲಿ ಮತ್ತು ಅ. ಸುಂದರ, ಪುಟ ೫೧೩–೫೧೮)*

ಸರ್ವಸಿದ್ಧಿ ಆಚಾರ್ಯರ ಶಿಷ್ಯರು ವಿರೂಪಾಕ್ಷ ಮತ್ತು ಪಾಪನಾಥ ದೇವಾಲಯದಲ್ಲಿ ಕೆಲಸ ಮಾಡಿದ್ದಾರೆ. ವಿರೂಪಾಕ್ಷ ದೇವಾಲಯದ ಉತ್ತರ ಭಾಗದ ಕೆಲಸವನ್ನು ಅವನೀತಾಚಾರಿ ಗುಂಡ ಸರ್ವಸಿದ್ಧಿ ಆಚಾರ್ಯ ತೆಂಕಣ ಭಾಗದ ಕೆಲಸ ನಿರ್ವಹಿಸಿದ. ಅಂತೆಯೇ ಪಾಪನಾಥ ದೇವಾಲಯದ ತೆಂಕಣ ಭಾಗದ ನಿರ್ಮಾಣವನ್ನು ಸರ್ವಸಿದ್ಧಿ ಆಚಾರ್ಯನ ಶಿಷ್ಯ ಸಿಲೆ ಮುದ್ದನ ಮೊಮ್ಮಗ ರೇವಡಿ ಓವಜ್ಜ ನಿರ್ವಹಿಸಿದ. ಇದೇ ದೇವಾಲಯದಲ್ಲಿ ಶ್ರೀ ಬಲದೇವಯ್ಯ ಕೆಲವು ಶಿಲಾ ಫಲಕ ದ್ವಾರಪಾಲಕ ಹಾಗೂ ಕಥಾನಕ ಪಟ್ಟಿಕೆಗಳನ್ನು ಕೆತ್ತಿದ್ದಾನೆ.

ಬಾಗಳಿಯ ಕಲ್ಲೇಶ್ವರ ದೇವಾಲಯದ ಮೂರು ದಿಕ್ಕುಗಳ ಕೆಲಸವನ್ನು ಒಬ್ಬ ಶಿಲ್ಪಿ ಮಾಡಿದರೆ ಕೇಸವಯ್ಯ ಪಡುವಣ (ದಕ್ಷಿಣ) ದಿಕ್ಕಿನ ಕೆಲಸವನ್ನು ನಿರ್ವಹಿಸಿರುವ ಬಗ್ಗೆ ಶಾಸನ ಮಾಹಿತಿ ಇದೆ.

ಮಲ್ಲಿತಮ್ಮ ಜಾವಗಲ್ಲಿನ ಲಕ್ಷ್ಮೀನರಸಿಂಹ ದೇವಾಲಯದ ದಕ್ಷಿಣ ಭಾಗದಲ್ಲಿ ಮತ್ತು ಹಾರನಹಳ್ಳಿಯ ಲಕ್ಷ್ಮೀ ನರಸಿಂಹ ದೇವಾಲಯ ಹಾಗೂ ನುಗ್ಗೇಹಳ್ಳಿಯ ಲಕ್ಷ್ಮೀನರಸಿಂಹ ದೇವಾಲಯಗಳ ಉತ್ತರ ಭಾಗದ ಕೆಲಸ ಮಾಡಿರುವುದು ಕಂಡುಬರುತ್ತದೆ. ನುಗ್ಗೇಹಳ್ಳಿಯ ಶಾಸನ, **ರೂವಾರಿ ಮಲ್ಲಿತಮ್ಮನ ಬಾವ (?) ಬಾಗಿಯ ರೂವಾರ** ಎಂಬ ವಿವರವನ್ನು ಮಲ್ಲಿತಮ್ಮನ ಬಾವ ಬಾಗಿಯೆಂಬ ಊರಿನವನ ಕೆಲಸ (ಬಾಗಿಯೂರ ರೂವಾರಿ) ಎಂದು ತಿಳಿಯಲಾಗಿತ್ತು *(ಎಎಸ್ ಶೆಟ್ಟರ್., **ದಿ ಹೊಯ್ಸಳ ಟೆಂಪಲ್ಸ್,** ಪುಟ ೧೧೨ ಮತ್ತು ಕೆಲ್ಲೆಸನ್ ಕಾಲ್ಲಿಯರ್., **ದಿ ಹೊಯ್ಸಳ ಆರ್ಟಿಸ್ಟ್ಸ್ ಅಂಡ್ ದೇರ್ ಐಡೆಂಟಿಟೀಸ್,** ಪುಟ ೯೧).* ಶಾಸನದ ಮರು ಪರಿಶೀಲನೆಯಲ್ಲಿ ಇದು ರೂವಾರಿ **ಮಲ್ಲಿತಮ್ಮನ ಬಡಗ ಬಾಗೆಯ ರೂವಾರ** ಎಂದು ಕಂಡುಬರುತ್ತದೆ. ಇದರಂತೆ ಮತ್ತು ಅಲ್ಲಿನ ಶಿಲ್ಪಗಳನ್ನು ಗಮನಿಸಿದರೆ ಮಲ್ಲಿತಮ್ಮನು

***ಎಂ.ಹೆಚ್. ಅಗಸಿಬಾಗಲವರ, # ೬೬, ೧ನೇ ಅಡ್ಡರಸ್ತೆ, ಹೊಸಮನೆ ಬಡಾವಣೆ, ಶಿವಮೊಗ್ಗ – ೫೭೭ ೨೦೧.**

ನಿರ್ಮಾಣದಲ್ಲಿ ಕಲಿತ ಅಂಶಗಳನ್ನು ಅಳವಡಿಸಿಕೊಂಡರೇ ಇತ್ಯಾದಿ ವಿಷಯಗಳನ್ನು ಪರಿಶೀಲಿಸಬಹುದಾಗಿದೆ.

### ದೇವಾಲಯಗಳಲ್ಲಿ ರೂವಾರಿಗಳ ಕಾರ್ಯ ವಿಂಗಡಣೆ




ಬಾಗಳಿ ಕಲ್ಲೇಶ್ವರ ದೇವಾಲಯ




ನುಗ್ಗೇಹಳ್ಳಿ ಲಕ್ಷ್ಮೀನರಸಿಂಹ ದೇವಾಲಯ




ಹಾರನಹಳ್ಳಿ ಲಕ್ಷ್ಮೀನರಸಿಂಹ ದೇವಾಲಯ




ಜಾವಗಲ್ಲು ಲಕ್ಷ್ಮೀನರಸಿಂಹ ದೇವಾಲಯ

ಉತ್ತರ ಭಾಗದ ಶಿಲ್ಪಗಳನ್ನು ನಿರ್ವಹಿಸಿದರೆ ನಂದಿಯ ಬೈಚೋಜನು ದಕ್ಷಿಣ ಭಾಗದ ಶಿಲ್ಪಗಳ ಕೆಲಸ ನಿರ್ವಹಿಸಿರುವುದು ಕಂಡುಬರುತ್ತದೆ.

ಮೂಡಣ ಪಡುವಣ ಬಡಗಣ ಮತ್ತು ತೆಂಕಣ ನಾಲ್ಕು ಪ್ರಮುಖ ದಿಕ್ಕುಗಳಾಗಿದ್ದು, ಹೆಚ್ಚಿನ ಕೆಲಸಗಳು ಉತ್ತರ (ಬಡಗಣ) ಮತ್ತು ದಕ್ಷಿಣ (ತೆಂಕಣ) ದಿಕ್ಕುಗಳಾಗಿ ವಿಭಾಗಿಸಲ್ಪಟ್ಟಿದ್ದವು. ಬಾಗಳಿಯಲ್ಲಿ ಮೂರು ದಿಕ್ಕುಗಳಲ್ಲಿ ಒಬ್ಬ ಶಿಲ್ಪಿ ಉಳಿದ ಇನ್ನೊಂದು ದಿಕ್ಕಿನಲ್ಲಿ (ಪಡುವಣ) ಮತ್ತೊಬ್ಬ ಶಿಲ್ಪಿ ಕಾರ್ಯನಿರ್ವಹಿಸಿರುವುದು ಕಂಡುಬರುತ್ತದೆ.

ಒಂದೇ ದೇವಾಲಯದಲ್ಲಿ ಇಬ್ಬರು ರೂವಾರಿಗಳು ಕೆಲಸ ಹಂಚಿಕೊಂಡು, ಕಾರ್ಯ ಮಾಡುವುದು ಅವರಲ್ಲಿನ ಶ್ರಮ ವಿಭಜನೆ, ಸಾಮರಸ್ಯ, ಅಳವಡಿಸಿಕೊಂಡ ತಾಲಮಾನ, ಯಾರು ಯಾರಿಗೆ ಪೂರಕವಾಗಿದ್ದರು, ಯಾರು ಯಾರಿಂದ ಪ್ರಭಾವಿತರಾಗಿ ಯಾವ ಅಂಶ ಕಲಿತರು, ಮುಂದೆ ಸ್ವತಂತ್ರ

### ಶಾಸನೋಕ್ತ ಉಲ್ಲೇಖಗಳು ಹೀಗಿವೆ

ಬಾದಾಮಿ, ತಾಲ್ಲೂಕು ಪಟ್ಟದಕಲ್ಲು – ವಿರೂಪಾಕ್ಷ ದೇವಾಲಯ ಎದಿರು ಬಸವಣ್ಣನ ಮಂಟಪ

*ಶ್ರೀ ಸರ್ವಸಿದ್ಧಿ ಆಚಾರ್ಯನ್ ತೆಂಕಣ ದಿಶೆಯ ಸೂತ್ರದಾರ (SII XV, 488)*

**ಬಾದಾಮಿ, ತಾಲೂಕು ಪಟ್ಟದಕಲ್ಲು – ಪಾಪನಾಥ ಗುಡಿ ಎದಿರು ಗೋಡೆ**

*ಸರ್ವಸಿದ್ಧಿಯಾಚಾಯರ್ಯ ಚಟ್ಟರ ರೇವಡಿ ಓವಜ್ಜನಿಂದ ತೆಂಕಣ ದಿಶೆ ನಿರ್ಮಾಣ (IA Xp 170)*

ಪಾಪನಾಥ ಗುಡಿ ಪೂರ್ವ ಗೋಡೆ

*ಶ್ರೀ ಬಲದೇವಮಯ್ಯ ನಿರ್ಮಿತ ರೂಪ (SII XV, No. 455)*

*ಶ್ರೀ ಬಲದೇವ ಅಯ್ಯ ನಿರ್ಮ್ಮಿತ ರೂಪ* (SII XV, No. 484)

ಬಾಗಳಿ, ಹರಪನಹಳ್ಳಿ ತಾಲೂಕು – ಕಲ್ಲೇಶ್ವರ ದೇವಾಲಯ (No 174) ಮತ್ತು (No 175)

*ಸ್ವಸ್ತಿ ಶ್ರೀಮತ್‌ಷದೆ ಗಗನದಾಸಿ ಪೇರಾನೆ ಮಲ್ಲಂ*
*ನಣ್ಬರತೋಳು ಅಚಣ ಭಣ್ಬಂ*
*ಅನೆಗಳದೇವನ ಮಹಾ ಮಂತ್ರರಾಜವೇ ಕಲಿ*
*ದೇವಸ್ವಾಮಿಯೇ ದೇಗುಲವ ಮುರು ದೆಸೆಯ*
*ರೂವಾರವಂ ಮಾಡಿದ ಮಂಗಳ ಮಹಾ ಶ್ರೀ*
*ಶ್ರೀಮತ್ತ ಕಹಿನ ಕೇಸವಯ್ಯ ಪುಸಿಯಿಲ್ಲದಾತ ಲಟ್ಬನದಣ್ಣ*
*ಪಡುವಣ ದಿಸೆಯ ರೂವಾರವಮು*

ನುಗ್ಗೇಹಳ್ಳಿ, ಚನ್ನರಾಯಪಟ್ಟಣ ತಾಲೂಕು ಲಕ್ಷ್ಮೀನರಸಿಂಹ ದೇವಾಲಯ

*(ಇ.ಸಿ ೧೫., ಚನ್ನರಾಯಪಟ್ಟಣ ನಂ. ೨೮೪, ಎಂ.ಎ.ಆರ್. ೧೯೩೩., ಪುಟ ೨೬)*

*ಹ (ಹಿ?) ರಿ ಬಿರಿದ ರೂವಾರಿ ಗಿರಿವಜ್ರದಂಡವಿರಿದ ಪ್ರಸಾದಿ ಮಸ್ತಕ ಶೂಲ ರೂವರಿ (ದಿನಂ) ಇಯ ಬೈಚೋಜ ಮಾಡಿದ ರೂವಾರ ಶ್ರೀ ಶ್ರಿ ಶ್ರೀ*

ರೂವಾರಿ ಮಲ್ಲಿತಮ್ಮನ ಬಾವ (?) ಬಾಗಿಯ ರೂವಾರ

**ಪರಿಷ್ಕೃತ ಪಾಠ**

**ರೂವಾರಿ ಮಲ್ಲಿತಮ್ಮನ ಬಡಗ ಬಾಗೆಯ ರೂವಾರ**



ಕುಂ.ಬಾ. ಸದಾಶಿವಪ್ಪ*

# ಮೈಲಾರಲಿಂಗ ದೇವರ ಆರಾಧನೆ

ಕರ್ನಾಟಕದ ಅತ್ಯಂತ ಪ್ರಾಚೀನ ಪರಂಪರೆಯನ್ನು ಹೊಂದಿರುವ ಮೈಲಾರಲಿಂಗನ ಆರಾಧನೆ ಹಾಗೂ ಆಚರಣೆ ಜಾನಪದದ ಒಂದು ಪ್ರಸಿದ್ಧ ನಡವಳಿಯಾಗಿದೆ. ಇದನ್ನು ಸಾದರಪಡಿಸುವವರು ಕೂಡಿ ಕೂಡಿ ತಿರುಗಾಡುವ ಮಾಳೆ ಗೊರವರು ಹಾಗೂ ಮಹಿಳಾ (ಗೊರವಮ್ಮ) ಗೊರಮ್ಮಗಳು, ಎಲ್ಲಾ ಜಾತಿಗಳಲ್ಲೂ ಇದ್ದಾರೆ. ತಮ್ಮ ಗುರುಗಳಾದ ಒಡೆಯರಿಂದ ದೀಕ್ಷೆ ಪಡೆದಿರುವವರು. ಹೊರೆ ಹೊರುವ ವಿಧಾನದಿಂದ ಇವರು ಕರಿಯ ಕಂಬಳಿ ಕೋಟು ಧರಿಸುವರು. ತಲೆಗೆ ಮುಂಡಾಸ, ಕೈಯಲ್ಲಿ ಡಮರುಗ ಹೊಂದಿರುವ ಕೊರಳಿಗೆ ಕವಡಿ ಹಾರ, ದೋಣಿ ಬಟ್ಟಲು, ಇವರು ಭಿಕ್ಷಾಟನೆ ಮಾಡುವರು. ಅನ್ಯರಿಗೆ ಉಪದ್ರವ ಕೊಡುತಿದ್ದ ಮಲ್ಲಾಸುರ ಮತ್ತು ಮಣಿಕಾಸುರರ ಸಂಹಾರಕ್ಕಾಗಿ ಅವತರಿಸಿ ಬಂದ ಶಿವನೇ ಮೈಲಾರ ಲಿಂಗನಾಗಿರುವನೆಂದು ತಿಳಿಸುವರು. ಇವನ ಕುರಿತ ಕಥೆ, ಹಾಡುಗಳು, ಮೈಲಾರ ಜಾತ್ರೆ, ಒಡಪು ಇವೆ. ದೇವಸ್ಥಾನದ ಆಡಳಿತಗಾರರು ಬಳ್ಳಾರಿ ಜಿಲ್ಲೆಯ ಮೈಲಾರ, ಹಾವೇರಿ ಜಿಲ್ಲೆಯ ದೇವರಗುಡ್ಡ, ಆಂಧ್ರ ಪ್ರದೇಶದ ತೆಲಂಗಾಣ, ರಾಯಲ್‌ಸೀಮಾ ಪ್ರದೇಶ ಇತ್ಯಾದಿ ಕಡೆ ಇದ್ದಾರೆ.

೧) ಮೈಲಾರಲಿಂಗ ಪರಂಪರೆಯಲ್ಲಿ ಪದ ಹೇಳುವುದು ಮತ್ತು ಧಾರ್ಮಿಕ ವಿಧಿ ವಿಧಾನಗಳಿವೆ.
೨) ದಕ್ಷಿಣ ಭಾರತದಲ್ಲಿ ಈ ಬಗ್ಗೆ ಕೆಲವು ಸಾಮ್ಯಗಳು ಕಂಡುಬರುತ್ತವೆ.
೩) ಮಹಾರಾಷ್ಟ್ರದ ಖಂಡೋಬ ಮತ್ತು ಮೈಲಾರಲಿಂಗ ನಡತೆಗಳಲ್ಲಿ ಕೆಲವು ಸಾಮ್ಯತೆಗಳು ಕಂಡು ಬರುವುವು.
೪) ದೇವರಗುಡ್ಡದಲ್ಲಿ ಗುಡಿಯ ಆಡಳಿತ ಬ್ರಾಹ್ಮಣರಿಗೆ ಸೇರಿದ್ದರೆ ಮೈಲಾರದಲ್ಲಿ ಆಡಳಿತ ಒಡೆಯರಿಗೆ ಸೇರಿದೆ. ಸಿಕಂದರಾಬಾದ್ ಮಲ್ಲಣ್ಣ ಪಲ್ಲಲೇಶ್ವರಿ ಗುಡಿಯ ಆಡಳಿತ ಕುಂಬಾರರಿಗೆ ಸೇರಿದೆ. ಕುರುಬರು ಹೊರಗಿದ್ದು ಗುಡಿಯನ್ನು ರಕ್ಷಿಸಬೇಕು. ಗುಡಿಯಲ್ಲಿ ನಡೆಯುವ ವಿಧಿ ವಿಧಾನಗಳು ಕೆಲವು ಬದಲಾವಣೆಯನ್ನು ಹೊಂದಿರುತ್ತವೆ.

ಬಳ್ಳಾರಿ ಜಿಲ್ಲೆಯ ಹೂವಿನ ಹಡಗಲಿ ತಾಲೂಕಿನ ಬಳಿ ತುಂಗಭದ್ರಾ ನದಿಯು ಮೊದಲು ದಕ್ಷಿಣೋತ್ತರವಾಗಿ ಹರಿದು ಮುಂದೆ ಪೂರ್ವಾಭಿಮುಖವಾಗಿ ಹರಿಯುವುದು. ಈ ನದಿದಂಡೆಯ ಮೇಲೆ ಮೈಲಾರ ಗ್ರಾಮವಿದ್ದು ಹಡಗಲಿಯಿಂದ ೩೫ ಕಿ.ಮೀ. ಅಂತರದಲ್ಲಿದೆ. ಪ್ರಾಚೀನ ಕಾಲದಲ್ಲಿ ಈ ಗ್ರಾಮದ ಕೋಟೆಗೆ ಇದ್ದ ಆರು ಕೋಟೆಗಳ ನೆಲೆಗಳು :

೧) ಮೈಲಾರ, ೨) ಸೋಮಲಾಪುರ, ೩) ಹನುಮಾಪುರ, ೪) ಗುಂಗರಗಟ್ಟಿ, ೫) ಮಾಳಾಪುರ, ೬) ರಾಮಾಪುರ, ೭) ವಿಟಾಲಾಪುರ.



* ಲೋಕೋಪಯೋಗಿ ಇಲಾಖೆ ಕಛೇರಿ ಹಿಂಭಾಗ, ಗೋಸಾಯಿಗುಡ್ಡ, ಹೊಸಪೇಟೆ, ಹರಪನಹಳ್ಳಿ – ೫೮೩ ೧೩೧.

ಅದಕ್ಕಾಗಿ ಈ ದೇವರಿಗೆ ಏಳುಕೋಟಿ ಮೈಲಾರಲಿಂಗ ವೆಂದು ಕರೆಯುವರು ಎಂಬುವ ಹೇಳಿಕೆ ಇದೆ. ಇದು ಸರಿಯಲ್ಲ. ಏಕೆಂದರೆ ಇತರೆ ಸ್ಥಳಗಳಲ್ಲಿ ಇರುವ ಮೈಲಾರ ದೇವರಿಗೂ ಏಳು ಕೋಟಿ ಎಂದು ಕರೆಯುವರು. ಇದಕ್ಕೆ ಉಂಗ್ಲಾರ ಕ್ಷೇತ್ರವೆಂದು ಕರೆಯುವರು.

ಕುರುವತ್ತಿ–ಮೈಲಾರ ಮಧ್ಯದಲ್ಲಿರುವ ಸೋಮೇಶ್ವರ ದೇವರಗುಡಿ ಶಾಸನ, ಕ್ರಿ.ಶ. ೧೦೪೬ರಲ್ಲಿ ಸೋಮೇಶ್ವರ ದೇವರ ಸೇವೆಗೆ ಕುರುವತ್ತಿ ಪ್ರದೇಶವನ್ನು ಆಳಿದ ಕಾಳಿದಾಸ ಅರಸ ಭೂದಾನ ನೀಡಿರುವನು. ಅರಸನ ತಂದೆ ಹೆಸರು ಮಣಸಭರ್ಮದೇವಯ್ಯ. ಮಣಸಭರಮದೇವಯ್ಯನ ಮೈಲಾರ ಎಂಬುದು ಜನರ ಆಡು ಭಾಷೆಯಲ್ಲಿ ಮಣ್ಣ ಮೈಲಾರ ಎಂದು ಕರೆದಿರಲು ಸಾಧ್ಯತೆ ಇದೆ.

ಮೈಲಾರದೇವರ ಆರಾಧಾನಾ ಕ್ಷೇತ್ರಗಳು ಕರ್ನಾಟಕ ದಲ್ಲಿ ಮತ್ತು ಇತರ ಸ್ಥಳಗಳಲ್ಲಿಯ ವಿವರ ಕೆಳಕಂಡಂತಿದೆ.

೧) ಅ) ಮಂಗಸೂಳಿ ಬ) ಕಾರಿಮನಿ ಬೆಳಗಾವಿ ಜಿಲ್ಲೆ
೨) ಅ) ಬಳ್ಳಾರಿ ಜಿಲ್ಲೆಯ ಹಿರೇಮೈಲಾರ ಬ)ದಾವಣಗೆರೆ ಜಿಲ್ಲೆ–ಹರಪನಹಳ್ಳಿ ಕ) ಅರಸಿಕೆರೆ ಹತ್ತಿರ
೩) ಹಾವೇರಿ ಜಿಲ್ಲೆಯ ದೇವರಗುಡ್ಡ
೪) ಅ) ಬಾಗಲಕೋಟೆ ಜಿಲ್ಲೆಯ ಬಾದಾಮಿಯಿಂದ ೨೫ ಕಿ.ಮಿ. ಅಂತರದಲ್ಲಿ ಹಿಲ್ಲೆಪ್ಪನ ಕ್ಷೇತ್ರಮೈಲಾರಲಿಂಗವೇ ಬ) ಹಿಪ್ಪರಿಗಿ ಗ್ರಾಮ.
೫) ಅ) ಗುಲ್ಬರ್ಗ ಜಿಲ್ಲೆಯ ಯಾದಗಿರಿಯಿಂದ ೨೮ಕಿ.ಮಿ. ಮಲ್ಲೇಶ ಬ) ಹೊನ್ನಕೆರೆ ಮಲ್ಲಯ್ಯ.
೬) ಬೀದರ್ ಜಿಲ್ಲೆಯ ಭಾಲ್ಕಿ ತಾಲೂಕು ಖಾನಾಪುರದ ಮೈಲಾರ ಮಲ್ಲಣ್ಣನ ಕ್ಷೇತ್ರ.
೭) ರಾಯಚೂರು ಜಿಲ್ಲೆಯ ಕನಕಗಿರಿ ಬಳಿಯ ಮೈಲಾರ ದೇವರಗುಡಿ.
೮) ಚಿಕ್ಕಮಂಗಳೂರು ಜಿಲ್ಲೆ ಕಡೂರು ಬೆಟ್ಟದಲ್ಲಿ ಮೈಲಾರ ಅಥವಾ ಮಲ್ಲಿದೇವರು.
೯) ಶಿವಮೊಗ್ಗ ಜಿಲ್ಲೆಯ ಕುಬುಟೂರು ಗ್ರಾಮ.
೧೦) ಮಂಡ್ಯ ಜಿಲ್ಲೆಯ ನಾಗಮಂಗಲ ತಾಲೂಕಿನ ಎಳ್ಳಾಗೆರೆ.
೧೧) ಮೈಸೂರು ಜಿಲ್ಲೆಯ ಮುಡುಕುತೊರೆ ಕ್ಷೇತ್ರ.
೧೨) ಬೆಂಗಳೂರು ಜಿಲ್ಲೆಯ ಆನೇಕಲ್ ತಾಲೂಕಿನ ಎಳ್ಳಾಗರ.

**ಮಹಾರಾಷ್ಟ್ರ**

*ಉಸ್ಮಾನಬಾದ್ ಜಿಲ್ಲೆ ೧) ನಲದುರ್ಗ, ೨) ಅಣಗೂರು.*

*ಔರಂಗಾಬಾದ್ ಜಿಲ್ಲೆ : ಸಾತಾರಾ.*

*ಪುಣೆ ಜಿಲ್ಲೆ : ಬೇಜೂರಿ, ನಿಂಬಗಾಂವ್.*

*ಸಾತಾರಾ ಜಿಲ್ಲೆ : ಪಾರಿ ಬೀಡ್ ಜಿಲ್ಲೆ–ಬೀಡ್.*

*ನಾಂದೇಡ ಜಿಲ್ಲೆ : ಮಾಲೆಗಾಂವ್.*

*ಅಹಮದ್ ನಗರ ಜಿಲ್ಲೆ : ನೇವಾಸೆ.*

*ನಗರ ಜಿಲ್ಲೆ : ಶೇಖ ಜಾಡ್, ಟಾಕಳ ಬಂಡೇಶ್ವರ.*

**ಆಂಧ್ರ ರಾಜ್ಯದ** ಕರ್ನೂಲು ಜಿಲ್ಲೆಯ ಮೀನಗೊಂದಿ

**ಗೋವಾ ರಾಜ್ಯದ** ಮಾಡದೋಳ.

ಇದಕ್ಕೆ ಪೂರಕವಾಗಿ ಇರುವ ಉಲ್ಲೇಖಗಳನ್ನು ಈ ರೀತಿ ಪಟ್ಟಿ ಮಾಡಬಹುದು.

೧) ಕ್ರಿ.ಶ. ೧೧೧೩ರಲ್ಲಿ ನಯಸೇನ "ತಂತಮ್ಮನೆ ಬಡಿದು ಕೊಳ್ಳವ ಅಚ್ಚುಳ್ಳಾಯ್ಲುರು ಮೈಲಾರ ಗೊರವನಂತಿದ್ದರು", ಎಂದು ಹೇಳಿರುವನು.
೨) ಉರಿಲಿಂಗಪೆದ್ದಿಯ ವಚನದಲ್ಲಿ "ಕೊರಳ ಕವಡೆ ಕಟ್ಟಿಸಿಕೊಳ್ಳುತಿದ್ದ ಗೊರವರ" ಪ್ರಸ್ತಾಪವಿದೆ.
೩) ೧೨ನೇ ಶತಮಾನದಲ್ಲಿ ಮೈಲಾರ ಜಾತ್ರೆ ನಡೆಯುತ್ತಿದ್ದಿತು.
೪) ೧೩ನೇ ಶತಮಾನದಲ್ಲಿ ಶಿಬಾರಗಳನ್ನು ಮಾಡಿಸಿದ್ದು ದೋಣಿ ಶಾಸನದಿಂದ ತಿಳಿದು ಬರುವುದು.
೫) ನೇರಕಣಿಯ ಶಾಸನದಲ್ಲಿ ಈ ದೇವರಿಗೆ ಖಂಡೇರಾಯ ಎಂದಿದೆ.
೬) ಶಂಕರ ದಾಸಿಮಯ್ಯನ ರಗಳೆಯಲ್ಲಿ ಎಲೆಬೆಂಚಿಯವರು ದೇವರಿಗೆ ವೀಳ್ಯಯವ ಅರ್ಪಿಸುತ್ತಿದ್ದರು ಎಂದಿದೆ.
೭) ಕ್ರಿ.ಶ. ೧೦೪೦ರ ಕಲ್ಯಾಣ ಚಾಲುಕ್ಯರು ಮೈಲಾರ ದೇವರ ಆರಾಧಕರಾಗಿದ್ದರು ಎಂದಿದೆ.
೮) ಗೋವೆಯ ಕದಂಬ ದೊರೆಗಳು ತಮ್ಮನ್ನು ಸಪ್ತ ಕೋಟೇಶ್ವರ ಲಬ್ಧವರಪ್ರಸಾದರೆಂದು ಹೇಳಿಕೊಂಡಿರುವರು.
೯) ಸವದತ್ತಿಯ ರಟ್ಟದೊರೆ ಒಂದನೆಯ ಸೇನರಾಜನ ಹೆಂಡತಿಯು ಮೈಲಳಾದೇವಿ ಎಂಬ ಹೆಸರಿನವಳಾಗಿದ್ದಳು.
೧೦) ಸಿಂಧರಸರ ಕುಲದೇವತೆ ಮಾಳಚಿದೇವಿ ಆಗಿದ್ದಳು.
೧೧) ಮರಾಠಿ ಕಾವ್ಯ ಜ್ಞಾನೇಶ್ವರಿ ಮತ್ತು ಲೀಳಾಜಾರಿಗಳಲ್ಲಿ ಕಂಡು ಬರುವುದು.
೧೨) ಮೈಲಾರದೇವರ ಗುಡಿ ಬಳಿಯ ಅರಳೀಕಟ್ಟೆಯ ಮೇಲಿರುವ ವೀರಗಲ್ಲು ಶಾಸನದಲ್ಲಿ ಶ್ರೀಮುಖ

ಭಾದ್ರಪದ ಶುದ್ಧ. ೧೧ ಮಹಾದೇವಣ ಮತ್ತು ಮಯಿಲಾರನ ಮರಣದ ಉಲ್ಲೇಖವಿದೆ.

೧೩) ಈ ದೇವರ ಕುರಿತು ಜಾನಪದದಲ್ಲಿ ಮೂರು ಪುರಾಣಗಳು ಕಂಡುಬರುತ್ತವೆ.

ಹಿರೇ ಮೈಲಾರ ಅರ್ಥಾತ್ ಮಹ್ ಮೈಲಾರ ದೇವರ ಗರ್ಭಗುಡಿ ಮತ್ತು ಮಹಾದ್ವಾರಗಳನ್ನು ಚಾಲುಕ್ಯರ ತ್ರಿಭವನಮಲ್ಲದೇವನು ನಿರ್ಮಿಸಿದನೆಂದು ವಿಜಯನಗರದ ಅರಸರ ಕಾಲದಲ್ಲಿ ರಂಗಮಂಟಪ ನಿರ್ಮಾಣವಾಯಿತೆಂದು, ಶಾ.ಶ. ೧೫೨೭ (ಕ್ರಿ.ಶ. ೧೬೦೫)ರಲ್ಲಿ ತಮ್ಮಣ್ಣ ಒಡೆಯರ ಮಡದಿಯರಾದ ಫಣಿಯಮ್ಮಾ ಮತ್ತು ಜಕ್ಕಮ್ಮ ಎಂಬುವವರು ದೇವಾಲಯದ ಶಿಖರವನ್ನು ನಿರ್ಮಿಸಿದರೆಂದು, ಶಾ.ಶ. ೧೭೭೭ ಅಂದರೆ ೧೮೮೫ ರಲ್ಲಿ ಗುಡಿಯ ಪಡಶಾಲೆಯು ಶ್ರೀ ವೆಂಕಪ್ಪಯ್ಯ ಒಡೆಯರಿಂದ ನಿರ್ಮಾಣವಾಯಿತೆಂದೂ, ಶ್ರೀ ಹೆಗ್ಗಪ್ಪ ದೇವರಗುಡಿಯು ವಿಜಯನಗರದ ಅರಸರ ಮಂತ್ರಿ ಗಂಗರಾಯ ನಿರ್ಮಿಸಿದನೆಂದು ಒಡೆಯರಲ್ಲಿ ದೊರೆತ ದಾಖಲೆಗಳಿಂದ ತಿಳಿದುಬಂದಿತು.

ಮೈಲಾರದೇವರ ದೇವಾಲಯಕ್ಕೆ ಸಂಬಂಧಿಸಿದಂತೆ ಕೆಲವು ಹಿತ್ತಾಳೆಯ ಮೂರ್ತಿಗಳು ಮಂಟಪದಲ್ಲಿವೆ. ಅವುಗಳಲ್ಲಿ ಒಂದು ಮೂರ್ತಿ ಬಹು ದೊಡ್ಡದು. ಅದರ ತೂಕ ಸುಮಾರು ೫೦ ಕಿ.ಲೋ. ಇರಬೇಕು ಅದನ್ನು ಕಲ್ಯಾಣೋತ್ಸವಮೂರ್ತಿ ಎಂದು ಕರೆಯುವರು. ಪ್ರತಿ ವರ್ಷ ಆಗಿ-ಹುಣ್ಣಿಮೆಯಂದು ಮೈಲಾರ ದೇವರಿಗೂ ಗಂಗಿ ಮಾಳವ್ವ ಈರ್ವರಿಗೂ ವಿವಾಹ ನಡೆಯುವುದು. ಆಗ ಈ ಮೂರ್ತಿ ಉತ್ಸವದಲ್ಲಿ ತೊಡಗುವುದು. ಈ, ಮೂರ್ತಿಯ ಮೇಲೆ ಶಾಸನವಿರುವುದು "ಶಾ.ಶ. ೧೪೪೦ ಕ್ರಿ.ಶ.೧೫೫೧೮ರಲ್ಲಿ ವಿಜಯನಗರದ ಶ್ರೀಕೃಷ್ಣದೇವಾರಾಯನ ಅಧಿಕಾರಿಯಾಗಿದ್ದ ಶ್ರೀ ಬಸವಒಡೆಯರು ಮಾಡಿಸಿ ಬಂಗಾರ ಬಟ್ಟಲು ಸಮೇತ ಗೊರವಪ್ಪಯ್ಯ ಧರ್ಮಕರ್ತರ ಮಗ ಮಲ್ಲಪ್ಪಯ್ಯನವರಿಗೆ ಶ್ರೀ ಮೈಲಾರಲಿಂಗಸ್ವಾಮಿ ದೇವಸ್ಥಾನಕ್ಕೆ ಸಲ್ಲಿಸಿದ್ದು" ಎಂದಿದೆ.

**ಮೊದಲ ಪುರಾಣವಾದ** ಸ್ಥಳಪುರಾಣದರೀತ್ಯಾ ಮಣಿಚೂಲ ಪರ್ವತದಲ್ಲಿ ಆಶ್ರಮ ನಿರ್ಮಿಸಿಕೊಂಡು ಏಳು ಜನ ಋಷಿಗಳು ವಾಸವಾಗಿದ್ದು ತಪಸ್ಸು ಆಚರಿಸುತ್ತಿದ್ದರು. ಆಗ ಮಲ್ಲಾಸುರನೆಂಬುವ ರಾಕ್ಷಸ ಮತ್ತು ಅವನ ಪರಿವಾರ ಆಗಮಿಸಿ ಆಶ್ರಮವನ್ನು ಕೆಡಿಸಿದರು. ಋಷಿಗಳು ದೇವತೆ ಒಡೆಯನಾದ ದೇವೇಂದ್ರನಿಗೆ ಮೊರೆ ಹೋದರು. ತಮ್ಮ ಕಷ್ಟವನ್ನು ರಾಕ್ಷಸನ ಉಪಟಳವನ್ನು ವಿವರಿಸಿದರು. ಆಗ ದೇವೇಂದ್ರ ರಾಕ್ಷಸರಿಗೆ ಬ್ರಹ್ಮನಿಂದ ವರ ಸಿಕ್ಕಿದೆ. ಆದ್ದರಿಂದ ಅವನ ತಮ್ಮನಾದ ಮಣಿಕಾಸುರನನ್ನು ಕೊಲ್ಲಲು ತನ್ನಿಂದಾಗದು. ಎಂದು ಹೇಳಿದನು. ನಂತರ ಋಷಿಗಳು ವಿಷ್ಣು ದೇವನನ್ನು ಮೊರೆ ಹೋದರು. ವಿಷ್ಣುವೂ ಆಗುವುದಿಲ್ಲವೆಂದು ಹೇಳಿಕಳಿಸಿದನು. ಇವರು ಕೊನೆಗೆ ಈಶ್ವರನಲ್ಲಿಗೆ ಹೋಗಿ ತಮ್ಮ ದುಃಖವನ್ನು ತೋಡಿಕೊಂಡರು, ಶಿವನು ಮಾರ್ತಾಂಡ ಭೈರವನ ರೂಪತಾಳಿ ಮಲ್ಲಾಸುರ ಮತ್ತು ಅವನ ಸೋದರ, ಪರಿವಾರವನ್ನು ಸಂಹರಿಸಿದನು. ಮಾರ್ತಾಂಡ ಅವತಾರ ತಾಳಿದ ಸ್ಥಳದಲ್ಲಿ ಸ್ವಯಂಭುಲಿಂಗ ಸ್ಥಾಪನೆ ಆಗಿದೆ ಎಂದು ತಿಳಿಸಿದೆ.

**ಎರಡನೇ ಪುರಾಣದಲ್ಲಿ** ಮಣಿಚೂಲ ಪರ್ವತದಲ್ಲಿ ಮಣಿ-ಮಲ್ಲಾಸುರ ಎಂಬ ರಾಕ್ಷಸರು ಬ್ರಹ್ಮದೇವನಿಂದ ವರ ಪಡೆದು, ಋಷಿಗಳಿಗೆ, ಸ್ತ್ರೀಯರಿಗೆ, ಗೋವುಗಳಿಗೆ, ಶಿಶುಗಳಿಗೆ ಹಿಂಸೆ ಕೊಡುತ್ತಿದ್ದರು. ದೇವತೆಗಳು ಪರಮಾತ್ಮನಲ್ಲಿ ಮೊರೆಯಿಟ್ಟು ಬೇಡಿದರು. ಆಗ ಅಗ್ನಿ ಕೋಪದಿಂದ ಜಡೆ ಬಿಚ್ಚಿ ನೆಲಕ್ಕೆ ಅಪ್ಪಳಿಸಿದನು. ಶಕ್ತಿ ದೇವತೆ ಕಾಣಿಸಿಕೊಂಡಳು. ಶಿವನು ಮತ್ತು ಅವನ ಪರಿವಾರವೆಲ್ಲ ಸೇರಿ ಬಹುಕಾಲ ಯುದ್ಧ ಮಾಡಿದರು. ಆದರೂ ರಾಕ್ಷಸರನ್ನು ಕೊಲ್ಲುವುದು ಆಗಲಿಲ್ಲ. ಆಗ ಈಶ್ವರ ಗೊರವನ ಅವತಾರದಿಂದ ಕರಡಿ ಚರ್ಮ ತಲೆಗೆ ಸಿಕ್ಕಿಸಿ, ಡಮರುಗಗಳಿಂದ ಮಣಿಕಾಸುರ ಮಲ್ಲಾಸುರ ದೈತ್ಯರನ್ನು ಸಂಹರಿಸಿದನು. ರಾಕ್ಷಸನಿಗೆ ಮೋಕ್ಷಕ್ಕೆ ಅವಕಾಶ ಕಲ್ಪಿಸಿ, ಗುಡ್ಡಯ್ಯ ಎಂಬುವ ಹೆಸರಿನಲ್ಲಿ ಅಲ್ಲಿಯೇ ನೆಲೆಸಿದನು.

**ಮೂರನೇ ಪುರಾಣದಲ್ಲಿ** ತುಪ್ಪದ ಮಾಳವ್ವ ದೊಡ್ಡ ಮನೆತನಕ್ಕೆ ಸೇರಿದ ಸ್ತ್ರೀ. ಅವಳಿಗೆ ಚಿಕ್ಕಸಿದ್ದ, ದೊಡ್ಡಸಿದ್ದ, ಬೀರಜ್ಜ, ಕರಿಯಾಲ, ಕೆಂದಾಲ ಎಂಬುವ ಐದು ಜನ ಹಿರಿಯ ಸೋದರರಿದ್ದರು. ಒಂದು ದಿನ ಅವಳು ಸೋದರರಿಗೆ ಬುತ್ತಿ ಹೊತ್ತು ನಡೆದಿದ್ದಳು, ಅವಳಿಗೆ ಏಳು ಸಿರದ ಹಾವು ಸಿಂಬಿಯಾಗಿದ್ದಿತು. ಎದುರಿಗೆ ಮೈಲಾರಲಿಂಗ ಬಂದು ಅಡ್ಡಗಟ್ಟಿ ತನಗೆ ಒಂದು ಲಗ್ನ ಆಗಿದೆ, ಈಗ ತನ್ನ ಲಿಂಗಕ್ಕೂ ಲಗ್ನ ಆಗಬೇಕು ಎಂದು ಹೇಳಿದನು. ಅವನ ರೂಪ ಹೆದರಿಕೆ ಬರುವಂತೆ ಇದ್ದಿತು. ತಲೆಗೆ ಕರಡಿ ಚರ್ಮ, ಕೈಯಲ್ಲಿ ದೋಣಿ ತ್ರಿಶೂಲ ಢಮರುಗ ಪಿಳ್ಳಂಗೋವಿ ಮುಖಕ್ಕೆ ಭಂಡಾರ ಧರಿಸಿ ಬಹಳ ಕುಂಕುಮ ಧರಿಸಿ ಅವಳು ಬರುವ ದಾರಿಗೆ ನಿಂತನು, ತುಪ್ಪದ ಮಾಳಮ್ಮ ಹೆದರಿ ಕೂಗಿದಳು, ಅವರು ಅವಳ ಕೂಗು ಕೇಳಿ ನಾಯಿಗಳನ್ನು ಅವಳು ಕೂಗಿದ ದಿಕ್ಕಿಗೆ ಅಟ್ಟಿದರು. ನಿನ್ನನ್ನು ನಾಯಿಗಳು ಕತ್ತರಿಸಿ ಹಾಕುತ್ತವೆ. ದೂರ ಹೋಗಿ ಪೆಳೆಯಲ್ಲಿ ಅಡಗಿ ಕುಳಿತುಕೋ ಎಂದಳು ಅವು ಏನೂ ಮಾಡಲಿಲ್ಲ, ಅವಳ ಕೊರಳ ಸರ್ಪ ಇವನಲ್ಲಿಗೆ ಬಂದಿತು, ಅಣ್ಣಂದಿರು ಓಡಿ ಬಂದರು. ಅವರು ದೊಣ್ಣೆಯಿಂದ ಹೊಡೆದರು ಅವನಿಗೆ ಬಾಸುಂಡಿ ಬರುವುದರ ಬದಲು ಅವಳಿಗೆ ಬಂದವು. ಗೊರವ "ನಿಮ್ಮ ತಂಗಿ ತುಪ್ಪದ ಮಾಳಿಗೆ

ಮದುವೆಗೆಂದು ಬಂದಿರುವೆನು" ಎಂದನು. ಅಷ್ಟು ಶಕ್ತಿವಂತನಾದರೆ ಆರು ಸಾವಿರ ಕುರಿಮೇಯಿಸಿ, ಮೂರು ಸಾವಿರ ಮಂದಿಗೆ ಹಾಲು ಕುಡಿಸಬೇಕು, ಮರಿಗೆ ಸೊಪ್ಪು ತರಬೇಕು, ಹಂಜಿ ಹೊಡೆಸಿ, ನೂಲು ತೆಗೆಯಬೇಕು ಇಷ್ಟೆಲ್ಲ ಕೆಲಸ ಮಾಡಿದರೆ, ನಿನಗೆ ತಮ್ಮ ಸೋದರಿಯನ್ನು ಕೊಡುವುದಾಗಿ ಹೇಳಿದರು. ಗೊರವಯ್ಯ ಈ ಎಲ್ಲಾ ಷರತ್ತುಗಳನ್ನು ಒಪ್ಪಿ ನೆರವೇರಿಸಿದ. ತುಪ್ಪದ ಮಾಳಿಯನ್ನು ಒಂದು ಕರಿ ನಾಯಿ ಮಾಡಿಕೊಂಡು ಹೊರಟ. ಅವರು ಅವನನ್ನು ಅಟ್ಟಿಸಿಕೊಂಡು ಹೋದರು. ಅವರಿಗೆಲ್ಲ ಒಂದೊಂದು ಕವಡಿಯನ್ನು ಅವರ ಕೊರಳಿಗೆ ಕಟ್ಟಿ, ಐದು ಬಟ್ಟಲು, ಢಮರುಗ ಕೊಟ್ಟು ದೋಣಿ ಸೇವೆ ಅವರಿಂದ ಮಾಡಿಸಿದ.

ಮಣ್ ಮೈಲಾರದಲ್ಲಿ ಪ್ರತಿವರ್ಷ ಫೆಬ್ರವರಿ-ಮಾರ್ಚಿ ತಿಂಗಳಲ್ಲಿ ಜಾತ್ರೆ-ಕಾರ್ಣಿಕೋತ್ಸವದೊಂದಿಗೆ ನಡೆಯುತ್ತದೆ. ಕುರುಬ ಜನಾಂಗಕ್ಕೆ ಸೇರಿದ ಒಬ್ಬ ಗೊರುವಪ್ಪ ೧೨ ದಿನಗಳ ಕಾಲ ಬಾಳೆಹಣ್ಣು-ಹಾಲು ಸೇವಿಸಿ ಕೊನೆಯ ದಿನ ಮಣಿಚೂಲ ಪರ್ವತದ ಬಯಲು ಪ್ರದೇಶದಲ್ಲಿ ಸುಮಾರು ೧೦-೧೫ ಅಡಿಗಳಷ್ಟು ಎತ್ತರವಿರುವ ಬಿದಿರಿನಿಂದ ಮಾಡಿದ ಬಿಲ್ಲಿನ ಅರ್ಧಕ್ಕೆ ಏರುವನು. ಇತರ ಗೊರವರು ಬಿಲ್ಲನ್ನು ನೆಟ್ಟಗೆ ಹಿಡಿದು ನಿಲ್ಲುವರು. ಏರಿದ ಗೊರವಪ್ಪ ಆಕಾಶದತ್ತ ಕಣ್ಣುಹಾಯಿಸಿ ಜನರಿಗೆ "ಸದ್ದಲೇ" ಎಂದು ಎಚ್ಚರಿಸಿ ಒಂದು ಚಿಕ್ಕ ವಾಕ್ಯವನ್ನು ಹೇಳಿ ಕೆಳಗೆ ಬೀಳುವನು. ಅವನನ್ನು ನೆಲಕ್ಕೆ ಬೀಳದಂತೆ ಬಹುಜನ ಗೊರವರು ಮೇಲಕ್ಕೆ ಎತ್ತಿ ಹಿಡಿದು ಮನೆಗೆ ಸಾಗಿಸುವರು.

ಅವನು ಹೇಳಿದ ಚಿಕ್ಕ ವಾಕ್ಯಗಳು ೬೦ ಸಂವತ್ಸರಗಳಿಗೆ ೬೦ ರಂತೆ ವರ್ಷಕ್ಕೊಂದು. ಈ ವಾಕ್ಯವನ್ನು ಕೇಳಿದ ಭಕ್ತರೈತರು ಆ ವರ್ಷದ ಮಳೆ, ಬೆಳೆಗಳನ್ನು ನಿರ್ಧರಿಸುವರು. ವರ್ತಕರು ವ್ಯಾಪಾರದ ಬೆಲೆಗಳ ಏರು-ಇಳುವುಗಳನ್ನು, ರಾಜಕಾರಣಿಗಳು ತಮ್ಮ ರಾಜಕೀಯ ಸ್ಥಾನ ಬದಲಾವಣೆಗಳನ್ನು ಯೋಚಿಸುವರು.

ಈ ಉತ್ಸವ ಎಂದು ಆರಂಭಿಸಿತು ಎಂದು ಹೇಳಲು ಗಟ್ಟಿ ಆಧಾರಗಳಿಲ್ಲ. ಹಬ್ಬಕ್ಕೆ ಶಾಸನವಿದೆ. ಕಾರ್ಣಿಕದ ವಾಕ್ಯಗಳನ್ನು ಆಂಗ್ಲರ ಆಳ್ವಿಕೆಯಲ್ಲಿ ಅವರ ಸಲಹೆ ಪ್ರಕಾರ ೧೯ನೆಯ ಶತಮಾನದಿಂದ ದಾಖಲಿಸುತ್ತ ಬಂದಿರುವರು.

ಅವು ಕೆಳಗಿನಂತೆ ಇರುತ್ತವೆ :

**ಕಾರ್ಣಿಕೋತ್ಸವದ ಹೇಳಿಕೆಗಳು-೨೦ನೆಯ ಶತಮಾನದ:**

೧೯೦೦- ಮುತ್ತಿ ಮಳೆ ಸುರಿದೀತಲೇ ಬಹು ಪರಾಕ್
೧೯೦೧- ಹುಟ್ಟಿದ ಕಂದ ಕಷ್ಟಪಟ್ಟು ಸುಖಪಡಿತಲೇ ಪರಾಕ್
೧೯೦೨- ಅಂಬಲಿ ಹಳಸಿತಲೇ ಪರಾಕ್
೧೯೦೩- ಭೂಲೋಕಕ್ಕೆ ಮಬ್ಬುಗವಿತಲೇ ಪರಾಕ್
೧೯೦೪- ಸಂಪಲೇ ಬಹು ಪರಾಕ್
೧೯೦೫- ಮಳೆ ಬೆಳೆ ಸಂಪಲೇ ಪರಾಕ್
೧೯೦೬- ಆಕಾಶಕ್ಕೆ ಶಿಡ್ಲು ಬಡಿತಲೆ ಪರಾಕ್
೧೯೦೭- ಸವನಿಧಿಯಲೇ ಪರಾಕ್
೧೯೦೮- ಮರಕ್ಕೆ ಮಬ್ಬುಗವಿತಲೇ ಪರಾಕ್
೧೯೦೯- ಸಂತೃಪ್ತಿ ಆದೀತಲೆ ಪರಾಕ್
೧೯೧೦- ಕಲಕು ಮಲಕು ಆದೀತಲೇ ಬಹು ಪರಾಕ್
೧೯೧೧- ಮಳೆ ಬೆಳೆ ಸಂಪಲೇ ಪರಾಕ್
೧೯೧೨- ಶಿಶುವಿಗೆ ಕಸಿವಿಸಿ ಆದೀತಲೇ ಬಹು ಪರಾಕ್
೧೯೧೩- ಸಣ್ಣದೊಂದು ದಿನ ಬಂತಲೆ ಬಹು ಪರಾಕ್
೧೯೧೪- ಆಕಾಶಕ್ಕೆ ಶಿಡ್ಲು ಬಡಿತಲೆ ಪರಾಕ್
೧೯೧೫- ಕಲಕು ಮಲಕು ಆದೀತಲೇ ಪರಾಕ್
೧೯೧೬- ಮರಕ್ಕೆ ಮಬ್ಬುಗವಿತಲೇ ಬಹು ಪರಾಕ್
೧೯೧೭- ಸಂತೃಪ್ತಿಯಲೇ ಪರಾಕ್
೧೯೧೮- ಸಣ್ಣದೊಂದು ದಿನ ಬಂತಲೆ ಬಹು ಪರಾಕ್
೧೯೧೯- ಸವನಿಧಿಯಲೇ ಪರಾಕ್
೧೯೨೦- ಬೆಳೆ ಚೆಂದ ಮಳೆ ಮಂದಲೆ ಬಹು ಪರಾಕ್
೧೯೨೧- ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೨೨- ಸವನಿಧಿ ಆತಲೇ ಪರಾಕ್
೧೯೨೩- ಕಷ್ಟ ಬಂದು ಸುಖ ಬಂತಲೇ ಪರಾಕ್
೧೯೨೪- ಮರ್ತ್ಯಲೋಕಕ್ಕೆ ಕತ್ತಲಾತಲೆ ಪರಾಕ್
೧೯೨೫- ಮಳೆ ಬೆಳೆ ಸಂಪಲೇ ಪರಾಕ್
೧೯೨೬- ಸಣ್ಣದೊಂದು ದಿನ ಬಂತಲೆ ಪರಾಕ್
೧೯೨೭- ಸಂಪಲೆ ಬಹು ಪರಾಕ್
೧೯೨೮- ಸವನಿಧಿ ಆಧೀತಲೆ ಪರಾಕ್
೧೯೨೯- ಸಣ್ಣದೊಂದು ದಿನ ಬಂತಲೇ ಪರಾಕ್
೧೯೩೦- ಸಂತೃಪ್ತಿ ಆತಲೇ ಪರಾಕ್
೧೯೩೧- ಸಂತೃಪ್ತಿ ಪರಾಕ್
೧೯೩೨- ಕಲಕು ಮಲಕು ಪರಾಕ್
೧೯೩೩- ಸಣ್ಣದೊಂದು ದಿನ ಬಂತಲೇ ಪರಾಕ್
೧೯೩೪- ಅಂಬಲಿ ಹಳಸೀತಲೇ ಪರಾಕ್

೧೯೩೫– ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೩೬– ಕಪ್ಪತ್‌ಗುಡ್ಡಕ್ಕೆ ಕಟ್ಟಿರುಬಿ ಮುಕ್ಕರಿಸಿದವಲೇ ಪರಾಕ್
೧೯೩೭– ಕಲಕು ಮಲಕು ಆದೀತಲೆ ಪರಾಕ್
೧೯೩೮– ಸಣ್ಣದೊಂದು ದಿನ ಬಂತಲೇ ಪರಾಕ್
೧೯೩೯– ಆಕಾಶಕ್ಕೆ ಗುಂಡು ಬಿತ್ತಲೆ ಪರಾಕ್
೧೯೪೦– ಮರ್ತ್ಯಲೋಕಕ್ಕೆ ಮಬ್ಬುಗವಿತಲೇ ಪರಾಕ್
೧೯೪೧– ಅಂಬಲಿ ಹಳಸೀತಲೇ ಪರಾಕ್
೧೯೪೨– ಕಲಕು ಮಲಕು ಆಧೀತಲೆ ಪರಾಕ್
೧೯೪೩– ಸವನಿಧಿ ಸಂಪಲೇ ಪರಾಕ್
೧೯೪೪– ಬೆಳೆ ಮಂದ ಮಳೆ ಚೆಂದಲೇ ಪರಾಕ್
೧೯೪೫– ಆಕಾಶಕ್ಕೆ ಮಬ್ಬುಗವಿತಲೇ ಪರಾಕ್
೧೯೪೬– ಮುತ್ತಿನ ಮಾಲಿ ಚೂರಾಯಿತಲೆ ಪರಾಕ್
೧೯೪೭– ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೪೮– ಆಕಾಶಕ್ಕೆ ಶಿಡ್ಲು ಬಡಿತಲೇ ಪರಾಕ್
೧೯೪೯– ಮುತ್ತು ಒಡೆದು ಮಾಲಿ ಆತಲೇ ಪರಾಕ್
೧೯೫೦– ಸಣ್ಣದೊಂದು ದಿನ ದೊಡ್ಡದೊಂದು ದಿನ ಬಂತಲೇ ಪರಾಕ್
೧೯೫೧– ಮರ್ತ್ಯಲೋಕಕ್ಕೆ ಕಪ್ಪು ಕವೀತಲೆ ಪರಾಕ್
೧೯೫೨– ಹುಟ್ಟಿದ ಕಂದ ಕಷ್ಟಪಟ್ಟು ಸುಖಪಟ್ಟೀತಲೆ ಪರಾಕ್
೧೯೫೩– ಸಂತೃಪ್ತಿಯಲ್ಲೇ ಪರಾಕ್
೧೯೫೪– ಮಳೆ ಬೆಳೆ ಸಂಪಲೇ ಪರಾಕ್
೧೯೫೫– ಮುತ್ತು ಒಡೆದು ಚೂರಾಯಿತಲೆ ಪರಾಕ್
೧೯೫೬– ಮುತ್ತಿನ ರಾಶಿ ದುಂಡಗಾತಲೇ ಪರಾಕ್
೧೯೫೭– ಆಕಾಶಕ್ಕೆ ಗುಂಡು ಬಿತ್ತಲೆ ಪರಾಕ್
೧೯೫೮– ಭೂಲೋಕಕ್ಕೆ ಮಬ್ಬು ಬಿಟ್ಟಿತಲೇ ಪರಾಕ್
೧೯೫೯– ಕಲಕು ಮಲಕು ಆದೀತಲೇ ಪರಾಕ್
೧೯೬೦– ಹುಟ್ಟಿದ ಕೂಸು ಕಷ್ಟಪಟ್ಟೀತಲೆ ಪರಾಕ್
೧೯೬೧– ಸಂಕಷ್ಟ ನಿವಾರಣೆಯಲೇ ಪರಾಕ್
೧೯೬೨– ಮುತ್ತೂ ಮೂರು ಭಾಗ ಆತಲೇ ಪರಾಕ್
೧೯೬೩– ಮುತ್ತಿನ ಮಳೆ ಆದಿತಲೆ ಪರಾಕ್
೧೯೬೪– ಸರಪಳಿ ಹರಿದು ಚೂರಾತಲೆ ಪರಾಕ್
೧೯೬೫– ಸಣ್ಣದಿನ ಬಂದಿತಲೇ ಪರಾಕ್
೧೯೬೬– ಮುತ್ತಿನ ರಾಶಿ ಮಾಲಿ ಆಯಿತಲೇ ಪರಾಕ್
೧೯೬೭– ಕಷ್ಟದೊಂದು ದಿನ ಬಂದಿತಲೇ ಪರಾಕ್
೧೯೬೮– ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೬೯– ಮುತ್ತಿನ ರಾಶಿ ಒಡೆದು ಮಾಲಿ ಆತಲೆ ಪರಾಕ್
೧೯೭೦– ಸಂಕಷ್ಟ ನಿವಾರಣೆ ಆಯಿತಲೇ ಪರಾಕ್
೧೯೭೧– ಕಲು ಮಲಕಲೇ ಬಹು ಪರಾಕ್
೧೯೭೨– ಹುಟ್ಟಿದ ಕೂಸು ಕಷ್ಟಪಟ್ಟು ಸುಖಪಟ್ಟಿತಲೆ ಪರಾಕ್
೧೯೭೩– ಶಿಶುವಿಗೆ ಕಸಿವಾಲ ಆದೀತಲೇ ಪರಾಕ್
೧೯೭೪– ಆಕಾಶಕ್ಕೆ ಗುಂಡು ಬಿತ್ತಲೇ ಪರಾಕ್
೧೯೭೫– ಮರ್ತ್ಯಲೋಕಕ್ಕೆ ಮಬ್ಬುಗವಿತಲೇ ಪರಾಕ್
೧೯೭೬– ಮುತ್ತಿನ ಮಳೆ ಬಿತ್ತಲೇ ಪರಾಕ್
೧೯೭೭– ಆಕಾಶಕ್ಕೆ ಶಿಡ್ಲು ಹೊಡಿತಲೇ ಪರಾಕ್
೧೯೭೮– ಮುತ್ತಿನ ರಾಶಿ ಆತಲೇ ಪರಾಕ್
೧೯೭೯– ಆಕಾಶಕ್ಕೆ ಮಬ್ಬು ಗವಿತಲೇ ಪರಾಕ್
೧೯೮೦– ಮುತ್ತಿನ ರಾಶಿ ದುಂಡಾಗತಲೇ ಪರಾಕ್
೧೯೮೧– ಆಕಾಶಕ್ಕೆ ಶಿಡ್ಲು ಹೊಡಿತಲೇ ಪರಾಕ್
೧೯೮೨– ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೮೩– ಮುತ್ತು ಒಡೆದು ಚೂರು ಆಯಿತಲೇ ಪರಾಕ್
೧೯೮೪– ಹುಟ್ಟಿದ ಕೂಸು ಸುಖ ಪಟ್ಟೀತಲೇ ಪರಾಕ್
೧೯೮೫– ಇಬ್ಬನಿ ಕರಗಿತಲೇ ಪರಾಕ್
೧೯೮೬– ಸವನಿಧಿ ಸಂಪಲೇ ಪರಾಕ್
೧೯೮೭– ಮುತ್ತಿನ ರಾಶಿ ಮೂರು ದುಂಡಗಾತಲೇ ಪರಾಕ್
೧೯೮೮– ಕಲಕು ಮಲಕಲೇ ಪರಾಕ್
೧೯೮೯– ಮರ್ತ್ಯಕ್ಕೆ ಮಬ್ಬುಗವಿತಲೇ ಪರಾಕ್
೧೯೯೦– ಮುತ್ತು ರಾಶಿ ದುಡಗಾವಿತಲೇ ಪರಾಕ್
೧೯೯೧– ಮುತ್ತು ಒಡೆದು ಮೂರು ಭಾಗ ಆತಲೇ ಪರಾಕ್
೧೯೯೨– ಆಕಾಶಕ್ಕೆ ಗುಂಡು ಬಿತ್ತಲೆ ಪರಾಕ್
೧೯೯೩– ಹುಟ್ಟಿದ ಕೂಸಿನ ಮೇಲೆ ಬಂಗಾರದ ಗಿಣಿ ಕೂದ್ರತಲೇ ಪರಾಕ್
೧೯೯೪– ಆಕಾಶಕ್ಕೆ ಗುಂಡು ತೂಗಿತಲೇ ಪರಾಕ್
೧೯೯೫– ಆಕಾಶಕ್ಕೆ ಗುಂಡು ತೂಗಿತಲೇ ಪರಾಕ್
೧೯೯೬– ಸವನಿಧಿ ಸಂಪಲೇ ಪರಾಕ್
೧೯೯೭– ಮುತ್ತಿನ ರಾಶಿ ದುಂಡಾಗಾತಲೇ ಪರಾಕ್
೧೯೯೮– ಮುತ್ತಿನ ರಾಶಿ ಮೂರು ಭಾಗ ಆದೀತಲೇ ಪರಾಕ್

೧೯೯೯– ಮುತ್ತಿನ ರಾಶಿ ಮಲಕು ಆದೀತಲೇ ಪರಾಕ್
೨೦೦೦– ಮುತ್ತಿನ ರಾಶಿಗೆ ಗುಂಡು ಬಿತ್ತಲೇ ಪರಮಾಕ್
೨೦೦೧– ಮುತ್ತಿನ ರಾಶಿಗೆ ಮಂಜು ಮುಸುಕುತಲೇ ಪರಾಕ್
೨೦೦೨– ತುಂಬಿದ ಕೊಡದ ಮೇಲೆ ಬಂಗಾರದ ಗಿಣಿ ಕುಂತೀತಲೇ ಪರಾಕ್
೨೦೦೩– ಬೆಳ್ಳಿಯ ತೊಟ್ಟಿಲು ದುಂಡಾತಲೇ ಪರಾಕ್
೨೦೦೪– ಮುತ್ತಿನ ರಾಶಿ ಕಷ್ಟಪಟ್ಟು ಸುಖಪಟ್ಟಿತಲೇ ಪರಾಕ್
೨೦೦೫– ಮುತ್ತಿನ ಕಂದ ಮಂಜು ಆಗೀತಲೇ ಪರಾಕ್
೨೦೦೬– ತುಂಬಿದ ಕೊಡಕ್ಕೆ ಗುಂಡು ಬಿತ್ತಲೇ ಪರಾಕ್
೨೦೦೭– ಅಂಬಲಿ ಹಳಸೀತು ಕಂಬಳಿ ಬೀಸಿತಲೇ ಪರಾಕ್



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ನಯಸೇನ., (೧೧೧೩), **ಧರ್ಮಾಮೃತ**.
೨. ಉರಿಲಿಂಗ ಪೆದ್ದಿಯ ವಚನ.
೩. ೧೩ನೇ ಶತಮಾನದ ದೋಣಿ ಶಾಸನ, ಶಿಬಾರ.
೪. ಕ್ರಿ.ಶ. ೧೦೪೦ರ ಶಾಸನದಿಂದ ಕಲ್ಯಾಣ ಚಾಲುಕ್ಯರು ಮೈಲಾರ ದೇವರ ಆರಾಧಕರೆಂದು ತಿಳಿಯುತ್ತದೆ.
೫. ಅರಳೀಕಟ್ಟೆ ಶಾಸನ ಹೀರಗಲ್ಲು ಶಾಸನದಿಂದ ಮಹಾದೇವರ ಆರಾಧಕರೆಂದು ತಿಳಿಯುತ್ತದೆ.
೬ ೧೬೦೫ರ ಶಾಸನದಿಂದ ದೇವಾಲಯ ಶಿಬಿರ ನಿರ್ಮಾಣವಾಯಿತೆಂದು ತಿಳಿಯುತ್ತದೆ.
೭. ಕ್ರಿ.ಶ. ೧೫೧೮ ಉತ್ಸವಮೂರ್ತಿ–ವಿಜಯನಗರದ ಬಸವ ಒಡೆಯರು.
೮. ೧೮೦೫ರಲ್ಲಿ ಗುಡಿಯ ಪಡಸಾಲೆ ನಿರ್ಮಾಣ.
೯. ಕಾರ್ಣಿಕದ ಮಾತುಗಳು ಪಾಂಡ್ಯ ಅರಸರಲ್ಲಿದ್ದ ಚಂದ್ರಭಟ್ಟ ಕವಿ ಬರೆದ ಪುಸ್ತಕದಿಂದ ಆಯ್ಕೆ ಮಾಡಿದವು. ೬೦ ಸಂವತ್ಸರಿಗಳಿಗೆ ೬೦ ರಂತೆ.

**ಡಾ. ಜಿ.ವಿ. ಕಲ್ಲಾಪುರ***

# ಕೆಳದಿಯ ಜೈನ ಬಸದಿ

ಕರ್ನಾಟಕದ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಕೆಳದಿಪ್ರಾಂತ್ಯದ ಮೇಲೆ ಕದಂಬರಾದಿಯಾಗಿ ಅನೇಕ ರಾಜಮನೆತನಗಳು ಆಳ್ವಿಕೆ ನಡೆಸಿದ್ದರೂ ಪ್ರಾಮುಖ್ಯತೆ ಬಂದದ್ದು, ವಿಜಯನಗರದ ಪತನಾನಂತರ ಇಲ್ಲಿಂದ ಆಳಿದ ನಾಯಕರು ತಮ್ಮ ರಾಜ್ಯಕ್ಕೆ 'ಕೆಳದಿ ರಾಜ್ಯ'ವೆಂದು ನಾಮಕರಣ ಮಾಡಿದ್ದರಿಂದ. ಕೆಳದಿ ಎಂದ ಕೂಡಲೆ ಮೊದಲು ನೆನಪಿಗೆ ಬರುವುದು ಶಿವಪ್ಪನಾಯಕ, ಕೆಳದಿ ವೀರಭದ್ರ ದೇಗುಲ ಮತ್ತು ಕೆಳದಿ ನಾಯಕರಿಂದ ಕ್ರಿ.ಶ.೧೬೦೦ರಲ್ಲಿ ನಿರ್ಮಿತವಾದ ಶ್ರೀರಾಮೇಶ್ವರ ದೇವಾಲಯ. ಆದರೆ ಕೆಳದಿಯಲ್ಲಿ ಕ್ರಿ.ಶ. ೧೧ನೇ ಶತಮಾನಕ್ಕೆ ಸೇರಿದ ಶ್ರೀಪಾರ್ಶ್ವನಾಥ ತೀರ್ಥಂಕರರ ಬಸದಿ ಇರುವುದು ಯಾರಿಗೂ ತಿಳಿದಿಲ್ಲ. ಕೆಳದಿ ಜೈನ ಬಸದಿಯ ಬಗ್ಗೆ ಹೆಚ್ಚಿನ ಮಾಹಿತಿಗಳು ಎಲ್ಲೂ ಕಂಡು ಬರುವುದಿಲ್ಲ. ಎಫಿಗ್ರಾಫಿಯ ಕರ್ನಾಟಿಕಾ ಸಂಪುಟ ೮ರಲ್ಲಿ ಒಂದು ನಿಷದಿ ಶಾಸನದಲ್ಲಿ ಕೆಳದಿ ಬಸ್ತಿಯ ಆವರಣದಲ್ಲಿದೆ ಎಂಬ ಉಲ್ಲೇಖವಿದೆ[೧]. ಪ್ರಾಚೀನವಾದ ಈ ಬಸದಿಯ ಇತಿಹಾಸ ಅರಿಯಲು ಇಲ್ಲಿ ಒಂದು ಸಣ್ಣ ಪ್ರಯತ್ನ ಮಾಡಲಾಗಿದೆ.

ಈ ಪ್ರಾಂತ್ಯದಲ್ಲಿ ಜೈನರು ಸುಮಾರು ೭ನೇ ಶತಮಾನದಿಂದಲೂ ವಾಸಿಸುತ್ತಿದ್ದಾರೆ. ಈ ಪ್ರಾಂತ್ಯವನ್ನು ಆಳಿದ ಪ್ರಮುಖ ಜೈನ ಅರಸರೆಂದರೆ:- 'ಹುಂಚದ ಸಾಂತರರು, ಗೇರುಸೊಪ್ಪೆಯ ಚೆನ್ನಾಭೈರಾದೇವಿ, ಸೋಂದಾ ಅರಸರು' ಇತ್ಯಾದಿ. ಕೆಳದಿ ಜೈನ ಬಸದಿಯ ಅಧ್ಯಯನಕ್ಕೆ ಶಾಸನಾಧಾರಗಳಾಗಲಿ, ಐತಿಹಾಸಿಕ ದಾಖಲೆಗಳಾಗಲಿ, ಗ್ರಂಥಾಧಾರಗಳಾಗಲಿ ದೊರೆಯುತ್ತಿಲ್ಲ. ಇಲ್ಲಿನ ಬಸದಿಯನ್ನು ನೋಡಿಕೊಳ್ಳುತ್ತಿರುವ ಕೊಟ್ಟಿಗೆಮನೆ ನಾಗರಾಜ ಜೈನರ ಮಾತುಗಳು ಹಾಗೂ ಜೈನಬಸ್ತಿ, ಬಸ್ತಿಯಲ್ಲಿನ ಕೆಲವು ಪ್ರಾಚ್ಯವಸ್ತುಗಳನ್ನು ಪರಿಶೀಲಿಸಿ ಈ ಅಧ್ಯಯನವನ್ನು ಮಾಡಲಾಗಿದೆ.

**ವಾಸ್ತು ವಿಚಾರ :** ವಾಸ್ತುಕಲೆಯ ದೃಷ್ಟಿಯಿಂದ ಪರಿಶೀಲಿಸಿದರೆ ಜೈನ ಬಸದಿಗಳಲ್ಲಿ ಹೆಚ್ಚಿನ ಮಟ್ಟಿಗೆ ಎರಡು ವಿಧಗಳನ್ನು ಕಾಣಬಹುದಾಗಿದೆ. ೧. ಚತುರಸ್ರಾಕಾರ ೨. ಆಯತಾಕಾರ. ಗರ್ಭಗೃಹ, ಪ್ರದಕ್ಷಿಣಾಪಥ, ಅಂತರಾಳ, ಮಂಟಪ, ಮುಖ ಮಂಟಪಗಳಿಂದ ಕೂಡಿರುತ್ತವೆ. ಬಸದಿಗಳ ಮುಂಭಾಗದಲ್ಲಿ ಮಾನಸ್ತಂಭ ಅಥವಾ ಬ್ರಹ್ಮಸ್ತಂಭಗಳಿರುತ್ತವೆ. ಕೆಳದಿಯಲ್ಲಿನ ಈ ಬಸದಿಗೆ ಕಲಿಕುಂಡ ಶ್ರೀಪಾರ್ಶ್ವನಾಥ ತೀರ್ಥಂಕರ ಬಸದಿ ಎಂದು ಕರೆಯಲಾಗುತ್ತದೆ. ಇದರ ವಾಸ್ತುವಿನ್ಯಾಸ ಆಯತಾಕಾರವಾಗಿದೆ (ನಕ್ಷೆ ೧, ೨ನೋಡಿ). ಇದು ಗರ್ಭಗೃಹ, ಪ್ರದಕ್ಷಿಣಾಪಥ ಮತ್ತು ಮುಖಮಂಟಪ ಗಳಿಂದ ಕೂಡಿದ ಜಂಬಿಟ್ಟಿಗೆಯನ್ನು ಬಳಸಿ ಕಟ್ಟಲಾಗಿರುವ ಅಲಂಕರಣಗಳಿಲ್ಲದ, ಹೆಂಚಿನ ಮಾಡಿನಿಂದ ಕೂಡಿದ ಬಸದಿಯಾಗಿದೆ. ಗರ್ಭಗೃಹವನ್ನು ಮಾತ್ರ ಕಲ್ಲು ಚಪ್ಪಡಿಗಳಿಂದ ರಚಿಸಿದ್ದು ಗರ್ಭಗೃಹದ ಭುವನೇಶ್ವರಿಯಲ್ಲಿ ಕೆತ್ತನೆಗಳಿಲ್ಲ. ಈ ಬಸದಿಯುನ್ನು ಗಮನಿಸಿದಾಗ ಇದು ಒಮ್ಮೆ ಜೀರ್ಣೋದ್ಧಾರ ವಾದಂತೆ ಕಂಡು ಬರುತ್ತದೆ ಹಾಗೂ ಬೇರೆಕಡೆಯಿಂದ ಇಲ್ಲಿಗೆ ಬಸದಿಯನ್ನು ವರ್ಗಾಯಿಸಿದಂತೆ ಕಂಡುಬರುತ್ತದೆ. ಕಾರಣ ಈ ಬಸದಿಯ ಮುಂದೆ ಮಾನಸ್ತಂಬವಾಗಲಿ, ಬ್ರಹ್ಮಸ್ತಂಭವಾಗಲಿ ಇಲ್ಲ. ಇಲ್ಲಿನ ಮೂಲ ವಿಗ್ರಹಮಾತ್ರ ಅತ್ಯಂತ ಸುಂದರವಾಗಿದೆ.



*ಕೆಳದಿ ಮ್ಯೂಸಿಯಂ, ಸಾಗರ, ಶಿವಮೊಗ್ಗ ಜಿಲ್ಲೆ.

ಮೂಲ ಮೂರ್ತಿ : ಗರ್ಭಗೃಹದಲ್ಲಿ ಪ್ರತಿಷ್ಠಾಪಿಸಲ್ಪಟ್ಟಿರುವ ಕಲಿಕುಂಡ ಶ್ರೀಪಾರ್ಶ್ವನಾಥ ತೀರ್ಥಂಕರ ಮೂರ್ತಿಯು ಖಡ್ಗಾಸನ ಭಂಗಿಯಲ್ಲಿದ್ದು, ಬಲಗಡೆ ಧರಣೇಂದ್ರಯಕ್ಷ, ಎಡಗಡೆ ಪದ್ಮಾವತಿ ಯಕ್ಷಿಯನ್ನು ಕೆತ್ತಲಾಗಿದೆ. ಶಿರದ ಮೇಲ್ಭಾಗದಲ್ಲಿ ಸರ್ಪ ಹೆಡೆಯುಳ್ಳ ಸರ್ಪಲಾಂಛನ ಮೂರ್ತಿಯಾಗಿದ್ದು ಪಾಣಿಪೀಠದಲ್ಲಿ ಸರ್ಪದ ರೇಖಾಚಿತ್ರವನ್ನೂ ಬಿಡಿಸಲಾಗಿದೆ. ಇದು ಪಚ್ಚೆಕಲ್ಲಿನ ಮೂರ್ತಿಯೆಂದು ಹೇಳಲಾಗುತ್ತಿದೆ. ಈ ಶಿಲ್ಪ ೧.೫ ಅಡಿ ಎತ್ತರ ಹಾಗೂ ಒಂದುಕಾಲು ಅಡಿ ಅಗಲವಿದೆ. ಜೈನಧರ್ಮದ ಪ್ರಕಾರ, ಇದು ಅಷ್ಟಮಹಾ ಪ್ರತಿಹಾರ್ಯ ಶಿಲ್ಪವಾಗಿದೆ[೨].

**ಕಲಿಕುಂಡ** : ಪಾರ್ಶ್ವನಾಥ ತೀರ್ಥಂಕರ ಮೂರ್ತಿಗಳಲ್ಲಿ ಕಲಿಕುಂಡ, ಚಂಡೋಗ್ರ, ಸಹಸ್ರಫಣಿ ಇತ್ಯಾದಿ ಲಕ್ಷಣಗಳುಳ್ಳ ಶಿಲ್ಪಗಳು ಕಂಡುಬರುತ್ತವೆ. ಸಾಮಾನ್ಯವಾಗಿ ಒಂದು ಹೆಡೆ, ಮೂರು ಹೆಡೆ, ಐದು ಹೆಡೆಗಳ ಪಾರ್ಶ್ವನಾಥ ಮೂರ್ತಿಯನ್ನು ಮಾಡಿಸುವುದು ವಾಡಿಕೆ. ಏಳು ಹೆಡೆಯುಳ್ಳ ಪಾರ್ಶ್ವನಾಥ ಮೂರ್ತಿಯನ್ನು ವಿಶೇಷ ವ್ಯಕ್ತಿಗಳು ಅಂದರೆ ರಾಜಮಹಾರಾಜರು, ಮಂತ್ರಿಮಹೋದಯರುಗಳು ಮಾಡಿಸುತ್ತಿದ್ದರು. ಇದಕ್ಕೆ ಕಲಿಕುಂಡ ಮೂರ್ತಿಯೆಂದು ಕರೆಯಲಾಗುತ್ತದೆ. ಒಂಭತ್ತು ಹೆಡೆಗಳುಳ್ಳ ಮೂರ್ತಿಗಳನ್ನು ಮಂತ್ರವಾದಿಗಳು ಮಂತ್ರ–ತಂತ್ರಗಳ ಸಿದ್ಧಿಗಾಗಿ ಮಾಡಿಸುತ್ತಾರೆ. ೧೦೮, ೧೦೦೮ ಫಣಿಗಳುಳ್ಳ ಮೂರ್ತಿಗಳನ್ನು ವಿಶೇಷ ಸಂದರ್ಭಗಳಲ್ಲಿ ಪ್ರತಿಷ್ಠಾಪಿಸುವ ಪದ್ಧತಿಯೂ ಜೈನರಲ್ಲಿದೆ.

ವಿಶೇಷವಾಗಿ ಕಲಿಕುಂಡ ಪಾರ್ಶ್ವನಾಥ ಸ್ವಾಮಿ ತೀರ್ಥಂಕರರ ಬಸದಿಯನ್ನು ರಾಜಮಹಾರಾಜರು ತಮ್ಮ ರಾಜ್ಯರಕ್ಷಣೆಗಾಗಿ, ಯುದ್ಧ ಮೊದಲಾದ ಗಂಡಾಂತರ ಸಂದರ್ಭಗಳಲ್ಲಿ, ಕಟ್ಟಿಸಿ ವಿಧಿವತ್ತಾಗಿ ಪಂಚಕಲ್ಯಾಣ ಪೂರ್ವಕ ಪ್ರತಿಷ್ಠಾದಿಗಳನ್ನು ಮಾಡಿಸಿ ದಾನ–ದತ್ತಿಗಳನ್ನು ನೀಡುತ್ತಿದ್ದರು. ಇಂತಹ ಕ್ಷೇತ್ರಗಳು ಅತಿಶಯ ಕ್ಷೇತ್ರವಾಗಿರುತ್ತವೆ. ಕಲಿಕುಂಡ ಬಸದಿಗಳು ಅಪರೂಪದಲ್ಲಿ ಅಪರೂಪವಾಗಿರುತ್ತದೆ. ಇಂತಹ ಮೂರ್ತಿಗಳನ್ನು ಪ್ರತಿಷ್ಠೆ ಮಾಡುವಾಗ ಜೊತೆಯಲ್ಲಿ ಕಲಿಕುಂಡ ಯಂತ್ರವನ್ನೂ ರಚಿಸಿ, ಅದಕ್ಕೆ ವಿಧಿವತ್ತಾಗಿ ಪ್ರಾಣಪ್ರತಿಷ್ಠೆ ಮಾಡಿ, ಪೂಜೆ ಹವನಾದಿಗಳನ್ನು ನೆರವೇರಿಸುತ್ತಾರೆ. ಯಂತ್ರವನ್ನು ಬಂಗಾರ, ಬೆಳ್ಳಿ, ಅಥವಾ ತಾಮ್ರದ ತಗಡಿನಲ್ಲಿ ಅಷ್ಟದಳ, ಅಷ್ಟಮಂಗಳಯುಕ್ತ ಯಂತ್ರ ರಚಿಸುತ್ತಾರೆ. 'ಕಲಿ' ಎಂದರೆ ಕೆಟ್ಟದ್ದು, 'ಕುಂಡ' ಎಂದರೆ ಹೋಮ ಅಥವಾ ಯಂತ್ರ ಎಂದೂ ಆಗುತ್ತದೆ. ಕೆಟ್ಟದ್ದನ್ನು ಸುಡುವ, ಕಳೆವ ಕುಂಡ ಎಂದಾಗುತ್ತದೆ. ಈ ರೀತಿಯಲ್ಲಿ ಪ್ರತಿಷ್ಠಾಪಿತ ಮೂರ್ತಿ ಕೆಳದಿಯ ಶ್ರೀಪಾರ್ಶ್ವನಾಥ ಮೂರ್ತಿ. ಕಲಿಕುಂಡ ಪಾರ್ಶ್ವನಾಥ ಬಸದಿಯಲ್ಲಿ ಭೈರವ ಕ್ಷೇತ್ರಪಾಲರನ್ನು, ಕಾಳಿಂಗ ಸರ್ಪವನ್ನು ಸ್ಥಾಪಿಸುತ್ತಾರೆ.

ಇಲ್ಲಿ ಪ್ರತಿಷ್ಠಾಪಿತ ಮೂರ್ತಿಯಲ್ಲದೆ ಇತರೆ ಕೆಲವು ಪ್ರಾಚ್ಯವಸ್ತುಗಳನ್ನು ಕಾಣಬಹುದಾಗಿದೆ. ಪಂಚಲೋಹದ ಆದಿನಾಥ ತೀರ್ಥಂಕರರ ಉತ್ಸವಮೂರ್ತಿ, ಪಂಚಲೋಹದ ಶ್ರೀಪಾರ್ಶ್ವನಾಥ ತೀರ್ಥಂಕರರ ಪಂಚಕಲ್ಯಾಣ ಮೂರ್ತಿ, ಲೋಹದ ಚಿಕ್ಕ ಪಾರ್ಶ್ವನಾಥ ಮೂರ್ತಿ, ಲೋಹದ ಪಂಚ ಪರಮೇಷ್ಠಿಗಳ ಉಬ್ಬು ಫಲಕ, ಶಿಲೆಯ ಸಣ್ಣ ಸಣ್ಣ ಮೂರ್ತಿಗಳು, ಕ್ಷೇತ್ರಪಾಲ ಶಿಲ್ಪ, ನಿಷದಿಕಲ್ಲು ಇತ್ಯಾದಿಗಳಿವೆ.

**ಉತ್ಸವಮೂರ್ತಿ :** ಪಂಚಲೋಹದ ಆದಿನಾಥ ತೀರ್ಥಂಕರ ಉತ್ಸವಮೂರ್ತಿಯು ೧.೫ ಅಡಿ ಎತ್ತರ, ೧ ಅಡಿ ಅಗಲವಿದೆ. ಪ್ರಭಾವಳಿಯ ಸುತ್ತಲೂ ೨೩ ತೀರ್ಥಂಕರರ ಮೂರ್ತಿಗಳನ್ನು ಬಿಡಿಸಲಾಗಿದೆ, ಆದಿನಾಥ ತೀರ್ಥಂಕರರು ಸ್ಥಾನಕ ಭಂಗಿಯಲ್ಲಿದ್ದು, ಉಳಿದವನ್ನು ಧ್ಯಾನಭಂಗಿಯಲ್ಲಿ ಕುಳಿತಿರುವಂತೆ ರಚಿಸಲಾಗಿದೆ. ಇದರ ಕಾಲ ಸುಮಾರು ೯ನೇ ಶತಮಾನವೆಂದು ಹೇಳಬಹುದಾಗಿದೆ. ಕಾರಣ ನಂತರದ ದಿನಗಳಲ್ಲಿ ಉತ್ಸವಮೂರ್ತಿಗಳಲ್ಲಿ ಚಂದ್ರನಾಥ ತೀರ್ಥಂಕರರ ಸುತ್ತಲೂ ೨೩ ತೀರ್ಥಂಕರರಿರುವಂತೆ ರಚಿಸಲಾಗುತ್ತಿದೆ.



**ಪಂಚಕಲ್ಯಾಣ ಮೂರ್ತಿ :** ಪಂಚಲೋಹದ ಈ ಪದ್ಮಾಸೀನಮೂರ್ತಿಯನ್ನು ತಪೋನಿರತ ಭಂಗಿಯಲ್ಲಿ ರಚಿಸಲಾಗಿದೆ. ಕೆಳಭಾಗದ ಎಡ-ಬಲಗಳಲ್ಲಿ ಧರಣೇಂದ್ರ ಯಕ್ಷ, ಪದ್ಮಾವತಿ ಯಕ್ಷಿಯನ್ನು, ನಂತರದ ಹಂತದಲ್ಲಿ ಚಾಮರಧಾರಿಗಳನ್ನು, ನಂತರದಲ್ಲಿ ಇಂದ್ರ-ಇಂದ್ರಾಣಿಯರನ್ನು ಹಾಗೂ ಮೇಲ್ಭಾಗದಲ್ಲಿ ಅಭಿಷೇಕ ಮಾಡುತ್ತಿರುವ ಮೋಕ್ಷಲಕ್ಷ್ಮಿಯರು ಹಾಗೂ ಇಕ್ಕೆಲಗಳಲ್ಲಿ ಗಜಗಳನ್ನು ರಚಿಸಲಾಗಿದೆ. ಎಲ್ಲಕ್ಕೂ ಮೇಲೆ ಸುಂದರವಾದ ಕಳಸವನ್ನು ರಚಿಸಲಾಗಿದೆ. ಇವೆಲ್ಲದರಿಂದ ಕೂಡಿದ ಪ್ರಭಾವಳಿ ಮನಮೋಹಕವಾಗಿದೆ.



ಇದು ಪಂಚಕಲ್ಯಾಣ ಮೂರ್ತಿಯಾಗಿದ್ದು, ಮೂಲ ಮೂರ್ತಿಯ ಪ್ರತಿಷ್ಠಾಕಾಲದಲ್ಲಿ ಈ ರೀತಿಯ ಸಣ್ಣ ಸಣ್ಣ ವಿಗ್ರಹಗಳನ್ನು ಮಾಡಿಸಿ, ಅವುಗಳಿಗೆ ಪಂಚಕಲ್ಯಾಣ ವಿಧಿಗಳನ್ನು ನೆರವೇರಿಸಿ, ಭಕ್ತರಿಗೆ ಮನೆಗಳಲ್ಲಿ ಪೂಜೆಗಾಗಿ ನೀಡುವುದು ವಾಡಿಕೆ. ಈ ಮೂರ್ತಿಯ ಪ್ರಭಾವಳಿಯ ಹಿಂಭಾಗದಲ್ಲಿ ಮೂರು ಹಂತಗಳಲ್ಲಿ ಸಂಸ್ಕೃತ ಶಾಸನವಿದೆ.

**ಶಾಸನ ಪಾಠ :** 'ಸಂವತ್ಸರ ೧೨೨೮ ಆಷಾಡ ಬ ೨ ಸೋಮೇ ಗುಣಚಂದ್ರ ಭಾರ್ಯಾಯಾಪಾಹಿಣಾ ಮಾತ್ಮ ಕೆಳದೀಯೇ ಪೂರೋ ಶ್ರೀಪಾರ್ಶ್ವನಾಥ ಬಿಂಬಂ ಕಾ (ಕಾರಿತಂ) ಪ್ರತಿಷ್ಠಿತಂ ಶ್ರೀಧರ್ಮಘೋಷಸೂರಿ ಗಚ್ಛೇ ಶ್ರೀಮುನಿಭದ್ರ ಶಿಷ್ಯೈಃ ಶ್ರೀಗುಣಭದ್ರ ಸೂರಿಭಿಃ'.

ಈ ಶಾಸನವು ವಿಕ್ರಮ ಸಂವತ್ಸರ ೧೨೨೮ ರದ್ದಾಗಿದ್ದು, ಕ್ರಿ.ಶ. ೧೧೭೧ ಖರ ಸಂವತ್ಸರದ ಆಷಾಡ ಬಹುಳ ಸೋಮವಾರಕ್ಕೆ ಸರಿಯಾಗುತ್ತದೆ. ಈ ಶಾಸನದ ಪ್ರಕಾರ ಕೆಳದಿಪುರದಲ್ಲಿ ಗುಣಚಂದ್ರನ ಅತ್ತೆ ಮಾಡಿಸಿದ ಪಾರ್ಶ್ವನಾಥ ತೀರ್ಥಂಕರರಮೂರ್ತಿಯನ್ನು ಅದನ್ನು ಶ್ರೀಧರ್ಮಘೋಷ ಸೂರಿ ಗಚ್ಛದ ಶ್ರೀಮುನಿಭದ್ರ ಸೂರಿಗಳು ಶಿಷ್ಯರಾದ ಶ್ರೀಗುಣಭದ್ರಸೂರಿಳು ಪ್ರತಿಷ್ಠಾಪಿಸಿರುವುದು ತಿಳಿದುಬರುತ್ತದೆ. ಇದೊಂದು ಅಪ್ರಕಟಿತ ಶಾಸನವಾಗಿದ್ದು ನನ್ನ ಸಂಶೋಧನೆಯಲ್ಲಿ ಲಭಿಸಿದೆ. ಇದರ ಪ್ರಕಾರ ಕೆಳದಿ ಜೈನ ಬಸದಿಯ ಕಾಲ ಕ್ರಿ.ಶ. ೧೧೭೧ ಆಗುತ್ತದೆ.



ಸುಮಾರು ಒಂಭತ್ತನೆಯ ಶತಮಾನದಲ್ಲಿ ಉತ್ತರಭಾರತದಲ್ಲಿ ಭೀಕರ ಬರಗಾಲ ಬಂದಾಗ ಅಲ್ಲಿಂದ ದಕ್ಷಿಣಭಾರತಕ್ಕೆ ವಲಸೆ ಬಂದ ಜೈನಮುನಿಗಳು, ದೇಶಕ್ಕೆ ಒದಗಿರುವ ಸಂಕಷ್ಟ ದೂರವಾಗಲೆಂದು ಅಲ್ಲಲ್ಲೇ ಶ್ರೀಪಾರ್ಶ್ವನಾಥ ತೀರ್ಥಂಕರರ ಬಸದಿಗಳನ್ನು ಕಟ್ಟಿಸುತ್ತಾ ಬಂದರೆಂದು ಹೇಳಲಾಗುತ್ತದೆ. ಆ ಸಂದರ್ಭದಲ್ಲಿ

ಕೆಳದಿಯಲ್ಲಿಯೂ ಒಂದು ಬಸದಿಯನ್ನು ಕಟ್ಟಿಸಿರುವಂತೆ ಕಂಡುಬರುತ್ತದೆ. ಕಾರಣ ಇಲ್ಲಿನ ಆದಿನಾಥ ತೀರ್ಥಂಕರರ ಉತ್ತಮಮೂರ್ತಿಯು ೯ನೇ ಶತಮಾನಕ್ಕೆ ಸೇರಿದ್ದು ಇದನ್ನು ಪುಷ್ಟೀಕರಿಸುತ್ತದೆ. ಈ ವಾದ ನಿಜವಾದರೆ ಕೆಳದಿ ಬಸದಿಯ ಕಾಲ ಕ್ರಿ.ಶ.೯ನೇ ಶತಮಾನವಾಗುತ್ತದೆ.

ಈಗ ದೊರೆತಿರುವ ಪಂಚಕಲ್ಯಾಣ ಮೂರ್ತಿಯಲ್ಲಿನ ಶಾಸನದ ಪ್ರಕಾರ ಇದರ ಕಾಲ ಕ್ರಿ.ಶ.೧೧೭೧, ಬಹುಶಃ ಆ ಸಮಯದಲ್ಲಿ ಬಸದಿಯ ಜೀರ್ಣೋದ್ಧಾರ ಮಾಡಿ ಪಂಚಕಲ್ಯಾಣ ವಿಧಿಗಳನ್ನು ಮಾಡಿಸಿರಬಹುದಾದ ಸಾಧ್ಯತೆಗಳನ್ನು ಅಲ್ಲಗಳೆಯುವಂತಿಲ್ಲ. ಕಾರಣ ಬಸದಿಯನ್ನು ಪರಿಶೀಲಿಸಿದಾಗ ಇದು ಜೀರ್ಣೋದ್ಧಾರಗೊಂಡ ಲಕ್ಷಣಗಳು ಕಂಡು ಬರುತ್ತದೆ. ಆದರೆ ಶಾಸನದಲ್ಲಿ 'ಪಾರ್ಶ್ವನಾಥಬಿಂಬಂ ಕಾರಿತಂ ಪ್ರತಿಷ್ಠಿತಂ' ಎಂದಿರುವುದರಿಂದ ಸದ್ಯಕ್ಕೆ ಬೇರೆ ಶಾಸನಗಳು ದೊರಕುವವರೆಗೂ ಇದರ ಕಾಲವನ್ನು ಕ್ರಿ.ಶ. ೧೧೭೧ ಎಂದು ಹೇಳಬಹುದಾಗಿದೆ. ಅಲ್ಲದೆ ಪದ್ಮಾಸೀನ ಪಾರ್ಶ್ವನಾಥ, ಆದಿನಾಥ ತೀರ್ಥಂಕರರ ಪಂಚಲೋಹದ ಮೂರ್ತಿಗಳೂ ಇಲ್ಲಿವೆ.

**ಶಾಸನೋಕ್ತ ಜ್ವಾಲಾಮಾಲಿನಿ ಮೂರ್ತಿ :** ಪಂಚಲೋಹದ ಜ್ವಾಲಾಮಾಲಿನಿಯ ಸುಂದರವಾದ ಮೂರ್ತಿಯಿದ್ದು, ಅದರ ಪ್ರಭಾವಳಿಯ ಹಿಂಭಾಗದಲ್ಲಿರುವ ಸಂಸ್ಕೃತ ಶಾಸನವಿನ್ನೂ ಪ್ರಕಟವಾಗಿಲ್ಲ.





**ಶಾಸನಪಾಠ :** ಸಂ. ೧೮೩೬ ವರ್ಷೇ ವೈಶಾಖ ತದಿ ೧೧ ಸೋಮೇ ಪುಂಣ್ಯಂಶ್ರೀರತ್ನಕೀರ್ತಿ ಪ್ರಣಮಾಮಿ.

ಈ ಶಾಸನವು ಕ್ರಿ.ಶ.೧೭೭೯ಕ್ಕೆ ಸರಿಹೊಂದುತ್ತಿದ್ದು, ರತ್ನಕೀರ್ತಿ ಎಂಬುವವರು ಮಾಡಿಸಿಕೊಟ್ಟಿರುವಂತೆ ಕಂಡುಬರುತ್ತದೆ.

**ಗಂಟೆ :**ದಾನಿಗಳು ನೀಡಿದ ಗಂಟೆಯೊಂದರ ಮೇಲೆ 'ಶ್ರೀ ಪದ್ಮರಾಜಪ್ಪ ಸೋಮರಾಯಪ್ಪ ಪೂಜಾರಿಯವರು ಕೆಳದಿ ಬಸ್ತಿದೇವಸ್ಥಾನಕ್ಕೆ ಕೊಟ್ಟದ್ದು ೬-೪-೧೯೫೩ ಎಂದು ಬರಹವಿದೆ.

**ಪಂಚಪರಮೇಷ್ಠಿ ಫಲಕ :** ತಾಮ್ರದ ಪಂಚಪರಮೇಷ್ಠಿ ಉಬ್ಬು ಫಲಕವಿದ್ದು, ಜೈನಧರ್ಮದಲ್ಲಿ ಪ್ರತಿನಿತ್ಯ ಪಂಚಪರಮೇಷ್ಠಿಗಳ ಪೂಜೆ ಮಾಡುತ್ತಾರೆ. ಅವರಲ್ಲಿ ಅರಿಹಂತರು, ಸಿದ್ಧರು, ಆಚಾರ್ಯರು, ಉಪಾಧ್ಯಾಯರು, ಸರ್ವಸಾಧುಗಳಿದ್ದು, ಪ್ರಭಾವಳಿಯಲ್ಲಿ ಅಶೋಕ ವೃಕ್ಷವನ್ನು ಬಿಡಿಸಲಾಗಿದೆ. ಮೂರು ಹಂತಗಳಲ್ಲಿ ರಚಿಸಿರುವ ಕೀರೀಟವು ಸಮ್ಯಕ್ ದರ್ಶನ, ಸಮ್ಯಕ್ ಜ್ಞಾನ, ಸಮ್ಯಕ್ ಚಾರಿತ್ರಗಳನ್ನು ಪ್ರತಿಪಾದಿಸುತ್ತವೆ.



**ಕ್ಷೇತ್ರಪಾಲ ಶಿಲ್ಪಗಳು :** ಬ್ರಹ್ಮರು ಎಂದು ಕರೆಯಲ್ಪಡುವ ಕ್ಷೇತ್ರಪಾಲಕರನ್ನು ದೇವಾಲಯದ ರಕ್ಷಣೆಗಾಗಿ ಗ್ರಾಮದ ನಾಲ್ಕು ದಿಕ್ಕುಗಳಲ್ಲಿ ಪ್ರತಿಷ್ಠಾಪಿಸುವುದು ಜೈನಧರ್ಮದ ಪದ್ಧತಿಯಾಗಿದೆ. ಕೆಳದಿಯ ಸುತ್ತಲೂ ನಾಲ್ಕು ದಿಕ್ಕಿನಲ್ಲಿ ಪ್ರತಿಷ್ಠಾಪಿಸಲಾಗಿದ್ದ ಈ ಮೂರ್ತಿಗಳು ಕಣ್ಮರೆಯಾಗಿದ್ದವು. ಇತ್ತೀಚೆಗೆ ಕುಶಾಗ್ರ ನಂದಿ ಮುನಿಗಳ ಅಪ್ಪಣೆ ಮೇರೆಗೆ ಸರ್ವೇಕ್ಷಣ ನಡೆಸಿದಾಗ ಉತ್ತರಕ್ಕೆ ಸುಮಾರು ೧/೨ ಕಿ.ಮೀ. ದೂರದಲ್ಲಿ ಒಂದು ಶಿಲ್ಪ ದೊರೆತಿದೆ. ಕೆಳದಿ ಹಿರೆಕೆರೆ ಏರಿಯಲ್ಲಿದ್ದ ಶಿಲ್ಪವನ್ನು ಕೆಳದಿ ವಸ್ತುಸಂಗ್ರಹಾಲಯದಲ್ಲಿ ಸಂರಕ್ಷಿಸಲಾಗಿದೆ. ಮೂರನೆಯದು ಈಳಿ ಗ್ರಾಮದಲ್ಲಿದ್ದುದು ತಿಳಿದು ಬರುತ್ತದೆ.

ಆದರೆ ಶಿಲ್ಪ ಸಿಕ್ಕಿಲ್ಲ. ಅದರಂತೆ ನಾಲ್ಕನೆಯದು ಗ್ರಾಮದಲ್ಲಿದ್ದು, ಅದನ್ನು ಗ್ರಾಮಸ್ಥರು ಜೈನಭೂತಪ್ಪ ಎಂದು ಈಗಲೂ ಪ್ರತಿವರ್ಷ ದೀಪಾವಳಿಯಲ್ಲಿ ಪೂಜಿಸುತ್ತಾರೆ. ಬ್ರಹ್ಮನ ಲಕ್ಷಣ – ಅಶ್ವಾರೂಢನಾಗಿ ಒಂದು ಕೈಯಲ್ಲಿ ದಂಡಾಯುಧವನ್ನು ಹಿಡಿದು ಕ್ಷೇತ್ರ ರಕ್ಷಣೆಗಾಗಿ ನಿಂತಿರುವ ಭಂಗಿ, ಕುದುರೆಯ ಕಾಲಿನಲ್ಲಿ ರುಂಡವನ್ನು ಮೆಟ್ಟಿಕೊಂಡಿರುತ್ತದೆ.



**ನಿಷದಿ ಕಲ್ಲು :** ಸನ್ಯಸನ ವಿಧಿಯಿಂದ ಮಡಿದವರ ಸ್ಮಾರಕವೇ ನಿಷದಿಕಲ್ಲು. ಬದುಕಿನಲ್ಲಿ ನಿರಂತರವಾಗಿ ಧರ್ಮವನ್ನು ಆಚರಿಸಿ, ಸಾಯುವಾಗಲೂ ಇದೇ ಭಾವನೆಯಲ್ಲಿ ಸತ್ತರೆ ಮೋಕ್ಷ ಹೊಂದುತ್ತಾರೆಂದು ಜೈನಧರ್ಮದಲ್ಲಿ ಹೇಳಿದೆ. ಶ್ರಾವಕನು ತನ್ನ ಅಂತಿಮ ಕಾಲದಲ್ಲಿ ಈ ಮತದ ಶ್ರೇಷ್ಠ ವ್ರತವಾದ ಸಲ್ಲೇಖನ ವ್ರತವನ್ನು ಆಚರಿಸಿ, ಜಿನಧ್ಯಾನದಲ್ಲಿ ನಿರತನಾಗಿ ದೇಹತ್ಯಾಗ ಮಾಡಿ ಮೋಕ್ಷವನ್ನು ಗಳಿಸುತ್ತಾನೆ. ಹೀಗೆ ಮೋಕ್ಷವನ್ನು ಸಾಧಿಸಿದ ಶ್ರೇಷ್ಠ ಸಾಧಕರ ಸ್ಮಾರಕಗಳನ್ನು ಜಿನಭಕ್ತರು ಪೂಜಿಸುತ್ತಾರೆ. ಇಂತಹ ಸ್ಮಾರಕ ಶಿಲೆಯೇ ಕೆಳದಿ ಜೈನ ಬಸದಿಯಲ್ಲಿರುವ ನಿಷದಿ ಕಲ್ಲು. ಇದರಿಂದ ಹಿಂದೆ ಈ ಬಸದಿಯಲ್ಲಿ ಶ್ರಾವಕರು ನೆಲಸಿದ್ದರೆಂಬುದು ತಿಳಿದುಬರುತ್ತದೆ.

**ಶಾಸನ ಪಾಠ**

೧ ಶ್ರೀವೀತರಾಗಾಯನಮಃ ಸ್ವಸ್ತಿಸಮಸ್ತ .......................

೨ ಶ್ರೀಮಹಾಶ್ರಯ ಕೆಳದಿಯ ಕಾಮಗೊಂಡರು................

೩ ......................................................................

೪ .......................................ಸ್ವರ್ಗಸ್ತನಾದನು.

ಶಾಸನದ ಬಹುಭಾಗ ಸವೆದು ಹೋಗಿರುವುದರಿಂದ ವಿವರಗಳು ಅಸ್ಪಷ್ಟವಾಗಿದ್ದು, ಲಿಪಿಯ ದೃಷ್ಟಿಯಿಂದ ಸುಮಾರು ೧೧–೧೨ನೇ ಶತಮಾನದ್ದೆಂದು ಊಹಿಸಬಹುದಾಗಿದೆ.

ಕೆಳದಿ ಜೈನಬಸದಿಯಲ್ಲಿ ದೊರೆತಿರುವ ಪ್ರಾಚೀನ ವಸ್ತುಗಳ ಆಧಾರದಿಂದ ಇದು ಕ್ರಿ.ಶ. ೧೧೭೧ ರಿಂದ ಇಂದಿನವರೆಗೂ ಅನೂಚಾನವಾಗಿ ಪೂಜಾದಿ ಕೈಂಕರ್ಯ ಗಳಿಂದ ಸಾಗಿ ಬಂದಿದೆ ಎಂದು ತರ್ಕಿಸಬಹುದಾಗಿದೆ.

**ಉಪಸಂಹಾರ :** ಕೆಳದಿ ಜೈನ ಬಸದಿಯ ದಾಖಲೆಗಳನ್ನು ಪರಿಶೀಲಿಸಿ ದಾಗ ಕಂಡು ಬರುವ ಪ್ರಮುಖ ಅಂಶವೆಂದರೆ, ಹಿಂದೆ ಕೆಳದಿಯಲ್ಲಿ ಜೈನ ಧರ್ಮೀಯರು ಬಹು ಸಂಖ್ಯೆಯಲ್ಲಿದ್ದರು ಎಂಬುದು. ಈ ಮಾತಿಗೆ ಪೂರಕವಾಗಿ ಕೆಳದಿಯ ಸುತ್ತಮುತ್ತ ಬಸ್ತಿ ಕೆರೆ, ಬಸ್ತಿ ಭಾವಿ, ಬಸ್ತಿ ಗದ್ದೆ, ಬಸ್ತಿ ಹೊಂಡ, ಬಸ್ತಿ ದಿನ್ನೆ, ಬಸ್ತಿ ಕಾನು, ಬಸ್ತಿ ನಾಗರ, ಬಸ್ತಿ ಬನ, ಬಸ್ತಿ ವಡ್ಡೆ, ಬಸ್ತಿ ಗುಡ್ಡ, ಬಸ್ತಿ ಬೈಲು, ಜೈನ ಭೂತಪ್ಪ ಈ ರೀತಿಯಾಗಿ ಗುರುತಿಸ ಬಹುದಾದ ಅನೇಕ ಸ್ಥಳಗಳು ಕಂಡುಬರುತ್ತಿದೆ. ಇಲ್ಲಿನ ಜೈನರು ರಾಜಕೀಯ ಕಾರಣದಿಂದಲೋ, ಬರಗಾಲಕ್ಕೆ ಹೆದರಿಯೋ, ರೋಗದ ಭಯದಿಂದಲೋ, ಊರು ಸುಟ್ಟಿದ್ದರಿಂದಲೋ ಈ ಪ್ರದೇಶವನ್ನು ಬಿಟ್ಟು ಬೇರೆ ಕಡೆಗೆ ಹೋಗಿರಬಹುದು.

ಮೂಲತಃ ಈ ಭಾಗದ ಜೈನರು ಹಿಂದಿನಿಂದಲೂ ಗೌಡ. ಗೊಂಡ ಎಂಬ ಉಪನಾಮವನ್ನು ಹೊಂದಿದ್ದ ರೆಂಬುದು ಕೆಳದಿ ಬಸದಿಯಲ್ಲಿನ ನಿಶದಿಯಿಂದ ತಿಳಿದು ಬರುತ್ತದೆ. ಇಲ್ಲಿಂದ ವಲಸೆ ಹೋದ ಜೈನರು ಉತ್ತರ ಕರ್ನಾಟಕ ಭಾಗದಲ್ಲಿ ವಾಸಿಸುತ್ತಿದ್ದಾರೆಂದು ತಿಳಿದು ಬರುತ್ತದೆ. ಬೆಳಗಾವಿಯ ಸುತ್ತ ಮುತ್ತ ಇರುವ ಸಗ್ರಿ ಮನೆತನದ ಜೈನರು ಇಲ್ಲಿಯವರೆಗೇ ಆಗಿರಬಹುದು. ಕಾರಣ ಅವರಿಗೆ ಸಗರಿ ಮನೆತನದವರೆಂದು ಕರೆಯುತ್ತಾರೆ. ಸಾಗರ – ಸಗರಿ – ಸಗ್ರಿ ಎಂದಾಗಿರಬಹುದು. ಈ ಬಗ್ಗೆ ಹೆಚ್ಚಿನ ಅಧ್ಯಯನದ ಅವಶ್ಯಕತೆಯಿದೆ. ಕಾರಣ ಇವರಲ್ಲಿ ಕೆಲವರು ತಮ್ಮ ಮೂಲ ಸ್ಥಳದ ದೇವರನ್ನು ಅರಸಿಕೊಂಡು ಕೆಳದಿಗೆ ಬಂದು ಹೋಗುತ್ತಿದ್ದಾರೆ.

ಕೆಳದಿಯಲ್ಲೇ ಬಹುಕಾಲದಿಂದಲೂ ವಾಸ ಮಾಡಿಕೊಂಡು ಬಂದಿರುವ ಜೈನ ಕುಟುಂಬವಿದ್ದು, ಅವರಿಗೆ 'ಕೊಟ್ಟಿಗೆ ಮನೆಯವರೆಂದು' ಕರೆಯುತ್ತಾರೆ. ಇವರ ಉದ್ಯೋಗ ಕೃಷಿ. ಇವರು ಕೆಳದಿ ಜೈನ ಬಸದಿಯ ಪೂಜಾದಿಗಳನ್ನು ಮಾಡಿಕೊಂಡು, ಬಸದಿಯನ್ನು ಶತಮಾನ ಗಳಿಂದಲೂ ಜತನದಿಂದ ಕಾಯ್ದುಕೊಂಡು ಬರುತ್ತಿದ್ದಾರೆ. ಆ ಕುಟುಂಬದ ದಿವಂಗತ ಶ್ರೀಬ್ರಹ್ಮಸೂರಯ್ಯನವರ ಮಕ್ಕಳಾದ ಶ್ರೀಯುತ ನಾಗರಾಜ ಜೈನ್, ಅವರ ಸಹಕಾರದಿಂದ ಈ





ಲೇಖನವನ್ನು ರಚಿಸಲು ಅವಕಾಶವಾಗಿದ್ದು, ಅವರ ಕುಟುಂಬವರ್ಗದವರಿಗೆ ನನ್ನ ಕೃತಜ್ಞತೆಗಳು.

ಕೆಳದಿ ಜೈನಬಸದಿಯ ಜೀರ್ಣೋದ್ಧಾರ ಕಾರ್ಯವನ್ನು ಧರ್ಮಸ್ಥಳದ ಧರ್ಮೋತ್ಥಾನ ಟ್ರಸ್ಟ್ ಕೈಗೆತ್ತಿಕೊಂಡಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. **ಎಪಿಗ್ರಾಫಿಯಾ ಕರ್ನಾಟಿಕಾ,** ಸಂ. VIII, ಸಾಗರ ೪೦, ಪು. ೨೬೮.

೨. ಅಶೋಕವೃಕ್ಷ ಸುರ ಪುಷ್ಪವೃಷ್ಟಿ ದಿವ್ಯ ಧ್ವನೀಶ್ಯಾಮರ ಬಾಸನಂಚ।
ಭೂಮಂಡಲಂ ದುಂದುಭಿರಾತಪತ್ರ ಸತ ಪ್ರಾತಿ ಹಾರ್ಯಾಣ ಜಿನೇಶರಾಣಾಂ॥

೩. **ಪಂಚಪರಮೇಷ್ಟಿಗಳ ಸ್ತೋತ್ರ :**
ನಮೋ ಅರಿಹಂತಾಣಾಂ ನಮೋಸಿದ್ಧಾಣಾಂ ನಮೋ ಅಯ್ಯಾರಿಯಾಣಾಂ
ನಮೋ ಉೂರ್ಜಿಹಾಯಾಣಾಂ ನಮೋ ಲೋ ಸಬ್ಬ ಸಾಹೂಂಣಾಂ ॥

೪. **ಎಪಿಗ್ರಾಫಿಯಾ ಕರ್ನಾಟಿಕಾ,** ಸಂ. VIII, ಸಾಗರ ೪೦, ಪು. ೨೬೮.

## ಪರಾಮರ್ಶನ ಗ್ರಂಥಗಳು


೧. **ಎಪಿಗ್ರಾಫಿಯಾ ಕರ್ನಾಟಿಕಾ** ಸಂಪುಟಗಳು.

೨. **ಕರ್ನಾಟಕದ ಕೈಪಿಯತ್ತುಗಳು** – (ಸಂ) ಎಂ.ಎಂ. ಕಲಬುರ್ಗಿ, ಕನ್ನಡ ವಿ.ವಿ. ಹಂಪಿ.

೩. **ಶ್ರೀ ಪಾರ್ಶ್ವನಾಥ ಚರಿತೆ** – ಪ. ರಾಮಚಂದ್ರ ಶಾಸ್ತ್ರಿ, ಶ್ರೀ ಸಿದ್ಧಾಂತಕೀರ್ತಿ ಗ್ರಂಥಮಾಲೆ,
ಶ್ರೀ ಜೈನ ಮಠ, ಹೊಂಬುಜ ೧೯೭೭.

೪. **ಗೇರುಸೊಪ್ಪೆ (ನಗರ ಬಸ್ತಿಕೇರಿ) ವಾಸ್ತು ಮತ್ತು ಮೂರ್ತಿಶಿಲ್ಪ** – ಕೆ.ಜಿ. ಭಟ್ಸೂರಿ,
ಕರ್ನಾಟಕ ಪ್ರಾಚ್ಯವಸ್ತು ಮತ್ತು ವಸ್ತುಸಂಗ್ರಹಾಲಯಗಳ ನಿರ್ದೇಶನಾಲಯ, ಮೈಸೂರು ೧೯೯೬.

೫. **ಕರ್ನಾಟಕದಲ್ಲಿ ಜೈನಧರ್ಮ–ಒಂದು ಅಧ್ಯಯನ** (ಸಂ.) ಡಾ. ಟಿ.ಜಿ. ಕಲಘಟಗಿ, ಜೈನಶಾಸ್ತ್ರ ಮತ್ತು
ಪ್ರಾಕೃತ ವಿಭಾಗ, ಮೈಸೂರು ವಿ.ವಿ. ಮೈಸೂರು ೧೯೭೬.

೬. ಸೂರ್ಯನಾಥ ಯು. ಕಾಮತ್, **ಕರ್ನಾಟಕ ಗೆಜೆಟಿಯರ್, ಶಿವಮೊಗ್ಗ ಜಿಲ್ಲೆ,** ಬೆಂಗಳೂರು.

ಡಾ. ಜಯಮ್ಮ ಬಿ.*

# ಧಾರವಾಡ ಜಿಲ್ಲೆಯ ಗಜಲಕ್ಷ್ಮಿ ಶಿಲ್ಪಗಳು

ಗಜಲಕ್ಷ್ಮಿ ಶಿಲ್ಪಗಳನ್ನು ನಾವು ಶಾತವಾಹನರ ಕಾಲದಿಂದ ಕಾಣುತ್ತೇವೆ. ಅಲ್ಲಿಂದ ಮುಂದುವರೆದ ಈ ಶಿಲ್ಪಗಳು ಬದಾಮಿ ಚಾಲುಕ್ಯ, ರಾಷ್ಟ್ರಕೂಟರ ಕಾಲದಲ್ಲಿ ವಿರಳವಾಗಿದ್ದು. ನಂತರ ಬಂದ ಕಲ್ಯಾಣ ಚಾಲುಕ್ಯ, ಕಲಚೂರಿ, ಯಾದವ, ಹೊಯ್ಸಳ ಹಾಗೂ ವಿಜಯನಗರ ಅರಸರ ಕಾಲದಲ್ಲಿ ಸಾಮಾನ್ಯವಾಗಿ ಕಾಣಲಾರಂಭಿಸಿದವು. ಇವರೆಲ್ಲರ ಕಾಲದಲ್ಲಿ ಅವು ಹೆಚ್ಚಾಗಿ ದೇವಾಲಯಗಳ ಲಲಾಟ ಪಟ್ಟಿಕೆಯಲ್ಲಿ ರಾರಾಜಿಸುತ್ತವೆ. ದೇವಾಲಯಗಳಲ್ಲಿ ಮಂಗಳ ಫಲಕಗಳಂತೆ ಇವುಗಳನ್ನು ನೋಡಲಾಗುತ್ತದೆ. ಯಾವುದೇ ಧರ್ಮಕ್ಕೆ ಸೀಮಿತವಾಗಿರದೆ ಎಲ್ಲಾ ಧರ್ಮಗಳ ದೇವಾಲಯಗಳಲ್ಲೂ ಈ ಶಿಲ್ಪಗಳನ್ನು ಬಳಸಿರುವುದನ್ನು ನಾವು ಕಾಣುತ್ತೇವೆ.

ಈ ಗಜಲಕ್ಷ್ಮಿ ಶಿಲ್ಪಗಳು ಪ್ರಸ್ತುತ ಧಾರವಾಡ ಜಿಲ್ಲೆಯಲ್ಲಿ ಯಾವ ರೀತಿ ಬೆಳೆದು ಬಂದಿವೆ ಎಂಬುದರ ಬಗ್ಗೆ ಇಲ್ಲಿ ಚರ್ಚಿಸಲಾಗಿದೆ. ಧಾರವಾಡ ಜಿಲ್ಲೆಯು ಧಾರವಾಡ, ಹುಬ್ಬಳ್ಳಿ, ಕಲಘಟಗಿ, ಕುಂದಗೋಳ ಮತ್ತು ನವಲಗುಂದ ತಾಲ್ಲೂಕುಗಳನ್ನು ಒಳಗೊಂಡಿದೆ. ಈ ಐದು ತಾಲ್ಲೂಕುಗಳಲ್ಲಿ ದೊರೆತ ಗಜಲಕ್ಷ್ಮಿ ಶಿಲ್ಪಗಳ ಸಂಖ್ಯೆ ಸುಮಾರು ೨೫ ರಿಂದ ೩೦; ಸ್ಮಾರಕ ಶಿಲ್ಪಗಳಾದ ವೀರಗಲ್ಲು, ಮಹಾಸತಿ, ಗೋಸಾಸ ಮತ್ತು ನಿಷದಿಗಲ್ಲುಗಳಿಗೆ ಹೋಲಿಸಿದರೆ ಗಜಲಕ್ಷ್ಮಿ ಶಿಲ್ಪಗಳು ಕಡಿಮೆ ಎಂದೇ ಹೇಳಬೇಕು.

ಪ್ರಸ್ತುತ ಅಧ್ಯಯನ ಪ್ರದೇಶದಲ್ಲಿ ಕಾಣುವ ಗಜಲಕ್ಷ್ಮಿ ಶಿಲ್ಪಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿಕೊಳ್ಳಲಾಗಿದೆ. ಲಕ್ಷ್ಮಿ ಮತ್ತು ಅವಳೊಂದಿಗೆ ಎರಡು ಗಜಗಳನ್ನು ಮಾತ್ರ ಒಳಗೊಂಡ ಶಿಲ್ಪಪಟ್ಟಿಕೆಗಳು; ಲಕ್ಷ್ಮಿ ಮತ್ತು ಎರಡು ಗಜಗಳೊಂದಿಗೆ ಮತ್ತೆ ಎರಡು ಗಜಗಳು ಕಾಣುವ ಶಿಲ್ಪಪಟ್ಟಿಕೆಗಳು; ಅಲಂಕಾರಯುಕ್ತ ಗಜಲಕ್ಷ್ಮಿ ಶಿಲ್ಪಗಳು. ಇಲ್ಲಿ ಲಕ್ಷ್ಮಿ, ನಾಲ್ಕು ಗಜಗಳು, ಚಾಮರಧಾರಿಯರು, ವಾದ್ಯ ಮೇಳ ಮುಂತಾದವನ್ನು ಕಾಣಬಹುದಾಗಿದೆ.

ಪ್ರಾರಂಭದಲ್ಲಿ ಗಜಲಕ್ಷ್ಮಿ ಶಿಲ್ಪಗಳು ತುಂಬಾ ಅಲಂಕಾರಯುಕ್ತವಾಗಿ ಕಂಡುಬಂದು ನಂತರ ಸರಳತೆಯತ್ತ ಸಾಗಿರಬಹುದು. ಏಕೆಂದರೆ ರಾಷ್ಟ್ರಕೂಟರ ಕಾಲಕ್ಕೆ ಸಂಬಂಧಿಸಿದ ಒಂದೆರಡು ಗಜಲಕ್ಷ್ಮಿ ಶಿಲ್ಪಗಳು ತುಂಬಾ ಅಲಂಕಾರಯುಕ್ತವಾಗಿವೆ.

ಕಂದಲಿ, ಶಿರೂರು, ಬೆಳವಟಗಿ, ಶಿಶುವಿನಹಳ್ಳಿ, ಸೂಳಿಹಟ್ಟಿ, ಬ್ಯಾಹಟ್ಟಿ, ಬೆಟದೂರು, ಮರೇವಾಡ, ಬೆಳಹಾರ, ಗುಡಿಸಾಗರ, ಹಾಳಕುಸಗಲ್ಲ, ಖಣ್ಣೂರು, ಕಟ್ನೂರು, ಮಣಕವಾಡ, ನಾವಳ್ಳಿ, ತಲಿವೊರಬ ಹಾಗೂ ಪರ್ದೇಸೂರುಗಳಲ್ಲಿ ಕಂಡು ಬಂದ ಶಿಲ್ಪ ಪಟ್ಟಿಕೆಯಲ್ಲಿ ಕೇವಲ ಲಕ್ಷ್ಮಿ ಮತ್ತು ಎರಡು ಗಜಗಳನ್ನಷ್ಟೆ ಕಾಣಬಹುದು.

ಈ ಶಿಲ್ಪಪಟ್ಟಿಕೆಗಳಲ್ಲಿ ಲಕ್ಷ್ಮೀಪೀಠದ ಮೇಲೆ ಕುಳಿತಿರುವಳು. ಆಕೆಗೆ ಗಜಗಳೆರಡು ಜಲಾಭಿಷೇಕ ಮಾಡುತ್ತಿರುವ ದೃಶ್ಯಗಳಷ್ಟೇ ಕಂಡುಬಂದಿದೆ. ಲಕ್ಷ್ಮೀ ಗಜಗಳು ಆಭರಣಗಳಿಂದ ಅಲಂಕೃತಗೊಂಡಿರುವವು. ಈ ಗುಂಪಿನ ಶಿಲ್ಪಪಟ್ಟಿಕೆಯಲ್ಲಿ ಕೆಲವು, ಗ್ರಾಮಗಳ ಮಧ್ಯದಲ್ಲಿ ಕಂಡು ಬಂದರೆ ಮತ್ತೆ ಕೆಲವು ಊರ ಹೊರಗೆ ಕಾಣುವವು. ಗ್ರಾಮದಲ್ಲಿ ಕಂಡುಬಂದ ಶಿಲ್ಪಪಟ್ಟಿಕೆಗಳಲ್ಲಿ ಕೆಲವದರ ಪೀಠದಲ್ಲಿ ಗಂಟುಗಳನ್ನು ತೋರಿಸಲಾಗಿದೆ. ಪ್ರಾಯಶಃ ಇವುಗಳನ್ನು ಊರ ಅಗಸಿ ಬಾಗಿಲುಗಳಿಗೆ ಏನಾದರೂ ಅಳವಡಿಸಿರಬಹುದು ಎನ್ನಬಹುದು. ಪ್ರಾರಂಭದಲ್ಲಿ ಈ ಕೆಲ ಶಿಲ್ಪಗಳನ್ನು ಊರ ಅಗಸಿ ಬಾಗಿಲಿಗೆ ಅಳವಡಿಸಿದ್ದಂತೆ ಕಂಡರೆ ವಿಜಯನಗರೊತ್ತರ ಕಾಲದಲ್ಲಿ ಈ ಶಿಲ್ಪಪಟ್ಟಿಕೆಗಳನ್ನು ದೇವಾಲಯಗಳ ಒಳಗಡೆ ಪ್ರತಿಷ್ಠಾಪಿಸಿರುವುದನ್ನು ಕಾಣುತ್ತೇವೆ. ದೇವಾಲಯಗಳಲ್ಲಿ ಗಣೇಶ, ಸೂರ್ಯ ಇನ್ನಿತರೆ ಶಿಲ್ಪಗಳನ್ನು ಹೇಗೆ ಸ್ಥಾಪಿಸುತ್ತಾರೆಯೋ ಅದೇ ರೀತಿ ಗಜಲಕ್ಷ್ಮಿ ಶಿಲ್ಪಗಳೂ ಪ್ರತಿಷ್ಠಾಪಿಸಲ್ಪಟ್ಟು ಪೂಜಿಸಲ್ಪಟ್ಟಿವೆ.

ಊರ ಹೊರಗೆ ಕಾಣುವ ಗಜಲಕ್ಷ್ಮಿ ಶಿಲ್ಪಗಳು ಸಾಮಾನ್ಯವಾಗಿ ಊರ ಸಮೀಪದ ಹೊಲಗಳಲ್ಲಿ ಕಂಡು ಬಂದಿವೆ. ಈ ಶಿಲ್ಪಗಳ ಮುಂಭಾಗದಲ್ಲಿ ಕೋಣದ

* ಇತಿಹಾಸ ಉಪನ್ಯಾಸಕರು, ಸರ್ಕಾರಿ ಕಲಾ ಕಾಲೇಜು, ಚಿತ್ರದುರ್ಗ – ೫೭೭ ೫೦೧.



ತಲೆಗಳಿರುವುದನ್ನು ಕಾಣುತ್ತೇವೆ. (ಕೆಲವು ಕಡೆ ಸಮೀಪದಲ್ಲಿ) ಪ್ರಾಯಶಃ ಗ್ರಾಮದೇವತೆಯಾಗಿ ಪೂಜಿಸಲ್ಪಟ್ಟ ಇವಳಿಗೆ ಇಲ್ಲಿ ಬಲಿಯೂ ನಡೆದಂತೆ ಕಾಣುತ್ತದೆ. ಅದಕ್ಕಾಗಿಯೇ ಗಜಲಕ್ಷ್ಮಿಯ ಮುಂಭಾಗದಲ್ಲಿ ಕೋಣನ ತಲೆಯ ಶಿಲ್ಪಗಳನ್ನು ತೋರಿಸಿರಬಹುದು. ಇಂದು ನಾವು ಯಾವ ರೀತಿ ದುರ್ಗಿ, ಮಾರಿಯರಿಗೆ ಬಲಿಕೊಟ್ಟು ಪೂಜಿಸುತ್ತೇವೆಯೋ ಅದೇ ರೀತಿ ಅಂದು ಗಜಲಕ್ಷ್ಮಿಗೂ ಬಲಿ ನೀಡಿ ಪೂಜಿಸಿರಬಹುದು?

ಇನ್ನು ಎರಡನೇ ಮಾದರಿ ಗಜಲಕ್ಷ್ಮಿ ಶಿಲ್ಪಗಳಲ್ಲಿ ಎರಡು ಗಜಗಳ ಜೊತೆ ಮತ್ತೆ ಎರಡು ಗಜಗಳನ್ನು ತೋರಿಸಿರುವುದನ್ನು ಕಾಣುತ್ತೇವೆ. ಕೆಲವು ಕಡೆ ಸಾಂಕೇತಿಕವಾಗಿ ಎರಡು ಸೊಂಡಿಲುಗಳನ್ನು ಮಾತ್ರ ತೋರಿಸಲಾಗಿದೆ. ಮತ್ತೆ ಕೆಲವು ಕಡೆ ಪ್ರತ್ಯೇಕ ಎರಡು ಆನೆಗಳನ್ನು ತೋರಿಸಿರುವರು. ಇಲ್ಲಿ ಎರಡು ಗಜಗಳು ಪೀಠದ ಮೇಲೆ ಕುಳಿತ ಲಕ್ಷ್ಮಿಗೆ ಸೊಂಡಿಲಿನಲ್ಲಿ ಹಿಡಿದ ಕುಂಭಗಳಿಂದ ಜಲಾಭಿಷೇಕ ಮಾಡುತ್ತಿದ್ದರೆ ಮತ್ತೆರಡು ಗಜಗಳು ತಮ್ಮ ಸೊಂಡಿಲಿನಲ್ಲಿ ಹಿಡಿದ ಕುಂಭಗಳಿಂದ ನೀರನ್ನು ತುಂಬಿಕೊಡುತ್ತಿರುವಂತೆ ಚಿತ್ರಿತಗೊಂಡಿರುತ್ತವೆ. ಈ ರೀತಿಯ ಶಿಲ್ಪಗಳನ್ನು ಬೆಳಗಲಿ ಮತ್ತು ಮಲ್ಲಿಗವಾಡಗಳಲ್ಲಿ ಕಾಣುತ್ತೇವೆ.



ಇನ್ನು ಮೂರನೇ ಗುಂಪಿಗೆ ಸೇರುವ ಶಿಲ್ಪಗಳ ನಿರೂಪಣೆಯಲ್ಲಿ ಸ್ವಲ್ಪ ಭಿನ್ನವಾಗಿ ಕಾಣುವವು. ಇನ್ನು ಹೆಚ್ಚು ಅಲಂಕಾರ ಮತ್ತು ನಿರೂಪಣಾ ಶೈಲಿಯನ್ನು ಹೊಂದಿವೆ.

ಛಬ್ಬಿಯಲ್ಲಿ ಎರಡು ಅಪರೂಪದ ಗಜಲಕ್ಷ್ಮಿ ಶಿಲ್ಪಗಳು ದೊರೆತಿದ್ದು ಒಂದು ಈಗ ಧಾರವಾಡದ ರಾಜ್ಯ ಪುರಾತತ್ವ ವಸ್ತು ಸಂಗ್ರಹಾಲಯದಲ್ಲಿದೆ. ಮತ್ತೊಂದು ಅದೇ ಗ್ರಾಮದ ಕೆರೆಯ ಏರಿ ಮೇಲಿರುವ ಕಲ್ಮೇಶ್ವರ ದೇವಾಲಯದ ಗೋಡೆಯಲ್ಲಿದೆ. ಇದನ್ನು ನಂತರದ ಕಾಲದಲ್ಲಿ ಅಳವಡಿಸಿರುವರು. ಈ ಎರಡೂ ಶಿಲ್ಪಗಳು ಹೆಚ್ಚು ಕಡಿಮೆ ಒಂದೇ ರೀತಿಯಲ್ಲಿದ್ದು, ಒಂದೇ ಕಾಲಮಾನಕ್ಕೆ ಸೇರಿದವುಗಳಾಗಿವೆ.

ಇಲ್ಲಿ ಲಕ್ಷ್ಮೀಯನ್ನು ದ್ವಿದಳ ಪದ್ಮಪೀಠದ ಮೇಲೆ ಕುಳಿತಿರುವಂತೆ ತೋರಿಸಲಾಗದೆ. ಲಕ್ಷ್ಮೀ ತನ್ನೆರಡು ಕೈಗಳಲ್ಲಿ ಕಮಲಗಳನ್ನು ಹಿಡಿದಿರುವಳು. ತಲೆಯಲ್ಲಿ ಉದ್ದನೆಯ ಕಿರೀಟವಿದೆ. ಒಂದರಲ್ಲಿ ದೇವಿಗೆ ಕೂದಲು. ಇಳಿಬಿಟ್ಟಂತೆ ತೋರಿಸಲಾಗಿದೆ. ಮತ್ತೊಂದು ಶಿಲ್ಪದಲ್ಲಿ ದೇವಿಯ ತಲೆಯ ಹಿಂಭಾಗದಲ್ಲಿ ಪ್ರಭಾಮಂಡಲವಿದೆ. ಲಕ್ಷ್ಮಿಯ ಇಕ್ಕೆಲಗಳಲ್ಲಿ ಚಾಮರಧಾರಿಯರು ತ್ರಿಭಂಗಿಯಲ್ಲಿ ನಿಂತಿರುವರು. ಇಲ್ಲಿ ಎರಡು ಗಜಗಳು ಲಕ್ಷ್ಮಿಗೆ ಅಭಿಷೇಕ ಮಾಡುತ್ತಿದ್ದರೆ ಮತ್ತೆರಡು ಗಜಗಳು ಲಕ್ಷ್ಮಿಗೆ ನೀರನ್ನು ತುಂಬಿಕೊಡುತ್ತಿವೆ. ಈ ದೃಶ್ಯಾವಳಿಯ ಸುತ್ತಲೂ ಮೇಲ್ಭಾಗದಲ್ಲಿ ವಾದ್ಯ ಮೇಳದವರು ಹರ್ಷೋಲ್ಲಚಿತವಾಗಿ ವಾದ್ಯ ಮೇಳವನ್ನು ಮೊಳಗಿಸುತ್ತಿರುವರು. ಈ ಪಟ್ಟಿಕೆಯ ಎರಡು ಬದಿಗಳಲ್ಲಿ ಮಕರಗಳೆರಡು ಬಾಯಿ ತೆರೆದಿವೆ. ಇದು ಮಕರತೋರಣದ ಕಲ್ಪನೆಯನ್ನು ನೀಡುತ್ತದೆ. ಈ ಎರಡು ಪಟ್ಟಿಕೆಗಳನ್ನು ಗಮನಿಸಿದರೆ ಇದೊಂದು ಒಳ್ಳೆಯ ಸುಸಂದರ್ಭ ಎನ್ನುವುದರಲ್ಲಿ ಸಂಶಯವಿಲ್ಲ.



ಇದೇ ರೀತಿ ರೊಟ್ಟಿಗವಾಡದ ಗಜಲಕ್ಷ್ಮಿ ಪಟ್ಟಿಕೆಯಲ್ಲಿಯೂ ಕೂಡ ಗಜಲಕ್ಷ್ಮಿಯ ಸುತ್ತಲೂ ಚಾಮರಧಾರಿಯರು ಹಾಗೂ ವಾದ್ಯ ಮೇಳದವರಿರುವುದನ್ನು ಕಾಣಬಹುದು. ಶಲವಡಿ ಗ್ರಾಮದಲ್ಲಿ ಸ್ವಲ್ಪ ದೊಡ್ಡದಾದ ಗಜಲಕ್ಷ್ಮಿ ಪಟ್ಟಿಕೆ ಕಾಣುವುದು. ಇಲ್ಲಿ ಗಜಗಳು ಲಕ್ಷ್ಮಿಗೆ ಅಭಿಷೇಕ ಮಾಡುತ್ತಿವೆ. ಮತ್ತೆರಡು ಗಜಗಳು ಆಗಲೇ ನೀರನ್ನು ಹಿಡಿದು ತಯಾರಾಗಿ ನಿಂತಿವೆ. ಇಕ್ಕೆಲಗಳಲ್ಲಿ ಚಾಮರಧಾರಿಯರು ನೇರವಾಗಿ ನಿಂತಿರುವರು. ಇಲ್ಲಿಯೂ ಶಿಲ್ಪದ ಸುತ್ತಲೂ ತೋರಣದ ಅಲಂಕರಣೆ ಇದೆ. ಕುಂದಗೋಳದ ಗಜಲಕ್ಷ್ಮಿ ಶಿಲ್ಪಪಟ್ಟಿಕೆಯಲ್ಲಿ ಕುಳಿತ ಲಕ್ಷ್ಮಿಗೆ ಗಜಗಳೆರಡು ಅಭಿಷೇಕ





ಮಾಡುತ್ತಿವೆ. ಈ ಗಜಗಳ ಮೇಲ್ಭಾಗದಲ್ಲಿ ವಾದ್ಯಗಾರರನ್ನು ತೋರಿಸಿರುವರು. ಗಜಗಳ ಹಿಂಭಾಗದಲ್ಲಿ ಶಂಖನಿಧಿ, ಪದ್ಮನಿಧಿಯನ್ನು ತೋರಿಸಿರುವುದು ಕಾಣುತ್ತದೆ. ಪ್ರಾಯಶಃ ಸಮಯದಲ್ಲಿ ಗಜಲಕ್ಷ್ಮಿಯನ್ನು ಸರ್ವದೇವತೆಯನ್ನಾಗಿ ಕಾಣುತ್ತಿದ್ದರಿಂದ ವೈಷ್ಣವ ಧರ್ಮದವರು, ಲಕ್ಷ್ಮಿಯು ವೈಷ್ಣವ ಧರ್ಮಕ್ಕೆ ಸೀಮಿತವಾದವಳು ಎಂಬುದನ್ನು ನೆನಪಿಸಲಿಕ್ಕಾಗಿ ಈ ರೀತಿ ತೋರಿಸಿರಬಹುದು. ಇನ್ನು ಕೋಳಿವಾಡದ ಶಿಲ್ಪ ಪಟ್ಟಿಕೆಯಲ್ಲಿ (ಇದು ನಂತರ ಕಾಲದ್ದು) ಎರಡು ದೃಶ್ಯಾವಳಿಗಳನ್ನು ತೋರಿಸಲಾಗಿದೆ. ಒಂದು ಕಡೆ ಪದ್ಮ ಪೀಠದ ಮೇಲೆ ಕುಳಿತ ಲಕ್ಷ್ಮಿಗೆ ಗಜಗಳೆರಡು ಜಲಾಭಿಷೇಕ ಮಾಡುತ್ತಿವೆ. ಈ ಗಜಗಳ ಕೆಳಭಾಗದಲ್ಲಿರುವ ಮತ್ತೆರಡು ಗಜಗಳು ಕುಂಭಗಳಲ್ಲಿ, ಜಲವನ್ನು ಹಿಡಿದು ನಿಂತಿರುವವು. ಆದರೆ ಇಲ್ಲಿ ಯಾವುದೇ ಚಾಮರಧಾರಿ ವಾದ್ಯಮೇಳದವರಿಲ್ಲ. ಈ ಭಾಗದಲ್ಲಿ ಲಕ್ಷ್ಮಿ ಮತ್ತು ನಾಲ್ಕು ಗಜಗಳನ್ನು ಮಾತ್ರ ತೋರಿಸಿರುವರು. ಇದರ ಬದಿಯ ಮತ್ತೊಂದು ದೃಶ್ಯದಲ್ಲಿ ಇಬ್ಬರು ಯಕ್ಷರನ್ನು ತೋರಿಸಲಾಗಿದೆ. ಪ್ರಾಯಶಃ ಇವರು ಶಂಖನಿಧಿ, ಪದ್ಮನಿಧಿಯಾಗಿರಬಹುದು ಈ ಎಲ್ಲಾ ಶಿಲ್ಪಗಳ ಕಾಲಮಾನ ಸು.ಕ್ರಿ.ಶ.೧೧ನೇ ಶತಮಾನದ ಅಂತ್ಯಭಾಗದಿಂದ ೧೬-೧೭ನೇ ಶತಮಾನ

ಈ ರೀತಿಯಾಗಿರುವ ಈ ಪ್ರದೇಶದ ಗಜಲಕ್ಷ್ಮಿ ಶಿಲ್ಪಗಳನ್ನು ಗಮನಿಸಿದಾಗ ಪ್ರಾರಂಭದ ಹಂತದಲ್ಲಿ ಈ ಪಟ್ಟಿಕೆಗಳನ್ನು ಮಂಗಳ ಫಲಕಗಳಾಗಿ ಕಂಡರಿಸಿ ಹೆಚ್ಚು ಪ್ರಾಶಸ್ತ್ಯ ನೀಡಿದಂತೆ ಕಾಣುತ್ತದೆ. ನಂತರದಲ್ಲಿ ಇವುಗಳ ಅಲಂಕಾರ ಕಡಿಮೆಯಾಗಿ ಸಂಖ್ಯಾದೃಷ್ಟಿ ಜಾಸ್ತಿಯಾಗಿರಬಹುದು. ಇವುಗಳನ್ನು ಮೊದಲ ಊರ ಅಗಸಿ ಬಾಗಿಲುಗಳಿಗೆ ಅಳವಡಿಸಿ ತದನಂತರ ಗ್ರಾಮದೇವಿಯಾಗಿ ಪೂಜಿಸಲ್ಪಟ್ಟಿರಬೇಕು. ಗ್ರಾಮದೇವಿಯ ನಂತರ ಇವಳು ದೇವಾಲಯಗಳಲ್ಲಿ ಸ್ಥಾನ ಪಡೆದವಳಾಗಿದ್ದಾಳೆ.



ಡಾ॥ ಕೆ.ಎನ್. ಮೋಹನ್*

# ನುಗ್ಗಿಹಳ್ಳಿ ಸದಾಶಿವ ದೇಗುಲದ ಶಿಲ್ಪಗಳು

ನುಗ್ಗಿಹಳ್ಳಿಯು ಹಾಸನ ಜಿಲ್ಲೆ, ಚನ್ನರಾಯಪಟ್ಟಣದ ಹತ್ತಿರ ಇರುವಂತಹ ಒಂದು ಸ್ಥಳ. ನುಗ್ಗಿಹಳ್ಳಿ ಸದಾಶಿವ ದೇವಾಲಯುವನ್ನು ಹೊಯ್ಸಳ ಸೋಮೇಶ್ವರನ ದಂಡನಾಯಕನಾದ ಬೊಮ್ಮಣ್ಣ ದಂಡನಾಯಕ ನಿರ್ಮಿಸಿದನೆಂದು ತಿಳಿದು ಬರುತ್ತದೆ. ಇದು ಶಿಲ್ಪಗಳು ಮತ್ತು ವಾಸ್ತುಶೈಲಿಯ ದೃಷ್ಟಿಯಿಂದ ಪ್ರಮುಖ ಮಹತ್ವವುಳ್ಳದ್ದಾಗಿದೆ.

ಸದಾಶಿವ ದೇವಾಲಯವು ನಾಗರ ಶೈಲಿ ಶಿಖರವುಳ್ಳ ನಕ್ಷತ್ರಾಕಾರದ ಗರ್ಭಗೃಹವುಳ್ಳ ಸುಂದರವಾದ ಮತ್ತು ನಿರಾಡಂಬರವಾದ ದೇವಾಲಯವಾಗಿದೆ. ಇದೊಂದು ದ್ರಾವಿಡ ಮತ್ತು ನಾಗರ ಶೈಲಿಯ ಮಿಶ್ರಶೈಲಿಯ ದೇವಾಲಯವೆಂದರೆ ತಪ್ಪಾಗಲಿಕ್ಕಿಲ್ಲ. ನಾಗರ ಶೈಲಿಯು ಸೋಮೇಶ್ವರನ ಕಾಲದಲ್ಲಿ ವಿಭಿನ್ನ ನೆಲೆಗಟ್ಟಿನಲ್ಲಿ ಬೆಳವಣಿಗೆಯಾಗಿರುವುದು ಕಂಡುಬರುತ್ತದೆ. ಆದರೆ ಇದಕ್ಕೆ ಪೂರ್ವದಲ್ಲಿಯೇ ಅಂದರೆ ವಿಷ್ಣುವರ್ಧನನ ಕಾಲದಲ್ಲಿ ನಿರ್ಮಾಣವಾದ ಬೇಲೂರಿನ ಚನ್ನಕೇಶವ ದೇವಾಲಯವು ಕೂಡ ಭವ್ಯ ಲತಾನಾಗರ ಶಿಖರವನ್ನು ಹೊಂದಿತ್ತು ಎಂದು ತಿಳಿದು ಬರುತ್ತದೆ. ಪೂರಕವಾಗಿ ೧೯೧೩ರಲ್ಲಿ ಪ್ರಕಟವಾದ ಎಲ್.ಡಿ. ಬಾರ್ನೆಟ್ ಅವರ ಪುಸ್ತಕದಲ್ಲಿನ (ಪ್ಲೇಟ್ ೧೫ ) ಛಾಯಾಚಿತ್ರ ಬೇಲೂರಿನ ಚನ್ನಕೇಶವ ದೇವಾಲಯುದ ಶಿಖರವೂ ಕೂಡ ಕರ್ಣಕೂಟಗಳುಳ್ಳ ಲತಾ ನಾಗರ ಶಿಖರವೆಂದು ಸ್ಪಷ್ಟವಾಗುತ್ತದೆ. ಇದು ನುಗ್ಗಿಹಳ್ಳಿ ಸದಾಶಿವ ದೇವಾಲಯದ ಮತ್ತೊಂದು ವಿಶೇಷತೆ.

ನುಗ್ಗಿಹಳ್ಳಿ ಸದಾಶಿವ ದೇವಾಲಯದಲ್ಲಿ ಪರಿವಾರ ದೇವತಾ ಶಿಲ್ಪಗಳನ್ನು ಬಿಟ್ಟರೆ ಯಾವುದೇ ಶಿಲ್ಪಗಳು ಕಂಡುಬರುವುದಿಲ್ಲ. ದೇವಾಲಯುದ ನವರಂಗದಲ್ಲಿ ಒಳಗೋಡೆಯ ಸುತ್ತಲೂ ಸೂರ್ಯ, ಸಪ್ತಮಾತ್ರಿಕೆ, ಗಣೇಶ, ಮಹಿಷಾಸುರ ಮರ್ದಿನಿ, ವಾಹನಾರೂಢ ಕುಮಾರ ಮತ್ತು ಸುಖಾಸನದಲ್ಲಿ ಕುಳಿತಿರುವ ವೀರಭದ್ರ ಶಿಲ್ಪಗಳಿವೆ. ಎಲ್ಲಾ ಶಿಲ್ಪಗಳು ದುಂಡು ಶಿಲ್ಪಗಳ ರೀತಿಯಲ್ಲಿ ಕೆತ್ತಲ್ಪಟ್ಟಿವೆ. ಶಿಲ್ಪಗಳ ಶೈಲಿಯ ಬಗ್ಗೆ ಹೇಳುವುದಾದರೆ ಶಿಲ್ಪಿಯು ಸಾಕಷ್ಟು ಗಮನ ನೀಡಿ ಶಿಲ್ಪಗಳ ಪ್ರತಿಯೊಂದು ಭಾಗವನ್ನೂ ನೈಜವಾಗಿ ಆಕರ್ಷಕವಾಗಿ ತೋರಿಸಲು ಪ್ರಯತ್ನಿಸಿದ್ದಾನೆ.

ಸೂರ್ಯನ ಶಿಲ್ಪವು ಪೀಠದ ಮೇಲೆ ನಿಲ್ಲಿಸಿದ್ದು ಪೀಠದ ಮುಂಭಾಗದಲ್ಲಿ ಸಪ್ತಾಶ್ವಗಳ ಕೆತ್ತನೆ ಕಂಡುಬರುತ್ತದೆ. ಸೂರ್ಯನು ದ್ವಿಹಸ್ತವುಳ್ಳವನಾಗಿ ಸಮಭಂಗಿಯಲ್ಲಿ ಎರಡೂ ಕೈಗಳಲ್ಲಿ ಕಮಲದ ಮೊಗ್ಗುಗಳನ್ನು ಹಿಡಿದು ನಿಂತಿದ್ದಾನೆ. ಸೂರ್ಯನ ಎರಡೂ ಪಾರ್ಶ್ವಗಳಲ್ಲಿ ಧನುರ್ಧಾರಿಗಳಾದ ಉಷಾ ಮತ್ತು ಪ್ರತ್ಯುಷೆಯರ ಶಿಲ್ಪಗಳಿವೆ. ಸೂರ್ಯನು ಕಮಾನಿನಾಕಾರದಲ್ಲಿ ಪ್ರಭಾವಳಿಯನ್ನು ಹೊಂದಿದ್ದಾನೆ. ತುಸು ಎತ್ತರ ಎನಿಸುವ ಕಿರೀಟ, ಶಿರಚಕ್ರ ಮತ್ತು ಉಳಿದ ಎಲ್ಲಾ ಆಭರಣಗಳಿಂದ ಅಲಂಕೃತನಾಗಿದ್ದಾನೆ.

ಸಪ್ತಮಾತೃಕೆಯರ ಶಿಲ್ಪಗಳು ಒಂದೇ ಶಿಲಾಫಲಕದ ಮೇಲೆ ಕಂಡು ಬರುತ್ತವೆ. ಸಪ್ತಮಾತೃಕೆಯರ ಶಿಲ್ಪ ಸಾಲಿನಲ್ಲಿ ವೀರಭದ್ರ ಮತ್ತು ಗಣೇಶರ ಶಿಲ್ಪಗಳು ಕೂಡ ಕಂಡುಬರುತ್ತವೆ. ಸಪ್ತಮಾತೃಕೆಯರಲ್ಲಿ ಕೊನೆಯವಳಾದ ಚಾಮುಂಡಿಯ ಬದಲಾಗಿ ದುರ್ಗಿಯನ್ನು ತೋರಿಸಲಾಗಿದೆ. ಎಲ್ಲಾ ಮಾತೃಕೆಯರ ವಾಹನಗಳನ್ನು ಅವರವರ ಪೀಠದ ಕೆಳಭಾಗದಲ್ಲಿ ಕೆತ್ತಲಾಗಿದೆ. ಗಣೇಶ ಮತ್ತು ವೀರಭದ್ರರನ್ನೂ ಕೂಡ ಸಪ್ತಮಾತೃಕಾ ಶಿಲ್ಪಗಳ ಸಾಲಿನಲ್ಲಿಯೇ ಕೂರಿಸಲಾಗಿದೆ. ಈ ಪರಂಪರೆ ಬಹು ಹಿಂದಿನಿಂದಲೂ ಮಾತೃಕಾ ಶಿಲ್ಪಗಳ ರಚನೆಯಲ್ಲಿ ಕಂಡುಬರುತ್ತದೆ.

ಮಹಿಷಾಸುರ ಮರ್ದಿನಿಯ ಶಿಲ್ಪ ಅಷ್ಟಭುಜಗಳನ್ನು ಹೊಂದಿದ್ದು, ಮಹಿಷನ ಸಂಹಾರದಲ್ಲಿ ತೊಡಗಿರುವ ಶಿಲ್ಪವಿನ್ಯಾಸ ಈ ಶಿಲ್ಪದಲ್ಲಿ ಕಂಡುಬರುತ್ತದೆ. ದೇವಿಯು ಖಡ್ಗ, ಬಾಣ, ಗುರಾಣಿ, ಘಂಟ ಮತ್ತು ಬಟ್ಟಲುಗಳನ್ನು ಹಿಡಿದಿದ್ದಾಳೆ. ಬಲಮುಂಗೈಯಲ್ಲಿ ತ್ರಿಶೂಲವಿದೆ. ಶಿಲ್ಪದ ವಿನ್ಯಾಸದಲ್ಲಿ ಅಂತಹ ವಿಶೇಷವಾದ ಶೈಲಿ ಕಂಡುಬರುವುದಿಲ್ಲ.

* ಇತಿಹಾಸ ಉಪನ್ಯಾಸಕರು, ಬಿ.ಎಂ. ಶೆಟ್ಟಿ, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೊಣನೂರು, ಹಾಸನ ಜಿಲ್ಲೆ.

ದೇವಾಲಯುದಲ್ಲಿನ ಕುಮಾರನ ಶಿಲ್ಪ ತುಂಬಾ ಆಕರ್ಷಕವಾಗಿದೆ. ನವಿಲಿನ ಮೇಲೆ ಸುಖಾಸನದಲ್ಲಿ ಕುಳಿತಿರುವ ಕುಮಾರ ಚತುರ್‌ಬಾಹುಗಳನ್ನು ಹೊಂದಿದ್ದಾನೆ. ಬಲಮುಂಗೈಯಲ್ಲಿ ಭರ್ಜಿ, ಎಡಮುಂಗೈಯಲ್ಲಿ ಪಾಶ, ಕೆಳಬಲಗೈಯಲ್ಲಿ ಅಭಯಮುದ್ರೆಯಲ್ಲಿ ಮತ್ತು ಎಡ ಮುಂಗೈಯಲ್ಲಿ ಬಹುಬೀಜಾ ಫಲವನ್ನು ಹೊಂದಿದ್ದಾನೆ. ಕಲಾವಿದ ಈ ಶಿಲ್ಪವನ್ನು ಕೆತ್ತುವಲ್ಲಿ ಹೆಚ್ಚಿನ ಶ್ರಮ ವಹಿಸಿದ್ದಾನೆ. ಅಲ್ಲದೇ ವಾಸ್ತವಿಕತೆಗೆ ಹೆಚ್ಚಿನ ಪ್ರಾಮುಖ್ಯತೆ ನೀಡಿದ್ದಾನೆ. ನವಿಲನ್ನು ತುಂಬಾ ಚಿಕ್ಕದಾಗಿ ತೋರಿಸದೆ, ಕುಮಾರನ ಎತ್ತರಕ್ಕೆ ಸರಿಸಮನಾಗಿ ಕಾಣುವಂತಹ ದೊಡ್ಡದಾದ ರೀತಿಯಲ್ಲಿ ರಚಿಸಿರುತ್ತಾನೆ.

ವೀರಭದ್ರನ ಶಿಲ್ಪವು ಚತುರ್ ಬಾಹುಗಳನ್ನು ಹೊಂದಿದ್ದು ಕೈಗಳಲ್ಲಿ ಖಡ್ಗ, ತ್ರಿಶೂಲ ಹಾಗೂ ಪಾಶಗಳನ್ನು ಹಿಡಿದಿದ್ದಾನೆ. ಈ ಶಿಲ್ಪದಲ್ಲಿ ಕೇಶ ವಿನ್ಯಾಸವೊಂದೇ ಸಾಕಷ್ಟು ಚೆನ್ನಾಗಿ ಮೂಡಿಬಂದಿರುವುದು. ಮಿಕ್ಕಿದ ಭಾಗಗಳೆಲ್ಲ ಸರಳವಾಗಿ ಮತ್ತು ಆಕರ್ಷಕವಾಗಿ ಮೂಡಿಬಂದಿವೆ. ದೇವಾಲಯದ ನವರಂಗದಲ್ಲಿ ಎರಡು ನಾಗರಶಿಲ್ಪಗಳೂ ಇವೆ. ಹೀಗೆ ಹೊಯ್ಸಳರ ಕಾಲದ ದೇವಾಲಯಗಳಲ್ಲಿ ಪರಿವಾರ ದೇವತಾ ಶಿಲ್ಪಗಳು ಮತ್ತು ಬಿಡಿ ಶಿಲ್ಪಗಳನ್ನು ಹೊಂದಿರುವುದು ಈ ಸದಾಶಿವ ದೇವಾಲಯದ ವಿಶೇಷವಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಎಪಿಗ್ರಾಫಿಯಾ ಕರ್ನಾಟಕ–ಸಂ. ೧೦,** ಚನ್ನರಾಯಪಟ್ಟಣ.
೨. ಎಂ. **ಘೋಷ್., ಭರತನ ನಾಟ್ಯಶಾಸ್ತ್ರ.**
೩. **ಎಂ.ಎ.ಆರ್.** ೧೯೩೪.
೪. ೧೯೩೩ ರ ಎಂ.ಎ.ಆರ್. ನಲ್ಲಿ ಈ ದೇವಾಲಯದ ವಿನ್ಯಾಸ ಮತ್ತು ಶಿಲ್ಪಗಳನ್ನು ಕುರಿತು ಮಾಹಿತಿ ಇದೆ.
೫. ಗೆರಾರ್ಡ್ ಫೋಕೇಮಾ.
೬. ಬಾರ್ನೆಟ್ ಎಲ್.ಡಿ. ೧೯೧೩ (ಲಂಡನ್) : **(ಆಂಟಿಕ್ವಿಟೀಸ್ ಆಫ್ ಇಂಡಿಯನ್ ಅಕೌಂಟ್ ಆಫ್ ದಿ ಹಿಸ್ಟರಿ ಅಂಡ್ ಕಲ್ಚರ್ ಆಫ್ ಏನ್ಷಿಯಂಟ್ ಹಿಂದೂಸ್ತಾನ್.)**

ಕೆ. ಸತೀಶ್*

# ಅಲಬೂರಿನ ಬ್ರಹ್ಮದೇವರ ಶಿಲ್ಪ

ಅಲಬೂರು ಬಳ್ಳಾರಿ ಜಿಲ್ಲೆ ಹಗರಿಬೊಮ್ಮನಹಳ್ಳಿ ತಾಲೂಕಿಗೆ ಸೇರಿದ ಒಂದು ಸಣ್ಣ ಗ್ರಾಮ. ಈ ಗ್ರಾಮವು ಐತಿಹಾಸಿಕವಾಗಿ ಮಹತಿಯನ್ನು ಪಡೆದುಕೊಂಡ ಗ್ರಾಮವಾಗಿತ್ತು. ಇದು ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನೊಳಂಬವಾಡಿ ಪ್ರಾಂತ್ಯದ ಉಪರಾಜಧಾನಿಯಾದ ಕೋಗಳಿ-೫೦೦ಕ್ಕೆ ಹೊಂದಿಕೊಂಡಿತ್ತು. ಕೋಗಳಿ ಐದುನೂರು ಪ್ರಾಂತ್ಯವು ಹಗರಿಬೊಮ್ಮನಹಳ್ಳಿ, ಹೂವಿನ ಹಡಗಲಿ, ಹರಪನಹಳ್ಳಿ ಮತ್ತು ಕೂಡ್ಲಿಗಿ ತಾಲೂಕುಗಳನ್ನೊಳಗೊಂಡ ಪ್ರದೇಶವಾಗಿತ್ತು. ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ಈ ಭಾಗದಲ್ಲಿ ಅನೇಕ ದೇವಾಲಯಗಳು ನಿರ್ಮಾಣಗೊಂಡವು. ಇವುಗಳನ್ನು ಆ ಕಾಲದಲ್ಲಿ ಪ್ರಚುಲಿತದಲ್ಲಿದ್ದ ಕಾಳಾಮುಖ, ಪಾಶುಪತ, ಪಂಥದ ಅನುಯಾಯಿಗಳು ನಿರ್ಮಿಸಿದರು.

ಅಲಬೂರಿನಲ್ಲಿ ಕಲ್ಯಾಣದ ಚಾಲುಕ್ಯರ ಕಾಲಕ್ಕೆ ಸೇರಿದ ರಾಮಲಿಂಗೇಶ್ವರ ದೇವಾಲಯವಿದೆ. ಈ ದೇವಾಲಯ ದಲ್ಲಿರುವ ಶಾಸನವು ಕ್ರಿ.ಶ. ೧೧೪೭ರ ಕಾಲಕ್ಕೆ ಸೇರಿದ್ದಾಗಿದ್ದು ಜಗದೇಕಮಲ್ಲ ಪಾಂಡ್ಯದೇವನು ನೊಳಂಬವಾಡಿ ಮೂವತ್ತೆರಡು ಸಾಸಿರವನ್ನಾಳುತ್ತಿದ್ದಾಗ ಅಲಂಬೂರಿನ ಎಂಬತ್ನಾಲ್ಕು ಮಹಾಜನರು ಸೋಗೆಯ ಕಳೇಶ್ವರ ಪಂಡಿತರ ಶಿಷ್ಯ ವಾಮಶಕ್ತಿ ಪಂಡಿತರ ಕಾಲನ್ನು ತೊಳೆದು ಸ್ವಯಂಭೂ ಮೂಲಸ್ಥಾನ ದೇವರ ಪೂಜಾರ್ಥ ದಾನ ನೀಡಿದ ಉಲ್ಲೇಖವಿದೆ. ಶಾಸನವು ಕಾಳಾಮುಖ ಪಂಥದ ಸ್ಪಷ್ಟ ಉಲ್ಲೇಖವನ್ನು ನೀಡುತ್ತಿದೆ. ಹಾಗೇನೆ "ಮಹಾಗ್ರಹಾರಂ ವಾಲಂಬೂರು ಎಂದು ಶಾಸನವು ಹೆಸರಿಸಿರುವುದರಿಂದ ವಾಲಂಬೂರು ಗ್ರಾಮ ಮಹಾ ಅಗ್ರಹಾರವಾಗಿತ್ತು ಎಂಬುದನ್ನು ಸ್ಪಷ್ಟಪಡಿಸುತ್ತದೆ ಆ ಅಗ್ರಹಾರದ ಉಸ್ತುವಾರಿಯನ್ನು ಎಂಬತ್ನಾಲ್ಕು ಮಹಾಜನಗಳು ನೋಡಿಕೊಳ್ಳುತ್ತಿದ್ದರು ಎಂಬುದನ್ನು ಶಾಸನವು ತಿಳಿಸುತ್ತದೆ.

ಅಲಬೂರಿನ ಗ್ರಾಮದ ಮಧ್ಯಭಾಗದಲ್ಲಿ ಪೂರ್ವಾಭಿಮುಖವಾಗಿ ನಿರ್ಮಿಸಲಾಗಿರುವ ಗೋಪಾಲಕೃಷ್ಣನ ದೇವಾಲಯವಿದೆ. ಇದು ಸಹ ಕಲ್ಯಾಣದ ಚಾಲುಕ್ಯರ ಕಾಲದಲ್ಲಿ ನಿರ್ಮಾಣವಾದ ದೇವಾಲಯವಾಗಿದೆ. ದೇವಾಲಯದ ಗರ್ಭಗೃಹದಲ್ಲಿರುವ ಗೋಪಾಲಕೃಷ್ಣನ ವಿಗ್ರಹವು ಬಹು ಸುಂದರವಾದ ಶಿಲ್ಪವಾಗಿದೆ. ಗೋಪಾಲಕೃಷ್ಣ ದೇವಾಲಯದ ಪಕ್ಕದಲ್ಲೇ ಇದೇ ಕಾಲಘಟ್ಟಕ್ಕೆ ಸೇರಿದ ಶಿವಾಲಯವೊಂದು ನಿರ್ಮಾಣಗೊಂಡಿದೆ. ಪೂರ್ವಾಭಿಮುಖವಾಗಿ ನಿರ್ಮಿಸಲ್ಪಟ್ಟ ಶಿವಾಲಯವು ಗರ್ಭಗೃಹದಲ್ಲಿ ಶಿವಲಿಂಗವನ್ನು ಹೊಂದಿದೆ. ಇದರ ಪಕ್ಕದಲ್ಲಿ ಚೌಕಾಕಾರದ ಕಟ್ಟೆಯ ಮೇಲೆಯೇ ಬ್ರಹ್ಮದೇವರ ಶಿಲ್ಪವನ್ನು ಪೂರ್ವಾಭಿಮುಖವಾಗಿ ನಿಲ್ಲಿಸಲಾಗಿದೆ. ಈ ಗ್ರಾಮದಲಿ ಬ್ರಹ್ಮ, ವಿಷ್ಣು ಮತ್ತು ಮಹೇಶ್ವರರ ಮೂರು ಶಿಲ್ಪಗಳು ಒಂದೇ ಪ್ರಕಾರದಲ್ಲಿ ಬರುವಂತೆ ನಿರ್ಮಾಣ ಗೊಂಡಿರುವುದೊಂದು ವಿಶೇಷವಾಗಿದೆ. ಬ್ರಹ್ಮ ಮಾತ್ರ ಬಯಲಿನಲ್ಲಿ ಕಟ್ಟೆಯ ಮೇಲೆ ನಿಂತ ಸ್ಥಾನಕ ಮೂರ್ತಿಯಾಗಿದ್ದರೆ ಶಿವ ಮತ್ತು ಗೋಪಾಲಕೃಷ್ಣರಿಗೆ ದೇವಾಲಯಗಳು ನಿರ್ಮಾಣಗೊಂಡಿವೆ. ಬ್ರಹ್ಮ ಮಾತ್ರ ಎರಡು



* ಶ್ರೀ ಕುರುವತ್ತಿ ಬಸವೇಶ್ವರ ನಿಲಯ, ಮಿಲಿಟರಿ ಬಯಲು, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ - ೫೮೩ ೨೧೨.

ಅಡಿ ಅಧಿಷ್ಠಾನದ ಮೇಲೆ ನಿರ್ಮಾಣಗೊಂಡಿದ್ದಾನೆ. ಅಲಬೂರು ಗ್ರಾಮವು ಈ ಕಾಲದಲ್ಲಿ ಮಹಾ ಅಗ್ರಹಾರ ವಾಗಿದ್ದ ಕಾರಣ ತ್ರಿಮೂರ್ತಿಗಳ ದೇವಾಲಯಗಳು ಇಲ್ಲಿ ನಿರ್ಮಾಣಗೊಂಡಿವೆ. ಧರ್ಮಶಾಸ್ತ್ರಗಳ ಪ್ರಕಾರ ವೇದಗಳ ನಿರ್ಮಾಪಕ ಬ್ರಹ್ಮನಾದ್ದರಿಂದ ಇಲ್ಲಿ ಬ್ರಹ್ಮನ ಮೂರ್ತಿಯನ್ನು ಪ್ರತಿಷ್ಠಾಪಿಸಿರುವಂತಿದೆ.

ಬ್ರಹ್ಮನನ್ನು ಪೂಜಿಸುವ ಪಂಥಗಳು ಪಶ್ಚಿಮ ಕರ್ನಾಟಕದಲ್ಲಿವೆ. ಸಂಖ್ಯೆಯಲ್ಲಿ ತೀರಾ ಕಡಿಮೆ. ಸಾಮಾನ್ಯ ವಾಗಿ ಶೈವ, ವೈಷ್ಣವ ದೇವಸ್ಥಾನಗಳ ಗರ್ಭಗೃಹದ ಉತ್ತರ ದಿಕ್ಕಿನ ಭಿತ್ತಿಯ ದೇವಕೋಷ್ಠದಲ್ಲಿ ಬ್ರಹ್ಮನ ವಿಗ್ರಹವಿಟ್ಟು ಪೂಜಿಸುವುದು ರೂಢಿ. ಅಲಬೂರಿನಂತೆ ಬ್ರಹ್ಮ, ಗೋಪಾಲ ಕೃಷ್ಣ ಮತ್ತು ಶಿವನಮೂರ್ತಿ ಒಂದೇ ಆವರಣದಲ್ಲಿ ನಿರ್ಮಾಣಗೊಂಡಿರುವುದು ಸಹ ಅಪರೂಪವೇ ಆಗಿದೆ.

ಬ್ರಹ್ಮ ತ್ರಿಮೂರ್ತಿಗಳಲ್ಲಿ ಒಬ್ಬ. ಪ್ರಪಂಚದ ಸೃಷ್ಟಿಕರ್ತನಾದ ವಿಷ್ಣುವಿನ ನಾಭಿಪದ್ಮದಲ್ಲಿ ಹುಟ್ಟಿದವನು ಎಂದು ಪುರಾಣಗಳು ತಿಳಿಸುತ್ತವೆ. ಬ್ರಹ್ಮನನ್ನು ಸಚ್ಚಿದಾನಂದ ಸ್ವರೂಪ, ಪರಮಾತ್ಮ, ಪರಾತ್ಪರ, ಪರಬ್ರಹ್ಮ ಸರ್ವಲೋಕಾಪಿತಾಮಹ, ಪ್ರಜಾಪತಿ, ಸ್ವಯಂಭು, ಸರ್ವಲೋಕಪ್ರಭು ಮಹಾತಪಸ್ವಿ, ಹಿರಣ್ಯಗರ್ಭ ಎಂಬ ವಿವಿಧ ಹೆಸರುಗಳಿಂದ ಪುರಾಣಗಳು ಕರೆದಿವೆ. ಲಿಂಗಪುರಾಣದ ಪ್ರಕಾರ ಬ್ರಹ್ಮ, ಶಿವನ ಯೋಗಮಾಯೆಯಲ್ಲಿ ಜನಿಸಿದವ. ಪ್ರಾರಂಭದಲ್ಲಿ ಶಿವನಿಗೆ ಐದು ತಲೆಗಳಿದ್ದಂತೆ ಬ್ರಹ್ಮನಿಗೂ ಐದು ತಲೆಗಳಿದ್ದುವಂತೆ. ಬ್ರಹ್ಮನು ಶಿವಮೂರ್ತಿಗಳಲ್ಲಿ ತಾನೇ ಸರ್ವಶ್ರೇಷ್ಠನೆಂದು ಭಾವಿಸಿ ವೇದಗಳನ್ನು ನಿಂದಿಸಿ ಮಾತನಾಡಿದಾಗ ಶಿವ ಮೈದೋರಿ, ಭೈರವನನ್ನು ಸೃಷ್ಟಿಸಿ ಆತನ ಮೂಲಕ ಬ್ರಹ್ಮನ ಐದನೇ ತಲೆಯನ್ನು ಕತ್ತರಿಸಿದ. ಆಗ ಭೈರವನಿಗೆ ಬ್ರಹ್ಮಹತ್ಯಾ ದೋಷವು ಪ್ರಾಪ್ತವಾಯಿತು. ಬ್ರಹ್ಮನ ಕಪಾಲವು ಭೈರವನ ಕೈಗೆ ಅಂಟಿಕೊಂಡಿತು. ಹೀಗಾಗಿ ಬ್ರಹ್ಮನಿಗೆ ಮಾನವ ಲೋಕದಲ್ಲಿ ದೇವಾಲಯ, ಪೂಜೆ, ರಥೋತ್ಸವಾದಿಗಳು ಇಲ್ಲದಿರುವಂತೆ ಶಿವನೇ ಶಾಪ ಕೊಟ್ಟನೆಂದು ಶಿವಪುರಾಣಗಳು ತಿಳಿಸುತ್ತವೆ. ಹೀಗಾಗಿ ಬ್ರಹ್ಮನ ದೇವಾಲಯಗಳಾಗಲಿ ಮೂರ್ತಿಗಳಾಗಲೀ ಸಿಗುವುದು ಬಹು ಅಪರೂಪವಾಗಿದೆ.

ಅಲಬೂರಿನ ಬ್ರಹ್ಮನ ವಿಗ್ರಹವನ್ನು ಎರಡು ಅಡಿ ಎತ್ತರವಾದ ಕಟ್ಟೆಯ ಮಧ್ಯದಲ್ಲಿ ನಿಲ್ಲಿಸಲಾಗಿದೆ. ವಿಗ್ರಹವನ್ನು ಕಪ್ಪು ಕಲ್ಲಿನಲ್ಲಿ ನಿರ್ಮಿಸಲಾಗಿದೆ. ವಿಗ್ರಹವು ಏಕಶಿಲಾ ರಚನೆಯಾಗಿದ್ದು ನಾಲ್ಕು ಮುಖಗಳನ್ನು ಹೊಂದಿದೆ. ನಾಲ್ಕೂ ಮುಖಗಳೂ ಪೂರ್ವ, ಪಶ್ಚಿಮ, ಉತ್ತರ ಹೀಗೆ ನಾಲ್ಕೂ ದಿಕ್ಕಿಗೂ ಮುಖ ಮಾಡಿಕೊಂಡಿರುವಂತೆ ಪ್ರತಿಷ್ಠಾಪಿಸಲಾಗಿದೆ. ಬ್ರಹ್ಮನ ನಾಲ್ಕೂ ತಲೆಗಳು ನಾಲ್ಕು ವೇದಗಳನ್ನು ಸಂಕೇತಿಸುತ್ತವೆ ಎಂದು ಪುರಾಣ ಗ್ರಂಥಗಳು ತಿಳಿಸುತ್ತವೆ. ವಿಗ್ರಹದ ತಲೆಯ ಮೇಲ್ಭಾಗದಲ್ಲಿ ಜಟಾಮುಕುಟವಿದ್ದು ಕರ್ಣಕುಂಡಲಗಳಿವೆ. ಮೂರ್ತಿಯು ಯಾವುದೇ ಅಲಂಕಾರವಿಲ್ಲದೆ ಸರಳವಾಗಿ ರಚನೆಗೊಂಡಿದೆ. ವಿಗ್ರಹದ ಅರ್ಧಭಾಗವು ಭೂಮಿಯಲ್ಲಿ ಹೂತುಹೋಗಿರುವುದರಿಂದ ವಿಗ್ರಹದ ಎರಡು ಕೈಗಳು ಮಾತ್ರ ನೋಡುಗರಿಗೆ ಗೋಚರಿಸುತ್ತವೆ. ಬ್ರಹ್ಮನು ಎಡಗೈಯಲ್ಲಿ ಕಮಲ ಮತ್ತು ಬಲಗೈಯಲ್ಲಿ ಅಂಕುಶವನ್ನು ಆಯುಧವಾಗಿ ಹೊಂದಿದ್ದಾನೆ ಬ್ರಹ್ಮನ ಮೂರ್ತಿಯು ಹಿಂದೂ ಧರ್ಮಶಾಸ್ತ್ರ ಗ್ರಂಥಗಳ ಪ್ರಕಾರ ರಚನೆಗೊಂಡಿರುವುದು ಗೋಚರಿಸುತ್ತದೆ. ಬ್ರಹ್ಮನಿಗೆ ಪೂಜೆ ಸಲ್ಲಿಸುವ ಜನರು ಈ ಗ್ರಾಮದಲ್ಲಿರುವುದೊಂದು ವಿಶೇಷ. ಸಾಮಾನ್ಯವಾಗಿ ಧರ್ಮಶಾಸ್ತ್ರ ಗ್ರಂಥಗಳ ಪ್ರಕಾರ ಪೂಜೆ ಸಲ್ಲುವುದಿಲ್ಲ ಆದರೆ ನಮ್ಮ ಅಲಬೂರಿನ ಈ ಬ್ರಹ್ಮದೇವರ ಮೂರ್ತಿಗೆ ನಿತ್ಯವೂ ಪೂಜೆ ಸಲ್ಲುತ್ತವೆ. ಬ್ರಹ್ಮನ ವಿಗ್ರಹವನ್ನು ಪೂಜಿಸುವ ಜನರು ಅಥವಾ ಭಕ್ತರು ನೂಲಿನ ಜನಿವಾರವನ್ನು ಹಾಕಿ ಪೂಜಿಸುತ್ತಾರೆ. ವಿಗ್ರಹವನ್ನು ಪೂಜಿಸುವ ಭಕ್ತರು ಮೂರ್ತಿಯ ಮೇಲೆ ಎಣ್ಣೆ ಸುರಿಯುತ್ತಿರುವುದರಿಂದ ವಿಗ್ರಹವು ಜಿಡ್ಡುಗಟ್ಟಿಹೋಗಿದೆ. ಈ ಊರಿನಲ್ಲಿ ವಾಸಿಸುವ ಲಿಂಗಾಯಿತ ಕ್ಷೌರಿಕರು ಬ್ರಹ್ಮನ ಮೂರ್ತಿಯನ್ನು ಹೆಚ್ಚಾಗಿ ಪೂಜಿಸುತ್ತಾರೆ. ಹೀಗೆ ನಿತ್ಯಪೂಜೆಗೊಳ್ಳುವ ಬ್ರಹ್ಮನ ವಿಗ್ರಹವು ಹಗರಿಬೊಮ್ಮನಹಳ್ಳಿ ತಾಲೂಕು ಅಲಬೂರಿನಲ್ಲಿ ಕಾಣಸಿಗುತ್ತದೆ.



ಎಂ. ನರಸಿಂಹಮೂರ್ತಿ*

# ಶಿಲ್ಪಗಳಲ್ಲಿ ಮಲ್ಲಯುದ್ಧ

ಭಾಗವತ ಪುರಾಣಗಳಲ್ಲಿ ಬರುವ ಮಲ್ಲಯುದ್ಧಕ್ಕೆ ಸಂಬಂಧಿಸಿದ ಕೆಲವು ಪದಗಳು :

೧ **ಪರಿಭ್ರಾಮಣ** – ಕೈಯಲ್ಲಿ ಹಿಡಿದು ಸುತ್ತಲೂ ತಿರುಗಿಸುವುದು ಕುಸ್ತಿ ಮಾಡುವಾಗ ಸಮಯ ನೋಡಿ ಎದುರಾಳಿಯನ್ನು ಹೀಗೆ ಮಾಡುವುದುಂಟು.

೨. **ವಿಕ್ಷೇಪ** – ದೂರದಿಂದ ಎತ್ತಿ ಬಿಸಾಡೋದು.

೩. **ಪರಿರಂಭ** – ಎರಡು ತೋಳಿನ ಮಧ್ಯೆ ಒತ್ತಿ ಹಿಡಿಯುವುದು (ಒದ್ದಾಡಿಸೋದು)

೪. **ಅವಪಾತನ** – ಕೆಳಗೆ ಕೆಡವೋದು, ಬೀಳಿಸೋದು ಕುಸ್ತಿಯಲ್ಲಿ ಹಲವಾರು ಸಂದರ್ಭಗಳಲ್ಲಿ ಕೆಳಕ್ಕೆ ಬೀಳಿಸುವ ಅವಕಾಶವಿದೆ. ಅದರಲ್ಲಿ ಟಾಂಗ್ ಎನ್ನುವ ದಾವ್ ಕೂಡ ಒಂದು.

೫. **ಉತ್ಸರ್ಪಣ** – ಒಂದೇ ಸಮ ಮೇಲಕ್ಕೆ ಎತ್ತಿ ಒಗೆಯುವುದು 'ಉಕಾಡ್' ಎನ್ನುವ ದಾವನ್ನು ಈ ರೀತಿ ಮಾಡಲಾಗುವುದು.

೬. **ಅಪಸರ್ಪಣ** – ಬೆನ್ನಟ್ಟಿ ಹೋಗು ಹಿಂದೆ ಹೋಗೋದು 'ಬಗಲಡೂಬ್' ಎನ್ನುವ ದಾವ್‌ನಲ್ಲಿ ಕೈಕೆಳಗಿನಿಂದ ನುಗ್ಗಿ ಬೆನ್ನಿನ ಹಿಂದೆ ಹೋಗಿ ಆಕ್ರಮಣ ಮಾಡುವ ಅವಕಾಶವಿದೆ.

೭. **ಉತ್ಥಾಪನ** – ಕಾಲು, ಮೊಣಕಾಲು ಎರಡನ್ನು ಮುದ್ದೆ ತರಹ ಮಾಡಿ ಬಿಗಿ ಹಿಡಿದು ಮೇಲಕ್ಕೆ ಎತ್ತುವುದು.

೮. **ಉನ್ನಯನ** – ಎರಡೂ ಕೈಗಳಿಂದ ಎದುರಾಳಿಯನ್ನು ಮೇಲಕ್ಕೆ ಎತ್ತುವುದು. (ಉಕಾಡ್)

೯. **ಚಾಲನಂ** – ಕುತ್ತಿಗೆಯನ್ನು ಕೊಂಕುಳಲ್ಲಿ ಬಂಧಿಸಿ ತಳ್ಳುವುದು 'ಡಾಕ್' ಎನ್ನುವ ದಾವನಲ್ಲಿ ಎದುರಾಳಿಯ ಕುತ್ತಿಗೆಯನ್ನು ಕಂಕುಳಲ್ಲಿ ಬಂಧಿಸಿ ಪೃಷ್ಠದಿಂದ (ಹಿಂಭಾಗ) ಎಗರಿಸುತ್ತಾರೆ.

೧೦. **ಸ್ಥಾಪನ** – ಕೈ ಮೊದಲಾದವುಗಳನ್ನು ಮುದ್ದೆಯಂತೆ ಮಾಡಿ ಚಲನವಿಲ್ಲದಂತೆ ಮಾಡುವುದು.

ಸಂಗ್ರಾಮ ವಿಜಯದಲ್ಲಿ ಹೀಗಿದೆ :

***ಮಲ್ಲಯುದ್ಧಂ ನಿಯುದ್ಧಜ್ಞಾಃ ವಿಂಶದ್ಭೇದಂ ಪ್ರಚಕ್ಷತೇ ।***
***ದ್ವಾತ್ರಿಂಶದ್ ಭೇದಮಪರೇ ಚತ್ವಾರಿಂಶದ್ವಿಧಂತಥಾ ॥***

ದ್ವಂದ್ವಯುದ್ಧವನ್ನು ಬಲ್ಲವರು ಮಲ್ಲಯುದ್ಧದಲ್ಲಿ ೨೦ ಪ್ರಭೇದಗಳನ್ನೂ, ಮತ್ತೆ ಕೆಲವರು ೩೨ ಪ್ರಭೇದಗಳನ್ನೂ ಇನ್ನೂ ಕೆಲವರು ೪೦ ಪ್ರಭೇದಗಳನ್ನು ಗುರುತಿಸುತ್ತಾರೆ.

ಈ ಶಿಲ್ಪಗಳಲ್ಲಿ ಆಧುನಿಕ ಕುಸ್ತಿಯ ಕೆಲವು ಪಟ್ಟುಗಳನ್ನು ಗುರುತಿಸಬಹುದಾದರೂ ಕುಸ್ತಿಯ ಸಂದರ್ಭದಲ್ಲಿ (ಕುಸ್ತಿ ಮಾಡುತ್ತಿರುವಾಗ) ಅವಕಾಶ ದೊರಕಿದಾಗ ಎದುರಾಳಿಯನ್ನು ಗೋಳುಗುಟ್ಟಿಸುವ, ಬೀಳಿಸುವ, ಎಳೆದಾಡುವ, ಅದುಮಿ ಕೊಳ್ಳುವ, ತೊಡರುಗಾಲು ಕೊಟ್ಟುಕೊಂಡು ಆಯತಪ್ಪಿಸುವ ಪವಿತ್ರ ಸ್ಥಿತಿಯಲ್ಲಿ ನಿಂತಿರುವ (ಕುಸ್ತಿಯ ಪ್ರಾರಂಭದ ಹಂತ) ಸೆಡ್ ಹೊಡೆಯುವ ಸನ್ನಿವೇಶಗಳನ್ನು ಗುರುತಿಸಬಹುದಾಗಿದೆ.

ಇಲ್ಲಿ ಗಮನಿಸಬೇಕಾದ ಅಂಶವೆಂದರೆ ಪುರಾತನ ಮಲ್ಲಯುದ್ಧಗಳಲ್ಲಿ ಕೇವಲ ದಾವ ಅಷ್ಟೇ ಅಲ್ಲದೆ ಎದುರಾಳಿಯನ್ನು ವಿವಿಧ ರೀತಿಯಲ್ಲಿ ಸುಸ್ತು ಮಾಡುತ್ತಿದ್ದರು. ಕೆಲವು ಕಡೆ ಶಿಲ್ಪಿಯ ಕಲ್ಪನೆಯೂ ಇಲ್ಲವೆಂದೇನಿಲ್ಲ.

ಮಲ್ಲಶಿಲ್ಪಗಳನ್ನು ಶ್ರವಣಬೆಳಗೊಳದಲ್ಲಿ ಕೂಡ ನೋಡಬಹುದಾಗಿದೆ. ಮೇಗುತಿ ಜಿನಾಲಯ ಕ್ರಿ.ಶ. ೬೩೪. ಬೆಟ್ಟದ ಮೇಲಿರುವುದರಿಂದ ಮೇಗುತಿ ಎಂದು ಹೆಸರು (ಐಹೊಳೆ). ಭಾರತದಲ್ಲಿ ನಿರ್ದಿಷ್ಟ ದಿನಾಂಕ ಹೊಂದಿರುವ ಪ್ರಪ್ರಥಮ ಜಿನಾಲಯ ಅಧಿಷ್ಠಾನದ ಪಟ್ಟಿಕೆಯಲ್ಲಿ, ಮನುಷ್ಯ ಮುಖಗಳಿರುವ ಚೈತ್ಯ ಕಿಂಡಿಗಳು, ದಂಪತಿಗಳು, ಹಾವಾಡಿಗ, ವಾದ್ಯಕಾರರು ಮಲ್ಲರು ಮೊದಲಾದ ಚಿಕ್ಕ ಚಿಕ್ಕ ಉಬ್ಬುಶಿಲ್ಪಗಳ ಅಲಂಕಾರಗಳಿವೆ. **ಚಾಲುಕ್ಯ ಮಾರ್ಗದರ್ಶಿ** – ಲೇಖಕರು ಪರಶುರಾಮಗೋಡಿ.

* # ೨೫೦/ಐ, ಎರಡನೇ ಮುಖ್ಯರಸ್ತೆ, ಹೇಮಾವತಿ ರಸ್ತೆ, ಗಿರಿನಗರ, ಬೆಂಗಳೂರು-೮೫.



ಪಟ್ಟದ ಕಲ್ಲಿನ ಕಂಭದಲ್ಲಿನ ಚಿಕಣಿ ಶಿಲ್ಪ (ಮಲ್ಲಯುದ್ಧದ ಭಂಗಿ)
ಮೇಲಿರುವ ಮಲ್ಲ ಕೆಳಗಿನ ಮಲ್ಲನನ್ನು ಕಾಲುಗಳಿಂದ ಬಂಧಿಸಿದ್ದಾನೆ.



ಪಟ್ಟದ ಕಲ್ಲಿನಲ್ಲಿರುವ ಮಲ್ಲಯುದ್ಧ ಶಿಲ್ಪ.



ಮಲ್ಲನೊಬ್ಬ ಎದುರಾಳಿಯನ್ನು ಒತ್ತಿ ಒಗೆದಿರುವುದು (ಪಟ್ಟದಕಲ್ಲು)



ಪಟ್ಟದ ಕಲ್ಲಿನ ಕಂಭವೊಂದರಲ್ಲಿನ ಮಲ್ಲಯುದ್ಧ



ಪಟ್ಟದಕಲ್ಲಿನಲ್ಲಿನ ಕಂಬದಲ್ಲಿರುವ ಚಿಕಣಿ ಶಿಲ್ಪ



ಸೆಡ್ಡು (ಕೃತದಾವ) ಹೊಡೆಯುತ್ತಿರುವ ಮಲ್ಲ (ಪಟ್ಟದಕಲ್ಲು)



(ಹೊಯ್ಸಳ ಶೈಲಿ) ಮಲ್ಲಯುದ್ಧದ ಒಂದು ಭಂಗಿ ಸೊರಬ ತಾಲ್ಲೂಕಿನ ನಾಡಕಳಸಿಯ ಮಲ್ಲಿಕಾರ್ಜುನ ದೇವಾಲಯದಲ್ಲಿನ ಮಲ್ಲಶಿಲ್ಪ: (ಸುಭಾಷ್ ಕಮ್ಮಾರ್‌ರವರ ಸಂಗ್ರಹದಲ್ಲಿದ್ದ ಚಿತ್ರವನ್ನು ನೋಡಿ ಈ ಚಿತ್ರವನ್ನು ರಚಿಸಿದ್ದು)



ಕಲ್ಲಿನಲ್ಲಿಯ ಕುಬ್ಜ ಶಿಲ್ಪಗಳಲ್ಲಿ ಜಟ್ಟಿಗಳು ಕೈ ಕೈ ಮಿಲಾಯಿಸಿ ಜಗ್ಗಾಡುವುದು ; ಆಕ್ರಮಣಕಾರ ಮಲ್ಲನೊಬ್ಬನಾದರೆ ಅದನ್ನು ತಪ್ಪಿಸಿ (ತೋಡ್) ಪಟ್ಟನ್ನು ಹಾಕಲು ತಯಾರಿರುವ ಮತ್ತೊಬ್ಬ ಮಲ್ಲ. ಪ್ಲೇಟ್ ೧೬ಸಿ ಸೋಮ ನಾಥೇಶ್ವರ ದೇವಾಲಯ ಸೋಮನಾಥಪುರ (ಹೊಯ್ಸಳ ಶೈಲಿ)



ಎರಡು ಕಾಲಿನಿಂದ ಬಿಗಿಯಾಗಿ ಬಂಧಿಸಿ ಜಯಶೀಲನಾದೆನೆಂದು ತನ್ನ ಕಡೆಯವನ ಕೈಯನ್ನು ಹಿಡಿದಿರುವ ಮಲ್ಲ. ಪ್ಲೇಟ್ ೧೬ಡಿ ಸೋಮನಾಥೇಶ್ವರ ದೇವಾಲಯ ಸೋಮನಾಥಪುರ (ಹೊಯ್ಸಳ ಶೈಲಿ)



ಮಲ್ಲಯುದ್ಧದ ಭಂಗಿ : ಸಾವಿರ ಕಂಭಗಳ ಬಸದಿ ಮೂಡಬಿದರೆ



ಮಲ್ಲರಿಬ್ಬರು ಪವಿತ್ರದಲ್ಲಿ (ಪ್ರಥಮ ಸ್ಥಿತಿ) ಆಕ್ರಮಣಕ್ಕೆ ಸಜ್ಜಾಗಿ ನಿಂತಿದ್ದಾರೆ. ಕಲ್ಲಿನ ಕೆತ್ತನೆ ಮಲ್ಲಯುದ್ಧದ ಭಂಗಿ ಇದು ಮೂಡಬಿದರೆಯ ಜೈನ ಮಂದಿರದ ಕಂಭ ಮತ್ತು ಗೋಡೆಗಳ ಮೇಲಿರುವ ಉಬ್ಬು ಶಿಲ್ಪಗಳು



ಇದೊಂದು ಉತ್ತಮ ಕುಸ್ತಿ ಕಲೆ ಹೇಳುವ ಶಿಲ್ಪ : ಮೊದಲನೆಯ ಮಲ್ಲ ಎದುರಾಳಿಯ ಕೈಯನ್ನು ಜಾಗ್ರತೆಯಾಗಿ ಹಿಡಿದು ಪಟ್ಟಿಗಾಗಿ ಹೊಂಚು ಹಾಕುತ್ತಿದ್ದಾನೆ. (ಇಲ್ಲಿ ಬಗಲಿ ನುಗ್ಗೋದು, ಲಗಿ ಎತ್ತುವ ಡಾವ್‌ಗಳನ್ನು ಮಾಡಬಹುದಾಗಿದೆ–ವಿಠ್ಠಲ ದೇವಾಲಯದ ಶಿಲ್ಪ)



ವಿರೂಪಾಕ್ಷ ದೇವಾಲಯದ ಒಳ ಶಿಖರದಲ್ಲಿ (ಕನಕಗಿರಿ (ಶಿಖರ ಬಾಗಿಲು) ಶಂಕರಲಿಂಗಸ್ವಾಮಿ ದೇವಾಲಯದ ಉತ್ತರ ದಿಕ್ಕಿನ ಎರಡನೇ ಕಂಭದಲ್ಲಿನ ಮಲ್ಲಯುದ್ಧ ಶಿಲ್ಪ.



ಅಕ್ಕ ತಂಗಿಯರ ಬೆಟ್ಟದ ದಕ್ಷಿಣಕ್ಕಿರುವ ಕುಸ್ತಿ ಅಖಾಡ ೧ನೇ ಸುತ್ತಿನ ಪೂರ್ವದ್ವಾರ ಎರಡನೇ ಸುತ್ತಿನ ಅಖಾಡದ ಮಹಾದ್ವಾರದ ಬಲಬಾಗಲಲ್ಲಿರುವ ಮಲ್ಲಯುದ್ಧದ ಒಂದು ಭಂಗಿ. ಕುಳಿತು ನಿಂತು ಸಾಧನೆ ಮಾಡುತ್ತಿರುವ ಮಲ್ಲರು (ಹಂಪಿ) ಡೇಕಲಿ, ಟಿಬ್ಬಿ ಡಾವುಗಳನ್ನು ಹೋಲುತ್ತದೆ.



ಅಕ್ಕ ತಂಗಿಯರ ಬೆಟ್ಟದ ಮೇಲಿರುವ ಎರಡನೇ ಸುತ್ತಿನ ಅಖಾಡದ ಮಹಾದ್ವಾರದ ಬಲಭಾಗದಲ್ಲಿ ಉತ್ತರದಲ್ಲಿರುವ ಉಬ್ಬುಶಿಲ್ಪ.



ಅಚ್ಯುತರಾಯ ದೇವಾಲಯದ ಉತ್ತರ ಮುಖದ ೨ನೇ ಶಿಖರ ೨ನೇ ಕಂಭದಲ್ಲಿನ ಶಿಲ್ಪ. ಗರಡಿಯಲ್ಲಿ ಚೆನ್ನಾಗಿ ಸಾಧನೆ ಮಾಡಿ ವಿರಾಮ ತೆಗೆದುಕೊಳ್ಳುವ ಮಲ್ಲ.



ಡಂಬಲ್ಸ್ ರೀತಿಯ ಸಾಧನವನ್ನು ಹಿಡಿದು ವ್ಯಾಯಾಮ ಮಾಡುತ್ತಿರುವ ಮಲ್ಲ (ಹಂಪಿ)



ಸ್ತ್ರೀಯರ ಮಲ್ಲಯುದ್ಧ ಹಂಪಿಯ ಮಹಾನವಮಿ ದಿಬ್ಬದಲ್ಲಿ.



ಅಚ್ಯುತರಾಯ ದೇವಾಲಯದ ಹೊರಪ್ರಾಂಗಣದ ಪೂರ್ವ ಆಗ್ನೇಯ ಬಾಗಿಲಿನ ೧೨ನೇ ಕಂಭದಲ್ಲಿನ ಶಿಲ್ಪ ಯೋಗಾಸನ ಮಲ್ಲನ ಪ್ರಾಥವಿಕ ವ್ಯಾಯಾಮ.



ಹಜಾರ ರಾಮಸ್ವಾಮಿ ದೇವಾಲಯದ ದ್ವಾರದ ಪೂರ್ವ ಮುಖದ ಆಗ್ನೇಯ ದಿಕ್ಕಿನ ಒಳಭಾಗಲ್ಲಿನ ಬಾವಿಯ ಪಕ್ಕದಲ್ಲಿನ ಶಿಲ್ಪ. ಈ ಶಿಲ್ಪದಲ್ಲಿ ಚುರುಕುತನದ ಕುಸ್ತಿ ಎದ್ದುಕಾಣುತ್ತದೆ. ಡಾಕ್ ಎಂಬ ದಾವ್‌ನ ಪ್ರಥಮ ಹಂತದ ಹೋಲಿಕೆ ಕಾಣುತ್ತದೆ. (ಕುಸ್ತಿ ಕಲೆಯ ಭಂಗಿ)



ಮಲ್ಲಯುದ್ಧದ ಒಂದು ಭಂಗಿ.



ಆಗ್ನೇಯದ ೧೦ನೇ ಕಂಭದಲ್ಲಿ ಇರುವ ಶಿಲ್ಪ (ಪಶ್ಚಿಮಕ್ಕೆ). ಕರೇಲ ಅಥವಾ ಗದೆಯನ್ನು ತಿರುಗಿಸಿ ವ್ಯಾಯಾಮ ಮಾಡುವ ಮಲ್ಲ.



ಅಚ್ಯತರಾಯ ದೇವಾಲಯ ಒಳಪ್ರಾಣಗದಲ್ಲಿ ಪಶ್ಚಿಮ ಬಾಗಿಲಿನ ಶಿಖರದ ಒಂದನೇ ಕಂಬಲ್ಲಿರುವ ಶಿಲ್ಪ. ಮಲ್ಲರಿಬ್ಬರು ಕೈ ಕೈ ಮಿಲಾಯಿಸಿ ಜಗ್ಗಾಡುವ ಶಿಲ್ಪ (ಹಂಪಿ).



ಮಲ್ಲಯುದ್ಧಕ್ಕೆ ಸಜ್ಜು (ಹಂಪಿ).



ಮಲ್ಲಯುದ್ಧದ ಭಂಗಿ (ಹಂಪಿ).



ಕೈಯಲ್ಲಿ ಸಾಧನದೊಡನೆ ವ್ಯಾಯಾಮ ಮಾಡುತ್ತಿರುವ ಮಲ್ಲ.



ಮಹಾನವಮಿ ದಿಬ್ಬದ ಪೂರ್ವ ಮುಖದಲ್ಲಿನ ಮಂಟಪದ ಉತ್ತರ ಭಾಗದಲ್ಲಿನ ಕುಸ್ತಿಯ ಭಂಗಿ.



ಅಚ್ಯುತರಾಯ ದೇವಾಲಯದ ಉತ್ತರ ಮುಖದ ಎರಡನೇ ಶಿಖರ ೫ನೇ ಕಂಭದಲ್ಲಿ ಮಲ್ಲವೀರನೊಬ್ಬನ ಶಿಲ್ಪ.



ಮಹಾನವಮಿ ದಿಬ್ಬದಲ್ಲಿನ ಶಿಲ್ಪ. ಸೋತ ಮಲ್ಲ ದುಃಖ ತಡೆಯಲಾರದೆ ಮುಖ ಮುಚ್ಚಿಕೊಂಡಿದ್ದರೆ, ಗೆದ್ದ ಮಲ್ಲ ವಿಜಯೋತ್ಸಾಹದಿಂದ ಕೈ ಮುಗಿಯುತ್ತಿದ್ದಾನೆ. (ಹಂಪಿ).



ವಜ್ರಮುಷ್ಠಿ ಕಾಳಗದ ಹೋಲಿಕೆ ಇದೆ ವಜ್ರಮುಷ್ಠಿ ಕಾಳಗ ಆಸಕ್ತಿಯಿಂದ ವೀಕ್ಷಿಸುವುದು ಈ ಶಿಲ್ಪಗಳು ಹಂಪಿಯ ಮಹಾನವಮಿ ದಿಬ್ಬದಲ್ಲಿದೆ.



ಅಚ್ಯುತರಾಯ ದೇವಾಲಯದ ನವರಂಗ ಮಂಟಪದ ಪಶ್ಚಿಮ ಬಾಗಿಲಿನ ಎಡಬದಿ ಕಂಬದಲ್ಲಿ ಕುಸ್ತಿ ತೊಡೆಯುತ್ತಿರುವ ಮಲ್ಲವೀರ. (ಕೃತದಾವ್)



ಮಲ್ಲಯುದ್ಧ ಭಂಗಿ : ಬೆಂಗಳೂರು ಹಲಸೂರು ಸೋಮೇಶ್ವರ ದೇವಾಲಯದ ಕಂಭದಲ್ಲಿ.



ಹಂಪಿಯಲ್ಲಿರುವ ಈ ಮಲ್ಲಯುದ್ಧದ ಭಂಗಿಯ ಶಿಲ್ಪವನ್ನು ಬೆಂಗಳೂರು ಹಲಸೂರು ಸೋಮೇಶ್ವರ ದೇವಾಲಯದಲ್ಲಿ ಕಾಣಬಹುದು.



ಮಲ್ಲಯುದ್ಧಕ್ಕೆ ತಯಾರಾಗಿ ನಿಂತಿರುವ ಮಲ್ಲರು. ತೀರ್ಥಹಳ್ಳಿಯ ಶ್ರೀ ಭೀಮೇಶ್ವರ ದೇವಾಲಯದ ಹಿಂಭಾಗದ ಗೋಡೆಯಲ್ಲಿರುವ ಉಬ್ಬು ಶಿಲ್ಪ (ಕೆಳದಿ ಶೈಲಿ).



ನಂಜನಗೂಡಿನ ಶ್ರೀ ನಂಜುಂಡೇಶ್ವರ ದೇವಾಲಯ ಪ್ರವೇಶಿಸುತ್ತಿದ್ದಂತೆ ಎಡಭಾಗದ ಎತ್ತರದಲ್ಲಿರುವ ವಜ್ರಮುಷ್ಠಿ ಕಾಳಗದ ಶಿಲ್ಪ. ಇದರ ಎದುರು ಭಾಗದಲ್ಲಿ ಮಲ್ಲ ಎದುರಾಳಿಯನ್ನು ಬೀಳಿಸಿದ್ದಾನೆ. ಆದರೆ ಶಿಲ್ಪ ಅಷ್ಟು ಸ್ಪಷ್ಟವಾಗಿಲ್ಲ. ಒಂದು ಕೈ ತಲೆ ಹಿಡಿದು ಮತ್ತೊಂದು ಕೈಯಿಂದ (ಆಯುಧ ಧರಿಸಿದ) ಪ್ರಹಾರ ಮಾಡುತ್ತಿರುವುದು.



ಕೋಲಾರ ಜಿಲ್ಲೆಯ ಮುಳಬಾಗಿಲ ಶ್ರೀ ಆಂಜನೇಯ ದೇವಸ್ಥಾನದ ಕಂಭದಲ್ಲಿನ (ಮಲ್ಲಯುದ್ಧ) ಮಲ್ಲ ಶಿಲ್ಪದ ಭಂಗಿ.

(ಪಟ್ಟದಕಲ್ಲಿನಲ್ಲಿ ಛಾಯಾಚಿತ್ರ ತೆಗೆಯಲು ಸಹಕರಿಸಿದ [illegible] ಬಿರಾದಾರಿಯವರಿಗೂ ಹಂಪೆಯಲ್ಲಿ ಸಹಕರಿಸಿದ ಮಲ್ಲಿಕಾರ್ಜುನರವರಿಗೂ ಕೃತಜ್ಞತೆಗಳು.)



ಡಾ. ಮಲ್ಲಿಕಾರ್ಜುನ ಸಿ. ಬಾಗೋಡಿ*

# ಸೇಡಂನ ಶ್ರೀ ಶಿವಶಂಕರಸ್ವಾಮಿ ಮಠದ ಭಿತ್ತಿಚಿತ್ರಗಳು

ಗುಲಬರ್ಗಾ ಜಿಲ್ಲೆಯ ತಾಲೂಕು ಕೇಂದ್ರವಾದ ಸೇಡಂ ಭೀಮಾನದಿಯ ಉಪನದಿಗಳಾದ ಕಾಗೀಣಾ ಮತ್ತು ಕಮಲಾವತೀ ನದಿಗಳ ಮಧ್ಯದಲ್ಲಿ ಮೈಚಾಚಿದ, ಫಲವತ್ತಾದ ಪ್ರದೇಶವಾಗಿದೆ. ನೆರೆಯ ರಾಜ್ಯವಾದ ಆಂಧ್ರಪ್ರದೇಶದ ತೆಲಂಗಾಣ ಸೀಮೆಯ ಸರಹದ್ದಿಗೆ ಹೊಂದಿಕೊಂಡಿರುವುದರಿಂದ ಇಲ್ಲಿ ಕನ್ನಡ ಮತ್ತು ತೆಲುಗು ಭಾಷೆ ಮಾತನಾಡುವ ಜನರಿದ್ದಾರೆ. ಜಿಲ್ಲಾ ಕೇಂದ್ರವಾದ ಗುಲಬರ್ಗಾದಿಂದ ೫೦ ಕಿ.ಮೀ. ದೂರವಿದ್ದು, ಮುಂಬೈಯಿಂದ ಹೈದರಾಬಾದಿಗೆ ಹೋಗುವ ರೈಲುಮಾರ್ಗದ ಸಂಪರ್ಕ ಹೊಂದಿದೆ.

ಸೇಡಂ ಪಟ್ಟಣಕ್ಕೆ ಅತ್ಯಂತ ಪ್ರಾಚೀನ ಐತಿಹ್ಯವಿದೆ. ಮಾನ್ಯಖೇಟದ ರಾಷ್ಟ್ರಕೂಟರು, ಕಲ್ಯಾಣ ಚಾಲುಕ್ಯರು, ಅರಲು ಮುನ್ನೂರಿನ ಹೈಹಯರು, ಗೋಲ್ಕೊಂಡಾದ ಕುತುಬ್ ಷಾಹಿಗಳು, ಹೈದರಾಬಾದ ನಿಜಾಮರು ಈ ಪ್ರದೇಶದಲ್ಲಿ ಆಳ್ವಿಕೆಯನ್ನು ಮಾಡಿದ ಪ್ರಮುಖ ರಾಜಮನೆತನಗಳು. ೯ನೆಯ ಶತಮಾನದ ರಾಷ್ಟ್ರಕೂಟ ಚಕ್ರವರ್ತಿ ಅಮೋಘವರ್ಷ ನೃಪತುಂಗನ ಆಳ್ವಿಕೆ (೮೧೪-೮೭೮)ಯ ಅವಧಿಯಲ್ಲಿ ಮಾನ್ಯಖೇಟವು ರಾಷ್ಟ್ರಕೂಟರ ರಾಜಧಾನಿಯಾಗಿತ್ತು. ಆಗ



ಈ ರಾಜಧಾನಿಯ ಸುತ್ತಮುತ್ತಲಿನ ಪ್ರದೇಶಗಳಾದ ಸೇಡಂ, ದಂಡೋತಿ, ನೀಲಹಳ್ಳಿ ಮತ್ತು ಕೊಂಕನಹಳ್ಳಿಗಳು ಮಾನ್ಯಖೇಟದ ಅವಿಭಾಜ್ಯ ಅಂಗಗಳಾಗಿದ್ದವು. ನೃಪತುಂಗನ ಆಡಳಿತಾವಧಿಯಲ್ಲಿ ಪ್ರಧಾನ ಕಚೇರಿ ಹಾಗೂ ರಾಣಿಯರ ಅಂತಃಪುರಗಳು ಸೇಡಂನಲ್ಲಿದ್ದವು. ಸೈನ್ಯದ ಕೇಂದ್ರವು ದಂಡೋತಿಯಲ್ಲಿದ್ದರೆ, ನೀಲಹಳ್ಳಿ ಮತ್ತು ಕೊಂಕನಹಳ್ಳಿಗಳಲ್ಲಿ ಖಜಾನೆಗಳಿದ್ದವು[೧] ಎಂಬುದು ವಿದ್ವಾಂಸರ ಅಭಿಪ್ರಾಯವಾಗಿದೆ.

ಪ್ರಾಚೀನ ಕಾಲದಲ್ಲಿ 'ಸೇಡಂ'ನ್ನು 'ಸೇಡಿಂಬ' ಎಂಬ ಹೆಸರಿನಿಂದ ಕರೆಯುತ್ತಿದ್ದ ಉಲ್ಲೇಖಗಳು ಸ್ಥಳೀಯ ಶಾಸನಗಳಿಂದ ತಿಳಿದುಬರುತ್ತದೆ. ಕಾಲಾಂತರದಲ್ಲಿ ಸೇಡಿಂಬ ಎಂಬ ಪದವೇ ಜನರ ಬಾಯಲ್ಲಿ ಸೇಡಂ ಆಗಿ ರೂಪಾಂತರ ಹೊಂದಿತು ಎನ್ನಲಾಗುತ್ತದೆ.

ಸೇಡಂ ಪಟ್ಟಣವು ಪೌರಾಣಿಕ ಹಿನ್ನೆಲೆಯೊಂದಿಗೆ ಚಾರಿತ್ರಿಕ ಹಾಗೂ ರಾಜಕೀಯ ದೃಷ್ಟಿಯಿಂದಲೂ ಮಹತ್ವವನ್ನು ಪಡೆದಿದೆ. ಸೇಡಂ ಮತ್ತು ಈ ಪ್ರದೇಶದ ಮಾನ್ಯಖೇಟ ನಗರಗಳು ಕಾಲಕಾಲಕ್ಕೆ ರಾಜಧಾನಿಯಾಗಿ, ಅಗ್ರಹಾರವಾಗಿ, ಸಾಮ್ರಾಜ್ಯದ ಕೇಂದ್ರಸ್ಥಾನವಾಗಿ ಅಲ್ಲದೇ ಧಾರ್ಮಿಕ ಮತ್ತು ಆಧ್ಯಾತ್ಮಿಕ ಕೇಂದ್ರಗಳಾಗಿ ಇತಿಹಾಸದಲ್ಲಿ ಪ್ರಾಮುಖ್ಯತೆಯನ್ನು ಪಡೆದರೆ, ಈ ನೆಲದ ಮಣ್ಣಿನಲ್ಲಿ ಹುಟ್ಟಿ, ಬೆಳೆದು ಜೀವನದ ವಿವಿಧ ಕ್ಷೇತ್ರಗಳಲ್ಲಿ ಸಾಧನೆ ಮಾಡಿದ ಕನ್ನಡದ ಶ್ರೇಷ್ಠ ಕವಿ ಶ್ರೀವಿಜಯ, ಜಗತ್ಪ್ರಸಿದ್ಧ ಗಣಿತ ತಜ್ಞರಾದ ಮಹಾವೀರಾಚಾರ್ಯ, ಮುನಿಶ್ರೇಷ್ಠರಾದ ಜಿನಸೇನಾಚಾರ್ಯ, ಇಂದ್ರನಂದಿ, ಸಿಂಹನಂದಿ, ತ್ರೈವಿದ್ಯಾ ಭಟ್ಟಾರಕ, ರಾಮಚಂದ್ರ ಮುನಿ, ದ್ವೈತ ಸಿದ್ಧಾಂತದ ಮೇಲೆ ಟೀಕೆಯನ್ನು ಬರೆದು ಟೀಕಾಚಾರ್ಯರೆನಿಸಿಕೊಂಡ ಜಯತೀರ್ಥ ಯತಿಗಳು[೨] ತಮ್ಮ ದೇಹದ ಚರ್ಮವನ್ನೇ ತೆಗೆದು ಪಾದುಕೆಗಳನ್ನು ಮಾಡಿ ಬಸವೇಶ್ವರರಿಗೆ ಅರ್ಪಿಸಿದ ಬಿಜ್ಜನಹಳ್ಳಿಯ ಹರಳಯ್ಯ ದಂಪತಿಗಳು ಈ ಭಾಗದ ನೆಲದಲ್ಲಿ ಅವತರಿಸಿದ್ದಾರೆ.

*ಅಧ್ಯಾಪಕರು, ದೃಶ್ಯಕಲಾ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ, ವಿದ್ಯಾರಣ್ಯ.

ಅದೇ ರೀತಿಯಾಗಿ ರುದ್ನೂರಿನ ಪೂಜ್ಯ ಶ್ರೀ ಸಿದ್ದೇಶ್ವರ ಸ್ವಾಮಿಗಳು, ಸೇಡಂನ ಶ್ರೀ ಕಂಬದ ಯತಿಗಳು, ಶ್ರೀ ಶಿವಶಂಕರ ಸ್ವಾಮಿಗಳು, ಸಪ್ಪಣ್ಣಾರ್ಯರು, ಮಡಿವಾಳೇಶ್ವರರು ಅಲ್ಲದೇ ಯಾನಾಗುಂದಿಯ ಮಾತೆ ಮಾಣಿಕೇಶ್ವರಿ. ಈ ಮಹನೀಯರ ಹೆಸರಿನಲ್ಲಿ ಕಟ್ಟಲ್ಪಟ್ಟ ಅದೆಷ್ಟೋ ಮಠ-ಮಂದಿರಗಳೂ ಇಲ್ಲಿವೆ. ಅವುಗಳಲ್ಲಿ ಸೇಡಂನ ಶ್ರೀ ಶಿವಶಂಕರಸ್ವಾಮಿ ಮಠವೂ ಒಂದು.

**ಶ್ರೀ ಶಿವಶಂಕರಸ್ವಾಮಿ ಮಠ :** ಸೇಡಂ ಪಟ್ಟಣದ ಪ್ರಮುಖ ಆಕರ್ಷಣೀಯ ಕೇಂದ್ರಗಳಲ್ಲಿ ಶ್ರೀ ಶಿವಶಂಕರಸ್ವಾಮಿ ಮಠವೂ ಒಂದು. ಈ ಮಠಕ್ಕೆ ಸುಮಾರು ಮುನ್ನೂರು ವರ್ಷಗಳಿಗೂ ಅಧಿಕ ಕಾಲದ ಇತಿಹಾಸ ಮತ್ತು ಉಜ್ವಲ ಪರಂಪರೆಯಿದೆ. ಶ್ರೀ ಕಂಬದ ಯತಿಗಳು ಈ ಮಠದ ಮೂಲಪುರುಷರು. ಇವರು ಮೂಲತಃ ರಾಯಚೂರು ಜಿಲ್ಲೆಯ ಬೂದಿಗುಂಪಿ ಗ್ರಾಮದ ಶ್ರೀ ರಂಭಾಪುರಿ ಶಾಖಾಮಠದ ಅಧಿಪತಿಗಳು. ಸಾತ್ವಿಕ ಜಂಗಮ ಮೂರ್ತಿಗಳಾದ ಪೂಜ್ಯ ಶ್ರೀ ಕಂಬದ ಯತಿಗಳು ಧರ್ಮಜಾಗೃತಿಗಾಗಿ ಸಂಚಾರ ಕೈಗೊಂಡ ಸಂದರ್ಭದಲ್ಲಿ ಅನೇಕ ಪವಾಡಗಳನ್ನು ಮಾಡಿ ಭಕ್ತಜನರ ಇಷ್ಟಾರ್ಥಗಳನ್ನು ಈಡೇರಿಸುತ್ತ ಅನೇಕ ಮಠಗಳನ್ನು ನಿರ್ಮಾಣಗೊಳಿಸಿದರು ಎಂದು ಹೇಳಲಾಗುತ್ತದೆ.

ಮುಂದೊಮ್ಮೆ ಸೇಡಂ ಪುರಜನರು ಪೂಜ್ಯ ಶ್ರೀ ಕಂಬದ ಯತಿಗಳಿಗೆ ಒಂದು ಮಠವನ್ನು ಕಟ್ಟಿಸುತ್ತಾರೆ. ಭಕ್ತರು ತಾವು ಕಟ್ಟಿಸಿದ ಮಠಕ್ಕೆ ಪೂಜ್ಯರನ್ನು ಕರೆತರಬೇಕೆನ್ನುವಾಗಲೇ ಶ್ರೀ ಕಂಬದ ಯತಿಗಳು ಜೀವಂತ ಸಮಾಧಿ ಹೊಂದುವ ಇಚ್ಛೆಯನ್ನು ವ್ಯಕ್ತಪಡಿಸುತ್ತಾರೆ[೩]. ಅಲ್ಲದೆ ಪೋಲಕಪಲ್ಲಿಯ ಮಠದಲ್ಲಿರುವ ತಮ್ಮ ಶಿಷ್ಯ ಶಿವಶಂಕರೇಶ್ವರನನ್ನು ಸೇಡಂನ ಭಕ್ತರು ತಮಗಾಗಿ ಕಟ್ಟಿಸಿದ ಮಠದ ಅಧಿಕಾರಿಗಳನ್ನಾಗಿ ನೇಮಿಸುತ್ತಾರೆ. ಅಂದಿನಿಂದ ಈ ಮಠವನ್ನು ಶಿವಶಂಕರಸ್ವಾಮಿ ಮಠವೆಂದು ಕರೆಯಲಾಯಿತು. ಪೂಜ್ಯ ಶ್ರೀ ಕಂಬದ ಯತಿಗಳು ಸೇಡಂ, ಚಿತ್ತಾಪೂರ, ಪೋಲಕಪಲ್ಲಿಗಳಲ್ಲದೇ ಈ ಪ್ರದೇಶದ ಸುತ್ತಮುತ್ತಲಿನ ಅನೇಕ ಕಡೆಗಳಲ್ಲಿ ಮಠಗಳನ್ನು ಸ್ಥಾಪಿಸಿದ್ದಾರೆ. ಈ ಎಲ್ಲ ಮಠಗಳಿಗೆ ಸೇಡಂನಲ್ಲಿನ ಶ್ರೀ ಶಿವಶಂಕರಸ್ವಾಮಿ ಮಠವೇ ಕೇಂದ್ರ ಮಠವಾಗಿದೆ.

ಶ್ರೀ ಶಿವಶಂಕರಸ್ವಾಮಿ ಮಠವು ಈ ಭಾಗದ ಧಾರ್ಮಿಕ, ಸಾಮಾಜಿಕ ಹಾಗೂ ಸಾಂಸ್ಕೃತಿಕ ಕ್ಷೇತ್ರದಲ್ಲಿ ವಿಶಿಷ್ಟ ಸೇವೆಯನ್ನು ಸಲ್ಲಿಸುತ್ತ ಮುಂದುವರೆದಿದೆ. ಸ್ವಾತಂತ್ರ್ಯ ಪೂರ್ವದಲ್ಲಿ ರಜಾಕಾರರ ಹಾವಳಿಯಲ್ಲಿ ಹೈದರಾಬಾದ ಕರ್ನಾಟಕ ಪ್ರದೇಶದ ಮಠ-ಮಂದಿರಗಳಿಗೆ ಮಸುಕು ಕವಿದಂತಾಗಿತ್ತು. ರಜಾಕಾರರ ದಬ್ಬಾಳಿಕೆಯಿಂದ ಅನೇಕ ಮಠ-ಮಂದಿರಗಳಲ್ಲಿ ಪೂಜೆ-ಪ್ರವಚನಗಳು ನಿಂತುಹೋಗಿದ್ದವು. ಅಂತಹ ದುರ್ಬರ ಸಂದರ್ಭದಲ್ಲಿಯೂ ಶ್ರೀ ಶಿವಶಂಕರಸ್ವಾಮಿ ಮಠದಲ್ಲಿ ಪೂಜೆ-ಪ್ರವಚನಗಳು ಯಾವ [illegible] ನಡೆದಿದ್ದವು. ಸ್ವತಃ ಹೈದರಾಬಾದಿನ ನಿಜಾಮನೇ ಈ ಮಠಕ್ಕೆ ರಾಜರಕ್ಷಣೆ ಕೊಟ್ಟ ಸಂಗತಿ[೪] ಸ್ಥಳೀಯ ದಾಖಲೆಗಳಿಂದ ತಿಳಿದುಬರುತ್ತದೆ.

ಸುಮಾರು ಮೂರು ಶತಮಾನಗಳಿಗೂ ಅಧಿಕಕಾಲದ ಇತಿಹಾಸವನ್ನು ಹೊಂದಿರುವ ಈ ಮಠದಲ್ಲಿ ಇದುವರೆಗೂ ಎಂಟು ಜನ ಪೂಜ್ಯರು ಶ್ರೀಮಠದ ಪೀಠವನ್ನಲಂಕರಿಸಿದ್ದಾರೆ. ಸದ್ಯದ ಪೀಠಾಧಿಪತಿಗಳಾದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯರು[೫] ಒಂಭತ್ತನೆಯವರು. ಬೆಳಗಾವಿ ಜಿಲ್ಲೆಯ ಚಿಕ್ಕುಂಬಿ ಗ್ರಾಮದ ಜಂಗಮ ಮನೆತನದಲ್ಲಿ ಜನಿಸಿದ ಪೂಜ್ಯರು ತಮ್ಮ ಪ್ರಾಥಮಿಕ ಶಿಕ್ಷಣವನ್ನು ಸ್ವಗ್ರಾಮದಲ್ಲಿಯೇ ಮುಗಿಸಿದರು. ಮುಂದೆ ಕೇದಾರ ಮಠದ ಜಗದ್ಗುರು ಶ್ರೀ ಶಾಂತಲಿಂಗ ಶಿವಾಚಾರ್ಯರ ಸನ್ನಿಧಿಯಲ್ಲಿದ್ದು ಜ್ಯೋತಿಷ್ಯಶಾಸ್ತ್ರ, ವೈದ್ಯಶಾಸ್ತ್ರ, ಧರ್ಮಶಾಸ್ತ್ರಗಳನ್ನು ಅಧ್ಯಯನ ಮಾಡಿದ್ದಾರೆ. ೧೯೭೪ರಲ್ಲಿ ತಮ್ಮ ೨೪ನೇ ವಯಸ್ಸಿನಲ್ಲಿ ಸೇಡಂನ ಶ್ರೀ ಶಿವಶಂಕರಸ್ವಾಮಿ ಮಠದ ಅಧಿಕಾರವನ್ನು ವಿಧಿವತ್ತಾಗಿ ವಹಿಸಿಕೊಂಡಿದ್ದಾರೆ. ಪೂಜ್ಯರು ಶಿಕ್ಷಣ, ಸಮಾಜದ ಬಗ್ಗೆ ಅಪಾರವಾದ ಕಾಳಜಿಯನ್ನು ಹೊಂದಿದವರಾಗಿದ್ದಾರೆ. ಸ್ಥಳೀಯ ಶ್ರೀ ಕೊತ್ತಲ ಬಸವೇಶ್ವರ ಭಾರತೀಯ ಶಿಕ್ಷಣ ಸಂಸ್ಥೆಗೆ ಮಠದ ೫೮ ಎಕರೆ ಭೂಮಿಯನ್ನು ದಾನವಾಗಿ ನೀಡಿ ತಮಗಿದ್ದ ಶೈಕ್ಷಣಿಕ ಕಳಕಳಿಯನ್ನು ತೋರಿಸಿಕೊಟ್ಟಿದ್ದಾರೆ. ಮಠದ ಎಲ್ಲ ಜವಾಬ್ದಾರಿಗಳನ್ನು ಅತ್ಯಂತ ಸಮರ್ಥ ರೀತಿಯಲ್ಲಿ ಮುಂದುವರೆಸಿಕೊಂಡು ಬಂದಿದ್ದಾರೆ.

**ಮಠದ ಭಿತ್ತಿಚಿತ್ರಗಳು :** ಶ್ರೀ ಶಿವಶಂಕರಸ್ವಾಮಿ ಮಠದೊಳಗೆ ಪ್ರವೇಶ ಪಡೆಯುತ್ತಲೇ ಎಡಭಾಗದಲ್ಲಿ ಪೂಜ್ಯರು ಆಸೀನರಾಗುವ ಕೋಣೆಯ ಮೇಲ್ಬದಿಯಲ್ಲಿ ಸುಮಾರು ೩೫ ಅಡಿ ಉದ್ದ ಹಾಗೂ ೧೪ ಅಡಿ ಅಗಲ ವಿಸ್ತೀರ್ಣದ ವಿಶಾಲ ಕೋಣೆಯೊಂದಿದೆ. ಈಗಿನ ಪೀಠಾಧಿಪತಿಗಳಾದ ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯರ ಪೂರ್ವದವರು ವಿಸ್ತರಿಸಿ ಕಟ್ಟಿಸಿದರೆನ್ನಲಾದ ಈ ಕೋಣೆಯು ಶತಮಾನಕ್ಕೂ ಹಳೆಯದು. ಈ ಕೋಣೆಯ ನಾಲ್ಕೂ ಗೋಡೆಗಳಲ್ಲಿ ಭಿತ್ತಿಚಿತ್ರಗಳು ರಚನೆಗೊಂಡಿವೆ. ಚಿತ್ರರಚನೆಗಾಗಿ ಸಿದ್ಧಪಡಿಸಲಾದ ಭಿತ್ತಿಯು ಗಾರೆ ಭಿತ್ತಿಯಾಗಿದೆ.

ಈ ಮೊದಲು ವಿವರಿಸಿದಂತೆ ಶ್ರೀ ಶಿವಶಂಕರಸ್ವಾಮಿ ಮಠದ ಈಗಿನ ಪೀಠಾಧಿಪತಿಗಳಾದ ಪೂಜ್ಯ ಶ್ರೀ ಮಲ್ಲಿಕಾರ್ಜುನ ಶಿವಾಚಾರ್ಯರ ಪೂರ್ವದವರು ವಿಸ್ತರಿಸಿ ಕಟ್ಟಿಸಿದರೆನ್ನಲಾದ ಭಿತ್ತಿಚಿತ್ರಗಳಿರುವ ಕೋಣೆಯು ಸುಮಾರು

ಒಂದು ಶತಮಾನಕ್ಕೂ ಹಳೆಯದಾಗಿದ್ದು, ಈ ಕೋಣೆಯಲ್ಲಿರುವ ಭಿತ್ತಿಚಿತ್ರಗಳೂ ಅದೇ ಕಾಲಾವಧಿಯಲ್ಲಿ ರಚನೆಗೊಂಡಿವೆ. ಈ ಕೋಣೆಯ ನಾಲ್ಕೂ ಗೋಡೆಗಳ ಮೇಲೆ ಚಿತ್ರಿಸಲಾದ ಚಿತ್ರಗಳು ಪೌರಾಣಿಕ, ಧಾರ್ಮಿಕ ಹಾಗೂ ಸಾಮಾಜಿಕ ವಿಷಯಗಳೊಂದಿಗೆ ನಿಸರ್ಗಚಿತ್ರ ಹಾಗೂ ಅಲಂಕಾರಿಕ ವಿನ್ಯಾಸಗಳಿಂದ ಕೂಡಿವೆ. ಈ ಚಿತ್ರಗಳನ್ನು ೧. ಪೂರ್ವಗೋಡೆಯ ಚಿತ್ರಗಳು, ೨. ಪಶ್ಚಿಮಗೋಡೆಯ ಚಿತ್ರಗಳು, ೩. ಉತ್ತರಗೋಡೆಯ ಚಿತ್ರಗಳು ಹಾಗೂ ೪. ದಕ್ಷಿಣ ಗೋಡೆಯ ಚಿತ್ರಗಳೆಂದು ವರ್ಗೀಕರಿಸಿಕೊಳ್ಳಲಾಗಿದೆ. ಪ್ರತಿಯೊಂದು ಗೋಡೆಯ ಮೇಲೆ ಚಿತ್ರಿಸಲಾದ ಚಿತ್ರಗಳನ್ನು ಈ ಮುಂದೆ ಅತ್ಯಂತ ವಿಸ್ತೃತವಾಗಿ ವಿವರಿಸಲಾಗಿದೆ.

**ಪೂರ್ವಗೋಡೆಯ ಚಿತ್ರಗಳು :** ಭಿತ್ತಿಚಿತ್ರಗಳಿರುವ ಕೋಣೆಯೊಳಗೆ ಪ್ರವೇಶ ಪಡೆಯುತ್ತಲೇ ಎದುರಿಗಿರುವ ಪೂರ್ವಗೋಡೆಯು ೭ ಅಡಿ ಎತ್ತರ ಹಾಗೂ ೧೪ ಅಡಿ ಅಗಲವಾದ ಅಳತೆಯನ್ನು ಹೊಂದಿದೆ. ಈ ಗೋಡೆಯಲ್ಲಿ ಒಟ್ಟು ಮೂರು ಚಿತ್ರಿತ ಪಟ್ಟಿಕೆಗಳಿವೆ. ಮೊದಲ ಪಟ್ಟಿಕೆಯು ಗಾತ್ರದಲ್ಲಿ ದೊಡ್ಡದಾಗಿದ್ದು, ಇದರಲ್ಲಿರುವ ಚಿತ್ರ ಅರಮನೆಯ ಸನ್ನಿವೇಶದಿಂದ ಕೂಡಿದೆ. ಮಧ್ಯದಲ್ಲಿ ವಿಶಾಲವಾದ ರಸ್ತೆಯನ್ನು ತೋರಿಸಲಾಗಿದ್ದು, ಈ ರಸ್ತೆಯಂಚಿಗೆ ಬೀದಿ ದೀಪಗಳನ್ನೂ ತೋರಿಸಲಾಗಿರುವುದರಿಂದ ಚಿತ್ರವು ನಾಟಕ ಪರದೆಯ ನೆನಪನ್ನು ಮೂಡಿಸುತ್ತದೆ. ಕಂದುಗೆಂಪು, ಹಳದಿ ಹಾಗೂ ನೀಲಿ ವರ್ಣಗಳನ್ನು ಈ ಚಿತ್ರದಲ್ಲಿ ಬಳಸಲಾಗಿದೆ.

ಮಧ್ಯದ ಪಟ್ಟಿಕೆಯಲ್ಲಿರವು ಚಿತ್ರ ಅಲಂಕಾರಿಕ ವಿನ್ಯಾಸದಿಂದ ಕೂಡಿದೆ. ಹಳದಿವರ್ಣದ ಹಿನ್ನೆಲೆಯಲ್ಲಿ ಕೆಂಪು, ಹಸಿರು ಹಾಗೂ ನೀಲಿವರ್ಣಗಳಿಂದ ಎಲೆ, ಹೂಬಳ್ಳಿಯ ವಿನ್ಯಾಸವನ್ನು ಚಿತ್ರಿಸಲಾಗಿದೆ. ಈ ಗೋಡೆಯಲ್ಲಿನ ಮೂರನೆಯ ಪಟ್ಟಿಕೆಯೂ ಸಹ ಅರಮನೆಯ ಸನ್ನಿವೇಶದಿಂದ ಕೂಡಿದೆ. ಈ ಚಿತ್ರದ ಮಧ್ಯದಲ್ಲಿ ಹೈದರಾಬಾದಿನ ಚಾರಮಿನಾರ್ ಮಾದರಿಯ ಕಟ್ಟಡವನ್ನು ತೋರಿಸಲಾಗಿದೆ. ಕಂದುಗೆಂಪು, ನೀಲಿ ಹಾಗೂ ಹಳದಿವರ್ಣಗಳನ್ನು ಪ್ರಧಾನವಾಗಿ ಬಳಸಲಾಗಿದೆ. ಅಲ್ಲದೆ ಈ ಚಿತ್ರದಲ್ಲಿರುವ ಕಟ್ಟಡಗಳಿಗೆ ಕಂದುಗೆಂಪು ವರ್ಣದ ಸಾಕಷ್ಟು ಗೆರೆಗಳನ್ನು ಎಳೆಯಲಾಗಿರುವುದರಿಂದ ಚಿತ್ರವು ರೇಖಾಪ್ರಧಾನವಾಗಿ ಮೂಡಿಬಂದಿದೆ.

ಈ ಗೋಡೆಯ ಮೂರೂ ಚಿತ್ರಿತ ಪಟ್ಟಿಕೆಗಳ ಮೇಲ್ಭಾಗದಲ್ಲಿ ೧೫ ಸೆಂ.ಮೀ. ಎತ್ತರ ಅಳತೆಯ ಅಡ್ಡದಾದ ಪಟ್ಟಿಕೆಯೊಂದನ್ನು ನಿರ್ಮಿಸಿಕೊಂಡಿದ್ದು, ತೆಳುಹಸಿರು ವರ್ಣದ ಹಿನ್ನೆಲೆಯೊಂದರ ಈ ಪಟ್ಟಿಕೆಯಲ್ಲಿ ಕಡುಹಸಿರು ಹಾಗೂ ಕೆಂಪುವರ್ಣದಿಂದ ಹೂಬಳ್ಳಿಯ ವಿನ್ಯಾಸವನ್ನು ಚಿತ್ರಿಸಿದೆ. ಈ ಅಡ್ಡದಾದ ಪಟ್ಟಿಕೆಯ ಮೇಲ್ಭಾಗದಲ್ಲಿ ಹಾಗೂ ಈ ಗೋಡೆಯ ಮಧ್ಯದಲ್ಲಿರುವ ವಿಶಾಲವಾದ ಕಿಟಕಿ ಅಲ್ಲದೇ ಚಿಕ್ಕ ಮಾಡುವಿನ ಸುತ್ತಲೂ ಕಡುನೀಲಿ ಹಾಗೂ ಕೆಂಪುವರ್ಣದ ಸುಳುವಿನ ನಕ್ಷಾಚಿತ್ರಗಳನ್ನು ಬಿಡಿಸಲಾಗಿದೆ. ಈ ಗೋಡೆಯ ಬಲಭಾಗದಲ್ಲಿ ೯೦ x೧೫೦ ಸೆಂ.ಮೀ. ಅಳತೆಯ ಅತ್ಯಂತ ಹಳೆಯದಾದ ಕನ್ನಡಿಯೊಂದನ್ನು ತೂಗು ಹಾಕಲಾಗಿದೆ. ಈ ಕನ್ನಡಿಯ ಹಿಂಭಾಗದ ಗೋಡೆಯ ಮೇಲೆ ಯಾವುದೇ ರೀತಿಯ ಚಿತ್ರಗಳು ಬಿಡಿಸಿಲ್ಲ. ಬದಲಾಗಿ ಈ ಕನ್ನಡಿಯ ಹೊರಭಾಗದಿಂದ ಚಿತ್ರರಚನೆ ಮಾಡಿರುವುದನ್ನು ಇಲ್ಲಿ ಗಮನಿಸಬಹುದು. ಅಲ್ಲದೇ ಈ ಕನ್ನಡಿಯ ಸಂಪೂರ್ಣ ಕೆಳಭಾಗದ ಗಾರೆಯ ಮೇಲೂ ಸುಂದರ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಉಳಿದಂತೆ ಈ ಗೋಡೆಯ ಸಂಪೂರ್ಣ ಮೇಲ್ಭಾಗದಲ್ಲಿ ೧೦ ಸೆಂ.ಮೀ. ಅಳತೆಯ ಉಬ್ಬುಮಾದರಿಯಲ್ಲಿ ಗಾರೆಪಟ್ಟಿಕೆಯೊಂದನ್ನು ಅಡ್ಡದಾಗಿ ಮಾಡಿಕೊಳ್ಳಲಾಗಿದೆ. ಈ ಗಾರೆಪಟ್ಟಿಕೆಯ ಮೇಲೂ ಹಳದಿ, ಹಸಿರು ಹಾಗೂ ಕೆಂಪುವರ್ಣಗಳಿಂದ ಹೂಬಳ್ಳಿಯ ಚಿತ್ರಗಳನ್ನು ಚಿತ್ರಿಸಲಾಗಿದೆ.

**ಪಶ್ಚಿಮಗೋಡೆಯ ಚಿತ್ರಗಳು :** ಪೂರ್ವಗೋಡೆಯ ಅಳತೆಯನ್ನೇ ಹೊಂದಿದ ಈ ಗೋಡೆಯ ಮಧ್ಯದಲ್ಲಿ ಪ್ರವೇಶ ದ್ವಾರವೊಂದಿದೆ. ಈ ದ್ವಾರದ ಎರಡೂ ಬದಿಗಳಲ್ಲಿ ದ್ವಾರಪಾಲಕರ ಚಿತ್ರಿತ ಪಟ್ಟಿಕೆಗಳಿವೆ. ಜಯ-ವಿಜಯರ ಕೈಯಲ್ಲಿ ಶಂಖ-ಚಕ್ರಗಳಲ್ಲದೆ ಗದೆಯನ್ನು ಚಿಕ್ಕದಾಗಿ ತೋರಿಸಲಾಗಿದೆ. ಹಸಿರು, ನೀಲಿ ಹಾಗೂ ಕಂದುಗೆಂಪು ವರ್ಣಗಳನ್ನು ಚಿತ್ರದಲ್ಲಿ ಬಳಸಲಾಗಿದ್ದು, ಚಿತ್ರದ ಹಿನ್ನೆಲೆಯು ಸಂಪೂರ್ಣ ಹಳದಿವರ್ಣದಲ್ಲಿದೆ. ಈ ಚಿತ್ರಿತ ಪಟ್ಟಿಕೆಗಳ ಮೇಲ್ಭಾಗದಲ್ಲಿರುವ ೧೫ ಸೆಂ.ಮೀ. ಎತ್ತರ ಅಳತೆಯ ಅಡ್ಡದಾದ ಪಟ್ಟಿಕೆಯೊಂದರ ತೆಳುಹಸಿರು ವರ್ಣದ ಹಿನ್ನೆಲೆಯಲ್ಲಿ ಕಡುಹಸಿರು ಹಾಗೂ ಕೆಂಪುವರ್ಣಗಳಿಂದ ಹೂಬಳ್ಳಿಯ ವಿನ್ಯಾಸವನ್ನು ಚಿತ್ರಿಸಲಾಗಿದೆ. ಈ ಅಡ್ಡದಾದ ಪಟ್ಟಿಕೆಯ ಮೇಲ್ಭಾಗದಲ್ಲಿ ಮತ್ತು ದ್ವಾರಪಾಲಕರ ಚಿತ್ರಿತ ಪಟ್ಟಿಕೆಗಳ ಸುತ್ತಲೂ ಕಡುನೀಲಿ ಹಾಗೂ ಕೆಂಪುವರ್ಣಗಳಿಂದ ಸುಳುವಿನ ನಕ್ಷಾಚಿತ್ರವನ್ನು ಚಿತ್ರಿಸಲಾಗಿದೆ.

ಪೂರ್ವಗೋಡೆಯಲ್ಲಿರುವಂತೆ ಈ ಗೋಡೆಯ ಎಡಭಾಗದಲ್ಲಿ ೯೦ x೧೫೦ ಸೆಂ.ಮೀ. ಅಳತೆಯ ಅತ್ಯಂತ ಹಳೆಯದಾದ ಕನ್ನಡಿಯೊಂದನ್ನು ಗೋಡೆಗೆ ತೂಗು ಹಾಕಲಾಗಿದೆ. ಈ ಗೋಡೆಯ ಬಲಭಾಗದಲ್ಲಿ ಚಿಕ್ಕ ಮಾಡುವೊಂದಿದೆ. ಈ ಗೋಡೆಯ ಮಧ್ಯದಲ್ಲಿರುವ ದ್ವಾರ ಹಾಗೂ ಚಿಕ್ಕ ಮಾಡುವಲ್ಲದೇ ಕನ್ನಡಿಯ ಸುತ್ತಲೂ ಕಡುನೀಲಿ ಹಾಗೂ ಕೆಂಪುವರ್ಣದ ಸುಳುವಿನ ನಕ್ಷಾಚಿತ್ರವನ್ನು



ಚಿತ್ರಿಸಲಾಗಿದೆ. ಕನ್ನಡಿ ಹಾಗೂ ದ್ವಾರದ ಸಂಪೂರ್ಣ ಕೆಳಭಾಗದ ಗಾರೆಯ ಮೇಲೂ ಸುಂದರ ನಕ್ಷಾಚಿತ್ರವನ್ನು ಚಿತ್ರಿಸಲಾಗಿದ್ದು, ಈ ವಿನ್ಯಾಸವು ಇಂದು ಹೆಚ್ಚು ಅಳಿಸಿಹೋಗಿದೆ. ಉಳಿದಂತೆ ಈ ಗೋಡೆಯ ಸಂಪೂರ್ಣ ಮೇಲ್ಭಾಗದಲ್ಲಿರುವ ೧೦ ಸೆಂ.ಮೀ. ಎತ್ತರ ಅಳತೆಯ ಅಡ್ಡದಾದ ಉಬ್ಬುಪದಾವರಿಯ ಗಾರೆಪಟ್ಟಿಕೆಯೊಂದರ ಮೇಲೂ ಹಳದಿ, ಹಸಿರು ಹಾಗೂ ಕೆಂಪುವರ್ಣಗಳಿಂದ ಹೂಬಳ್ಳಿಯ ಚಿತ್ರಗಳನ್ನು ಚಿತ್ರಿಸಲಾಗಿದೆ.

**ಉತ್ತರಗೋಡೆಯ ಚಿತ್ರಗಳು :** ಭಿತ್ತಿಚಿತ್ರಗಳಿರುವ ಕೋಣೆಯೊಳಗೆ ಪ್ರವೇಶ ಪಡೆಯುತ್ತಲೇ ಎಡಭಾಗದಲ್ಲಿರುವ ಈ ಗೋಡೆಯು ೭ ಅಡಿ ಎತ್ತರ ಹಾಗೂ ೩೫ ಅಡಿ ಉದ್ದದ ಅಳತೆಯನ್ನು ಹೊಂದಿದೆ. ಈ ಗೋಡೆಯ ಮಧ್ಯದಲ್ಲಿ ಉಬ್ಬುಪದಾವರಿಂದ ನಾಲ್ಕು ಕಂಬಗಳನ್ನು ನಿರ್ಮಿಸಲಾಗಿದ್ದರಿಂದ ಈ ಗೋಡೆಯು ಒಟ್ಟು ಐದು ಅಂಕಣಗಳಂತೆ ವಿಂಗಡಣೆಗೊಳ್ಳುತ್ತದೆ. ಈ ಐದೂ ಅಂಕಣಗಳಲ್ಲಿ ಒಟ್ಟು ೧೩ ಚಿತ್ರಿತ ಪಟ್ಟಿಕೆಗಳಿವೆ.

ಈ ಗೋಡೆಯ ಮೊದಲ ಅಂಕಣದ ಮಧ್ಯದಲ್ಲಿ ದ್ವಾರವೊಂದಿದ್ದು, ಈ ದ್ವಾರದ ಎರಡೂ ಬದಿಗಳಲ್ಲಿ ಚಿತ್ರಿತ ಪಟ್ಟಿಕೆಗಳಿವೆ. ಮೊದಲ ಪಟ್ಟಿಕೆಯಲ್ಲಿ ಕೆಂಪು, ಹಸಿರು ಹಾಗೂ ನೀಲಿವರ್ಣಗಳಿಂದ ಹೂಬಳ್ಳಿಯ ವಿನ್ಯಾಸವನ್ನು ಹಳದಿವರ್ಣದ ಹಿನ್ನೆಲೆಯೊಂದರಲ್ಲಿ ಚಿತ್ರಿಸಿದೆ. ಎರಡನೆಯ ಪಟ್ಟಿಕೆಯಲ್ಲಿ ತಪೋನಿರತರಾದ ಯತಿಗಳನ್ನು ಚಿತ್ರಿಸಲಾಗಿದೆ. ಈ ಚಿತ್ರದ ಹಿನ್ನೆಲೆಯಲ್ಲಿ ನಿಸರ್ಗದ ಸನ್ನಿವೇಶ ಹಾಗೂ ಕುಟೀರವೊಂದನ್ನು ತೋರಿಸಿದೆ. ಕೆಂಪು, ನೀಲಿ, ಹಳದಿ ಹಾಗೂ ಹಸಿರುವರ್ಣಗಳನ್ನು ಇಲ್ಲಿ ಪ್ರಧಾನವಾಗಿ ಬಳಸಲಾಗಿದೆ. ಈ ಅಂಕಣದ ಮಧ್ಯದಲ್ಲಿರುವ ದ್ವಾರದ ಸಂಪೂರ್ಣ ಕೆಳಭಾಗದಲ್ಲೂ ಹಸಿರು, ಕೆಂಪು ಹಾಗೂ ನೀಲಿ ವರ್ಣಗಳಿಂದ ಸುಂದರ ಹೂಬಳ್ಳಿಯ ವಿನ್ಯಾಸವನ್ನು ತೋರಿಸಿದೆ. ಆದರೆ ಈ ವಿನ್ಯಾಸವು ಇಂದು ಹೆಚ್ಚು ಅಳಿಸಿ ಹೋಗಿರುವುದರಿಂದ ನೋಡಲು ಅಸ್ಪಷ್ಟವಾಗಿ ಕಂಡುಬರುವುದು.

ಎರಡನೆಯ ಅಂಕಣದಲ್ಲಿ ಮೂರು ಚಿತ್ರಿತ ಪಟ್ಟಿಕೆಗಳಿವೆ. ಮೊದಲ ಪಟ್ಟಿಕೆಯ ಚಿತ್ರದಲ್ಲಿ ಯತಿಗಳೊಬ್ಬರು ಧ್ಯಾನಮಗ್ನರಾಗಿದ್ದಾರೆ. ಹಿನ್ನೆಲೆಯಲ್ಲಿ ದಟ್ಟವಾದ ಗಿಡ-ಮರಗಳಿಂದ ಕೂಡಿದ ನಿಸರ್ಗವನ್ನು ಚಿತ್ರಿಸಿದೆಯಲ್ಲದೆ ತೀರ ಕೆಳಭಾಗದಲ್ಲಿ ತೆಳುಕೆಂಪು ವರ್ಣದಿಂದ ವಿಶಾಲವಾದ ಮೈದಾನವನ್ನು ತೋರಿಸಿದೆ. ಮೂಲವರ್ಣಗಳಾದ ಕೆಂಪು, ಹಳದಿ, ನೀಲಿವರ್ಣಗಳೊಂದಿಗೆ ಮಿಶ್ರವರ್ಣಗಳನ್ನು ಇಲ್ಲಿ ಬಳಸಲಾಗಿದೆ. ಅಡ್ಡದಾದ ಮಧ್ಯದ ಪಟ್ಟಿಕೆಯೊಂದರಲ್ಲಿ ಹಳದಿವರ್ಣದ ಹಿನ್ನೆಲೆಯೊಂದಿಗೆ ಹಸಿರು, ಕೆಂಪು ಹಾಗೂ ನೀಲಿವರ್ಣಗಳಿಂದ ಹೂ-ಎಲೆಗಳನ್ನು ಚಿತ್ರಿಸಲಾಗಿದೆ. ಉಳಿದಂತೆ ಈ ಅಂಕಣದ ಕೊನೆಯ ಪಟ್ಟಿಕೆಯಲ್ಲಿರುವ ಚಿತ್ರದ ಮಧ್ಯದಲ್ಲಿ ಯತಿಗಳಿಬ್ಬರು ಎದುರು ಮುಖವಾಗಿ ಬರುತ್ತಿರುವಂತೆ ಚಿತ್ರಿಸಲಾಗಿದ್ದು, ಈ ಚಿತ್ರದ ಎರಡೂ ಬದಿಗಳಲ್ಲಿ ದೇವಾಲಯಗಳನ್ನು ತೋರಿಸಿದೆ. ಹಿನ್ನೆಲೆಯಾಗಿ ನಿಸರ್ಗವನ್ನು ತೋರಿಸಿದೆ. ಉಳಿದಂತೆ ವರ್ಣಲೇಪನದಲ್ಲಿ ಯಾವುದೇ ಬದಲಾವಣೆಗಳು ಕಂಡುಬರುವುದಿಲ್ಲ.

ಮೂರನೆಯ ಅಂಕಣದಲ್ಲಿಯೂ ಮೂರು ಚಿತ್ರಿತ ಪಟ್ಟಿಕೆಗಳಿದ್ದು, ಮೊದಲ ಪಟ್ಟಿಕೆಯ ಚಿತ್ರದಲ್ಲಿ ಯತಿಗಳನ್ನು ತಪೋನಿರತರಾಗಿರುವಂತೆ ಚಿತ್ರಿಸಿದೆ. ಸ್ವಲ್ಪ ಕೆಳಭಾಗದಲ್ಲಿ ಕೋಟೆಗೋಡೆ ಹಾಗೂ ಮಹಾದ್ವಾರವನ್ನು ಚಿತ್ರಿಸಿದರೆ, ಹಿನ್ನೆಲೆಯಲ್ಲಿ ನಿಸರ್ಗವನ್ನು ತೋರಿಸಲಾಗಿದೆ. ಅಡ್ಡದಾದ ಮಧ್ಯದ ಪಟ್ಟಿಕೆಯೊಂದರಲ್ಲಿ ಹಳದಿವರ್ಣದ

ಹಿನ್ನೆಲೆಯೊಂದರಲ್ಲಿ ಕೆಂಪು, ನೀಲಿ ಹಾಗೂ ಕಡುಹಸಿರು ವರ್ಣಗಳಿಂದ ಎಲೆ-ಹೂಗಳನ್ನು ಚಿತ್ರಿಸಿದೆ. ಅದೇ ರೀತಿಯಾಗಿ ಈ ಅಂಕಣದ ಕೊನೆಯ ಪಟ್ಟಿಕೆಯಲ್ಲಿರುವ ಚಿತ್ರದ ಎಡಭಾಗದಲ್ಲಿ ತಪೋನಿರತರಾದ ಯತಿಗಳು ಹಾಗೂ ಅವರ ಎದುರಿಗೆ ಮತ್ತೆ ನಾಲ್ಕು ಜನ ಸನ್ಯಾಸಿಗಳನ್ನು ತೋರಿಸಿದೆ. ಬಹುಶಃ ಇವರು ತಪೋನಿರತರಾದ ಯತಿಗಳ ಶಿಷ್ಯರಿರಬೇಕು ಎಂದೆನಿಸುತ್ತದೆ. ಚಿತ್ರದ ಹಿನ್ನೆಲೆಯಲ್ಲಿ ಗೋವುಗಳನ್ನಲ್ಲದೇ ದೇಗುಲಗಳನ್ನು ದೂರದಲ್ಲಿ ಕಂಡುಬರುವಂತೆ ಅತ್ಯಂತ ಕಿರಿದಾದ ರೇಖೆಗಳಿಂದ ಎಳೆದು ತೋರಿಸಲಾಗಿದೆ. ಇಲ್ಲಿಯೂ ಮೂಲವರ್ಣಗಳೊಂದಿಗೆ ಮಿಶ್ರವರ್ಣಗಳನ್ನು ಬಳಸಲಾಗಿದೆ.

ನಾಲ್ಕನೆಯ ಅಂಕಣದಲ್ಲಿ ಮೂರು ಚಿತ್ರಿತ ಪಟ್ಟಿಕೆಗಳಿದ್ದು, ಮೊದಲ ಪಟ್ಟಿಕೆಯ ಚಿತ್ರದಲ್ಲಿ ಸೇತುವೆಯೊಂದಿಗೆ ಕೋಟೆ-ಕೊತ್ತಲಗಳನ್ನು ಬಹು ಸುಂದರವಾಗಿ ಚಿತ್ರಿಸಲಾಗಿದೆ. ಹಿನ್ನೆಲೆಯಲ್ಲಿ ನಿಸರ್ಗದ ದೃಶ್ಯವಿದೆ. ಮಧ್ಯದ ಪಟ್ಟಿಕೆಯೊಂದರಲ್ಲಿ ಅರಮನೆಯನ್ನು ಬಹುಸುಂದರವಾಗಿ ಚಿತ್ರಿಸಿದೆ. ಈ ಅರಮನೆಯ ಎದುರಿಗೆ ತೆಳುಹಸಿರು ವರ್ಣದ ಮೈದಾನ ಹಾಗೂ ಅಶೋಕ ವೃಕ್ಷಗಳನ್ನು ಕಡುಹಸಿರು ವರ್ಣದಲ್ಲಿ ತೋರಿಸಲಾಗಿದೆ. ಹಳದಿ ಹಾಗೂ ಕೆಂಪುವರ್ಣದ ಹಿನ್ನೆಲೆಯೊಂದಿಗೆ ಕಪ್ಪು ವರ್ಣದ ನೇರ ರೇಖೆಗಳಿಂದ ಅರಮನೆಯ ಕಲ್ಪನೆಯನ್ನು ಮೂಡಿಸಿರುವುದು ತುಂಬ ಸೊಗಸಾಗಿದೆ. ಉಳಿದಂತೆ ಕೊನೆಯ ಪಟ್ಟಿಕೆಯ ಮಧ್ಯದಲ್ಲಿ ಕೋಟೆಯೊಂದನ್ನು ತೋರಿಸಿದ್ದು, ಈ ಕೋಟೆಯ ಎರಡೂ ಬದಿಗಳಲ್ಲಿ ಕಡುಹಸಿರು ವರ್ಣದಿಂದ ಅಶೋಕ ವೃಕ್ಷಗಳನ್ನು ಚಿತ್ರಿಸಿದೆ. ಒಟ್ಟಾರೆ ಈ ಅಂಕಣದಲ್ಲಿರುವ ಮೂರು ಚಿತ್ರಿತ ಪಟ್ಟಿಕೆಗಳಿಗೆ ಬಳಸಿದ ವರ್ಣಗಳಲ್ಲಿ ಈ ಮೇಲಿನ ಅಂಕಣದ ವರ್ಣಸಂಯೋಜನೆಯನ್ನೇ ಇಲ್ಲಿಯೂ ಪುನರಾವರ್ತಿಸಲಾಗಿದೆ.

ಈ ಗೋಡೆಯ ಕೊನೆಯದಾದ ಐದನೆಯ ಅಂಕಣದ ಮಧ್ಯದಲ್ಲಿ ಉಬ್ಬುಮಾದರಿಯ, ಸುಂದರ ಕಪಾಟು ವಿನ್ಯಾಸದ ಗಾರೆ ರಚನೆಯನ್ನು ನಿರ್ಮಿಸಲಾಗಿದೆ. ಈ ಗಾರೆ ರಚನೆಯ ಮೇಲೆ ಹಳದಿ ವರ್ಣದ ಹಿನ್ನೆಲೆಯೊಂದಿಗೆ ಕೆಂಪು ಹಾಗೂ ಹಸಿರು ವರ್ಣಗಳಿಂದ ಹೂಬಳ್ಳಿಯ ವಿನ್ಯಾಸವನ್ನು ಚಿತ್ರಿಸಿದೆ. ಅಲ್ಲದೆ ಈ ಗಾರೆ ರಚನೆಯ ಎರಡೂ ಬದಿಗಳಲ್ಲಿರುವ ಪಟ್ಟಿಕೆಗಳಲ್ಲಿ ಅರಮನೆಯ ಚಿತ್ರಗಳಿವೆ. ಮೊದಲ ಪಟ್ಟಿಕೆಯ ಚಿತ್ರದ ಮಧ್ಯದಲ್ಲಿ ಹಳದಿ, ಬಿಳಿ ಹಾಗೂ ಕೆಂಪುವರ್ಣದಿಂದ ಅರಮನೆಯನ್ನು ಬಹು ಸುಂದರವಾಗಿ ಚಿತ್ರಿಸಿದೆ. ಅಲ್ಲದೆ ಅರಮನೆಯ ಸ್ವಲ್ಪ ಹಿಂಭಾಗದಲ್ಲಿ ಕಟ್ಟೆಯೊಂದನ್ನು ತೋರಿಸಿದ್ದು, ಈ ಕಟ್ಟೆಯ ಮೇಲೆ ಹೂ-ಕುಂಡಗಳನ್ನು ಚಿತ್ರಿಸಲಾಗಿದೆ. ಚಿತ್ರದ ಹಿನ್ನೆಲೆಯು ನಿಸರ್ಗ ದೃಶ್ಯದಿಂದ ಕೂಡಿದೆ. ಈ ಅಂಕಣದ ಇನ್ನೊಂದು ಪಟ್ಟಿಕೆಯಲ್ಲಿ ಚಿತ್ರಿತಗೊಂಡಿರುವ ಅರಮನೆಯೂ ಅತ್ಯಂತ ಸುಂದರವಾಗಿ ಮೂಡಿಬಂದಿದೆ. ಇದು ಜೈಪುರ ಶೈಲಿಯ ಅರಮನೆಯನ್ನು ನೆನಪಿಸುತ್ತದೆ. ಈ ಅರಮನೆಯ ಎದುರಿಗೆ ಗಿಡ-ಮರಗಳನ್ನೂ ತೋರಿಸಿದೆ. ಉಳಿದಂತೆ ವರ್ಣಸಂಯೋಜನೆಯಲ್ಲಿ ಮೂಲವರ್ಣಗಳೊಂದಿಗೆ ಮಿಶ್ರವರ್ಣಗಳನ್ನು ಇಲ್ಲಿ ಬಳಸಲಾಗಿದೆ.

ಈ ಮೇಲೆ ವಿವರಿಸಿದ ಐದೂ ಅಂಕಣಗಳ ಒಟ್ಟು ೧೩ ಪಟ್ಟಿಕೆಗಳಲ್ಲಿ ವಿವಿಧ ಬಗೆಯ ಚಿತ್ರಗಳು ರಚನೆಗೊಂಡಿವೆ. ಪ್ರತೀ ಗೋಡೆಯಲ್ಲಿ ಚಿತ್ರಿಸಿರುವಂತೆ ಈ ಚಿತ್ರಿತ ಪಟ್ಟಿಕೆಗಳ ಮೇಲ್ಭಾಗದಲ್ಲಿ ಅಡ್ಡಲಾಗಿರುವ ೧೫ ಸೆಂ.ಮೀ. ಎತ್ತರ ಅಳತೆಯ ಪಟ್ಟಿಕೆಯೊಂದನ್ನು ಮಾಡಿಕೊಂಡಿದ್ದು, ಈ ಪಟ್ಟಿಕೆಯಲ್ಲಿ ಕಡುಹಸಿರು ಹಾಗೂ ಕೆಂಪುವರ್ಣದ ಹೂಬಳ್ಳಿಯ ವಿನ್ಯಾಸವನ್ನು ತೆಳುಹಸಿರುವರ್ಣದ ಹಿನ್ನೆಲೆಯೊಂದರಲ್ಲಿ ಚಿತ್ರಿಸಿದೆ. ಈ ದಪ್ಪನಾದ ಅಡ್ಡಪಟ್ಟಿಕೆಯ ಮೇಲ್ಭಾಗದಲ್ಲಿ ಹಾಗೂ ಚಿತ್ರಿತ ೧೩ ಪಟ್ಟಿಕೆಗಳ ಸುತ್ತಲೂ ಕಡುನೀಲಿ ಹಾಗೂ ಕೆಂಪುವರ್ಣಗಳಿಂದ ಸುಳುವಿನ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಅಲ್ಲದೆ ಈ ಗೋಡೆಯಲ್ಲಿ ನಿರ್ಮಿಸಲಾದ ಉಬ್ಬುಮಾದರಿಯ ನಾಲ್ಕು ಕಂಬಗಳ ಮೇಲೂ ಹಳದಿ, ಕೆಂಪು ಹಾಗೂ ನೀಲಿವರ್ಣಗಳಿಂದ ನಕ್ಷಾಚಿತ್ರಗಳನ್ನು ಚಿತ್ರಿಸಿದೆ.

ಉಳಿದಂತೆ ಈ ಗೋಡೆಯ ಸಂಪೂರ್ಣ ಮೇಲ್ಭಾಗದಲ್ಲಿ ೧೦ ಸೆಂ.ಮೀ. ಎತ್ತರ ಅಳತೆಯ ಅಡ್ಡದಾದ ಉಬ್ಬುಮಾದರಿಯ ಗಾರೆಪಟ್ಟಿಕೆಯೊಂದನ್ನು ನಿರ್ಮಿಸಿದ್ದು, ಈ ಗಾರೆಪಟ್ಟಿಕೆಯ ಮೇಲೆ ಹಳದಿವರ್ಣದ ಹಿನ್ನೆಲೆಯೊಂದಿಗೆ ಕೆಂಪು, ಹಸಿರುವರ್ಣಗಳಿಂದ ಹೂ-ಬಳ್ಳಿಯ ಚಿತ್ರಗಳನ್ನು ರಚಿಸಲಾಗಿದೆ. ಈ ಗೋಡೆಯ ಮೊದಲ ಮತ್ತು ಕೊನೆಯ ಅಂಕಣಗಳನ್ನು ಹೊರತುಪಡಿಸಿ ಕ್ರಮವಾಗಿ ೨, ೩, ೪ನೆಯ ಅಂಕಣಗಳ ಮಧ್ಯದಲ್ಲಿ ೬೦ x ೭೫ ಸೆಂ.ಮೀ. ಅಳತೆಯ ಅತ್ಯಂತ ಹಳೆಯದಾದ ಕನ್ನಡಿಗಳನ್ನು ತೂಗು ಹಾಕಲಾಗಿದೆ. ಈ ಕನ್ನಡಿಗಳ ಹಿಂದೆ ಯಾವುದೇ ರೀತಿಯ ಚಿತ್ರಗಳು ರಚನೆಗೊಂಡಿರುವುದಿಲ್ಲ.

**ದಕ್ಷಿಣ ಗೋಡೆಯ ಚಿತ್ರಗಳು :** ಉತ್ತರ ಗೋಡೆಯ ಅಳತೆಯನ್ನೇ ಹೊಂದಿದ ಈ ಗೋಡೆಯಲ್ಲೂ ಉಬ್ಬುಮಾದರಿಯ ನಾಲ್ಕು ಕಂಬಗಳನ್ನು ನಿರ್ಮಿಸಲಾಗಿದೆ. ಈ ಗೋಡೆಯ ನಾಲ್ಕನೆಯ ಅಂಕಣದ ಮಧ್ಯದಲ್ಲಿ ದ್ವಾರವೊಂದಿದೆ. ಉಳಿದ ನಾಲ್ಕು ಅಂಕಣಗಳ ಗೋಡೆಯ ಮಧ್ಯದಲ್ಲಿ ಕಪಾಟುಗಳನ್ನು ನಿರ್ಮಿಸಲಾಗಿದೆ. ಪ್ರತೀ ಅಂಕಣದ ಮಧ್ಯದಲ್ಲಿ ನಿರ್ಮಿಸಲಾದ ಕಪಾಟುಗಳಲ್ಲದೇ ದ್ವಾರದ ಎರಡೂ

ಪಟ್ಟಿಗಳಲ್ಲಿ ಚಿತ್ರತ ಪಟ್ಟಿಕೆಗಳಿವೆ. ಹಾಗಾಗಿ ಈ ಗೋಡೆಯಲ್ಲಿ ಪ್ರತಿ ಅಂಕಣಗಳಲ್ಲಿ ಎರಡರಂತೆ ಒಟ್ಟು ೧೦ ಚಿತ್ರತ ಪಟ್ಟಿಕೆಗಳಿವೆ. ಈ ಪಟ್ಟಿಕೆಗಳಲ್ಲಿ ಮುಖ್ಯವಾಗಿ ಅರಮನೆಯ ದೃಶ್ಯ, ನಿಸರ್ಗ ದೃಶ್ಯಗಳಲ್ಲದೇ ಎಲೆ, ಹೂಬಳ್ಳಿಯ ಚಿತ್ರಗಳು ರಚನೆಗೊಂಡಿವೆ. ಅಡ್ಡವಾದ ಪಟ್ಟಿಕೆಯ ಮೇಲ್ಭಾಗದಲ್ಲಿ. ಚಿತ್ರತ ಪಟ್ಟಿಕೆಗಳ ಸುತ್ತಲೂ ಹಾಗೂ ದ್ವಾರ, ಕಪಾಟುಗಳ ಸುತ್ತಲೂ ಕಡುನೀಲಿ ಹಾಗೂ ಕೆಂಪುವರ್ಣಗಳಿಂದ ಸುಳುವಿನ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಈ ಗೋಡೆಯಲ್ಲಿ ನಿರ್ಮಿಸಲಾದ ಉಬ್ಬು



ಈ ಗೋಡೆಯ ಮೊದಲ ಅಂಕಣದ ಪ್ರಥಮ ಪಟ್ಟಿಕೆಯಲ್ಲಿ ಅರಮನೆಯ ಚಿತ್ರವನ್ನು ಚಿತ್ರಿಸಿದರೆ, ಎರಡನೆಯ ಪಟ್ಟಿಕೆಯಲ್ಲಿ ನಿಸರ್ಗ ಚಿತ್ರವನ್ನು ಚಿತ್ರಿಸಿದೆ. ಅದರಂತೆ ಎರಡು ಹಾಗೂ ಮೂರನೆಯ ಅಂಕಣದ ಒಟ್ಟು ನಾಲ್ಕು ಪಟ್ಟಿಕೆಗಳಲ್ಲಿ ನಿಸರ್ಗಚಿತ್ರಗಳನ್ನು ಚಿತ್ರಿಸಲಾಗಿದೆ. ಆದರೆ ಇಂದು ಈ ಚಿತ್ರಗಳು ಹೆಚ್ಚಿನ ಪ್ರಮಾಣದಲ್ಲಿ ಹಾಳಾಗಿವೆ. ೨ ಮತ್ತು ೩ನೆಯ ಅಂಕಣದ ಈ ನಾಲ್ಕೂ ಪಟ್ಟಿಕೆಗಳಲ್ಲಿ ರಚನೆಗೊಂಡಿರುವ ನಿಸರ್ಗಚಿತ್ರಗಳಲ್ಲಿ ಗಿಡ–ಮರಗಳಲ್ಲದೇ ಆಕಾಶದ ಸನ್ನಿವೇಶವು ಸಾಮಾನ್ಯವಾಗಿ ಮೂಡಿಬಂದಿದೆ. ಈ ಚಿತ್ರಗಳಿಗೆ ಬಳಸಲಾದ ವರ್ಣಗಳಲ್ಲಿ ಮೂಲವರ್ಣಗಳಾದ ಕೆಂಪು, ನೀಲಿ ಹಾಗೂ ಹಳದಿ ವರ್ಣಗಳೊಂದಿಗೆ ಮಿಶ್ರ ವರ್ಣಗಳನ್ನು ಬಳಸಲಾಗಿದೆ. ಉಳಿದ ನಾಲ್ಕು ಹಾಗೂ ಐದನೆಯ ಅಂಕಣದ ನಾಲ್ಕು ಪಟ್ಟಿಕೆಗಳಲ್ಲಿ ಹಳದಿ ವರ್ಣದ ಹಿನ್ನೆಲೆಯೊಂದಿಗೆ ಕೆಂಪು ಹಾಗೂ ಹಸಿರುವರ್ಣಗಳಿಂದ ಎಲೆ, ಹೂಬಳ್ಳಿಯ ವಿನ್ಯಾಸವನ್ನು ಚಿತ್ರಿಸಲಾಗಿದೆ.

ಪ್ರತಿಯೊಂದು ಗೋಡೆಯಲ್ಲೂ ಚಿತ್ರಿಸಿದಂತೆ ದಕ್ಷಿಣಗೋಡೆಯ ಒಟ್ಟು ೧೦ ಚಿತ್ರತ ಪಟ್ಟಿಕೆಗಳ ಮೇಲ್ಭಾಗದಲ್ಲಿ ೧೫ ಸೆಂ.ಮೀ. ಎತ್ತರ ಅಳತೆಯ ಅಡ್ಡದಾದ ಪಟ್ಟಿಕೆಯೊಂದಿದ್ದು, ಈ ಪಟ್ಟಿಕೆಯಲ್ಲಿ ಕಡುಹಸಿರು ಹಾಗೂ ಕೆಂಪುವರ್ಣದ ಹೂಬಳ್ಳಿಯ ಚಿತ್ರಗಳನ್ನು ಚಿತ್ರಿಸಿದೆ. ಹಿನ್ನೆಲೆಯು ತೆಳುಹಸಿರು ವರ್ಣದಿಂದ ಕೂಡಿದೆ. ಈ ಮಾದರಿಯ ಗಾರೆ ಕಂಬಗಳ ಮೇಲೂ ಯಥಾಪ್ರಕಾರವಾಗಿ ಹಳದಿ, ಕೆಂಪು ಹಾಗೂ ಕಡುನೀಲಿ ವರ್ಣಗಳಿಂದ ನಕ್ಷಾಚಿತ್ರಗಳನ್ವಯ ಚಿತ್ರಿಸಲಾಗಿದೆ. ಅದೇ ರೀತಿಯಾಗಿ ಪ್ರತಿಯೊಂದು ಗೋಡೆಯಲ್ಲಿ ನಿರ್ಮಿಸಿದಂತೆ ಈ ಗೋಡೆಯ ಸಂಪೂರ್ಣ ಮೇಲ್ಭಾಗದಲ್ಲಿ ೧೦ ಸೆಂ.ಮೀ. ಎತ್ತರ ಅಳತೆಯ ಅಡ್ಡದಾದ ಉಬ್ಬುಮಾದರಿಯ ಗಾರೆಪಟ್ಟಿಕೆಯೊಂದರ ಮೇಲೆ ಹಳದಿವರ್ಣದ ಹಿನ್ನೆಲೆಯಲ್ಲಿ ಕೆಂಪು ಮತ್ತು ಹಸಿರು ವರ್ಣಗಳಿಂದ ಹೂಬಳ್ಳಿಯ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ.

### ಭಿತ್ತಿಚಿತ್ರಗಳ ಲಕ್ಷಣಗಳು

* ಶ್ರೀ ಶಿವಶಂಕರಸ್ವಾಮಿ ಮಠದಲ್ಲಿರುವ ಭಿತ್ತಿಚಿತ್ರಗಳನ್ನು ಗಾರೆಭಿತ್ತಿಯ ಮೇಲೆ ರಚಿಸಲಾಗಿದ್ದು, ಇವು ೧೯೧೦ರ ದಶಕದಲ್ಲಿ ರಚನೆಗೊಂಡಿವೆಯೆಂದು ಹೇಳಬಹುದು.
* ಈ ಭಿತ್ತಿಚಿತ್ರಗಳಲ್ಲಿ ಧಾರ್ಮಿಕ, ಸಾಮಾಜಿಕ ಹಿನ್ನೆಲೆಯ ಚಿತ್ರಗಳೊಂದಿಗೆ ಅಲಂಕಾರಿಕ ಹಾಗೂ ನಿಸರ್ಗ ಚಿತ್ರಗಳೂ ಸೇರಿವೆ.
* ಅಂದು ಸೇಡಂ ಪಟ್ಟಣವು ಹೈದರಾಬಾದ ನಿಜಾಮನ ಆಳ್ವಿಕೆಗೆ ಒಳಪಟ್ಟಿದ್ದುದರಿಂದ ಸಹಜವಾಗಿಯೇ ಹೈದರಾಬಾದ ಪ್ರದೇಶದ ಪ್ರಮುಖ ವಾಸ್ತುರಚನೆಗಳು

ಈ ಭಿತ್ತಿಚಿತ್ರಗಳಲ್ಲಿ ಬಳಕೆಗೊಂಡಿವೆ. ಅಲ್ಲದೆ ಈ ಚಿತ್ರಗಳನ್ನು ರಚಿಸಿದ ಕಲಾವಿದರು ಆಂಧ್ರದವರಾಗಿರುವುದರಿಂದ ಈ ಮೇಲಿನ ಮಾತಿಗೆ ಇನ್ನಷ್ಟು ಪುಷ್ಟಿ ನೀಡುತ್ತದೆ.

* ಈ ಭಿತ್ತಿಚಿತ್ರಗಳಲ್ಲಿನ ಕೆಲವು ಮನುಷ್ಯಾಕೃತಿಗಳು ಶಿಷ್ಟರೂಪದಲ್ಲಿದ್ದರೆ, ಇನ್ನೂ ಕೆಲವು ಜನಪದ ಶೈಲಿಯಂತೆ ಕಂಡುಬರುತ್ತದೆ. ಹಾಗಾಗಿ ಈ ಚಿತ್ರಗಳನ್ನು ಅನೇಕ ಜನ ಕಲಾವಿದರು ಕೂಡಿ ಚಿತ್ರಿಸಿರಬಹುದಾದ ಸಾಧ್ಯತೆಗಳಿವೆ.
* ೨೦ನೆಯ ಶತಮಾನದ ಆರಂಭದಲ್ಲಿ ರಾಸಾಯನಿಕ ಮೂಲದ ವರ್ಣಗಳು ಪ್ರಚಲಿತದಲ್ಲಿದ್ದರೂ ಈ ಭಿತ್ತಿಚಿತ್ರಗಳ ರಚನೆಗೆ ಬಳಸಲಾದ ವರ್ಣಗಳು ನೈಸರ್ಗಿಕ ಮೂಲದ ವರ್ಣಗಳೇ ಆಗಿವೆ ಎಂದು ಸ್ಪಷ್ಟವಾಗಿ ಹೇಳಬಹುದು.
* ಮೂಲವರ್ಣಗಳಾದ ಕೆಂಪು, ನೀಲಿ, ಹಳದಿ ವರ್ಣಗಳೊಂದಿಗೆ ಮಿಶ್ರವರ್ಣಗಳನ್ನೂ ಇಲ್ಲಿ ಬಳಸಲಾಗಿದೆ. ಅಲ್ಲದೇ ಪ್ರಾಚೀನ ಭಿತ್ತಿಚಿತ್ರಗಳಲ್ಲಿ ಹೆಚ್ಚು ಬಳಸಲಾಗುತ್ತಿದ್ದ ವಜ್ರಸರಿ(ಜಿಲೋಟಿನ್)ಯ ಬಳಕೆಯಾದ ಕೆಲವೊಂದು ಚಿತ್ರಗಳಲ್ಲಿ ಕಾಣಬಹುದಾಗಿದೆ.
* ಚಿತ್ರರಚನೆಗಾಗಿ ಪ್ರತ್ಯೇಕ ಪಟ್ಟಿಕೆಗಳನ್ನು ನಿರ್ಮಿಸಿಕೊಳ್ಳಲಾಗಿದ್ದು, ಈ ಚಿತ್ರಿತ ಪಟ್ಟಿಕೆಗಳ ಸುತ್ತಲೂ ಮತ್ತು ಈ ಪಟ್ಟಿಕೆಗಳ ಸುತ್ತಲೂ ಮತ್ತು ಈ ಪಟ್ಟಿಕೆಗಳ ಮೇಲ್ಭಾಗದಲ್ಲಿ ಸುಳುವಿನ ನಕ್ಷಾಚಿತ್ರಗಳನ್ನು ಚಿತ್ರಿಸಲಾಗಿದೆ. ಈ ರೀತಿಯ ಅಲಂಕಾರಿಕ, ಸುಳುವಿನ ನಕ್ಷಾಚಿತ್ರಗಳನ್ನು ಭಿತ್ತಿಚಿತ್ರಗಳಿರುವ ಕೋಣೆಯಲ್ಲಿನ ದ್ವಾರ, ಕಿಟಕಿಗಳಲ್ಲದೇ ಮಾಡುಗಳ ಸುತ್ತಲೂ ಚಿತ್ರಿಸಲಾಗಿದೆ.
* ಒಟ್ಟಾರೆ ಈ ಭಿತ್ತಿಚಿತ್ರಗಳಲ್ಲಿ ಹೆಚ್ಚಿನವು ನಾಟಕ ಪರದೆ ಚಿತ್ರಣದ ಕಲ್ಪನೆಯನ್ನು ಮೂಡಿಸುವುದರಿಂದ ಈ ಚಿತ್ರಗಳನ್ನು ಹವ್ಯಾಸಿ ಕಲಾವಿದರು ಚಿತ್ರಿಸಿರಬಹುದೆಂದು ಅಭಿಪ್ರಾಯ ಪಡಬಹುದಾಗಿದೆ.

**ಉಪಸಂಹಾರ**

ನೆರೆಯ ಆಂಧ್ರಪ್ರದೇಶ ರಾಜ್ಯದ ಗಡಿಯಂಚಿಗೆ ಹೊಂದಿಕೊಂಡಿರುವ ಸೇಡಂ ಪಟ್ಟಣವು ಗುಲಬರ್ಗಾ ಜಿಲ್ಲೆಯ ಪ್ರಮುಖ ತಾಲೂಕು ಕೇಂದ್ರವಾಗಿದೆ. ಈ ತಾಲೂಕಿಗೆ ಅತ್ಯಂತ ಪ್ರಾಚೀನ ಐತಿಹ್ಯವಿದೆ. ಕಾಲಕಾಲಕ್ಕೆ ಆಳ್ವಿಕೆಯನ್ನು ಮಾಡಿದ ಅರಸು ಮನೆತನಗಳ ರಾಜಕೀಯ ಪ್ರಭಾವದ ಸ್ಥಿತ್ಯಂತರಗಳ ನಡುವೆಯೂ ಈ ಪ್ರದೇಶ ಕಲೆ, ಸಾಹಿತ್ಯ ಹಾಗೂ ಸಂಸ್ಕೃತಿಗಳಿಗೆ ವಿಶಿಷ್ಟ ಕನ್ನೆ ನೆಲವಾಗಿದೆ. ಪ್ರಾಚೀನ ಕಾಲದ ಸಾಕಷ್ಟು ಕುರುಹುಗಳು ಈ ಪ್ರದೇಶದುದ್ದಕ್ಕೂ ಕಂಡುಬಂದರೂ ಅವುಗಳಲ್ಲಿ ಹೆಚ್ಚಿನವು ಅಜ್ಞಾತದಲ್ಲಿಯೇ ಇವೆ. ಇವುಗಳಲ್ಲಿ ಪ್ರಾಚೀನ ಭಿತ್ತಿಚಿತ್ರಗಳೂ ಸೇರಿವೆ. ಅತ್ಯಂತ ಹಳೆಯ ಕಾಲದ ಮನೆ, ಮಠ-ಮಂದಿರಗಳು ಸೇಡಂ ಪಟ್ಟಣದುದ್ದಕ್ಕೂ ಕಂಡುಬರುತ್ತವೆ. ಈ ವಾಸ್ತುರಚನೆಗಳಲ್ಲಿ ಬಹಳ ಹಿಂದೆಯೇ ರಚಿಸಲಾದ ಸಾಕಷ್ಟು ಭಿತ್ತಿಚಿತ್ರಗಳನ್ನು ನಾವು ಇಂದಿಗೂ ನೋಡಬಹುದಾಗಿದೆ. ಅವುಗಳಲ್ಲಿ ಸೇಡಂ ಪಟ್ಟಣದ ಕಮಲಾವತಿ ನದಿ ದಂಡೆಯಂಚಿನಲ್ಲಿರುವ ಶ್ರೀ ಶಿವಶಂಕರಸ್ವಾಮಿ ಮಠವೂ ಒಂದು.

ಸುಮಾರು ಮೂರು ಶತಮಾನಗಳಿಗೂ ಅಧಿಕಕಾಲದ ಇತಿಹಾಸವಿರುವ ಈ ಮಠದ ಕೋಣೆಯೊಂದರಲ್ಲಿ ಸಾಕಷ್ಟು ಭಿತ್ತಿಚಿತ್ರಗಳು ರಚನೆಗೊಂಡಿವೆ. ಧಾರ್ಮಿಕ, ಸಾಮಾಜಿಕ ಹಿನ್ನೆಲೆಯ ಚಿತ್ರಗಳೊಂದಿಗೆ ಅಲಂಕಾರಿಕ ಹಾಗೂ ನಿಸರ್ಗ ಚಿತ್ರಗಳೂ ಇಲ್ಲಿವೆ. ಈ ಚಿತ್ರಗಳು ರಚನೆಗೊಂಡು ಒಂದು ಶತಮಾನವೇ ಗತಿಸಿದರೂ ಇಂದಿಗೂ ಕಲಾಪ್ರಪಂಚದಿಂದ ಅಜ್ಞಾತದಲ್ಲೇ ಇವೆ. ಈ ಹಿನ್ನೆಲೆಯಲ್ಲಿ ಇಂದಿನ ಸಮಕಾಲೀನ ಕಲಾಪೀಳಿಗೆಗೆ ಪರಿಚಯಿಸುವ ದೃಷ್ಟಿಯಿಂದ ಪ್ರಸ್ತುತ ಲೇಖನವನ್ನು ಸಿದ್ಧಪಡಿಸಲಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಹೆಚ್ಚಿನ ವಿವರಗಳಿಗೆ ನೋಡಿ : ೧೯೬೮ : *Karnataka Through the Ages* : The Government of Mysore.

೨. ಇವರು ಮಧ್ವಾಚಾರ್ಯರ ಸರ್ವಮೂಲ ಗ್ರಂಥಗಳಿಗೆ ಟೀಕೆಯನ್ನು ಬರೆದು ಟೀಕಾಚಾರ್ಯರೆನಿಸಿಕೊಂಡಿದ್ದಾರೆ. **'ಶ್ರೀಸುಧಾ'** ಎಂಬುದು ಟೀಕಾಚಾರ್ಯರು ರಚಿಸಿದ ಗ್ರಂಥಗಳಲ್ಲೊಂದಾಗಿದೆ.

೩. ಮುಂದೆ ಕೆಲವೇ ದಿನಗಳಲ್ಲಿ ಪೂಜ್ಯ ಶ್ರೀ ಕಂಬದ ಯತಿಗಳು ಜೀವಂತ ಸಮಾಧಿಯನ್ನು ಹೊಂದುತ್ತಾರೆ. ಒಂದು ಕಂಬದಲ್ಲಿ ಅಂತರ್ಗತವಾದ ಅವರ ಸಮಾಧಿಯನ್ನು ಶ್ರೀ ಶಿವಶಂಕರಸ್ವಾಮಿ ಮಠದಲ್ಲಿ ನಾವು ಇಂದಿಗೂ ನೋಡಬಹುದಾಗಿದೆ.

೪. ನಿಜಾಮ ಕಾಲದ ಕೆಲವೊಂದು ದಾಖಲೆಗಳು ಶ್ರೀ ಶಿವಶಂಕರಸ್ವಾಮಿ ಮಠದಲ್ಲಿ ಕಂಡುಬಂದಿದ್ದು, ಅವುಗಳಲ್ಲಿ ಈ ಮಠಕ್ಕೆ ಹೈದರಾಬಾದ ನಿಜಾಮ ಸರಕಾರದ ರಕ್ಷಣೆಯ ಕುರಿತಾದ ಉಲ್ಲೇಖಗಳು ದೊರೆಯುತ್ತವೆ.

೫. ಮಠದ ಪರಂಪರೆಯಂತೆ ಇವರನ್ನು ಶ್ರೀ ಶಿವಶಂಕರಸ್ವಾಮಿಗಳೆಂದೇ ಕರೆಯಲಾಗುತ್ತದೆ.

ಡಾ. ಎಫ್.ಟಿ. ಹಳ್ಳಿಕೇರಿ*

# ಸಿದ್ಧರಾಮ ಪರಂಪರೆಯ ಹಾಲುಮತ ಮಠಗಳು

ಹಾಲುಮತ ಗುರು ಪರಂಪರೆಯಲ್ಲಿ ಮುಖ್ಯವಾಗಿ ರೇವಣಸಿದ್ಧ, ಅಮೋಘಸಿದ್ಧ ಹಾಗೂ ಸಿದ್ಧರಾಮ ಎಂಬ ಮೂರು ಸಂಪ್ರದಾಯಗಳಿವೆ. ಇವುಗಳಲ್ಲಿ ಮೊದಲಿನ ಎರಡು ಸಂಪ್ರದಾಯಗಳ ಕುರಿತು ಈ ಹಿಂದೆ ನಡೆದ ಇತಿಹಾಸ ಸಮ್ಮೇಳನಗಳಲ್ಲಿ ಸಂಪ್ರಬಂಧ ಮಂಡಿಸಿದ್ದೆನು.[೧] ಈಗ ಸಿದ್ಧರಾಮ ಪರಂಪರೆಯ ಹಾಲುಮತ ಮಠಗಳ ಬಗಿನ ಪ್ರಸ್ತುತ ಸಂಪ್ರಬಂಧದಲ್ಲಿ ಸಿದ್ಧರಾಮನ ಇತಿವೃತ್ತ, ಆತನ ಶಿಷ್ಯ ಸಿದ್ಧಮಂಕ, ಮಂಕೊಡೆಯರು, ಸಿದ್ಧರಾಮ ಪರಂಪರೆಯ ಹಾಲುಮತ ಮಠಗಳ ಭೌಗೋಳಿಕ ವ್ಯಾಪ್ತಿ, ಜಾತ್ರೆ ಉತ್ಸವ ಹಾಗೂ ಆಚರಣೆಗಳು, ಮಠಾಧಿಪತಿಗಳು ಮತ್ತು ಅವರ ಸ್ಥಿತಿಗತಿ ಇತ್ಯಾದಿ ವಿವರಗಳ ಬಗೆಗೆ ವಿವೇಚಿಸಲಾಗುವುದು.

## ಸಿದ್ಧರಾಮನ ಇತಿವೃತ್ತ ವಿಚಾರ

ಕರ್ನಾಟಕದ ಧಾರ್ಮಿಕ ಪರಂಪರೆಯಲ್ಲಿ ಹಲವು ಕಾರಣಗಳಿಗಾಗಿ ಗಮನಾರ್ಹ ವ್ಯಕ್ತಿಯೆನಿಸಿದ್ದಾನೆ. ಮಹಾರಾಷ್ಟ್ರದ ಸೊಲ್ಲಾಪುರ ಸಮೀಪದ ಸೊನ್ನಲಿಗೆ ಈತನ ಹುಟ್ಟೂರು. ಮುದ್ದಯ್ಯ ಸುಗ್ಗವ್ವೆ ಸಿದ್ಧರಾಮನ ತಂದೆತಾಯಿಗಳು. ರೇವಣಸಿದ್ಧನ ಆಶೀರ್ವಾದದಿಂದ ಜನಿಸಿದ ಸಿದ್ಧರಾಮ ಮೂಲತಃ ಶಿವಸಿದ್ಧ ಪರಂಪರೆಗೆ ಸೇರಿದವನು. ಧಾರ್ಮಿಕವಾಗಿ ಮತ್ತು ಸಾಮಾಜಿಕವಾಗಿ ಅನೇಕ ಲೋಕೋಪಕಾರಕವಾದ ಕಾರ್ಯಗಳನ್ನು ಪೂರೈಸಿದವನು. ಸೊಲ್ಲಾಪುರದಲ್ಲಿ ಯೋಗರಮಣೀಯ ಕ್ಷೇತ್ರ ಹೆಸರಿನ ಕಪಿಲಸಿದ್ಧಮಲ್ಲಿಕಾರ್ಜುನ ದೇವಾಲಯದ ಆವರಣ ಮತ್ತು ಅಷ್ಟಷಷ್ಟಿತೀರ್ಥ ಹೆಸರಿನ ಕೆರೆಯನ್ನು ನಿರ್ಮಾಣ ಮಾಡಿ ಶರಣ ಸಂಸ್ಕೃತಿಗೆ ಮಾರುಹೋದನು. ಆ ಕಾರಣಕ್ಕಾಗಿ ಸಿದ್ಧರಾಮನನ್ನು ಕರ್ಮಯೋಗಿ, ಶಿವಯೋಗಿ, ಎಂದು ಕರೆಯಲಾಗುತ್ತಿದೆ. ಮೂಲತಃ ಕುರುಬ ಜಾತಿಯವನಾದ ಸಿದ್ಧರಾಮ ಶಿವಶರಣ ಚಳುವಳಿಯಲ್ಲಿ ಭಾಗವಹಿಸಿ ಲಿಂಗಾಯತ ಧರ್ಮವನ್ನು ಅಪ್ಪಿಕೊಂಡನೆಂಬ ಸಂಗತಿಯನ್ನು ವಿದ್ವಾಂಸರು ಆಧಾರಪೂರ್ವಕವಾಗಿ ಹೇಳಿದ್ದಾರೆ[೨]. ಇದಕ್ಕೆ ಪೂರಕವೆನ್ನುವಂತೆ ಕುರುಬ ಮತ್ತು ಲಿಂಗಾಯತ ಸಮಾಜಗಳೆರಡಕ್ಕೂ ಈತ ಆರಾಧ್ಯ ಗುರುವೆನಿಸಿದ್ದಾನೆ. ಈ ಎರಡೂ ಸಮಾಜಗಳಲ್ಲಿ ಜನಿಸಿದ ಮಕ್ಕಳಿಗೆ ಈತನ ಹೆಸರಿಡುವ ಪದ್ಧತಿ ಈಗಲೂ ಇದೆ. ವಿಶೇಷವಾಗಿ ಕುರುಬ ಸಮಾಜದಲ್ಲಿಯಂತೂ ಸಿದ್ಧಪ್ಪ, ಸಿದ್ಧಯ್ಯ, ಸಿದ್ಧರಾಮ, ಸಿದ್ಧೇಶ, ಸಿದ್ಧರಾಮಯ್ಯ ಎಂದು ನಾನಾ ಬಗೆಯಾಗಿ ಹೆಸರಿಡುವ ಪದ್ಧತಿ ಪರಂಪರಾನುಗತವಾಗಿ ಬೆಳೆದು ಬಂದಿದೆ. ಕರ್ನಾಟಕದ ಅನೇಕ ಭಾಗಗಳಲ್ಲಿ ಸಿದ್ಧರಾಮನ ಹೆಸರಿನ ಊರುಗಳಿರುವುದನ್ನು ಸಹ ನಾವು ಕಾಣಬಹುದು. ಉದಾ. ಸಿದ್ಧರಾಮನ ಹುಂಡಿ, ಸೊಲ್ಲಾಪುರ, ಸಿದ್ಧಯ್ಯನಪಾಳ್ಯ ಇತ್ಯಾದಿ ಹೆಸರಿಸಬಹುದು. ಬಳ್ಳಾರಿ ಅನಂತಪುರಗಳನ್ನು ಮುಖ್ಯ ಕೇಂದ್ರವನ್ನಾಗಿ ಮಾಡಿಕೊಂಡು ರಾಜ್ಯವಾಳಿದ ಹಂಡೆ ಪಾಳೆಯಗಾರರ ಮನೆದೇವರು ಸೊಲ್ಲಾಪುರದ ಸಿದ್ಧರಾಮೇಶ್ವರ. ಹೀಗಾಗಿ ಸಿದ್ಧರಾಮೇಶ್ವರನ ಆರಾಧನೆ ಕರ್ನಾಟಕ ಹಾಗೂ ಮಹಾರಾಷ್ಟ್ರಗಳಾದ್ಯಂತ ವ್ಯಾಪಕವಾಗಿ ಹರಡಿದೆ. ಇದಕ್ಕೆ ಈತನ ಹೆಸರಿನಲ್ಲಿ ಪ್ರಾಚೀನ ಕಾಲದಿಂದಲೂ ತಲೆ ಎತ್ತಿರುವ ಮಠಗಳು ಮತ್ತು ದೇವಾಲಯಗಳು ಸಾಕ್ಷಿಯಾಗಿವೆ. ಒಟ್ಟಿನಲ್ಲಿ ಸಿದ್ಧರಾಮನ ತನ್ನ ವಿಶಿಷ್ಟವಾದ ಧಾರ್ಮಿಕ ಮತ್ತು ಸಾಮಾಜಿಕ ಕಾರ್ಯಸಾಧನೆಗಳಿಂದಾಗಿ ಕರ್ನಾಟಕದ ಜನಮಾನಸದಲ್ಲಿ ಪೂಜನೀಯ ವ್ಯಕ್ತಿಯೆನಿಸಿದ್ದಾನೆ. ಅಂಥ ಪೂಜನೀಯ ವ್ಯಕ್ತಿತ್ವಕ್ಕೆ ಅನೇಕರು ಮಾರು ಹೋಗಿ ಶಿಷ್ಯತ್ವವನ್ನು ಪಡೆದುಕೊಂಡಿರುವರು. ಆ ಶಿಷ್ಯ ಪ್ರಶಿಷ್ಯರಲ್ಲಿ ಕುರುಬ ಸಮುದಾಯದ ಸಿದ್ಧಮಂಕ, ಆತನ ಶಿಷ್ಯರಾದ ಮಂಕೊಡೆಯರು ಮುಖ್ಯರೆನಿಸುತ್ತಾರೆ.

## ಸಿದ್ಧಮಂಕ ಮಂಕೊಡೆಯರು

ಸಿದ್ಧರಾಮನ ಶಿಷ್ಯ ಪರಂಪರೆಯಲ್ಲಿ ಸಿದ್ಧಮಂಕನಿಗೆ ಅಗ್ರಸ್ಥಾನ. ಈತನನ್ನು ಕುರಿತಂತೆ ೧೭ ನೇ ಶತಮಾನದಲ್ಲಿ ಕಾದೊಡಿ ಒಡೆಯ ಸಿದ್ಧ ರಚಿಸಿದ ಸಿದ್ಧಮಂಕ ಚರಿತೆ ಎಂಬ ಕೃತಿಯು ರಚನೆಗೊಂಡಿದ್ದು ಅದು ಇತ್ತೀಚೆಗೆ ಪ್ರಕಟಗೊಂಡಿದೆ.

* ಪ್ರಾಧ್ಯಾಪಕರು, ಹಸ್ತಪ್ರತಿಶಾಸ್ತ್ರ ವಿಭಾಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ – ೫೮೩ ೨೭೬, ಬಳ್ಳಾರಿ ಜಿಲ್ಲೆ.



ಅಲ್ಲದೇ ಬಂಕಾಪುರ ಬಸವಣ್ಣೆಪ್ಪ ನೀಲಪ್ಪ ಹಳವಳ್ಳಿ ಅವರು ಹಾಲುಮತದ ಪುರಾಣ ಎಂಬ ಕೃತಿಯೊಂದನ್ನು ೧೯೧೦ರಷ್ಟು ಹಿಂದೆಯೇ ರಚಿಸಿ ಪ್ರಕಟಿಸಿರುವರು[೩]. ಇವೆರಡು ಕೃತಿಗಳ ನೆರವಿನಿಂದ ಸಿದ್ಧಮಂಕನ ಇತಿವೃತ್ತವನ್ನು ಈ ಕೆಳಗಿನಂತೆ ಅವಲೋಕಿಸಬಹುದು. ಈತನನ್ನು ಪರ್ಯಾಯವಾಗಿ ಮರುಳುಮಂಕ, ಮಂಕಸಿದ್ಧ, ಮಂಕಯ್ಯ, ಮಂಕತಂದೆ, ಮಂಕುಸಿದ್ಧರಾಮಯ್ಯ, ಮರುಳಸಿದ್ದೇಶ, ಮರುಳಸಿದ್ಧಯ್ಯ ಎಂದು ಕಾವ್ಯ ಮತ್ತು ಶಾಸನಗಳಲ್ಲಿ ಕರೆಯಲಾಗಿದೆ. ಬಿಜಾಪುರ ಜಿಲ್ಲೆ ಮುದ್ದೆಬಿಹಾಳ ತಾಲೂಕಿನ ಸರೂರು ಗ್ರಾಮ ಈತನ ನೆಲೆ. ಇಲ್ಲಿಂದ ಉತ್ತರ ಭಾಗಕ್ಕೆ ಅರ್ಧ ಕಿ.ಮೀ. ಅಂತರದಲ್ಲಿ ಮಲ್ಲಿಕಾರ್ಜುನ ದೇವಾಲಯವಿದೆ. ಆದರೆ ಈಗ ರೇವಣ್ಣಸಿದ್ಧೇಶ್ವರ ದೇವಾಲಯವೆಂದು ಇದನ್ನು ತಪ್ಪಾಗಿ ಕರೆಯಲಾಗುತ್ತಿದೆ. ಹೀಗಾಗಿ ಇದು ಸಿದ್ಧರಾಮ ಸಂಪ್ರದಾಯದ ಮಲ್ಲಿಕಾರ್ಜುನ ದೇವಾಲಯವೆಂಬುದಂತೂ ಸ್ಪಷ್ಟ. ಈ ದೇವಾಲಯದ ಆವರಣದಲ್ಲಿ ಯಾದವ ಸಿಂಘನ ಕ್ರಿ.ಶ. ೧೨೦೮ ಹಾಗೂ ಕ್ರಿ.ಶ. ೧೨೧೦ನೆಯ ಇಸವಿಯ ಎರಡು ಶಾಸನಶಿಲ್ಪಗಳಿವೆ[೪]. ಈ ಶಾಸನಗಳಲ್ಲಿ ಉಕ್ತಗೊಂಡ "ಮಂಕಯಂಗಳಿಗೆ ಮಲ್ಲಿನಾಥರಾಮವಂಬನು ಸಂನಿಧಾನದಲು", "ಅರಸನಹಳ್ಳಿಯ ವೀರನಗೌಡರ ಕೈಯ್ಯಲು ಮಂಕಯ್ಯನು ಹೊಂನ ಕೊಟ್ಟು ಆ ಹೊಲದಲು" ಹಾಗೂ "ಹೊಂಗಗುಂದದ ಬೀಚುಗುರು ತಂನ ಮಗ ಮಂಕಯನ ಕಾಲದಾ ಗುರುವಿಗೆ ಮಂಕಯನು ಮಲ್ಲಿನಾಥದೇವರ ಸ್ತಾನವಾ ಧಾರಾಪೂರ್ವಕ ಮಾಡಿಕೊಟ್ಟರು" ಎಂಬ ವಾಕ್ಯಗಳು ಕಾವ್ಯೋಕ್ತ ಮಂಕಯ್ಯನನ್ನು ನೆನಪಿಸಿತ್ತವೆ. ಅಲ್ಲದೇ "ಸರವೂರ ಅರಳಿಗೆರೆಯ ಕೋಡಿಯ ಮಲ್ಲಿಕಾರ್ಜನ ದೇವರು ಸಿಧರಾಮ ತಂದೆ ಪ್ರತಿಷ್ಠೆ ಮಾಡಿದ" ಎಂಬ ಹೇಳಿಕೆಯಿಂದ ಈ ದೇವಾಲಯದಲ್ಲಿರುವ ಮಲ್ಲಿಕಾರ್ಜುನ ಲಿಂಗವನ್ನು ಸಿದ್ಧರಾಮನು ಸ್ಥಾಪಿಸಿದನೆಂಬುದು ಸ್ಪಷ್ಟವಾಗುತ್ತದೆ. ಆದ್ದರಿಂದ ಇದು ರೇವಣಸಿದ್ಧನ ದೇವಾಲಯವಾಗಿರದೇ ಮಲ್ಲಿಕಾರ್ಜುನ ಅಥವಾ ಮಲ್ಲಿನಾಥ ದೇವಾಲಯವಾಗಿರುವ ಸಾಧ್ಯತೆ ಹೆಚ್ಚು. ಶಾಸನ ಸೂಚಿಸುವಂತೆ ಈ ದೇವಾಲಯದ ಸಮೀಪ ದೊಡ್ಡದಾದ ಕೆರೆಯ ಕೋಡಿಯೊಂದು ಈಗಲೂ ಕಾಣಬಹುದು. ಕುರುಬರ ಗುರುಗಳಾದ ಮಂಕ ಒಡೆಯರು ಈ ದೇವಾಲಯದ ಅಧಿಪತಿಗಳು ಮತ್ತು ಪೂಜಾರಿಗಳು. ಇವರು ಶತಶತಮಾನಗಳಿಂದ ಹಾಲುಮತದ ಜಗದ್ಗುರುಗಳಾಗಿರುವರು. ದೇವಾಲಯದ ಪಕ್ಕದಲ್ಲಿಯೇ ಈ ಹಿಂದಿನ ಒಡೆಯರ ಸಮಾಧಿಗಳಿರುವುದನ್ನೂ ನೋಡಬಹುದು. ಪ್ರಸ್ತುತ ಸಿದ್ಧಯ್ಯ, ಕಾಡಯ್ಯನವರ ನೇತೃತ್ವದಲ್ಲಿ ದೀಪಾವಳಿ ಮತ್ತು ಶಿವರಾತ್ರಿಗಳಂದು ಜಾತ್ರೆ ಉತ್ಸವ, ಪಲ್ಲಕಿ, ಮೆರವಣಿಗೆ, ಪೂಜಾಕಾರ್ಯಕ್ರಮಗಳು ಜರುಗುತ್ತಿವೆ. ಇದರಲ್ಲಿ ಕರ್ನಾಟಕ ಮತ್ತು ಮಹಾರಾಷ್ಟ್ರ ಪ್ರಾಂತದ ಸಾವಿರಾರು ಕುರುಬ ಕುಟುಂಬಗಳು ಶ್ರದ್ಧೆ ಭಕ್ತಿಯಿಂದ ಪಾಲ್ಗೊಳ್ಳುತ್ತಾರೆ. ಈ ಸಂದರ್ಭದಲ್ಲಿ ಮಳೆಬೆಳೆ, ವರ್ತಮಾನದ ವಿದ್ಯಮಾನಗಳ ಕುರಿತು ಒಡೆಯರಿಂದ ಹೇಳಿಕೆಗಳಾಗುತ್ತವೆ. **'ಪುಂಡಿಯ ಕಟ್ಟಿಗ್ಯಾಗ ಕೆಂಡವ ಒಗೆದ್ಹಾಂಗ ಪುಂಡ ಸರೂರ ಒಡೆಯರು ಹೇಳಿದ ಮಾತು ಬಂಡೀಗಿ ಕೀಲು ಜಡಿದಂಗ'** ಎಂಬಂಥ ಮಳೆಬೆಳೆ ಕುರಿತಾದ ಹೇಳಿಕೆಗಳು ಸಾಮಾಜಿಕವಾಗಿ ಇಂದಿಗೂ ಮಹತ್ವವನ್ನು ಪಡೆದುಕೊಂಡಿವೆ. ಅಲ್ಲದೇ ಕುರುಬರ ಮದುವೆ ಮರಣದಂಥ ಸಾಮಾಜಿಕ ಆಚರಣೆಗಳು ಇವರ ನೇತೃತ್ವದಲ್ಲಿಯೇ ನಡೆಯುತ್ತವೆ.

ಸರೂರಿನಿಂದ ಮೂರು ಕಿ.ಮೀ.ಗಳ ಅಂತರದಲ್ಲಿ ತೂಗುಡ್ಡ ಹೆಸರಿನ ಗುಡ್ಡಗಾಡಿನಿಂದ ಆವೃತವಾದ ಪ್ರದೇಶವಿದೆ. ಇಲ್ಲಿ ಶಿರವಡಿಯಾಗಿ ಪಾದ ಮೇಲಾಗಿ ಭಯಂಕರವಾದ ತಪಸ್ಸನ್ನು ಮಾಡಿ, ಕಲ್ಯಾಣಪಟ್ಟಣದಿಂದ ಹೊರಹಾಕಲ್ಪಟ್ಟ ಕುರುಬರನ್ನು ಮತ್ತೆ ಕಲ್ಯಾಣದೊಳಗೆ ಪ್ರವೇಶಿಸುವಂತೆ ಮಾಡಿದುದು, ಬಸವ ಸಿದ್ಧರಾಮ ರೇವಣಸಿದ್ಧರ ಸಮ್ಮುಖದಲ್ಲಿ ಕುರುಬ ಕುಲಕ್ಕೆ ಗುರುವಾಗಿ ನೇಮಕಗೊಂಡಿರುವುದು ಸಿದ್ಧಮಂಕನ ಜೀವನದಲ್ಲಿ ನಡೆದ ಘಟನೆಗಳು. ಈ ಘಟನೆಗಳನ್ನು ಸಿದ್ಧಮಂಕ ಚರಿತೆಯು ಅತ್ಯಂತ ವಿಸ್ತೃತವಾಗಿ ನಿರೂಪಿಸುತ್ತದೆ. ಹಾಗೆಯೇ ಸರೂರಿನಲ್ಲಿ ಕುರುಬರ ಗುರು ಒಡೆಯರ ಮನೆತನಗಳು ಅಧಿಕ ಸಂಖ್ಯೆಯಲ್ಲಿವೆ. ಕಲ್ಯಾಣದಿಂದ ಹೊರಹಾಕಲ್ಪಟ್ಟ ನಂತರ ಕುರುಬರು ತೂಗುಡ್ಡದಲ್ಲಿ ಬಂದು ನೆಲೆಸಿದ್ದು, ಸಿದ್ಧಮಂಕ ಇಲ್ಲಿ ತಪಸ್ಸನ್ನು ಮಾಡಿದ ವಿಷಯವನ್ನು ಅಲ್ಲಿನ ಜನರು ಈಗಲೂ ಹೇಳುತ್ತಾರೆ.

ಸಿದ್ಧಮಂಕ ಸಂಪ್ರದಾಯದ ಒಡೆಯರನ್ನು ಮಂಕೊಡೆಯರು ಎಂದು ಕರೆಯುತ್ತಾರೆ. ಇವರು ಸಿದ್ಧರಾಮೇಶ್ವರ ದೇವಾಲಯ ಹಾಗೂ ಮಠಗಳ



ಅಧಿಪತಿಯರಾಗಿ ಮತ್ತು ಪೂಜಾರಿಗಳಾಗಿ ಕಾರ್ಯನಿರ್ವಹಿಸುತ್ತಿದ್ದಾರೆ. ಇವರು ಕುರುಬರೊಂದಿಗೆ ಸಾಮಾಜಿಕ ಸಂಬಂಧವನ್ನು ಬೆಳೆಸದೇ ಪ್ರತ್ಯೇಕವಾಗಿಯೇ ಗುರುತಿಸಿಕೊಂಡಿದ್ದಾರೆ. ಆದರೆ ಕುರುಬರು ಕೊಡುವ ದಕ್ಷಿಣೆ, ಧನಧಾನ್ಯಗಳನ್ನು ಸ್ವೀಕರಿಸುತ್ತಾರೆ. ನಂತರದ ದಿನಗಳಲ್ಲಿ ಕುರುಬರ ಗುರುಪರಂಪರೆಯಲ್ಲಿ ವಾದವಿವಾದಗಳು ಏರ್ಪಟ್ಟು ನಾಹೆಚ್ಚು ನೀ ಕಡಿಮೆ ಎಂಬ ತಾರತಮ್ಯ ಬೆಳೆದುಬಂದಿರುವುದನ್ನು ಕಾಣುತ್ತೇವೆ. ಇದಕ್ಕೆ ಶಾಸನಗಳು, ಕಾಗದಪತ್ರಗಳಲ್ಲಿ ಅನೇಕ ಉಲ್ಲೇಖಗಳಿವೆ. ತುಮಕೂರು ಜಿಲ್ಲೆಯ ತುರುವೆಕೆರೆಯ ರೇವಣಸಿದ್ಧೇಶ್ವರ ಮಠದ ಗೌಡರ ವಶದಲ್ಲಿರುವ ತಾಮ್ರಶಾಸನವೂ ಇದಕ್ಕೊಂದು ಒಳ್ಳೆಯ ನಿದರ್ಶನ[೬]. ಈ ಶಾಸನದ ಕಾಲ ಶಾ.ಶ. ೧೪೮೦. ವಿಜಯನಗರದ ದೊರೆಗಳಾದ ವೀರಪ್ರತಾಪ, ರಾಮರಾಜೈಯ್ಯ, ಸದಾಶಿವಯ್ಯ, ವೆಂಕಟಾದ್ರಿರಾಜ ಇವರ ಸಮ್ಮುಖದಲ್ಲಿ, ವಿವಿಧ ಮಠಗಳ ಸ್ವಾಮೀಜಿಗಳು ಮತ್ತು ಹಿರಿಯರುಗಳ ನೇತೃತ್ವದಲ್ಲಿ ನಡೆದ ಕುರುಬರಿಗೆ ಗುರುಗಳಾರು ಎಂಬ ವಾದ ವಿವಾದವೇ ಈ ಶಾಸನದ ಮುಖ್ಯವಸ್ತು. ಈ ವಾದದಲ್ಲಿ ಶಾಂತಮುತ್ತೈಯ್ಯನು ಮಂಕನವರನ್ನು ಗೆದ್ದು ಸೆರೆ ಹಾಕಿಸಿದ ಪ್ರಸ್ತಾಪ ಬಂದಿದೆ. ಇಂಥ ವಿಷಯವನ್ನೊಳಗೊಂಡ ತಾಮ್ರಪತ್ರ ಮತ್ತು ಕಾಗದಪತ್ರದಗಳು ಕರ್ನಾಟಕದ ಅನೇಕ ಒಡೆಯರ ಮನೆತನದಲ್ಲಿವೆ. ಇದರಿಂದ ಕುರುಬರ ಗುರು ಒಡೆಯರಲ್ಲಿಯೇ ಎರಡು ಪಂಗಡಗಳಿರುವುದನ್ನು ಗುರುತಿಸಬಹುದು. ೧. ರೇವಣಸಿದ್ಧೇಶ್ವರನ ಶಿಷ್ಯ ಶಾಂತಮುತ್ತಯ್ಯನ ಅನುಯಾಯಿಗಳಾದ ಶಾಂತೊಡೆಯರು ೨. ಸೊನ್ನಲಾಪುರದ ಸಿದ್ಧರಾಮನ ಶಿಷ್ಯ ಸಿದ್ಧಮಂಕನ ಅನುಯಾಯಿಗಳಾದ ಮಂಕೊಡೆಯರು. ಇವರಲ್ಲಿ ರೇವಣಸಿದ್ಧೇಶ್ವರರ ಪರಂಪರೆಯ ಶಾಂತೊಡೆಯರೆ ಹಾಲುಮತದ ಕುರುಬರಿಗೆ ಗುರುಗಳು ಎಂಬುದು ಪ್ರಸ್ತುತ ಶಾಸನದಿಂದ ತಿಳಿದು ಬರುವ ಸಂಗತಿ. ಈ ಶಾಸನದ ವಸ್ತುವನ್ನು ಹೋಲುವ ತಗರ ಪವಾಡ ಹೆಸರಿನ ಕಾವ್ಯವು ತುಮಕೂರು ಜಿಲ್ಲೆಯ ಚಿಕ್ಕನಾಯಕನಹಳ್ಳಿ ಪರಿಸರದಲ್ಲಿ ಮೌಖಿಕವಾಗಿ ಮತ್ತು ಹಸ್ತಪ್ರತಿ ರೂಪದಲ್ಲಿ ಲಭ್ಯವಿದ್ದು, ಇತ್ತೀಚೆಗೆ ಅದು ಪ್ರಕಟಗೊಂಡಿದೆ[೭]. ಹೀಗೆ ಕುರುಬರ ಗುರು ಪರಂಪರೆಯಲ್ಲಿ ಶಾಂತಮುತ್ತೈಯ್ಯ, ರೇವಣಸಿದ್ಧೇಶ್ವರರ ಮುಂದುವರಿಕೆಯಾಗಿ ಇಂದಿಗೂ ಶಾಂತೊಡೆಯರು ಮತ್ತು ಮಂಕೊಡೆಯರು ಈ ಸಮಾಜದ ಗುರುಗಳಾಗಿರುವುದು ಕಂಡು ಬರುತ್ತದೆ.

**ಮಠ-ದೇವಾಲಯಗಳ ಭೌಗೋಳಿಕ ವ್ಯಾಪ್ತಿ**

ಸಿದ್ಧರಾಮ ಪರಂಪರೆಯ ಕುರುಬರ ಮಠಗಳು ರೇವಣಸಿದ್ಧ ಮಠಗಳ ಸಂಖ್ಯೆಯ ದೃಷ್ಟಿಯಿಂದ ಹೋಲಿಸಿದರೆ ತುಂಬಾ ಕಡಿಮೆ. ಈಗಾಗಲೇ ಉಲ್ಲೇಖಿಸಿದಂತೆ ಮುದ್ದೇಬಿಹಾಳ ತಾಲೂಕಿನ ಸರೂರು ಗ್ರಾಮದಲ್ಲಿರುವ ಸಿದ್ಧರಾಮ ಪರಂಪರೆಯ ಕುರುಬರ ದೇವಾಲಯ ಅತ್ಯಂತ ಪ್ರಾಚೀನವಾದುದು. ಈ ಮಠದ ಪೂಜಾರಿಗಳು ಮಂಕೊಡೆಯರು. ಇದನ್ನು ಬಿಟ್ಟರೆ ದಕ್ಷಿಣ ಕರ್ನಾಟಕದಲ್ಲಿ ಈ ಪರಂಪರೆಯ ಕೆಲವು ಗ್ರಾಮಗಳಲ್ಲಿ ದೇವಾಲಯ ಮತ್ತು ಮಠಗಳು ಸ್ಥಾಪನೆಯಾಗಿವೆ. ಅವುಗಳಲ್ಲಿ ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲೂಕಿನ ಅಜ್ಜಂಪುರ ಹೋಬಳಿಗೆ ಸೇರಿದ ಸೊಲ್ಲಾಪುರ ಗ್ರಾಮದ ಸಿದ್ಧರಾಮೇಶ್ವರ ದೇವಾಲಯ. ತುಮಕೂರು ಜಿಲ್ಲೆಯ ತಿಪಟೂರು ತಾಲೂಕಿನ ಹೊನ್ನವಳ್ಳಿಯ ವಡೆಹುಡಿ ಸಿದ್ಧರಾಮೇಶ್ವರ ಮಠ, ಇದೇ ಜಿಲ್ಲೆಯ ಚಿಕ್ಕನಾಯಕನಹಳ್ಳಿಯ ಸಿದ್ಧರಾಮೇಶ್ವರ ಮಠ. **ಯಳನಾಡು** ಗ್ರಾಮದ ಸಿದ್ಧರಾಮೇಶ್ವರ ದೇವಾಲಯ ಹಾಗೂ ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ **ಬಾಣಾವರದ** ಸಿದ್ಧರಾಮೇಶ್ವರ ಮಠ ಪ್ರಮುಖವಾದವುಗಳು, ಅಷ್ಟೇ ಏಕೆ, ತುಮಕೂರು ಜಿಲ್ಲೆಯೊಂದರಲ್ಲಿಯೇ ಗೋಡೆಕೆರೆ, ಬೆಳಗುಂಬ, ಸಿದ್ಧರಾಮರೇವರಹಳ್ಳಿ, ಮೂಗನಾಯಕನಕೋಟೆ, ಶೆಲಿಯನಪಾಳ್ಯ ಮುಂತಾದ ಹತ್ತಕ್ಕೂ ಹೆಚ್ಚು ಗ್ರಾಮಗಳಲ್ಲಿ ಸಿದ್ಧರಾಮೇಶ್ವರ ದೇವಾಲಯಗಳಿರುವುದನ್ನು ಕಾಣಬಹುದು.

## ಜಾತ್ರೆ ಉತ್ಸವ ಹಾಗೂ ಆಚರಣೆಗಳು

ಸಿದ್ಧರಾಮನ ಮುಖ್ಯ ಕ್ಷೇತ್ರವಾದ ಮಹಾರಾಷ್ಟ್ರದ ಸೊಲ್ಲಾಪುರ ಪರಿಸರದಲ್ಲಿಯೇ ಒಂಭತ್ತು ಮಠಗಳಿವೆ. ಅವುಗಳಲ್ಲಿ ಒಂದು ಮಠ ಮಂಕೊಡೆಯರಿಗೆ ಸೇರಿದುದಾಗಿದೆ. ಮಹಾರಾಷ್ಟ್ರದ ಧನಗಾರ(ಕುರುಬ) ಸಮುದಾಯಕ್ಕೆ ಸಿದ್ಧರಾಮನು ದೈವವಾಗಿದ್ದಾನೆ. ಅಲ್ಲಿ ಸಿದೋಬಾ, ಸಿದ್ಧೇಶ್ವರ ಎಂದು ಕರೆಸಿಕೊಳ್ಳುತ್ತಿರುವ ಈತನ ಹೆಸರಿನ ಅನೇಕ ದೇವಾಲಯಗಳಿವೆ. ಅವುಗಳಲ್ಲಿ ಸಾತಾರ ಜಿಲ್ಲೆಯ ಕಡೋಲಿ ಎಂಬುದು ಬಹುಮುಖ್ಯವಾದುದು. ಈತನ ಆರಾಧನೆಯಿಂದಾಗಿ ಈ ಊರಿನ ಸಿದ್ಧೇಶ್ವರ ಕಡೋಲಿ ಎಂಬ ಹೆಸರು ಪ್ರಾಪ್ತವಾಗಿದೆ. ಶಿವರಾತ್ರಿಯ ಉತ್ಸವದಲ್ಲಿ ಸಿದ್ಧೇಶ್ವರ, ವಿಠ್ಠಲ(ಇಟ್ಟಪ್ಪ) ಹಾಗೂ ಜೀರಪ್ಪ ಇವರ ಪಲ್ಲಕ್ಕಿಗಳು ಪರಸ್ಪರ ಭೇಟಿಯಾಗುತ್ತವೆ. ಹೀಗಾಗಿ ಮಹಾರಾಷ್ಟ್ರದಲ್ಲಿಯೂ ಸಿದ್ಧರಾಮನ ಆರಾಧನೆ ಇದೆಯೆಂಬುದು ಸ್ಪಷ್ಟವಾಗುತ್ತದೆ. ಈ ಕುರಿತು ಹೆಚ್ಚಿನ ಶೋಧ ನಡೆಯಬೇಕಾಗಿದೆ[೮].

ಸಿದ್ಧರಾಮನು ದೀಕ್ಷೆಯನ್ನು ಪಡೆದುಕೊಂಡ ನಂತರ ದಕ್ಷಿಣ ಕರ್ನಾಟಕದತ್ತ ಲೋಕಸಂಚಾರ ಮಾಡುತ್ತಿರುವಾಗ ಅಜ್ಜಂಪುರ ಬಳಿ ಮೂರು ದಿನಗಳ ಕಾಲ ತಪಸ್ಸು ಮಾಡಿದನು. ತಪಸ್ಸು ಮಾಡಿದ ಆ ಜಾಗವೇ ಸೊಲ್ಲಾಪುರ ಎಂದು ಪ್ರಸಿದ್ಧಿ ಪಡೆಯಿತು. ಇದು ಸಿದ್ಧರಾಮ ನೆಲೆಸಿದ ಎರಡನೇ ಕ್ಷೇತ್ರವೆಂದು ಅಲ್ಲಿಯ ಭಕ್ತಾದಿಗಳ ಅಭಿಪ್ರಾಯವಾಗಿದೆ. ಈ ಭಾಗದ ಸೊಲ್ಲಾಪುರ, ಬುಳ್ಳಸಾಗರ, ಚನ್ನಸಮುದ್ರ, ಮದುರೈ, ಯಳನಾಡು, ಗೂಳಿಕೆರೆ, ಕಾರೆಕುಟ್ಟೆ ಹೀಗೆ ಏಳು ಊರುಗಳಲ್ಲಿ ಸಿದ್ಧರಾಮ ಸಂಚಾರ ಮಾಡಿದನೆಂದು ಹೇಳಲಾಗುತ್ತದೆ. ಈ ದೇವಾಲಯದ ಪೂಜಾರಿಗಳು ಮಾತ್ರ ಲಿಂಗಾಯತರು, ಭಕ್ತರು ಕುರುಬರು. ಪ್ರತಿ ವರ್ಷ ನಡೆಯುವ ವಿಶೇಷ ಉತ್ಸವದಲ್ಲಿ ಮಂಕೊಡೆಯರು ಕುಂಬಳಕಾಯಿಯಿಂದ ಖ್ಯಾದ್ಯ ತಯಾರಿಸಿ ಸಿದ್ಧರಾಮೇಶ್ವರನಿಗೆ ನೈವೇದ್ಯ ಮಾಡುತ್ತಾರೆ. ಈ ಖ್ಯಾದ್ಯವನ್ನು ಲಿಂಗಾಯತರು ಸೇರಿದಂತೆ ಎಲ್ಲರೂ ಸ್ವೀಕರಿಸುತ್ತಾರೆ. ಹೀಗಾಗಿ ಈ ಸಂದರ್ಭದಲ್ಲಿ ಲಿಂಗಾಯತರಿಗಿಂತ ಮಂಕೊಡೆಯರಿಗೆ ಪ್ರಾಶಸ್ತ್ಯ. ಸಾಮಾನ್ಯ ಪೂಜೆ, ರುದ್ರಾಭಿಷೇಕ ಹಾಗೂ ಮಹಾಭಿಷೇಕ ಹೀಗೆ ದಿನಕ್ಕೆ ಮೂರು ಬಾರಿ ಪೂಜೆ ನಡೆಯುತ್ತದೆ. ಹನ್ನೆರಡು ವರ್ಷಕೊಮ್ಮೆ ವೈಭವಯುತವಾದ ಜಾತ್ರೆ ಇಲ್ಲಿ ಏರ್ಪಡುತ್ತದೆ. ಆ ಜಾತ್ರೆಯ ಆಚರಣೆಗಳಲ್ಲಿ ಕಂತೆಸೇವೆ ಬಹುಮುಖ್ಯವಾದುದು[೯]. ಆ ಕಂತೆಸೇವೆಯನ್ನು ಸಿದ್ಧಪಡಿಸುವವರು ಮುಗುಳಿ ಗ್ರಾಮದ ಕುರುಬರು. ಕಂತೆಸೇವೆಗಾಗಿ ಪಾವಗಡದಿಂದ ಕುರಿಗಳನ್ನು ತರಿಸಿರುತ್ತಾರೆ. ಅಲ್ಲಿನ ಭಕ್ತಾದಿಗಳು ಹೇಳುವ ಹಾಗೆ ಜಾತ್ರೆಯ ಸಂದರ್ಭದಲ್ಲಿ ಪಾವಗಡದಿಂದ ಸೊಲ್ಲಾಪುರಕ್ಕೆ ಕುರಿಗಳು ತಮ್ಮಷ್ಟಕ್ಕೆ ತಾವೇ ಬರುತ್ತವೆ ಎಂಬ ಪ್ರತೀತಿಯಿದೆ. ಬಂದಂತಹ ಕುರಿಗಳೊಂದಿಗೆ ಸಿದ್ಧರಾಮನನ್ನು ಪೂಜೆ ಮಾಡಿ ಕಂತೆಗಾಗಿ ಕುರಿಉಣ್ಣೆಯನ್ನು ಕತ್ತರಿಸಲಾಗುತ್ತದೆ. ಈ ಕಂತೆಸೇವೆಯನ್ನು ಒಪ್ಪಿಸುವುದಕ್ಕಾಗಿ ಅಜ್ಜಂಪುರ ಹೋಬಳಿಗೆ ಸೇರಿದ ಮುಗುಳಿ, ಗುಡಿಹಳ್ಳಿ, ಹೊಸೂರು, ಶಿವನಿ, ಅಂಜ್ಜಂಪುರ, ತಾಳಿಕಟ್ಟೆ ಮತ್ತು ಸೊಲ್ಲಾಪುರ ಗ್ರಾಮದ ಜೀರದೇವರು ಪಲ್ಲಕಿ, ಪೂಜಾರಿಗಳು, ದಳವಾಯಿಗಳು ಮತ್ತು ಈರಗಾರು ಭಾಗವಹಿಸುತ್ತಾರೆ.

ಸಿದ್ಧರಾಮೇಶ್ವರ ದೇವಾಲಯದ ಹಿಂದಿನ ಭಾಗದಲ್ಲಿ ಕುರುಬರ ಓಣಿಯಲ್ಲಿ ಹರಿಯಪ್ಪ ಮತ್ತು ಬೀರಪ್ಪನ ದೇವಾಲಯಗಳಿವೆ. ಈ ದೇವಾಲಯಗಳ ಪೂಜಾರಿಕೆ ಮಾತ್ರ ಕುರುಬರಿಗಿದೆ. ಆದರೆ ಪ್ರತಿ ಸೋಮವಾರ ಸಿದ್ಧರಾಮೇಶ್ವರ ಮಠದ ವತಿಯಿಂದಲೂ ಇಲ್ಲಿ ಪೂಜೆ ಮಾಡಲಾಗುತ್ತದೆ. ಬೀರಪ್ಪ ಕುರುಬರ ಸಾಂಸ್ಕೃತಿಕ ನಾಯಕ ಎಂಬುದು ಗೊತ್ತಿರುವ ಸಂಗತಿ. ಆದರೆ ಹರಿಯಪ್ಪ ಯಾರು? ಆತನು ಎಲ್ಲಿಂದ ಬಂದ? ಆತನ ಇತಿವೃತ್ತಿವೇನು? ಇತ್ಯಾದಿ ಮಾಹಿತಿಗಳು ಸ್ಪಷ್ಟವಾಗುತ್ತಿಲ್ಲ. ಸೊಲ್ಲಾಪುರದ ಕುರುಬ ಭಕ್ತರು ಹೇಳುವ ಪ್ರಕಾರ ಹರಿಯಪ್ಪ ಸಿದ್ಧರಾಮನು ಲೋಕಸಂಚಾರ ಕೈಕೊಂಡಾಗ ಆತನೊಂದಿಗೆ ಬಂದಂತಹ ನಿಷ್ಠಾವಂತ ಒಬ್ಬ ಭಕ್ತ. ಹೀಗಾಗಿ ಈ ಭಾಗದಲ್ಲಿ ಸಿದ್ಧರಾಮನ ದೇವಾಲಯಗಳಿದ್ದ ಕಡೆ ಈತನ ಹೆಸರಿನ ದೇವಾಲಯಗಳು ಕಂಡುಬರುತ್ತವೆ.

ತುಮಕೂರು ಜಿಲ್ಲೆಯ ಯಳನಾಡು ಸಿದ್ಧರಾಮೇಶ್ವರನ ಇನ್ನೊಂದು ಪ್ರಮುಖ ಕೇಂದ್ರ. ಕಲ್ಯಾಣ ಕ್ರಾಂತಿಯ ತರುವಾಯ ಸಿದ್ಧರಾಮ ಆಂಧ್ರಪ್ರದೇಶದ ಪೆನುಗೊಂಡೆಯಲ್ಲಿ ನೆಲಸಿದ್ದು, ಹರಿಯಪ್ಪ ಎಂಬ ಭಕ್ತನೊಂದಿಗೆ ಯಳನಾಡು ಪ್ರಾಂತಕ್ಕೆ ಬಂದನೆಂಬುದು ಇಲ್ಲಿಯ ಜನರ ನಂಬಿಕೆಯಾಗಿದೆ. ದಸರಾ ಹಬ್ಬದ ಸಂದರ್ಭದಲ್ಲಿ ಒಂಭತ್ತು ದಿನಗಳ ಕಾಲ ವಿಜೃಂಭಣೆಯಿಂದ ಜಾತ್ರೆ ನೆರವೇರುತ್ತದೆ. ಅಪಾರ ಭಕ್ತ ಸಮೂಹವನ್ನು ಹೊಂದಿದ ಈ ದೇವಾಲಯದ ಎಲ್ಲ ಜವಾಬ್ದಾರಿಯಲ್ಲಿ ಕುರುಬರು ಮತ್ತು ಲಿಂಗಾಯತರು ಸಮಸಮನಾಗಿ ಭಾಗಿಯಾಗುತ್ತಾರೆ. ಇಲ್ಲಿಯೂ ಹರಿಯಪ್ಪ ದೇವಾಲಯವಿರುವುದು ವಿಶೇಷವಾಗಿದೆ.

ತಿಪಟೂರು ತಾಲೂಕಿನ ಹೊನ್ನವಳ್ಳಿಯ ವಡೆಹುಡಿ ಸಿದ್ಧರಾಮೇಶ್ವರ ಮಠವು ಸುಮಾರು ೨೫೦ ವರ್ಷಗಳಷ್ಟು ಪ್ರಾಚೀನತೆಯನ್ನು ಹೊಂದಿದೆ. ಮಂಕೊಡೆಯರಾದ ಮಳ್ಳಯ್ಯ, ಶಂಕ್ರಯ್ಯ, ಸಿದ್ಧರಾಮಯ್ಯ, ಓಂಕಾರ, ಕುಮಾರಸ್ವಾಮಿ ಈ ಮಠದ ಪೀಠಧಿಪತಿಗಳಾಗಿ ಕಾರ್ಯನಿರ್ವಹಿಸಿದ್ದಾರೆ. ಆಡಳಿತದ ಜವಾಬ್ದಾರಿ ಕುರುಬ ಸಮುದಾಯಕ್ಕೆ ಸೇರಿದೆ. ಹೊನ್ನವಳ್ಳಿ ಸುತ್ತಮುತ್ತಲಿನ ಕೋಡಿಹಳ್ಳಿ, ದೊಡ್ಡನ ಪಾಳ್ಯ,

ಕಲ್ಲಿಕೆರೆ, ಮ್ಯಾಗಳಪಾಳ್ಯ, ಲಕ್ಷ್ಮೀದೇವನಹಳ್ಳಿ ಇತ್ಯಾದಿ ೧೨ ಗ್ರಾಮಗಳಲ್ಲಿರುವ ಕುರುಬ ಸಮುದಾಯದ ಭಕ್ತರು ಈ ಮಠ ವ್ಯಾಪ್ತಿಗೆ ಒಳಪಡುತ್ತಾರೆ. ಪೂರ್ವಾಭಿಮುಖವಾಗಿರುವ ಈ ಮಠವು ಗರ್ಭಗುಡಿ, ಪಡಸಾಲೆ ಮತ್ತು ತೆರೆದ ಸಭಾಂಗಣವನ್ನು ಹೊಂದಿದೆ. ಒಂದೂವರೆ ಅಡಿ ಎತ್ತರ, ಎರಡು ಅಡಿ ಅಗಲದ ವಿಸ್ತೀರ್ಣವುಳ್ಳ ಗದ್ದುಗೆಯ ಮೇಲೆ ಐದು ಅಡಿ ಎತ್ತರದ ಉಕ್ಕಿನ ಸಿದ್ಧರಾಮೇಶ್ವರನ ಮೂರ್ತಿಯನ್ನು ಪ್ರತಿಷ್ಠಾಪಿಸಲಾಗಿದೆ. ಇಪ್ಪತ್ತು ವರ್ಷಗಳ ಹಿಂದೆ ಮಠವನ್ನು ಜೀರ್ಣೋದ್ಧಾರ ಮಾಡಲಾಗಿದೆ. ದಿನಕ್ಕೆರಡು ಸಲ ಪೂಜೆ ನೆರವೇರುವ ಈ ಮಠದಲ್ಲಿ ಪ್ರತಿ ವರ್ಷ ಶಿವರಾತ್ರಿಯ ದಿವಸ ವಿಶೇಷವಾದ ಉತ್ಸವ ಏರ್ಪಡಿಸಲಾಗುತ್ತದೆ. ಈ ಸಂದರ್ಭದಲ್ಲಿ ಅಪಾರ ಭಕ್ತರು ಸೇರಿ ತಮ್ಮ ತಮ್ಮ ಭಕ್ತಿಯನ್ನು ಸಲ್ಲಿಸುತ್ತಾರೆ.

ಹಾಸನ ಜಿಲ್ಲೆಯ ಅರಸೀಕೆರೆ ತಾಲೂಕಿನ ಬಾಣಾವರದ ಸಿದ್ಧರಾಮೇಶ್ವರ ಮಠವು ಸಹ ಮುನ್ನೂರು ವರ್ಷಗಳ ಪರಂಪರೆಯನ್ನುಳ್ಳದ್ದಾಗಿದೆ. ಸರೂರಯ್ಯ ಒಡೆಯರ, ರುದ್ರಯ್ಯ ಒಡೆಯರ, ಬಸಯ್ಯ ಒಡೆಯರು, ಕೆಂಡದಯ್ಯ ಒಡೆಯರು, ಸಿದ್ಧಮಲ್ಲಯ್ಯ ಒಡೆಯರು ಈ ಮಠದ ಒಡೆತನವನ್ನು ಹೊಂದಿದವರು. ಸದ್ಯಕ್ಕೆ ರುದ್ರಯ್ಯ ಒಡೆಯರು ಪೀಠಾಧಿಪತಿಗಳು. ಪೂರ್ವಾಭಿಮುಖವಾಗಿರುವ ಮಠದ ಎಡಭಾಗದಲ್ಲಿ ದಕ್ಷಿಣಾಭಿಮುಖವಾಗಿರುವ ಕೋಣೆಯಲ್ಲಿ ಸುಮಾರು ಐದು ಅಡಿ ಎತ್ತರದ ಗದ್ದುಗೆಯ ಮೇಲೆ ಸಿದ್ಧರಾಮೇಶ್ವರನ ಮೂರ್ತಿಯನ್ನು ಸ್ಥಾಪಿಸಲಾಗಿದೆ. ಮಠದ ಮುಂಭಾಗದಲ್ಲಿ ಬೃಹತ್ ಪ್ರವೇಶದ್ವಾರವಿದ್ದು, ಅದರ ಬಲಭಾಗದಲ್ಲಿ ಒಂದು ಶಿಲಾಶಾಸನವಿದೆ. ಆದರೆ ಆ ಶಾಸನದ ಕಲ್ಲಿಗೆ ಸುಣ್ಣ ಬಣ್ಣ ಬಳಿದಿದ್ದರಿಂದ ವಿಷಯ ಏನೆಂಬುದು ಗೊತ್ತಾಗುತ್ತಿಲ್ಲ. ಆ ಕಲ್ಲನ್ನು ಸ್ವಚ್ಛಗೊಳಿಸಿದರೆ ಶಾಸನದ ವಿಷಯವೇನೆಂಬುದು ಸ್ಪಷ್ಟವಾಗುತ್ತದೆ. ನಾವು ಕ್ಷೇತ್ರಕಾರ್ಯ ಕೈಕೊಂಡ ಸಂದರ್ಭದಲ್ಲಿ ಆ ಕಲ್ಲನ್ನು ಎಷ್ಟೇ ಪ್ರಯತ್ನಿಸಿದರೂ ಸ್ವಚ್ಛಗೊಳಿಸಲು ಸಾಧ್ಯವಾಗಲಿಲ್ಲ. ಅರಳಿಕೆರೆ, ಕರಡಿಹಳ್ಳಿ, ಮಲ್ಲಾಪುರ, ಹೊಸನಾಯಕನಹಳ್ಳಿ, ಕಲ್ಲನಾಯಕನಹಳ್ಳಿ ಮುಂತಾದ ಬಾಣಾವರ ಪರಿಸರದ ಹದಿನೆಂಟು ಗ್ರಾಮದ ಕುರುಬರು ಈ ಮಠದ ಭಕ್ತಾದಿಗಳಾಗಿದ್ದಾರೆ. ಕಾರ್ತಿಕ ಮಾಸದಲ್ಲಿ ವಿಶೇಷವಾದ ಉತ್ಸವವನ್ನು ನಡೆಸಲಾಗುವುದು.

ತುಮಕೂರು ಜಿಲ್ಲೆಯ ತಾಲೂಕು ಕೇಂದ್ರವಾದ ಚಿಕ್ಕನಾಯಕನಹಳ್ಳಿ ಶ್ರೀ ರೇವಣಸಿದ್ಧೇಶ್ವರ, ಶ್ರೀ ಸಿದ್ಧೇಶ್ವರ ಮತ್ತು ಸಿದ್ಧರಾಮೇಶ್ವರ ಎಂಬ ಮೂರು ಮಠಗಳಿವೆ. ಇವುಗಳಲ್ಲಿ ಮೊದಲ ಎರಡು ಮಠಗಳಿಗೆ ರೇವಣಸಿದ್ಧೇಶ್ವರ ಶಾಂತಮುತ್ತಯ್ಯನ ಪರಂಪರೆಯಲ್ಲಿ ಬಂದಿರುವ ಕುರುಬ ಒಡೆಯರು ಗುರುಗಳು. ಮೂರನೆಯ ಶ್ರೀ ಸಿದ್ಧರಾಮೇಶ್ವರ ಮಠಕ್ಕೆ ಮರುಳಮಂಕನ ಪರಂಪರೆಯಲ್ಲಿ ಬಂದ ವೀರಶೈವ ಗುರುಗಳು. ಇವರನ್ನು ಮಂಕ ಒಡೆಯರು, ಮಂಕಯ್ಯಗಳು ಎಂದು ಕರೆಯುತ್ತಾರೆ. ಇವರು ಕುರುಬರಾಗಿದ್ದರೂ ಸಹ ಭಕ್ತರ ಮನೆಗಳಲ್ಲಿ ಜಿನ್ನಸು ಮಾಡುವುದಿಲ್ಲ. ಆದರೆ ಉತ್ಸವಗಳಲ್ಲಿ ಮೂರು ಮಠಗಳ ಒಡೆಯರು ಸಕ್ರಿಯವಾಗಿ ಪಾಲ್ಗೊಳ್ಳುತ್ತಾರೆ. ಸದ್ಯ ಮುದ್ದವೀರಯ್ಯ ಒಡೆಯರ ಅವರು ಸಿದ್ಧರಾಮೇಶ್ವರ ಮಠದ ಪೀಠಾಧಿಪತಿಗಳಾಗಿದ್ದಾರೆ. ಚಿಕ್ಕನಾಯಕನ ಹಳ್ಳಿಯವರೇ ಆದ ಸಿ.ಕೆ. ಪರುಶುರಾಮಯ್ಯನವರು ಹೇಳುವಂತೆ "ನಮ್ಮ ಊರಿನಲ್ಲಿ ಶಿವರಾತ್ರಿಯ ಬೆಳಗಿನ ಪಾರಣೆ ದಿನದಂದು ಅಲಂಕೃತವಾದ ಮೂರು ಬೆಳ್ಳಿ ಪಲ್ಲಕ್ಕಿಗಳಲ್ಲಿ ಮಾಹೇಶ್ವರ ಸ್ವರೂಪಿ ಮೂರ್ತಿಗಳು ಮತ್ತು ಮೂರು ಮಠಗಳ ಬಣ್ಣದ ಪಲ್ಲಕ್ಕಿಗಳಲ್ಲಿ ಅಶ್ವಾರೂಢವಾದ ಅಲಂಕೃತ ಬೀರೇಶ್ವರ ಮೂರ್ತಿಗಳು, ಗಜಗಾತ್ರದ ಮಠದ ಆರು ಬಸವಗಳ ಮೇಲೆ ಹನ್ನೆರಡು ನಗಾರಿ, ಕರಡೆ, ಚಮ್ಮೇಳ, ಕಹಳೆ, ವಾದ್ಯದ ಮೊಳಗಿನೊಂದಿಗೆ ಹೊರಡುವ ಉತ್ಸವ ಕಣ್ಮನ ಸೆಳೆಯುವ ದೃಶ್ಯ, ಪ್ರತಿ ಪಲ್ಲಕ್ಕಿಗಳ ಮುಂದೆ ಝುರಿಪೇಟ, ಶಲ್ಯ, ಕಚ್ಚೆ ಪಂಚೆ ಧರಿಸಿದ ಆಯಾ ಮಠದ ಗೌಡರು, ಬಳಗಭಂಡಾರಿಗಳು ಮುಂಗಟ್ಟಿನಲ್ಲಿ ಮುಖತೋರಣ, ಗುಗ್ಗುಳದ ದಟ್ಟಹೊಗೆ, ಪತ್ತುಗಳ ಬೆಳಕಿನಲ್ಲಿ ಭಕ್ತ ಸಮೂಹದೊಂದಿಗೆ ಮಂದಗತಿಯಲ್ಲಿ ಊರಿನ ಪ್ರಮುಖ ಬೀದಿಗಳಲ್ಲಿ ಸಾಗುವಾಗ ಕೈಲಾಸವೇ ಧರೆಗಿಳದು ಬಂದ ವೈಭವದೊಂದಿಗೆ ಶೋಭಿಸುತ್ತದೆ."[೧೧]

### ಮಠಾಧಿಪತಿಗಳು ಮತ್ತು ಅವರ ಸ್ಥಿತಿಗತಿ

ಈಗಾಗಲೇ ಹೇಳಿದಂತೆ ಸಿದ್ಧರಾಮೇಶ್ವರ ಪರಂಪರೆಯ ಕುರುಬರ ಮಠಗಳಿಗೆ ಮಂಕೊಡೆಯರು ಮಠಾಧಿಪತಿಗಳಾಗಿರುವರು. ಶಾಂತೊಡೆಯರನ್ನು ಹೋಲಿಸಿದಾಗ ಮಂಕೊಡೆಯರ ಸಂಖ್ಯೆ ತುಂಬ ಕಡಿಮೆ. ನಾನು ಗಮನಿಸಿದಂತೆ ಸರೂರು, ಚಿಕ್ಕನಾಯಕನಹಳ್ಳಿ, ಬಾಣಾವರ, ಹೊನ್ನವಳ್ಳಿಗಳಲ್ಲಿ ಮಾತ್ರ ಸಿದ್ಧರಾಮೇಶ್ವರ ಮಠಗಳಿಗೆ ಮಂಕೊಡೆಯರು ಪೀಠಧಿಪತಿಗಳಾಗಿದ್ದಾರೆ. ಆಯಾ ಮಠದ ವ್ಯಾಪ್ತಿಗೆ ಸೇರುವ ಊರುಗಳಲ್ಲಿರುವ ಕುರುಬರ ಮನೆತನಗಳಿಂದ ಇವರು ದವಸ ಧಾನ್ಯ ಮತ್ತು ಹಣದ ರೂಪದಲ್ಲಿ ಕಾಣಿಕೆಯನ್ನು ಪಡೆದುಕೊಳ್ಳಬೇಕು. ಆಧುನೀಕರಣದ ಜೀವನ ಪದ್ಧತಿಯಿಂದಾಗಿ ಒಡೆಯರು ಅಥವಾ ಭಕ್ತರು ಇಂಥ ಧಾರ್ಮಿಕ ಕಾರ್ಯಗಳತ್ತ ಗಮನಹರಿಸುತ್ತಿಲ್ಲ. ಹೀಗಾಗಿ ಇವರಿಬ್ಬರು ಉಪಜೀವನಕ್ಕಾಗಿ ಬೇರೆ ಬೇರೆ ಉದ್ಯೋಗಗಳನ್ನು ಅರಸಿಕೊಂಡು ಹೋಗಿ ವಾಸಿಸುತ್ತಿದ್ದಾರೆ. ಈ ಕಾರಣದಿಂದಾಗಿ ಭಕ್ತರು ಮತ್ತು ಗುರುಗಳ ಸಂಬಂಧ

ದೂರವಾಗುತ್ತಿದೆ. ಮೇಲಾಗಿ ಕಳೆದ ಶತಮಾನದ ಕೊನೆಯ ದಶಕದಲ್ಲಿ ಕನಕದಾಸರ ಹೆಸರಿನಲ್ಲಿ ಕಾಗಿನೆಲೆಯಲ್ಲಿ ಕನಕ ಗುರು ಪೀಠವನ್ನು ಸ್ಥಾಪಿಸಿದ ಕಾರಣದಿಂದಾಗಿ ಕುರುಬ ಸಮಾಜ ತಮ್ಮ ಪಾರಂಪರಿಕ ಗುರುಪರಂಪರೆಯನ್ನು ಕಡೆಗಣಿಸಲಾಗುತ್ತಿದೆ ಎಂಬುದು ಒಡೆಯರ ಆರೋಪ. ಈ ಎಲ್ಲ ಕಾರಣಗಳಿಂದಾಗಿ ಒಡೆಯರ ಸ್ಥಿತಿಗತಿಯಲ್ಲಿ ತುಂಬ ಏರುಪೇರುಗಳಾಗಿವೆ. ಈ ಏರುಪೇರುಗಳನ್ನು ಸರಿಮಾಡಬೇಕಾದರೆ ಕುರುಬ ಸಮಾಜವು ಮತ್ತೆ ಒಡೆಯರನ್ನು ಗಣನೆಗೆ ತೆಗೆದುಕೊಳ್ಳಬೇಕು. ಅಂದಾಗ ಮಾತ್ರ ಈ ಪರಂಪರೆ ಮುಂದುವರಿಯಲು ಅವಕಾಶವಾಗುತ್ತದೆ. ಈ ನಿಟ್ಟಿನಲ್ಲಿ ಕುರುಬ ಸಮಾಜದ ಹಿರಿಯರು, ಪೀಠಾಧಿಪತಿಗಳು, ಚಿಂತಕರು ಒಂದೆಡೆ ಸೇರಿ ಚರ್ಚಿಸಿ ಒಂದು ತೀರ್ಮಾನಕ್ಕೆ ಬರಬೇಕಾಗಿದೆ.

ಇಲ್ಲಿಯವರೆಗಿನ ವಿವೇಚನೆಯಿಂದ ಕಂಡುಕೊಂಡ ಅಂಶಗಳನ್ನು ಈ ಕೆಳಗಿನಂತೆ ಕ್ರೋಡಿಕರಿಸಿ ಹೇಳಬಹುದು: ೧. ಸಿದ್ಧರಾಮೇಶ್ವರ ಮಠ ಮತ್ತು ದೇವಾಲಯಗಳು ಕರ್ನಾಟಕದಲ್ಲಿ ಅಧಿಕ ಪ್ರಮಾಣದಲ್ಲಿವೆ. ೨. ಲಿಂಗಾಯತ ಮತ್ತು ಕುರುಬ ಸಮಾಜಗಳೆರಡಕ್ಕೂ ಆರಾಧ್ಯ ದೈವವಾದ ಕಾರಣ ಸಿದ್ಧರಾಮೇಶ್ವರನ ಆರಾಧನೆ ಕರ್ನಾಟಕದಲ್ಲಿ ಇನ್ನುಳಿದ ದೈವಗಳಿಗಿಂತ ಅಧಿಕ ಪ್ರಮಾಣದಲ್ಲಿ ಕಂಡುಬರುತ್ತದೆ. ೩. ಸರೂರು, ಬಾಣಾವರ, ಚಿಕ್ಕನಾಯಕನಹಳ್ಳಿ, ಹೊನ್ನವಳ್ಳಿಯ ಸಿದ್ಧರಾಮೇಶ್ವರ ಮಠಗಳ ಆಡಳಿತ ಮತ್ತು ಧಾರ್ಮಿಕ ಕಾರ್ಯಚಟುವಟಿಕೆಗಳು ಮಾತ್ರ ಕುರುಬ ಸಮುದಾಯದ ಒಡೆತನದಲ್ಲಿವೆ. ೪. ಯಳನಾಡು, ಸೊಲ್ಲಾಪುರ ಮುಂತಾದ ಕಡೆಗಳಲ್ಲಿ ಕುರುಬ ಮತ್ತು ಲಿಂಗಾಯತರು ಸಮಸಮನಾಗಿ ಭಾಗಿಗಳಾಗಿದ್ದಾರೆ. ಇನ್ನುಳಿದಂತೆ ಸಿದ್ಧರಾಮೇಶ್ವರ ದೇವಾಲಯಗಳ ಆಡಳಿತವನ್ನು ಬಹುತೇಕ ಲಿಂಗಾಯತರು ನೋಡಿಕೊಳ್ಳುತ್ತಿದ್ದಾರೆ. ೫. ಮಂಕೊಡೆಯರು ಕುರುಬ ರೊಂದಿಗೆ ಸಂಬಂಧವನ್ನು ಬೆಳಸಲಿಕ್ಕೆ ಇಷ್ಟಪಡುವುದಿಲ್ಲ. ಬದಲಾಗಿ ಲಿಂಗಾಯತರೊಂದಿಗೆ ಗುರುತಿಸಿಕೊಳ್ಳುತ್ತಾರೆ. ಹೀಗಾಗಿ ಕುರುಬರೊಂದಿಗೆ ಇವರ ಸಂಬಂಧ ಅಷ್ಟೊಂದು ಗಾಢವಾಗಿ ಕಂಡುಬರುವುದಿಲ್ಲ. ೬. ರೇವಣಸಿದ್ಧೇಶ್ವರ ಸಂಪ್ರದಾಯದಲ್ಲಿ ನಡೆಯುವ ಕಂತೆಸೇವೆ ಆಚರಣೆ ಇಲ್ಲಿಯೂ ಜಾರಿಯಲ್ಲಿರುವುದು ಕಾಣಬಹುದು. ೭. ಸಿದ್ಧರಾಮೇಶ್ವರ ನೊಂದಿಗೆ ಇದ್ದನೆಂದು ಹೇಳಲಾಗುತ್ತಿರುವ ಹರಿಯಪ್ಪನ ದೇವಾಲಯಗಳು ದಕ್ಷಿಣ ಕರ್ನಾಟಕದಲ್ಲಿ ಅನೇಕ ಕಡೆ ಇವೆ. ಈ ಹಿನ್ನಲೆಯಲ್ಲಿ ವ್ಯಾಪಕವಾದ ಕ್ಷೇತ್ರಕಾರ್ಯ ಕೈಕೊಂಡಾಗ ಸಿದ್ಧರಾಮ ಪರಂಪರೆಯ ಕುರುಬರ ಮಠಗಳ ಬಗೆಗೆ ಒಂದು ಸ್ಪಷ್ಟ ಚಿತ್ರಣ ದೊರೆಯುವ ಸಾಧ್ಯತೆಯಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಅ. 'ರೇವಣಸಿದ್ಧ ಪರಂಪರೆಯ ಹಾಲುಮತ ಮಠಗಳು', **ಇತಿಹಾಸ ದರ್ಶನ,** ಸಂ. ೨೦, ಪುಟ. ೨೦೫, ಆ. ಅಮೋಘಸಿದ್ಧ ಪರಂಪರೆಯ ಹಾಲುಮತ ಮಠಗಳು, **ಇತಿಹಾಸ ದರ್ಶನ,** ಸಂ. ೨೦, ಪುಟ. ೨೫೦, ೨೦೦೬.

೨. ಎಂ.ಎಂ. ಕಲಬುರ್ಗಿ., 'ಸಿದ್ಧರಾಮ ಮತ್ತು ಸಂಪ್ರದಾಯ' **ಮಾರ್ಗ,** ಸಂ. ೪, ಪುಟ. ೭೯, ಸ್ವಪ್ನ ಬುಕ್ ಹೌಸ್ ಬೆಂಗಳೂರು, ೨೦೦೪.

೩. **I. ಸಿದ್ಧಮಂಕ ಚರಿತೆ,** ಎಂ.ಎಂ. ಕಲಬುರ್ಗಿ, ವೈ.ಸಿ. ಭಾನುಮತಿ (ಸಂ) ಲಿಂಗಾಯತ ಅಧ್ಯಯನ ಸಂಸ್ಥೆ, ಜಗದ್ಗುರು ತೋಂಟದಾರ್ಯ ಸಂಸ್ಥಾನ ಮಠ, ಗದಗ, ೨೦೦೪.

II. ಬಸವಣ್ಣಪ್ಪ ನೀಲಪ್ಪ ಹಳವಳ್ಳಿ, **ಹಾಲುಮತದ ಪುರಾಣವು,** ೧೯೯೯, ವಿದ್ಯಾನಿಧಿ ಪ್ರಕಾಶನ ಗದಗ.

೪. ಅ. *South Indian Inscriptions*, Vol. XV. No.158,1986, ಪುಟ. ೨೦೨, ಆ.ರು.ಮ. ಷಡಕ್ಷರಯ್ಯ, ಸರೂರಿನ ಶಿಲ್ಪಗಳಲ್ಲಿ ಮುನಿ ಭಕ್ತರು, **ಇತಿಹಾಸ ದರ್ಶನ,** ಸಂ. ೪, ಪುಟ. ೭೯, ೧೯೮೯.

೫. ಕುರುಬರ ಸಾಂಸ್ಕೃತಿಕ ಕೇಂದ್ರವಾಗಿ ಸರೂರು ಗ್ರಾಮದ ಸಮಗ್ರ ಅಧ್ಯಯನವನ್ನು ಕೈಕೊಳ್ಳಬೇಕಾದ ಅಗತ್ಯವಿದೆ.

೬ ಎಫ್.ಟಿ. ಹಳ್ಳಿಕೇರಿ., 'ಕುರುಬರ ಗುರು ಪರಂಪರೆಗೆ ಸಂಬಂಧಿಸಿದ ತುರುವೇಕೆರೆ ಶಾಸನ', **ಶಾಸನ ಅಧ್ಯಯನ,** ಸಂ. ೨ ಪುಟ. ೨೬, ೨೦೦೪.

೭. **ತಗರ ಪವಾಡ,** ಎಂ.ಎಂ. ಕಲಬುರ್ಗಿ, ಸಿ.ಕೆ. ಪರಶುರಾಮಯ್ಯ, ಎಫ್.ಟಿ. ಹಳ್ಳಿಕೇರಿ (ಸಂ), ವಿದ್ಯಾನಿಧಿ ಪ್ರಕಾಶನ ಗದಗ, ೨೦೦೪.

೮. ರಾ.ಚಿಂ. ಢೇರೆ (ಅನು. ಚಂದ್ರಕಾಂತ ಪೋಕಳೆ), ಶ್ರೀ ವಿಠ್ಠಲ ಒಂದು ಮಹಾಸಮನ್ವಯ, ಕನ್ನಡ ಪುಸ್ತಕ ಪ್ರಾಧಿಕಾರ, ಬೆಂಗಳೂರು, ಪುಟ. ೨೦೧, ೨೦೦೨.

೯. ಹೆಚ್ಚಿನ ವಿವರಗಳಿಗಾಗಿ ಸಿ.ಕೆ.ಪರಶುರಾಮಯ್ಯ, ಕುರುಬ ಜನಾಂಗದ ಒಂದು ಪ್ರಚಲಿತ ಪ್ರಾಚೀನ ಸಂಪ್ರದಾಯ–ಕರಿಯ ಕಂತೆ, **ಪಾವನ,** ಸಂ. ಎಂ. ಜೈಕುಮಾರ್, ಶ್ರೀ ಕಾಗಿನಲೆ ಮಹಾಸಂಸ್ಥಾನ ಕನಕಗುರು ಪೀಠ, ಕಾಗಿನಲೆ, ಪುಟ ೪೨, ೧೯೯೨.

೧೦. ಯಳನಾಡು ಸಿದ್ಧರಾಮೇಶ್ವರ ಜಾತ್ರೆಯ ಬಗೆಗೆ ಹೆಚ್ಚಿನ ವಿವರಗಳಿಗಾಗಿ ನೋಡಿ. ಚಿಕ್ಕಣ್ಣ ಎಣ್ಣೆ ಕಟ್ಟೆ ಅವರ **ತುಮಕೂರು ಜಿಲ್ಲಾ ಜಾತ್ರೆಗಳು** ಕನ್ನಡ ಪುಸ್ತಕ ಪ್ರಾಧಿಕಾರ ಬೆಂಗಳೂರು, ಪುಟ ೬೪, ೨೦೦೩.

೧೧. **ಕುರುಬರ ಗುರು ಒಡೆಯರು,** ವಿಕಾಸ ಪ್ರಕಾಶನ, ಹೊಸಪೇಟೆ, ಪುಟ. ೮೩, ೨೦೦೭.

ಡಾ. ತಮಿಳ್ ಸೆಲ್ವಿ*

# ಕನ್ನಡ ಸಾಹಿತ್ಯದಲ್ಲಿ ಮೂಗು ಕತ್ತರಿಸುವ ಪ್ರಕ್ರಿಯೆ

ಕಿವಿ-ಮೂಗು ಕತ್ತರಿಸುವ ಶಿಕ್ಷೆಗಳು ಮೃಗೀಯ ವೆನಿಸಿದರೂ ಇವು ಭಾರತೀಯರಿಗೆ ಹೊಸದಲ್ಲ. ರಾಮಾಯಣದಲ್ಲಿ ಲಕ್ಷ್ಮಣನು ಶೂರ್ಪನಖಿಯ ಕಿವಿ-ಮೂಗು-ಮೊಲೆ ಕತ್ತರಿಸಿದ್ದನ್ನು ಎಲ್ಲರೂ ಬಲ್ಲರು. ಯುದ್ಧದಲ್ಲಿ ಸೆರೆ ಸಿಕ್ಕವರ ಮೂಗು ಕತ್ತರಿಸುವ ಪದ್ಧತಿ ಬಹಳ ಹಿಂದಿನಿಂದಲೂ ಇತ್ತು. ಕನ್ನಡ ಕಾವ್ಯಗಳು ಇದನ್ನು 'ಮೂಗರಿತ' ಎಂದು ಉಲ್ಲೇಖಿಸುತ್ತವೆ. 'ಮೂಗರಿತ' ಎಂದರೆ ಮೂಗು ಕತ್ತರಿಸುವುದು ಎಂದರ್ಥ. ಕೆಲವು ಕೃತಿಗಳು ಇದನ್ನು 'ಮೂಗರಿವು' ಎಂದೂ ಹೇಳುತ್ತವೆ.

ಕನ್ನಡದ ಮೊದಲ ಗದ್ಯಕೃತಿಯೆಂಬ ಹೆಗ್ಗಳಿಕೆಗೆ ಪಾತ್ರವಾಗಿರುವ 'ವಡ್ಡಾರಾಧನೆ'ಯಲ್ಲೇ ಮೂಗು ಕತ್ತರಿಸುವ ಪ್ರಸ್ತಾಪವಿದೆ: ಹರಿಪುರಿಯೆಂಬ ಪಟ್ಟಣದಲ್ಲಿ ಗಂಭೀರೆಯೆಂಬ ಒಬ್ಬಳು ಮುದುಕಿಯಿದ್ದಳು. ಅವಳಿಗೆ ಹರಿಣಿ ಎಂಬ ಮಗಳಿದ್ದಳು. ಆಕೆಯನ್ನು ಜಯಂತ ಎಂಬ ಪಟ್ಟಣದಲ್ಲಿದ್ದ ವಸುದತ್ತನೆಂಬ ವ್ಯಾಪಾರಿಗೆ ಕೊಟ್ಟಲ್ಲಿ ಆಕೆ ಗರ್ಭಿಣಿಯಾಗಿ ಅವಳಿಗೆ ಕಡುಬನ್ನು ತಿನ್ನಬೇಕೆಂಬ ಬಯಕೆಯುಂಟಾಯಿತು. ಅವಳಿಗೋಸ್ಕರ ಹಲವು ವಿಧದ ಲಾಡುಗಳು, ಕಡುಬುಗಳು ಮುಂತಾದ ಹಲವು ತರದ ಭಕ್ಷ್ಯಗಳನ್ನು ಸಿದ್ಧ ಮಾಡಿಕೊಂಡು, ಆ ಮುದುಕಿ ಗಂಭೀರೆಯು ಹರಿಪುರದಿಂದ ಹೊರಟು ತನ್ನ ಮಗಳಿದ್ದ ಊರಿಗೆ ಹೋಗುತ್ತಿದ್ದಳು. ಆಕೆ ಹೋಗುವ ದಾರಿಯಲ್ಲಿ ಎಂಟು ಮಂದಿ ಕಳ್ಳರು ಎದುರಾದರು. ಅವರನ್ನು ಕಂಡು, ಅವರೊಳಗೆ ಒಬ್ಬನನ್ನು ಹಿಡಿದು ಅತ್ತಳು: 'ನನ್ನ ಮಗ ನಿನ್ನ ಹಾಗೇ ಇದ್ದ. ಅವನು ನನ್ನನ್ನಗಲಿ ಹೋಗಿ ಹನ್ನೆರಡು ವರ್ಷವಾಯಿತು. ಎಲ್ಲಿಗೆ ಹೋದನೆಂದು ತಿಳಿಯದಾಗಿರುವೆನು. ಅವನನ್ನು ಕಾಣದೆ ರಾತ್ರಿಯೂ ಹಗಲೂ ನೆನೆಸಿ ಅತ್ತು ಕಣ್ಣುಗಳು ಊದಿಕೊಂಡಿವೆ. ಇಂದು ನನಗೆ ನಿನ್ನನ್ನು ಕಂಡಾಗ ಆತನು ಬಂದ ಹಾಗೆಯೇ ಸಂತೋಷವಾಯಿತು. ಮಗನೇ, ನೀವೆಲ್ಲರೂ ಬನ್ನಿ ಹೋಗೋಣ. ಸಮೀಪದ ಊರಿಗೆ ಹೋಗಿ ಸ್ನಾನ ಮಾಡಿ ಊಟ ಮಾಡಿ ಬಟ್ಟೆಯುಟ್ಟು ವಿಶ್ರಾಂತಿ ತೆಗೆದುಕೊಂಡು ನಾಳೆ ಹೋಗಬಹುದು' ಎಂದು ಅವರನ್ನು ಒಡಗೂಡಿಸಿಕೊಂಡು ಹೋಗಿ ಮಗಳ ಮನೆಗೆ ಬಂದು ಅವರಿಗೆಲ್ಲ ಬಿಸಿನೀರು ಸಿದ್ಧಪಡಿಸಿ, ತಲೆಗೆ ಎಣ್ಣೆ ಹಚ್ಚಿಸಿ, ಸ್ನಾನದ ಬಟ್ಟೆಯನ್ನುಡಿಸಿ, ಅವರ ತಲೆಯ ಮೇಲೆ ಬಿಸಿ ಗಂಜಿಯನ್ನು ಸುರಿದು ಆ ಮುದುಕಿ ಮನೆಯ ಮೇಲ್ಗಡೆ ಹತ್ತಿ, 'ಕಳ್ಳರು ಕಳ್ಳರು' ಎಂದು ಗಟ್ಟಿಯಾಗಿ ಕೂಗಿದಳು. ಆಗ ಅವರೆಲ್ಲರೂ ಭಯಪಟ್ಟು ತಟಕ್ಕನೆ ಹಾರಿ ದಿಕ್ಕುಗೆಟ್ಟು ಓಡಿದರು. 'ನಮ್ಮನ್ನು ಈ ಮುದುಕಿ ವಂಚಿಸಿದಳು' ಎಂದು ಹಗೆತನವನ್ನು ಹಿಡಿದಿದ್ದರು. ಇತ್ತ ಮುದುಕಿ ನೆಟ್ಟಗೆ ಇಂದಿನ ರಾತ್ರಿಯಲ್ಲಿ ಕಳ್ಳರು ಬರುವರೆಂದು ತಿಳಿದು ಹರಿತವಾದ ಕತ್ತಿಯನ್ನು ಹಿಡಿದಿದ್ದಳು. ಹೀಗಿರಲು ರಾತ್ರಿಯಲ್ಲಿ ಕಳ್ಳರು ಬಂದು ಆಕೆ ನಿದ್ದೆ ಮಾಡುತ್ತಿದ್ದ ಮನೆಗೆ ಕನ್ನ ಹಾಕಿದರು. ಆಗ ಆ ಕನ್ನದ ತೂತಿನ ಬಾಗಿಲಲ್ಲಿ ಅವಳು ಆ ಕತ್ತಿಯನ್ನು ಅಡ್ಡವಾಗಿ ಹಿಡಿದುಕೊಂಡು ಒಳಗೆ ನುಗ್ಗುವ ಕಳ್ಳನ ಮೂಗನ್ನು ಕತ್ತರಿಸಿದಳು. ಅವನು ಹಿಂದೆರಳಿ ತನಗೆ ಒಳನುಗ್ಗಲು ಅವಕಾಶವಿಲ್ಲ ನೀನು ನುಗ್ಗು ಎಂದು ಇನ್ನೊಬ್ಬನಿಗೆ ಹೇಳಿ ಅವನನ್ನು ನುಗ್ಗಿಸಿದಾಗ ಅವನ ಮೂಗನ್ನೂ ಮುದುಕಿ ಕತ್ತರಿಸಿ ಬಿಟ್ಟಳು. ಆ ಕಳ್ಳನು ಬೇರೊಬ್ಬನನ್ನು ನುಗ್ಗಿಸಿದನು. ಹೀಗೆ ಸರದಿ ಪ್ರಕಾರವಾಗಿ ಆ ಎಲ್ಲ ಕಳ್ಳರ ಮೂಗನ್ನೂ ಕತ್ತರಿಸಲು ಅವರೆಲ್ಲರೂ ಮೂಗು ಕತ್ತರಿಸಿಕೊಂಡವರಾಗಿ ಹೊರಟು ಹೋದರು[೧].

ಇತಿಹಾಸ ಪ್ರಸಿದ್ಧವಾದ ಆತಕೂರು ಶಾಸನವು ಬೂತುಗನ ಬಿರುದಾವಳಿಗಳನ್ನು ಹೇಳುವಾಗ **'ಸೆಣಸೆ ಮೂಗರಿವೊಂ'** ಎನ್ನುತ್ತದೆ[೨]. ಎಂದರೆ, 'ಹೋರಾಡಲು ನಿಂತರೆ ತನ್ನ ಶತ್ರುಗಳ ಮೂಗು ಕತ್ತರಿಸುವವನು' ಎಂದರ್ಥ!

ಈ ಶಿಕ್ಷಾ ವಿಧಾನ ತುಂಬಾ ಪುರಾತನವಾದುದು. ಈ ಬಗೆಯ ಶಿಕ್ಷೆಯನ್ನು ಕೌಟಿಲ್ಯನೂ ಪ್ರಸ್ತಾಪಿಸುತ್ತಾನೆ[೩] 'ಪ್ರಾಣಿ-ಪಕ್ಷಿಗಳನ್ನು ಕದ್ದೊಯ್ಯುವರು, ಅವರ ಕಳ್ಳತನಕ್ಕೆ ನೆರವು

* ಹಿರಿಯ ಶ್ರೇಣಿ ಉಪನ್ಯಾಸಕರು, ಕನ್ನಡ ವಿಭಾಗ, ಮರೀನಾ ಆವರಣ, ಮದರಾಸು ವಿಶ್ವವಿದ್ಯಾಲಯ, ಚೆನ್ನೈ - ೬೦೦ ೦೦೫.

ನೀಡಿದವರು, ಪದಾರ್ಥಗಳಲ್ಲಿ ಕಲಬೆರಕೆ ಮಾಡುವವರು ಮೊದಲಾದವರು ಮೂಗು-ಕಿವಿ ಕತ್ತರಿಸುವ ಶಿಕ್ಷೆಗೆ ಒಳಗಾಗುವರು ಎಂದು ಕೌಟಿಲ್ಯನ ಅರ್ಥಶಾಸ್ತ್ರ ತಿಳಿಸುತ್ತದೆ. 'ಕಳವು ಮತ್ತು ವ್ಯಭಿಚಾರಗಳಿಗೆ ಸಹಾಯ ಮಾಡಿದ ಸ್ತ್ರೀಗೆ ಮತ್ತು ವ್ಯಭಿಚಾರಿಣಿಗೆ ಕಿವಿ ಮೂಗುಗಳನ್ನು ಕತ್ತರಿಸುವುದು ದಂಡನೆ. ಐನೂರು ಪಣ ನಿಷ್ಕ್ರಯ. ಶೂದ್ರನು ಉತ್ತಮಕುಲೀನ ಹೆಣ್ಣಿನೊಂದಿಗೆ ಅಕ್ರಮ ಸಂಬಂಧ ಬೆಳೆಸಿದಾಗ ಅವನಿಗೆ ಮರಣ ದಂಡನೆಯನ್ನೂ, ಅವಳಿಗೆ ಕಿವಿಮೂಗು ಕತ್ತರಿಸುವ ದಂಡನೆಯನ್ನೂ ವಿಧಿಸಬೇಕೆ'ಂದು ಅವನು ಹೇಳುತ್ತಾನೆ. 'ವ್ಯಭಿಚಾರಿಣಿಯಾಗಿರುವ ದೇಶಾಂತರಗತನಾದವನ ಪತ್ನಿಯನ್ನೂ, ಆ ಪುರುಷನನ್ನೂ ಗಂಡನ ಹಿಂತಚಿಂತಕನಾದ ಸೇವಕನು ಬಂಧಿಸಿ ಪತಿಯು ಬರುವವರೆಗೆ ರಕ್ಷಿಸಬೇಕು. ಅವನು ಅವರನ್ನು ಕ್ಷಮಿಸಿದರೆ ಇಬ್ಬರನ್ನೂ ಬಿಟ್ಟುಬಿಡಬೇಕು. ಕ್ಷಮಿಸದಿದ್ದರೆ ಸ್ತ್ರೀಯ ಕಿವಿ-ಮೂಗುಗಳನ್ನು ಕತ್ತರಿಸಬೇಕು. ಜಾರನಿಗೆ ವಧ ದಂಡನೆ. 'ಅರ್ಥಶಾಸ್ತ್ರ'ದ ೧೪ನೇ ಅಧಿಕರಣದ ೮೫ನೇ ಪ್ರಕರಣದ ಶೀರ್ಷಿಕೆ 'ಏಕಾಂಗವಧ ನಿಷ್ಕ್ರಯಃ'. ಇದರಲ್ಲಿ 'ಇಪ್ಪತ್ತೈದು ಪಣಕ್ಕಿಂತ ಕಡಿಮೆ ಬೆಲೆಯ ಕೋಳಿ, ಮುಂಗುಸಿ, ನಾಯಿ, ಬೆಕ್ಕು, ಹಂದಿಗಳನ್ನು ಕದ್ದರೆ ಅಥವಾ ಹಿಂಸಿಸಿದರೆ ಐವತ್ತನಾಲ್ಕು ಪಣ ದಂಡನೆ. ಇಲ್ಲವೇ ಮೂಗಿನ ತುದಿಯನ್ನು ತುಂಡರಿಸಬೇಕು' ಎಂದು ತಿಳಿಸಲಾಗಿದೆ.

ಮೂಗು ಹರಿತ ಹಾಗೂ ಅದರ ಚಿಕಿತ್ಸೆಯ ಬಗ್ಗೆ ಸುಶ್ರುತ ಸಂಹಿತೆಯೂ ತಿಳಿಸುತ್ತದೆ. ೧೧ನೇ ಶತಮಾನದ ಸೋಮದೇವನು (ಯಶಸ್ತಿಲಕ ಚಂಪೂ'ವಿನಲ್ಲಿ) 'ದೇವದಾನ' ಎಂಬುವವನು ತನ್ನ ಹೆಂಡತಿ ಅಕ್ರಮ ಸಂಬಂಧ ಹೊಂದಿರುವವಳೆಂದು ತಿಳಿದು ಅವಳ ಕಿವಿಮೂಗು ಕತ್ತರಿಸಿ, ಆ ಸುದ್ದಿಯನ್ನು ಅರಸನ ಬಳಿ ಬಂದು ಹೇಳಿದ್ದನ್ನು ದಾಖಲಿಸಿದ್ದಾನೆ.

ಕ್ರಿ.ಶ. ೧೦೬೩-೮೯ರಲ್ಲಿ ಕಾಶ್ಮೀರದ 'ಕಲಸ' ಎನ್ನುವ ಅರಸನ ಆಳಿಕೆಯ ಕಾಲದಲ್ಲಿ ಪರಸ್ತ್ರೀಯರೊಂದಿಗೆ ಕ್ರಮತಪ್ಪಿ ನಡೆದುಕೊಂಡವರನ್ನು ಬಂಧಿಸಿ ಕಂಬಕ್ಕೆ ಕಟ್ಟಿ ಹಾಕಿ ಅವರ ಕೆಲಸದ ಹೆಣ್ಣುಗಳ (ಸೇವಕಿಯರ) ಕೈಯಲ್ಲೇ ಮೂಗು ಕತ್ತರಿಸಲಾಯಿತು.[೪] ಕಾಶ್ಮೀರಿ ಅರಸ ಉಚ್ಚಲ (ಕ್ರಿ.ಶ.೧೧೦೧-೧೧೧೧)ನ ಕಾಲದಲ್ಲಿ ತಪ್ಪು ಮಾಡಿದ ಅಡುಗೆಭಟ್ಟನ ಮೂಗನ್ನು ಅವನ ಹೆಂಡತಿಯ ಮುಂದೆಯೇ ಹರಿಯಲಾಯಿತು.[೫]

ಕಾಶ್ಮೀರಿ ಅರಸನ ಆಡಳಿತಾವಧಿಯಲ್ಲೂ, ದೆಹಲಿ ಸುಲ್ತಾನರ ಕಾಲದಲ್ಲೂ ಈ ಬಗೆಯ ಶಿಕ್ಷೆ ಇದ್ದುದನ್ನು ಕಾಣುತ್ತೇವೆ. ೧೪ನೇ ಶತಮಾನದಲ್ಲಿ ಕುತುಬ್-ಉದ್ದೀನ್-ಐಬಕ್ ದೆಹಲಿಯಿಂದ ಆಳುತ್ತಿದ್ದ. ಕ್ರಿ.ಶ.೧೩೧೮ರಲ್ಲಿ ದೇವಗಿರಿಯ ಅಧಿಕಾರಿ ಯಾಕ್‌ಲಕ್ಕಿ ಎನ್ನುವವನು ಒಂದು ದಂಗೆಯನ್ನು ಹುಟ್ಟು ಹಾಕಿದ. ಕುತುಬ್ ಉದ್ದೀನ್ ಐಬಕನು ಆ ದಂಗೆಯನ್ನು ಅಡಗಿಸಲು ಪಡೆಯನ್ನು ಕಳುಹಿಸಿದ. ಸಂಘರ್ಷದ ಕಡೆಯಲ್ಲಿ ಯಾಕ್‌ಲಕ್ಕಿಯನ್ನು ಬಂಧಿಸಿ ಸಾರ್ವಜನಿಕರ ಸಮ್ಮುಖದಲ್ಲಿ ಆತನ ಕಿವಿ ಮೂಗು ಕತ್ತರಿಸಲಾಯಿತು.

ಬಾಬರ್ ಭಾರತದ ಮೇಲೆ ದಂಡೆತ್ತಿ ಬಂದಾಗ ತನ್ನ ಪಡೆಯೊಂದಿಗೆ ಬಾಗ್ರಾದಲ್ಲಿ ಬೀಡು ಬಿಟ್ಟಿದ್ದಾಗ, ಅವನ ಸೈನಿಕರು ಅಲ್ಲಿನ ಜನರನ್ನು ಹಿಂಸಿಸುತ್ತಿದ್ದರೆಂಬ ಸುದ್ದಿ ಅವನಿಗೆ ತಲುಪಿತು. ಬಾಬರ್ ಆಳುಗಳನ್ನು ಕಳಿಸಿ ತಪ್ಪಿತಸ್ಥರನ್ನು ಬಂಧಿಸಿ ತರುವಂತೆ ಆಜ್ಞೆ ಹೊರಡಿಸಿದ. ಅವರಲ್ಲಿ ಕೆಲವರಿಗೆ ಮರಣ ದಂಡನೆ ವಿಧಿಸಿದರೆ, ಕೆಲವರಿಗೆ ಮೂಗನ್ನು ಉದ್ದಕ್ಕೆ ಸೀಳಿ ಹಾಗೆಯೇ ತೂಗು ಬಿಡುವಂತೆ ಆಜ್ಞಾಪಿಸಿದ. ಈತ ತನ್ನ ಸೈನ್ಯಕ್ಕೆ ಬಂದು ಸೇರದವರಿಗೂ ಕೂಡ ಮೂಗು ಕತ್ತರಿಸುವ ಶಿಕ್ಷೆ ವಿಧಿಸುತ್ತಿದ್ದನಂತೆ.[೬]

* * * *

ಮೂಗು ಕತ್ತರಿಸುವ ಈ ಕ್ರಿಯೆ ಹದಿನೇಳನೇ ಶತಮಾನದಲ್ಲಿ ಮೈಸೂರು ಸೈನ್ಯದಲ್ಲಿ ವ್ಯಾಪಕವಾಗಿ ಕಂಡು ಬರುತ್ತದೆ. ಆದರೆ ಅದಕ್ಕಿಂತ ಮೊದಲು ಮೈಸೂರಿನವರು ನಡೆಸಿದ ಯಾವ ಯುದ್ಧಗಳಲ್ಲೂ ಈ ಸುದ್ದಿಯಿಲ್ಲ. ಕಂಠೀರವನ ಕಾಲದಲ್ಲೂ ಅನಂತರವೂ ಮೈಸೂರು ಸೈನ್ಯ ಇದನ್ನೊಂದು 'ಯುದ್ಧತಂತ್ರ'ವಾಗಿ ಬಳಸಿದ್ದನ್ನು ಕೆಲವು ಐತಿಹಾಸಿಕ ಕಾವ್ಯಗಳೂ, ಶಾಸನಗಳೂ, ವಿದೇಶೀ ಪ್ರವಾಸಿಗರ ಕೃತಿಗಳೂ ದಾಖಲಿಸುತ್ತವೆ. 'ಗ್ರೋಸ್' ಎಂಬ ಪ್ರವಾಸಿ 'ಮೈಸೂರು ಸೈನಿಕರು ಶತ್ರುಗಳ ಮೂಗರಿಯವುದರಲ್ಲಿ ಚತುರರು' ಎಂದು ಬಣ್ಣಿಸಿದರೆ, ಡಾ. ಮನೂಚಿ ಎಂಬ ಇಟಲಿ ದೇಶದ ಪ್ರವಾಸಿ 'ಕಿವಿ ಮೂಗು ಕತ್ತರಿಸುವುದರಲ್ಲಿ ಮೈಸೂರು ಸೈನಿಕರು ಪ್ರತ್ಯೇಕ ಸಾಮರ್ಥ್ಯವನ್ನೇ ಹೊಂದಿರುವವರು' ಎಂದು ತಿಳಿಸುತ್ತಾನೆ. ಶತ್ರುಸೈನ್ಯವನ್ನು ಎದೆಗೆಡಿಸಲಿಕ್ಕೆ ಬಳಸುತ್ತಿದ್ದ ಮೈಸೂರಿನ ಯುದ್ಧತಂತ್ರವೆಂದೇ ಇದು ಪ್ರಸಿದ್ಧ. ತಮ್ಮ ಪ್ರಭುತ್ವಕ್ಕೆ ದ್ರೋಹ ಬಗೆಯುತ್ತಿದ್ದವರ ವಿರುದ್ಧವೂ ಈ ಕಾರ್ಯಾಚರಣೆಯನ್ನು ಕೈಗೊಳ್ಳಲಾಗುತ್ತಿತ್ತೆಂದು ಊಹಿಸಬಹುದು.

ಮೊಗಲ್ ಸೈನಿಕರು ಮೈಸೂರಿನ ಕಾಡುದಾರಿಗಳಲ್ಲಿ ಸಂಚರಿಸುವಾಗ, ಮೈಸೂರಿನ ಸೈನಿಕರು ದಿಢೀರನೆ ಪ್ರತ್ಯಕ್ಷರಾಗಿ ಅವರ ಮೇಲೆ ಆಕ್ರಮಣ ಮಾಡಿ ಚಾಕಚಕ್ಯತೆಯಿಂದ ಅವರ ಮೂಗನ್ನು ಹರಿದು ಕ್ಷಣಾರ್ಧದಲ್ಲಿ ಮಾಯವಾಗುತ್ತಿದ್ದರಂತೆ! ಅವರು ಅರ್ಧಚಂದ್ರಾಕಾರದ ಕಬ್ಬಿಣದ ಆಯುಧಗಳನ್ನು ಸದಾ ತಮ್ಮ ಬಳಿ ಇಟ್ಟುಕೊಳ್ಳುತ್ತಿದ್ದರು. ಈ ಆಯುಧದಿಂದ

ಮೊಗಲ್ ಸೈನಿಕರ ಕುದುರೆಗಳ ಮೇಲೆ ಹಾರಿ ಅವರ ಮೂಗು ಕತ್ತರಿಸುತ್ತಿದ್ದರು. ಇದರಿಂದ ಮೊಗಲರು ಮೈಸೂರಿನ ಕಾಡುಗಳಲ್ಲಿ ಗುಂಪಾಗಿಯೇ ಆಗಲೀ, ಒಂಟಿಯಾಗಿಯೇ ಆಗಲಿ ಸಂಚರಿಸಲು ಹಿಂಜರಿಯುತ್ತಿದ್ದರಂತೆ!

ಮೈಸೂರು ಸೈನ್ಯದಲ್ಲಿ ಇಂತಹುದೊಂದು ಶಿಕ್ಷೆ ಅಥವಾ ಯುದ್ಧತಂತ್ರ ವ್ಯಾಪಕವಾಗಿದ್ದುದನ್ನು ತಿರುಮಲಾರ್ಯನ 'ಅಪ್ರತಿಮವೀರಚರಿತೆ', 'ಚಿಕ್ಕದೇವರಾಜ ವಂಶಾವಳಿ' ಹಾಗೂ ಗೋವಿಂದವೈದ್ಯನ 'ಕಂಠೀರವ ನರಸರಾಜ ವಿಜಯ'ಗಳು ದೃಢಪಡಿಸುತ್ತವೆ.

ಬಿಜಾಪುರದ ರಣದುಲ್ಲಾಖಾನನ ಸೈನ್ಯದ ವಿರುದ್ಧ ಈ ತಂತ್ರವನ್ನು ಬಳಸಲಾಯಿತು. ರಣದುಲ್ಲಾಖಾನನು ಇಕ್ಕೇರಿಯ ಮೇಲೆ (ಬಸವಾಪಟ್ಟಣದ ಕೆಂಗ ಹನುಮನ ಪರವಾಗಿ) ಮೊದಲು ದಾಳಿ ಮಾಡಿ ವಿಜಯಿಯಾಗುತ್ತಾನೆ. ಆ ವಿಜಯದಿಂದ ಉತ್ಸಾಹಿತನಾದ ಬಾದಷಹ ಮೈಸೂರನ್ನು ವಶಪಡಿಸಿಕೊಳ್ಳಲು ಅವನನ್ನು ಕಳಿಸಿಕೊಡುತ್ತಾನೆ. ಈ ದಾಳಿ ಆರಂಭವಾದದ್ದು ಕ್ರಿ.ಶ. ೧೬೩೮ರಲ್ಲಿ. ಎಂದರೆ ಕಂಠೀರವ ನರಸರಾಜ ಒಡೆಯರು ಪಟ್ಟವೇರಿದ ವರ್ಷದಲ್ಲಿ.

ಸೇನಾಪತಿ ರಣದುಲ್ಲಾಖಾನನು ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಅರಸ ಕಂಠೀರವ ನರಸರಾಜ(೧೬೩೮–೧೬೫೯)ನ ಆಜ್ಞೆಯಂತೆ ಅವನ ಸೈನಿಕರು ಸೆರೆ ಸಿಕ್ಕಿದ ಬಿಜಾಪುರದ ಮುಸಲ್ಮಾನರ ಮತ್ತು ಇತರರ ಮೂಗು ಕೊಯ್ದು ಕಳುಹಿಸಿದ ಸಂಗತಿ 'ಕಂಠೀರವನರಸರಾಜ ವಿಜಯ'ದಲ್ಲಿದೆ. ರಣದುಲ್ಲಾಖಾನ್‌ನ ಸೈನ್ಯ ಮೈಸೂರಿನವರ ವಿರುದ್ಧ ಹೊರಟಾಗ ಬಾದಷಹನು ಅವರಿಗೆ ಕೆಲವು ಎಚ್ಚರಿಕೆಯ ಮಾತುಗಳನ್ನೂ ಹೇಳುತ್ತಾನೆ : 'ಮೈಸೂರಿನ ಸೈನಿಕರು ಬೇರೆಯವರಂತಲ್ಲ. ಅವರು ಬಿರುದಾಂಕಿತ ಪರಾಕ್ರಮಿಗಳು. ಕತ್ತಲೆ ಅವರಿಗೆ ಹಗಲಿದ್ದಂತೆ. ಯಾವ ಸಮಯದಲ್ಲಿ ಬೇಕಾದರೂ ಮೇಲೆ ಬೀಳಬಹುದು. ನೀವು ಜಾಗ್ರತೆಯಾಗಿರಬೇಕು. ಮೈಮರೆತು ಸ್ವಲ್ಪ ಎಚ್ಚರ ತಪ್ಪಿದರೂ ಅವರು ಸಟ್ಟುಗ(ಸೌಟು), ಚೂರಿ, ಬಾಕಿನಲ್ಲೇ ಕೆಡವಿ ಮೂಗರಿದು ಬಿಡುತ್ತಾರೆ' (ಕಂ.ನ.ವಿ., ೧೧ನೆಯ ಸಂಧಿ, ಪ. ೧೦೧, ಪು.೨೧೮) ಎಂದು ಎಚ್ಚರಿಕೆಯ ಮಾತುಗಳನ್ನು ಹೇಳಿ ಕಳಿಸುತ್ತಾನೆ. ಶತ್ರುಗಳ ಮೂಗು ಕೊಯ್ಯುವ ಅವರ ಯುದ್ಧತಂತ್ರವನ್ನು ಕಂಠೀರವ ನರಸರಾಜ ವಿಜಯದಲ್ಲಿ ಅವರ ವಿಶೇಷತೆಯೆಂಬಂತೆ ವರ್ಣಿಸಲಾಗಿದೆ!

ಶ್ರೀರಂಗಪಟ್ಟಣದ ಮೇಲೆ ದಾಳಿ ಆರಂಭವಾದಾಗ ಕಂಠೀರವನ ಸೈನ್ಯ ಶತ್ರುಗಳ ವಿರುದ್ಧ 'ಮೂಗರಿವ' ಯುದ್ಧತಂತ್ರವನ್ನು ಬಳಸಿತು. ಮೊದಲ ಸುತ್ತಿನಲ್ಲಿ ಇದು ಯಶಸ್ವಿಯಾಯಿತು ಕೂಡ. ದಳವಾಯಿ ಈ ಕೆಲಸಕ್ಕಾಗಿಯೇ ಗಡಿಯ ಮನ್ನೆಯರನ್ನು ನೇಮಿಸುತ್ತಾನೆ. ಪರಿಣಾಮವಾಗಿ ಊರೂರುಗಳನ್ನು ಹೊಕ್ಕು ತುರುಕರ ಬಲದ ಮೂಗರಿಯಲಾಯಿತು. ಯುದ್ಧಕ್ಕೆ ಹೊರಡುವ ಮುನ್ನ ಅರಸನು ತನ್ನ ಸೈನ್ಯಕ್ಕೆ ಹೀಗೆ ಅಪ್ಪಣೆ ನೀಡಿದ :

'ಊರೂರುಗಳನ್ನು ಹೊಕ್ಕು ಬೀಡು ಬಿಟ್ಟಿರುವ ತುರುಕ ತುಡುಗಣಿಗಳ ಪಡೆಯನ್ನು ಮುತ್ತಿ ಅವರ ಮೂಗು ಹರಿದು ಭಂಗ ಪಡಿಸಿರಿ' ಎಂದು ಅರಸನು ಅಪ್ಪಣೆ ಮಾಡಿದ. ಘೋರ ಕದನವಾರಂಭವಾಯಿತು. ಕಂಠೀರವನು ದಳವಾಯಿಗೆ, 'ನಮ್ಮಡಿಯ ಇಳೆಯ ಮನ್ನೆಯರ ಮಾರ್ಬಲವ ತಳುವದೆ ಬರಿಸಿ, ಮಾರ್ಗವ ಕಟ್ಟಿ ತುರುಕರ ಗಳಿಲನೆ ಮೂಗರಿಸೆಂದ' (ಪ.೪೯, ಪು.೨೫೨). ಎಂದರೆ, 'ತನ್ನ ಸಾಮಂತರ ಹಾಗೂ ತನಗೆ ಸಹಾಯ ಮಾಡುವ ಅರಸರ ಸೈನ್ಯವನ್ನೆಲ್ಲ ತರಿಸಿಕೊಂಡು ತುರುಕರ ಮೂಗರಿಯುವಂತೆ' ಅಪ್ಪಣೆ ಮಾಡಿದ. ದಳವಾಯಿ ನಂಜರಾಜ ರಾಜಾಜ್ಞೆ ಪಾಲಿಸಿದ.' ಅರಕೆರೆಯಲ್ಲಿ ಬೀಡುಬಿಟ್ಟಿದ್ದ ತುರುಕರ ಮೇಲೆ, 'ಇರುಳು ಕಗ್ಗೊಲೆಯೊಳು ಬಿದ್ದು ಎರಡು ಸಾಸಿರ ಮೂಗರಿದ'ರು. 'ಹೊಳಲ ಬಳಿ ಬರಲಿರ್ದ ತುರುಕರ 'ತಳತಂತ್ರವನರೆಯಟ್ಟಿ ಗಳಿಲನೆ ಸಾಸಿರ ಮೂಗರಿದ'ರು. ಚೆನ್ನಪಟ್ಟಣದ ಭಟರು ಬರುತ್ತಿದ್ದ ತುರುಕರ 'ಬೆನ್ನಟ್ಟಿ ಹೊಯ್ದು ಸಾವಿರ ಮೂಗರಿದರು'. ಮದ್ದೂರ ಭಟರು ನಾನೂರು ಮೂಗರಿದರು. ಯಾದವಾದ್ರಿಯ ಬಳಿ ಸಾವಿರ ಮಂದಿ ತುರುಕರ ಮೂಗರಿದರು. ನಾಗಮಂಗಲದ ಭಟರು ಮೂರು ಸಾವಿರ, ಚೆನ್ನರಾಯಪಟ್ಟಣದ ಭಟರು ಎರಡು ಸಾವಿರ, ಕಿಕ್ಕೇರಿ–ಬೂಕನಕೆರೆಯ ಭಟರು ಒಂದು ಸಾವಿರ, ಹೀಗೆ ಹನ್ನೆರಡು ಸಾವಿರ ತುರುಕರ ನಾಸಿಕಾಚ್ಛೇದನ ಮಾಡಿದರು. ಎಂದರೆ ಅರಕೆರೆ, ಹೊಳಲು, ಮೇಲುಕೋಟೆ, ಚಾಮುಂಡಿಬೆಟ್ಟ, ಚೆನ್ನಪಟ್ಟಣ, ಮದ್ದೂರು, ನಾಗಮಂಗಲ, ಚೆನ್ನರಾಯಪಟ್ಟಣ, ಕಿಕ್ಕೇರಿ, ಬೂಕನಕೆರೆ ಮೊದಲಾದ ಕಡೆಗಳಲ್ಲೆಲ್ಲ ಮೊಗಲ್ ಸೈನಿಕರ ಮೇಲೆ ಜಿಮ್ಮು ವ್ಯಾಪಕವಾಗಿ ಈ ಕೆಲಸವನ್ನು ಕೈಗೊಳ್ಳಲಾಯಿತೆಂಬಂತೆ ಇಲ್ಲಿ ಚಿತ್ರಿಸಲಾಗಿದೆ. ಪ್ರಾಯಶಃ ಇಲ್ಲೆಲ್ಲ ತುರುಕರ ತುಕಡಿಗಳು ಬೀಡುಬಿಟ್ಟಿದ್ದು, ಆ ಸೈನ್ಯದ ಮೇಲೆ ಏಕಕಾಲದಲ್ಲಿ ಕಾರ್ಯಾಚರಣೆ ಕೈಗೊಂಡಿರಬೇಕು. ಅಂತೂ ರಾಜಾಜ್ಞೆಯ ಪ್ರಕಾರ ಒಟ್ಟು ೧೨,೦೦೦ ತುರುಕರ ಮೂಗು ಹರಿಯಲಾಯಿತು!

ಅವರೆಲ್ಲ ಬಿಜಾಪುರಕ್ಕೆ ಹೋಗಿ ಸುಲ್ತಾನನ ಬಳಿ ದೂರಿಕೊಂಡಾಗ, ಬಾದಷಹನು ತನ್ನವರಿಗಾದ ದುರಂತವನ್ನು ಕಂಡು ಬೆರಗಾಗಿ, ಕಂಠೀರವನ ಸೈನ್ಯದ ಬಲವನ್ನು ಮೆಚ್ಚಿ ತಲೆದೂಗುತ್ತಾನೆ ಹಾಗೂ ಮೂಗರಿಸಿಕೊಂಡು ಬಂದ ತನ್ನ ಸೈನಿಕರ ಬಗ್ಗೆ ಮರುಗಿ, ಅವರಿಗೆ ಹೆಚ್ಚಿನ ಉಂಬಳಿ ನೀಡಿ

ಅವರಿಗಾಗಿಯೇ ಪ್ರತ್ಯೇಕವಾಗಿ ಒಂದು ಬೀದಿಯನ್ನು ಮಾಡಿಸಿಕೊಡುತ್ತಾನೆ. ಅದಕ್ಕೆ 'ಮೂಕೊರೆಯರ ಬೀದಿ' ಎಂದೇ ಹೆಸರಾಯಿತು.

ಹೀಗೆ ಮೂಕೊರೆಯರಿಗಾಗಿಯೇ ಪ್ರತ್ಯೇಕವಾಗಿ ಒಂದು ಬೀದಿ (ಕಾಲೊನಿ) ಯನ್ನು ನಿರ್ಮಿಸಿರುವ ವಿಷಯ ತಿಳಿದು, '*ದೆಸೆದೆಸೆಯ ಜನರು ವಿಜಯಾಪುರದೊಳಹೊಕ್ಕು ನಡೆದು ಬಂದಾಗ ಬಲುಮೂಕೊರೆಯ ಬೀದಿಯ ನೋಡಿ*' ಆಶ್ಚರ್ಯ ಪಟ್ಟರು!

ಸೋತ ವಿಷಯ ತಿಳಿದ ಬಾದಷಹ, 'ರಣದುಲ್ಲಾಖಾನನ ಮಾತನ್ನು ಕೇಳಿ ತಲೆಯೆತ್ತಲಾರದಷ್ಟು ಅಪಮಾನಕ್ಕೆ ಈಡಾದೆ'ನೆಂದು ಮರುಗುತ್ತಾನೆ ಅಪಮಾನದ ಸೇಡಿನಲ್ಲಿ ಕುದಿದು, ಮೂಗು ಹೋದದ್ದು ಇವರಿಗಷ್ಟೇ ಅಲ್ಲ, ತನ್ನ ಮೂಗು ಹೋಯಿತು ಎಂದು ಭಾವಿಸಿ ಈ ಸೇಡು ತೀರಿಸಿಕೊಳ್ಳಲು, ತನ್ನ ಮೂಲ ಸೈನ್ಯದೊಂದಿಗೆ ಹೋಗಿ ಮತ್ತೊಮ್ಮೆ ಮೈಸೂರಿನ ವಿರುದ್ಧ ದಾಳಿ ಮಾಡುವಂತೆ ಖಾನನಿಗೆ ಆಜ್ಞಾಪಿಸುತ್ತಾನೆ. 'ಹೋದ ಮೂಗು ಅವರದಲ್ಲ. ತನ್ನ ಮೂಗು ಹೋಯಿತು' ಎಂದು ಭಾವಿಸುವ ಬಾದಷಹನ ಅಭಿಪ್ರಾಯದಿಂದ ಈ ಸೋಲು ಅವನಿಗೆ ಎಂತಹ ಅವಮಾನವನ್ನು ತಂದಿರಬಹುದು ಎಂದು ಊಹಿಸಬಹುದು. ಹೇಗಾದರೂ ಪುನಃ ಯುದ್ಧದಲ್ಲಿ ಜಯ ಗಳಿಸಿ ತನ್ನ ಕೀರ್ತಿಯನ್ನು ಹೆಚ್ಚಿಸಿಕೊಳ್ಳಬಹುದೆಂದು ಭಾವಿಸಿ ತನ್ನ ಮೂಲ ಪಡೆಯನ್ನು ಖಾನನೊಂದಿಗೆ ಕಳಿಸಿಕೊಡುತ್ತಾನೆ. ಹೆಚ್ಚಿನ ಸೈನ್ಯವನ್ನು ಪಡೆದ ಖಾನನು ಮತ್ತೆ ಮೈಸೂರಿನ ಮೇಲೆ ಆಕ್ರಮಣ ಮಾಡುತ್ತಾನೆ. ನಂಜರಾಜಯ್ಯನ ನೇತೃತ್ವದಲ್ಲಿ ಮೈಸೂರು ಸೈನ್ಯ ಪಿರಿಯಾಪಟ್ಟಣದ ಬಳಿ ಅವರನ್ನು ಎದುರಿಸುತ್ತದೆ. ಮೈಸೂರಿನ ಸೈನಿಕರು 'ತುರುಕರನು ಮುರಿಯಲಿರಿದು ಮೂಗರಿದರು'.

ಮೈಸೂರಿನವರು ಅಟ್ಟಿಸಿಕೊಂಡು ಬರಲು, '*ಡೊಳ್ಳುಹೊಟ್ಟೆಯ ತುರುಕ ಸೈನಿಕರು ಓಡಲಾರದೆ ಹಳ್ಳಕೊಳ್ಳದಲಿ ಮುಳ್ಳಲಿ ಮುಗ್ಗರಿಸಿ ಬಿದ್ದು ಎದ್ದು*' ಓಡುವಾಗ ಅವರನ್ನು ಹಿಡಿದು ಮೂಗು ಹರಿಯಲಾಯಿತು. *ಅವರು ಹೀಗೆ ಮೂಗರಿಸಿಕೊಂಡ ಪರಿಯನ್ನು ಯಾರು ತಾನೇ ಬಣ್ಣಿಸಲು ಸಾಧ್ಯ ಎಂದು ಕವಿ ವ್ಯಂಗ್ಯವಾಡುತ್ತಾನೆ!*

ಕಂಠೀರವನ ಸೈನಿಕರು ಇತ್ತ ಬರುತ್ತಿದ್ದಾರೆಂದು ಕೇಳಿದ ಕೂಡಲೇ ಪಾಳೆಯದಲ್ಲಿ ತಂಗಿದ್ದ ತುರುಕರು ಹೆದರಿ ಗಡಗಡ ನಡುಗಿದರು. *ಅವರು ಬಂದರೆ ತಮ್ಮ ಮೂಗು ಹರಿಯುವುದು ಖಂಡಿತ ಎಂದು ಗೊತ್ತಿದ್ದುದರಿಂದಲೇ ಅವರ ಹೆಸರು ಕೇಳಿದ ಕೂಡಲೇ ತುರುಕರ ಸೈನಿಕರು ಹೀಗೆ ನಡುಗುತ್ತಾರೆ.* ಕೈ ಮುಗಿದು, '*ಮೂಗರಿದು ತಮ್ಮ ಶಿರವನ್ನು ಉಳಿಸುವುದು ಬೇಡ. ಅದಕ್ಕೆ ಬದಲು ನಿಮ್ಮ ಈಟಿಯಿಂದ ಇರಿದು ನಮ್ಮನ್ನು ಒಂದೇ ಬಾರಿಗೆ ಕೊಂದು ಬಿಡಿ*' *ಎಂದು ಮೈಸೂರು ಸೈನಿಕರನ್ನು ದೈನ್ಯದಿಂದ ಬೇಡಿಕೊಳ್ಳುತ್ತಾರೆ.*

ಪಿರಿಯಾಪಟ್ಟಣದ ಕಾಳಗ ಶ್ರೀರಂಗಪಟ್ಟಣದ ಮುತ್ತಿಗೆಯ ನಂತರ ನಡೆದದ್ದು. ಈ ಯುದ್ಧದಲ್ಲೂ ಮೈಸೂರಿಗೇ ಜಯವಾಯಿತು. ಕುದುರೆಗಳನ್ನು ಮೆಟ್ಟಿ, ಮೇಲೆ ಬಿದ್ದು ಮೂಗು ಹರಿವ ಉರುಕಲಿಗಳ ಸಾಹಸವನ್ನು ಕಂಡು ಖಾನನ ಸೈನಿಕರೇ ಭಾಪು ಷಾಭಾಷ್ ಎಂದು ಮೆಚ್ಚಿ ಕೊಂಡಾಡಿದರು.

ಸೆರೆ ಸಿಕ್ಕ ಕಾಲಾಳುಗಳ ಮುಂದಲೆ ಹಿಡಿದು ಮೆಟ್ಟಿಕೊಂಡು ಅವರ ಮೂಗು ಕತ್ತರಿಸಿ ಮಾಲೆ ಕಟ್ಟಿ ತಂದು ತಮ್ಮ ಅರಸನಿಗೆ ಕಾಣಿಕೆಯಾಗಿ ತಂದೊಪ್ಪಿಸಿದರು. 'ತುರುಕರನು ಮುರಿಯಲಿರಿದು ಮೂಗರಿದು ತಂದಾಕ್ಷಣ ಸರಗಟ್ಟಿ ಮೆರೆಸಿದರಾಗ...' (ಸಂ.೧೫, ಪ.೩೯) ಈ ವಿವರಗಳಲ್ಲಿ ಅತಿಶಯೋಕ್ತಿಯೇನೂ ಇಲ್ಲ. ನಡೆದ ಘಟನೆಗಳಿಗೆ ಕವಿ ಅಭಿವ್ಯಕ್ತಿ ನೀಡಿದ್ದಾನೆ, ಅಷ್ಟೇ! ಮೈಸೂರಿನ ಈ 'ಮೂಗರಿವ' ಕಾರ್ಯದಿಂದಾಗಿ ಯುದ್ಧ ಇನ್ನೂ ತೀವ್ರಗೊಂಡಿತೆಂದೇ ಹೇಳಬೇಕು. ಈ ಯುದ್ಧದಲ್ಲಿ ನಂಜರಾಜ ಸಾಯುತ್ತಾನೆ. ಮುಂದೆ ಲಿಂಗೇಂದ್ರ ಸೇನಾಧಿಪತಿಯಾಗುತ್ತಾನೆ. ಅಲ್ಲದೆ ಕಂಠೀರವನೇ ಯುದ್ಧದಲ್ಲಿ ಸ್ವತಃ ಭಾಗವಹಿಸುತ್ತಾನೆ ಹಾಗೂ 'ಕಗ್ಗೊಲೆಯ ಕಾಳಗ' ನಡೆಯುತ್ತದೆ. ಅಂತಿಮವಾಗಿ ಮೈಸೂರಿಗೇ ವಿಜಯ! ಈ ಗೆಲುವಿನಿಂದ ಮೈಸೂರು ದೊರೆಗಳ ಸಾಮರ್ಥ್ಯ ಹೆಚ್ಚಿತೆಂದೇ ಹೇಳಬೇಕು.

'ಕಂಠೀರವನರಸರಾಜ ವಿಜಯ'ವು ಬಿಜಾಪುರ ಸುಲ್ತಾನನ ಸೈನ್ಯ ಕರ್ನಾಟಕದ ಮೇಲೆ ಹಲವು ಸಲ ದಾಳಿ ಮಾಡಿದ್ದನ್ನು ತಿಳಿಸುತ್ತದೆ. ಆ ಸಂಧಿಯ ಹೆಸರನ್ನು ಕವಿ '*ಕರ್ಣಾಟಕಕ್ಕೆ ಖಾನನು ಬಂದುದು*' ಎಂದೇ ಕರೆಯಲಾಗಿದೆ. ಬಿಜಾಪುರವನ್ನು ಕೇಂದ್ರವಾಗಿರಿಸಿಕೊಂಡು ಮಹಮದೀಯರೂ, ಇಕ್ಕೇರಿಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಕೆಳದಿಯ ಅರಸರೂ, ಶ್ರೀರಂಗಪಟ್ಟಣವನ್ನು ಕೇಂದ್ರವಾಗಿರಿಸಿಕೊಂಡು ಮೈಸೂರಿನ ಅರಸರೂ ರಾಜ್ಯವಾಳುತ್ತಿದ್ದುದನ್ನೂ ಆ ಸಂದರ್ಭದಲ್ಲಿ ನಡೆದ ಹಲವು ದಾಳಿಗಳನ್ನೂ ಈ ಕೃತಿ ದಾಖಲಿಸಿದೆ.

* * * *

'ಕಂಠೀರವನರಸರಾಜ ವಿಜಯ'ದಲ್ಲಿ **ಮದುರೆಯ ತಿರುಮಲನಾಯಕ**ನ ವಿರುದ್ಧವೂ 'ಮೂಗರಿವ' ತಂತ್ರವನ್ನು ಬಳಸಿದ್ದು ನಿರೂಪಿತವಾಗಿದೆ. ಇದು ಎಲ್ಲೆಕಟ್ಟಿಗೆ ಸಂಬಂಧಿಸಿದ ಯುದ್ಧ. ಸಾಂಬಳ್ಳಿಯ 'ಮೊದಲಾರಿ'(ಮೊದಲಿಯಾರ್)ಯ ಹಿರಿಯ ಮಗನಾದ ಪಟ್ಟದಯ್ಯ ಮೈಸೂರು ದೊರೆಗಳೊಂದಿಗೆ

ಕದನಕ್ಕಿಳಿದ. ಮದುರೆಯ ನಾಯಕನ ಬೆಂಬಲ ಇವನಿಗಿತ್ತು. ಮೊದಲಿಗೆ ಪಟ್ಟದಯ್ಯ ಸೋತು ಮಾರಟಹಳ್ಳಿಯನ್ನು ಕಳೆದುಕೊಳ್ಳುತ್ತಾನೆ. ಇದರಿಂದ ಕೋಪಗೊಂಡು ಮೈಸೂರಿನವರ ವಶವಿದ್ದ ಆಲಂಬಾಡಿಗೆ ಮುತ್ತಿಗೆ ಹಾಕುತ್ತಾನೆ. ಈ ಸಂದರ್ಭದಲ್ಲಿ ಮೈಸೂರಿನವರ ಮೂಗರಿವ ತಂತ್ರ ಸಫಲವಾಗಿ ಆಲಂಬಾಡಿ ಮತ್ತೆ ಮೈಸೂರಿನವರ ವಶಕ್ಕೆ ಬಂತು. ನಂತರ ಸಾಂಬಳ್ಳಿಯನ್ನು ಮುತ್ತಿದಾಗ ತಿರುಮಲನಾಯಕ ಅವರ ನೆರವಿಗೆ ಬಂದು ಸೋತು, ತಿರುವಣ್ಣಾಮಲೈ, ತಿರುಚಂಗೋಡು, ತಿರುಚನಾಪಳ್ಳಿ ಮುಂತಾದವನ್ನು ಕಳೆದುಕೊಳ್ಳಬೇಕಾಯಿತು. ಮುಂದುವರೆದು ಸತ್ಯಮಂಗಲ ಹಾಗೂ ದಣ್ಣಾಯಕನ ಕೋಟೆಗಳನ್ನು ವಶಪಡಿಸಿಕೊಂಡುದನ್ನೂ ಇತಿಹಾಸಕಾರರು ತಿಳಿಸುತ್ತಾರೆ. ಈ ಸಂದರ್ಭದಲ್ಲಿ ತಿರುಮಲನಾಯಕನ ಸೈನ್ಯದ ವಿರುದ್ಧವೂ 'ಮೂಗರಿವ' ತಂತ್ರವನ್ನು ವ್ಯಾಪಕವಾಗಿ ಬಳಸಲಾಯಿತು.

ಇಲ್ಲಿಯ 'ಘಟ್ಟಿ ಮದನಾರಿ' ಮದುರೆ ರಾಜ್ಯದ ಪಾಳೆಯಗಾರ ಘಟ್ಟಿ ಮೊದಲಿಯಾರಿ. ಇವನನ್ನು ಗೆದ್ದು ಮೈಸೂರು ಸೈನ್ಯ ಆಗ್ನೇಯದಲ್ಲೂ ತನ್ನ ಎಲ್ಲೆಯನ್ನು ವಿಸ್ತರಿಸಿಕೊಂಡಿತು.

ಮದುರೆಯ ನಾಯಕರ ವಂಶದಲ್ಲಿ ತಿರುಮಲ ನಾಯಕನು ಕ್ರಿ.ಶ.೧೬೨೩ರಿಂದ ೧೬೫೯ರವರೆಗೆ ಆಳಿದ್ದಾನೆ. ಇವನ ಕಾಲದಲ್ಲಿ ಮೊದಲ ಮೈಸೂರು ಯುದ್ಧ ೧೬೨೫ರಲ್ಲಿ ನಡೆಯಿತು. ಮೈಸೂರಿನ ಚಾಮರಾಜ ಒಡೆಯರ ಆಜ್ಞೆಯ ಮೇರೆಗೆ ದಳಪತಿ ಅರಿಕೂರ ನಂದಿರಾಜನು ಮದುರೆಯ ಮೇಲೆ ದಾಳಿ ಮಾಡಿದ. ಆಗ ಮದುರೆಯ ಸೈನ್ಯ ದಳವಾಯಿ ರಾಮಪ್ಪಯ್ಯನ ನೇತೃತ್ವದಲ್ಲಿ ಅವರನ್ನು ಎದುರಿಸಿ ಹಿಮ್ಮೆಟ್ಟಿಸಿತು. ಅಲ್ಲದೆ ದಿಂಡುಕಲ್‌ನಿಂದ ಮೈಸೂರಿನವರೆಗೂ ಅವರನ್ನು ಹಿಂಬಾಲಿಸಿತು.

ನಂತರ ತಿರುಮಲ ನಾಯಕನ ಮುಂದಾಳತ್ವದಲ್ಲಿ ಕ್ರಿ.ಶ. ೧೬೫೬–೧೬೫೯ರಲ್ಲಿ ೨ನೇ ಮೈಸೂರು ಯುದ್ಧ ನಡೆಯಿತು. ಮೈಸೂರು ಅರಸ ಕಂಠೀರವ ನರಸರಾಜ ಒಡೆಯ ೧೬೫೬ರಲ್ಲಿ ತಿರುಮಲ ನಾಯಕನ ಮೇಲೆ ದಂಡೆತ್ತಿ ಬಂದ. ಮೈಸೂರಿನ ಸೈನಿಕರು ಕೊಂಗುನಾಡಿನ ಸತ್ಯಮಂಗಲದವರೆಗಿನ ಪ್ರಾಂತ್ಯವನ್ನು ಸುಲಭವಾಗಿ ವಶಪಡಿಸಿಕೊಂಡರು. ನಂತರ ಮದುರೆಯನ್ನೂ ಮುತ್ತಿಗೆ ಹಾಕಲು ಹೊರಟರು. ಹೀಗೆ ಹೋಗುವ ದಾರಿಯಲ್ಲಿ ಮೈಸೂರು ಸೈನಿಕರು ತಮ್ಮ ಕಣ್ಣಿಗೆ ಬೀಳುವ ಗಂಡಸರು ಹೆಂಗಸರು, ಮುದುಕರು, ಯುವಕರು, ಮಕ್ಕಳು ಎಂಬ ಭೇದಭಾವವಿಲ್ಲದೆ ಎಲ್ಲರ ಮೂಗು ಕತ್ತರಿಸಿದರು. ಸೆರೆಯಾಳುಗಳನ್ನೂ ಕೂಡ ಕ್ರೂರವಾಗಿ ಹಿಂಸಿಸಿ ಮೂಗು ಹರಿದು ತುಂಬ ಹಿಂಸೆ ನೀಡಿದರು. ಹೀಗೆ ಕತ್ತರಿಸಿದ **ಮೂಗುಗಳನ್ನು ಗೋಣಿ ಚೀಲಗಳಲ್ಲಿ ತುಂಬಿಸಿ, ತಮ್ಮ ವಿಜಯದ ಸಂಕೇತವಾಗಿ ಮೈಸೂರು ಅರಸನ ಬಳಿಗೆ ಕಳಿಸಿಕೊಟ್ಟರಂತೆ!** ಇದು 'ಮೂಗರಿತದ ಬೇಟೆ' ಎಂದೇ ಪ್ರಸಿದ್ಧವಾಗಿದೆ.[೨]

'ಮೈಸೂರು ಸೈನಿಕರು ಶತ್ರುಗಳ ಮೂಗರಿವುದರಲ್ಲಿ ಚತುರರು' ಎಂದೂ, '೧೬೫೯ರಲ್ಲಿ ಮೈಸೂರಿನ ದೊರೆ ಮದುರೆಯ ಮೇಲೆ ದಾಳಿ ಮಾಡಿದಾಗ ಕೈ ಸೆರೆ ಸಿಕ್ಕವರ ಮೂಗುಗಳನ್ನು ಕೊಯ್ದು ಚೀಲಗಳಲ್ಲಿ ತುಂಬಿ ಶ್ರೀರಂಗಪಟ್ಟಣಕ್ಕೆ ತಮ್ಮ ಜಯದ ಗುರುತಾಗಿ ಕಳುಹಿಸಿಕೊಟ್ಟರೆ'ಂದೂ ಜೆ.ಎಚ್.ನೆಲ್ಸನ್ ಎಂಬ ಪ್ರವಾಸಿಯೂ ಹೇಳುತ್ತಾನೆ.

೧೭೫೦ರಿಂದ ೧೭೬೪ರವರೆಗೆ ಪ್ರವಾಸ ಮಾಡಿದ ಜೆ.ಎಚ್.ಗ್ರೋಸ್ ಎಂಬುವವನೂ 'ಮೂಗು ಕೊಯ್ಯುವುದರಲ್ಲಿ ಚತುರ'ರಾದ ಮೈಸೂರಿನ ಸೈನಿಕರ ವಿಚಾರ ಹೇಳುತ್ತಾನೆ. ಈ ದಂಡಯಾತ್ರೆಗೆ 'ಮೂಗಿನ ಬೇಟೆ' ಎಂದು ಹೆಸರಿದ್ದುದನ್ನೂ ಇವನು ದಾಖಲಿಸಿದ್ದಾನೆ! ಇದಾದ ಸ್ವಲ್ಪ ಕಾಲದ ಮೇಲೆ ಮದುರೆಯ ನಾಯಕ ತಿರುಮಲನ ತಮ್ಮ ಕುಮಾರಮೂರ್ತಿಯು ಮೈಸೂರಿನ ಮೇಲೆ ಪ್ರತಿದಾಳಿ ಮಾಡಿ ಮೈಸೂರು ದೊರೆಯನ್ನು ಸೆರೆಹಿಡಿದುದಲ್ಲದೆ ಅವನ ಮೂಗನ್ನು ಕತ್ತರಿಸಿ ಮದುರೆಗೆ ಕಳುಹಿಸಿಕೊಟ್ಟನೆಂದೂ ಗ್ರೋಸ್ ತಿಳಿಸುತ್ತಾನೆ. ಆದರೆ ಆ ಮೈಸೂರು ಅರಸನ ಹೆಸರೇನೆಂದು ತಿಳಿದು ಬರುವುದಿಲ್ಲ.[೮]

ವಿದೇಶಿ ಪ್ರವಾಸಿ ಮನೂಚಿ ಈ ಪ್ರದೇಶದಲ್ಲಿ ಸಂಚರಿಸುವಾಗ ಹೀಗೆ ಮೂಗಿಲ್ಲದ ಹಲವರನ್ನು ಎಲ್ಲೆಡೆಗಳಲ್ಲೂ ಕಾಣಬಹುದು ಎಂದು ಹೇಳುವುದು ಇದಕ್ಕೆ ಪೂರಕವಾಗಿಯೇ ಇದೆ. ಈ ಯುದ್ಧಕ್ಕೆ ಸಂಬಂಧಿಸಿದಂತೆ ಮನೂಚಿಯ ಅಭಿಪ್ರಾಯಗಳನ್ನು ಮುಂದೆ ನೋಡಬಹುದು. ಹೀಗೆ ಮೈಸೂರು ಸೈನ್ಯ ಮದುರೆಯನ್ನು ಸಮೀಪಿಸಿತು. ಆಗ ತಿರುಮಲನಿಗೆ ಸುಮಾರು ೭೫ ವರ್ಷಗಳು ತುಂಬಿದ್ದವು. ತಿರುಮಲನು ತನ್ನ ಹಿರಿಯ ರಾಣಿಯ ಮೂಲಕ ರಘುನಾಥ ಸೇತುಪತಿಗೆ ಸಹಾಯ ಕೋರಿ ಪತ್ರ ಕಳಿಸಿದ. ರಘುನಾಥ ಸೇತುಪತಿಯೂ ಶೀಘ್ರವಾಗಿ ೨೫,೦೦೦ ಸೈನಿಕ ಪಡೆಯೊಂದಿಗೆ ಮದುರೆಗೆ ಧಾವಿಸಿದ. ತಿರುಮಲನ ೩೫,೦೦೦ ವೀರರೊಂದಿಗೆ ಸೇರಿ ಆ ಸೈನ್ಯ ಹೋರಾಡಿತು. ಮೈಸೂರು ಸೈನ್ಯ ಹಿಮ್ಮೆಟ್ಟಿ ದಿಂಡುಕಲ್ಲಿನ ಸೈನ್ಯವನ್ನು ಸಹಾಯಕ್ಕಾಗಿ ನಿರೀಕ್ಷಿಸಿತು. ಮೈಸೂರಿನಿಂದ ೨೦,೦೦೦ ಸೈನಿಕರೊಂದಿಗೆ ಮತ್ತೊಂದು ದಳ ಇವರನ್ನು ಕೂಡಿಕೊಂಡಿತು.

ಎರಡೂ ಪಕ್ಷಗಳಲ್ಲಿ ೧೨,೦೦೦ ಸೈನಿಕರು ಮಡಿದರು. ಅಂತಿಮವಾಗಿ ಮೈಸೂರು ಸೈನ್ಯ ಹಿಮ್ಮೆಟ್ಟಿತು.[೯]

ಕಷ್ಟಕಾಲದಲ್ಲಿ ಸಹಾಯ ಮಾಡಿದ ರಘುನಾಥ ಸೇತುಪತಿಗೆ ತಿರುಮಲನು 'ತಿರುಮಲೈ ಸೇತುಪತಿ' ಎಂಬ ಬಿರುದನ್ನೂ, 'ರಾಣಿಯ ವಾಕ್ ರಕ್ಷಕ' (ರಾಣಿ ಚ್ಚೊಲ್ ಕಾತ್ತಾರ್)ನೆಂಬ ಬಿರುದನ್ನೂ ನೀಡಿ ಕೆಲವು ಗ್ರಾಮಗಳನ್ನೂ ಬಳುವಳಿಯಾಗಿ ನೀಡಿದ. ಆ ಸಂದರ್ಭದಲ್ಲಿ ಸೇತುಪತಿಯು ತನ್ನ ಸೈನ್ಯವನ್ನು ಮುನ್ನಡೆಸಿದ ಬಿನ್ನದೇವ ಎಂಬುವವನಿಗೆ 'ಮೂಕ್ಕುಪ್ಪರಿ ತಿರುಮಲೈ ಬಿನ್ನದೇವನ್'(ಮೂಗುಕೊಯ್ಕ ತಿರುಮಲೆ ಬಿನ್ನದೇವ) ಎಂಬ ಬಿರುದನ್ನು ನೀಡಿ ಗೌರವಿಸುತ್ತಾನೆ. ಈ ಆಧಾರದಿಂದ ಮದುರೆಯವರೂ ಕೂಡ ಮೈಸೂರಿನವರನ್ನು ಕಂಡು ಮೂಗು ಹರಿವ ಕೆಲಸಕ್ಕೆ ಕೈ ಹಾಕಿರಬೇಕೆಂದು ತಿಳಿಯಬಹುದು. ಆದರಿಂದಲೇ ಬಿನ್ನದೇವನಿಗೆ ಇಂತಹುದೊಂದು ಬಿರುದು ದೊರಕಿರಬೇಕು.

ಕೆ.ಕೆ.ಪಿಳ್ಳೈ ಅವರು, 'ಕಂಠೀರವನು ತಿರುಮಲನಾಯಕನ ಮೇಲೆ ಸೇಡು ತೀರಿಸಿಕೊಳ್ಳಲು ಅವನ ಮೂಗು ಹರಿಯುವುದಕ್ಕಾಗಿಯೇ ಪ್ರತ್ಯೇಕವಾಗಿ ಒಂದು ಆಯುಧವನ್ನು ತಯಾರಿಸಿಕೊಂಡಿದ್ದನೆಂದು ಹೇಳುತ್ತಾರೆ.[೧೦]

* * * *

ಬೋಳ ಚಾಮರಾಜನ ಮಗ ರಾಜನೃಪನ ಸಾಹಸ ಕಾರ್ಯಗಳನ್ನು ಅನೇಕ ಪದ್ಯಗಳಲ್ಲಿ ತಿರುಮಲಾರ್ಯನ **'ಚಿಕ್ಕದೇವರಾಜ ವಿಜಯ'** ಪ್ರಸ್ತಾಪಿಸುತ್ತದೆ. ಇವುಗಳಲ್ಲಿ ಕಾರುಗಹಳ್ಳಿ ಮತ್ತು ಶ್ರೀರಂಗಪಟ್ಟಣಗಳನ್ನು ವಶಪಡಿಸಿಕೊಂಡ ಪ್ರಸಂಗಗಳು ಮುಖ್ಯ. ಇವುಗಳನ್ನು ಕುರಿತು ಗೋವಿಂದವೈದ್ಯನೂ 'ಕಂಠೀರವ ನರಸರಾಜ ವಿಜಯ'ದಲ್ಲಿ ಹೇಳುತ್ತಾನೆ. ಇವುಗಳಲ್ಲಿ ಮೊದಲನೆಯದು ಕಾರುಗಹಳ್ಳಿಯ ಕಾಳಗ. ಎರಡನೆಯದು ವಿಜಯನಗರದ ಪ್ರತಿನಿಧಿ ತಿರುಮಲರಾಯನಿಗೂ ಮೈಸೂರರಸರಿಗೂ ನಡೆದ ಘರ್ಷಣೆ.

ರಾಜವೊಡೆಯ ಹಾಗೂ ಬೆಟ್ಟದ ಚಾಮರಾಜರ ಪ್ರಸಿದ್ಧಿಯಿಂದ ಹೆದರಿದ ಅನೇಕ ಸ್ಥಳೀಯ ರಾಜರು ವಿಜಯನಗರದ ರಾಜಪ್ರತಿನಿಧಿಯಾಗಿ ಶ್ರೀರಂಗಪಟ್ಟಣದಲ್ಲಿ ಆಳುತ್ತಿದ್ದ ತಿರುಮಲರಾಜನ ಮೊರೆಹೋಗುತ್ತಾರೆ. ಆತ ಮೈಸೂರು ಸೈನ್ಯದ ಮೇಲೆ ದಾಳಿ ಮಾಡುತ್ತಾನೆ. ಕೆಸರೆಯಲ್ಲಿ ನಡೆದ ಈ ದಾಳಿಯನ್ನು 'ಕೆಸರೆಯ ಯುದ್ಧ'ವೆಂದೇ ಕರೆಯಲಾಗುತ್ತದೆ. ಕೆಸರೆಯ ಕಾಳಗದಲ್ಲಿ ತಿರುಮಲರಾಜನ ಸೇನೆಯನ್ನು ಬೆಟ್ಟದ ಚಾಮರಾಜ ಹಾಗೂ ಚೆನ್ನರಾಜರು ಮೊದಲು ಎದುರಿಸುತ್ತಾರೆ. ಯುದ್ಧ ಕೈಮೀರಿದ ಸಂದರ್ಭದಲ್ಲಿ ರಾಜನೃಪ ಮತ್ತು ದೇವರಾಜರೂ ಕೂಡ ಅವರಿಗೆ ಸಹಾಯಕರಾಗಿ ಮೈಸೂರಿನಿಂದ ಬಂದು ಸೇರಿಕೊಳ್ಳುತ್ತಾರೆ. ಮೊರಸು ಮತ್ತು ಮಲೆನಾಡವರ ಸೈನ್ಯವನ್ನು ಮೂಗು ಕೊಯ್ದು, ಆಯುಧ ಕಸಿದು ಓಡಿಸಿದ ವಿವರಗಳೂ ಇವೆ. ಈ ಯುದ್ಧದಲ್ಲಿ ರಾಜನೃಪ ಮತ್ತು ಸೋದರರು ತಿರುಮಲರಾಜನನ್ನು ಓಡಿಸಿ ಕೋಟೆಯನ್ನು ವಶಪಡಿಸಿಕೊಂಡರು. ಈ ಕಾಳಗದಲ್ಲಿ ಮೈಸೂರು ಸೈನ್ಯವು ತನ್ನ ಸುಪ್ರಸಿದ್ಧವಾದ 'ಮೂಗರಿವ' ತಂತ್ರವನ್ನು ಅನುಸರಿಸಿತು.

> ಇರಿವ ಬಲ್ಲೆಹದಿಂದ ತಗರಿವ ಖಂಡೆಯ **ಮೂಗ**
> **ಕೊರೆವ ಕರದ ಚೂರಿಯಿಂದ**
> ತಿರುಮಲ ರಾಜೇಂದ್ರನ ಬಲನೊಂದಾಗ
> ಮುರಿದೋಡಲುಜ್ಜುಗಿಸಿದುದು
> (ಕಂ.ನ.ವಿ. ೩ನೇ ಸಂಧಿ, ಪ. ೭೭, ಪು. ೪೦)

ಈ ಸಾಲುಗಳಿಂದ ಮೂಗು ಕತ್ತರಿಸುವುದಕ್ಕಾಗಿಯೇ ಪ್ರತ್ಯೇಕವಾದ ಚೂರಿಯನ್ನು ಇಟ್ಟುಕೊಳ್ಳುತ್ತಿದ್ದರೆಂದು ತಿಳಿಯುತ್ತದೆ.

ಕೆಸರೆ ಯುದ್ಧದಲ್ಲಿ ತಿರುಮಲರಾಜನೊಂದಿಗೆ ಸಹಕರಿಸಲು, ಹಂಚೆಯ ಜಕ್ಕ ಮನ್ನೆಯನು ಮೈಸೂರಿನ ಮೇಲೆ ದಂಡೆತ್ತಿ ಬಂದಾಗ ಬೆಟ್ಟದಚಾಮರಾಜನ ಸೈನ್ಯ ಅವನನ್ನು ತಾಕುತ್ತದೆ : 'ಇರಿದರು ತರಿದರು ಕೊರೆದರು ಮೂಗನು'. ಅಂತಿಮವಾಗಿ ಕೆಸರೆಯ ಯುದ್ಧದಲ್ಲಿ ಶ್ರೀರಂಗಪಟ್ಟಣದ ವಿರುದ್ಧ ತಿರುಮಲರಾಜನ ಸೈನ್ಯ ಸೋತು ಪಲಾಯನ ಮಾಡಿತು.

* * * *

ಕಾರುಗಹಳ್ಳಿಯ ನಾಯಕ ವೀರರಾಜಯ್ಯ. ರಾಜನೃಪ ಅಥವಾ ರಾಜವೊಡೆಯನು ಕಾರುಗಹಳ್ಳಿಯ ರಾಜನನ್ನು ಗೆದ್ದದ್ದು ಇತಿಹಾಸ ಪ್ರಸಿದ್ಧ ಘಟನೆ. ರಾಜವೊಡೆಯನ ರಾಜಕೀಯ ಸಾಧನೆಗಳಲ್ಲಿ ಕಾರುಗಹಳ್ಳಿಯ ರಾಜನ ಮೂಗನ್ನು ಕೊಯ್ದ ವಿಚಾರವೂ ಒಂದು. ಕಾರುಗಹಳ್ಳಿಯ ಅರಸ ತಾನಾಗಿಯೇ ಯುದ್ಧಕ್ಕೆ ಬರುತ್ತಾನೆ. ಗಡಿ ಸಮಸ್ಯೆ ಯುದ್ಧಕ್ಕೆ ಕಾರಣ. ಮೈಸೂರು ಸೈನ್ಯ ಕಾರುಗಹಳ್ಳಿಯನ್ನು ನಾಶ ಮಾಡುತ್ತದೆ. ಕಾರುಗಹಳ್ಳಿಯ ರಾಜನನ್ನು ಹಿಡಿತರಿಸಿ ಕಿವಿಮೂಗು ಕತ್ತರಿಸಿ ಕೋಟೆಯನ್ನು ವಶಪಡಿಸಿಕೊಂಡದ್ದನ್ನು ಇತರ ಐತಿಹಾಸಿಕ ಮೂಲಗಳೂ ತಿಳಿಸುತ್ತವೆ. ಇದು ನಡೆದದ್ದು ಕ್ರಿ.ಶ. ೧೫೯೫ರಲ್ಲಿ. ಶಾಸನಗಳು ಕೂಡ ಇದನ್ನು ಸಮರ್ಥಿಸುತ್ತವೆ.[೧೧]

ಚಿಕ್ಕದೇವರಾಜ ವಂಶಾವಳಿಯ ಪ್ರಕಾರ ಕಾರುಗಹಳ್ಳಿಯ ದೊರೆಗಳಲ್ಲಿ ಒಡಹುಟ್ಟಿದ ಆರು ಜನರಲ್ಲಿ ಗಡಿಕಲಹದ ಸಂಘರ್ಷಣೆಯ ಸಮಯದಲ್ಲಿ ರಾಜನೃಪನು ಐವರನ್ನು ಕೊಂದನಂತೆ. ಉಳಿದ ಒಬ್ಬನನ್ನು **'ಚಮ್ಮಟಿಗೆಯಿಂದ ಬಡಿದು**

ಮೂಗು ಕತ್ತರಿಸಿದ'ನಂತೆ. ಕಡೆಗೆ ಕಾರುಗಹಳ್ಳಿಗೆ ಮುತ್ತಿಗೆ ಹಾಕಿ ಅರಮನೆ ಸೂರೆ ಮಾಡಿದ. ಗಡಿಕಲಹದ ವಿಷಯ 'ಕಂಠೀರವ ನರಸರಾಜ ವಿಜಯ'ದಲ್ಲೂ ಇದೆ. ಕಾರುಗಹಳ್ಳಿಯ ರಾಜ ವೀರರಾಜಯ್ಯನೆಂಬುದನ್ನೂ ಅಲ್ಲಿ ಹೇಳಲಾಗಿದೆ. ಇದು ನಿಜವಾದ ಪಕ್ಷದಲ್ಲಿ 'ವಂಶಾವಳಿ' ಪ್ರಸ್ತಾಪಿಸುವ ಮೂಗು ಕತ್ತರಿಸಿಕೊಂಡ ವ್ಯಕ್ತಿ ಅವನೇ ಇರಬೇಕು!

* * * *

೬ನೇ ಚಾಮರಾಜ ಒಡೆಯನು (೧೬೧೭-೧೬೩೭) ಪಿರಿಯಾಪಟ್ಟಣದ ಮೇಲೆ ದಂಡೆತ್ತಿ ಹೋದಾಗ ಅವನ ನೆರವಿಗೆ ಬಂದ ಸಿಂಗಣರಾಯ(ಮಲೆನಾಡಿನ)ನು ಮೂಗು ಕತ್ತರಿಸಿಕೊಂಡ ವಿಷಯವೂ 'ಚಿಕ್ಕದೇವರಾಜ ವಂಶಾವಳಿ'ಯಲ್ಲಿದೆ.

ಚಿಕ್ಕನಾಯಕನ ಹಳ್ಳಿಯ ದಳವಾಯಿ 'ಪರಮರಾವುತ'ನ ಮೂಗು ಕತ್ತರಿಸಿ ಕುತ್ತಿಗೆ ಕೊಯ್ದ ವಿಚಾರವನ್ನು 'ಚಿಕ್ಕದೇವರಾಜ ವಿಜಯ' ಮತ್ತು 'ಚಿಕ್ಕದೇವರಾಜ ವಂಶಾವಳಿ'ಗಳೆರಡೂ ಪ್ರಸ್ತಾಪಿಸುತ್ತವೆ. ಕಂಠೀರವ ನರಸರಾಜ ವಿಜಯವು ಕತ್ತರಿಸಿದವನ ಹೆಸರು ಶೀಲವಂತ ಎನ್ನುತ್ತದೆ.

* * * *

ತಿರುಮಲಾರ್ಯನು ತನ್ನ **ಅಪ್ರತಿಮವೀರ ಚರಿತೆ**[೧೨]ಯಲ್ಲಿ, ಮೈಸೂರವರು ಅರಕಲಗೂಡಿನ ಕೃಷ್ಣಪ್ಪನಾಯಕನ ಮೂಗು ಕತ್ತರಿಸಿ ಕೊಂದದ್ದನ್ನು ದಾಖಲಿಸಿದ್ದಾನೆ. ಅಲಂಕಾರಗಳನ್ನು ವಿವರಿಸುವ ಸಂದರ್ಭದಲ್ಲಿ ಪ್ರತ್ಯಕ್ಷಾಲಂಕಾರವನ್ನೂ, ರಸವದಲಂಕಾರವನ್ನೂ ಪ್ರಸ್ತಾಪಿಸಿ ಅವುಗಳಿಗೆ ಉದಾಹರಣೆಯಾಗಿ ನೀಡುವ ಪದ್ಯದಲ್ಲಿ ಈ ವಿಷಯ ಬರುತ್ತದೆ.

*'ಇದರೊಳ್ ಮಹಿಶೂರ ಭಟರ್ ಅರೆಕಲ್ಗೂಡಂ ಮುತ್ತಿದೈಯ್ಗೂರ್ ಕೃಷ್ಣಪ್ಪನಾಯಕನನಿರಿದು ಕೆಡಪಿದರೆಂದು ಕೇಳ್ದವನ ಪೆಂಡಿರಾಪೆಣನನರಸುತ್ತೆ ಕುರುಪುಗೊಂಡು ಪಳಿಮೂಗಿಂ ಬಸಿದ ನೆತ್ತರ್ಮುಸುಂಕಿರ್ಪುದರಿಂ ಸಂದೆಯಂಗೊಂಡಾನೆತ್ತದೊರ್ಡೆದು ನಿರವಸಿ ನೆಲೆಗೆಯ್ದರೆಂಬುದರಿಂದಿದು ಪ್ರತ್ಯಕ್ಷಾಲಂಕಾರಂ'*

ಮೈಸೂರಿನ ಸೈನಿಕರು ಅರಕಲಗೂಡಿನ ಕೃಷ್ಣಪ್ಪನಾಯಕನನ್ನು ಮುತ್ತಿ ಕೊಂದರೆಂಬ ವಿಷಯವನ್ನು ತಿಳಿದ ಆತನ ರಾಣಿಯರು ಯುದ್ಧಭೂಮಿಗೆ ಬಂದು ಹೆಣಗಳ ರಾಶಿಯೊಳಗೆ ಆತನ ಶವವನ್ನು ಹುಡುಕುತ್ತಾರೆ. ಮೂಗು ಕತ್ತರಿಸಿ ಹೋಗಿದ್ದುದರಿಂದ ಆತನ ಶವದ ಗುರುತು ಇವರಿಗೆ ಸಿಗಲಿಲ್ಲ. ಮುಖದಲ್ಲಿ ಸುರಿದಿದ್ದ ನೆತ್ತರನ್ನು ಒರೆಸಿ ಆ ಮುಖವನ್ನು ಚೆನ್ನಾಗಿ ದೃಷ್ಟಿಸಿ ನೋಡಿ ಕಡೆಗೆ ಅವನೇ ತಮ್ಮ ಗಂಡನೆಂದು ಗುರುತು ಹಿಡಿದು ಆತನ ಮುಖದ ಮೇಲೆ ತಮ್ಮ ಮುಖವನ್ನಿಟ್ಟು ಅತ್ತರು (ಅಪ್ರತಿಮ ವೀರ ಚರಿತೆ ಚತುರ್ಥ ಪ್ರಕರಣ. ಪ. ೯, ಪು. ೧೩೪).

'ಹೊಳೆಯುವ ವಕ್ಷಸ್ಥಳ, ಮುದ್ದು ನಗೆ, ಕೊಂಕು ನೋಟ, ನಮ್ಮ ಸ್ನೇಹದ ಸವಿಯನ್ನು ತುಟಿಯ ತುಂಬ ಉಣ್ಣುವ ಶಶಿಮುಖವು ಇಂದು ಸಂಪೂರ್ಣ ಕಾಂತಿಹೀನವಾಗಿ, ಮೂಗಳಿದು ಕಣ್ಣುಗಳು ಮುಚ್ಚಿಕೊಂಡು ಧೂಳು ಮುಸುಕಿದೆಯಲಾ!' ಎಂದು ಕೃಷ್ಣಪ್ಪನ ರಾಣಿಯರು ದುಃಖಿಸಿದರು. ಕೃಷ್ಣಪ್ಪನಾಯಕನ ರಾಣಿಯರ ದುಃಖವನ್ನು ವರ್ಣಿಸುವ ಈ ಸಾಲುಗಳಲ್ಲಿ ಕರುಣ ರಸದೊಂದಿಗೆ ಶೃಂಗಾರ ರಸವೂ, ಬೀಭತ್ಸ ರಸವೂ ಮೇಳೈಸಿರುವುದರಿಂದ ಇದು ರಸವದಲಂಕಾರ ಎಂದು ವರ್ಣಿಸುತ್ತಾನೆ.

* * * *

ಚಿಕ್ಕದೇವರಾಜನಿಗೂ ಛತ್ರಪತಿ ಸಂಬಾಜಿಯ ದಳಪತಿ ಯಶವಂತನಿಗೂ ಭೀಕರ ಕಾಳಗ ನಡೆದು ಯಶವಂತನ ಮೂಗು ಹರಿದ ವಿಚಾರ 'ಅಪ್ರತಿಮ ವೀರ ಚರಿತೆ'ಯಲ್ಲಿದೆ. ಯಶವಂತನ ಮೂಗು ಕತ್ತರಿಸಿದ ವಿಚಾರ ಉಳಿದ ಕೃತಿಗಳಲ್ಲೂ ಇದೆ. 'ಚಿಕ್ಕದೇವರಾಯ ಸಪ್ತಪದಿ', 'ಚಿಕ್ಕದೇವರಾಯ ಬಿನ್ನಪ' ಮತ್ತು 'ಗೀತಗೋಪಾಲ'ಗಳು 'ದಾದಜಿ'ಯ ಅಣಲ(ಬಾಯಿಯ ಒಳಭಾಗ)ವನ್ನು ಕೊಯ್ಯಲಾಯಿತೆಂದು ಹೇಳುತ್ತವೆ. ಶ್ರೀರಂಗಪಟ್ಟಣದ ಒಂದು ಶಾಸನ ಈ ಘಟನೆಯನ್ನು ಉಲ್ಲೇಖಿಸಿ, ದಾದಜಿ ಮೊದಲಾದವರನ್ನು ಕೊಂದು ಜೈತಜಿಯ ಅಂಗಾಂಗಗಳನ್ನು ಕತ್ತರಿಸಿ ಯಶವಂತನ ಮೂಗು ಹರಿಯಲಾಯಿತೆಂದು ಹೇಳಿದೆ. ಇದು ಹೊಸೂರಿನ ಬಳಿ ನಡೆದ ಘಟನೆ.

ಬೀಭತ್ಸರಸವನ್ನು ವರ್ಣಿಸುವ ಸಂದರ್ಭದಲ್ಲಿ ತಿರುಮಲಾರ್ಯನು ನೀಡುವ ಉದಾಹರಣೆ ಇದು :

**ಬೀಭತ್ಸದೊಳ್** : *'ಮೂಗು ಹರಿಸಿಕೊಂಡ ಯಶವಂತನು ಹೊಸ ಊರಿನ ಬಳಿ ಓಡಿ ಹೋಗುತ್ತಿರುವಾಗ (ಪೂತನಿಯಂತಹ) ಒಬ್ಬ ರಾಕ್ಷಸಿಯು ಅವನನ್ನು ಹಿಡಿದುಕೊಂಡು ಮೂಗಿನಿಂದ ಸುರಿಯುತ್ತಿರುವ ಬಿಸಿನೆತ್ತರನ್ನು ಕುಡಿಯಲು ಪ್ರಯತ್ನಿಸುತ್ತಾಳೆ. ಆಗ ಅವನ ಮೂಗಿನಿಂದ ರಕ್ತದ ಜೊತೆಗೆ ಸಿಂಬಳವೂ ಸುರಿದುದರಿಂದ ಅದಕ್ಕೆ ಹೇಸಿ ಅವಳು ಅವನ ಮುಖದ ಮೇಲೆ ಉಗಿದಳು'* ಎಂದು ಕವಿ ವರ್ಣಿಸುತ್ತಾನೆ. ಸಿಂಬಳ ಸೋರುವುದು, ಮೊಗದ ಮೇಲೆ ಉಗುಳುವುದು ಮುಂತಾದುವು ಜಿಗುಪ್ಸೆಯನ್ನುಂಟು ಮಾಡತಕ್ಕವು. ಆದ್ದರಿಂದ ಬೀಭತ್ಸ ರಸವಿಲ್ಲಿ ವ್ಯಕ್ತವಾಗಿದೆ ಎಂದು ಅವನು ವಿವರಿಸುತ್ತಾನೆ.

ಯಶವಂತನ ಮೂಗು ಹರಿದುದನ್ನು ಅಪ್ರತಿಮ ವೀರ ಚರಿತೆಯು ಇನ್ನೂ ಹಲವೆಡೆಗಳಲ್ಲಿ ಪ್ರಸ್ತಾಪಿಸಿದೆ :

ವ್ಯಾಜ್ಯೋಕ್ತ್ಯಲಂಕಾರವನ್ನು ವರ್ಣಿಸುತ್ತಾ, 'ಕಾರಣಮಲ್ಲದುದಂ ಕಾರಣಮಾಗಿ ಪೇಳ್ದು ತನ್ನ ಆಕಾರಮಂ ಮರೆಗೆಯ್ವುದು ವ್ಯಾಜ್ಯೋಕ್ತಿಯೆನಿಪುದು. ಎಂತೆನೆ,

> **ಮೂಗರಿದೆಸೆವಂತಂ** ತಾ
> ನಾಗಿಯೆ ಕರೆಕರೆದು ಜನಮನೆಲೆ ಲೋಗರಿರಾ
> ಈಗಳ್ ಕೊಯ್ದೇರಿಸಿದೆಂ
> *ಮೂಗಂ ತುಳಜಾಭವಾನಿಯಡಿಗೆಂದೊರೆವಂ*
> (ಅದೇ, ತೃತೀಯ ಪ್ರಕರಣ, ಪ.೧೬೮; ಪು.೧೧೪–೧೧೫).

ಇದರೊಳ್ ಮಹಿಶೂರವರ್ ಮೂಗಂ ಕೊಯ್ದರೆಂದು ಪೇಳದೆ ಅವರಂ ಗೆಲ್ವುದರ್ಕೆ ತಾನೆ ತನ್ನ ಮೂಗಂ ಕೊಯ್ದು ಭವಾನಿಗೇರಿಸಿದೆನೆಂದು ಪೇಳ್ದು ಮರಸಿದುದರಿಂದಿದು ವ್ಯಾಜ್ಯೋಕ್ತಿಯಲಂಕಾರಂ – ಎನ್ನುತ್ತಾನೆ.

ಯಶವಂತನು ಮೈಸೂರಿನ ಭಟರು ತನ್ನ ಮೂಗು ಹರಿದರೆಂದು ಹೇಳದೆ, ಅವರ ಮೇಲೆ ಜಯ ಗಳಿಸಬೇಕೆಂಬ ಉದ್ದೇಶದಿಂದ ತಾನಾಗಿಯೇ ಮೂಗು ಕತ್ತರಿಸಿ ತುಳಜಾಭವಾನಿಗೆ ಅರ್ಪಿಸಿದೆನೆಂದು ಜನರಿಗೆ ತಿಳಿಸಿದನಂತೆ. ಇಲ್ಲಿ ನಿಜ ವಿಷಯವನ್ನು ಮರೆಮಾಚಿ ಮತ್ತೊಂದನ್ನು ಹೇಳಿದುದರಿಂದ ಇದು ವ್ಯಾಜ್ಯೋಕ್ತಿಯಲಂಕಾರ ಎನಿಸುತ್ತದೆ.

ಮೂಗು ಕಳೆದುಕೊಂಡ ಯಶವಂತನು ಮನೆ ಬಾಗಿಲಿನ ಬಳಿಗೆ ಬಂದಾಗ ಮಕ್ಕಳು ಜೋಗಿ ಬಂದನೆಂದು ಹೆದರಿ ಕೂಗಿಕೊಳ್ಳುತ್ತಾರೆ. ಚಿಕ್ಕದೇವರಾಯನ ಜೊತೆ ಸೆಣಸಿದವರು ನಾಶವಾಗದಿರುತ್ತಾರೆಯೇ ಎಂದು ಕವಿ ಪ್ರಶ್ನಿಸುತ್ತಾನೆ.

ಸಮಾಹಿತಾಲಂಕಾರಮೆಂತೆನೆ : *ಬಿದಿರೂರ ದಳಂ ಮುರಿದೋಡುವಾಗಳ್ ತರುಬುವ ಮಹಿಶೂರಭಟನೊರ್ವಂ ಗರ್ವದಿಂದೆಲೆ ರಾವುತ ನಿಲ್ ಎಂಬುದುಮ್ ಅವಂ ಭಯ ವಿನಯಗಳಿಂದ ಅಯ್ಯ ಸಲಾಮೆಂಬುದುಮ್ ಇವಂ ಬಿದಿರೂರವನೋ ಅವರ್ಗೆ ನೆರವಾಗಿ ಬಂದ ಚಿಂತನಕಲ್ ಮುಂತಾದ ಪಾಳೆಯಗಾರರೊಳ್ ಒರ್ವನೋ ಎಂಬ ಸಂದೆಯದಿಂ ನೀನಾರ್ ಎನಲ್ ಅವಂ ತಾಂ ಬಿದಿರೂರವನೆಂಬುದುಮ್ ಇವಂ ಕೋಪಾತಿಶಯದಿಂ* **ಮೂಗಂ ಕೊಯ್ಯಲೆಳಸುವಿನಮ್** *ಅವಂ ಕಾಲ್ಗೆರಗಿ ತಲೆವೊಯ್ಸಿದೊಡಂ ಲೇಸು ಮೂಗನುಳಿಸಲ್ವೇಳ್ವುದೆಂದು ದೈನ್ಯಂಬಡುವಿನವ್ ಇವಂ ಕೋಪವಂ ಶಾಂತಿಗೊಳಿಸಿಯವನಂ ಮನ್ನಿಸಿದನೆಂದು ಪದ್ಯಾರ್ಥಂ. ಇಲ್ಲಿ ಕೋಪಾಖ್ಯ ಭಾವಶಾಂತಿ ಪ್ರಭುವಿಷಯಮಾದ ಕವೀಶ್ವರನ ಪ್ರೀತಿಭಾವಕ್ಕಂಗಮಾಗಿರ್ಪುದರಿಂದಿದು ಸಮಾಹಿತಾಲಂಕಾರಂ*

ಬಿದಿರೂರಿನ ಸೈನ್ಯದವರು ಹಿಮ್ಮೆಟ್ಟಿ ಓಡುವಾಗ ಅವರಲ್ಲಿ ಒಬ್ಬ ಸೈನಿಕನನ್ನು ಮೈಸೂರಿನ ಭಟನು ಹಿಡಿದುಕೊಂಡು 'ಎಲೆ ರಾವುತ ನಿಲ್' ಎಂದು ನಿಲ್ಲಿಸುತ್ತಾನೆ. ಅವನೂ ಹೆದರಿ ಭಯವಿನಯದಿಂದ 'ಅಯ್ಯಾ, ಸಲಾಂ' ಎನ್ನಲು, ಇವನು ಯಾರ ಕಡೆಯ ಸೈನಿಕನಾಗಿರಬಹುದು? ಬಿದಿರೂರಿನವನೋ ಅಥವಾ ಅವರ ನೆರವಿಗೆ ಬಂದಿರುವ ಚಿಂತನಕಲ್ ಮುಂತಾದ ಪಾಳೆಯಗಾರರಲ್ಲಿ ಒಬ್ಬನಾಗಿರಬಹುದೋ ಎನ್ನುವ ಸಂದೇಹದಿಂದ 'ನೀನು ಯಾರ ಕಡೆಯವನು?' ಎಂದು ಪ್ರಶ್ನಿಸುತ್ತಾನೆ. ಅವನು ತಾನು 'ಬಿದಿರೂರಿನವನು' ಎಂದ ಕೂಡಲೇ ಮೈಸೂರಿನ ಸೈನಿಕನಿಗೆ ಕೋಪ ಉಕ್ಕಿ ಅವನ ಮೂಗು ಹರಿಯಲು ಮುಂದಾಗುತ್ತಾನೆ. ಆ ಭಟನು ಮೈಸೂರಿನ ಭಟನ ಕಾಲ್ಗೆರಗಿ, 'ನನ್ನ ತಲೆಯನ್ನು ಬೇಕಾದರೂ ಕತ್ತರಿಸಿ ಬಿಡು, ಆದರೆ ಮೂಗು ಕತ್ತರಿಸಬೇಡ' ಎಂದು ದೈನ್ಯದಿಂದ ಬೇಡಿಕೊಂಡಾಗ ಇವನ ಕೋಪ ಶಮನವಾಗಿ ತನ್ನ ಒಡೆಯನಾದ ಚಿಕ್ಕದೇವೇಂದ್ರನಂತೆಯೇ ಮೃದುಹೃದಯಿಯಾಗಿ ಮನ್ನಿಸಿ ಬಿಟ್ಟುಬಿಟ್ಟನು. ಇಲ್ಲಿ ಕೋಪವೂ ಅದರ ಶಮನವೂ, ಅದಕ್ಕೆ ಪೂರಕವಾಗಿ ಪ್ರಭುವಿನ ಮೇಲೆ ಕವಿಗಿರುವ ಪ್ರೀತಿಯೂ ಒಟ್ಟಿಗೆ ಬಂದಿರುವುದರಿಂದ ಇದು ಸಮಾಹಿತಾಲಂಕಾರ.

* * * *

'ಪಿರಿಯಾಪಟ್ಟಣದ ಕಾಳಗ' ಎನ್ನುವ ಪ್ರಸಿದ್ಧವಾದ ಜಾನಪದ ಲಾವಣಿ ಹಾಡಿನಲ್ಲಿ ಮೂಗು ಕತ್ತರಿಸುವುದಕ್ಕಾಗಿಯೇ ಪ್ರತ್ಯೇಕವಾದ ಚೂರಿಯೊಂದನ್ನು ಇಟ್ಟುಕೊಳ್ಳುತ್ತಿದ್ದರೆಂಬ ಅಂಶ ವ್ಯಕ್ತವಾಗಿದೆ. ಪಿರಿಯಾಪಟ್ಟಣದ ದಳವಾಯಿ ಸಿದ್ದೋಜಿನಾಯ್ಕ ಮೈಸೂರು ಸೈನ್ಯದ ಮೇಲೆ ದಂಡೆತ್ತಿ ಬಂದು ತನ್ನೆಲ್ಲ ಆಯುಧಗಳು ತೀರಿ ಹೋಗಲು, ತನಗೆ ಬೇಕಾದ ಆಯುಧಗಳ ಪಟ್ಟಿಯನ್ನು ಸಿದ್ಧಪಡಿಸಿ ಅರಸನಿಗೆ ಓಲೆ ಅಟ್ಟುತ್ತಾನೆ. ಅದರಲ್ಲಿ ಮೂಗು ಕತ್ತರಿಸುವ ಆಯುಧದ ಪ್ರಸ್ತಾಪವೂ ಇದೆ :

> **ಮೂಗು ಕುಯ್ಯುವ ಚೂರಿ** ಮುನ್ನೂರು ಸಾವಿರವ
> ಈಟಿ ಡಬ್ಬುಕವ
> ಎತ್ತಿನ ಗಾಡೀಲಿ ಹೇರಿ **ಕಳಿಸಯ್ಯ**[೧೩]

ಇಲ್ಲಿ ಮೂಗು ಕೊಯ್ಯಲು ಚೂರಿ ಬಳಸುತ್ತಿದ್ದರೆಂದು ಹೇಳಿದರೆ ತಿರುಮಲಾರ್ಯನು 'ಚಿಕ್ಕದೇವರಾಜ ವಿಜಯ'ದಲ್ಲಿ 'ಚಮ್ಮಟಿಗೆ' ಎಂಬ ಆಯುಧದಿಂದ ಮೂಗು ಕತ್ತರಿಸುತ್ತಿದ್ದರೆಂದು ಹೇಳುತ್ತಾನೆ. ವಿದೇಶೀ ಪ್ರವಾಸಿ ಮನೂಚಿಯು ಅರ್ಧಚಂದ್ರಾಕಾರದ ಕಬ್ಬಿಣದ ಆಯುಧದಿಂದ ಮೈಸೂರು ಸೈನಿಕರು ಮೂಗು ಕತ್ತರಿಸುತ್ತಿದ್ದರೆಂದು ಹೇಳುತ್ತಾನೆ. ಇವೆಲ್ಲಕ್ಕಿಂತ ಮುಖ್ಯವಾಗಿ ಮೈಸೂರು ಸೈನಿಕರಿಗೆ

ಮೂಗು ಕತ್ತರಿಸಲು ಹೀಗೆ ಸಿದ್ಧಗೊಳಿಸಿದ ಆಯುಧವೇ ಬೇಕೆಂದೇನಿರಲಿಲ್ಲ. ಕೈಗೆ ಸಿಕ್ಕಿದ ಯಾವುದೇ ವಸ್ತುವಿನಿಂದಲೂ ಅವರು ಶತ್ರುಗಳ ಮೂಗು ಕತ್ತರಿಸುವುದರಲ್ಲಿ ಚಾಣಾಕ್ಷರಾಗಿದ್ದರೆಂಬುದನ್ನು ಕಂಠೀರವ ನರಸರಾಜ ವಿಜಯ ತಿಳಿಸುವ ಮೆಚ್ಚುಗೆಯ ಮಾತುಗಳನ್ನು ಈ ಮೊದಲೇ ನೋಡಿದ್ದೇವೆ : 'ಮೃಮರೆತು ಸ್ವಲ್ಪ ಎಚ್ಚರ ತಪ್ಪಿದರೂ ಅವರು ಸಟ್ಟುಗ(ಸೌಟು), ಚೂರಿ, ಚಾಕಿನಲ್ಲೇ ಕೆಡವಿ ಮೂಗರಿದು ಬಿಡುತ್ತಾರೆ'

* * * *

ಕವಿ ಶೇಕ್ಕಿಳಾರನು ರಚಿಸಿರುವ ತಮಿಳಿನ 'ಪೆರಿಯಪುರಾಣ'ದ ಕಳರ್‌ಸಿಂಗ ನಾಯನಾರ್ (*ಕಳರ್=ಕಾಲ್ಗಡಗ, ಸಿಂಗ=ಸಿಂಹ; ವೈರಿಗಳಿಗೆ ಸಿಂಹದಂತಿದ್ದು ಕಾಲ್ಗಡಗ ಹಾಕಿಕೊಂಡಿದ್ದವನು*)ಪುರಾಣದಲ್ಲೂ; (ಇದನ್ನಾಧ'ರಿಸಿ ಹರಿಹರನು ರಚಿಸಿರುವ **ಕಳಚೆಂಗಪೆರುಮಾಳೆಯರ ರಗಳೆಯಲ್ಲೂ**), ಸೆರುಂದಿಣ್ಯೈಂಯಾಂಡಾರ್ (*ಸೆರುಂ=ಯುದ್ಧ, ತುಣ್ಯೈ=ಸಮರ್ಥವಾಗಿ ನಿಲ್ಲುವವನು; ಯುದ್ಧದಲ್ಲಿ ಸಮರ್ಥವಾಗಿ ಕಾದಾಡುವವನು*) ಪುರಾಣದಲ್ಲೂ (**ಚಿರುತೊಣೆಯಾಂಡರ ರಗಳೆ**) ಮೂಗರಿತದ ಬಗೆಗಿನ ಉಲ್ಲೇಖಗಳಿವೆ.

ತಿರುವಾರೂರಿನ ಶಿವಾಲಯದಲ್ಲಿ ಚಿರುತೊಣೆಯಾಂಡಾರನು ಶಿವಪೂಜೆಯಲ್ಲಿ ತೊಡಗಿದ್ದಾಗ ವೀರನರಸಿಂಹ(ಕಳರ್‌ಸಿಂಗ ನಾಯನಾರ್)ನ ರಾಣಿ ಆ ದೇವಾಲಯಕ್ಕೆ ಬಂದಳು. ಅಲ್ಲಿನ 'ಪೂವಿನ ಮಂಟಪದೊಳು' ಸಂಚರಿಸುವಾಗ ಅಲ್ಲಿ ಬಿದ್ದಿದ್ದ ಒಂದು ಹೂವನ್ನು ತೆಗೆದುಕೊಂಡು ಅವಳು ಅರಿಯದೆ ಆಘ್ರಾಣಿಸಿ ಬಿಡುತ್ತಾಳೆ. ಇದನ್ನು ನೋಡಿದ ಚಿರುತೊಣೆಯಾಂಡನಿಗೆ ವಿಪರೀತ ಕೋಪ ಉಕ್ಕಿ ಬರುತ್ತದೆ. ಕೂಡಲೇ,

> **ಕೋಪದೊಳಲಗಂ ಕೊಂಡೊಯ್ವುತ್ತಂ**
> **ಪಾಪಿಯೆಂದು ಪಿಣಿಲಂ ಪಿಡಿವುತ್ತಂ**
> **ಧರೆಯೊಳಗಾಕೆಯ ನೆರೆ ಕೆಡಪುತ್ತಂ**
> **ಸುರಗಿಯಲಾ** ಮೂಗಂ ಕೊಯ್ವುತ್ತಂ...
> **...ಪೊಡವೀಶನ ವಧುವೆನ್ನದೆ**
> **ತಡೆಯದೆ** ನಾಸಿಕಮನರಿದು **ದೃಢಭಕ್ತಿಯೊಳಂ**
> **ನಡೆಯಲ್ ಚಿರುತೊಣೆಯಾಂಡರ**
> ***ದೃಢಭಕ್ತಿಗೆ ಮೆಚ್ಚಿ ಹಂಪೆಯರಸಂ* ಮೆರೆದಂ.**[೧೪]

ಆಕೆ ರಾಣಿ ಎಂಬುದನ್ನೂ ನೋಡದೆ, ಅವಳ ತಲೆಗೂದಲು ಹಿಡಿದು ಕೆಳಗುರುಳಿಸಿ ತನ್ನ ಕೈಲಿದ್ದ ಸುರಗಿಯಿಂದ ಅವಳ ನಾಸಿಕವನ್ನು ಕತ್ತರಿಸಿ ತನ್ನ ಶಿವಭಕ್ತಿಯನ್ನು ಪ್ರದರ್ಶಿಸುತ್ತಾನೆ. ಅವನ ದೃಢ ಭಕ್ತಿಗೆ ಮೆಚ್ಚಿ ಶಿವ ಅವನನ್ನು ಕರುಣಿಸುತ್ತಾನೆ. ಸುರಂಗ ಕವಿಯ ತ್ರಿಷಷ್ಟಿ ಪುರಾತನ ಚಾರಿತ್ರ್ಯದಲ್ಲೂ ಈ ವಿಷಯವಿದೆ :

ವಿಲಸಿತ ಲಿಂಗಾರ್ಚನೆಗೆಂದು ಆಯ್ದು ತಂದಿಟ್ಟಿದ್ದ ಚೆಂಗಣಿಗಿಲೆ, ಇರವಂತಿ, ಮಲ್ಲಿಗೆ, ಪಾಟಲಿ, ಸಂಪಿಗೆ ಮುಂತಾದ ಹೂಗಳನ್ನು ಕಂಡು ಆಕೆ ಅವುಗಳಿಗೆ ಆಕರ್ಷಿತಳಾಗಿ ಪ್ರೀತಿಯಿಂದ ಅವನ್ನು ತೆಗೆದುಕೊಂಡು ವಾಸಿಸಲು ಮರುಕ್ಷಣವೇ ಅದನ್ನು ನೋಡಿದ ಮಹಾಶಿವಭಕ್ತನಾದ ಚಿರುತೊಣೆಯಾಂಡನು ಧಾವಿಸಿ ಬಂದು ಆ ಲಲನೆಯ ಮೂಗನ್ನು ಕಡುಗೋಪದಿಂದ ಕತ್ತರಿಸಿದ. ಭಕ್ತಿಯ ಭಾವೋದ್ರೇಕದಿಂದ ಸಿಟ್ಟುಗೊಂಡು ಆ ಹೆಣ್ಣಿನ ಮೂಗರಿದುದನ್ನು ಕಂಡು ಮನಸಿಜ ವೈರಿಯಾದ ಶಿವನು ಮೆಚ್ಚಿ ಪ್ರತ್ಯಕ್ಷನಾಗಿ ಅವರನ್ನು ಕರುಣಿಸುತ್ತಾನೆ (ಹೂವಿಗೆ ಮನಸೋಲುವುದು, ನೋಡಿದ ಒಡನೆ ಆಘ್ರಾಣಿಸುವುದು ಹೆಣ್ಣಿನ ಸಹಜ ಗುಣ. ಅದಕ್ಕಾಗಿ ಮೂಗು ಕತ್ತರಿಸುವ ಶಿಕ್ಷೆ ನೀಡಿದವನಿಗೆ ಶಿವ ಪ್ರತ್ಯಕ್ಷನಾದನೆಂದು ಹೇಳಿದರೆ ಇಂದಿನ ಸ್ತ್ರೀವಾದಿ ಚಿಂತಕರು ಸುಮ್ಮನಿದ್ದಾರೆಯೇ!).

ಚಿರುತೊಣೆಯಾಂಡನು ಕಳರ್‌ಸಿಂಗ ನಾಯನಾರ್‌ರ ಪತ್ನಿಯ ಮೂಗನ್ನು ಕತ್ತರಿಸಿದ ವಿಷಯ 'ಕಳರ್‌ಸಿಂಗ ನಾಯನಾರ್ ಪುರಾಣ'ದಲ್ಲೂ (**ಕಳಚೆಂಗಪೆರುಮಾಳೆಯರ ರಗಳೆಯಲ್ಲೂ**) ಬರುತ್ತದೆ.

ಕಳಚೆಂಗಪೆರುಮಾಳ್ ಅಥವಾ ವೀರನರಸಿಂಹನು ಒಂದು ದಿನ ಶಿವಾಲಯಕ್ಕೆ ತನ್ನ ಮಡದಿ ಚೊಲ್ಲಡಿಯನಾಚಿ (ನಾಚಿ ಎಂದರೆ ತಮಿಳಿನಲ್ಲಿ ದೇವಿ ಎಂದರ್ಥ) ಹಾಗೂ ಪರಿವಾರದೊಂದಿಗೆ ಶಿವಾಲಯವನ್ನು ಪ್ರವೇಶಿಸಿ ಪ್ರದಕ್ಷಿಣೆ ಬರುವಾಗ, ಅವನ ರಾಣಿ ಚೊಲ್ಲಡಿನಾಚಿಯು, ಅಲ್ಲಿ ಶಿವನ ಮುಡಿಗೇರಿಸಲು ಪುಷ್ಪಮಾಲೆ ಕಟ್ಟುತ್ತಿದ್ದವರ ಪುಷ್ಪಪೀಠದಿಂದ ಒಂದು ಚೆಂಗಣಿಗಿಲೆಯ ಹೂವನ್ನು ತೆಗೆದು ಅದರ ಪರಿಮಳವನ್ನು ಆಘ್ರಾಣಿಸುತ್ತಾಳೆ. ಇದನ್ನು ಕಂಡ ಚಿರುತೊಣೆಯಾಂಡನು ಕೋಪಗೊಂಡು ಕಣ್ಣು ಕೆಂಪೇರಿಸಿ, 'ಶಿವದ್ರೋಹಿ! ಶಿವನ ಮುಡಿಗೇರಿಸಲು ತಂದಿದ್ದ ಪುಷ್ಪವನ್ನು ವಾಸಿಸಿದೆ'ಯೆಂದು ಜರಿದು, '**ಛುರಿಲನರಿದಂ ಮೂಗನಮ್ಮಮ್ಮ ತೊಣೆಯಾಂಡನ್**'. 'ಮೂಗಿಂದೆ ನೆತ್ತರೊಸರಲ್ಕಂಡು ಮಿಗೆ ನಡುಗಿ ಸರ್ವಾಂಗಮುಂ ನೆತ್ತರಿಂ ನಾದಿರಲು...' ಹೀಗೆ ಅವಳ ಮೂಗನ್ನು ಕತ್ತರಿಸಿ ತನ್ನ ಶಿವ ಭಕ್ತಿಯನ್ನು ಪ್ರದರ್ಶಿಸುತ್ತಾನೆ. ವಿಷಯ ಅರಸನಾದ ಕಳಚೆಂಗ ಪೆರುಮಾಳನಿಗೆ ತಲುಪುತ್ತದೆ. ರಾಣಿಯ ಮೂಗನ್ನು ತುಂಡರಿಸಿದವನಿಗೆ ದಂಡನೆ ನೀಡುವಂತೆ ಪರಿವಾರ ಅವನನ್ನು

ಬೇಡಿಕೊಳ್ಳುತ್ತದೆ. ಏನೂ ಮಾತನಾಡದೆ ಅವಳ ಬಳಿಗೆ ಬಂದ ಅರಸನು, ಚಿರುತೊಣೆಯಾಂಡನನ್ನು ನೋಡಿ, 'ಹೂವನ್ನು ಮೊದಲು ತೆಗೆದುಕೊಟ್ಟದ್ದು ಹಸ್ತ, ಆಮೇಲೆ ತಾನೇ ಮೂಗು ಅದನ್ನು ವಾಸಿಸಿದ್ದು. ಇದನ್ನು ಮರೆತು ವಾಸಿಸಿದ ಮೂಗನ್ನು ಮಾತ್ರ ಕತ್ತರಿಸಿ ಬಿಟ್ಟರಿ' ಎಂದು ಹೇಳಿ ಮುನ್ನುಗ್ಗಿ ಅವಳ ಬಲಗೈಯನ್ನು ಕತ್ತರಿಸುತ್ತಾನೆ. ಇವರ ಭಕ್ತಿಯನ್ನು ಕಂಡು ಮೆಚ್ಚಿದ ಶಿವನು ಪ್ರತ್ಯಕ್ಷನಾಗಿ ಅವರನ್ನು ಕರುಣಿಸಿ ಅವಳಿಗೆ ಪುನಃ ಮೂಗನ್ನು ಕೊಡುತ್ತಾನೆ.[೧೬]

* * * *

## ಇಟಲಿ ದೇಶದ ಪ್ರವಾಸಿ ಡಾಕ್ಟರ್ ಮನೂಚಿ (ಕ್ರಿ.ಶ. ೧೫೬೩-೧೭೦೮)

೧೭ನೇ ಶತಮಾನದಲ್ಲಿ ಭಾರತಕ್ಕೆ ಬಂದು ತನ್ನ ೪೦ನೇ ವಯಸ್ಸಿನವರೆಗೆ ಭಾರತದಲ್ಲೇ ಬದುಕಿದ ನಿಕೊಲೋ ಮನೂಚಿ ಮೂಗರಿತ ಹಾಗೂ ಅದರ ಚಿಕಿತ್ಸೆ ಎರಡನ್ನೂ ದಾಖಲಿಸಿದ್ದಾನೆ. 'ಪ್ರವಾಸಿ ಕಂಡ ಇಂಡಿಯಾ' ಕೃತಿಯ ೬ನೇ ಸಂಪುಟದಲ್ಲಿ ಇಟಲಿ ದೇಶದ ಪ್ರವಾಸಿ ಡಾಕ್ಟರ್ ಮನೂಚಿ ಮೂಗರಿತಕ್ಕೆ ಸಂಬಂಧಿಸಿದಂತೆ ಕುತೂಹಲಕರವಾದ ಹಲವಾರು ಮಾಹಿತಿಗಳನ್ನು ತನ್ನ ದಿನಚರಿಯಲ್ಲಿ ದಾಖಲಿಸಿದ್ದಾನೆ:

'ಶ್ರೀನಗರದ (ಘರ್‌ವಾಲಿನ ಶ್ರೀನಗರ) ಹಿಂದೂ ರಾಜನನ್ನು ಗೆಲ್ಲಲು ಷಾಜಹಾನ ದೊಡ್ಡ ಸೈನ್ಯವನ್ನು ಕಳುಹಿಸಿದ. ಈ ರಾಜ್ಯ ಉತ್ತರ ದಿಕ್ಕಿನಲ್ಲಿ ಬೆಟ್ಟಗುಡ್ಡಗಳ ಮಧ್ಯೆ ಇದೆ; ವರ್ಷವೆಲ್ಲ ಹಿಮಗಡ್ಡೆ ಕಟ್ಟಿರುತ್ತದೆ. ಅದನ್ನು ಗೆದ್ದುಕೊಳ್ಳಲು ಷಾಜಹಾನನಿಂದ ಆಗಲಿಲ್ಲ. ಆ ರಾಜ ಷಾಜಹಾನನ ಸೈನ್ಯ ತನ್ನ ರಾಜ್ಯ ಪ್ರವೇಶಿಸುವವರೆಗೆ ಸುಮ್ಮನಿದ್ದು, ಆಮೇಲೆ ದಾರಿಗಳನ್ನೆಲ್ಲಾ ಮುಚ್ಚಿ ಹೊರಗೆ ಹೋಗದಂತೆ ಮಾಡಿಬಿಟ್ಟ. ಆಗ ಷಾಜಹಾನನ ಕಡೆಯ ಸೇನಾಧಿಪತಿ ಶ್ರೀನಗರದ ರಾಜನೊಂದಿಗೆ ಸಂಧಿ ಮಾಡಿಕೊಂಡ. ಆದರೆ ಸೈನಿಕರು ತಮ್ಮ ಪ್ರಾಣಕ್ಕೆ ಬದಲು ಮೂಗುಗಳನ್ನು ಕತ್ತರಿಸಿಕೊಡಬೇಕಾಯಿತು. ಇದನ್ನು ಸಹಿಸಲಾರದ ಸೇನಾಧಿಪತಿ ವಿಷ ಸೇವಿಸಿ ಸತ್ತು ಹೋದ. ಸುದ್ದಿ ಕೇಳಿದ ಷಾಜಹಾನ್ ಮತ್ತೆ ಆ ರಾಜನ ತಂಟೆಗೆ ಹೋಗಲಿಲ್ಲ. ಆದರೆ ಆ ರಾಜನನ್ನು 'ನಾಕ್ ಕಟಿ ರಾಣ' (ಮೂಗು ಕೊಯ್ಯ) ಎಂದು ಕರೆಯಬೇಕೆಂದು ಆಜ್ಞೆ ಮಾಡಿದ. ಈಗಲೂ ಅವನನ್ನು ಅದೇ ಹೆಸರಿನಿಂದ ಕರೆಯುತ್ತಾರೆ'.[೧೭]

'೧೮ನೇ ಶತಮಾನದಲ್ಲಿ ಶಕ್ತಿಯುತವಾದ ಹಿಂದೂ ರಾಜ ಶಿವಾಜಿಯನ್ನು ಮೊಗಲರ ದಂಡನಾಯಕ ಜುಲ್ಫಿಕರ್‌ಖಾನನು ಎದುರಿಸಿದ. ಶಿವಾಜಿಯ ವಶದಲ್ಲಿದ್ದ ಬಿಜಾಪುರ ಜಿಲ್ಲೆಯ ಪರ್ನಾಲಾಘರ್ (ಇಂದಿನ ಪನ್ಹಾಳಘಡ) ಕೋಟೆಗೆ ಮುತ್ತಿಗೆ ಹಾಕಿದ. ಈ ಯುದ್ಧದಲ್ಲಿ ಶಿವಾಜಿಗೇ ಜಯವಾಯಿತು. ಶತ್ರುವಿನ ಸಕಲ ಸಾಮಗ್ರಿಗಳನ್ನೂ ವಶಪಡಿಸಿಕೊಂಡ ಶಿವಾಜಿ ಸೆರೆ ಸಿಕ್ಕ ಶತ್ರುಸೈನಿಕರಲ್ಲಿ ಕೆಲವರನ್ನು ನಿಷ್ಕರುಣೆಯಿಂದ ಕೊಂದು ಬಿಟ್ಟ. ಕೆಲವರ ಬಲಗೈ ಕತ್ತರಿಸಿದ. ಕೆಲವರ ಮೂಗು ಕೊಯಿಸಿದ. ಹೀಗೆ ಮೂಗು ಕೊಯ್ಯಿಸಿಕೊಂಡ ಅನೇಕರನ್ನು ಈಗಲೂ ಅಲ್ಲಿ ಇಲ್ಲಿ ಕಾಣಬಹುದು'.[೧೮]

'ಗೋಲ್ಕಂಡಾ ರಾಜನಾದ ಅಬ್ದುಲ್ಲಾ ಖುತುಬ್ ಷಾ ಮೈಸೂರಿನ ಮೇಲೆ ಹಲವಾರು ಸಲ ಯುದ್ಧ ಮಾಡಿ ಭಂಡಾರವನ್ನೂ ರಾಜ್ಯವನ್ನೂ ಗೆದ್ದುಕೊಳ್ಳಲು ಪ್ರಯತ್ನಪಟ್ಟ. ಆದರೆ ಅದು ಸಾಧ್ಯವಾಗಲಿಲ್ಲ. ಮೈಸೂರಿನ ರಾಜ ವೀರಾವೇಶದಿಂದ ಹೋರಾಡಿದ. ಕಡೆಗೆ ಶತ್ರುಗಳನ್ನು ಸೆರೆಹಿಡಿದು ಅವರ ಮೂಗು ಕತ್ತರಿಸಿ ಬಿಟ್ಟುಬಿಟ್ಟ. ಮೈಸೂರಿನ ಜನರು ಎಷ್ಟು ಚತುರರೆಂದರೆ, ಅವರು ತಮ್ಮ ಕಾಡಿನಲ್ಲಿ ಶತ್ರುಗಳ ಕುದುರೆಗಳು ಹೋಗುತ್ತಿರುವಾಗ ಚಟ್ಟನೆ ಬಂದು ಕುದುರೆಯ ರುಂಡಿಯ ಮೇಲೆ ಕೈಇಟ್ಟು ಹಿಂದಿನಿಂದ ಹತ್ತಿ ಸವಾರನ ಮೂಗನ್ನು ಕಬ್ಬಿಣದಿಂದ ಮಾಡಿದ ಅರ್ಧಚಂದ್ರಾಕಾರದ ಕುಡುಗೋಲಿನಿಂದ ಚರಕ್ ಎಂದು ಕೊಯ್ದು ಹಾಕುತ್ತಿದ್ದರು. ಇದನ್ನು ಕೇಳಿ ಮೊಗಲ್ ಸೈನ್ಯದ ಜನರು ಹೆದರಿ, ಬಂದೂಕದವರು ಬಂದೂಕು ಹಾರಿಸಿಕೊಂಡು ಮುಂದೆ ಸಾಗಿದ ಹೊರತು ಮುಂದೆ ಹೆಜ್ಜೆ ಇಡುತ್ತಿರಲಿಲ್ಲ. ಆಗ ಮೈಸೂರು ರಾಜ್ಯದ ಗಡಿಯನ್ನು ಯಾರೂ ರಹದಾರಿ ಇಲ್ಲದೆ ಪ್ರವೇಶಿಸುವಂತಿರಲಿಲ್ಲ'.[೧೯]

'ಔರಂಗಜೇಬನ ಸೈನಿಕರು ದಕ್ಷಿಣದತ್ತ ಮುಂದುವರೆದು ಕರ್ನಾಟಕದ ಕೆಲವು ಭಾಗಗಳನ್ನು ತಮ್ಮ ವಶಪಡಿಸಿಕೊಳ್ಳುವ, ಇಲ್ಲಿಯ ಸಂಪತ್ತನ್ನು ದೋಚುವ ಹುನ್ನಾರ ಮಾಡಿದರು. ಬಿಜಾಪುರದ ಮೇಲಿನ ದಂಡಯಾತ್ರೆ ೧೬೭೦ರಿಂದ ೧೬೮೬ರವರೆಗೆ ನಡೆಯಿತು. ಯುದ್ಧದ ಆರಂಭದಲ್ಲಿ ಬಿಜಾಪುರದ ಜನರು ಮೊಗಲ್ ಸೈನಿಕರು ಹೊರಗೆ ಕಾಣಿಸಿದರೆ ಸಾಕು ಅವರನ್ನು ಕೊಲ್ಲದೆ ಮೂಗನ್ನು ಮಾತ್ರ ಕೊಯ್ದು ಬಿಟ್ಟುಬಿಡುತ್ತಿದ್ದರು'. ಆ ಬಡಪಾಯಿಗಳು ರಕ್ತ ಸುರಿಸುತ್ತಾ ಪಾಳೆಯಕ್ಕೆ ಹೋಗುತ್ತಿದ್ದರು. ಹಳ್ಳಿಯ ವೈದ್ಯರು ಹಣೆಯ ಮೇಲಿನ ಚರ್ಮವನ್ನು ಎಬ್ಬಿ ಅದನ್ನು ಕೊಯ್ದು ಮೂಗಿನ ಗಾಯದ ಮೇಲೆ ಜೋಲುವಂತೆ ಮಾಡಿ ಆಮೇಲೆ ಆ ಹಸಿ ಚರ್ಮವನ್ನು ತಿರಿಚಿ ತಿದ್ದಿ ಮೂಗಿನ ಹಸಿಯ ಚರ್ಮಕ್ಕೆ ಅಂಟಿಸಿ ಔಷಧಿ ಹಾಕಿ ಹೆಚ್ಚು ಕಡಿಮೆ ಹೊಸ ಮೂಗನ್ನೇ ಮಾಡುತ್ತಿದ್ದರು. ಕಣ್ಣು ಹುಬ್ಬುಗಳ ಮಧ್ಯದ

ಚರ್ಮವನ್ನು ತೆಗೆದ ಕಾರಣ ಅಲ್ಲಿ ಒಂದು ಸಣ್ಣ ತಗ್ಗು ಆಗುತ್ತಿತ್ತು ಅಷ್ಟೇ. ಕೊಂಚ ದಿನಗಳಲ್ಲಿ ಗಾಯ ವಾಸಿಯಾಗುತ್ತಿತ್ತು. ಉಸಿರಾಡಲು ಇದರಿಂದ ಅಡ್ಡಿಯಾಗುತ್ತಿರಲಿಲ್ಲ.[೧೯] ಇಂಥ ಮೂಗುಳ್ಳ ಅನೇಕರನ್ನು ನಾನು ನೋಡಿದ್ದೇನೆ. ಮೂಗೇ ಇಲ್ಲದಿದ್ದರೆ ಎಷ್ಟು ಕುರೂಪಿಗಳಾಗಿ ಕಾಣುತ್ತಿದ್ದರೋ ಅಷ್ಟು ಕುರೂಪಿಗಳಾಗಿರುವುದಿಲ್ಲ. ಆದರೆ ಹುಬ್ಬಿನ ಮಧ್ಯೆ ಕೊಯ್ದ ಗುರುತು ಮಾತ್ರ ಉಳಿಯುತ್ತಿತ್ತು.[೨೦]

೧೬ನೇ ಶತಮಾನದಲ್ಲಿ ನಡೆದ ಮೂಗರಿತದ ಯುದ್ಧದ ಬಗೆಗೂ ಹರಿದ ಮೂಗಿನ ಚಿಕಿತ್ಸೆಯ ಬಗೆಗೂ ಕೆಲವು ಐತಿಹಾಸಿಕ ಕಾವ್ಯಗಳೂ, ಪ್ರವಾಸಿಗಳ ಕೃತಿಗಳೂ ಮಾಹಿತಿ ನೀಡುತ್ತವೆ.

ತಿರುಮಲಾರ್ಯನು 'ಅಪ್ರತಿಮ ವೀರಚರಿತೆ'ಯಲ್ಲಿ ಛೇಕೋಕ್ತಿಗೆ ಉದಾಹರಣೆ ನೀಡುತ್ತಾ ಹಣೆದೊಗಲನ್ನು ತೆಗೆದು ಮೂಗು ಮಾಡುತ್ತಿದ್ದುದನ್ನು ಪ್ರಸ್ತಾಪಿಸಿದ್ದಾನೆ:

> **ಕತ್ತರಿಸಿ ನೆತ್ತಿದೊವಲಂ**
> **ಪತ್ತಿಸಿ ಪೊಸಮೂಗುಗೆಯ್ವಂ ಎನಲ್ ಯಸವಂತಂ**
> **ಸತ್ತಾಂ ಸಗ್ಗಂ ಬಡೆವಂ**
> ***ಮತ್ತೆ ವಿರಕ್ತಂಗೆ ಮೂಗದೇತರ್ಕೆಂದಂ !***
> ***(ಅಪ್ರತಿಮ ವೀರ ಚರಿತೆ, ತೃತೀಯ ಪ್ರಕರಣ, ಪ. ೧೭೪, ಪು. ೧೧೮).***

ಷಹಜಿಯ ದಳಪತಿ ಯಶವಂತನ ಮೂಗನ್ನು ಮೈಸೂರಿನವರು ಕತ್ತರಿಸಿದಾಗ, 'ನೆತ್ತಿಯ ತೊಗಲನ್ನು ಕತ್ತರಿಸಿ ಹೊಸ ಮೂಗನ್ನು ಮಾಡೋಣ ಎಂದು ಹೇಳಲು, ಅದಕ್ಕೆ ಯಶವಂತನು, ತಾನು ಇನ್ನು ಸತ್ತು ಸ್ವರ್ಗ ಪಡೆಯಲಿದ್ದೇನೆ. ವಿರಕ್ತನಾಗಿರುವ ನನಗೆ ಮೂಗೇಕೆ' ಎಂದು ಹೇಳಿ ಅವರನ್ನು ತಡೆಯುತ್ತಾನೆ. ಇಲ್ಲಿನ 'ವಿರಕ್ತನಿಗೆ ಮೂಗೇಕೆ' ಎಂದು ಹೇಳುವ ಮಾತು ನಾಣ್ನುಡಿಯೆಂದೂ; ರಕ್ತ ಬಸಿದು ಹೋಗಿರುವ ತನಗೆ ಮೂಗು ಮತ್ತೆ ಹತ್ತದೆಂದು ತಿಳಿದು ಈ ನಾಣ್ಣುಡಿಯನ್ನು ಬಳಸಿ ಬೇರೊಂದು ಅರ್ಥದಲ್ಲಿ ಮಾತನಾಡುತ್ತಿರುವುದರಿಂದಲೂ ಇದು ಛೇಕೋಕ್ತಿಯೆಂದು ತಿರುಮಲನು ವಿವರಿಸುತ್ತಾನೆ.

೧೭೬೧ರಲ್ಲಿ ಅಧಿಕಾರಕ್ಕೆ ಬಂದ ಹೈದರ್ ಆಲಿ ತಪ್ಪು ಮಾಡಿದವರಿಗೆ ಈ ಶಿಕ್ಷೆಯನ್ನು ವಿಧಿಸುತ್ತಿದ್ದನೆಂದೂ; ಅವನ ಬಳಿ ಮೂಗು ಕತ್ತರಿಸುವುದಕ್ಕಾಗಿಯೇ ಒಂದು ಪಡೆ ಇತ್ತೆಂದೂ ಜೆ.ಎಚ್.ನೆಲ್ಸನ್ ತಿಳಿಸುತ್ತಾನೆ.[೨೧]

ಇವೆಲ್ಲಕ್ಕಿಂತ ಸ್ವಾರಸ್ಯಕರವಾದ ಮತ್ತೊಂದು ವಿಷಯವೂ ಇದೆ : 'ಮದ್ರಾಸಿನಿಂದ ದಕ್ಷಿಣಕ್ಕೆ ಒಂದು ಪುರಾತನ ದೇವಸ್ಥಾನ ಇತ್ತಂತೆ. ಇಲ್ಲಿದ್ದ ದೇವರಿಗೆ ಮನುಷ್ಯರ ಮೂಗನ್ನು ನೈವೇದ್ಯವಾಗಿ ಅರ್ಪಿಸುತ್ತಿದ್ದರಂತೆ. ಪ್ರಯಾಣಿಕರ ಮೂಗುಗಳನ್ನು ಕೊಯ್ದು ತರಲು ಸೇವಕರನ್ನು ನೇಮಿಸಿಕೊಳ್ಳಲಾಗಿತ್ತಂತೆ. ಈಚೆಗೆ ಹೈದರ್‌ಆಲಿಯು ಮೈಸೂರಿನ ದೊರೆಯಾದ ಮೇಲೆ ತಪ್ಪಿತಸ್ಥರಿಗೆ ಮೂಗು ಕತ್ತರಿಸುವ ಶಿಕ್ಷೆ ವಿಧಿಸುತ್ತಿದ್ದಾನಂತೆ.' ಹೀಗೆ ಮೂಗು ಕೊಯ್ಯಿಸಿಕೊಂಡವರದ್ದೇ ಒಂದು ಪಡೆ ಇತ್ತಂತೆ ![೨೨]

ಮೂಗು ಕೊಯ್ಯುವುದರಲ್ಲಿ ಚತುರರಾದವರು ಕಾಡಿನಲ್ಲಿ ವಾಸಮಾಡುತ್ತಿದ್ದ ಬೇಡರುಗಳೆಂಬ ಅಭಿಪ್ರಾಯವೂ ಇದೆ. ಇದು ಯುದ್ಧದ ಸಂದರ್ಭದಲ್ಲಿ ಮಾತ್ರ ನೀಡುತ್ತಿದ್ದ ಶಿಕ್ಷೆಯಲ್ಲವೆಂದೂ; ತಪ್ಪು ಮಾಡಿದವರಿಗೂ, ತಮಗಾಗದವರಿಗೂ ಕೂಡ ಈ ಶಿಕ್ಷೆ ನೀಡುತ್ತಿದ್ದರೆಂದೂ ಇದರಿಂದ ತಿಳಿಯಬಹುದು.

೭ನೇ ಎಡ್ವರ್ಡ್ ಚಕ್ರವರ್ತಿಗೆ ರಾಜವೈದ್ಯನಾಗಿದ್ದ ಸರ್ ಫ್ರೆಡರಿಕ್ ಟ್ರೀವ್ಸ್ (Slir Frederic Treeve) ಎನ್ನುವ ಇಂಗ್ಲೀಷ್ ವೈದ್ಯನು 'ಗದ್ದೆಯನಾರ್' ಎಂಬಲ್ಲಿ, ಷಾ (Prof. Shaw) ಎನ್ನುವ ಭಾರತೀಯನಿಂದ ಮೂಗು ಅಂಟಿಸುವ ಹಾಗೂ ಮೂಗು ತಯಾರಿಸುವ ಚಿಕಿತ್ಸೆಯನ್ನೂ (Ruino Plastry) ಕಲಿತುಕೊಂಡನೆಂದು ಡಾ. ಎನ್ ಸುಬ್ರಹ್ಮಣ್ಯಂ ಹೇಳುತ್ತಾರೆ.

ಮೂಗು ಕತ್ತರಿಸುವ ಉದ್ದೇಶ ಅವಮಾನ ಪಡಿಸುವುದು ಹಾಗೂ ಸೌಂದರ್ಯವನ್ನು ಕೆಡಿಸಿ ವಿರೂಪಗೊಳಿಸುವುದು. ಭಾರತದ ಅರಸರ ನಡುವೆ ಪರಸ್ಪರ ದಾಳಿ ನಡೆದ ಸಂದರ್ಭದಲ್ಲೂ, ಪರಕೀಯರ ಆಕ್ರಮಣದ ಕಾಲದಲ್ಲೂ ಹಲವು ದೇವಾಲಯಗಳ ಮೂರ್ತಿಶಿಲ್ಪಗಳ ಮೂಗು ಒಡೆದುಹೋಗಿರುವುದನ್ನೂ ನಾವು ಕಾಣುತ್ತೇವೆ. ವಿಗ್ರಹಗಳ ಮೂಗು ಒಡೆದು ಹಾಕಿ ಅವನ್ನು ಕುರೂಪಗೊಳಿಸುವುದರೊಂದಿಗೆ ಅವಮಾನಕ್ಕೀಡು ಮಾಡುವ ಉದ್ದೇಶವೂ ಇದರಲ್ಲಿದೆ.

ಆಡು ಮಾತಿನಲ್ಲಿ ಜಗಳವಾಡುವಾಗ ಮೂಗು ಕತ್ತರಿಸುತ್ತೇನೆ ಎಂದು ಹೇಳುವ ರೂಢಿ ಈಗಲೂ ಇದೆ. ಇಂಗ್ಲಿಷ್‌ನಲ್ಲೂ ಅವಮಾನಪಡಿಸು ಎಂಬುದಕ್ಕೆ 'ನೋಸ್ ಕಟ್' ಎಂಬ ಪದ ಬಳಕೆಯಲ್ಲಿರುವುದನ್ನು ಈ ಸಂದರ್ಭದಲ್ಲಿ ನೆನಪಿಸಿಕೊಳ್ಳಬಹುದು.

* * * *

೧೨ನೇ ಶತಮಾನದಲ್ಲೂ ಮೂಗು ಕತ್ತರಿಸುವ ಶಿಕ್ಷೆ ಇದ್ದಿರಬೇಕು. ಇದಕ್ಕೆ ಸಮಕಾಲೀನ ಐತಿಹಾಸಿಕ ಆಧಾರಗಳು ಲಭ್ಯವಾಗದಿದ್ದರೂ ಕೆಲವು ವಚನಕಾರರ ವಚನಗಳಲ್ಲಿ ಈ ವಿಷಯ ಪ್ರಾಸಂಗಿಕವಾಗಿ ಪ್ರಸ್ತಾಪವಾಗಿರುವುದನ್ನು ನೋಡಬಹುದು. ವಚನಕಾರರ ಕಾಲದಲ್ಲಿ ಇಂತಹುದೊಂದು

ಶಿಕ್ಷೆ ಇದ್ದ ಕಾರಣದಿಂದಲೇ ಮೂಗು ಕತ್ತರಿಸುವ ವಿಷಯವನ್ನು ಹಲವು ವಚನಕಾರರು ಪದೇಪದೇ ತಮ್ಮ ವಚನಗಳಲ್ಲಿ ತರುತ್ತಾರೆ. ಉದಾಹರಣೆಗೆ ಕೆಲವು ವಚನಗಳನ್ನು ಇಲ್ಲಿ ನೋಡಬಹುದು :

ಏನ ಬಂದಿರಿ ಹದುಳವಿದ್ದಿರೆ ಎಂದರೆ
ನಿಮ್ಮ ಮೈಸಿರಿ ಹಾರಿ ಹೋಹುದೇ ?
ಕುಳ್ಳಿರೆಂದರೆ ನೆಲ ಕುಳಿ ಹೋಹುದೇ ?
ಒಡನೆ ನುಡಿದರೆ ಶಿರ ಹೊಟ್ಟೆಯೊಡೆವುದೇ
ಕೊಡಲಿಲ್ಲದಿದ್ದೊಡೊಂದು ಗುಣವಿಲ್ಲದಿರ್ದಡೆ
ಕೆಡಹಿ ಮೂಗ ಕೊಯ್ಯದೆ ಮಾಣ್ಬನೇ
ನಮ್ಮ ಕೂಡಲ ಸಂಗಮದೇವನು

* * *

ಹಾವಾಡಿಗನೂ ಮೂಕೊರತಿಯೂ
ತನ್ನ ಮಗನ ಮದುವೆಗೆ ಶಕುನವ ನೋಡ ಹೋಗುವಾಗ
ಇದಿರಲೊಬ್ಬ ಮೂಕೊರತಿಯ ಹಾವಾಡಿಗನ ಕಂಡು
ಶಕುನ ಹೊಲ್ಲೆಂಬ ಚದುರನ ನೋಡಾ !
ತನ್ನ ಸತಿ ಮೂಕೊರತಿ, ತನ್ನ ಕೈಯಲಿ ಹಾವು !
ತಾನು ತನ್ನ ಭಿನ್ನವನರಿಯದೆ
ಅನ್ಯರನೆಂಬ ಕುನ್ನಿಯನೇನೆಂಬೆ ಕೂಡಲ ಸಂಗಮದೇವಾ!

* * *

ಜಂಗಮ ಮನೆಗೆ ಬಂದಲ್ಲಿ ಓಸರಿಸಿದರೆ
ಹಿಡಿದು ಮೂಗ ಕೊಯ್ಯಯ್ಯ ಕೂಡಲಸಂಗಮದೇವಾ!

* * *

ವೇದಕ್ಕೆ ಒರೆಯ ಕಟ್ಟುವೆ !
ಶಾಸ್ತ್ರಕ್ಕೆ ನಿಗಳವನಿಕ್ಕುವೆ !
ತರ್ಕದ ಬೆನ್ನ ಬಾರನೆತ್ತುವೆ
ಆಗಮದ ಮೂಗ ಕೊಯ್ವೆ !
ನೋಡಯ್ಯ, ಮಹಾದಾನಿ ಕೂಡಲ ಸಂಗಮದೇವಾ !

* * *

... ಜಂಗಮಾರಾಧನೆಯ ಮಾಡುವೆ,
ಪ್ರಸಾದಕ್ಕೆ ತಪ್ಪೆ
ಇಂತಪ್ಪ ಭಾಷೆ ಕಿಂಚಿತ್ತು ಹುಸಿಯಾದರೆ
ನೀನಂದೇ ಮೂಗ ಕೊಯಿ ಕೂಡಲಸಂಗಮದೇವಾ !

* * *

ಹುಲಿಯ ಹಾಲು ಹುಲಿಗಲ್ಲದೆ
ಹೊಲದ ಹುಲ್ಲೆಗುಣಬಾರದು
ಕಲಿಯ ಕಾಲ ತೊಡರು ಛಲದಾಳಿಂಗಲ್ಲದೆ ಇಕ್ಕಬಾರದು
ಅಳಿಮನದಾಸೆಯವರ ಮೂಗ ಹಲುದೋರ ಕೊಯ್ವ
ಕೂಡಲ ಸಂಗಮದೇವ.

* * *

ಏಕದೇವೋಪಾಸನೆಯ ತೀವ್ರತೆಯನ್ನು ಮನವರಿಕೆ ಮಾಡಿಕೊಡುವ ಸಲುವಾಗಿ ರಚನೆಯಾಗಿರುವ ವಚನಗಳಲ್ಲಿ ಈ ಘಟನೆಯ ಉಲ್ಲೇಖವನ್ನು ಕಾಣಬಹುದು.

ದೇವನೊಬ್ಬ ನಾಮ ಹಲವು
ಪರಮ ಪತಿವ್ರತೆಗೆ ಗಂಡನೊಬ್ಬ
ಮತ್ತೊಂದಕ್ಕೆರಗಿದಡೆ ಕೆಡಹಿ ಮೂಗ ಕೊಯ್ವನು
ಹಲವು ದೈವದ ಎಂಜಲ ತಿಂಬವರನೇನೆಂಬೆ
ಕೂಡಲಸಂಗಮದೇವಾ !

* * *

ಅಂಬಿಗರ ಚೌಡಯ್ಯನ ವಚನ :

'ಅಯ್ಯಾ ನಾವು ಪರಮ ವಿರಕ್ತರು' ಎಂದು ಆರಂಭವಾಗುವ ಅಂಬಿಗರ ಚೌಡಯ್ಯನ ಇನ್ನೊಂದು ವಚನ :

....ಇಂತಪ್ಪ ಜಂಗಮವನು ಪೂಜೆ ಮಾಡುವಂತಹ ಶಿವಭಕ್ತನ
ಉಭಯತರ ಮೂಗ ಸೀಳಿ ಮೆಣಸಿನ ಹಿಟ್ಟು ತುಪ್ಪವ ತುಂಬಿ
ಪಡಿಹಾರ ಉತ್ತಣ್ಣಗಳ ಎಡದ ಪಾದುಕೆಯಿಂದ
ಫಡಫಡನೆ ಹೊಡಿ ಎಂದಾತ
ನಮ್ಮ ಅಂಬಿಗ ಚೌಡಯ್ಯ ನಿಜ ಶರಣನು

* * *

*'ಕೇಳಿರಯ್ಯಾ ಮಾನವರೇ!'* ಎಂದು ಆರಂಭವಾಗುವ ವಚನ,

ಕುಲಹೀನ ಶಿಷ್ಯಂಗೆ ಅನುಗ್ರಹವ ಮಾಡಿ
ತಿರುಗಿ ಅವನ ಮನೆಯಲ್ಲಿ ಉಣ್ಣಬಾರದೆಂದು
ಅಕ್ಕಿ ಕಣಕವ ಕೊಂಡು ಹೋಗುವ ಗುರುವಿನ ಕಂಡರೆ
ಕೆಡವಿ ಮೂಗ ಕೊಯ್ದು ಇಟ್ಟಂಗಿ ಕಲ್ಲಲಿ ತಿಕ್ಕಿ
ಸಾಸಿವೆ ಹಿಟ್ಟನೆ ತಳಿದು
ಮೇಲೆ ಲಿಂಬಿಯ ಹುಳಿಯನು ಹಿಂಡಿ
ಪಡುವಣ ಗಾಳಿಗೆ ಹಿಡಿಯೆಂದಾತ ನಮ್ಮ ಅಂಬಿಗ ಚೌಡಯ್ಯ!

ಶಿವ ದೀಕ್ಷೆಯಾದ ಬಳಿಕ ಸಮಾನವೆಂದು ಭಾವಿಸದೆ, ಕೆಳವರ್ಗದ ಶಿಷ್ಯರ ಮನೆಯಲ್ಲಿ ಊಟ ಮಾಡದೆ ಅಕ್ಕಿ ಕಣಕ ಕೊಂಡೊಯ್ಯುವ ಗುರುಗಳು, ಕಾಯಕ ಜೀವಿ ಭಕ್ತನ ಕುಲಮೂಲದ ಹೆಸರೆತ್ತಿ ಮಾತನಾಡುವ ಜಂಗಮರು, ಗುರುಗಳನ್ನು ಈ ವಚನ ತರಾಟೆಗೆ ತೆಗೆದುಕೊಳ್ಳುತ್ತದೆ.

* * *

ಸಿದ್ಧರಾಮನ ವಚನ :

'ಭಕ್ತರು ಭಕ್ತಿವಿಡಿದು ಆಚರಿಸಲಿ
ಆವು ಒಲ್ಲೆವಯ್ಯಾ ಆತನ ಭಕ್ತಿ ನೈಷ್ಠೆ
ಆತ ನಡೆದುದು ಜಗತ್ಪಾವನ
ಇದು ಪುಸಿಯಾದೊಡೆ ಹಲ್ಲುದೋಜಿ ಮೂಗ ಕೊಯ್ಯಿ'

* * *

ಸೂಳೆ ಸಂಕವ್ವಾ ಒಂದು ವಚನವೊಂದರಲ್ಲಿ :
ವ್ರತ ಹೀನನೆಂದರಿದು ಬೆರೆದಡೆ
ಕಾದ ಕತ್ತಿಯಲ್ಲಿ ಕೈ ಕಿವಿ ಮೂಗ ಕೊಯ್ವರಯ್ಯಾ
ಒಲ್ಲೆನೊಲ್ಲೆ ಬಲ್ಲೆನಾಗಿ ನಿಮ್ಮಾಣೆ ನಿರ್ಲಜ್ಜೇಶ್ವರಾ !

– ತನ್ನ ಕಾಯಕದ ಬಗ್ಗೆ ನಿರ್ಭಿಡೆಯಿಂದ ಹೇ ಕೊಳ್ಳುವ ಈಕೆ ಈ ಮೂಲಕ ತನ್ನ ಶೈವ ನಿಷ್ಠೆಯನ್ನು ತೋಡಿಕೊಳ್ಳುತ್ತಾಳೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ವಡ್ಡಾರಾಧನೆ, ಸುಕುಮಾರ ಸ್ವಾಮಿಯ ಕಥೆ, ಗದ್ಯಾನುವಾದ : ಡಾ. ಕೇಶವ ಭಟ್ಟ, ಕನ್ನಡ ಸಾಹಿತ್ಯ ಪರಿಷತ್, ಬೆಂಗಳೂರು, ೧೯೯೯, ಎರಡನೆಯ ಮುದ್ರಣ, ಪು. ೩೭–೩೮.

೨. ಅತಕೂರು ಶಾಸನ, ಎಪಿಗ್ರಾಫಿಯಾ ಕರ್ನಾಟಿಕಾ, ಸಂ. ೩, ಮಂಡ್ಯ ೪೧, ಪು. ೧೩೬.

೩. **ಕೌಟಿಲ್ಯನ ಅರ್ಥಶಾಸ್ತ್ರ**, ಸಂ: ಕೆ.ಕೃಷ್ಣಭಟ್ಟ, ಸಮಾಜ ಪುಸ್ತಕಾಲಯ, ಧಾರವಾಡ, ಪು. .೩೧೫ ಮತ್ತು ೩೨೧.

೪. Dr. Saletore, *Strange Indian customs*, P. 153.

೫. ಅದೇ.

೬ ಅದೇ ಪು. ೧೫೫.

೭. R.Sathya Natha Aiyar, *History of the Nayakas of Madhurai*, p. 88.

೮. ಜೆ.ಎಚ್. ಗ್ರೋಸ್, *A Voyoge to the East Indies*, p. 247.

೯. R. Sathya Natha Aiyar, p. 100-101.

೧೦. ಕೆ.ಕೆ.ಪಿಳ್ಳೈ, **ತಮಿಳಗ ವರಲಾರುಂ ಮಕ್ಕಳುಂ ಪಣ್‌ಪಾಡುಂ**, ಮರುಮುದ್ರಣ, ೨೦೦೦, ಉಲಗ ತಮಿಳ್ ಆರಾಯ್ಚಿ ನಿರುವಣಂ, ೨೦೦೦, ಚೆನ್ನೈ ೧೩,ಪು. ೪೦೬.

೧೧. ಎ.ಕ. ೩, ಶ್ರೀ. ೧೪, ೬೪ ಮತ್ತು ಟಿ.ನ. ೬೩.

೧೨. ತಿರುಮಲಾರ್ಯ ವಿರಚಿತ **ಅಪ್ರತಿಮ ವೀರ ಚರಿತೆ**, ಸಂ. ವಿದ್ವಾನ್ ಕೊಣನೂರು ನರಸಿಂಹ ಶಾಸ್ತ್ರಿ ಮತ್ತು ವಿದ್ವಾನ್ ಜಿ.ಆರ್. ಶ್ರೀನಿವಾಸಯ್ಯಂಗಾರ್, ಶಂಕರ ಮುದ್ರಣಾಲಯ, ಜಯನಗರ, ಬೆಂಗಳೂರು ೧೧, ೧೯೭೨.

೧೩. **ಪಿರಿಯಾಪಟ್ಟಣದ ಕಾಳಗ**, ಸಂ: ಜಿ.ಶಂ. ಪರಮಶಿವಯ್ಯ, ತ.ವೆಂ. ಸ್ಮಾರಕ ಗ್ರಂಥಮಾಲೆ, ಮೈಸೂರು, ೧೯೭೩, ಪು.೫೫.

೧೪. 'ಚಿರುತೊಣೆಯಾಂಡರ ರಗಳೆ', **ಮಹಾಕವಿ ಹಂಪೆಯ ಹರಿಹರದೇವ ಕೃತ ಹರಿಹರನ ರಗಳೆಗಳು**, ಸಂ. ಡಾ. ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೭೩, ಪು. ೪೯೭–೫೦೨.

೧೫. ಕವಿಚಕ್ರವರ್ತಿ ಸುರಂಗ ಕೃತ **ತ್ರಿಷಷ್ಟಿ ಪುರಾತನ ಚಾರಿತ್ರಂ**, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ, ೧೯೬೬, ೪೧ನೇ ಆಶ್ವಾಸ, ಪ.೯ ಮತ್ತು ೧೦, ಪು. ೬೩೪.

೧೬. 'ಕಳಚೆಂಗಪೆರುಮಾಳೆಯರ ರಗಳೆ', **ಮಹಾಕವಿ ಹಂಪೆಯ ಹರಿಹರದೇವ ಕೃತ ಹರಿಹರನ ರಗಳೆಗಳು**, ಪು. ೬೦೧–೬೦೭.

೧೭. **ಪ್ರವಾಸಿ ಕಂಡ ಇಂಡಿಯಾ**, ಸಂ. ೬. ಸಂ. ಡಾ. ಎಚ್.ಎಲ್. ನಾಗೇಗೌಡ, ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿಶ್ವವಿದ್ಯಾಲಯ., ೧೯೭೭, ಪು. ೧೦೭–೮.

೧೮. ಅದೇ, ಪು. ೩೨೮.

೧೯. ಅದೇ, ೬, ಪು. ೩೮೧.

೨೦. ಅದೇ, ಪು. ೨೩೮.

೨೧. ಅದೇ, ಪು. ೩೮೧–೩೮೨.

೨೨. ಅದೇ, ಪು. ೩೮೨.ಚೆನ್ನೈ ೧೩, ಪು. ೪೦೬.



೧೧. ಎ.ಕ. ೩, ಶ್ರೀ. ೧೪, ೬೪ ಮತ್ತು ಟಿ.ನ. ೬೩.

೧೨. ತಿರುಮಲಾರ್ಯ ವಿರಚಿತ **ಅಪ್ರತಿಮ ವೀರ ಚರಿತೆ**, ಸಂ: ವಿದ್ವಾನ್ ಕೊಣನೂರು ನರಸಿಂಹ ಶಾಸ್ತ್ರಿ ಮತ್ತು ವಿದ್ವಾನ್ ಜಿ.ಆರ್. ಶ್ರೀನಿವಾಸಯ್ಯಂಗಾರ್, ಶಂಕರ ಮುದ್ರಣಾಲಯ, ಜಯನಗರ, ಬೆಂಗಳೂರು ೧೧, ೧೯೭೨.

೧೩. 'ಚಿರುತೊಣೆಯಾಂಡರ ರಗಳೆ', **ಮಹಾಕವಿ ಹಂಪೆಯ ಹರಹರದೇವ ಕೃತ ಹರಿಹರನ ರಗಳೆಗಳು**, ಸಂ. ಡಾ. ಆರ್.ಸಿ. ಹಿರೇಮಠ, ಕನ್ನಡ ಅಧ್ಯಯನ ಪೀಠ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ; ೧೯೭೩, ೪೯೭–೫೦೨.

೧೪. ಕವಿಚಕ್ರವರ್ತಿ ಸುರಂಗ ದೃತ **ತ್ರಿಷಷ್ಟಿ ಪುರಾತನ ಚಾರಿತ್ರಂ** ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಢ, ೧೯೭೬, ೪೧ನೇ ಆಶ್ವಾಸ, ಪ.೯ ಮತ್ತು ೧೦, ಪು. ೬೩೪.

೧೫. 'ಕಳಚೆಂಗಪೆರುಮಾಳೆಯರ ರಗಳೆ' **ಮಹಾಕವಿ ಹಂಪೆಯ ಹರಿಹರದೇವನ ಕೃತ ಹರಿಹರನ ರಗಳೆಗಳು**, ಪು. ೬೦೧–೬೦೭.

೧೬. **ಪ್ರವಾಸಿ ಕಂಡ ಇಂಡಿಯಾ**, ಸಂ. ೬. (ಸಂ.) ಡಾ. ಎಚ್.ಎಲ್. ನಾಗೇಗೌಡ, ಕನ್ನಡ ಅಧ್ಯಯನ ಕೇಂದ್ರ, ಮೈಸೂರು ವಿ.ವಿ., ೧೯೭೭, ಪು. ೧೦೭–೮.

೧೭. ಅದೇ, ಪು. ೩೨೮.

೧೮. ಅದೇ, ೬, ಪು. ೩೮೧.

೧೯. ಅದೇ, ಪು. ೨೩೮.

೨೦. ಅದೇ, ಪು. ೩೮೧–೩೮೨.

೨೧. ಅದೇ, ಪು. ೩೮೨.

* ಬಿಜಾಪುರದ ನಿವಾಸಿಗಳು ಮೂಗು ಕೊಯ್ಯು ಹಾಕುವ ಕೆಲಸದಲ್ಲಿ ನೈಪುಣ್ಯತೆ ಪಡೆದದ್ದು ತಮ್ಮ ಸ್ವಂತ ಅನುಭವದಿಂದಲೇ ಎಂದು ಕಾಣುತ್ತದೆ. ಏಕೆಂದರೆ, ಆ ಕಾಲಕ್ಕೆ ಮುನ್ನ ೩೮ ವರ್ಷಗಳ ಹಿಂದೆಯೇ ಬಿಜಾಪುರದ ಸೈನಿಕರ ಮೂಗುಗಳನ್ನು ಶ್ರೀರಂಗಪಟ್ಟಣದ ದೊರೆ ಶ್ರೀಕಂಠೀರವನರಸರಾಜನು ಕೊಯ್ಯಿಸಿದ ವರ್ಣನೆಯನ್ನು ಈಗಾಗಲೇ ನೋಡಿದ್ದೇವೆ. ಬಿಜಾಪುರದ ಬಾದಷಾನ ಕಡೆಯ ದಂಡನಾಯಕನಾದ ರಣದುಲ್ಲಾಖಾನ್ ಶ್ರೀರಂಗಪಟ್ಟಣಕ್ಕೆ ಮುತ್ತಿಗೆ ಹಾಕಿದಾಗ ಕಂಠೀರವ ನರಸರಾಜನ ದಳವಾಯಿ ನಂಜರಾಜನ ಸೂಚನೆಯಂತೆ ಸ್ಥಳದ ಜನರು ಬಿಜಾಪುರಕ್ಕೆ ಹಿಂದಿರುಗಿ ಬಾದಷಾನಿಂದ ಕೂಡುಂಬಳಿ ಪಡೆದು ಅವರದೇ ಆದ ಮೂಕೊರೆಯರ ವೀಧಿಯಲ್ಲಿ ಇರತೊಡಗಿದರು. ಹೀಗೆ ತಮ್ಮ ಸ್ವಂತ ಅನುಭವದ ಸವಿ ನೋಡಿದ ಈ ಮೂಕೊರೆಯರು ಔರಂಗಜೇಬನ ಕಡೆಯವರಿಗೂ ಅದರ ಸವಿ ಉಣ್ಣಿಸಿದರೆಂದು ಕಾಣುತ್ತದೆ.

** ಕತ್ತರಿಸಿದ ಮೂಗಿಗೆ ಬದಲಾಗಿ ಬೇರೊಂದು ಮೂಗನ್ನು ಸೇರಿಸುವುದರ ಬಗ್ಗೆ ಸುಶ್ರುತ ಸಂಹಿತೆಯೂ ತಿಳಿಸುತ್ತದೆ.

'ಯಾವುದಾದರೂ ಒಂದು ಮರದ ಎಲೆಯನ್ನು ಕತ್ತರಿಸಿದ ಮೂಗಿನ ಅಳತೆಯಲ್ಲಿ ತೆಗೆದುಕೊಂಡು ಅದನ್ನು ಮೂಗು ಕತ್ತರಿಸಿದವನ ಕೆನ್ನೆಯ ಮೇಲಿಟ್ಟು, ಮಾಂಸದ ಸಮೇತ ಆ ಭಾಗದ ಚರ್ಮವನ್ನು ತೆಗೆಯಬೇಕು. ಕತ್ತರಿಸಲ್ಪಟ್ಟ ಮೂಗನ್ನು ಶುಚಿಗೊಳಿಸಿ, ಅದರ ಮೇಲೆ ಕತ್ತರಿಸಿ ತೆಗೆದ ಕೆನ್ನೆಯ ಚರ್ಮವನ್ನು ಜೋಡಿಸಬೇಕು. ಸರಿಯಾಗಿ ಹೊಂದಿಸಿ ಕೂರಿಸಿದ ಮೇಲೆ ಸರಾಗವಾಗಿ ಉಸಿರಾಡಲು ಅನುಕೂಲವಾಗುವಂತೆ ಎರಡು ಕಡ್ಡಿಗಳನ್ನು ಆ ಚರ್ಮದ ಕೆಳಭಾಗದಲ್ಲಿ ಇಟ್ಟು ರಂಧ್ರ ಮಾಡಬೇಕು. ನಂತರ ಕೆಂಪು  ಚಂದನ, ಅತಿಮಧುರ, ರಸಾಂಜನ ಇವುಗಳ ಪುಡಿಯನ್ನು ಅದರ ಮೇಲೆ ಉದುರಿಸಿ, ಬಿಳಿಯ ಹತ್ತಿಯಿಂದ ಮುಚ್ಚಿ, ಎಳ್ಳೆಣ್ಣೆಯಿಂದ ಆ ಭಾಗವನ್ನು ಪದೇಪದೇ ನೆನೆಸುತ್ತಿರಬೇಕು. ಕತ್ತರಿಸಿದ ಮೂಗು ಅಂಟಿಕೊಂಡು ಆರಿದ ಮೇಲೆ ಕೆನ್ನೆಯೊಂದಿಗೆ ಬಿಟ್ಟಿರುವ ಹೆಚ್ಚಿನ ಭಾಗವನ್ನು ಕತ್ತರಿಸಿ ತೆಗೆಯಬೇಕು. ಗಾಯ ಮಾಗಿದ ನಂತರ ಮೂಗಿನ ಬದಿಗಳಲ್ಲಿ ಹೆಚ್ಚುವರಿಯಾಗಿ ಅಂಟಿಕೊಂಡಿರುವ ಮಾಂಸವನ್ನು ಕತ್ತರಿಸಿ ತೆಗೆಯಬೇಕು ಅಥವಾ ಕಡಿಮೆ ಇದ್ದರೆ ಅದನ್ನು ಬೆಳೆಸಲು ತಕ್ಕ ಚಿಕಿತ್ಸೆ ಮಾಡಿ ಸಮಗೊಳಿಸಬೇಕು.' ಇದು ಈಗೀನ ಪ್ಲಾಸ್ಟಿಕ್ ಸರ್ಜರಿ ಎನ್ನುವ ಶಸ್ತ್ರಚಿಕಿತ್ಸೆಗೆ ಪೂರಕವಾಗಿರುವುದನ್ನು ನೋಡಬಹುದು. ಈತ ಕೆನ್ನೆಯಿಂದ ಚರ್ಮ ತೆಗೆದು ಅಂಟಿಸುವುದನ್ನು ತಿಳಿಸಿದರೆ, ಮನೂಚಿ ಮೂಗಿನ ಮೇಲ್ಭಾಗದ ಚರ್ಮ ತೆಗೆದು ಅಂಟಿಸುತ್ತಿದ್ದುದನ್ನು ತಿಳಿಸುತ್ತಾನೆ.

## ಆಕರ ಗ್ರಂಥಗಳು


೧. **ಅಪ್ರತಿಮವೀರಚರಿತೆ** – ತಿರುಮಲಾರ್ಯ

೨. **ಚಿಕ್ಕದೇವರಾಜ ವಂಶಾವಳಿ** – ತಿರುಮಲಾರ್ಯ

೩. **ಚಿಕ್ಕದೇವರಾಜ ವಿಜಯ** – ತಿರುಮಲಾರ್ಯ

೩. **ಕಂಠೀರವ ನರಸರಾಜ ವಿಜಯ** –ಗೋವಿಂದವೈದ್ಯ

೪. **ಕೆಳದಿ ನೃಪವಿಜಯ** – ಲಿಂಗಣ್ಣಕವಿ

೫. **ಬಸವಣ್ಣನವರ ವಚನಗಳು**

೬ **ಅಕ್ಕಮಹಾದೇವಿಯ ವಚನಗಳು**

೭. **ದೇವರ ದಾಸಿಮಯ್ಯನ ವಚನಗಳು**

೮. **ಅಂಬಿಗರ ಚೌಡಯ್ಯನ ವಚನಗಳು**

೯. **ಶಿವಶರಣೆಯರ ವಚನಗಳು.**

ಪ್ರೊ. ಶಕುಂತಲಾ ಸಿಂಧೂರ*

# ಬಸವಣ್ಣನವರ ವಚನಗಳಲ್ಲಿ ಸಸ್ಯಸಂಪತ್ತಿನ ಚಿತ್ರ

ಕನ್ನಡ ಕಾವ್ಯ ಪರಂಪರೆಯ ಆರಂಭಿಕ ಕಾಲದಿಂದಲೂ ಪ್ರಕೃತಿ ನಮ್ಮ ಕವಿಗಳ ಗಮನ ಸೆಳೆದಿದೆ. ಮಹಾಕಾವ್ಯದ ಹದಿನೆಂಟು ವಿಧದ ವರ್ಣನೆಯಲ್ಲಿ ಕವಿಸಮಯ, ಸ್ವಾನುಭವ, ಅಗಾಧ ಕಲ್ಪನೆಗಳನ್ನು ಬೇರ್ಪಡಿಸುವುದೇ ಕಷ್ಟಕರವಾಗಿದೆ. ಆದರೆ ವಚನ ಸಾಹಿತ್ಯದ ವೈಶಿಷ್ಟ್ಯ ಇಲ್ಲಿಯೂ ಎದ್ದು ಕಾಣುತ್ತದೆ. ವಚನಗಳು ಅನುಭಾವಿಯ ಚಾರಿತ್ರಿಕ ದರ್ಶನ, ಕವಿಯ ಪ್ರತಿಭೆಗಳ ಅಪೂರ್ವ ಸಂಯೋಜನೆಯಿಂದ ತಮ್ಮದೇ ಆದ ರೀತಿಯಲ್ಲಿ ಅಂದಿನ ಪರಿಸರದ ಸ್ಥಿತಿ-ಗತಿಗಳನ್ನು ಅಭಿವ್ಯಕ್ತಗೊಳಿಸುತ್ತವೆ. ವಚನಕಾರರನ್ನು ಪ್ರಕೃತಿಯೂ ಎಂಟು ಶತಮಾನಗಳ ಹಿಂದೆಯೂ ಆಕರ್ಷಿಸಿದ್ದ ಚಿತ್ರಣ ಕಾಣುತ್ತದೆ.

ಬಸನಣ್ಣನವರ ವಚನಗಳಲ್ಲಿ ಹೆಚ್ಚಿನ ಪಾಲು ಪಂಚಭೂತ, ಗಿಡಮರ, ಪ್ರಾಣಿ ಪಕ್ಷಿ, ನದಿ ಸಾಗರಗಳ ಉಲ್ಲೇಖದಿಂದ ಕೂಡಿರುತ್ತವೆ. ಉದಾ:

* ವಟಬೀಜ ವಟವೃಕ್ಷ ಕೋಟೆಯು ನುಂಗಿಪ್ಪಂತೆ.
* ತರುಗಳ ಮುರಿದು ಗಗನಕ್ಕೀಡಾಡುವ ಅನಿಲ ರೂಪೋ ನಿರೂಪೋ?
* ವನವೆಲ್ಲಾ ಕಲ್ಪತರು, ಗಿಡವೆಲ್ಲಾ ಮರುಜೇವಣೆ
* ಮರವಿದ್ದು ಫಲವೇನು ನೆಳಲಿಲ್ಲದನ್ನಕ್ಕ?
* ಮರನೊಳಗಣ ಪತ್ರೆ ಫಲಂಗಳು ಮರಕಾಲವಶದಲ್ಲಿ ತೋರುವಂತೆ,
* ಬೆಳೆವ ಭೂಮಿಯಲ್ಲೊಂದು ಪ್ರಳಯದ ಕಸಹುಟ್ಟಿ
* ಪುಷ್ಪಕ್ಕೆ ಗಂಧ ಒಲಿವಲ್ಲಿ ಫಲಕ್ಕೆ ರಸ ತುಂಬುವಲ್ಲಿ ತರಳೆಗೆ ವಿಷಯ ತೋರುವಲ್ಲಿ.

ಇಲ್ಲಿಯ ಪ್ರಕೃತಿಯ ವಸ್ತುಗಳು ವಚನಕಾರರ ಗ್ರಹಿಕೆ ಜ್ಞಾನಗಳನ್ನು ತಿಳಿಸಬಲ್ಲವು. ವಚನಕಾರರು ನಾಡು-ಕಾಡುಗಳ ಅಂತರಂಗವನ್ನು ಬಲ್ಲವರು. ಹೀಗಾಗಿ ಕಾಡು, ಕಾಡಿನ ಜೀವ ಜಗತ್ತು ಅವರನ್ನು ಪ್ರಭಾವಿಸಿದೆ.

ಭಕ್ತಿ ಭಂಡಾರಿ ಬಸವಣ್ಣನವರ ವಚನಗಳಲ್ಲಿ ಪ್ರಕೃತಿ ಪ್ರಿಯತೆ ಹಾಗೂ ಸಸ್ಯ ಸಂಪತ್ತು ವಿಪುಲವಾಗಿ ಬಳಕೆಯಾಗಿದೆ. ಪ್ರಕೃತಿ ಸೌಂದರ್ಯ ಮತ್ತು ಪರಿಸರ ಪ್ರಜ್ಞೆ ನಿತ್ಯ ನೂತನವಾಗಿದೆ. ಅವರು ಉಪಯೋಗಿಸಿರುವ ಒಂದೊಂದು ಉಪಮಾನವೂ ಸಾರ್ವಕಾಲಿಕ ಸತ್ಯವಾಗಿದೆ. ತೋಟ ಶೃಂಗಾರ ಒಳಗೆ ಗೋಣಿಸೊಪ್ಪು ಎನ್ನುವಂತೆ. "ಎನ್ನ ಚಿತ್ತವು ಅತ್ತಿಯ ಹಣ್ಣು ನೋಡಯ್ಯ. ವಿಚಾರಿಸಿದೊಡೇನೊ ಹುರುಳಿಲ್ಲವಯ್ಯಾ ಪ್ರಪಂಚಿನ ಡಂಬಿನಲ್ಲಿ ಎನ್ನನೊಂದು ರೂಹು ಮಾಡಿ ನೀವಿರಿಸಿದಿರಿ ಕೂಡಲಸಂಗಮ ದೇವಾ" ಅತ್ತಿಯ ಹಣ್ಣು ನೋಡಲು ಕೆಂಪಗೆ ದುಂಡಗೆ ಸುಂದರವಾಗಿರುತ್ತದೆ. ಒಳಗೆ ಸಾಕಷ್ಟು ಹುಳಗಳಿರುತ್ತವೆ. ಅದರಂತೆ ನಾವು ಮೇಲ್ನೋಟಕ್ಕೆ ಸುಂದರವಾಗಿ ಕಂಡರೂ ಒಳಗೆ ತಿರುಳಿಲ್ಲ. ಪೊಳ್ಳುತನದ ಮತ್ತು ಗುಣಹೀನನಾದ ಅಂತಹವನನ್ನು ಕರುಣೆಯಿಂದ ಸಂಗಮ ದೇವಾ ನೀನು ಉದ್ಧರಿಸು ಎಂದು ಬೇಡಿದ್ದಾರೆ. ಬೇಡಿದ್ದೆಲ್ಲವೂ ಸಿಗುವುದಾದರೆ, ಆಸೆಗೆ ಕೊನೆ ಎಲ್ಲಿ? ಈಶ ಬಂದರೂ ಆಸೆಯನ್ನು ದೂರ ಮಾಡಲು ಸಾಧ್ಯವಿಲ್ಲ. ಕೈಗೆ ಎಟುಕದ್ದನ್ನು ಬಯಸಿ ಬಾಯಿ ಬಾಯಿ ಬಿಡುವ ಮಾನವನಿಗೆ ನೊಂದದ್ದೇ ಫಲ. ಪಾಲಿಗೆ ಬಂದದ್ದನ್ನು ಪಂಚಾಮೃತ ಎಂದು ಸ್ವೀಕರಿಸುವುದು ಅನಿವಾರ್ಯ. ಅತಿಯಾಸೆ ಗತಿಗೇಡಿಗೆ ಮೂಲ. ಅಣ್ಣನವರು ಮಾನವನ ಅನ್ಯಥಾ ವ್ಯಥೆಯನ್ನು ವರ್ಣಿಸಿದ್ದಾರೆ. ಉದಾ: 'ದ್ರಾಕ್ಷಿ ಹಣ್ಣಿಗೆ ನರಿ ನೆಗೆದು ದೊರಕದಿದ್ದಾಗ ಅದು ಹುಳಿ' ಎನ್ನುವಂತೆ 'ತಾಳೆಮರ' ಉದ್ದವಾಗಿದ್ದು ಆದು ಮಾನವನಿಗೆ ನಿಲುಕದು. ತಾಳೆಮರಕ್ಕೆ ನೀಡಿದ ಕೈ ನಿಷ್ಫಲವಾಗುವಂತೆ ಲಭ್ಯವಾಗದ ಆಸೆಗೆ ಕೈ ಹಾಕಬಾರದು ಎಂದು ಸೂಚಿಸಿದ್ದಾರೆ. ಇಲ್ಲಿ ತಾಳೆಯ ಮರದ ಉದ್ದವನ್ನು ಗಮನಿಸಿ ಗೋಣೆತ್ತಿ ನೋಡಿರೆ ನೋವಲ್ಲದೆ ಫಲವಿಲ್ಲ ಎಂದು ಅದರ ಗುಣಕ್ಕೆ ತಕ್ಕಂತೆ ಉಪಮಾನಿಸಿದ್ದಾರೆ.

ಬೆಳೆಯಂತೆಯೇ ಮಾನವನಿಗೂ ಕಸ ಮುತ್ತುತ್ತದೆ. ಕಸಕಿತ್ತು ಚೆನ್ನ ಮಾಡಿದಾಗ ಮಾತ್ರ ಬೆಲೆ ಬರುತ್ತದೆ.

* ಮುಖ್ಯಸ್ಥರು, ಕನ್ನಡ ವಿಭಾಗ, ಕೆಎಲ್ಇ ಸಂಸ್ಥೆಯ ಮಹಿಳಾ ಕಾಲೇಜು, ಗದಗ – ೫೮೨ ೧೦೧.

ಸಂಸಾರ ಹೇಯತೆಯನ್ನು ಕಸಕ್ಕೆ ಹೋಲಿಸಿದ್ದಾರೆ. ಮುನ್ನ ಮಾಡಿದ ಪಾಪವೆಂತು ಹೋಹುದೆಂದು ಚಿಂತಿಸಬೇಡ. ಕಹಿ ಸೋರೆಯ ಕಾಯ ತಂದು ವಿಭೂತಿಯ ತುಂಬಿದೊಡೆ ಸಿಹಿಯಾಗದೆ ? ಮೂರು ದಿವಸಕ್ಕೆ ಹಲವು ಕಾಲಕೊಂದ ಸೊನೆಗಾರನ ಕತ್ತಿಯಾದರೇನು, ಪರುಷ ಮುಟ್ಟಲಿಕ್ಕೆ ಹೊನ್ನಾಗದೆ? ಲಲಾಟದಲ್ಲಿ ವಿಭೂತಿ ಬರಲಿಕ್ಕೆ ಪಾಪ ಪಲ್ಲಟವಾಗದೆ ಕೂಡಲಸಂಗಮ ದೇವಾ? ಬಸವಣ್ಣನವರು ವಿಭೂತಿಯ ಮಹಿಮೆಯನ್ನು ತಿಳಿಸುವಾಗ ಸತ್ಯವಾದ ಸೋರೆಯನ್ನು ಉದಾಹರಿಸಿದ್ದಾರೆ. ಸೋರೆಯ ಕಹಿ ಸಹಜವಾದುದು. ಅದರ ಕಹಿಯನ್ನು ನಿವಾರಿಸಲು ವಿಭೂತಿ ತುಂಬಿದರೆ ಸಾಕು. ವಿಭೂತಿಯಲ್ಲಿನ ರಾಸಾಯನಿಕ ಗುಣ ಕಹಿ ಕಳೆದು ಸಿಹಿ ತುಂಬುತ್ತದೆ. ಹಾಗೆಯೇ ಭಸ್ಮಧಾರಣೆಯಿಂದ ಮಾನವಲ್ಲಿರುವ ಕಹಿ ಅಂದರೆ ಅವಗುಣಗಳು ತೊಲಗಿ ಸಿಹಿ ಅಂದರೆ ಸುಗುಣಗಳು ಸೇರಿಕೊಳ್ಳುತ್ತವೆ. ಆದ್ದರಿಂದ ಸರ್ವರೂ ವಿಭೂತಿಯನ್ನು ಧರಿಸಬೇಕು. ಶಿವನು ಕಾಮವನ್ನು ಸುಟ್ಟ ಗುರುತಿಗಾಗಿ ವಿಭೂತಿಯನ್ನು ಧರಿಸಿದನಂತೆ. ಇದು ಅರಿಷಡ್ವರ್ಗಗಳಾದ ಕಾಮ, ಕ್ರೋಧ, ಲೋಭ, ಮೋಹಗಳನ್ನು ದಹಿಸಿ ದಿಗ್ವಿಜಯಿಯಾಗಿರುವುದರ ಚಿಹ್ನೆ. ಭಸ್ಮಧಾರಣೆಯಿಂದ ಪರಮೇಶ್ವರನಂತೆ ಕಾಣುವುದರಿಂದ ಪಾಪಗಳು ಅಂಥವರನ್ನು ಸ್ಪರ್ಶಿಸುವುದಿಲ್ಲ. ಲಲಾಟದಲ್ಲಿ ವಿಭೂತಿ ಬರೆಯಲಿಕೆ ಪಾಪ ಪಲ್ಲಟವಾಗಿದೆ. ಎಂಬುದನ್ನು ತಿಳಿಸಿ ಶರಣರಿಗೆ ನೊಸಲ ವಿಭೂತಿಯೇ ಶೃಂಗಾರ, ವಿಭೂತಿಯಿಲ್ಲದವರ ಮುಖ ನೋಡಲಾಗದು. ವಿಭೂತಿ ರುದ್ರಾಕ್ಷಿಯಿದ್ದವರ ಲಿಂಗವೆಂಬೆ ಇಲ್ಲದವರ ಭವಿಯೆಂಬೆ; ವಿಭೂತಿಯ ಹೊಸದವರ ಎನಗೊಮ್ಮೆ ತೋರದಿರಯ್ಯ, ಎಂದು ಬಸವಣ್ಣನವರೇ ಅಪ್ಪಣೆ ಮಾಡಿದ್ದಾರೆ. ವಿಭೂತಿ ಸಸ್ಯವಷ್ಟೆ ಅಲ್ಲ ಮಾನವನ ಗುಣವನ್ನು ಪರಿವರ್ತಿಸುತ್ತದೆ.

ಸಂಸರ್ಗದ ಗುಣದಿಂದ ಕಳ್ಳ ಬಲ್ಲಿದನಾಗುತ್ತಾನೆ. ಒಳ್ಳೆಯವ ಸುಳ್ಳನಾಗುತ್ತಾನೆ. "ಈಚಲಮರದ ಕೆಳಗೆ ಮಜ್ಜಿಗೆ ಕುಡಿದಂತೆ" ಕನ್ನಡ ಗಾದೆಯ ಮಾತು. ವಸ್ತು ಒಳ್ಳೆಯದಾದರೂ ಪರಿಸರದ ಅವಗುಣವನ್ನು ತರುತ್ತದೆ. ತಾಳೆಯ ಮರದ ಕೆಳಗೆ ಒಂದು ಹಾಲು ಹರವಿಯಿರ್ದೊಡೆ ಅದ ಹಾಲ ಹರವಿಯೆನ್ನರು ಸುರೆಯ ಹರವಿಯೆಂಬರು. ಈ ಭಾವನಿಂದೆಯ ಮಾಣಿಸಾ ಕೂಡಲಸಂಗಮ ದೇವಾ ಹಾಲಿನಂತಹ ಅಮೃತ ವಸ್ತುವನ್ನು ಕುಡಿಯಲೂ ಉತ್ತಮ ಪರಿಸರ ಅತ್ಯವಶ್ಯ

ಕುಂಬಳಕಾಯಿಗೆ ಕಬ್ಬುನದ ಕಟ್ಟಿ ಕೊಟ್ಟರೆ ಕೊಳೆವುದಲ್ಲದೆ ಬಲುಹಾಗಬಲ್ಲದೆ. ಅಳಿಮನದವಂಗೆ ಶಿವದೀಕ್ಷೆಯ ಕೊಟ್ಟರೆ ಭಕ್ತಿ ಎಂತಹದೊ ಮುನ್ನಿನಂತೆ ಕೂಡಲಸಂಗಯ್ಯ ಮನಹೀನನ ಮೀಸಲ ಕಾಯ್ದಿರಿಸಿದಂತೆ ಎಂದು ಹೇಳಿದ್ದಾರೆ.

ದೀಕ್ಷೆ ಬಹು ಕಟ್ಟುನಿಟ್ಟಾದುದು. ದೀಕ್ಷೆ ಪಡೆದ ನಂತರ ಆಚಾರ, ವಿಚಾರ, ಪೂಜೆ, ಅನುಷ್ಠಾನ, ಜಪತಪಗಳು ಉಂಟು. ಲೋಕದ ಸಾಮಾನ್ಯ ಮಾನವನಿಗೆ ದೀಕ್ಷೆ ಕೊಟ್ಟರೇ ಅವನು ತನ್ನ ಮೂಲಗುಣ ಬಿಡದೆ ಮುಂದುವರಿಯುತ್ತಾನೆ. ಎಂಬುದಕ್ಕೆ ಸಸ್ಯದ ಉಪಮೆ ತುಂಬಾ ಮಾರ್ಮಿಕವಾಗಿದೆ.

"ಸಗಣಿಯ ಬೆನಕಂಗೆ ಸಂಪಗೆಯರಳಲ್ಲಿ ಪೂಜಿಸಿದರೆ ರಂಜನೆಯಲ್ಲದೆ ಅದರ ಗಂಜಳ ಬಿಡದಣ್ಣ, ಮಣ್ಣ ಪುತ್ಥಳಿಯ ಮಾಣದೆ ಜಲದಲ್ಲಿ ತೊಳೆದರೆ ನಿಚ್ಚನಿತ್ಯಕ್ಕೆ ಕೆಸರಹುದಲ್ಲದೆ ಅದರಚ್ಚುಗ ಬಿಡದಣ್ಣ. ಲೋಕದ ಮಾನವಂಗೆ ಶಿವದೀಕ್ಷೆಯ ಕೊಟ್ಟರೆ ಕೆಟ್ಟವನೇಕೆ ಸದ್ಭಕ್ತನಹನು ಕೂಡಲಸಂಗಮದೇವ"

ಹಾವುಮೆಕ್ಕೆಕಾಯಿ ಪರಮವಿಷ ತಿನ್ನಲುಬಾರದು. ಅಂತೇ ಎಲವದ ಮರ ಫಲವಾದರೂ ಉಪಯೋಗವಿಲ್ಲ ಅವಗುಣಿಗಳು ಪ್ರಯೋಜನಕಾರಿಗಳಲ್ಲ ಎಂದಿದ್ದಾರೆ. ಸುರತರುವ ಬಿಟ್ಟು ಎಲವದ ಮರಕ್ಕೆ ನೀರನೆರೆವಂತೆ. ಕಡಿದರೊ ಸುರತರುವ ಎಲವದ ಮಿಡಿಯ ಬಯಕೆಗೆ ಅನ್ನುವಂತಾಗುತ್ತದೆ.

ತಾಗಿ ಬಾಗಿ ನಡೆಯುವದು ಸಜ್ಜನರ ಲಕ್ಷಣ. ವಿನೀತತೆ ಸತ್ಪುರುಷರ ಗುಣ. ಬಸವಣ್ಣನವರು ಸದಾ ಮುಗಿದ ಕೈ ಬಾಗಿದ ತಲೆ ಮತ್ತು ತುಂಬಿದ ಹೃದಯದವರಾಗಿರುತ್ತಿದ್ದರು. ಹೃದಯ ತುಂಬಿ ಬಾಳಿ ಬದುಕಬೇಕು. ಎಳೆಯದರಲ್ಲಿ ನೆಟ್ಟಗಿದ್ದು ಬಲಿತು ಬಾಗಿ ಹಣ್ಣಾಗಿ ಕಳಿಯುವದು ಸಸ್ಯಗಳ ಗುಣ. ಹಾಗೆಯೇ ಮಾನವನು ಕೂಡ ಬಾಗಬೇಕು ಬಾಳಬೇಕು. ಲಿಂಗವ ಪೂಜಿಸಿದ ಬಳ್ಳಿಕ ಜಂಗಮಕ್ಕಂಜಲೇ ಬೇಕು. ಬೀಗಿ ಬೆಳೆದ ಗೊನೆಬಾಳೆಯಂತೆ ಬಾಗಿಕೊಂಡಿದ್ದಡೆ ಬೇಡಿದ ಪದವಿಯನೀವ ಕೂಡಲಸಂಗಮದೇವ. ಬೀಗಿ ಬೆಳೆದರೂ ಅನುಭವದಿಂದ ಬಾಗಬೇಕು. ಬಾಗದೆ ಬೀಗಿದರೆ ದೇವರು ಒಲಿಯಲಾರನು.

"ಬಿದಿರಲಂದಣವಕ್ಕು ಬಿದಿರೆ ಸತ್ತಿಗೆಯುಕ್ಕು ಬಿದಿರಲ್ಲಿ ಗುಡಿಯು ಗೂಡಾರವಕ್ಕು'; ಬಿದಿರಲ್ಲಿ ಸಕಲ ಸಂಪದವೆಲ್ಲವು ಬಿದಿರದವರ ಮೆಚ್ಚ ಕೂಡಲಸಂಗಮ ದೇವಾ" ಬಿದಿರು ನಾಡಿನ ಸಸ್ಯಸಂಪತ್ತಿಗೆ ಸಾಕ್ಷಿ. ಎಲ್ಲಾ ವ್ಯವಹಾರಗಳಿಗೂ ಬಿದಿರು ಬೇಕು. ಬಿದಿರಿನ ಗುಣ ಬಾಗುವದು ಹೇಗೆ ಬೇಕೋ ಹಾಗೆ ಬಾಗುವ ವಿಶೇಷ ಗುಣ ಇರುವುದರಿಂದ ಬಿದಿರನ್ನು ಕುರ್ಚಿ, ಮೇಜು, ಮಂಚ, ಮೊದಲಾದವುಗಳಿಗೆ ಉಪಯೋಗಿಸುವುದು ಸಹಜ. ತಾಗುವ ಮುನ್ನವೆ ಬಾಗುವ ತಲೆ ಲೇಸು. ತಾಗಿ ತಲೆಯೊಡೆದು ಕೆಲನಾದ ಬಳಿಕದರ ಭೋಗವೇನೆಂದ. ಆದ್ದರಿಂದ ಬಾಳೆಯಂತೆ ಬಾಗುವದೇ ಲೇಸಲ್ಲವೇ?

"ಬೆಲ್ಲವ ತಿಂದ ಕೋಡಗದಂತೆ ಸಿಹಿಯ ನೆನೆಯದಿರಾ ಮನವೇ, ಕಬ್ಬು ತಿಂದ ನರಿಯಂತೆ ಹಿಂದಕ್ಕೆಳಸದಿರಾ ಮನವೇ, ಗಗನವನಡರಿದ ಕಾಗೆಯಂತೆ ದೆಸೆ ದೆಸೆಗೆ ಹಂಬಲಿಸದಿರಾ ಮನವೇ, ಕೂಡಲಸಂಗಮನ ಶರಣರ ಕಂಡು ಲಿಂಗವೆಂದೇ ನಂಬು ಮನವೇ–ಸಿಹಿಯಾದ ಕಬ್ಬನ್ನು ತಿಂದ ನರಿ ಪದೇ ಪದೇ ಅದನ್ನೇ ನೆನೆಯುವಂತೆ ನೆನೆಯಬೇಡ. ಕಪಿ ಸಿಹಿಯನ್ನು ನೆನೆ. ಅದೇ ನಿಜವಾದ ಬದುಕು ಎನ್ನುತ್ತಾರೆ.

ಮಾನವ ಹೊಟ್ಟೆಪಾಡಿಗಾಗಿ ಅಕ್ಕಿಗೆ ಕಲ್ಲು ಸಕ್ಕರೆಗೆ ಕಜ್ಜಿಣದ ಚೂರು ತುಪ್ಪಕ್ಕೆ ಎಣ್ಣೆ ಬೆರೆಸುವ ಕಾಯಕ ಕೈಕೊಂಡಿದ್ದಾನೆ. ಎಳೆಯ ನೇರಿಲ ಹಣ್ಣಿಗೆ ಮಸಿ ಹಚ್ಚಿ ಕಪ್ಪು ಮಾಡಿ ಜಂಬುನೇರಿಲದಂತೆ ಮಾಡಿ ಮಾರಿ ಗೇಣುಹೊಟ್ಟೆ ತುಂಬಿಕೊಳ್ಳುವ ಕಾಯಕ ಜೀವಿಗಳನ್ನು ಬಸವಣ್ಣನವರು ಖಂಡಿಸಿದ್ದಾರೆ.

ರಸವಿಲ್ಲದ ವಸ್ತುವನ್ನು ತಿಂದರೆ ತಿಂದ ಶಕ್ತಿ ವ್ಯರ್ಥವೇ ಹೊರತು ಅದರಿಂದ ಉಪಯೋಗವಿಲ್ಲ. ಅದು ಹೇಗೆಂದರೆ 'ಬಿದಿರೆಲೆಯ ಮೆಲಿದರೆ ಮೆಲಿದಂತಲ್ಲದೆ ರಸವನು ಹಡೆಯಲು ಬಾರದು, ಮಳಲ ಹೊಸೆದರೆ ಹೊಸೆದಂತಲ್ಲದೆ ಸರವಿಯ ಹಡೆಯಲುಬಾರದು, ನೀರ ಕಡೆದರೆ ಕಡೆದಂತಲ್ಲದೆ ಬೆಣ್ಣೆಯ ಹಡೆಯಲುಬಾರದು, ನಮ್ಮ ಕೂಡಲಸಂಗಮ ದೇವನಲ್ಲದೆ ಅನ್ಯ ದೈವಕ್ಕೆರಗಿದರೆ ಹೊಳ್ಳುಕುಟ್ಟಿ ಕೈಹೊಟ್ಟೆಯಾದಂತಾಯಿತಯ್ಯಾ. ಗಾಳಿ ಗುದ್ದಿ ಮೈನೋಯಿಸಿಕೊಂಡಂತೆ, ಹೊಟ್ಟು ಕುಟ್ಟ ಕೈ ಬೊಬ್ಬೆ ಬರಿಸಿಕೊಂಡಂತೆ ದೇಹಕ್ಕೆ ಶ್ರಮ, ಕಬ್ಬನ್ನು ತಿಂದು ರಸ ಕುಡಿಯಲೇಬೇಕೇ ಹೊರತು ಬಿದಿರೆಲೆಯಂತಹ ರಸಹೀನ ವಸ್ತುವನ್ನಲ್ಲ. ಕರುಣಾಮಯಿಯಾದ ಕಬ್ಬಿನನಂತಹ ಸಂಗಮನಾಥನಿಗೆ ಶರಣಾಗಬೇಕಲ್ಲದೆ ಬಿದಿರಿನಂತಹ ಅನ್ಯದೇವರಿಗಲ್ಲ.

ಹೀಗೆ ಭೂಮಿಯಲ್ಲಿ ಬೆಳೆಯುವ ಎಲ್ಲ ಸಸ್ಯಗಳೂ ಒಂದಲ್ಲ ಒಂದು ರೀತಿಯಲ್ಲಿ ಮಾನವನಿಗೆ ಉಪಕಾರಿ. ಗಿಡಗಳಂತೂ ಮಾನವನಿಗೆ ಜೀವ ಜೀವಾಳವಾಗಿರುತ್ತವೆ. ಉದಾ: ಸಗಣಿಯವನ ಜೊತೆ ಸರಸಕ್ಕಿಂತ ಗಂಧದವನೊಡನೆ ಗುದ್ದಾಟ ಲೇಸು ಎಂಬ ಗಾದೆ ಮಾತಿನಂತೆ ಸಹವಾಸ ಮಾಡಬೇಕಾದರೆ ಸಜ್ಜನರನ್ನು ಆಯ್ಕೆ ಮಾಡಿಕೊಳ್ಳುವುದೇ ಲೇಸು. ಇಲ್ಲವಾದರೆ ಕಲ್ಲಿಗೆ ತಲೆ ಹಾಯ್ದಂತೆಯೇ ಸರಿ.

ಮರದಲ್ಲಿರುವ ಬೆಂಕಿ ಹಾಲಿನಲ್ಲಿರುವ ತುಪ್ಪ ಎಳ್ಳಿನಲ್ಲಿರುವ ಎಣ್ಣೆಯನ್ನು ಅನೇಕ ಕ್ರಿಯೆಗಳಿಂದ ಪಡೆಯಬಹುದು. ಹಾಗೆ ದೇಹದಲ್ಲಿ ನೆಲೆಸಿರುವ ಶಿವನನ್ನು ಅನೇಕ ವಿಧದ ಭಕ್ತಿ, ಅರ್ಚನೆ ಇತ್ಯಾದಿ ರೂಪಗಳಿಂದ ಪಡೆಯಬಹುದು ಎಂದಿದ್ದಾರೆ.

ತಾನು ಹುಟ್ಟಿದ ಗುಣದಿಂದಲೇ ಬೆಳೆಯಬೇಕು ಅವಕಾಶ ಬಂದಾಗ ಬಣ್ಣ ಬದಲಾಯಿಸುವ ಗೋಸುಂಬೆಯಂತೆ ಆಗಬಾರದು. ತನ್ನ ಸದ್ಗುಣದಿಂದ ಜನಸೇವೆ ಸಮಾಜ ಸೇವೆ ಮಾಡಬೇಕು. ಮರುಗದ ಗಿಡದಂತೆ ಹುಟ್ಟುವಾಗಲೇ ಪರಿಮಳ ಎರವಿನ ಬಣ್ಣದೊರೆಗೆಡಸಿದ ಪರಿಯ ನೋಡಾ, ಹರನ ಪ್ರೇರಣೆಯೊಳಗೆ ಹಿರಿದೊಂದು ವಾರಿಧಿ, ವಾರಿಧಿಯೊಳ ಗಣ ಕಮಲಬಾಡಿ ಕಮಲದೊಳಗೆ ಸುಳಿವ ಭ್ರಮರನ ಪಕ್ಕ ಮುರಿದು ಉರುಳಿದಡೆ ನಿರಂಜನವಾಯಿತ್ತು. 'ಮುರುಗ' ವನ್ನು ಎತ್ತ ಮುರಿದರೂ ಸುಗಂಧ ಬಿಡದು. ಗಂಧದ ಕಡ್ಡಿ ತಾನೇ ಉರಿದು ಸುವಾಸನೆ ಕೊಡುವಂತೆ ಎತ್ತ ಮುಟ್ಟಿದರೂ ತನ್ನ ಗುಣ ಬಿಡಬಾರದು ಎಂದಿದ್ದಾರೆ ಅಣ್ಣನವರು.

ಬಸವಣ್ಣನವರ ಪ್ರಕೃತಿ ವಿಜ್ಞಾನಕ್ಕೆ ಸಾಕ್ಷಿಯೆಂದರೆ ಅವರು ಲಿಂಗಪೂಜೆಗೆ ತರುತ್ತಿದ್ದ ಹೂ ಪತ್ರೆಯನ್ನು ನೋಡಿದರೆ ಅವರ ಸಸ್ಯಸಂಪತ್ತು ಅರಿವಾಗುತ್ತದೆ. ಕನ್ನಡನಾಡಿನ ವನಸಂಪತ್ತಿನ ಶ್ರೇಷ್ಠ ವಸ್ತುಗಳೆಂದರೆ ಶ್ರೀಗಂಧ, ಮಲ್ಲಿಗೆ, ಸಂಪಿಗೆ, ತೇಗ, ಮಾವು, ಬೇವು, ತೆಂಗು, ಅಡಕೆ, ಹಲಸು, ನಿಂಬೆ, ಕಿತ್ತಲೆ, ಸೀಬೆ, ಪ್ರಮುಖವಾಗಿರುತ್ತದೆ. ಕರ್ನಾಟಕದ ವನಸಂಪತ್ತು ವಿಶ್ವವಿಖ್ಯಾತವಾದುದು. ಬಸವಣ್ಣನವರು ಕವಿ ಹೃದಯದಿಂದ ನಿರೀಕ್ಷಿಸಿ ಸನ್ನಿವೇಶಕ್ಕನುಗುಣವಾಗಿ ತಮ್ಮ ವಚನಗಳಲ್ಲಿ ಹೃದಯಸ್ಪರ್ಶಿಯಾಗಿ ಬೆಳೆಸಿರುತ್ತಾರೆ. ಸಸ್ಯಗಳ ಸಹಜ ಗುಣವನ್ನು ಮಾನವನ ನಡೆನುಡಿಗೆ ಅನ್ವಯಿಸಿ, ಅವುಗಳಿಗೆ ಒಂದು ವಿಶಿಷ್ಟ ಶಕ್ತಿಯ ಕಳೆ ತುಂಬಿ ಸಸ್ಯಸಂಪತ್ತು ರಸವತ್ತಾಗುವಂತೆ ಚಿತ್ರಿಸಿರುವುದು ರೋಚಕವಾಗಿದೆ.



ಡಾ. ಕೆ. ರವೀಂದ್ರನಾಥ*

# ಬಸವಪುರಾಣ ಪ್ರವಚನ-ಮೆರವಣಿಗೆ ವ್ಯಾಜ್ಯ

ಪ್ರಾಚೀನ ಕಾಲದಲ್ಲಿ 'ಕೈಫಿಯತ್ತು' ಹೆಸರಿನ 'ದೂರುಗಳನ್ನು' ಕೊಡುವ ವಾಡಿಕೆಯಿತ್ತು. ಇಂತಹ ದೂರುಗಳಲ್ಲಿ ಲೌಖಿಕ ಬದುಕಿನ ಆಸ್ತಿಪಾಸ್ತಿ, ಅಧಿಕಾರ, ಅಂತಸ್ತುಗಳ ಹಕ್ಕು ಪ್ರತಿಪಾದನೆಗೆ ಸಂಬಂಧಿಸಿದವುಗಳೇ ಹೆಚ್ಚು ಸಿಗುತ್ತವೆ. ವಿಶೇಷವಾಗಿ ಬೌದ್ಧಿಕ ಬದುಕಿನ ನಿರ್ಣಯಗಳಿಗೂ ವ್ಯಾಜ್ಯ ಹೂಡಿದ ಅಪರೂಪದ ದಾಖಲೆಗಳು ದೊರೆಯುತ್ತವೆ. ಯಾಕೆಂದರೆ ಸಾಮಾಜಿಕ, ಧಾರ್ಮಿಕ, ಸಾಮುದಾಯಿಕ, ಸಂಘರ್ಷ, ಮತ್ತು ವೈಯಕ್ತಿಕ ಪ್ರಮಾದ ಪ್ರತಿಷ್ಠೆಗಳು ಬದುಕಿನ ಭಾಗವಾಗಿ ಪರಿಣಮಿಸುತ್ತವೆ. ಇಂತಹ ಪ್ರಮಾದಗಳಿಗೆ ನೀಡಿದ ತೀರ್ಮಾನಗಳನ್ನು ರಾಜಪ್ರಭುತ್ವ ಕಾಲದಲ್ಲಿ 'ಜಯಪತ್ರ'ಗಳೆಂದು ಕರೆಯುತ್ತಿದ್ದರು. ಜಾತಿ-ಪಂಥಗಳ ನಡುವೆ ಶ್ರೇಷ್ಠತೆಯ ಪ್ರಶ್ನೆ ಉದ್ಭವಿಸಿದಾಗ ಸವಾಲು, ಪ್ರತಿಸವಾಲು ನಡೆದು ಗೆದ್ದವರಿಗೆ ಜಯಪತ್ರಗಳನ್ನು ಕೊಡಲಾಗುತಿತ್ತು. ಇದಕ್ಕೆ ನಿದರ್ಶನವಾಗಿ ಅಬ್ಬಲೂರಿನ ಏಕಾಂತರಾಮಯ್ಯನ ಹಾಗೂ ಶ್ರವಣಬೆಳ್ಗೊಳದ ಬುಕ್ಕರಾಯನ ಶಾಸನಗಳು ನಮ್ಮ ಕಣ್ಮುಂದೆ ಇವೆ. ಈ ಹೊತ್ತಿನ ಪ್ರಜಾಪ್ರಭುತ್ವದಲ್ಲಿ ನ್ಯಾಯಾಲಯಗಳು 'ಜಡ್ಜಮೆಂಟ್ ಕಾಪಿ' (Judgement Copy) ನೀಡುತ್ತವೆ. ವಿಶೇಷವೆಂದರೆ ವಿಚಾರಣೆ ನಡೆಯುವ ಪ್ರಕ್ರಿಯೆ ಇದೆಯಲ್ಲ; ಅದು ನಮ್ಮ ಸಮಾಜಶಾಸ್ತ್ರ, ಕುಟುಂಬ ಶಾಸ್ತ್ರ ಹಾಗೂ ಸಮುದಾಯ ರೀತಿನೀತಿಗಳ ಅಧ್ಯಯನಕ್ಕೆ ಉತ್ತಮ ಆಕರಗಳಾಗಬಲ್ಲವು. ಈ ದೃಷ್ಟಿಯಿಂದ 'ಬಸವ ಪುರಾಣದ ಪ್ರವಚನ ಮೆರವಣಿಗೆ ವ್ಯಾಜ್ಯ' ಕುರಿತು ನಡೆದ ನ್ಯಾಯಾಲಯ ವಿಚಾರಣೆಯ ಪ್ರಕಟಿತ ಕೃತಿ ಕುತೂಹಲಕಾರಿಯಾಗಿದೆ.

ಕಂಪ್ಲಿ ಕೋಟೆಯಲ್ಲಿರುವಂಥ ಮಹಂತಸ್ವಾಮಿ ಮಠದಲ್ಲಿ ಬಸವಪುರಾಣ ಪ್ರವಚನವನ್ನು ಸಾಲಿಸಿದ್ಧಲಿಂಗಯ್ಯನವರು ವಾಚಿಸುತ್ತಾರೆ. ಅದರ ವ್ಯಾಖ್ಯಾನವನ್ನು ದಾವಣಗೇರಿಯ ತಿ.ಎಂ. ಚಂದ್ರಶೇಖರಯ್ಯ ಮಾಡುತ್ತಾರೆ. ಲಿಂಗಾಯತರ ಜೊತೆಗೆ ನೇಕಾರರು, ವಿಶ್ವಾಬ್ರಾರ್ಯರು ಇತರೆ ಸಮುದಾಯದವರು ಇರುತ್ತಾರೆ. ಇದನ್ನು ವಿರೋಧಿಸಿದ ಕಂಪ್ಲಿ ಪಟ್ಟಣದ ಬ್ರಾಹ್ಮಣರು ದಿನಾಂಕ ೧೧-೧೨-೧೯೧೫ರಲ್ಲಿ ಬಳ್ಳಾರಿ ಡಿಸ್ಟ್ರಿಕ್ಟ್ ಮೇಜಸ್ಟ್ರೇಟರಿಗೆ "ಗ್ರಂಥಪಠಣ ಹಾಗೂ ವ್ಯಾಖ್ಯಾನ ಮಾಡುವವರು ಬ್ರಾಹ್ಮಣರನ್ನು ತುಚ್ಛೀಕರಿಸಿ ಸ್ವಂತ ಕಲ್ಪನೆಯಿಂದ ವ್ಯಾಖ್ಯಾನಿಸುತ್ತಾರೆ. ಇದರಿಂದ ಪ್ರಜಾಕ್ಷೇಮಕ್ಕೆ ಅಪಾಯ ಉಂಟಾಗುತ್ತದೆಂದು ಕೋರಿ ಕ್ರಿಮಿನಲ್ ಪ್ರೊಸಿಜರ್ ೧೧೪ನೇ ಸೆಕ್ಷನ್ ಪ್ರಕಾರ ಹುಕುಂ ಜಾರಿ ಮಾಡಬೇಕೆಂದು ಸಹಿಮಾಡಿ ದಾವೆ ಸಲ್ಲಿಸುತ್ತಾರೆ. ಮುಖ್ಯವಾಗಿ ಬ್ರಾಹ್ಮಣ ವಿರೋಧಿ ಉಲ್ಲೇಖಗಳನ್ನು ಬಸವಪುರಾಣದ ಸಂಧಿ ೫೪ ಪದ್ಯ ೩೯-೪೯,ಸಂಧಿ ೫೫ ಪದ್ಯ ೫೪ರಿಂದ ಎತ್ತಿ ಹೇಳಿ ಈ ಭಾಗಗಳನ್ನು ನಿಷೇಧಿಸಬೇಕೆಂದು ಮನವಿಯಲ್ಲಿ ಕೋರಿಕೊಳ್ಳುತ್ತಾರೆ. ಪ್ರಮುಖ ಅರ್ಜಿದಾರರಾಗಿ ಜಿಲ್ಲಾ ಬೋರ್ಡಿನ ಸದಸ್ಯ ಶ್ರೀನಿವಾಸರಾವ್ ಹಾಗೂ ವೆಂಕೋಬ ರಾವ್ ಇರುತ್ತಾರೆ.

೧೧-೧೨-೧೯೧೫ರಲ್ಲಿ ದೂರು ನೀಡಿದ ಈ ವ್ಯಕ್ತಿಗಳು ಮುಂದೆ ೮-೪-೧೯೧೯ರಂದು ತಾವು ನೀಡಿದ ದೂರನ್ನು ವಾಪಾಸು ಪಡೆದುಕೊಳ್ಳುತ್ತಾರೆ. ಆ ಕುರಿತು ಅವರು ಬರೆದುಕೊಟ್ಟ ಒಡಂಬಡಿಕೆ ಕೃತಿಯಲ್ಲಿ ಈ ರೀತಿಯಿದೆ.

"೧೯೧೬ ನೇ ಇಸ್ವಿ ಎಪ್ರೀಲ್ ೮ನೇ ತೇದಿಗೆ ಸರಿಯಾದ ನಳಸಂವತ್ಸರ ಚೈತ್ರ ಶುದ್ಧ ೬ ಯಲ್ಲು ಕಂಪ್ಲಿಯಲ್ಲಿ ಇರುವ ಸರ್ವ ಲಿಂಗಾಯತರ ಮತಸ್ಥರಲ್ಲಿ ಮುಖ್ಯರಾದ ಅಚ್ಚಪ್ಪ ಸೋಮಪ್ಪ, ಹುಚ್ಚಲಿಂಗಪ್ಪ, ಕಲ್ಲುಡಿಗುಂಡಪ್ಪ ಇವರಿಗೆ ರಾಮಸಾಗರದ ಶ್ರೀನಿವಾಸರಾಯನು ಬರಕೊಟ್ಟ ಒಡಂಬಡಿಕೆ ಏನುಯೆಂದರೆ ಈ ಒಳಗಾಗಿ ನಾವು ಸಬ್‌ಕಲೆಕ್ಟರ್ ಕೋರ್ಟಿನಲ್ಲಿ ಬಸವಪುರಾಣ ಮೆರವಣಿಗೆ ಮಾಡಕೂಡದೆಂದು ದಾಖಲು ಮಾಡಿದ ಅರ್ಜಿ ಪ್ರಕಾರ ಈ ದಿನ ನಾನು ಸದರಿ ಪುರಾಣ ಕಂಪ್ಲಿ ಒಳಗೆ ಮೆರವಣಿಗೆ ಮಾಡಲು ಒಪ್ಪಿಕೊಂಡಿರುತ್ತೇನೆ. ಈ ವಿಷಯದಲ್ಲಿ ನನ್ನದು, ನನ್ನ ಮತಸ್ಥರ ತಕರಾರು ಇರೋದಿಲ್ಲ. ಹೀಗೆಂದು ಬರಕೊಟ್ಟ ವಡಂಬಡಿಕೆ ದಸ್ತಾವೇಜು ಸಹಿ."

* ಮುಖ್ಯಸ್ಥರು, ಅಂತಾರಾಷ್ಟ್ರೀಯ ವಚನ ಅಧ್ಯಯನ ಕೇಂದ್ರ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ಕೂಡಲಸಂಗಮ-೫೮೭ ೧೧೫.

ಈ ಒಡಂಬಡಿಕೆ ಪತ್ರವನ್ನು ವಿರೋಧಿಸಿದ ಇತರೆ ಬ್ರಾಹ್ಮಣ ಸಮುದಾಯದವರು ಮ॥ರಾ॥ ಶ್ರೀ ವೆಂಕಟರಾಯರು ಮತ್ತು ಆರ್. ಕೃಷ್ಣಚಾರ್ಯ ವಕೀಲರನ್ನು ನೇಮಿಸಿ ಒಡಂಬಡಿಕೆಯನ್ನು ಪ್ರಶ್ನಿಸುತ್ತಾರೆ. ಇತ್ತ ಲಿಂಗಾಯತ ಪರ ವಕೀಲರಾಗಿ ಮ॥ರಾ॥ ಸಿದ್ಧರಾಮಪ್ಪ ಪಾವಟೆ ಅವರು ಕೇಸನ್ನು ಹಿಡಿಯುತ್ತಾರೆ. ಆ ಸಂದರ್ಭದಲ್ಲಿ ಡಿ.ಜಿ.ಬ್ಲೆಸ್ ಅವರು ಹೊಸಪೇಟೆ ಡಿವಿಜನ್ ಜಾಯಿಂಟ್ ಮೇಜಿಸ್ಟ್ರೇಟ್ ಕೋರ್ಟಿನ ದೊರೆ (Judge)ಯಾಗಿರುತ್ತಾರೆ.

ಹೀಗೆ ದೂರನ್ನು ವಾಪಸು ತೆಗೆದುಕೊಳ್ಳಲಿಕ್ಕೆ ಕಾರಣವೇನಿರಬಹುದೆಂಬುದರ ಕಡೆಗೆ ಇಲ್ಲಿ ನಡೆದ ಸಾಕ್ಷಿದಾರರ ವಿಚಾರಣೆಯಿಂದ ಹೊರಹೊಮ್ಮಿದ ಹೇಳಿಕೆಗಳು ವ್ಯಕ್ತಿ ಹಾಗೂ ಸಮುದಾಯ ಜೀವನದ ಸಂಕೀರ್ಣತೆಯ ಬಗ್ಗೆ ಗಮನ ಸೆಳೆಯುತ್ತವೆ. ಹೀಗಾಗಿ ನ್ಯಾಯಾಲಯಕ್ಕೆ ಒಡಂಬಡಿಕೆ ಪತ್ರ ಬರೆದು ಕೊಟ್ಟು ಶ್ರೀನಿವಾಸರಾವ್ "ನನ್ನ ಮಗನಿಗೂ, ನನ್ನ ಅಣ್ಣನ ಹೆಂಡತಿಗೂ ಜರುಗಿದ ವಿವಾದ ವಿಷಯದಲ್ಲಿ ಅಜ್ಜಪ್ಪಸೋಮಪ್ಪ ಪಂಚಾಯಿತದಾರನಾಗಿದ್ದಾನೆ. ನನ್ನ ಕುಟುಂಬದ ಯಾವದಾಸ್ತಿ ಯೀ ವ್ಯಾಜ್ಯದಲ್ಲಿ ಬಿದ್ದಿದೆ. ನನ್ನ ಅಣ್ಣನ ಹೆಂಡತಿಗೆ ೭೫೦೦ ರೂಪಾಯಿಗಳು ಕೊಡುವಂತೆ ಅಜ್ಜಪ್ಪ ಸೋಮಪ್ಪ ಪಂಚಾಯಿತಿ ನಿರ್ಧರಿಸಿದನು. ತೀರ್ಪು ಇನ್ನು ಸಂಪೂರ್ಣವಾಗಿ ಬರದುಯಿಲ್ಲ. ತೀರ್ಪು ನಕಲು ಮಾತ್ರ ಬರದು ಅದೆ. ತೀರ್ಪು ನಕಲು ೧೯೧೫ ಸಂ॥ ರದಲ್ಲಿ ಬರದದೆ. ಮೆರವಣಿಗೆಯ ಅಕ್ಷೇಪಣೆಯ ಅರ್ಜಿಯನ್ನು ವಾಪಾಸ್ಸು ತೆಗೆದುಕೊಂಡರೆ ನನಗೆ ೭೫೦೦ ರೂಪಾಯಿಗಳನ್ನು ಸಾಲ ಕೊಡುತ್ತೇನೆಂದು ಅಜ್ಜಪ್ಪಸೋಮಪ್ಪ ಮಾತು ಕೊಟ್ಟೆಯಿಲ್ಲ." ಎನ್ನವಲ್ಲಿ ಯಾವುದೇ ಪ್ರಲೋಭನೆಗೆ ಇಲ್ಲವೇ ಕೌಟಂಬಿಕ ತೊಂದರೆಗಳಗೆ ಸಿಲುಕಿ ದೂರನ್ನು ವಾಪಸು ಪಡೆಯುತ್ತಿರಬೇಕೆಂಬ ಸಂಶಯ ಇತರೆ ಬ್ರಾಹ್ಮಣರಿಗೆ ಬಂದಂತಿದೆ. ಅದರ ಸ್ಪಷ್ಟಿಕರಣವನ್ನು ಶ್ರೀ ಶ್ರೀನಿವಾಸರಾವ್ ತನ್ನ ಹೇಳಿಕೆಯಲ್ಲಿ ನೀಡುತ್ತಿದ್ದಾನೆ.

ಸಾಕ್ಷಿದಾರರಾಗಿ ಹೇಳಿಕೆ ನೀಡಿದ ಅನೇಕ ಜನರ ಮಾತುಗಳು ಅಂದಿನ ಸಾಮಾಜಿಕ ಹಾಗೂ ಕೌಟಂಬಿಕ ಚಿತ್ರಣವನ್ನು ಬಿಚ್ಚಿಡುತ್ತವೆ.

೧. ಪ್ರತಿಷ್ಠಿತ ಹಾಗೂ ಬಹುಸಂಖ್ಯಾತ ಜನರ ಭಾವನೆಗಳಿಗೆ ವಿರೋಧವಾದಂತಹ ಪ್ರಕ್ರಿಯೆಗಳು ಆ ಕಾಲಕ್ಕೆ ಮಾನ್ಯವಾಗುತ್ತಿದ್ದಿಲ್ಲವೆಂಬುದಕ್ಕೆ ಈ ಘಟನೆ ತೋರ್ಪಡಿಕಾಗಿದೆ.

೨. ಇಲ್ಲಿಯ ಸಾಕ್ಷಿದಾರರು ತಾವು ವೃತ್ತಿ, ಸರಕಾರಕ್ಕೆ ನೀಡುವ ಆದಾಯತೆರಿಗೆ ಇತ್ಯಾದಿ ಸಂಗತಿಗಳನ್ನು ತಿಳಿಸುತ್ತಾರೆ. ಉದಾ:ಲಕ್ಷ್ಮಣಸಿಂಗ್ ಎಂಬಾತ ಪೋಲಿಸ್ ವೃತ್ತಿಯಿಂದ ನಿವೃತ್ತನಾಗಿ ದನಗಳ ವ್ಯಾಪಾರ ಮಾಡುವುದು, ಮುನ್ಸಿಪಲ್ ಕೌನ್ಸಿಲ್, ವ್ಯಾಪಾರ ಮತ್ತು ಆನರರಿ ಮೇಜಿಸ್ಟ್ರೇಟು ಆಗಿದ್ದ ಗುತ್ತಿ ಗಡ್ಡಪ್ಪ ಸರಕಾರಕ್ಕೆ ೧೦೦ ಹಣ ಹಾಗೂ ಆದಾಯತೆರಿಗೆ ೧೩೫ ರೂಪಾಯಿ ನೀಡುತ್ತಿರುವುದಾಗಿ ತಿಳಿಸುತ್ತಾನೆ.

೩. ಪುರಾಣ ವ್ಯಾಖ್ಯಾನ ದಾವಣಗೇರೆ ತೆಲಿಗಿಮಠದ ಚಂದ್ರಶೇಖರಶಾಸ್ತ್ರಿಗಳು ಲಿಂಗಾಯತ ಭಕ್ತರಲ್ಲಿ ಅನೇಕರು ಬ್ರಾಹ್ಮಣರಾಗಿದ್ದರು ಎಂದು ತಿಳಿಸುತ್ತಾ, ಬಸವನೇ ಸ್ಮಾರ್ತ ಬ್ರಾಹ್ಮಣನಾಗಿ ಹುಟ್ಟಿದನೆಂದು ತಿಳಿಸಿ, ಉದ್ಭಟಯ್ಯ ಕೆಂಬಾವಿಭೋಗಯ್ಯ, ಹರಿಹರ, ರಾಘವಾಂಕ ಮುಂತಾದವರ ಹೆಸರುಗಳನ್ನು ಉಲ್ಲೇಖಿಸುತ್ತಾರೆ. ಪ್ರಸ್ತುತ ದಿನಗಳಲ್ಲಿ ಬಸವಣ್ಣನವರ ಜಾತಿ ಮೂಲದ ವಿಶ್ಲೇಷಣೆ ಮಾಡುವ ವಿದ್ವಾಂಸರು ಇಂಥ ಹೇಳಿಕೆಗಳನ್ನು ಗಮನದಲ್ಲಿರಿಸಿಕೊಂಡು ತಮ್ಮ ನಿರ್ಣಯಗಳನ್ನು, ಅಭಿಪ್ರಾಯಗಳನ್ನು ಪ್ರಕಟಿಸುವುದು ಸೂಕ್ತವೆಂಬ ಸೂಚನೆಗೆ ಇದು ಮಹತ್ವದ ದಾಖಲೆಯೆನಿಸಿದೆ.

೪. ೨೧ನೇ ಸಾಕ್ಷಿದಾರನಾದ ಎಮ್ಮಿಗನೂರು ಹನುಮಂತರೆಡ್ಡಿ ಎಂಬಾತ ತನ್ನ ಮತ ರೆಡ್ಡಿಯೆಂದು ಹೇಳುತ್ತಾ 'ನಾನು ಲಿಂಗವಂತ ಮತಸ್ಥನಲ್ಲ' ಎಂದು ತಿಳಿಸುತ್ತಾನೆ.

ಒಟ್ಟಿನಲ್ಲಿ ಇಂತಹ ದಾಖಲೆಗಳು ಆ ಕಾಲದ ವೃತ್ತಿ ಸಾಮಾಜಿಕ ನಿರ್ಬಂಧ, ಆರ್ಥಿಕ ಮೌಲ್ಯಗಳ ಬಗ್ಗೆ ಬೆಳಕು ಚೆಲ್ಲುತ್ತವೆ. ವಿಶೇಷವಾಗಿ ಇಂಥ ವ್ಯಾಜ್ಯಗಳಿಂದ ಪ್ರಾಚೀನ "ಒಕ್ಕೂಟ ಗ್ರಾಮಜೀವನ" ಒಡೆದುಹೋಗಿ, "ರಾಷ್ಟ್ರಿಯ ಚಳುವಳಿಯ" ಬಲಹೀನತೆಗೂ ಕಾರಣವಾಗಿರಬಹು ದೆಂಬುದನ್ನು ಗಂಭೀರವಾಗಿ ಪರಿಗಣಿಸಬಹುದಾಗಿದೆ. ಈ ಹೊತ್ತಿನ ಕಾನೂನು ಶಿಕ್ಷಣತಜ್ಞರು ಇಂತಹ ದಾಖಲೆಗಳನ್ನು ಸರ್ವೇಕ್ಷಣೆ-ಸಂಗ್ರಹ ಮಾಡಿ ಪ್ರಾಚೀನ ಕರ್ನಾಟಕದ "ವ್ಯಾಜ್ಯಗಳ ವೈವಿಧ್ಯತೆ ಹಾಗೂ ತೀರ್ಪುಗಳು" ಕುರಿತು ಪ್ರತ್ಯೇಕ ಅಧ್ಯಯನ ಮಾಡಲು ಇಲ್ಲಿ ಅವಕಾಶವಿದೆ. ಆ ನಿಟ್ಟಿನಲ್ಲಿ ವಿದ್ವಾಂಸರು ಗಮನಹರಿಸಬೇಕಾಗಿದೆ.



ಡಾ. ವೈ. ಉಮಾನಾಥ ಶೆಣೈ*

# ಶೃಂಗಾರಾರ್ಣವಚಂದ್ರಿಕಾ : ಕರ್ನಾಟಕ ಇತಿಹಾಸಕ್ಕೊಂದು ಆಕರ ಗ್ರಂಥ

"ಶೃಂಗಾರಾರ್ಣವಚಂದ್ರಿಕಾ" ಎಂಬುದು ಅಲಂಕಾರ ಶಾಸ್ತ್ರಕ್ಕೆ ಸಂಬಂಧಿಸಿದ ಒಂದು ಸಂಸ್ಕೃತ ಗ್ರಂಥ. ಇದನ್ನು ಅಲಂಕಾರ ಸಂಗ್ರಹವೆಂಬ ಹೆಸರಿನಿಂದಲೂ ಕರೆಯಲಾಗಿದೆ. ಇದು ಕರಾವಳಿಯ ಕರ್ನಾಟಕದ ಬಂಗವಾಡಿಯ ಅರಮನೆಯಲ್ಲಿ ಪ್ರಾಯಶಃ ೧೨೬೪ರ ಸುಮಾರಿಗೆ ರಚಿಸಲ್ಪಟ್ಟಿತ್ತು. ಇದು ಡಾ॥ ವಾಮನ ಮಹಾದೇವ ಕುಲಕರ್ಣಿ ಎಂಬವರಿಂದ ಸಂಪಾದಿಸಲ್ಪಟ್ಟು ಮಾಣಿಕ್‌ಚಂದ್ ಜೈನ ಗ್ರಂಥಮಾಲೆಯವರಿಂದ ಮುದ್ರಣಗೊಂಡು ಭಾರತೀಯ ಜ್ಞಾನಪೀಠದವರಿಂದ ೧೯೬೯ರಲ್ಲಿ ಪ್ರಕಾಶನಗೊಂಡಿತ್ತು. ಆದರೆ ಇದರ ಆಮೂಲಾಗ್ರ ಅಧ್ಯಯನ ಕನ್ನಡಿಗರಿಂದ ನಡೆಯದಿರುವ ಕಾರಣ ಇದರ ಐತಿಹಾಸಿಕ ಮಹತ್ವವೂ ತಿಳಿದಿರಲಿಲ್ಲ. ಇದರಲ್ಲಿ ಅಡಕವಾಗಿರುವ ಐತಿಹಾಸಿಕ ವಿವರಗಳೂ ಬೆಳಕಿಗೆ ಬಂದಿರಲಿಲ್ಲ. ಆದುದರಿಂದ ಈಗ ಈ ಗ್ರಂಥದಲ್ಲಿ ಐತಿಹಾಸಿಕ ವಿವರಗಳನ್ನು ವಿಮರ್ಶಾತ್ಮಕ ದೃಷ್ಟಿಯಿಂದ ಪರಿಚಯಿಸಲು ಪ್ರಯತ್ನಿಸಲಾಗುವುದು.

ಈ ಗ್ರಂಥವನ್ನು ರಚಿಸಿದವನು ಪರಮ ಜಿನೇಂದ್ರವದನ ಚಂದಿರ ವಿನಿರ್ಗತಸ್ಯಾದ್ವಾದಚಂದ್ರಿಕಾ ಚಕೋರ ವಿಜಯಕೀರ್ತಿ[೧] ಮುನೀಂದ್ರನ ಶಿಷ್ಯನಾದ ವಿಜಯವರ್ಣಿ ಎಂಬವನು. ಆದುದರಿಂದ ಆತ ನನ್ನ ಮನಸ್ಸೆಂಬ ಶುದ್ಧನೀರಿನ ಸರೋವರದಲ್ಲಿ ನನ್ನ ಗುರು ವಿಜಯಪಾದ ಕಮಲಗಳು ಸ್ಥಿರವಾಗಿ ನಿಲ್ಲಲಿ[೨] ಎಂದು ಹೇಳಿಕೊಂಡಿದ್ದಾನೆ. ಗುಣವರ್ಮಾದಿ ಕರ್ನಾಟಕ ಕವಿಗಳು ಮೆರೆದಂತಹ ಸುಖಸಾಮ್ರಾಜ್ಯವಾಗಿರುವ ಕರ್ನಾಟಕದಲ್ಲಿ ಪಶ್ಚಿಮ ಸಮುದ್ರದವರಿಗೆ ವಿಸ್ತರಿಸಲ್ಪಟ್ಟಿರುವ ಪುಣ್ಯಭೂಮಿಯಲ್ಲಿ ಬಂಗವಾಡಿ ಎಂಬ ಪಟ್ಟಣವಿದೆ. ನಾನಾ ತಟಾಕ ನದಿ ವನಗಳಿಂದ ಸುಂದರವಾಗಿರುವ. ಆ ನಗರದಲ್ಲಿ ಭರತ ಚಕ್ರವರ್ತಿ ಸಮನಾದ ಶ್ರೀ ವೀರನರಸಿಂಹ ಬಂಗ ಎಂಬ ಅರಸನು ಆಳುತ್ತಿದ್ದನು. ಆತನ ವಂಶದಲ್ಲಿ ಉದಯಿಸಿದ ಕಾಮರಾಯ ಬಂಗನೆಂಬ ಮಹಾರಾಜನು ಕಾವ್ಯ ಗೋಷ್ಠಿಯಲ್ಲಿ ಸಭಾಜನ ವಿಭೂಷಿತನು. ಒಂದು ದಿನ ಆ ಗೋಷ್ಠಿಯಲ್ಲಿ ರಾಜನು ಕಾವ್ಯದ ಲಕ್ಷಣಗಳೇನು, ವರ್ಣ ಶುದ್ಧಿಯು ಹೇಗಾಗುತ್ತದೆ. ರಸಭಾವಗಳು ಹೇಗೆ ಉಂಟಾಗುತ್ತವೆ[೩] ಎಂಬಿತ್ಯಾದಿ ಕೆಲವು ಪ್ರಶ್ನೆಗಳಿಗೆ ಉತ್ತರವನ್ನು ಕೊಡಲು ಹೊರಟ ವಿಜಯವರ್ಣಿಯು ಮೊದಲಿಗೆ, ಆ ಅರಸನ ವಿವರಗಳನ್ನೂ ಆತನ ವಂಶದ ಚರಿತ್ರೆಯನ್ನೂ ಹೇಳುತ್ತಾನೆ.

ಪಶ್ಚಿಮ ಸಮುದ್ರದವರೆಗೆ ಹರಡಿದ ಆತನ ರಾಜ್ಯವನ್ನು ಕದಂಬ ವಂಶದ ಅನೇಕ ಅರಸರು ಆಳಿದ್ದರು. ಆ ವಂಶದಲ್ಲಿ ಹುಟ್ಟಿದ ಕಾಮರಾಯನು ನೃಪತಿ ಕುಂಜರ, ಅರಸರ ಮಧ್ಯದಲ್ಲಿ ಆನೆಯಂತಿದ್ದವನು. ಈ ವಿವರಣೆಯೂ ಇತಿಹಾಸಕಾರರ ವಿಸ್ತೃತ ವಿಮರ್ಶೆಗೆ ಒಳಗಾಗಬೇಕಾಗಿದೆ. ಈತ ಮಾಡಿರುವ ಪೂರ್ವಕವಿ ಗುಣವರ್ಮನ ಉಲ್ಲೇಖ ಇನ್ನಷ್ಟು ಅಧ್ಯಯನಕ್ಕೆ ದಾರಿ ಮಾಡಿಕೊಟ್ಟಿದೆ. ಇಲ್ಲಿ ಪ್ರಸ್ತಾಪಿಸಿಲ್ಪಟ್ಟ 'ಶ್ರೀ ಪಾಂಡ್ಯ ಬಂಗಸ್ಯ ಭಾಗಿನೇಯೋ ಗುಣಾರ್ಣವ, ವಿಟ್ಠಲಾಂಬಾ ಮಹಾದೇವಿ ಪುತ್ರೋ ರಾಜೇಂದ್ರ ಪೂಜಿತ:'[೫] ಇತ್ಯಾದಿ ವಿವರಗಳನ್ನು ಕರಾವಳೀ ಕರ್ನಾಟಕದಲ್ಲಿ ಬಳಕೆಯಲ್ಲಿದ್ದ ಅಳಿಯ ಸಂತಾನ ಪದ್ಧತಿಯನ್ನು ತಿಳಿಸುತ್ತವೆ. ಈತ ಮಾಡಿರುವ ಉಲ್ಲೇಖಗಳು ಬಂಗ ಅರಸಮನೆತನದ ಕುರಿತಾಗಿ ಇನ್ನಷ್ಟು ಅಧ್ಯಯನ ಮಾಡಲು ಎಡೆಮಾಡಿಕೊಟ್ಟಿದೆ. ಇಲ್ಲಿ ಕೊಟ್ಟಿರುವ ಈ ವಂಶದ ಅರಸರ ಹೆಸರುಗಳು ನಿಶ್ಚಯವಾಗಿಯು ಇತಿಹಾಸಕ್ಕೆ ದೊಡ್ಡ ಕೊಡುಗೆ. ಈತನು ಹೇಳುವಂತೆ ವೀರ ನರಸಿಂಹಬಂಗ ಮೊದಲು ಅರಸ. ಆತನ ಅನುಜ ಪಾಂಡ್ಯ ಬಂಗರಾಜ. ಆತನ ಅನಂತರ ರಾಜಶೇಖರನೆಂಬವನು ರಾಜ್ಯ ವಾಳುತ್ತಾನೆ. ಪಾಂಡ್ಯಬಂಗನ ಸಹೋದರಿ ವಿಟ್ಠಲಾಂಬಾ. ಆಕೆಯ ಪುತ್ರ ಕಾಮರಾಯ ಬಂಗ. ಈತನೇ ಕವಿಯ ಆಶ್ರಯದಾತ. ವೀರ ನರಸಿಂಹನ ಅನಂತರದ ಪಾಂಡ್ಯರಾಜ ಜೈನನಾಗುತ್ತಾನೆ. ಚಂದ್ರಶೇಖರ ಶೈವ ಧರ್ಮವನ್ನು ಅನುಸರಿಸುತ್ತಾನೆ. ವಿಟ್ಠಲಾಂಬೆ ವೈಷ್ಣವ ಮತವನ್ನು ಅನುಸರಿಸುತ್ತಾಳೆ. ಇವು ಅಮೂಲ್ಯವಾದ ಮಾಹಿತಿಗಳು.

*ಮುಖ್ಯಸ್ಥ, ಇತಿಹಾಸ ವಿಭಾಗ, ಶ್ರೀ ಧರ್ಮಸ್ಥಳ ಮಂಜುನಾಥೇಶ್ವರ ಕಾಲೇಜು, ಉಜಿರೆ – ೫೭೪ ೨೪೦.

| ४ शृङ्गारार्णवचन्द्रिका | १ वर्णगणफलनिर्णय |
|---|---|
| गुणवर्माग्निकर्णाटकवीनां सूक्तिसंचयः ।<br>वाणीविलासं देयात्ते रसिकानन्ददायिनम् ॥ ७ ॥<br>राजनातिमहाशास्त्रनिरूपितफलप्रदाम् ।<br>नानातटाककासारनदीवनविभूषिताम् ॥ ८ ॥<br>संवे ( ब ) पुरसंकाशनानानगरभासुराम् ।<br>जिनराजमहाधर्मश्रावकोत्तमराजिताम् ॥ ९ ॥<br>अष्टादशमहाश्रेणीभूषितां श्रीमतीतराम् ।<br>पश्चिमार्णवपर्यन्तां दशां सर्वसुखप्रदाम् ॥ १० ॥<br>श्रीमद्भूरत्नराजेन्द्रनामचक्रधरोपमः ।<br>श्रीवीरनरसिंहाख्यबङ्गभू(मी)श्वरो महान् ॥ ११ ॥<br>पालयत्यमलां बङ्गवाटीपुरसमन्विताम् ।<br>कादम्बवंशजनितानेकभूमीशपालिताम् ॥ १२ ॥<br>तस्यानुजो गुणाधीशः पाण्ड्यबङ्गनरेश्वरः ।<br>सत्येन रामचन्द्रोऽभूद्धर्मेण भरतेश्वरः ॥ १३ ॥<br>रत्नत्रयमहाधर्मरक्षको राजशेखरः ।<br>महाकविजन 'स्तूयमानसत्कीर्ति(ना)यकः ॥ १४ ॥<br>सोऽपि श्रीपाण्ड्यबङ्गोऽयं जिनपादाब्जषट्पदः ।<br>अनुक्रमागतां भूमिं पूर्वोक्तां रक्षति स्म वै ॥ १५ ॥<br>तस्य श्रीपाण्ड्यबङ्गस्य भागिनेयो गुणार्णवः ।<br>विट्ठलाम्बामहादेवीपुत्रो राजेन्द्रपूजितः ॥ १६ ॥<br>श्रीकामिराजबङ्गोऽभून्नाम्ना नृपतिकुञ्जरः ।<br>वैरिसदोहगन्धेभघटा(क)ण्ठीरवोपमः ॥ १७ ॥ | क्रमागतामिमां भूमिं पश्चिमाम्भोधिभूषिताम् ।<br>श्रीकामिराजबङ्गेन्द्रः पालयत्यमलश्रियम् ॥ १८ ॥<br>स राजा काव्यगोष्ठीषु सभाजनविभूषितः ।<br>अपृच्छदेकदा नाम्ना कविताशाश्वभासुरम् ॥ १९ ॥<br>काव्यस्य लक्षणं किं वा वर्णशुद्धिश्च (का)दृशी ।<br>रसभावौ कथंभूतौ नेतृभेदाश्च कीदृशाः ॥ २० ॥<br>कीदृश्यलङ्कृती रीतिः कीदृग्वृत्तिश्च कीदृशी ।<br>कीदृग्दोषो गुणः कीदृक् पृच्छति स्मेति मां नृपः ॥ २१ ॥<br>इत्थं नृपप्रार्थितेन मयालंकारसंग्रहः ।<br>क्रियते नूतनो नाम्ना शृङ्गारार्णवचन्द्रिका ॥ २२ ॥<br>अदोषः सगुणो रीतिवृत्तिशय्यारसान्वितः ।<br>सालंकारः सपाकश्च शब्दार्थरचनोत्तमः ॥ २३ ॥<br>समुद्रनगरीशैलसुधाकरदिवाकर– ।<br>(षड्)ऋतुजलकेलीनां वर्णनाभिरलङ्कृतः ॥ २४ ॥<br>संभोगविप्रलम्भाभ्यां मधुपानैः कुमारकैः ( ? रतोत्सवैः ) ।<br>विवाहैर्मन्त्रदूताभ्यां प्रयत्नेन विभूषितः ॥ २५ ॥<br>संग्रामनायकैश्वर्यवर्णनाभिर्विभूषितः ।<br>मनोज्ञभावसंदर्भः कवीश्वरनिरूपितः ॥ २६ ॥<br>धर्मार्थकाममोक्षाख्यसत्फलानां प्रकाशकः ।<br>महानु ........................ ... ........................ ........ ॥ २७ ॥<br>विधुप्रबन्धसंज्ञोऽयं बुधैः काव्यं प्रकीर्तितम् ।<br>रसभावज्ञलोकानां प्रमोदाय प्रकल्पते ॥ २८ ॥ |

ಕರಾವಳೀ ಕರ್ನಾಟಕವನ್ನಾಳಿದ ಹಲವು ಅರಸು ಮನೆತನಗಳ ಪೈಕಿ ಈ ವಂಶವೂ ಒಂದು. ಗಣಪತಿರಾವ್ ಐಗಳ್‌ರವರ ಬಂಗರಸರ ಕೈಫಿಯತ್ತನ್ನು ಆಧರಿಸಿ ಕ್ರಿ.ಶ. ೧೧೫೭ರಿಂದ ಬಂಗರ ಚರಿತ್ರೆಯು ವೀರನರಸಿಂಹ ಬಂಗನಿಂದ ಪ್ರಾರಂಭವಾಯಿತೆಂದು ತಿಳಿಸಿದ್ದಾರೆ. ಕ್ರಿ.ಶ. ೧೪೬೦ರ ಸುಮಾರಿಗೆ ಕಾಮಿರಾಜಬಂಗನ ಆಸ್ಥಾನ ಕವಿಯಾದ ವಿಜಯವರ್ಣಿಯು ಈ 'ಶೃಂಗಾರಾರ್ಣವ ಚಂದ್ರಿಕಾ' ಹೆಸರಿನ ಶಾಸ್ತ್ರಗ್ರಂಥವೊಂದನ್ನು ರಚಿಸಿರುವುದನ್ನು ಉಲ್ಲೇಖಿಸಿದ್ದಾರೆ. ಅದರಲ್ಲಿ ಬಂಗ ವಂಶಾವಳಿಯನ್ನು ನೀಡುತ್ತಾ ಬಂಗರು ಕದಂಬ ಕುಲದವರೆಂದು ಹೇಳುತ್ತಾರೆ. ಕದಂಬರ ಯಾವ ಶಾಖೆಯೆಂಬುದನ್ನು ಕವಿ ಸ್ಪಷ್ಟಪಡಿಸುವುದಿಲ್ಲ. ಕ್ರಿ.ಶ. ೧೫೦೪ರ ತಾಮ್ರ ಶಾಸನ ಒಂದರಲ್ಲಿ ಲಕ್ಷ್ಮಪ್ಪರಸ ಬಂಗನು ತಾನು ಕದಂಬ ಕುಲದವನೆಂದು ಸ್ಪಷ್ಟವಾಗಿ ಹೇಳಿಕೊಂಡಿದ್ದಾನೆ.

ಡಾ॥ ಕೆ.ವಿ. ರಮೇಶ್‌ರವರ ತುಳುನಾಡಿನ ಇತಿಹಾಸವನ್ನು ಅವಲೋಕಿಸಿದಾಗ, ಕ್ರಿ.ಶ. ೧೩೩೩ರಿಂದ ೧೩೪೨ರ ವರೆಗಿನ ತುಳುವರ ಶಾಸನಗಳು ವೀರಬಲ್ಲಾಳನ ಹೆಸರಿನಿಂದಲೇ ಪ್ರಕಟವಾಗಿತ್ತಾದರೂ ದೊಡ್ಡ ಸಾಮ್ರಾಜ್ಯವೊಂದರ ಒಡೆಯನಾಗಿದ್ದ ಬಲ್ಲಾಳನು ತುಳುವರಲ್ಲೇ ನೆಲೆಸಿದ್ದಾನೆಂದಾಗುವುದಿಲ್ಲ ಎಂದಿದ್ದಾರೆ. ಬಾರಕೂರು ಚಿಕ್ಕಾಯಿತಾಯಿ ಜೀವಂತವಿದ್ದಾಗ ಬಲ್ಲಾಳನ ಪರವಾಗಿಯೂ, ಅವನು ಮರಣ ಹೊಂದಿದ ಮೇಲೆ ತಾನೇ ತಾನಾಗಿಯೂ ತುಳುನಾಡನ್ನು ಆಳುತ್ತಿದ್ದಳು. ಆಡಳಿತ ಕ್ಷೇತ್ರದಲ್ಲಿ ಅವಳಿಗೆ ಮಹಾ ಪ್ರಧಾನ ದಂಡನಾಯಕ ಮತ್ತು ಪ್ರಧಾನಿ ಅಜ್ಜಣ್ಣ ಸಾಹಣಿ ಇವರು ನೆರವಾಗಿ ನಿಂತಿದ್ದರೆಂದೂ. ತುಳುನಾಡಿನಲ್ಲಿ ಹೊಯ್ಸಳ ವರ್ಚಸ್ಸಿಗೆ ಧಕ್ಕೆಯುಂಟಾಗದಂತೆ ನೋಡಿಕೊಳ್ಳುವ ಸಲುವಾಗಿ ವೀರಬಲ್ಲಾಳನು ತನ್ನ ಸೇನೆಯ ತುಕಡಿಯೊಂದನ್ನು ಬಾರಕ ಕನ್ಯಾಪುರ (ಬಾರಕೂರು)ದಲ್ಲಿ ಇರಿಸಿದ್ದನು ಎಂದಿದ್ದಾರೆ. ಈ ಹೊಯ್ಸಳರ ಸಾಮಂತ ರಾಜ್ಯ ಬಂಗ ವಾಡಿಯ ಅರಸನಾಗಿದ್ದ ವೀರ ನರಸಿಂಹನ ತಂಗಿಯಾದ ವಿಠ್ಠಲದೇವಿಯ ಮಗ ಕಾಮರಾಯಬಂಗ ಎಂದು ರಮೇಶ್ ಸ್ಪಷ್ಟಪಡಿಸಿದ್ದಾರೆ. ಈ ಕಾಮರಾಯಬಂಗನನ್ನೇ ವಿಜಯವರ್ಣಿ 'ಗುಣಾರ್ಣವ ಮತ್ತು ರಾಜೇಂದ್ರಪೂಜಿತಾ' ಎಂಬುದಾಗಿ ತನ್ನ ಪ್ರಶಸ್ತಿಯಲ್ಲಿ ಹೊಗಳಿರುವುದು. ಆ ಸಂದರ್ಭದಲ್ಲೇ

**ತಸ್ಯ ಶ್ರೀ ಪಾಂಡ್ಯಬಂಗಸ್ಯ ಭಾಗಿನೇಯೋ ಗುಣಾರ್ಣವ।**
**ವಿಟ್ಠಲಾಂಬಾ ಮಹಾದೇವಿ ಪುತ್ರೋ ರಾಜೇಂದ್ರ ಪೂಜಿತಃ॥**

ಎಂದಿದ್ದಾನೆ. ನಮಗೆ ತಿಳಿದುಬರುವ ವಿಷಯವೆಂದರೆ ಕೇವಲ ಪಂಪ, ಪೊನ್ನ ಮೊದಲಾದವರಿಗೆ ಚಕ್ರವರ್ತಿಯು ಆಶ್ರಯ ನೀಡಿರುವಂತೆ ಈ ಸಾಮಂತರಸರು ಕೂಡಾ ತಮ್ಮ ಆಸ್ಥಾನದಲ್ಲಿ ಕವಿಗಳಿಗೆ ಆಶ್ರಯವನ್ನು ಕೊಟ್ಟಿದ್ದಾರೆ. ಅಂತಹವರಲ್ಲಿ ಕಾಮರಾಜನೂ ಒಬ್ಬ. ಕಾಮರಾಜನು ಕವಿಗಳಿಗೆ ಉತ್ತಮವಾದ ಪ್ರೋತ್ಸಾಹ ಕೊಟ್ಟಿದ್ದಾನೆಂದರೆ ತಪ್ಪಾಗಲಾರದು.

**ಕವಿಯ ಕಾಲ :** ವಿಜಯವರ್ಣಿಯ ಕಾಲದ ಕುರಿತಾಗಿ ನಿಶ್ಚಯಿಸುವಲ್ಲಿ ಮುಖ್ಯವಾಗಿ ಪ್ರತಾಪರುದ್ರಯಶೋಭೂಷಣದ ಶೃಂಗಾರಾರ್ಣವ (೧೪ನೇ ಶತಮಾನ) ಮತ್ತು ಅಮೃತಾನಂದಿ ರಚಿತ ಅಲಂಕಾರ ಸಂಗ್ರಹ (೧೩ನೇ ಶತಮಾನ) ವನ್ನು ಗಮನಿಸಬೇಕು. ಇವನ್ನು ತುಲನಾತ್ಮಕವಾಗಿ ಅಧ್ಯಯನ ಮಾಡಿದಾಗ, 'ಶೃಂಗಾರಾರ್ಣವ ಚಂದ್ರಿಕಾ'ದಲ್ಲಿರುವ ವಿಷಯ ಮತ್ತು ಪ್ರತಿಪಾದಿಸಿರುವ ಶೈಲಿ ರೀತಿಯು,

ಪ್ರತಾಪರುದ್ರ, ಯಶೋಭೂಷಣ ಮತ್ತು ಅಲಂಕಾರ ಸಂಗ್ರಹದ ಮೇಲೆ ಸಾಕಷ್ಟು ಪ್ರಭಾವ ಹೊಂದಿರುವುದನ್ನು ಕಾಣಬಹುದು.

ಅಲ್ಲದೆ ಕಾವ್ಯಮೀಮಾಂಸೆಯ ಲಕ್ಷಣವನ್ನೂ ಶೃಂಗಾರಾರ್ಣವ ಚಂದ್ರಿಕಾ ಹೊಂದಿದೆ. ಈ ಗ್ರಂಥವು ಸಂಸ್ಕೃತ ಭಾಷೆಯಲ್ಲಿರುವ ಕಾವ್ಯ ಲಕ್ಷಣ ಗ್ರಂಥಗಳನ್ನೇ ಅವಲಂಬಿಸಿದೆ. ರಸ, ಧ್ವನಿ, ಔಚಿತ್ಯಗಳು ಅದ್ಭುತವಾಗಿ ಮೂಡಿ ಬಂದಿವೆ. ಕರ್ನಾಟಕ ಕವಿಯಾದ ಎರಡನೇ ಗುಣಧರ್ಮ, ಭೋಜ, ಮಮ್ಮಟ, ದಂಡಿ, ಧನಂಜಯ ಮುಂತಾದವರ ಕೃತಿಗಳನ್ನು ಈತ ಅಧ್ಯಯನ ಮಾಡಿದ್ದನೆಂಬುದು ಕೃತಿಯ ಪರಿಶೀಲನೆಯಿಂದ ತಿಳಿದು ಬರುತ್ತದೆ.

**ಕೃತಿಯ ವಿಷಯ** : ವಿಜಯವರ್ಣಿಯ 'ಶೃಂಗಾರಾರ್ಣವ ಚಂದ್ರಿಕಾ' ಎಂಬ ಶಾಸ್ತ್ರ ಗ್ರಂಥವು ದೀರ್ಘವಾಗಿ, ಅನೇಕ ಕಾವ್ಯ ಲಕ್ಷಣಗಳನ್ನು ಹೊಂದಿದ್ದು, ೧೦ ಪರಿಚ್ಛೇದಗಳನ್ನು ಒಳಗೊಂಡಿದೆ. ಒಂದೊಂದು ಪರಿಚ್ಛೇದದಲ್ಲಿ ಕವಿ ಕಾವ್ಯ ಲಕ್ಷಣವನ್ನು ಸೂಕ್ಷ್ಮವಾಗಿ ವಿವರಿಸಿದ್ದಾನೆ.

**ವರ್ಣಗುಣ ಫಲ ನಿರ್ಣಯ** : ಇದು ಶೃಂಗಾರಾರ್ಣವ ಚಂದ್ರಿಕಾದ ಮೊದಲ ಪರಿಚ್ಛೇದವಾಗಿದ್ದು ಇದರಲ್ಲಿ ಪದ್ಯ, ಗದ್ಯ, ಮಿಶ್ರ ಎಂಬ ಕಾವ್ಯ ಪ್ರಭೇದಗಳನ್ನು ಹೇಳಿ ಕಾವ್ಯಾಲಂಕಾರದಲ್ಲಿ ಬಳಸುವ ಮೊದಲು ಅಕ್ಷರದಿಂದುಂಟಾಗುವ ಶುಭಾಶುಭ ಫಲವನ್ನು ವಿವರಿಸಿದ್ದಾನೆ. ಇದರಲ್ಲಿ ೬೩ ಶ್ಲೋಕಗಳಿವೆ.

**ಕಾವ್ಯಾಗತ ಶಬ್ದಾರ್ಥ ನಿರ್ಣಯ**: ಎರಡನೇ ಪರಿಚ್ಛೇದವಾದ ಇದರಲ್ಲಿ ಉಪಯೋಗಿಸಲ್ಪಡುವ ಪದಗಳ ಸಂಖ್ಯೆ ಹಾಗೂ ಗುಣ ಅರ್ಥ ಪ್ರತಿಪಾದನೆಯನ್ನು ಮುಂದೆ ಭೇದವನ್ನು ಕವಿ ವಿವರಿಸಿದ್ದಾನೆ.

**ಗೌಣಿ ವೃತ್ತಿರ್ಲಕ್ಷಣತೋ ಭಿನ್ನೇತಿ ಪ್ರಭಾಕರಾಃ ।**
**ಗೌಣಿ ವೃತ್ತಿರಪಿ ಲಕ್ಷಣ ಪ್ರಭೇದ ಏವ ॥**

ಕಾವ್ಯದ ಲಕ್ಷಣಗಳ ವ್ಯತ್ಯಾಸಗಳು, ಕಾವ್ಯದ ಗುಣ ಲಕ್ಷಣದ ಪ್ರಭೇದಗಳನ್ನು ಈ ಅಧ್ಯಾಯದಲ್ಲಿ ಸವಿಸ್ತಾರವಾಗಿ ವಿವರಿಸಿದ್ದಾನೆ. ಈ ಪರಿಚ್ಛೇದದಲ್ಲಿ ೪೨ ಶ್ಲೋಕಗಳಿವೆ.

**ರಸಭಾವ ನಿಶ್ಚಯ** : ಶಾಸ್ತ್ರಗ್ರಂಥದ ೩ನೇ ಪರಿಚ್ಛೇದದಲ್ಲಿ ಕವಿಯೂ ಭಾವದ ಸ್ವರೂಪವನ್ನು, ಅವುಗಳ ಭೇದವನ್ನು ವಿವರಿಸಿ, ರಸಗಳ ನಿರೂಪಣೆಯನ್ನು ಕೊಟ್ಟಿರುವನು. ಈತನ ಪ್ರಕಾರ ೯ ಸ್ಥಾಯೀ ಭಾವಗಳು, ೯ ರಸಗಳು, ೯ ವಿಭಾವ, ಅನುಭಾವಗಳು, ೩ ಸಾತ್ವಿಕ ಭಾವಗಳು, ೩೩ ಸಂಚಾರಿ ಭಾವಗಳು ಇವನ್ನು ಸವಿಸ್ತಾರವಾಗಿ ವಿವರಿಸಿದ್ದಾನೆ. ಶಾಂತರಸವನ್ನು ಈತ ಸೇರಿಸಿರುವುದು ಬಹುಮುಖ್ಯ ವಿಚಾರ.

**ಅತಃ ಕಾರಣತೋತ್ಮಾಭಿರುಚ್ಯತಿ ರಸ ಲಕ್ಷಣಮ್।**
**ಪೂರ್ವ ಶಾಸ್ತ್ರಾನುಪಾರೇಣ ಭಾವಭೇದ ವಿಶೇಷಿತಮ್॥**

ಎಂದು ಹೇಳಿದ್ದಾನೆ. ಈ ಅಧ್ಯಾಯದಲ್ಲಿ ೧೩೦ ಶ್ಲೋಕಗಳಿವೆ.

**ನಾಯಕ ಭೇದ ನಿಶ್ಚಯ** : ನಾಯಕನಿಗಿರಬೇಕಾದ ಜನಾನುರಾಗ, ದೃಢತೆ, ಮಾಧುರ್ಯ, ನವಯೌವನ, ದಕ್ಷತೆ, ಬುದ್ಧಿ, ಜ್ಞಾನ, ಇತ್ಯಾದಿ ಗುಣಗಳನ್ನು ವಿಮರ್ಶಿಸಲಾಗಿದೆ. ನಾಯಕನು ೪ ರೀತಿಯ ಲಕ್ಷಣಗಳನ್ನು ಹೊಂದಿರಬೇಕು. ಧೀರಉದಾತ್ತ, ಧೀರಲಲಿತ, ಧೀರಶಾಂತ, ಧೀರಅದ್ಭುತ. ಅದರಲ್ಲಿ ಪ್ರತಿಯೊಬ್ಬನ ಗುಣ, ಲಕ್ಷಣ ಭೇದಗಳನ್ನು ಕವಿ ವಿಮರ್ಶಿಸಿದ್ದಾನೆ. ಕರುಣ ರಸವನ್ನೂ ಪ್ರಸ್ತಾಪಿಸಿದ್ದಾನೆ.

**ಪರಕೀಯಾತು ದ್ವೋಧಾ ಕನ್ಯೋಡಾ ಚೇತಿ ತೇಹಿ ಜಾಯತೇ।**
ಎಂದು ಹೇಳಿ;
**ಅಥ ವಪ್ರಲಂಭನಾಮಾ ಶ್ರುಂಗಾರೋಯಂ ಚತುರ್ವಿಧೋ ಭವತಿ।**
**ಕರುಣಃ ಸ ವಿಪ್ರಲಂಭೋ ಯತ್ರಾನ್ಯತರೋಮ್ರಿಯೆತ್ ನಾಯಕಯೋಃ ॥**

ನಾಯಕನಿಗೆ ಕರುಣ ರಸವೂ ಅತೀ ಪ್ರಧಾನವಾದುದೆಂದು ಸ್ಪಷ್ಟವಾಗಿ ಹೇಳಿದ್ದಾನೆ. ಈ ಪರಿಚ್ಛೇದದಲ್ಲಿ ೧೬೩ ಶ್ಲೋಕಗಳಿವೆ.

**ದಶಗುಣ ನಿಶ್ಚಯ** : ಈ ಪರಿಚ್ಛೇದದಲ್ಲಿ ದಶಗುಣಗಳನ್ನು ಪ್ರಸ್ತಾಪಿಸಿದ್ದಾನೆ.

**ಏತೇ ದಶಗುಣಃ ಪ್ರೋಕ್ತಾ ದಶ ಪ್ರಾಣಶ್ಚ ಭಾಷಿತಾಃ ।**
**ಇತಿ ವೈದರ್ಭೀ ಮಾರ್ಗಸ್ಯ ಪ್ರಾಣ ದಶಗುಣಾಃ ಸ್ಮೃತಾಃ॥**

**ರೀತಿ ನಿಶ್ಚಯ** : ಈ ಪರಿಚ್ಛೇದಗಳಲ್ಲಿ ರೀತಿಗಳ ಸ್ವರೂಪ, ಅವುಗಳಲ್ಲಿರುವ ಭೇದಗಳನ್ನು ವಿವರಿಸಿದ್ದಾನೆ. ರೀತಿಯಲ್ಲಿ ನಾಲ್ಕು ಪ್ರಭೇದಗಳಿಗೆ. ಅವು ವೈದರ್ಭಿ, ಗೌಡಿ, ಪಾಂಚಾಲಿ, ಲಾಟೀಯವೆಂದು ಹೇಳಿದ್ದಾನೆ.

**ರೀತಿನಾಂ ಗುಣಾಸಿಲಷ್ಟಪದ ಸಂಘಟನಾ ಮತಾ ।**
**ಮಾಧುರ್ಯಾದಿ ಗುಣೋಪೇತಪದಾನಾಂ ಘಟನಾತ್ಮಿಕಾ॥**

ಎಂದಿದ್ದಾನೆ.

ವಿಶಿಷ್ಟ ಪದರಚನೆಯೇ ರೀತಿ, ಮಾಧುರ್ಯ, ದುರ್ಗುಣಗಳು ಅದರ ಒಂದು ವಿಭಾಗವಷ್ಟೇ ಎಂದಿದ್ದಾನೆ. ಇದರಲ್ಲಿ ೧೭ ಶ್ಲೋಕಗಳಿವೆ.

**ವೃತ್ತಿ ನಿಶ್ಚಯ** : ಈ ಪರಿಚ್ಛೇದದಲ್ಲಿ ವೃತ್ತಿಗಳು ಅವುಗಳ ಸ್ವರೂಪಗಳು, ಭೇದಗಳನ್ನು ವಿವರಿಸಿದ್ದಾನೆ. ೬ ವೃತ್ತಿಗಳ ಬಗ್ಗೆ ಪ್ರಸ್ತಾಪ ಮಾಡಿದ್ದಾನೆ.

ಕೈಶಿಕಿ, ಅರಭಟಿ, ಭಾರತಿ, ಸತ್ವತಿ, ಮಧ್ಯಮ –ಅರಭಟಿ ಎಂದು ಹೇಳಿದ್ದಾನೆ. ಮೊದಲು ಈ ವೃತ್ತಿಗಳನ್ನು ಪ್ರತಿಪಾದಿಸಿದವನು ಭೋಜ. ೧೬ ಶ್ಲೋಕಗಳಿವೆ.

**ಶಯ್ಯಾಪಾಕ ನಿಶ್ಚಯ** : ಈ ಪರಿಚ್ಛೇದದಲ್ಲಿ ಶಯ್ಯಾಪಾಕಗಳ ಲಕ್ಷಣಗಳನ್ನು ನಿರೂಪಿಸಿದ್ದಾನೆ,

ಪವಾನಾಯಾನುಗುಣ್ಯಂ ಪಾಸ್ಯೋತ್ಯಾ ಮಿತ್ರ ಸ್ವಮುಚ್ಯತೇ ।
ಯತ್ ಸಾ ಶಯ್ಯಾ ಕಲಾಶಾಸ್ತ್ರ ನಿಪುಣ್ಯೋವಿದುಷಾ ಪರೈ ॥

ಇದು ಕಲಾಶಾಸ್ತ್ರಕ್ಕೆ ಸಂಬಂಧಿಸಿದ ಪರಿಚ್ಛೇದವಾಗಿದೆ. ಇದರಲ್ಲಿ ೧೦ ಶ್ಲೋಕಗಳಿವೆ.

**ಅಲಂಕಾರ ನಿರ್ಣಯ:** ಈ ಪರಿಚ್ಛೇದದಲ್ಲಿ ಸುಮಾರು ೩೦ರಷ್ಟು ಅಲಂಕಾರಗಳು ಮತ್ತು ಅವುಗಳ ಉಪಭೇದ ಗಳನ್ನೂ, ಲಕ್ಷಣಗಳನ್ನೂ ಸೋದಾಹರಣವಾಗಿ ವಿವರಿಸ ಲಾಗಿದೆ. ಬಹು ವಿದ್ವತ್ಪೂರ್ಣ ರೀತಿಯಿಂದ ವಿಮರ್ಶಿಸಲ್ಪಟ್ಟಿದೆ. ಉಪಮಾಲಂಕಾರದಲ್ಲಿ ಸುಮಾರು ೩೩ ಉಪಭೇದಗಳನ್ನು ಹೇಳಿ ಅವುಗಳನ್ನು ಉದಾಹರಣೆಗಳೊಂದಿಗೆ ವಿವರಿಸಲಾಗಿದೆ. ಪ್ರಮುಖವಾದ ಹಾಗೂ ವಿಸ್ತಾರವಾದ ಭಾಗವಿದು. ಈ ಪರಿಚ್ಛೇದವು ೩೧೦ ಶ್ಲೋಕಗಳನ್ನೊಳಗೊಂಡಿದೆ.

**ದೋಷಗುಣ ನಿಶ್ಚಯ :** ಈ ಪರಿಚ್ಛೇದದಲ್ಲಿ ಕಾವ್ಯದ ಗುಣ ದೋಷಗಳನ್ನು ಮತ್ತು ಇಲ್ಲಿ ಅನುಸರಿಸಬೇಕಾದ ಕೆಲವು ನಿಯಮಗಳನ್ನು ಕವಿ ಎಚ್ಚರಿಸಿದ್ದಾನೆ. ಹೆಚ್ಚಿನ ಸಂದರ್ಭದಲ್ಲಿ ನಿರೂಪಣೆಯ ಸ್ಪಷ್ಟತೆಗಾಗಿ ಉದಾಹರಣೆ ಗಳನ್ನು ಕೊಡುವಾಗ ಇಲ್ಲಿ ತನ್ನ ರಾಜನಾದ ಕಾಮರಾಜ ಬಂಗನ ಜೀವನದ ಘಟನೆಗಳನ್ನು ಕವಿ ಚಿತ್ರಿಸಿದ್ದಾನೆ. ಕಾವ್ಯ ದೋಷದಲ್ಲಿ ಪದ ದೋಷ, ಅರ್ಥದೋಷ, ವಾಕ್ಯದೋಷ, ರಸದೋಷಗಳನ್ನು ಪ್ರಸ್ತಪಿಸಿದ್ದಾನೆ.

ಶೃಂಗಾರಾರ್ಣವ ಚಂದ್ರಿಕೆಯ ಪೀಠಿಕಾ ಭಾಗದಲ್ಲಿ ತನ್ನನ್ನು 'ಕವಿಶ್ವರ'[೧೦], 'ಕವಿತಾ ಶಕ್ತಿ'[೧೧] ಎಂದು ಕರೆದುಕೊಂಡಿದ್ದನ್ನು ವಿಶೇಷವಾಗಿ ಗಮನಿಸಬೇಕು. ಬಂಗವಂಶದಲ್ಲಿ ಮೇಲೆ ಹೇಳಿದ ರಾಜ ಪರಂಪರೆ ವಿಜಯವರ್ಣಿಯ ಗ್ರಂಥದಲ್ಲಿ ಸಿಗುತ್ತದೆ.

ಮಾತ್ರವಲ್ಲ ಅವರಿಂದ ತಾನು ಶಾಸ್ತ್ರಜ್ಞಾನವನ್ನು ಪಡೆದುಕೊಂಡುದಾಗಿ ಹೇಳುತ್ತಾನೆ. ಹಾಗೂ ಅವರು ಕೊಟ್ಟಿರುವ ಮತ್ತು ಪ್ರವಾಣಗಳನ್ನು ತಾನು ಬಳಸಿಕೊಂಡಿರುವುದಾಗಿ ಪ್ರಾಮಾಣಿಕವಾಗಿ ಹೇಳುತ್ತಾನೆ. ಆದರೆ ಈ ಗ್ರಂಥವನ್ನು ಸಂಪಾದಿಸಿದ ಡಾ॥ ಕುಲಕರ್ಣಿಯವರು "ಈ ಗ್ರಂಥದ ಒಂದು ಗಮನೀಯ ವೈಶಿಷ್ಟ್ಯವೆಂದರೆ ವಿಜಯವರ್ಣಿ ತನ್ನ ನಿರೂಪಣೆಗಾಗಿ ಸೃಷ್ಟಿಸಿದ ಹಲವಾರು ಉದಾಹರಣೆಗಳು ಆತನ ಸ್ವಂತದ್ದೇ ಆಗಿವೆ ಹಾಗೂ ಅವು ತನ್ನ ಆಶ್ರಯದಾತ ರಾಜನ ವೈಭವೀಕರಣಕ್ಕೆ ಮೀಸಲಾಗಿವೆ."[೧೨] ಎಂದು ಸೂಚಿಸಿರುವರು.

ಒಟ್ಟಿನಲ್ಲಿ ಈ ಸಪ್ರಬಂಧದ ಉದ್ದೇಶವು ಈ ಗ್ರಂಥವನ್ನು ಪರಿಚಯಿಸಿ, ಇತಿಹಾಸಕಾರರ ಗಮನವನ್ನು ಸೆಳೆಯುವುದಷ್ಟೇ ಆಗಿದೆ. ಇದರ ಪೂರ್ಣ ಅಧ್ಯಯನವು ಈ ಅರಸ, ಈತನ ವಂಶ ಹಾಗೂ ಕರ್ನಾಟಕದ ಇತರ ಅರಸುಮನೆತನಗಳ ವಿವರಗಳು ಇವರೊಳಗಿದ್ದ ಪರಸ್ಪರ ಸಂಬಂಧವನ್ನು ತಿಳಿಸಬಹುದು. ಈ ಗ್ರಂಥದ ಅಧ್ಯಯನದಿಂದ ಇತಿಹಾಸಕ್ಕೆ ಇನ್ನಷ್ಟು ಹೊಸ ಬೆಳಕು ಮೂಡಿಬರಲಿ ಎಂದು ಆಶಿಸುತ್ತೇನೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ವಿಜಯವರ್ಣಿ, **ಶೃಂಗಾರಾರ್ಣವ ಚಂದ್ರಿಕಾ,** ಭಾರತೀಯ, ಜ್ಞಾನಪೀಠ, ಡಾ॥ ವಿ.ಯಂ. ಕುಲಕರ್ಣಿ, ೧೯೬೯ ಪುಟ ೨.

೨. ವಿಜಯವರ್ಣಿ, ಅದೇ, ಪು. ೧ ಶ್ಲೋಕ ೬.

೩. ಅದೇ ಪುಟ ೨, ಶ್ಲೋಕ ೬-೨೨.

೪. ಅದೇ ಪುಟ ೩, ಶ್ಲೋಕ ೨೦-೩೩.

೫. ಅದೇ ಪುಟ ೨, ಶ್ಲೋಕ ೭೪-೭೬.

೬ ಗಣಪತಿ ರಾವ್ ಐಗಳ್, ೨೦೦೪, **ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ** (ಪರಿಷ್ಕೃತ ಮುದ್ರಣ) ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ, ಪುಟ ೧೭೫.

೭. ಡಾ॥ ಗುರುರಾಜ್ ಭಟ್, ೧೯೭೫, *Studies in Tuluva History and Culture,* ಲೇಖಕರಿಂದಲೇ ಪ್ರಕಾಶಿತ, ಪುಟ ೬೪-೬೫ (ಎ.ಆರ್.ನಂ ೫, ೧೯೪೦-೪೧, Appendix-A).

೮. ಡಾ॥ ಕೆ.ವಿ. ರಮೇಶ್, ೧೯೭೦, *A History of South Kanar,* Karnatak University, ಪುಟ ೧೩೭-೧೪೫.

೯. ವಿಜಯವರ್ಣಿ, **ಶೃಂಗಾರ್ಣವ ಚಂದ್ರಿಕಾ,** ಭಾರತೀಯ ಜ್ಞಾನಪೀಠ, (ಸಂ.) ಡಾ॥ ವಿ.ಯಂ. ಕುಲಕರ್ಣಿ, ೧೯೬೯. ಪುಟ ೨, ಶ್ಲೋಕ ೭೬

೧೦. ಅದೇ ಪು. ೩, ಶ್ಲೋಕ ೩೬.

೧೧. ಅದೇ ಪು. ೩, ಶ್ಲೋಕ ೩೩.

೧೨. ಅದೇ ಪು. ೧೦.

ಡಾ. ಶ್ರೀನಿವಾಸ ಹಾವನೂರ*
ಶ್ರೀಮತಿ ನಿರ್ಮಲಾ ಗಣೇಶ್*

# ಹರಿದಾಸರು ಚಿತ್ರಿಸಿದ ಕೆಲವು ಐತಿಹಾಸಿಕ ಹಾಗೂ ಸಮಕಾಲೀನ ಜನಜೀವನದ ಅಂಶಗಳು

ಹರಿದಾಸರು ತಮ್ಮ ಕೀರ್ತನೆಗಳಲ್ಲಿ ಸಾಮಾನ್ಯವಾಗಿ ದೈವಭಕ್ತಿ, ಪುರಾಣಕಥನ, ವೃಂದಾವನಸ್ಥ ಸ್ವಾಮಿಗಳ ಸ್ತುತಿ-ಜೊತೆಗೆ ನೀತಿಬೋಧೆ - ಇವನ್ನಷ್ಟೇ ಹೇಳಿದ್ದಾರೆ. ಆದರೆ ಅಲ್ಲಲ್ಲಿ ಐತಿಹಾಸಿಕ ಅಂಶಗಳನ್ನು ನೇರವಾಗಿ ಪ್ರಸ್ತಾಪಿಸಿದ್ದಾರೆ ಮತ್ತು ಜನಜೀವನವನ್ನು ಪರೋಕ್ಷವಾಗಿ ತಂದಿದ್ದಾರೆ.

**ಹಿನ್ನೆಲೆ :** ಸರಕಾರದವರು ೫೦ ಸಮಗ್ರ ಹರಿದಾಸ ಸಾಹಿತ್ಯ ಸಂಪುಟವನ್ನು ಪ್ರಕಟಿಸಿದ್ದಾರೆ. ಅದರಲ್ಲಿ ೧೪೫೦ರಿಂದ ೧೯೦೦ರ ವರೆಗೆ ೧೪೦ ಜನ ಹರಿದಾಸರು ರಚಿಸಿದ ೧೬ ಸಾವಿರ ಕೀರ್ತನೆಗಳಿವೆ. ಅದರಲ್ಲಿ ಮಾಧ್ವ, ಅದ್ವೈತ, ಶ್ರೀವೈಷ್ಣವ ದಾಸರೂ ಹಾಗೂ ೨೦ ಜನ ದಾಸ ಮಹಿಳೆಯರೂ ಇದ್ದಾರೆ. ಈ ೧೬ ಸಾವಿರ ಕೀರ್ತನೆಗಳ ನಿರ್ದಿಷ್ಟ ವಿಷಯ ಏನೆಂಬುದನ್ನು ನಾವು ಗೊತ್ತುಪಡಿಸಿ ಕಂಪ್ಯೂಟರಿಗೆ ಹಾಕಿದ್ದೇವೆ. ಇಂಥ ನಿರ್ದಿಷ್ಟ ವಿಷಯಗಳು ೮೦೦ನ್ನು ಮಿಕ್ಕಿವೆ. ಆ ವಿಷಯಗಳ ಮೂಲಕ ಐತಿಹಾಸಿಕ ಹಾಗೂ ಜನಜೀವನಕ್ಕೆ ಸಂಬಂಧಪಟ್ಟ ವಿಷಯಗಳನ್ನು ಗುರುತಿಸಿ, ಸಂಕ್ಷಿಪ್ತವಾಗಿ ತಮ್ಮ ಮುಂದೆ ಸಾದರಪಡಿಸುತ್ತಿದ್ದೇವೆ.

ಎದ್ದು ಕಾಣುವ ಘಟನೆಯೆಂದರೆ ೧೭೯೧ರಲ್ಲಿ ಮರಾಠರು ಮಾಡಿದ ದಾಳಿ ಮತ್ತು ಆಸ್ತಿಯ ಅಪಹರಣ ನಡೆದದ್ದು.

ದಂಡು ಬರುತಿದೆ ಆರೇರ ದಂಡು ಬರುತಿದೆ
ದಂಡಿನೊಳಗೆ ಸಿಕ್ಕಿ ಸೋಲಿಸಿಕೊಂಡು ಬಂದೆವು ನಾಲ್ಕು ಮಂದಿ
ಅಮ್ಮ ಲಿಮ್ಮಿ ಬೊಮ್ಮಿ ನಾನು ಸುಮ್ಮನೊಂದು ಮರೆಯಲಿರಲು
ನಮ್ಮನೆ ಅವರು ಬಂದು ಹಿಡಿದು ಗುಮ್ಮಿ ಹೋದರು ನಿಮ್ಮನೆಲ್ಲ
ಅತ್ತೆ ಮಾವ ಮೈದುನರು ಎತ್ತಹೋದರೊ ಕಣ್ಣಲಿ ಕಾಣೆ
ಅತ್ತೆ ಹೆಣ್ಣೆ ಹೋಗು ಎಂದು ಬತ್ತಲೆಬಿಟ್ಟರು ಎನ್ನ ರಂಡೆಮುಂಡೆರೆಂದರು ಬಿಡರು
ಬೇಡಾರರಿಗೆ ಸಿಕ್ಕು ಕೆಟ್ಟ ಗಂಡು ಕೂಸು ಪಡೆಯದಿರಿ

ಈ ಹಾಡಿನಲ್ಲಿ ಸ್ತ್ರೀಯರ ಮಾನಹಾನಿಯಾದ ಅಂಶ ಸ್ಪಷ್ಟವಾಗಿ ಬಂದಿದೆ. ಮರಾಠರ ದಂಡು ದೊಡ್ಡದೇನಿರಲಿಲ್ಲ - ದಾಸರು ಹೇಳ್ತಾರೆ:

ಆನೆಯಿಲ್ಲ ತೇಜಿಯಿಲ್ಲ ಸೇನೆ ಬಹಳವಾಗಿಯಿಲ್ಲ
ಹೀನಗೆಟ್ಟು ದಂಡು ಬಂದು ಜನರ ಕೊಚ್ಚಿ ಕಡಿದರು
ದಿಕ್ಕೆಯಿಲ್ಲದ ನಮ್ಮ ಕಡೆ ಸೊಕ್ಕಿ ಬಂದರಾರೇರು
ಚಿಕ್ಕ ಮನುಷ ಕೆಂಚಗೌಡ ಠಕ್ಕ
ಬೆಂಕಿನಂತೆ ತೋರ್ಪನೊಬ್ಬ ಪರಶುರಾಮನು

ಈ ದಾಳಿಯ ಮುಖ್ಯಸ್ಥ ಪರಶುರಾಮಭಾವು ಮತ್ತು ಕೆಂಚೇಗೌಡ ಎಂಬ ಸ್ಥಳೀಯ ಗುಪ್ತರೀತಿಯಿಂದ ಸಹಾಯ ಮಾಡಿರಬೇಕು. ಈ ದಾಳಿಯಲ್ಲಿ ಸಾಮಾನ್ಯ ಜನರ ದುಸ್ಥಿತಿ ಹೇಗಿತ್ತು? ಅದನ್ನು ಒಂದು ಹಾಡಿನಲ್ಲಿ ಕವಿ ವರ್ಣಿಸಿದ್ದಾನೆ.

ಕೆಟ್ಟಕಾಲ ಬಂತು ಪ್ರಜೆಗೆ ಎಷ್ಟು ಪೇಳ್ವರೇನು ಕೆಲಸ
ದಿಟ್ಟ ಅರಿಗಳನು ಕುಟ್ಟಿ ತೆಗೆಯದಿದ್ದ ಮೇಲೆ
ದಂಡು ಬಂತು ನಿಂದು ಜನರು ಗಂಡು ಹೆಣ್ಣುಮಕ್ಕಳೆಲ್ಲ
ಕಂದುಗಳನು ಕಟ್ಟಿ ಗೋವಿನ ಹಿಂಡಿನೆಲ್ಲ ದಾರಿಗೊಳಿಸಿ
ದಂಡಿನವರು ದಾರಿಗಟ್ಟಿಕೊಂಡು ಸುಲಿದು ಕಡಿದು
ದಂಡು ಅಲ್ಲಿ ಬಂತು ಇಲ್ಲಿ ಬಂತು ಎಂದು ಬೆದರಿಕೊಂಡು
ಕುಣಿಗಳಲ್ಲಿ ಭತ್ತಭಾಂಡವಿಕ್ಕಿ ನಿಲ್ಲದೆಲ್ಲಿ ಊರುಬಿಟ್ಟು
ಕಲ್ಲು ಮುಳ್ಳು ಗುಡ್ಡ ಕಾನಿನಲ್ಲಿ ಸೇರಿಕೊಂಡು
ವಸ್ತು ವಡವೆ ಅಲ್ಲಿ ನಷ್ಟವಾದ ಮೇಲೆ

ಈ ದಾಳಿಯು ದುಷ್ಪರಿಣಾಮಗಳ ಅತ್ಯಂತ ದಾರುಣವಾದ ಚಿತ್ರ ಈ ಹಾಡಿನಲ್ಲಿದೆ :

ಹೋಯಿತು ಪರಶುರಾಮನ ದಂಡಿಲಿ ನಷ್ಟವಾಯಿತು ಜನರೆಲ್ಲ
ಹೊಡೆತ ಕಡತದಿ
ಹೋದುದು ಮನೆಮಾರು ದನಕರು ಮಣಿಮುತ್ತು
ತೀರ್ದುದು ಕಂಚು ತಾಮ್ರಗಳು ಬಹುಕಾಲ
ಸಾಧಿಸಿದೊಡವೆ ಸಾಧನ ಸಂಪತ್ತುಗಳೆಲ್ಲ

ಉಡುವ ತೊಡುವ ಜವಳಿ ಅಡಕೆ ಮೆಣಸು ಭತ್ತ
ಕಡಿತ ತಂಠಗಳಾಬ್ರ ಮುಡಿ ಉಪ್ಪು ಗುಢಕಲ್ಲ
ಗಡಿಗೆ ಮಡಕೆ ಎಣ್ಣೆ ಕೊಡವು ಕಬ್ಬಿಣದ ಕತ್ತಿ
ಅಡಿಯಿಟ್ಟ ಚೆಟ್ಟುಪಾಟ್ಟಗಳೊಂದುಳಿಯದಂತೆ

ಮುತ್ತಿನ ಸರ ಕೆಂಪುಗೆತ್ತಿಗೆ ನಗ ಮುದ್ರೆ
ಯೊತ್ತು ಉಂಗುರ ಜಪಮಣಿ ಮಾಲೆ ಹವಳ ಯಾವತ್ತು
ಪೂಜಿಪ ಪಂಚಮೂರುತಿಯಾರತಿ ಸೊಡರೆತ್ತುವ
ನಗನಾಣ್ಯವೆಲ್ಲ ಸುಲಿಗೆಯಿಂದ

* ಕೃಷ್ಣರಾವ್ ಪಾರ್ಕ್ ಸಮೀಪ, ಬಸವನಗುಡಿ, ಬೆಂಗಳೂರು - ೫೬೦ ೦೦೪.

**ಅಂಧಕಾರಕೆ ನೆರವಾದಂತೆ ದುರ್ಭಿಕ್ಷ ಬಂದಿತು ಸಂಗಡ**
**ತಂಡುಲ ಗದ್ಯಾಣವೊಂದಕ್ಕೆದಾಗಿ ಮುಗಿತು**

ಈ ದಾಳಿಯನ್ನು ವರ್ಣಿಸಿದ ಕವಿ ಸುಳಿಗೋಡಿನ ಪರಮದೇವ ಎಂಬಾತ. ಇಕ್ಕೇರಿಯಲ್ಲಿ ವಾಸವಾಗಿದ್ದಾಗ ತಾನು ಕಣ್ಣಾರೆ ಕಂಡು ಅದರ ತಾಪವನ್ನು ಅನುಭವಿಸಿದ ವ್ಯಕ್ತಿ. ತನ್ನ ಮನಸ್ಸಿಗೆ ಆದ ನೋವನ್ನು ಪ್ರಾಮಾಣಿಕವಾಗಿ ಹೇಳಿದ್ದಾನೆ. ಅಂದ ಹಾಗೆ 'ತುರಂಗಭಾರತ' ಎನ್ನುವ ಮಹಾಕಾವ್ಯವನ್ನು ಇವನೇ ಬರೆದದ್ದು.

ಹಲವಾರು ಐತಿಹಾಸಿಕ ವ್ಯಕ್ತಿಗಳ ಪ್ರಸ್ತಾಪ ಬರುತ್ತದೆ. ಮೈಸೂರಿನ ಮುಮ್ಮಡಿ ಕೃಷ್ಣರಾಜರು ಮತ್ತು ಅನಂತರದ ಚಾಮರಾಜೇಂದ್ರರು ಇವರಿಗೆ ಸುಖಸಂಪತ್ತು ಸಿಗಲಿ ಎಂದು ನಾರಾಯಣ ದಾಸ ಎಂಬುವರು ಚಾಮುಂಡೇಶ್ವರಿಯನ್ನು ಬೇಡಿಕೊಂಡಿದ್ದಾರೆ. ಪ್ರತಿವರ್ಷ ಆಗಲೂ ನಡೆಯುತ್ತಿದ್ದ ನವರಾತ್ರಿ ಉತ್ಸವದ ಪ್ರಸ್ತಾಪವೊಂದೇ ಮಹತ್ವದ್ದು. [ದಾಖಲಾದ ಮತ್ತೊಬ್ಬ ಐತಿಹಾಸಿಕ ವ್ಯಕ್ತಿ ಹಾವನೂರ ಸಂಸ್ಥಾನದ ಹನುಮಂತಗೌಡರು]

ಆಶ್ಚರ್ಯವೆಂದರೆ ಕನ್ನಡ ತಾಯಿ ಹಾಗೂ ಭಾರತಮಾತೆಯ ಬಗ್ಗೆ ಕೀರ್ತನೆಗಳು ರಚಿತವಾಗಿವೆ. ಜೊತೆಗೆ ಅವುಗಳಲ್ಲಿ ಧಾರ್ಮಿಕ ಲೇಪವೂ ಇದೆ. ಆದರೆ ತಪ್ಪಲ್ಲ. ಕನ್ನಡ ತಾಯಿಯನ್ನು ವರ್ಣಿಸಿದವರು ನಂಜನಗೂಡಿನ ತಿರುಮಲಾಂಬಾ ಅವರು. ೨೦ನೆಯ ಶತಮಾನದ ಆರಂಭ ದಲ್ಲಿ ಹೆಚ್ಚಾಗಿ ಸಾಹಿತ್ಯಕಾರ್ಯವನ್ನು ಕೈಗೊಂಡು ಕಾದಂಬರಿ, ನಾಟಕಾದಿಗಳನ್ನು ಬರೆದಿದ್ದರು. ಜೊತೆಗೆ 'ಶೇಷಗಿರೀಶ' ಎಂಬ ಮುದ್ರಿಕೆಯಲ್ಲಿ ಕೀರ್ತನೆಗಳನ್ನು ರಚಿಸಿದ್ದಾರೆ.

**ಕೈಪಿಡಿದೆನ್ನನು ಕಾಪಿಡು ನಲವಿಂ ಕನ್ನಡ ನುಡಿವೆಣ್ಣೆ**
**ಈ ಪಸುಳೆಗೈದಾ ಪಾಪವದಾವುದು ಕೋಪಿಸದಿರು ಎನ್ನಾಣೆ**
**ಭಾಷೆಗೆ ತಪ್ಪಿದ ದೋಷಿಯನ್ನು ಉಪೇಕ್ಷಿಸಬೇಡೆನ್ನ**

ಭಾರತಮಾತೆಯ ಮೇಲಿನ ಪದ್ಯ ವಿಶಿಷ್ಟ ರೀತಿಯಲ್ಲಿ ಮೈದಾಳಿದೆ ಎಂದರೆ ಕೋಲಾಟದ ಧರತಿಯಲ್ಲಿ: ಬಾಲೆಯರೆಲ್ಲರು ಬನ್ನಿರಿ ರನ್ನದ ಕೋಲ್ಗಳನೀವ್ ಪಿಡಿದು

**ಈ ಬಾಲೆಯರು ಯಾರು ಗೊತ್ತೆ?**
**ಗಿರಿಸುತೆ ನೀ ಬಾ ಸರಸ್ವತಿ ನೀ ಬಾ**
**ಶರಧಿ ತನೂಭವೆ ನೀ ಬಾ ಬಾ**

ಇವರು ಮಾಡಬೇಕಾದ ಕೆಲಸವೆಂದರೆ ತಂತಮ್ಮ ಪತಿಯರಿಗೆ ಭಾರತ ಜನನಿಗೆ ಅವಳ ಮಕ್ಕಳಿಗೆ ಶುಭವನ್ನು ಕೊಡಿರೆಂದು ಕೇಳಬೇಕಂತೆ!

**ಸರಸ್ವತಿ ನೀ ಬಾ ನಿನ್ನರಸನ ಕೆಲಸಾರ್ ಧರೆಯೊಳು ಸುಪ್ರಜರ**
**ಸೃಜಿಸುವ ವೋಲ್ ಅರುಹು**
**ಓೀಗೆಯೇ ಮಹಾಲಕ್ಷ್ಮಿಗೆ. ಭಾರತೀಯರನ್ನು ಚೆನ್ನಾಗಿ ಕಾಪಾಡಲು**
**ಶ್ರೀಹರಿಗೆ ಹೇಳು ಇತ್ಯಾದಿ**

ಅಂತೂ ಬಾಲೆಯರು ಕೋಲಾಟವಾಡುತ್ತ ಈ ಹಾಡನ್ನು ಹೇಳುತ್ತಾರೆ:

**ಭಾರತಿಜನನಿಯ ಭಾಗ್ಯೋದಯಮಂ ತೋರಿರಿ ಶಕ್ತಿತ್ರಯರೇ**
**ಭಾರತವೀರರಿಗಾರೋಗ್ಯೈಶ್ವರ್ಯಂಗಳ ಕರುಣಿಸಿರೇ**

ಮುಂದೆ ಕೇಳಿ:

**ರಾಷ್ಟ್ರಪ್ರಮುಖರ ಕಷ್ಟಂಗಳ ನಾವೆಷ್ಟೆಂದೊರೆದಪೆವೇ**
**ಸೃಷ್ಟಿ ಸ್ಥಿತಿ ಲಯಕರ್ತರು ನೀವಿರೆ ದೃಷ್ಟಿಸಿರೀಗೆನ್ನುವೆವೆ**
**ಕನ್ನಡ ತಾಯಿಯ ಕನ್ನೆಯರಾವು ಉನ್ನತಿಯನ್ನು ಎಳಸುವೆವು**
**[ಮನ್ನಿಯೆ ನೀವೆಮ್ಮೋಳಿನ್ನಾವೇಳಿಸೆ ಧನ್ಯರು ನಾವಹೆವು**
**ಆರ್ಯಮಹಿಳೆಯರೆನೆ ವೀರಮಾತೆಯರೆನೆ ಧಾರುಣಿಯೊಳಗೆಮ್ಮಂ**
**ಧೈರ್ಯ ಸ್ಥೈರ್ಯ ಔದಾರ್ಯ ಗುಣಂಗಳಪೊರತಿರಪ್ಪಂತೆ ಆಶೀರ್ವದಿಸಿರಿ]**

ಆಗ ಸ್ವಾತಂತ್ರ್ಯ ಚಳುವಳಿ ಜೋರಾಗಿ ಸಾಗಿದ್ದಿತು. ಗಾಂಧಿಯವರ ನೇತೃತ್ವ ತಾನೇ. ಗಾಂಧೀಜಿ ಬಗ್ಗೆಯೂ ಹಾಡೊಂದಿದೆ ಎಂದರೆ ಆಶ್ಚರ್ಯವಾದೀತು. ಅದನ್ನು ರಚಿಸಿದವರು ಮಂತ್ರಾಲಯದಲ್ಲಿದ್ದ ಸ್ಥಾಯೀಕೀರ್ತನೆಕಾರರಾದ ಶಾಮಸುಂದರವಿಠಲರು.

ಗಾಂಧೀಜಿ ಹತ್ಯೆಯಾದಾಗ ಅವರೇ ನಮಗೆಲ್ಲ ಸಮಾಧಾನ ಹೇಳುವ ರೀತಿಯಲ್ಲಿ ಈ ಪದ್ಯವಿದೆ.

**ಓ ಎನ್ನ ಬಂಧುಗಳೇ! ನಾನಿಂದು ಜಗದಿಂದ**
**ಮಾಯವಾಗಿಹನೆಂದು ಮನದೊಳಗೆ ಮರುಗದಿರಿ**
**ಎನಗೆ ಮರಣವು ಇಲ್ಲ ನಿಮ್ಮನ್ನಗಲಿ ಪೋಗಿಲ್ಲ**

[ಸರಿ] ಹಾಗಿದ್ದರೆ ಎಲ್ಲಿದ್ದಾರೆ?

**ನ್ಯಾಯದಲಿ ನಿಷ್ಠೆಯಲಿ ಸತ್ಯದಲಿ ಶಾಂತಿಯಲಿ ಉತ್ತಮೋತ್ತಮವಾದ**
**ಅಹಿಂಸೆ ತತ್ವದಲಿ ಹರಿಪೇಳ್ದ ಗೀತೆಯಲಿ ಹರಿಜನರ ಮಧ್ಯದಲಿ**
**ಬಡಜನರ ದುಃಖದಲಿ ಸಾಧುಸಜ್ಜನರಲ್ಲಿ ಖಾದಿವಸ್ತ್ರವನ್ನುಟ್ಟು**
**ಮೋದಬಡುತಿಹರಲ್ಲಿ ರಾಟೆ ನೂಲುವವರಲ್ಲಿ ಹಿಂದು ಮುಸ್ಲಿಮರೊಂದಾಗಿ**
**ನಡೆವಲ್ಲಿ ಕುಂದದೆ ನಾನಿಪ್ಪೆ**

ಎಂದರೆ ಗಾಂಧೀಜಿ ಯಾವ ಮೌಲ್ಯಗಳ ಅನುಷ್ಠಾನ ದಲ್ಲಿದ್ದರೋ ಅವೆಲ್ಲವನ್ನು ಸೊಗಸಾದ ರೀತಿಯಲ್ಲಿ ತಂದದ್ದಾಗಿದೆ.

ಸ್ವಾತಂತ್ರ್ಯ ಚಳುವಳಿಯಲ್ಲಿ ನೇರವಾಗಿ ಭಾಗವಹಿಸಿ ದವರೇ ತಮ್ಮ ದೇವರ ಹಾಡುಗಳಲ್ಲಿ ಆ ಚಳುವಳಿಯ ಅಂಶಗಳನ್ನು ಅಲ್ಲಲ್ಲಿ ತಂದವರಿದ್ದಾರೆ. ಅವರೇ ಗಲಗಲಿ ರಾಮಾಚಾರ್ಯರು. ಭೂಪತಿವಿಠಲ ಎಂದು ಅಂಕಿತರಾದರವರು. ತಮ್ಮ ಒಂದು ಕೀರ್ತನೆಯನ್ನು 'ಝಂಡಾ ಊಂಚಾ ರಹೇ ಹಮಾರಾ' ಧಾಟಿಯಲ್ಲೇ ರಚಿಸಿದ್ದಾರೆ. ಶ್ರೀ ರಾಘವೇಂದ್ರರ ಪೂರ್ವಾವತಾರವಾದ ಪ್ರಹ್ಲಾದನನ್ನು ಪ್ರಥಮ ಸತ್ಯಾಗ್ರಹಿ ಎಂದು ಕರೆದಿದ್ದಾರೆ. ದೇವರು ಸತ್ಯ ಸತ್ಯ ಎಂದು ಹೇಳುವಲ್ಲಿ ತಂದೆಯೆದುರು ಹಟಹಿಡಿದನಲ್ಲವೆ ! ಇದೇ ರಾಜಕೀಯ ಕ್ಷೇತ್ರದಲ್ಲಿದ್ದ ಜಗನ್ನಾಥರಾವ ಚಂದ್ರಿಕೆಯವರನ್ನು ಸ್ವಾಗತಿಸಿದ ಪದ್ಯವೂ ಒಂದಿದೆ. ಹೈದರಾಬಾದ್ ಕರ್ನಾಟಕದಲ್ಲಿಯ ಓರ್ವ ಹೋರಾಟಗಾರರೆಂಬುದು ತಿಳಿದ ವಿಷಯ.

ನಿಮಗೆ ಆಶ್ಚರ್ಯವೆನಿಸಬಹುದಾದ ಇನ್ನೊಬ್ಬ ವ್ಯಕ್ತಿ ವರ್ಣಿತರಾಗಿದ್ದಾರೆ. ಬೇಂದ್ರೆಯವರು ! ಮಾನ್ವಿಯಲ್ಲಿ ಸಾಹಿತ್ಯ ಸಮ್ಮೇಳನ ನಡೆಯಲಿತ್ತು. ಆಗ ಆಮಂತ್ರಿತರಾಗಿದ್ದ ಅವರನ್ನು ಬರಮಾಡಿಕೊಳ್ಳುವ ಕೀರ್ತನೆಯಿದು :

**ಸತ್ಕವೀಂದ್ರ ಬಾ ಬೇಂದ್ರ ಸುಗುಣಸಾಂದ್ರ**
**ಅಚ್ಚಗನ್ನಡ ತಾಯಿಗೆ ಅಚ್ಚಿದಾ ಮಗನೆಂದು**
**ಹೆಚ್ಚಾಗಿ ನಿಮ್ಮನ್ನ ಮೆಚ್ಚವೆವೂ**
**ವೃತ್ತಪತ್ರಿಕೆಗಳಲಿ ಮತ್ತೆ ಸಮ್ಮೇಳನದಿ**
**ನಿತ್ಯ ಓದುವ ಮನೆ ಶಾಲೆಯಲ್ಲಿ**
**ಚಿತ್ತಪೂರ್ವಕ ನಿನ್ನ ಉತ್ತಮೋತ್ತಮ ಕವನ**
**ಮತ್ತೆ ಪೇಳುವರು ಸತ್ಕವೀಂದ್ರಾ**

ಅನೇಕ ಹರಿದಾಸರು ನಿಜಕ್ಕೂ ಉದಾರ ಮತವಾದಿಗಳು. ತಮ್ಮ ವೈಯಕ್ತಿಕ ಪಂಥ ಏನೇ ಇರಲಿ, ಬೇರೆ ಮತದ ಗುರುವರ್ಯರನ್ನು ಯತಿಗಳನ್ನು ನೆನೆದಿದ್ದಾರೆ. ಹಾಗೆ ವರ್ಣಿತರಾದವರಲ್ಲಿ ಮಹಾರಾಷ್ಟ್ರದ ಸಂತ ಸಖೂಬಾಯಿ. ಭಾಸ್ಕರಸ್ವಾಮಿಗಳು, ವೀರಶೈವ ಶರಣರಾದ ಬಸವೇಶ್ವರರು. ಫಕೀರಸ್ವಾಮಿಗಳು, ರೇವಣಸಿದ್ಧೇಶ್ವರರು ಹಾಡುಗಳಲ್ಲಿ ಕಾಣಿಸಿಕೊಂಡಿದ್ದಾರೆ.

ಹರಿದಾಸರು ಗಾಳಿಗೋಪುರದಲ್ಲಿ ಕುಳಿತವರಲ್ಲ. ಜನರ ಸುಖದುಃಖಗಳಿಗೆ ಸುಲಭವಾಗಿ ಸ್ಪಂದಿಸುವಂಥವರಾಗಿದ್ದರು. ನಾಡಿನಲ್ಲಿ ಬರಗಾಲ, ಭೂಕಂಪದಂತಹ ವಿಪತ್ತುಗಳು ಬಂದಾಗ ಅದನ್ನು ನಿವಾರಿಸಲು ದೇವರನ್ನು ಪ್ರಾರ್ಥಿಸಿದ್ದಾರೆ. ಭೂಕಂಪದ ಕುರಿತು ಯಾವ ಹೊಸಗನ್ನಡ ಕವಿಯೂ ಬರೆದಿಲ್ಲ. ಭೂಕಂಪಗಳೇನು ಮೇಲಿಂದ ಮೇಲೆ ಆಗುವುದಿಲ್ಲ, ನಿಜ. ದಾಸಸಾಹಿತ್ಯದಲ್ಲಿ ಮಾತ್ರ ಮೂರು ದಾಸರ ಪದ್ಯಗಳಲ್ಲಿ ಭೂಕಂಪದ ವಿಚಾರ ಬಂದಿದೆ. ಮೊತ್ತ ಮೊದಲು ಪ್ರಸ್ತಾಪಿಸಿದವರು ಕನಕದಾಸರು. 'ಏಕೆ ನಡುಗಿದೆ ತಾಯೆ?' ಎಂದು ತಮ್ಮ ಕಳವಳವನ್ನು ವ್ಯಕ್ತಪಡಿಸಿದ್ದಾರೆ. ಇನ್ನಿಬ್ಬರು ೨೦ನೆಯ ಶತಮಾನದ ದಾಸರ ಲಕ್ಷ್ಮೀನಾರಾಯಣರು ಹಾಗೂ ಪ್ರಸನ್ನ ಶ್ರೀನಿವಾಸರು. ಮೂವರು 'ಇದು ಭಗವಂತನ ಇಚ್ಛೆ. ಉಪಾಯವಿಲ್ಲ' ಎಂದೇನೋ ಹೇಳಿದ್ದಾರೆ. ಪ್ರಸನ್ನ ಶ್ರೀನಿವಾಸರು ಭೂಕಂಪದ ಜೀವಹಾನಿಗೆ ಒಂದು ಸಮಾಧಾನ ಹೇಳಿದ್ದಾರೆ. ಅದೇನೆಂದರೆ ಜೀವನದಲ್ಲಿ ಸಾಮೂಹಿಕ ಸುಖ ಮತ್ತು ಸಾಮೂಹಿಕ ದುಃಖ ಎರಡೂ ಇರುತ್ತದೆ. ಈಗ ಒಳ್ಳೇ ಮಳೆಗಾಗಿ ಬೆಳೆಯ ಸಮೃದ್ಧಿ ಇದ್ದರೆ ಅದರ ಫಲವನ್ನು ದುಷ್ಟ ವ್ಯಕ್ತಿಗಳೂ ಅನುಭವಿಸುತ್ತಾರೆ. ಹಾಗೇನೆ ಭೂಕಂಪದಂತಹ ಸಾಮೂಹಿಕ ವಿಪತ್ತು ಬಂದರೆ ಸಾತ್ವಿಕ ಜನರೂ ಸಹಿಸಬೇಕಾಗುತ್ತದೆ ಎಂದು ಹೇಳಿದ್ದಾರೆ.

ಬರಗಾಲದ ವಿಷಯವನ್ನಂತೂ ೭-೮ ಜನ ದಾಸರು ತಮ್ಮ ಅಳಲನ್ನು ತೋಡಿಕೊಂಡಿದ್ದಾರೆ. ಇದೀಗ ಹೇಳಿದ ಪರಮದೇವನು 'ಬರಗಾಲದ ಉರಗ ಜನರ ನುಂಗಿತೋ' ಎಂದು ನುಡಿದರೆ, ಶಾಮಸುಂದರವಿಠಲರೂ 'ಬಲುಕಷ್ಟ ಬರಗಾಲ ಬಂದಿತ್ಯ' ಎಂದು ಅದೇ ತರಹ ಬೇಸರ ವ್ಯಕ್ತಮಾಡಿದ್ದಾರೆ. ಉಳಿದ ಕೆಲವರು 'ನಿರ್ದಯನಾಗಬೇಡವೋ ಭಗವಂತ', 'ಮಳೆಯ ಪಾಲಿಸಯ್ಯ', 'ಮಳೆಯ ದಯಮಾಡೋ ರಂಗಯ್ಯ' ಎಂದೆಲ್ಲ ಬೇಡಿಕೊಂಡಿದ್ದಾರೆ. 'ಏನು ಮಾಡಲಿ ವೆಂಕಟೇಶ. ಈ ಬೆಳೆಯು ಸೊರಗುತ್ತ ನಡೆದಿದೆ' ಎಂದು ಪರಿತಪಿಸಿದ್ದಾರೆ ತುಪಾಕಿ ವೆಂಕಟರಮಣ.

ಆ ಕಾಲದ ನಾಡಿನ ದುಸ್ಥಿತಿಯೂ ದಾಸರ ಹಾಡುಗಳಲ್ಲಿ ಮನಕರಗುವಂತೆ ಚಿತ್ರಿತವಾಗಿದೆ. ತೆರಿಗೆಯ ಭಾರದ ಬಗೆ ಒಂದು ಕೀರ್ತನೆಯಲ್ಲಿದ್ದರೆ, ಬಡತನದ ಬವಣೆಯೂ ಅಲ್ಲಲ್ಲಿ ಕಂಡುಬರುತದೆ. ಹಾಗೆ ನೋಡಿದರೆ ಹೆಚ್ಚಿನ ಹರಿದಾಸರು ಜಾತ್ಯತಃ ಬಡವರೇ. ತಾಳ ತಂಬೂರಿ ಹಿಡಿದುಕೊಂಡು ಊರೂರು ತಿರುಗುವವರೇ. ಅಂತೆಯೇ 'ಬಡವರಾಗಿರುವನಕ ಭಯವಿಲ್ಲವಯ್ಯ' ಎಂದೂ ತಿಳಿಯ ಹೇಳಬಲ್ಲವರು. ಆದರೆ ದೇಶದ ದಾರಿದ್ರ್ಯವನ್ನು ಬೇರೆ ಹಲವರು ಮನಮುಟ್ಟುವಂತೆ ಚಿತ್ರಿಸಿದ್ದಾರೆ. ತಮಗೆ ಹೊಟ್ಟೆಬಟ್ಟೆಗೆ ಇಲ್ಲದಾಗ ಅತಿಥಿಗಳು ಬಂದರೆ –

**ತಿಂದು ಹೋಗುವರೆಲ್ಲ ಹೊರತು ತಂದು ಕೊಡುವರಿಲ್ಲ**
**ಅತಿಥಿ ಅಭ್ಯಾಗತರು ತಾವಂತೆ ಪ್ರತಿದಿನ ಬರುತಿಹರು**
**ವುಂಡು ದೂರುವರು ಬೇರೆ**

ಎಂದೊಬ್ಬ ಗೃಹಿಣಿ ಅಳಲು ತೋಡಿಕೊಂಡಿದ್ದಾಳೆ.

ನಾಡಿನ ದುಃಸ್ಥಿತಿಯು ಕವಿ ಪರಮದೇವರನ್ನು ತುಂಬಾ ಕಾಡಿದೆ. ಕೆಟ್ಟಿತು ಕಾಲಗತಿಯ್ಯ, ಕೆಟ್ಟ ಕಾಲ ಬಂತು ಪ್ರಜೆಗಳೆಲ್ಲ ಎಂಬುದಾಗಿ ಮತ್ತೆ ಮತ್ತೆ ಹೇಳಿದ್ದಾರೆ.

**'ದುರ್ಜನರಿಗೀ ಕಾಲ ಶುಭದ ಕಾಲ, ಸಾಧುಸಜ್ಜನರಿಗೆ**
**ಅನ್ನಕೆ ಇಲ್ಲದ ಸಾವಕಾಲ'**

ಮುಂದುವರಿದು ಅರಮನೆಯ ಬಾಗಿಲನ್ನು ಕಾದುಕೊಂಡಿದ್ದು ಅಡಿಗಡಿಗೆ ಮಂತ್ರಿಗಳ ಕಾಲು ಹಿಡಿದು ಒಂದಿಷ್ಟು ಅಧಿಕಾರ ಪಡೆದವರು ಮಾಡುವುದೇನು ಗೊತ್ತೆ? ಜನರನ್ನು ಶೋಷಿಸುವುದು. ಕೊನೆಯಲ್ಲಿ ಅವರು ಹೇಳುವುದು 'ಹಿಂದಿನದಿನದಂತಲ್ಲಣ್ಣ ಈಗ' ಆದರೆ ೧೯ನೇ ಶತಮಾನದ ಕೊನೆಯಲ್ಲಿದ್ದ ಗುರುರಾಮವಿಠಲರ ಮಾತು ಅಚ್ಚರಿ ಮೂಡಿಸುವಂತಿದೆ: ಅವರು ಹೇಳ್ತಾರೆ.

**'ಭೂಮಿ ಒಕ್ಕಲ ಮಗನದು, ಭೂಮಿ ಅಮ್ಮನ ಮಕ್ಕಳು ಒಕ್ಕಲಿಗೆ**
**ಭೂಮಿ ಬೆಳೆದರೆ ಅರ್ಥವನ್ನು ಬ್ರಾಹ್ಮಣರಿಗೇಕೇ ಕೊಡಬೇಕು'**

ಮುಂದೆ ಕೇಳಿ

ಹಾರವರು ಹೊಲ ಮಾಡಬಾರದು. ಮಾಡಿದರೆ ಪಾಪ ಅಂತಾರಲ್ಲವೇ ಹಾಗಿದ್ದರೆ 'ಮಾರಲಿ ನಮಗೆ ಮೂರಕ್ಕೆ ನಾಲ್ಕಕ್ಕೂ' ಟೆನನ್ಸಿ ಕಾಯದೆಯಿಂದ ಹಾಗೇ ಆಗಿದೆ. ಆದರೆ ಅದಕ್ಕೂ ನೂರು ವರ್ಷದ ಹಿಂದೆ ಬ್ರಾಹ್ಮಣನೇ ಆದ ಒಬ್ಬ ಹರಿದಾಸರು ಈ ಮುಂಚೆ ಹೇಳಿದ್ದಾರೆಂಬುದು ಮಹತ್ವದ್ದು.



ಡಾ॥ ಎಂ.ಜಿ. ನಾಗರಾಜ್*

## ೨೦ನೇ ಶತಮಾನದ ಮೊದಲ ದಶಕಗಳ ಎರಡು ಕೃತಿಗಳು

# ಗುತ್ತಲಿನ 'ಮತಾದರ್ಶ' ಮತ್ತು ಕೊಡಗಿನ 'ಪಟ್ಟೋಲೆ ಪಳಮೆ'

೨೦ನೇ ಶತಮಾನದ ಆರಂಭದ ಬದುಕು, ಸಾಮಾಜಿಕ, ರಾಜಕೀಯ ಜೀವನದಲ್ಲಿ, ಸ್ವಾತಂತ್ರ್ಯದ ಬಯಕೆಗಳು ಪುಟಿಯುತ್ತಿದ್ದ ಕಾಲದ್ದು. ಆಗ ಬ್ರಿಟಿಷ್ ಆಳರಸರ ಆಳ್ವಿಕೆ ಎದುರು ಹೋರಾಡುವ ನಾಯಕ ವರ್ಗ ಹುಟ್ಟಿಕೊಂಡ ಕಾಲ. ಸಾಹಿತ್ಯಕವಾಗಿ ಇಂಗ್ಲಿಷಿನ ಅನುಕರಣೆ ವಿಪುಲವಾಗಿತ್ತು. ಆದರೆ ಸ್ಥಳೀಯ ಬರಹಗಾರರು ಸಾಂಸ್ಕೃತಿಕ ನೆಲೆಯಲ್ಲಿ ತಮ್ಮ ಕೃತಿರಚನಾ ಕಾರ್ಯಕ್ಕೆ ಪರಂಪರೆಯ ವಿಷಯವನ್ನು ಆರಿಸಿಕೊಂಡರು. ಕಾರಣ, ಜನಜೀವನದಲ್ಲಿ ಮಾತಾಪಿತೃಗಳು ಹಾಗೂ ಜನಾಂಗದ ಕುರಿತ ಭಕ್ತಿಗೌರವವನ್ನು ವ್ಯಕ್ತಗೊಳಿಸಲು ಅದು ಅನುಕೂಲವಾಗಿತ್ತು. ಈ ನಿಟ್ಟಿನಲ್ಲಿ ಮಂಡ್ಯ ಜಿಲ್ಲೆ ಗುತ್ತಲು ಮುದ್ದಪ್ಪನವರ 'ಮತಾದರ್ಶ' ಕೃತಿ ಹಾಗೂ ಕೊಡಗಿನ ನಡಿಕೇರಿಯಂಡ ಚಿಣ್ಣಪ್ಪನವರ 'ಪಟ್ಟೋಲೆ ಪಳಮೆ' ಗಮನಕ್ಕೆ ಬರುತ್ತವೆ.

### ಮತಾದರ್ಶ

ಗುತ್ತಲು ಅರ್ಕೇಶ್ವರಸ್ವಾಮಿ ಮುದ್ದಪ್ಪನವರ ಮನೆದೇವರು. ಆ ಶಿವ ದೇಗುಲದ ಶುದ್ಧ ಶೈವಾರ್ಚಕರಾಗಿದ್ದ ದೊಡ್ಡದೇವಲಿಂಗಯ್ಯನವರ ೨ನೆಯ ಮಗ ಮುದ್ದಪ್ಪನವರು ೧೮೭೦ರಲ್ಲಿ ಜನಿಸಿದರು. ತಮಿಳಿನಲ್ಲಿ 'ಶ್ರೀಮಾನ್ ಕುಡಿ ವಕ್ಕಲಿಗರ ಮತಧರ್ಮಶಾಸ್ತ್ರಂ' ಎಂಬ ಪುಸ್ತಕವನ್ನು ಬರೆದ ಮುದ್ದಪ್ಪನವರಿಗೆ, ತಮ್ಮಡಿಗಳ ಕುರಿತು ಪುಸ್ತಕ ಬರೆಯಲು ಪ್ರೇರಣೆ ದೊರಕಿರಬೇಕು. ಜಿ.ಪಿ. ಶಿವಲಿಂಗಯ್ಯನವರೇನೋ ೧೯೧೨ರಲ್ಲಿ ಪ್ರಕಟವಾದ ನಂಜುಂಡಶಾಸ್ತ್ರಿಗಳ 'ಶ್ರೀ ಶಿವ ಸಹಸ್ರಭಾಷ್ಯ ಸಂಗ್ರಹ' ಗ್ರಂಥದ ಆಧಾರವನ್ನು ಬಳಸಿಕೊಂಡು ಮುದ್ದಪ್ಪನವರು 'ಮತಾದರ್ಶ'ವನ್ನು ಬರೆದರೆಂದು ಅಭಿಪ್ರಾಯಪಟ್ಟಿದ್ದಾರೆ. 'ಮತಾದರ್ಶ'ದ ಮುಖಪುಟದಲ್ಲಿ ಯಾವರೋ **"ಶ್ರೀಮನ್ ಮೈಸೂರು ಸಂಸ್ಥಾನದಲ್ಲಿರತಕ್ಕ ತಮ್ಮಡಿಗಳೆಂಬ ಶುದ್ಧ ಶೈವ ಶಿವಾರ್ಚಕ ಬ್ರಾಹ್ಮಣ** 'ಮತಾದರ್ಶ'ವೆಂಬ ಪುಸ್ತಕವು" ಎಂದು ಮುದ್ದಪ್ಪನವರು ಪ್ರಕಟಿಸಿದ್ದಾರೆ. ಸಂಕಲಗೆರೆ ಶಿವಾರ್ಚಕ ಸುಬ್ಬಣ್ಣ ಇದಕ್ಕೆ ನೆರವಾಗಿ ನಿಧಿ ಸಂಗ್ರಹ ಮಾಡಿಕೊಟ್ಟಿದ್ದಾರೆ.

॥ ಓಂ ॥
ಶ್ರೀ ದಕ್ಷಿಣಾಮೂರ್ತಿ ಗುರುಪರಬ್ರಹ್ಮಣೇನಮಃ
ಶ್ರೀ ಅರ್ಕೇಶ್ವರಪ್ರಸನ್ನ.

ಶ್ರೀಮನ್ ಮೈಸೂರು ಸಂಸ್ಥಾನದಲ್ಲಿರತಕ್ಕ
ತಮ್ಮಡಿಗಳೆಂಬ
ಶುದ್ಧಶೈವ ಶಿವಾರ್ಚಕ ಬ್ರಾಹ್ಮಣ
ಮತಾದರ್ಶ
ವೆಂಬ ಪುಸ್ತಕವು

ಚನ್ನಪಟ್ಣ ತಾ॥ ಸಂಕಲಗೆರೆ॥ ಶಿವಾರ್ಚಕರು ॥ ವೇ॥ ಸುಬ್ಬಣ್ಣ
ನವರ ಪ್ರೋತ್ಸಾಹದಿಂದ
ಮಂಡ್ಯ॥ ತಾ॥ ಗುತ್ತಲು॥ ಶಿವಾರ್ಚಕ॥ ವೇ॥ ಮುದ್ದಪ್ಪನವರ.
ಪಂಡಿತರಿಂದ ಪರಿಶೋಧಿಸಲ್ಪಟ್ಟ

ಪ್ರಥಮ ಮುದ್ರಣ ೧೦೦೦ ಪ್ರತಿಗಳು.

ಬೆಂಗಳೂರು.
ಶ್ರೀಗೌರೀನಿಲಯ ಮುದ್ರಾಕ್ಷರಶಾಲೆಯಲ್ಲಿ ಮುದ್ರಿತವಾಗಿ
ಪ್ರಚುರಿಸಲ್ಪಟ್ಟಿತು.

೧೯೧೫

ಗೌರ್ನಮೆಂಟಿನಲ್ಲಿ ರಿಜಿಸ್ಟರ್ಡ್ ಕಾಪಿರೈಟು ಪಡೆದಿಸಲ್ಪಟ್ಟಿರುತ್ತೆ.

ಈ ಕೃತಿ ಮಂಡ್ಯ ತಾಲೂಕು ಗುತ್ತಲಿನ ಮನೆದೇವರು ಅರ್ಕೇಶ್ವರ ಸ್ವಾಮಿ ದೇಗುಲದ ಶುದ್ಧ ಶೈವಾರ್ಚಕ ॥ ವೇ ॥ ಮುದ್ದಪ್ಪನವರು ೧೯೧೫ರಲ್ಲಿ ಪ್ರಕಟಿಸಿದ ಜನಾಂಗೀಯ ಇತಿಹಾಸದ ಕೃತಿಯಾಗಿದೆ ; ಸೈದ್ಧಾಂತಿಕ ಬೆನ್ನು ಬೆಂಬಲವನ್ನೂ ಮುಂದಿಟ್ಟಿದೆ. ಶುದ್ಧ ಶಿವಾರ್ಚಕರೆನಿಸಿದ

* 'ಅನರ್ಘ್ಯ' ಶ್ರೀ ಜನನಿ ಕೃಪ, ೨೨೧, ೭ನೇ ಕ್ರಾಸ್, ೫ನೇ ಬ್ಲಾಕ್, ರಾಜಾಜಿನಗರ, ಬೆಂಗಳೂರು–೧೦.

ತಮ್ಮಡಿಗಳ ಇತಿಹಾಸವನ್ನು ಪೌರಾಣಿಕ ಆರೋಪದಲ್ಲಿ ಮಂಡಿಸಿದ್ದರೂ ಅವರ ಅಸ್ತಿತ್ವದ ನೆಲೆಯನ್ನು ಶಾಸ್ತ್ರೀಯವಾಗಿ ೧೧ನೇ ಶತಮಾನದಿಂದಲೇ ಹೆಕ್ಕುವ ಪ್ರೇರಣೆಯನ್ನು ಅದು ನೀಡುತ್ತದೆ. ಅವರ ಜೀವನ ಕ್ರಮದ ವಿವಿಧ ಮುಖಗಳನ್ನು ಕೆಳದಿ ಅರಸರ ಕಾಲದವರಿಗಷ್ಟೇ ಅಲ್ಲ ಆಧುನಿಕ ಕಾಲದವರೆಗೂ ಚಾಚಿರುವ ಬಗ್ಗೆ ಹುಡುಕಲೂ ಇದರಿಂದ ಅವಕಾಶವಾಗಿದೆ. ಆ ಜನಾಂಗದ ಪಾರಂಪರಿಕ ಅಸ್ತಿತ್ವಕ್ಕೆ ಮಾಡಿದ ಜಾಗೃತ ಪ್ರಯತ್ನಗಳನ್ನೂ ಅರಿಯಬೇಕಾಗುತ್ತದೆ. ಅದರಿಂದ ಜಾನಪದ ಹಾಗೂ ದೇವಾರಾಧನೆಗಳ ಸಾಂಸ್ಕೃತಿಕ ಚಾಲನೆಯಲ್ಲಿ ಈ ಜನಾಂಗ ಪಾಲ್ಗೊಂಡ ಬಗೆಯನ್ನು ಅರಿವಿಗೆಳಸಿಕೊಳ್ಳಲು ಅನುಕೂಲಿಸುತ್ತದೆ. ಪೌರಾಣಿಕ ಕಥೆಗಳ ನಡುವೆಯೂ ಇತಿಹಾಸದ ಎಳೆಗಳನ್ನು ಅಲ್ಲಲ್ಲಿ ನೇಯ್ದುಕೊಂಡು ಹೋಗಿರುವುದು ಈ ಕೃತಿಯ ವೈಶಿಷ್ಟ್ಯವಾಗಿದೆ. ಹಾಗೂ ಸಾಹಿತ್ಯಕ ಆಕರಗಳ ಮೂಲಕ ಸಾಂಸ್ಕೃತಿಕ ನೆಲೆಯನ್ನು ದೈವನಿಷ್ಠವಾಗಿ, ಜನಾಂಗೀಯ ನಿಷ್ಠವಾಗಿ ಮಂಡಿಸಿರುವ ಕೃತಿಯಾಗಿದೆ. ಮುಖ್ಯವಾಗಿ ಶುದ್ಧ ಶೈವಾರ್ಚಕರಾದ ತಮ್ಮಡಿಗಳ ಜಾನಪದ, ಪೌರಾಣಿಕ, ಸಾಂಸ್ಕೃತಿಕ ಬದುಕಿನ ಸಂಯುಕ್ತತೆಯನ್ನೂ ಮಂಡಿಸುವ ಕೃತಿ ಇದಾಗಿದೆ.

ಕೃತಿಯು ಆರಂಭದಲ್ಲಿ ಮೋಕ್ಷ ಸಾಧನೆಗೆ ಈಶ್ವರನಲ್ಲಿ ಭಕ್ತಿ ಶ್ರದ್ಧೆಗಳು ಮುಖ್ಯ ಎಂದಿದ್ದಾರೆ ಮುದ್ದಪ್ಪನವರು. ಮನಸ್ಸಿಗೆ ಅನುಕೂಲವಾದ ಪ್ರಯೋಜನಗಳಲ್ಲಿ ಸುಖಾನುಭವ ಸ್ವರೂಪವಾದ ಇಚ್ಛಾಶಕ್ತಿಯೇ ಭಕ್ತಿ ಎಂದಿದ್ದಾರೆ. ದೇವಪೂಜೆಯ ಮಹತ್ವವನ್ನು ವಿವರಿಸಿದ್ದಾರೆ. ಗ್ರಾಮಕ್ಕೊಂದು ಶಿವಾಲಯವಿರಬೇಕು. ಈಶ್ವರಾರಾಧನೆ ಮಾಡುವಂಥ ಜನರಲ್ಲಿರಬೇಕು ಎಂದಿದ್ದಾರೆ. ಮನುಷ್ಯನ ಕುಂಡಲಿನಿ ಶಕ್ತಿಯ ಜಾಗೃತ ಪರಿಣಾಮವನ್ನು ವಿವರಿಸಿದ್ದಾರೆ. ಶಿವಾಗಮಗಳ ಸಾರವನ್ನು ಮುಂದಿರಿಸಿದ್ದಾರೆ. ಹರದತ್ತಾಚಾರ್ಯರು, ಶ್ರೀಕಂಠ ಶಿವಾಚಾರ್ಯರು, ನಾಗನಾಥಾಚಾರ್ಯರು, ಶಂಕರಾ ಚಾರ್ಯರು ಮುಂತಾದ ಪೂರ್ವಾಚಾರ್ಯರುಗಳನ್ನು ನೆನೆದು ಅವರಿಂದ ವಿರಚಿತವಾದ ಶಿವಕ್ರಮಮಣಿದೀಪಿಕಾ ಸಿದ್ಧಾಂತಸೇಖರ ರುದ್ರಭಾಷ್ಯ, ನೀಲಕಂಠ ಭಾಷ್ಯ, ಸ್ಕಾಂದಪುರಾಣಾಂತರ್ಗತ ಸಂಹಿತೆ ಕುರಿತೆಲ್ಲ ಹೇಳಿ ತಮ್ಮ ವ್ಯಾಪಕ ವಿದ್ವತ್ ಅಧ್ಯಯನದ ಕುರಿತು ವಿಜ್ಞಾಪನೆಯಲ್ಲಿ ಮಂಡಿಸಿದ್ದಾರೆ.

ಮುಂದೆ ಕೃತಿಯ ಮುಖ್ಯ ವಿಷಯವು ಅರ್ಕೇಶ್ವರನ ಪ್ರಾರ್ಥನೆಯಿಂದ ಆರಂಭವಾಗುತ್ತದೆ. ದಕ್ಷಿಣಾಮೂರ್ತಿಯ ರೇಖಾಚಿತ್ರವನ್ನು ನೀಡಲಾಗಿದೆ. ಓದುಗರಿಗೆ, ಅದೊಂದು ಭಗವದ್ದರ್ಶನವೆನ್ನಿಸಬೇಕು ಎನ್ನುವುದು ಮುದ್ದಪ್ಪನವರ ಅಭಿಲಾಷೆ.

ವಾತುಲಾಗಮದ ರುದ್ರತತ್ವ, ಶೈವಮಹಾತ್ಮ್ಯೆಯನ್ನು ಈಶ್ವರ–ಷಣ್ಮುಖ ಸಂವಾದದ ಮೂಲಕ ವಿವರಿಸಲಾಗಿದೆ. ಶೈವದ ವಿಧಗಳನ್ನು ಅನಾದಿಶೈವ, ಆದಿಶೈವ, ಮಹಾಶೈವ, ಅನುಶೈವ, ಅವಾಂತರಶೈವ, ಅಂತ್ಯಶೈವವೆಂದು ಹೇಳಿ ಜನಾಂಗೀಯ ವರ್ಗಗಳನ್ನು ಅನ್ವಯಿಸಿ ಮುಂದಿಡಲಾಗಿದೆ.

ಶಿವನು ಅನಾದಿಶೈವ ; ಶಿವದ್ವಿಜರು ಆದಿಶೈವರು ; ಬ್ರಾಹ್ಮಣರು ಮಹಾಶೈವರು, ಕ್ಷತ್ರಿಯ ವೈಶ್ಯರು ಅನುಶೈವರು, ನಂತರ ಉಳಿದವರು ಅವಾಂತರ ಶೈವರು ಅಂತ್ಯಜಾತಿಗಳು ಅಂತ್ಯಶೈವರೆಂಬ ವಿಂಗಡನೆ ಕುರಿತು ಹೇಳಿದ್ದಾರೆ.

ವಿವಿಧ ಶೈವಲಕ್ಷಣಗಳನ್ನು ಹೇಳುತ್ತ ಶೈವದೀಕ್ಷೆ ಹಾಗೂ ಶುದ್ಧಶೈವದತ್ತ ಕೇಂದ್ರೀಕೃತ ವಿವರಣೆಗೆ ತೊಡಗಿದ್ದಾರೆ. ಕಾರಣ ತಮ್ಮಡಿ ಜನಾಂಗದ ಹುಟ್ಟು, ಬೆಳೆಸು, ವಿಕಾಸದತ್ತ ಅವರ ಗಮನವಿರುವುದೇ ಆಗಿದೆ. ಅದಕ್ಕೆ ಸಾಂಪ್ರದಾಯಿಕ ನೆಲೆಯನ್ನು ಸೂಚಿಸಿದ್ದಾರೆ.

ಶಿವನಲ್ಲಿ ಸದಾ ಧ್ಯಾನಾರ್ಚನೆಗಳಲ್ಲಿ ನಿರತನಾಗಿರುವವ ಶುದ್ಧ ಶೈವ. ಶಿವನಿಗೆ ಐದು ಮುಖಗಳ ಆರೋಪವಿದೆ. ಶಿವನ ನಾಲ್ದಿಸೆಯ ಮುಖಗಳ ಮಧ್ಯೆ ಮೇಲ್ಭಾಗದಲ್ಲಿರುವ ಈಶಾನಮುಖದಿಂದ ಶುದ್ಧಶೈವನು ಸೃಷ್ಟಿಸಲ್ಪಟ್ಟವನಂತೆ. ಅದಾಗಿ ಬ್ರಹ್ಮಸೃಷ್ಟಿಗೂ ಮೊದಲೇ ಜನಿಸಿದವನಂತೆ. ಇದು ಶುದ್ಧಶೈವವು ಪ್ರಾಚೀನವೆಂದು ಹೇಳಲು ಸೂಚಿಸಿರುವ ಪೌರಾಣಿಕ ಸಂಕೇತ.

ಈ ಶುದ್ಧಶೈವನಿಗೆ ತಂಮಿಾಡ್ಯ, ದೇಶಿಕ, ಶಿವದೀಕ್ಷಿತ ಇತ್ಯಾದಿ ಹೆಸರುಗಳಿದ್ದು ಶಿವದೀಕ್ಷೆಯೇ ಇವನಿಗೆ ಯುಕ್ತವಿದ್ದು ಅನ್ಯದೀಕ್ಷೆ ಇವನಿಗಿಲ್ಲ.

**ತಂಮಿಾಡ್ಯ ದೇಶಿಕಂತ್ಯುಕ್ತಾ ವಿಪ್ರಾದ್ಯಾ ಶಿವದೀಕ್ಷಿತಾಃ ।**
**ಶಿವದೀಕ್ಷಾ ಪ್ರಯುಕ್ತೋಯ ಅನ್ಯದೀಕ್ಷಾ ನ ವಿದ್ಯತೇ॥**

ಶುದ್ಧಶೈವನಿಗೆ ಶಿಖೆಯಲ್ಲಿ ಶಿವಲಿಂಗಧಾರಣೆ ಇದೆ. ಇವನಿಗೆ ಆತ್ಮಾರ್ಥ ಪೂಜೆ, ಪರಾರ್ಥ ಪೂಜೆ ಎಂದು ಎರಡು ಪ್ರಕಾರದ ಪೂಜೆಯ ಅನ್ವಯವಿದೆ. ಗುರುವಿನಿಂದ ಕೊಡಲ್ಪಟ್ಟ ಲಿಂಗದಲ್ಲಿ ಅಥವ ಸ್ಥಂಡಿಲದಲ್ಲಿ (ಯಜ್ಞವೇದಿಕೆ) ಪೂಜಿಸುವುದು ಆತ್ಮಾರ್ಥದ್ದು; ದೇವದಾನವ ಮಾನವಾದಿಗಳಿಂದ ಗ್ರಾಮ, ಗಿರಿ ಗುಹೆ ಇತ್ಯಾದಿ ಸುಸ್ಥಳಗಳಲ್ಲಿ ಪ್ರತಿಷ್ಠಿಸಲ್ಪಟ್ಟ ಲಿಂಗದಲ್ಲಿ ಮಾಡುವ ಪೂಜೆ ಪರಾರ್ಥದ್ದು ಎಂದಿದ್ದಾರೆ. ಇಲ್ಲಿ ಗಮನಾರ್ಹ ವಿಷಯವೆಂದರೆ ಶಿವಪ್ರತಿಷ್ಠೆಗೆ ಸರ್ವಜೀವಿಗಳಿಗೆ ಅವಕಾಶವಿದೆ. ಕಾರಣ ಅವರ ಯಾವುದೇ ದೋಷ ನಿವಾರಣೆ ಅದರಿಂದ ಆಗುತ್ತದೆ ಎಂಬ

ಪರಿಕಲ್ಪನೆ ಇಲ್ಲಿದೆ. ಈ ಶುದ್ಧಶೈವನು ನಾಲ್ಕು ವೇದಗಳನ್ನು ತಿಳಿದಿರಬಹುದು. ಶಿವದೀಕ್ಷೆ ಇಲ್ಲದಿದ್ದರೆ ಶಿವಲಿಂಗವನ್ನು ಇವನ್ನು ಮುಟ್ಟುವಂತಿಲ್ಲ ಎಂಬ ತೀವ್ರ ನೇಮ ಇವನಿಗಿದೆ. ಈ ಶಿವಲಿಂಗ ಆಗಲೇ ಇಷ್ಟಲಿಂಗವೆನಿಸುತ್ತದೆ.

ಸೋಮಶಂಭು ಆಚಾರ್ಯನ ರೀತ್ಯಾ, ಇಷ್ಟಲಿಂಗವು ಗೋಚರವಿಲ್ಲದಂತೆ ಬಿದ್ದುಹೋದರೆ ವಿಧಿಪೂರ್ವಕ ಆಚರಣೆಗಳನ್ನು ಮಾಡಿ ಮತ್ತೊಂದು ಲಿಂಗಧಾರಣೆ ಮಾಡಿ ಪರಿಶುದ್ಧನಾಗಬೇಕು, ಎನ್ನಲಾಗಿದೆ. ಇದು ಶುದ್ಧಶೈವರ ಆಚಾರ. ಹೀಗೆ ಶುದ್ಧಶೈವವನ್ನು ವಿವರಿಸಿದ ಮೇಲೆ, ವೀರಾಗಮ ದೀಕ್ಷೆಯಲ್ಲಿ ಹುಟ್ಟಿದ ಕಾರಣ, ವೀರತಂತ್ರಸಮೋದ್ಭವವೆಂದು ವೀರಶೈವವನ್ನು ವರ್ಣಿಸಲಾಗಿದೆ. ಈಶ್ವರ-ಷಣ್ಮುಖ ಸಂವಾದದಲ್ಲಿ ಈ ವಿಷಯಗಳು ಪ್ರಸ್ತುತವಾದರೆ, ಈಶ್ವರ-ಪಾರ್ವತಿ ಸಂವಾದದಲ್ಲಿ **'ಪರಮರಹಸ್ಯ'**, ಕಾಮಿಕಾಗಮ, ವೀರಾಗಮ, ರೌರವಾಗಮ ಇತ್ಯಾದಿ ಆಗಮತಂತ್ರ ವಿಚಾರಗಳನ್ನು ಕೃತಿಯಲ್ಲಿ ಮಂಡಿಸಲಾಗಿದೆ. ಆಚಾರ್ಯ ಲಕ್ಷಣಗಳನ್ನು, ನಿತ್ಯಾರ್ಚನ ವಿಧಾನಗಳನ್ನು ತಿಳಿಸಲಾಗಿದೆ. 'ಪಾಶುಪತ ವ್ರತ'ದ ಮಹಾತ್ಮ್ಯವನ್ನು ಕುರಿತು ವಿವರಿಸಲಾಗಿದೆ. ಈ ವಿಷಯಗಳ ನಂತರ ಋಗ್ವೇದದ '*ಅಯಂ ಮೇ ಹಸ್ತೋ ಭಗವಾನಯಂ ಮೇ ಭಗವತ್ತರಃ ॥ ಅಯಂ ಮೇ ವಿಶ್ವಭೇಷಜೋ ಅಯಂ ಶಿವಾಭಿಮರ್ಶನಃ ॥ ಅಯಂ ಮಾತಾ ಅಯಂ ಪಿತಾ ಅಯಂ ಜೀವಾತುರಾಗಮತ್ । ಅಯಂ ಹಸ್ತೋ ಭಗವತ್ತರಃ ಪೂಜ್ಯತರಸ್ಮೃತಃ ॥ . . ಕಿಂತು ಸ್ವಹಸ್ತ ಮಧ್ಯಸ್ಥ ಲಿಂಗಮೂರ್ತಯೇ ಮನೋಹರಂ ॥*' ಎಂದೆಲ್ಲ ಕರಪೀಠಾರ್ಚನೆಯ ದೇವನ ಕುರಿತು ಹೇಳಿರುವುದನ್ನು ಹಾಗೂ ಬೋಧಾಯನ ಮಹರ್ಷಿಯು ಮಂತ್ರ ವಿನಿಯೋಗ ಮಾಡಿರುವ ಬಗ್ಗೆಯೂ ತಿಳಿಸಲಾಗಿದೆ. ಶಿವಪೂಜಾರ್ಹವಾದ ಹಸ್ತವು ಭಗವತ್ತರವಾದುದು ಎಂದಿರುವ ಹರದತ್ತಾಚಾರ್ಯರ ಶ್ರುತಿ ಸೂಕ್ತಮಾಲಿಕೆಯನ್ನು ಉದ್ಧೃತ ಮಾಡಲಾಗಿದೆ. ಹೀಗೆ ಮುದ್ದಪ್ಪನವರು ತಮ್ಮ ಸೈದ್ಧಾಂತಿಕ ಕೃತಿಗಳ ಅಧ್ಯಯನದ ವಿಸ್ತಾರವನ್ನು ಮಂಡಿಸಿದ ಮೇಲೆ ತಮ್ಮಡಿಗಳ ಇತಿಹಾಸದ ರೇಖೆಗಳನ್ನು ಸಾಂಪ್ರದಾಯಿಕ ಸ್ಪರ್ಶದೊಡನೆ ಗಮನಿಸಿರುವುದು ಕಾಣುತ್ತದೆ.

ತಮ್ಮಡಿಗಳೆಂಬ ನಾಮವು ಜಾತಿಸೂಚಕವಲ್ಲ ; ವೃತ್ತಿ ಸೂಚಕ. ವೃತ್ತಿ ಎಂದರೆ ದೇವಾಲಯಗಳಲ್ಲಿ ಶೈವಾಗಮೋಕ್ತವಾಗಿ ಆವಾಹನಾದಿ ಪ್ರತಿಷ್ಠೆಯೂ; ಪ್ರತಿಷ್ಠಾದ್ಯುತ್ಸವವೂ ವುತ್ಸವಾಃ ಪ್ರಾಯಶ್ಚಿತ್ತಗಳಲ್ಲಿ ಶಿವಲಿಂಗದ ಮುಡಿಯನ್ನು ಈ ತನುಕರಗಳಿಂದ ನಿರ್ಮಾಲ್ಯ ವಿಸರ್ಜನಾದಿ ಷೋಡಶೋಪಚಾರಗಳಲ್ಲಿಯೂ ಸ್ಪರ್ಶಿಸುವುದೇ ವೃತ್ತಿ. ಈ ವೃತ್ತಿಯಿಂದಲೇ **ತಮ್ಮುಡಿ** ಎಂಬ ನಾಮವು ಲಭ್ಯವಾಗಿದೆ 'ಮುಖೇಮಂತ್ರಃ ಹೃದೇ ಧ್ಯಾನಮಸ್ತಕೇ ಲಿಂಗಧಾರಣೇ' ಎಂಬ ಆಗಮ ಪ್ರಮಾಣದಂತೆ ಈತನು ಮುಡಿಯಲ್ಲಿಯೇ ಇಷ್ಟಲಿಂಗವನ್ನು ಧರಿಸಬೇಕೆಂಬ ಪ್ರಮಾಣಯುಕ್ತನಾಗಿರುವುದರಿಂದ **ತಮ್ಮುಡಿ** ಎಂದು ಹೇಳಲ್ಪಟ್ಟಿದೆ. ವಾತುಲಾಗಮದ ರೀತ್ಯಾ ಇವನು ಈಶಾನವದನಸ್ಥಾತ-ಶಿವನ ಶಿರಸ್ಥಾನವಾದ ಶಿವನ ಈಶಾನ ಮುಖದಿಂದ ಈತನ ಉತ್ಪತ್ತಿಯಾಗಿರುವ ಕಾರಣ 'ತಮ್ಮುಡಿ' ಎಂಬ ಹೆಸರು ಬಂದಿದೆ. ಇವನು ರುದ್ರಾಂಶಜ. ಶ್ರುತಿಗಳೂ ಹೇಳಿರುವಂತೆ ಕಾಶಿಯನ್ನು ಧರಿಸಿಕೊಂಡು ರುದ್ರರೂಪದಿಂದ ಅಗ್ನಿಕುಂಡದಲ್ಲಿ ಪ್ರವೇಶಿಸಲು ಇವನು ರುದ್ರಾಂಶಜನಾಗಿ ಶ್ರೇಷ್ಠನಾಗಿದ್ದಾನೆ. ಶಾಸ್ತ್ರೀಯವಾಗಿ ಅನಾದಿ ಕಾಲದಿಂದಲೂ ಕಾಸೆಯನ್ನು ಧರಿಸುವುದು ಇವನ ನಿತ್ಯವೃತ್ತಿ.

ತಮ್ಮುಡಿಗಳ ವಂಶಸ್ಥರು ಕಾಶೆಯನ್ನು ಧರಿಸಿಕೊಂಡು ರಣರಣ ಜ್ವಲಿಸುವ ಅಗ್ನಿಕುಂಡಗಳಲ್ಲಿ ಮಾಡುವ ಪ್ರವೇಶ ಅವರ ಶಿವನಿಷ್ಠೆ ಸ್ಥೈರ್ಯಗಳ ಪ್ರತೀಕ. ಅದಕ್ಕಾಗಿ ಆಳಿದ ಮಹಾಸ್ವಾಮಿಗಳಾದ ದೇವರಾಜವಡೆಯರ ದಿವಸಗಳಲ್ಲಿಯೂ, ಕೃಷ್ಣರಾಜವಡೆಯರು, ನರಸರಾಜಒಡೆಯರ ದಿವಸಗಳಲ್ಲಿಯೂ ಇವರಿಗೆ ಬಿರುದುಗಳನ್ನು ಶಾಸನಗಳನ್ನು ಸ್ಥಾಪಿಸಿ ದಯಪಾಲಿಸಿರುವುದು ಪ್ರಸಿದ್ಧವಿರುವ ಸಂಗತಿ – ಹೀಗೆಲ್ಲ ತಮ್ಮಡಿ ಜನಾಂಗದ ಬದುಕು ಹಾಗೂ ರಾಜಮಾನ್ಯತೆಯನ್ನು ಸೂಚಿಸಿದ್ದಾರೆ. ಇಲ್ಲಿ ಬಹುಶಃ ೧೭ನೇ ಶತಮಾನದ ಮೈಸೂರು ದೊರೆಗಳಾಗಿದ್ದ ದೊಡ್ಡದೇವರಾಜ ಒಡೆಯರ ಕಾಲದಿಂದ ತಮ್ಮುಡಿಗಳಿಗೆ ಒದಗಿದ್ದ ರಾಜಮಾನ್ಯತೆಯ ವಿಷಯವನ್ನು ಪ್ರಸ್ತಾಪಿಸಿದಂತಿದೆ.

ವೀರಭದ್ರ ಸಂಬಂಧವನ್ನು ಅನ್ವಯ ಮಾಡಿ ವಿಷಯವನ್ನು ಮುಂದಿರಿಸಿದ್ದಾರೆ.

> **ಲಿಂಗಾಂಕಿತ ಜಟಾಧರಃ । ರಕ್ತ ಕಚ್ಛಪುತನ್ಯಸ್ತ**
> **ಚ್ಛುರಿಕಾಢ್ಯಕಟೀತಟಃ**
> **ಪೋಪಣೋದ್ಭಾಸಿಜಂಗಾಢ್ಯಃ ಪಾದುಕಾದ್ವಯ ಶೋಭಿತಃ॥**
> **ದಿವ್ಯರತ್ನ ಕಿರೀಟಾಢ್ಯೋ ಮಾಣಿಕ್ಯಾಭರಣಾಜ್ವಲಃ**
> ...............................................................................
> **ಕೃತಾಟ್ಟಹಾಸೋ ನಾಸೋ ದ್ಯೆದ್ವೀತಿ ಹೋತ್ರೋ**
> **ಮಹಾಹನುಃ ॥**
> **ರುದ್ರಾಕ್ಷ ಮಾಲಿಕಾಧಾರಿ ಭಸ್ಮಭ್ರೂಕುಟಿ ಭೀಷಣ ॥**
> **ಚಂದ್ರಹಾಸೀ ತ್ರಿಶೂಲಂಚ ಚಕ್ರಂ ಟಂಕ ಶರಂಗ ಧಾಂ**
> **ಖಡ್ಗ ತೋಮರ ಶಕ್ತಿಶ್ಚ ಹಲಾಂಕುಶವರಶ್ಚಧಾನ್ ॥**
> **ವಜ್ರಂ ಪ್ರಾಸಂಶತಗ್ನಿಂಚ ಪಟ್ಟಸಾ ಬಿಂಡಿವಾಳಕಂ**
> **ದೌಂಷ್ಟ್ರಾನ್ ಚಕ್ರಕಚಂ ಕುಂತಂ ದಧಾನೋ ದಕ್ಷಿಣೇ ಕರೈಃ**
> **ವಾಮೇ ಖೇಟಂ ಚಡಮುರಂ ಶಂಕಚಾಪಂಬ್ರುಗಂಕುಶಾ॥**

**ಘಂಟಾಪಾಶಂ ಚ ಸಂದಂ ಶಂಭೂಶುಂಡಿಂ ಮುದ್ಗರಿತತಃ॥**
**ವರಿಶುಂವೇಕ್ರಂ ಚಪಲಕಂ ಕಾಪಾಲಂಚ ಕಟಾರಿಕಾಂ**
**ವರಿಘಂ ಮುಸಲಂ ಯಂತ್ರಂ ದಕ್ಷಮುಂಡಂ ಕರೈರ್ವಹನ್**
**ದಕ್ಷಾಧ್ವರ ಹರೋವೀರ ಸರ್ವದೇವ ಭಯಂಕರಃ**
**ಭದ್ರಕಾಳೀ ಸಮಾಯುಕ್ತೋ ವೀರಭದ್ರೋ ವಿರಾಜಿತೋಃ**

–ಎಂಬುದಾಗಿ ಸ್ಕಾಂದಪುರಾಣದ ದಕ್ಷಕಾಂಡದಲ್ಲಿದೆ. ವೀರಭದ್ರಮೂರ್ತಿಯ ಧ್ಯಾನದಲ್ಲಿ 'ಲಿಂಗಾಂಕಿತ ಜಟಾಧರಃ' ಎಂಬುದಕ್ಕೆ **ವೀರಭದ್ರ ಮೂರ್ತಿ**ಗೂ ಈ ತಮ್ಮಡಿ ಎಂಬ ಆಚಾರ್ಯನಿಗೂ ಲಿಂಗಧಾರಣ ಸ್ಥಾನವು ಏಕಸ್ಥಾನ ವಾಗಿರುವುದೇ ರುದ್ರಾಂಶಜನೆನ್ನುವುದಕ್ಕೆ ಮುಖ್ಯ ಪ್ರಮಾಣ ವಾಗಿರುತ್ತದೆ.

ಕ್ರಿಯಾಸಾರದ ತೃತಿಯೋಪದೇಶದಲ್ಲಿ :

**'ಪೂಜಾಂಕೃತ್ವಾಧ ತಲ್ಲಿಂಗಂ ಶಿರಸಾಧಾರಯೇತ್ಸದಾ'**
**ಚತುರ್ದೇಶೋಪದೇಶದಲ್ಲಿ**
**ಸ್ವಾಭಿಮತೇ ಲಿಂಗಾ ದೌ ಆವಾಹಿತೇ**
**ಸದಾಶಿವ ವಿಗ್ರಹೇ ಪೂಜಾರ್ಥಮಭಿವ್ಯಕ್ತಿಂ**
**ಪ್ರಾರ್ಥಯಾಮಾನಸ್ಯ**
**ಈಶಾನವಕ್ತ್ರಸ್ಯ ಪೂಜಕಸ್ಯ ಅನುಗ್ರಹಾರ್ಥಂ ಶಿವಾತ್ಮನಃ**

–ಎಂದೆಲ್ಲ ಹೇಳುತ್ತ ತಮ್ಮಡಿಯು ರುದ್ರಾಂಶಜನೆಂದು ಹೇಳಲಾಗಿದೆ. ವಾತುಲಾಗಮದಲ್ಲಿ ಈಶಾನದೇವ ಮಿಾಢ್ಯ, ತಂಮಿಾಢ್ಯನೆಂದಿದೆ ; ಶಿವಗೀತೆಯಲ್ಲಿ ತಂದೇವಮಿಾಢ್ಯ ನೆಂದಿದೆ; ಪೂರ್ವಮಿಾಮಾಂಸೆಯಲ್ಲಿ ದೇವಕಾಮನೆಂದಿದೆ. ಬ್ರಹ್ಮವೈವರ್ತದಲ್ಲಿ ವರದಮಿಾಢ್ಯನೆಂದಿದೆ, ತಮ್ಮಡಿ ಎಂದಿದೆ. ರುದ್ರಭಾರತ, ಕಾಮಿಕಾದ್ಯಾಗಮಗಳಲ್ಲಿ ಆಚಾರ್ಯ, ಅರ್ಚಕ, ಸ್ಥಾಪಕ, ಸಾಧಕ, ವಾಚಕ, ದೀಕ್ಷಿತ, ದೇಶಿಕ, ಶಿವಾರಾಧ್ಯ, ಶಿವದ್ವಿಜ, ಗುರು, ಪೂಜಕ ಇತ್ಯಾದಿ ಹೆಸರುಗಳು ಅವನಿಗಿವೆ. ಸೂತ್ರಕಾರ ಬೋಧಾಯನ ಮಹರ್ಷಿಗಳು ಅವನನ್ನು ಪೂಜಾರ್ಹನೆಂದಿದ್ದಾರೆ. ಮಹಾಭಾರತದ ಅರಣ್ಯ ಪರ್ವದಲ್ಲಿ ಬರುವಂತೆ ಇಂದ್ರಕೀಲ ಪರ್ವತದಲ್ಲಿ ತಪಸ್ಸು ಮಾಡುತ್ತಿದ್ದ ಅರ್ಜುನನು ಕ್ಷತ್ರಿಯನಾಗಿದ್ದರೂ 'ತಮ್ಮಡಿ' ಎಂದು ಅವನನ್ನು ಸಂಬೋಧಿಸಿ ಹೇಳಿದೆ.

ಈ ಪದ ವೃತ್ತಿ ಸೂಚಕವಾದರೂ, **'ತಾಂ ॥ ಮಡಿ ॥ ತಮ್ಮಡಿ'** ಅಥವಾ **'ತಮ್ಮ ॥ ಅಡಿ ॥ ತಮ್ಮಡಿ'**ಯೆಂದೂ ಅನ್ವಯವಾಗುತ್ತದೆ. ತಾಂ – ತಾನು, ಮಡಿ–ನಿರ್ಮಲ ದೇಹನೆಂತಲೂ, ಮುಡಿಯಲ್ಲಿ ಧರಿಸಿರುವ ಲಿಂಗಕ್ಕೆ ಅಡಿಯಾಗಿರುತ್ತಾನೆ ಎಂದೂ ಪ್ರತಿಪಾದನೆ ಇದೆ. (*ಕ್ರಿ.ಶ. ೨ನೇ ಶತಮಾನದ ಭಾರಶಿವರಲ್ಲಿಯೂ ಹೀಗೆ ಮುಡಿಯಲ್ಲಿ ಶಿವಲಿಂಗ ಹೊತ್ತು ಹೋಗುವ ಪದ್ಧತಿ ಇತ್ತು. ಅನೇಕ ಶಿವಶಿಲ್ಪಗಳಲ್ಲಿ ಇದು ಕಾಣಬರುತ್ತದೆ*) 'ಶಿವಸಾನ್ನಿಧ್ಯ ಪೂಜಾಯುಗುರೋರಾಚಾರ್ಯ ಸಮ್ಮತಂ' ಎಂಬ ಪ್ರಮಾಣದಿಂದ ಗುರುಭಾವವು ಈತನಿಗೆ ವರ್ತಿಸುವುದರಿಂದ ನಮಸ್ಕಾರಾರ್ಹನಾಗಿರುತ್ತಾನೆ.

ತಮ್ಮಡಿ, ಎಂಬ ಹೆಸರಿನಲ್ಲಿಯ ತಕಾರ, ಮಕಾರ, ಡಕಾರ ಅಕ್ಷರಗಳಿಗೆ ಸಪ್ರಮಾಣ ಗ್ರಂಥಗಳಿವೆ. ಆಯಾಯಾ ಅಕ್ಷರ ಗ್ರಂಥಗಳಿಗೆ ವ್ಯಾಖ್ಯಾನಗಳೂ ಇವೆ. **ತ** ಕಾರದಲ್ಲಿ ತತ್ತ್ವಸ್ವರೂಪ, ಮಂತ್ರಾರ್ಥ ಸ್ವರೂಪವಿದೆ. ಭದ್ರಕಾಳೀ ಶಕ್ತಿಸಹಿತ ತ್ರಾಣಪೂರ್ಣವಾಗಿದೆ ; **ಮ** ಕಾರದಲ್ಲಿ ಮಾತೃಕಾಮಂತ್ರ ಲಭ್ಯವಿದೆ. ಪರಶಿವ ವಿವರ್ತ ರೂಪ ಸಂಪ್ರತಿ ಇದೆ. ಮಾತೃಕಾ ಮಂತ್ರ ಪ್ರಣವಾಕ್ಷರಗಳಿಂದಾಗಿ ಅದು ಮಹಾಮಂತ್ರವೆನಿಸಿದೆ. ಚಿದಾನಂದಾತ್ಮಕನಾದ ಸಶ್ಶಿವನು ಅಲ್ಲಿ ಪ್ರತಿಪ್ರಾದಿತನಾಗಿದ್ದಾನೆ; **ಡ** ಕಾರದಲ್ಲಿ ಮಂತ್ರಾರ್ಥ ಪರಿಜ್ಞಾನದಿಂದಾಗಿ ಮಹಾನಂದ ಒದಗುವಂಥದ್ದಾಗಿದೆ. ಶಬ್ದಭಯವು ನಿವಾರಣೆಯಾಗುತ್ತದೆ. ವೀರಣೀ ಶಕ್ತಿಸಹಿತವಾಗಿ ಅರ್ಧನಾರೀಶ್ವರ ಓಡಮಂತ್ರವು ಕಾರ್ಯವ್ಯಂಜನದಿಂದ ಆನಂದವನ್ನು ತರುತ್ತದೆ, ಸಫಲತೆಯಿಂದ ಮಹಾನಂದವನ್ನು ಕೊಡುತ್ತದೆ– ವಾತುಲಾಗಮದ ಸುದ್ಧಾಖ್ಯತಂತ್ರವು ಷಣ್ಮುಖ ಈಶ್ವರ ಸಂವಾದದಲ್ಲಿ ಹೀಗೆಲ್ಲ ಮಂಡಿಸುವಲ್ಲಿ ಅಕ್ಷರಗ್ರಂಥದ ಆಧಾರ ಕಾಣುತ್ತದೆ. ರುದ್ರಭಾರತ, ಆಗಮಗಳೂ ಇದಕ್ಕೆ ಪ್ರಮಾಣವಾಗಿವೆ ; ಒತ್ತಾಸೆಯಾಗಿ ನಿಂತಿವೆ.

ಹೀಗೆ 'ತಮ್ಮಡಿ' ಶಬ್ದಕ್ಕೆ ಅಕ್ಷರ, ಆಚಾರ, ಅರ್ಥಗಳನ್ನು ಪಾರಂಪರಿಕ ಆಧಾರಗಳ ಮೇಲೆ ವಿವರಿಸಿ ಶಿವಪರಂಪರೆಯ ಪಥವೆಂದು ಮುದ್ದಪ್ಪನವರು ನಿರೂಪಿಸಿರುವುದು ಕಾಣಬರುತ್ತದೆ. ಪ್ರಾಚೀನದಲ್ಲಿ ಶಿರಕ್ಕೆ ಭೂಷಣ ಶಿವಲಿಂಗ; ಅದು ಅಂಗದ ಮೇಲಿರುವ (ನೆತ್ತಿ) ಕಾರಣ ಧರಿಸಿದಾತನೂ ಶುದ್ಧ ಶರೀರಿ ಎಂಬ ಭಾವವಿದ್ದ ಜನವರ್ಗವಿತ್ತು. ಮೇಲೆ ಹೇಳಿದಂತೆ ಭಾರಶಿವರು ಕ್ರಿ.ಶ. ೨ನೆಯ ಶತಮಾನದವರು. ಅವರು ಶಿವಲಿಂಗವನ್ನು ಹೊತ್ತುಕೊಂಡು ತಿರುಗುತ್ತಿದ್ದವರು. (ಶಿವನೂ ಲಿಂಗವನ್ನು ಹೊತ್ತುಕೊಂಡು ಹೋಗುವ ಶಿಲ್ಪಗಳೂ ಕಾಣಬಂದಿವೆ. ಗೌರಿಬಿದನೂರು ತಾ. ಹೊಸೂರು ಬಳಿಯ ಅಲಕಾಪುರಿ ಗ್ರಾಮದ ಚೆನ್ನಸೋಮೇಶ್ವರ ದೇಗುಲದಲ್ಲಿಯೂ ಶಿವಪಾರ್ವತಿಯರ ಬಳಿ ಇಂಥ ಶಿವಲಿಂಗವಿದೆ.) ಹೀಗಾಗಿ ತಮ್ಮಡಿಗೂ ಇಂಥ ಜನಾಂಗದ ಸಂಬಂಧವೂ ಇದ್ದಿರಬೇಕು ಎಂಬ ಸುಳುಹನ್ನು ಕೃತಿಯ ವಿವರಗಳಿಂದ ಹೆಕ್ಕಬಹುದು. ವೀರಭದ್ರ ಆರಾಧನೆ, ಭದ್ರಕಾಳಿ ಆರಾಧನೆ, ಸಪ್ತಮಾತೃಕಾ ಆರಾಧನೆ ಪರಸ್ಪರ ಪೂರಕವಾಗಿ ತಮ್ಮಡಿಗಳಲ್ಲೂ ಸಂಚಲಿಸಿ ಬಂದಿರುವುದು 'ಮತಾದರ್ಶ' ಕೃತಿಯ ಸೋದ್ಧೃತಗಳಿಂದ ತಿಳಿದುಬರುತ್ತದೆ. ಇಂದಿಗೂ ತಮ್ಮಡಿಗಳಲ್ಲಿ, ಅರ್ಚನ, ಪೂಜನ, ಆರಾಧನೆ, ಅರ್ಚಕತ್ವ,





ಶಿವಪೂಜಿತವಾದ ಈ ದೇವತೆಗಳೊಡನೆ ಇದೆ. ಆದಾಗಿ ಇವರಲ್ಲಿ ವೀರಗಾಸಿಗಳು (ಹಲಗೂರು, ಸೋಗಾಲ, ಹಳೇ ಬೂದನೂರು ಇತ್ಯಾದಿ) ತಂಡತಂಡವಾಗಿ ಕರ್ನಾಟಕ ವಿವಿಧ ಭಾಗಗಳಲ್ಲಿ ಕಂಡುಬರುತ್ತಾರೆ. ಆಂಧ್ರವೂ ಇವರಿಂದ ಹೊರತಾಗಿಲ್ಲ. ಮಹಾಕಾವ್ಯಗಳಲ್ಲೂ (ಮಹಾಭಾರತ) ಇವರು ಸೋದ್ಧೃತರೇ ಆಗಿದ್ದಾರೆ. 'ಮತವಾತ್ಸಲ್ಯ ಪಿಶಾಚ' ವಿಲ್ಲದೆ ಸನ್ಮಾರ್ಗಾಚರಣೆ ತಮ್ಮಡಿ ಜನಾಂಗದಲ್ಲಿದೆ ಎಂದಿರುವ ಮುದ್ದಪ್ಪನವರ ಮಾತು ಬಹಳ ಆದರಣೀಯವಾಗಿದೆ. ಶುದ್ಧಶಿವನ ಹೃದಯವುಳ್ಳವರಾದಾಗಲೇ ಶುದ್ಧ ಶಿವಾಚಾರ್ಯರಾಗಲು ಅರ್ಹ ಎಂಬುದು ಅವರ ಮಾತಿನ ಆಕಾಂಕ್ಷೆ ಆಗಿದೆ. ನಾಲ್ವಡಿ ಕೃಷ್ಣರಾಜ ಒಡೆಯರ ಕಾಲದಲ್ಲಿ ಈ ಜನಾಂಗಕ್ಕೆ ಒದಗಿದ ವಿದ್ಯಾ ಸೌಲಭ್ಯದ ಕುರಿತೂ ನೆನೆದಿದ್ದಾರೆ.

ಮುದ್ದಪ್ಪನವರ ಈ ಕೃತಿಯು ಸಾಂಪ್ರದಾಯಿಕ ನೆಲೆಯಲ್ಲಿಯೂ ಇತಿಹಾಸವನ್ನು ಕೆದಕಲು ಅವಕಾಶ ನೀಡಿದೆ. ಇಂದಿನ ಮಾನಗಳಲ್ಲಿ ಪರಿಶೀಲಿಸಿದಾಗ ಪಾರಂಪರಿಕ ಪ್ರತಿಪಾದನೆಗೆ ಒತ್ತು ಒದಗುವ ಸಂದರ್ಭಗಳೂ ಇಲ್ಲಿ ಕಾಣುತ್ತವೆ. ಅದೇನೇ ಇರಲಿ ಸಂಶೋಧನೆಯಿಂದ ಇತಿಹಾಸದ ನೆಲೆಯಲ್ಲಿ ವಿದಿತವಾಗುವ ಅಂಶಗಳಿವು :

ದ್ರಾವಿಡ ಭಾಷಾವರ್ಗದಲ್ಲಿ ಕಂಡುಬರುವ 'ತಮ್ಮಡಿ' ಶಬ್ದ ೭ನೇ ಶತಮಾನದ ಶಾಸನಗಳಿಂದಲೂ ಲಭ್ಯವಾಗುತ್ತದೆ. ಗುರುವಡಿಗಳ್–ಎಂದಾಗ ಗುರುವಿನ ಶಿಷ್ಯ, ಗುರುಪಾದ ಎಂದು ಅರ್ಥೈಸಲಾಗುತ್ತದೆ. ತಮ್ಮಡಿಗಳೂ ಹಾಗೆಯೇ ಶಿವಾರ್ಚಕರಾಗಿ ಶಿವನ ಶಿಷ್ಯರು, ಶಿವನ ಪಾದಸೇವಕರಾಗಿದ್ದಾರೆ. ತಮ + ಅಡಿಗಳ್ = ತಮ + ಅಳಿಗಳ್ = ತಮನಾಶಕರು ಎಂಬ ಅರ್ಥವನ್ನು ಪರಿಗ್ರಹಿಸಿಕೊಂಡರೆ, ದೇವರ ಬಳಿ ಆರತಿ ಎತ್ತಿ ಬೆಳಕಿನಿಂದ ಕತ್ತಲೆಯನ್ನು ಅಡಿಗೊಳಿಸುವವರು, ನಾಶಗೊಳಿಸುವವರು ಎಂದೂ ಅರ್ಥಗೊಳ್ಳುತ್ತದೆ. ತಾತ್ವಿಕವಾಗಿ ಅಗೋಚರನನ್ನು ಗೋಚರಗೊಳಿಸಿ ತೋರುವವರು (Unknown made Known) ಎಂದಾಗುತ್ತದೆ. ನಿಘಂಟುವಿನಲ್ಲಿ ಗುರು, ಆಚಾರ್ಯ, ಅರ್ಚಕ ಅರ್ಥಗಳನ್ನು ನೀಡಿದೆ. ಕಿಟೆಲ್ ನಿಘಂಟು, 'ತಮ್ಮಡಿ' ಶಬ್ದಕ್ಕೆ An attendant on the Idol ಎಂದಿದೆ. ತಮ್ಮಳವಾಡು, ತಮ್ಮಳಿ, ತಮ್ಮಡಿ, ತಮ್ಮಲಿ, ಎಂದೆಲ್ಲ ಪ್ರಯೋಗಗಳನ್ನು ನೀಡಿದೆ. ತಮ್ಮಡಿವಳ್ಳಿ ಎಂಬ ಸ್ಥಳನಾಮವೂ ಶಾಸನಗಳಲ್ಲಿ ಇದೆ.

'ಮತಾದರ್ಶ'ದಲ್ಲಿ ಬರುವ 'ಈಶಾನದೇವ ಮೀಡ್ಯ ತಂಮೀಡ್ಯ' ಎಂಬ ವಾತುಲಾಗಮ ಉದ್ಧೃತ ಸಾಲಿನ ತಂಮೀಡ್ಯ ಶಬ್ದ ಗಮನಾರ್ಹವಾಗಿದೆ. ಕಿಟೆಲ್ ನಿಘಂಟು, 'ಮೀಡ' ಎಂದರೆ 'ಕಾಳಗ' ಎಂದರ್ಥ ನೀಡಿದೆ. ಕಸಾಪದ ಕನ್ನಡ ಕನ್ನಡ ನಿಘಂಟು. ಈ ಶಬ್ದಕ್ಕೆ 'ಟಗರು' ಎಂಬ ಅರ್ಥವನ್ನು ನೀಡಿದೆ. ಈ ಅರ್ಥಗಳನ್ನು ಅನುಸರಿಸಿದರೆ 'ಮೀಡ್ಯ' ಎನ್ನುವುದು ಟಗರಿನಿಂದ ಸೇವಿಸಲ್ಪಟ್ಟ ಕಾಳಗದ ವೀರ ಅರ್ಥಾತ್ ಟಗರುದಲೆಯ ದಕ್ಷ ಸೇವಿತ ವೀರಭದ್ರ ಎಂಬುದಕ್ಕೆ ಸಂವಾದಿ ಆಗುತ್ತದೆ. 'ತಂಮೀಡ್ಯ' ಎಂದಾಗ ತಮ್ಮಡಿ, ಮಸ್ತಕದಲ್ಲಿ ಲಿಂಗಧಾರಿ ಎನಿಸಿರುವ ಕಾರಣ, ವೀರಭದ್ರಾರಾಧಕನಾಗಿ ಕಾಣಿಸಿಕೊಳ್ಳುತ್ತಾನೆ. ವೀರಭದ್ರನ ಶಿಲ್ಪಗಳಲ್ಲಿ ನೆತ್ತಿಯಲ್ಲಿ ಲಿಂಗಧಾರಿ ಎನ್ನುವುದಕ್ಕೆ ಕಿರೀಟದ ಪೂರಿತ ಭಾಗದಲ್ಲಿ ಶಿವಲಿಂಗ ಚಿಹ್ನೆಯನ್ನು ಕೆತ್ತಿರುವುದು ಕಾಣಬರುತ್ತದೆ. ಒಟ್ಟಾರೆ ತಮ್ಮಡಿಗಳು ಶಿವಾಧಿಕ್ಯ ಸಂಪ್ರದಾಯದವರೆನ್ನಬೇಕು. ಶಾಸನೋಲ್ಲೇಖಗಳು ಬಹುಶಃ ಗುತ್ತಲು ಮುದ್ದಪ್ಪನವರಿಗೆ ಲಭ್ಯವಾಗದಿದ್ದ ಕಾರಣ ಅತ್ತ ಅವರ ಗಮನಹೋಗಿಲ್ಲ. ಆದಾಗಿ ಮೊಟ್ಟಮೊದಲಿಗೆ ಶಾಸನಗಳ ಹಿನ್ನೆಲೆಯಲ್ಲಿ ತಮ್ಮಡಿಗಳ ಅಸ್ತಿತ್ವವನ್ನು ನನ್ನ ದೀರ್ಘ (*ವಿಜಯನಗರ ಅಧ್ಯಯನ ಸಂಪುಟ ೨೮/೨೦೦೩*) ಲೇಖನವೊಂದರಲ್ಲಿ ಹೆಕ್ಕಿ ತೋರಿದ್ದೇನೆ.

ಪ್ರಾದೇಶಿಕವಾಗಿ ಶಾಸನಗಳಲ್ಲೂ ಉಕ್ತರಾಗಿರುವಂತೆ ಚಿಕ್ಕಮಗಳೂರು, ಮಂಡ್ಯ, ಹಾಸನ, ಬೆಂಗಳೂರು, ಶ್ರವಣಬೆಳಗೊಳ, ಗುಂಡ್ಲುಪೇಟೆ, ಕೆಳದಿ, ಆಂಧ್ರದ ಗುಂಟೂರು ಪ್ರದೇಶದಲ್ಲಿ (ತಮ್ಮಡಿವಾಡು) ಕಂಡುಬಂದಿದ್ದಾರೆ. ವಿಶೇಷವಾಗಿ ಚಾಮರಾಜನಗರ, ತಗಡೂರು ಸಂಕಲಗೆರೆ, ಟಿ. ನರಸೀಪುರ, ಕೊತ್ತಲವಾಡಿ, ಮಲೆಮಹದೇಶ್ವರ, ಮುಡುಕುತೊರೆ, ಯಳಂದೂರು, ತೆರಕಣಾಂಬಿ, ಗುತ್ತಲು, ನಂಜನಗೂಡು ಇತ್ಯಾದಿ ಕಡೆ ಇವರ ವಾಸ್ತವ್ಯ ಹೆಚ್ಚು. ಕಾರಣ ಇವೆಲ್ಲ ಶಿವಾರಾಧನ ಕ್ಷೇತ್ರಗಳಾಗಿ ಪ್ರಸಿದ್ಧಗೊಂಡಿದ್ದು ಅಲ್ಲಿಯ ಅರ್ಚಕ ವೃತ್ತಿ ಇವರ ಪರಂಪರೆಗಿತ್ತು ; ಆ ಕೆಲವೆಡೆ ಇಂದಿಗೂ ಇದೆ. ಶಾಸನಗಳ ದೃಷ್ಟಿಯಿಂದ ಮೊದಲಿಗೆ ಜೈನರಲ್ಲಿ, ನಂತರ ಶೈವ ಮತ್ತು ವೀರಶೈವ ಅರ್ಚಕರಿಗೆ ಈ

ಶಬ್ದ ಬಳಕೆ ಆಗಿದೆ. ಗುರು, ಆಚಾರ್ಯ, ಸ್ಥಾನಿಕರಾಗಿ (ದೇಗುಲ ಮುಖ್ಯಸ್ಥ) ಇದ್ದವರು. ಕಾಲಾಂತರದಲ್ಲಿ ಅರ್ಚಕ ವೃತ್ತಿಗೆ ಸಂದು ಜೀವನ ನಿರ್ವಹಣೆ ಮಾಡುತ್ತಿದ್ದರು. ಇವರಲ್ಲಿ ಜನಿವಾರದವರೂ ಇದ್ದಾರೆ ; ಶಿವದಾರದವರೂ (ಲಿಂಗಧಾರಿ) ಇದ್ದಾರೆ.

ಗಂಗ ಶ್ರೀ ಪುರುಷನ ೮ನೇ ಶ.ದ ಕಮರವಳ್ಳಿ ಶಾಸನದಲ್ಲಿ ದಾನ ಪಡೆದ 'ಗುಣಸಾಗರ ತಮ್ಮಡಿಗಳ್ಗೆ' ; ಶ್ರವಣಬೆಳಗೊಳದ ಕ್ರಿ.ಶ. ೭೦೦ರ ಶಾಸನದಲ್ಲಿ 'ತಮ್ಮಡಿಗಳ ಶಿಷ್ಯರ್'; ತಮ್ಮಡಿಗಳ ನಿಸದಿಗೆ (ಕ್ರಿ.ಶ. ೮೦೦), ಕೊಪ್ಪ ಶಾಸನದ 'ಸಿಂಹನ್ದಿ ತಮ್ಮಡಿಗಳ್' (ಕ್ರಿ.ಶ. ೧೦೧೦) ಕಂಡುಬರುತ್ತಾರೆ. ೧೨ನೆಯ ಶತಮಾನದ ಮೂಡಲಹಿಪ್ಪೆ ಶಾಸನವು ತಮ್ಮಡಿಯ ಮಕ್ಕಳ ದೇಗುಲಸೇವೆಯನ್ನು ಹೇಳಿದೆ. ಕ್ರಿ.ಶ. ೧೧೩೧ರ ಅಲ್ಲಿನ ಇನ್ನೊಂದು ಶಾಸನವು ವೀರದುದ್ದ ಕೊಂಗಾಳ್ವದೇವನ ಬೆಸದಿಂದ 'ಹರಪದಯುಗ ಭೃಂಗನೆನಿಪ ತಮ್ಮಡಿರುದ್ರ' ಹೊಯ್ಸಳರೆದುರು ಹೋರಾಡಿ ವೀರಸ್ವರ್ಗವೇರಿದ ವಿಷಯವಿದೆ. ಕ್ರಿ.ಶ. ೧೧೪೯ರ ಕಣಚೂರು ಶಾಸನದಲ್ಲಿ 'ತಂಮಡಿ ಮಸಕ'ನಿಗೆ ಅಗ್ರಹಾರಕ್ಕೆಂದು ಕಾಲು ತೊಳೆದು ಭೂದಾನ ಮಾಡಿದ ವಿಷಯವಿದೆ. ಬಹುಶಃ ಶಿವಾರ್ಚಕರ ಅಗ್ರಹಾರವಿದ್ದು, ಅವರ ಮುಖ್ಯಸ್ಥ ತಮ್ಮಡಿ ಮಸಕನಾಗಿದ್ದಿರಬೇಕು. ಕ್ರಿ.ಶ. ೧೧೭೦ ಮೂಡಹಳ್ಳಿ ಶಾಸನವು 'ತಂಮಡಿ ಅಯ್ಯನಿಗೆ ಕೇರಿಗವೊಂಕ' ಕೊಟ್ಟ ಸುಂಕ ವಿನಾಯಿತಿ; ಕ್ರಿ.ಶ. ೧೧೭೮ರ ತಮ್ಮಡಿಹಳ್ಳಿ ಶಾಸನದಲ್ಲಿ 'ತಮ್ಮಡಿಪ್ಪಳ್ಳಿಯಲ್ ಸೋಮೇಶ್ವರದೇಗುಲ' ಎಂದು ಅವರಿದ್ದ ಹಳ್ಳಿಯ ಅಸ್ತಿತ್ವ ಸೂಚಿಸಿರುವುದು ಇದೆ. ಹೀಗೆ ತಮ್ಮಡಿ ಶಾಸ್ತ್ರಕ್ಕೂ ಸಿದ್ದನಿದ್ದ ; ಶಸ್ತ್ರಕ್ಕೂ ಸಿದ್ಧನಿದ್ದ ಎಂದಾಗುತ್ತದೆ.

ಕ್ರಿ.ಶ. ೧೧೪೯ರ ಕೆಂಪನಪುರ ಶಾಸನದಲ್ಲಿ ಹೊಯ್ಸಳ ನರಸಿಂಹನ ಕಾಲದಲ್ಲಿ 'ತಮ್ಮಡಿ ಮಾದೇವ' ಒಬ್ಬ ಗೌರವಾನ್ವಿತ ಸಾಕ್ಷಿ ಆಗಿರುವುದು ; ಕ್ರಿ.ಶ. ೧೧೯೮ರ ಜೋಡಿ ಕಾಟೂರು ಶಾಸನದಲ್ಲಿ 'ತಮ್ಮಡಿ ರಾಯಾಂಡ'ನು ಸೋಮೇಶ್ವರ ದೇಗುಲಕ್ಕೆ ಸ್ಥಾನಿಕ ಕಾಣಿಕೆ (ತಾಣಿಕದ ಹೊನ್ನು, ವೃತ್ತಿ ತೆರಿಗೆ) ನೀಡಿರುವುದು ; ೧೨ನೆಯ ಶತಮಾನದ ಬೆಳತೂರು ಶಾಸನದಲ್ಲಿ ಹುದುವಾಳಿಕೆಯ ತಮ್ಮಡಿಗಳು ತಮ್ಮ ಸಂಕಷ್ಟಗಳನ್ನು ನಿವೇದಿಸಿಕೊಂಡಿರುವುದು, ಕ್ರಿ.ಶ. ೧೩೧೬ರ ಗುತ್ತಲು ಶಾಸನದಲ್ಲಿ ತಮ್ಮಡಿಹಳ್ಳಿ ವಿಸಣ್ಣನು ಗದ್ದೆಯ ಭಾಗವನ್ನು ದಾನ ನೀಡಿದ ಸಂಗತಿ ; ಕ್ರಿ.ಶ. ೧೩೬೮ರ ತಗಡೂರು ಶಾಸನದಲ್ಲಿ ಮೂಲಸ್ಥಾನ ದೇವರು ದಿಬ್ಬಲಿಂಗದ ನಂದಾದೀವಿಗೆಗೆ ತಂಮಡಿಗಳು ನೀಡುತ್ತಿದ್ದ ದೇವಕಾಣಿಕೆ ; ವಿಜಯನಗರ ಕಾಲದಲ್ಲಿ ತಮ್ಮಡಿಹಳ್ಳಿಗಳು ವಿಶೇಷ ಪ್ರಸಾರವಾಗಿ ಬೆಳೆಸುಗೊಂಡದ್ದು ; ಕ್ರಿ.ಶ. ೧೫೫೧ರ ನಂಜನಗೂಡು ನಂಜುಂಡೇಶ್ವರ ದೇಗುಲದ ಅಪ್ರಕಟಿತ ಶಾಸನದ ಸೂಚನೆಯ ರೀತ್ಯಾ ತಮ್ಮಡಿಗಳ ಪೈಕಿಯವರೂ ಅಲ್ಲಿ ಅರ್ಚಕರಾಗಿದ್ದುದು–ಹೀಗೆ ತಮ್ಮಡಿಗಳ ಐತಿಹಾಸಿಕ ಅಸ್ತಿತ್ವವನ್ನು ಶಾಸನಗಳು ತೋರುತ್ತವೆ. ಕೆಳದಿ ವೀರಭದ್ರ ದೇಗುಲದಲ್ಲಿ (ಕ್ರಿ.ಶ. ೧೪೯೮–೧೭೧೫)ರ ಸಮಯದಲ್ಲಿ ಹಿರಿಯ ಬಸಪ್ಪನಾಯಕ ಹಾಗೂ ಇಮ್ಮಡಿ ಸೋಮಶೇಖರನ ಕಾಲದಲ್ಲಿ ಮನೆವಾರ್ತೆ ಉದಾರನಾಗಿದ್ದ, ಶಾಸನೋಕ್ತ **ತಂಮಡಿ** ವೀರಪ್ಪನು ರೇಖಾಚಿತ್ರ ಸಹಿತವಾಗಿ ನೆಲಹಾಸಿನಲ್ಲಿ ಚಿತ್ರಿತನಾಗಿದ್ದಾನೆ.



ಸಾಹಿತ್ಯ ಕೃತಿಗಳಲ್ಲಿ–ಕ್ರಿ.ಶ. ೧೦೩೧ರ ದುರ್ಗಸಿಂಹನ ಪಂಚತಂತ್ರ, ರಾಘವಾಂಕನ ಸಿದ್ದರಾಮನ ಪುರಾಣ, ಕ್ರಿ.ಶ. ೧೨೨೫ರ ದಕ್ಷಿಣ ಕನ್ನಡದ ಮೂಡುಬಿದ್ರೆ ವೀರಶೈವ ಕವಿ ಸೋಮರಾಜನ ಉದ್ಭಟಕಾವ್ಯ, ಮೋಳಿಗೆ 'ಮಾರಯ್ಯನ ವಚನ' ('ಪೂಜಿಸುವ ತಮ್ಮಡಿ ಲಿಂಗವಾದುದ ಕಂಡೆ'). ಕ್ರಿ.ಶ. ೧೬೭೭ರ ಸುಮಾರಿನ ಷಡಕ್ಷರಿದೇವನ ವೃಷಭೇಂದ್ರ ವಿಜಯ, ಕ್ರಿ.ಶ. ೧೩೬೯ರ ಭೀಮಕವಿಯ ಬಸವಪುರಾಣ, ದೇವಚಂದ್ರನ ರಾಜಾವಳಿ ಕಥಾಸಾರ ('ಲಿಂಗದ ವೀರರೆಂದವರ್ಗೆ ಷಟ್ಚಕ್ರ ಪುರಾಣಮಂ ಕಲಿಸಿ ಯಂತ್ರ ಮಂತ್ರ ತಂತ್ರಾದಿಗಳಂ ಪೇಳ್ ತಮ್ಮಡಿಗಳೆಂದು ಕೊಂಡಾಡುತ್ತೆ')

...ದಿಗಳಲ್ಲಿ ತಮ್ಮಡಿಗಳ ಉಲ್ಲೇಖ ಬರುತ್ತದೆ. ಹೀಗೆ ಗುರುಸ್ಥಾನದಲ್ಲಿದ್ದು, ಅರ್ಚಕರಾಗಿದ್ದು, ಸ್ಥಾನಿಕರಾಗಿದ್ದು, ಗೃಹಸಚಿವ ಮಟ್ಟದ ಅಧಿಕಾರಿಯಾಗಿದ್ದು, ಕಾಳಗದ ವೀರರಾಗಿದ್ದು, ಹೋರಾಟಗಾರರಾಗಿದ್ದು ವೀರಗಾಸಿ ಪ್ರವೀಣರಾಗಿದ್ದು ಶಾಸನ ಹಾಗೂ ಕಾವ್ಯೋಕ್ತರಾಗಿ ಜೀವನವನ್ನು ಸಾಗಿಸಿಕೊಂಡು ಬಂದ ಈ ಜನಾಂಗೀಯರ ಬದುಕಿನಲ್ಲಿ ಏರುಪೇರುಗಳೂ ಇವೆ. 'ತನಗೇ ಇಲ್ಲದ ಮಾರಿ, ತಮ್ಮಡಿಗೆ ವರಾ ಕೊಟ್ಟೀತೆ ?' ಎಂಬ ಜನಪದ ಗಾದೆಯೂ ಇದ್ದು ತಮ್ಮಡಿಗಳು ಕೇವಲ ಮಾರಿಗುಡಿ ಪೂಜಾರಿಯಾಗಿ ಕಷ್ಟದ ಬದುಕನ್ನು ಸಾಗಿಸಿದ ಸೂಚನೆಯೂ ಇದೆ.



ಗುತ್ತಲಿನ ಶ್ರೀ ಅರ್ಕೇಶ್ವರ ದೇಗುಲ
ಹಾಗೂ ಪ್ರಾಚೀನ ಶಿಲ್ಪಗಳು.

ಮುದ್ದಪ್ಪನವರ 'ಮತಾದರ್ಶ' ಕೃತಿಯಲ್ಲಿ ತಮ್ಮಡಿಗಳ ಬದುಕನ್ನು ಸಾಂಪ್ರದಾಯಿಕ ನೆಲೆಯಲ್ಲಿ ನೋಡಿದರೂ ಅವರ ಸ್ಥಿತಿಗತಿಯು ಉತ್ತಮಗೊಳಿಸಬೇಕು, ಉತ್ತಮ ಗೊಳ್ಳಬೇಕು ಎಂಬ ಕಾಳಜಿ ಕಾಣುತ್ತದೆ. ಈ ಸಾಂಪ್ರದಾಯಿಕ ನೆಲೆಗೂ ಪೋಷಕವಾಗುವಂತೆ ಅನ್ಯ ಐತಿಹಾಸಿಕ ಆಕರಗಳು, ಕಾವ್ಯ, ಜನಪದ ಪ್ರಕಾರಗಳು ತಮ್ಮ ಸಾಕ್ಷ್ಯಗಳನ್ನು ಮುಂದಿಟ್ಟಿವೆ. ವೀರಶೈವ ಸಂಪ್ರದಾಯಕ್ಕೂ ಹತ್ತಿರದವರಾದರೂ, ತಮ್ಮ ಅಸ್ತಿತ್ವವನ್ನು ಸಾಂಸ್ಕೃತಿಕವಾಗಿ ಉಳಿಸಿಕೊಂಡಿದ್ದಾರೆ. 'ಶಿವಾರ್ಚಕ ಸಂಘ'ವನ್ನು ರೂಪಿಸಿಕೊಂಡು ಸಂಸ್ಕೃತ ಪ್ರಾಧ್ಯಾಪಕ ಶ್ರೀ ಮಲ್ಲಣ್ಣನವರ ನೇತೃತ್ವ ಹಾಗೂ ಶ್ರೀ ಎಸ್. ಕುಮಾರಸ್ವಾಮಿ, ಶ್ರೀ ರಾಜಶೇಖರಯ್ಯ ಮುಂತಾದವರ ಸಂಘಟನಾ ಕಾರ್ಯವೂ ಸೇರಿದಂತೆ ಶಿವದೀಕ್ಷೆ, ಶಿವಾರ್ಚನಾ ತರಬೇತಿ, ಶಿವಚಿಂತನಾ ಶಿಬಿರಗಳನ್ನು ಏರ್ಪಡಿಸಿ ಚಟುವಟಿಕೆಯಿಂದ ಇದ್ದಾರೆ. ಅವರಲ್ಲಿ 'ಲಿಂಗಧಾರಿ ಅರ್ಚಕರೂ ಅನೇಕ ದೇಗುಲಗಳಲ್ಲಿ ಇದ್ದಾರೆ. ಆದರೆ ಅವರನ್ನು ಆರ್ಥಿಕವಾಗಿ ಮುಂದುವರಿದಿದ್ದಾರೆ ಎನ್ನುವಂತಿಲ್ಲ. ಅವರಿಗೆ ಜನಾಂಗೀಯ ಸವಲತ್ತುಗಳು ಸಿಗದೆ ಹೋಗಿದೆ. ಸ್ವಾಭಿಮಾನ ಅವರಿಗಿದೆ. ಸರ್ಕಾರ ಅವರ ಬೇಡಿಕೆಗಳಿಗೆ ಸ್ಪಂದಿಸಬೇಕಿದೆ. ಮುದ್ದಪ್ಪನವರ 'ಮತಾದರ್ಶ' ಇದನ್ನು ೯೩ ವರ್ಷಗಳಿಂದಲೂ ಹೇಳಿಕೊಂಡು ಬಂದಿದೆ.



ವೇ॥ ಮೂ॥ ಮುದ್ದಪ್ಪನವರ ಸೊಸೆ
ಶ್ರೀಮತಿ ಕಮಲಮ್ಮನವರು, ಗುತ್ತಲು. (ಚಿತ್ರ : ಕ್ರಿ.ಶ. ಸು. ೨೦೦೬)

ಮುದ್ದಪ್ಪನವರಿಗೆ ಇದ್ದವರು ಏಕಮಾತ್ರ ಪುತ್ರ. ಈಗ ಮುದ್ದಪ್ಪನವರ ಸೊಸೆ ಶ್ರೀಮತಿ ಕಮಲಮ್ಮನವರು ಮಾತ್ರ ಬದುಕಿದ್ದು, ಗುತ್ತಲು ಗ್ರಾಮದಲ್ಲಿದ್ದಾರೆ. ಹೆಣ್ಣುಮಕ್ಕಳನ್ನು ಹೊಂದಿದ್ದಾರೆ. ವೇ॥ ಮುದ್ದಪ್ಪನವರ ಮನೆದೇವರಾದ ಅರ್ಕೇಶ್ವರಸ್ವಾಮಿಯ ಗುಡಿಯು ಇಂದು ಜೀರ್ಣೋದ್ಧಾರ ಗೊಂಡಿದೆ. ಅಲ್ಲಿನ ಪ್ರಾಚೀನ ಶಿಲ್ಪಗಳು ಇಂದಿಗೂ ಇವೆ; ಅವು ಬಹಳ ಗಮನಾರ್ಹವಾಗಿವೆ.

## ಪಟ್ಟೋಲೆ ಪಳಮೆ

ಇದು ಪ್ರಮುಖವಾಗಿ ಕೊಡಗಿನ ಕೊಡವರ ಹಾಗೂ ಕೊಡಗಿನ ಸಾಂಸ್ಕೃತಿಕ ಬದುಕನ್ನು ನಿರೂಪಿಸುವ ಜಾನಪದ ಕೃತಿ. ಪಟ್ಟೋಲೆ ಪಳಮೆಯು ಜಾನಪದ ಹಾಡುಗಳನ್ನು ಸಂಗ್ರಹಿಸಿರುವುದಲ್ಲದೆ ಕೊಡಗಿನ ಇತಿಹಾಸದ ಪಕ್ಷಿನೋಟ



ವನ್ನೂ ಮುಂದಿಟ್ಟಿದೆ. ಇದರ ಸಂಪಾದಕರು **ನಡಿಕೇರಿಯಂಡ ಚಿಣ್ಣಪ್ಪನವರು**. ಇವರಿಗೆ ಮುನ್ನ ೧೯೧೨ರಲ್ಲಿ ಕೊರವಂಡ ಅಪ್ಪಯ್ಯ ಅವರ '**ಕೊಡವರ ಕುಲಾಚಾರಾದಿ ತತ್ತ್ವೋಜ್ಜೀವಿನಿ**' ಪ್ರಕಟವಾಗಿದೆ. ಆ ಕೃತಿಯಲ್ಲಿ ಕೊಡಗಿನ ತಕ್ಕಾಮೆ, ಹಬ್ಬಗಳ ವಿವರಗಳು, ಜನಪದ ಕುಣಿತಗಳು ಹಾಗೂ ಹಾಲೇರಿ ಅರಸರ ಕುರಿತು ಜನಪದ ಹಿನ್ನೆಲೆಯಲ್ಲಿ ವಿವರಗಳನ್ನು ನೀಡಲಾಗಿದೆ.

ಪಟ್ಟೋಲೆ ಪಳಮೆ ಕೊಡವ ಭಾಷೆಯ ಜಾನಪದ ಕೃತಿಯಾದರೂ ಸಂಕ್ಷಿಪ್ತವಾಗಿ ಕೊಡಗಿನ ಪರಿಸರ, ಆಳಿದ ರಾಜವಂಶ ಹಾಗೂ ಇತರ ಸಾಂಸ್ಕೃತಿಕ ವಿವರಗಳೊಡನೆ ನೀಡಿದೆ. ಕೊಡಗಿನ ಮೊದಲರಸರ ಬಗ್ಗೆ ಸಂಕ್ಷಿಪ್ತ ಮಾಹಿತಿ ನೀಡಿ, ಹಾಲೇರಿ ಅರಸರ ಬಗ್ಗೆ ಅವರ ಆಡಳಿತ ಹಾಗೂ ಸಾಂಸ್ಕೃತಿಕ ಜೀವನದ ಕುರಿತು ವಿವರಗಳನ್ನು ನೀಡುತ್ತದೆ. ವಿಶೇಷವೆಂದರೆ ಜನಪದ ಹಾಡುಗಳ ಸಾಲುಗಳಲ್ಲಿ ಕೊಡಗಿನ ಇತಿಹಾಸದ ಸಂಗತಿಗಳನ್ನು ಮೇಳೈಸಿ ಹೇಳಿರುವುದಾಗಿದೆ.

ಕ್ರಿ.ಶ. ೧೯೨೪ರ ವೇಳೆಗೆ ಪಟ್ಟೋಲೆ ಪಳಮೆಯನ್ನು ನಡಿಕೇರಿಯಂಡ ಚಿಣ್ಣಪ್ಪನವರು ಬರೆದರು. ಭಗವದ್ಗೀತೆಯನ್ನು ಕೊಡವ ಭಾಷೆಯಲ್ಲಿ ಕನ್ನಡದಲ್ಲೂ ವಿವರಿಸಿ ಭಗವಂಕಂಡ ಪಾಟ್, ಕನ್ನಡ ಲಿಪಿಯಲ್ಲಿ 'ಬಾಳೋಪಾಟ್'ನ ಮಟ್ಟಿನಲ್ಲಿ ಬರೆದರು. ಮೈಸೂರು ವಿಶ್ವವಿದ್ಯಾಲಯವು ೧೯೭೫ರಲ್ಲಿ ತನ್ನ ಪ್ರಧಾನ ಸಂಪಾದಕತ್ವದಲ್ಲಿ ಪಟ್ಟೋಲೆ ಪಳಮೆಯನ್ನು ಪರಿಷ್ಕೃತ ಆವೃತ್ತಿಯಾಗಿ ಮುದ್ರಣ ಮಾಡಿ ಪ್ರಕಟಿಸಿತು. ನಡಿಕೇರಿಯಂಡ ಚಿಣ್ಣಪ್ಪನವರ ಈ ಕೃತಿಯಲ್ಲಿ ಕೊಡಗು ವಿವರಣೆ, ಕೊಡವರ ಪದ್ಧತಿ, ಹಬ್ಬಗಳು, ದೇವತೆಯಡ ಪಾಟ್, ಕೇಳಿಪೋನಯಂಡ ಪಾಟ್, 'ಕಲ್ಯಾಟಂಡಜ್ಜಪ್ಪಂಡ ಪಾಟ್' ಇತ್ಯಾದಿ ವಿಷಯಗಳು ಕೊಡವ ಭಾಷಾ ಗೀತೆಗಳೊಡನೆ ೬ ಅಧ್ಯಾಯಗಳಲ್ಲಿ ವಿವರಗೊಂಡಿವೆ. ೫೧೫ ಪುಟಗಳ ಈ ಕೃತಿಯಲ್ಲಿ ಸುಮಾರು ೧೫೦ ಪುಟಗಳಷ್ಟು ಕನ್ನಡದಲ್ಲಿಯೇ ವಿವರಿಸಲಾಗಿದೆ.

ಕೊಡಗು ವಿವರಣೆಯಲ್ಲಿ 'ಕೊಡಗು' ಹೆಸರಿನ ನಿಷ್ಪತ್ತಿ, ವಿಸ್ತೀರ್ಣ, ನದಿಗಳು, ಮಳೆ, ವಾಯುಗುಣ ಇತ್ಯಾದಿಗಳ ಪ್ರಥಮ ನೋಟವಿದೆ. ನಂತರ ಕೊಡಗರ ಕುಲದೇವತೆ ಕಾವೇರಿ ಪುರಾಣದ ಹಾಡು, ಕೊಡವ ಭಾಷೆಯಲ್ಲಿ, ಜನಪದ ನೆಲೆಯಲ್ಲಿ ಸ್ಕಾಂದಪುರಾಣವನ್ನು ಆಧರಿಸಿ ಜಾನಪದ ಹಾಡಾಗಿ ಹೇಳಲಾಗಿದೆ. ಇದರಲ್ಲಿ ಕೊಡವರ ಪೌರಾಣಿಕ ಚರಿತ್ರೆ ಅಡಕವಾಗಿದೆ. ಮಲೆಯ ತುದಿಯಲ್ಲಿ ಕೊಡಗು ಇದ್ದು ಕೊಡುಮಲೆ ಎಂದಾಗಿ ತಗ್ಗಿನಲ್ಲಿರುವ ಮಲೆ ಆದ್ದರಿಂದ ಮಲೆಯಾಳ, ನಾಡೇ ಬಯಲಾಗಿರುವ ಕಾರಣ ವಯನಾಡು –ಹೀಗೆ ದೇಶಗಳ ಸಹಜ ಸ್ಥಿತಿಯಿಂದ ಹೆಸರುಟ್ಟಿವೆ ಎಂಬ ಅವರ ಸಹಜ ಪ್ರತಿಪಾದನೆ ಸ್ಥಳನಾಮ ವಿಜ್ಞಾನದ ಇಂದಿನ ಪರಿಕಲ್ಪನೆಗೂ ಮೇಳೈಸಿರುವುದು ಗಮನಾರ್ಹ. ಕೊಡಗು ಕೃಷಿಬೀಡು, ಜಲಮೂಲ ಬೀಡು. ಪೂರ್ವಕ್ಕೆ, ಪಶ್ಚಿಮಕ್ಕೆ ಹರಿಯುವ ನದಿಗಳ ಉಗಮ ಮತ್ತು ಜಾಲವೇ ಅದಕ್ಕೆ ಸಾಕ್ಷಿ. ಇದಕ್ಕೆ ಅನುಗುಣವಾದ ಸ್ಥೂಲ ವಿವರಗಳು ಪಟ್ಟೋಲೆ ಪಳಮೆಯುಲ್ಲಿವೆ. ಕೃತಿಯ ರಚನೆಯ ವೈಜ್ಞಾನಿಕ ಕ್ರಮವೂ ಅದರಲ್ಲಿದೆ. ಕೊಡಗು ಶೀತಳಸೀಮೆ ಎಂದಿದ್ದಾರೆ. ಅದಕ್ಕಿಂತ ತಂಪು ಸೀಮೆ ಎಂದರೆ ಇಂದಿಗೆ ಸರಿಹೋಗುವುದಾಗುತ್ತದೆ. ಅಲ್ಲಿಯ ಜಲ, ನೆಲ, ಕಾಡು ಕಣ್ಣಿಗೆ ಹಬ್ಬ ತರುತ್ತವೆ.



ಕೊಡವ ಭಾಷಿಕ 'ಕಾವೇರಿ ಪುರಾಣ' ಜನಪದ ಹಾಡಾಗಿ, ಸಂವಾದಾತ್ಮಕ ಶೈಲಿಯಲ್ಲಿ ಆರಂಭವಾಗಿ ಆತ್ಮೀಯವೆನಿಸುತ್ತದೆ. ಚಿಣ್ಣಪ್ಪ ಅವರು ಕಾವೇರಿಯ ಹೆಸರಿನ ಇನ್ನೊಂದು ರೂಪವನ್ನು ನಿಜಗುಣ ಶಿವಯೋಗಿಗಳ ವಿವೇಕ ಚಿಂತಾಮಣಿಯಿಂದ ಸಂಗ್ರಹಿಸಿ (ಮರುದ್ವೃದೆ) ಹೇಳಿರುವುದು, ಅವರ ವ್ಯಾಪಕ ಅಧ್ಯಯನದ ಕುರುಹಾಗಿದೆ.

ಕೊಡಗಿನವರ ಜಬ್ಬೂಮಿಯಲ್ಲಿ (ಜಮ್ಮ ಭೂಮಿ– ಹುಟ್ಟು ಹಕ್ಕಿನ ಭೂಮಿ) ಬಂದು ನಿಂತ ಕವೇರ ಅವನು ಬ್ರಹ್ಮನ ಕುರಿತು ಮಾಡಿದ ತಪಸ್ಸು, ಬ್ರಹ್ಮನ ಮಾನಸಪುತ್ರಿ ಲೋಪಾಮುದ್ರೆಯನ್ನು ಕವೇರನಿಗೆ ದತ್ತುಪುತ್ರಿಯಾಗಿ ನೀಡಿದ್ದು,

ಅಗಸ್ತ್ಯ–ಕಾವೇರಿ ಮಂಗಲ, ಶರತ್ತು ಭಂಗ, ಕಾವೇರಿ, (ಪರವಧುಗಮನದಂಥ!) ಗಂಡನ ವರ್ತನೆ ಕಂಡು, ಅವನಿಂದ ದೂರ ಸಾಗಿ ಹರಿದುಹೋದದ್ದು; ಹಾದಿಯ ಜನರ ಮೊರೆಗೆ ಆಶ್ವಾಸನೆ ನೀಡಿ, ಲೋಕದ ಜನತೆಗೆ ಜಲಪಾವನೆ ಎನಿಸಿ, ಸರ್ವಹಿತಕಾರಣಿ ಎನಿಸಿದ್ದು, ಇತ್ಯಾದಿ ಜನಪದೀಯ ಕಥೆಯ ಸ್ವರೂಪವನ್ನು ಅಚ್ಚುಕಟ್ಟಾಗಿ ಮಂಡಿಸಲಾಗಿದೆ. ದಲಿತ ಕೆಂಬಟ್ಟೆ ಜನರಲ್ಲಿಯೂ ಕಾವೇರಿ ಹಾಡಿದೆ. ಅಲ್ಲಿ ಕಥೆ ಸರಳವಾಗಿದೆ; ಪಳಮೆಯಲ್ಲಿ ಸಂಕೀರ್ಣತೆಯಿಂದ ಕೂಡಿರುವುದು ಕಾಣುತ್ತದೆ.

ಕೊಡವರ ಆದಿಯನ್ನು ಪಟ್ಟೋಲೆ ಪಳಮೆ ಗುರುತಿಸಿರುವುದು: ಮ್ಲೇಂಛರನ್ನು ಗೆದ್ದ ಚಂದ್ರವರ್ಮನಲ್ಲಿ ಜನಿಸಿದ ಹನ್ನೊಂದು ರಾಜಕುಮಾರರು ಉಗುರಿನಿಂದಲೇ ನೆಲವಟ್ಟ ಮಾಡಿ ಕೊಡಗು ಕ್ರೋಡದೇಶವೆನಿಸಲು ಕಾರಣರಾದವರು, ಮತ್ಸ್ಯ ದೇಶದ ರಾಜನ ಸಂತತಿಯವರು ಮತ್ಸ್ಯದೇಶವೆನಿಸಲು ಕಾರಣರಾದವರು. ಇವರಿಗೆ ಆರೋಪಿಸಿ ಸ್ಕಾಂದಪುರಾಣದ ಆಧಾರವನ್ನು ಮಂಡಿಸಲಾಗಿದೆ. ಈ ಪೌರಾಣಿಕ ಲಗತ್ತಿನಲ್ಲಿ ಇತಿಹಾಸದ ಸೂಕ್ಷ್ಮ ಎಳೆಯೊಂದು ಹಾದುಹೋಗಿರುವಂತಿದೆ. ಧಾರವಾಡದ ಹಾನುಗಲ್ಲು ಪ್ರದೇಶಕ್ಕೆ ಮತ್ಸ್ಯದೇಶವೆಂದೇ ಹೆಸರಿದೆ. ಹಾನುಗಲ್ಲ ಕದಂಬ ವಂಶಿಕರು ೧೧ನೇ ಶತಮಾನದಲ್ಲಿ ಕೊಡಗಿನ ಭಾಗಗಳನ್ನು ಆಳಿದ್ದೂ ಶಾಸನೋಕ್ತವಿದೆ. (ಕ್ರಿ.ಶ. ೧೧೯೫ರ ಯಡೂರು ಶಾಸನದ ದುದ್ದರಸ ಹಾನುಗಲ್ಲು ಕದಂಬ ವಂಶಿಕ). ಒಟ್ಟಿನಲ್ಲಿ ಯಾವ ರಾಜನು ಇಲ್ಲಿಗೆ ಬಂದು ಆಳಿರಲಿ, ದೇಶ ಬೇಳಸಿರಲಿ, ಸ್ಥಳೀಯ ಸಂಸ್ಕೃತಿಯಲ್ಲಿ ಏಕವಾಗಿಬಿಟ್ಟಿದ್ದಾರೆ, ಸಂಲಗ್ನವಾಗಿಬಿಟ್ಟಿದ್ದಾರೆ. ಹಾಲೇರಿ ಅರಸರವರೆಗೂ ಇದು ಎದ್ದುಕಾಣುವ ಅಂಶ.

ಗ್ರಂಥದಲ್ಲಿ ಕೊಡವರ ಉಪಜಾತಿಗಳು, ಅಮ್ಮಕೊಡವರು ಕುರಿತಾದ ಕತೆ–ಅವರು ರಾಮಚಂದ್ರಾಪುರ ಮಠ ಮತ್ತು ಉಡುಪಿ ಕಾನೂರು ಮಠದ ಶಿಷ್ಯರಾದ ಸಂಗತಿಯನ್ನು ತಿಳಿಸಲಾಗಿದೆ. ಜಮ್ಮಕೊಡವರ (ಜಮ್ಮ ಹಿಡುವಳಿ ಹೊಂದಿದ) ಕುರಿತಾಗಿ ಹೇಳಿದೆ. ಗಮನಾರ್ಹ ಸಂಗತಿ ಎಂದರೆ ಹಾಲೇರಿ ಅರಸರ ಕಾಲದವರೆಗೂ ಅಮ್ಮಕೊಡವರು ಮತ್ತು ಕೊಡವರು ಎಂಬ ಭೇದವಿಲ್ಲದಿದ್ದುದು, ಅವರ ನಂತರ ಭೇದ ಕಂಡಿತು, ಎಂದಿದ್ದಾರೆ. ಇದಕ್ಕೆ ಕಾರಣ ಬಹುಶಃ ಮುಂದೆ ಆಳಿಕೆ ನಡೆಸಿದವರ ಒಡೆದು ಆಳುವ ನೀತಿಯಾಗಿರಬಹುದು.

ಕೊಡಗನ್ನು ಆಳಿದವರ ಇತಿಹಾಸ ನೀಡುತ್ತ, ಗಂಗರು, ಚೋಳರು (ಅಧೀನ ಚಂಗಾಳ್ವ, ಕೊಂಗಾಳ್ವರ ಮೂಲಕ) ಹೊಯಿಸಳರು, ವಿಜಯನಗರದ ಅರಸರ ಆಳಿಕೆಯನ್ನು ಬಹಳ ಸಂಕ್ಷಿಪ್ತವಾಗಿ ಕೃತಿಯಲ್ಲಿ ಪ್ರಸ್ತಾಪಿಸಲಾಗಿದೆ. ಆದರೆ ಚೋಳರು ಕೊಂಗಾಳ್ವರನ್ನು ಮಾಲಂಬಿಯಲ್ಲಿ ಪ್ರತಿಷ್ಠಾಪಿಸಿ, ಚಂಗಾಳ್ವರನ್ನು ಅಧೀನ ಮಾಡಿಕೊಂಡರೆಂಬುದನ್ನು ಬಿಟ್ಟರೆ ಮಾಲಂಬಿ ಶಾಸನವೊಂದರ ಹೊರತಾಗಿ ಚೋಳದೊರೆಗಳ ಉಲ್ಲೇಖ ಕೊಡಗಿನ ಯಾವ ಶಾಸನಗಳಲ್ಲೂ ಕಾಣಬರುವುದಿಲ್ಲ. ಅವರ ಮೇಲಾಳಿಕೆಯ ಕುರುಹೂ ಕೂಡ, ಚಂಗಾಳ್ವ, ಕೊಂಗಾಳ್ವರ ಕೆಲವು ರಾಜರುಗಳ ಹೆಸರಲ್ಲಿ 'ಚೋಳ' ಎಂಬ ಉಪಾಧಿಯನ್ನು ಸೇರಿಕೊಂಡಿರುವುದು ಬಿಟ್ಟರೆ, ಬೇರೇನೂ ಕಾಣಬರುವುದಿಲ್ಲ. ಪಟ್ಟೋಲೆ ಪಳಮೆ ಇದನ್ನು ಗುರುತಿಸಿದಂತೆ ಕಾಣದು. ವಿಶೇಷವೆಂದರೆ ಕೊಡಗನ್ನು ಬಾಳುಕಾರರು, ಬಾಚೆಕಾರರು ಎಂಬ ಹೆಸರಿನಲ್ಲಿ ಎಂಟು ನಾಯಕರು ಕೆಲಕಾಲ ಮಾತ್ರ ಆಳುತ್ತಿದ್ದು, ಪರಸ್ಪರ ಕಚ್ಚಾಟದಲ್ಲಿಯೇ ತೊಡಗಿ, ನಾಯಕರು ಬಂದ ಮೇಲೆ ಅಡಗಿದರೆಂದಿರುವುದು. ಅಂದರೆ ಹಾಲೇರಿ ಅರಸರು ಕೊಡಗಿನ ಆಳ್ವಿಕೆಗೆ ನಿಲ್ಲುವ ಮುನ್ನ ಕೊಡಗಿನಲ್ಲಿದ್ದ ಅರಾಜಕತೆ, ಅನಾಯಕತ್ವ ಇದ್ದುದರ ಕುರಿತು 'ಪಟ್ಟೋಲೆ ಪಳಮೆ' ಸ್ಪಷ್ಟವಾಗಿ ಹೇಳಿರುವುದಾಗಿದೆ.

ಹಾಲೇರಿ ಅರಸರ ರಾಜಕೀಯ ಚರಿತ್ರೆಯನ್ನು 'ಇಕ್ಕೇರಿ ರಾಜರು' ಎಂಬ ಸಾಂಕೇತಿಕ ಹೆಸರಿನಲ್ಲಿ ನಮೂದಿಸಿ, *'ಮೊದಲ ರಾಜನು ಪ್ರಾಯಶಃ ಚಂಗಲ್ವ ರಾಜರ ಸಂತಾನದವನಾಗಿರಬಹುದು'* ಎಂಬ ರೈಸ್ ಅವರ ಅಭಿಪ್ರಾಯವನ್ನು ಮಂಡಿಸಿದ್ದಾರೆ ಚಿಣ್ಣಪ್ಪನವರು. ಇದು ಕೆಳದಿ ಹಾಗು ಇದು ಹಾಲೇರಿ, ಅರಸರ ವಂಶಮೂಲವನ್ನೇ ಶೋಧಿಸಿ ಹೇಳಿದಂತಿದೆ. ತಮಗೆ ತಿಳಿದಿದ್ದಷ್ಟು ಹಾಲೇರಿ ಅರಸರ ವಂಶವೃಕ್ಷ, ಮುದ್ದುರಾಜ, ಸಿರಿಬಾಯಿ ದೊಡ್ಡವೀರಪ್ಪ, ನಂಜುಂಡ ಅರಸು ಪಿರಿಯಾಪಟ್ಟಣ, ಇಕ್ಕೇರಿ ಸೋಮಶೇಖರ ನಾಯಕರ ಕುರಿತೆಲ್ಲ ಇತಿಹಾಸದ ಸ್ಥೂಲ ವಿವರಗಳನ್ನು ನೀಡಿದ್ದಾರೆ. ಆದರೆ ಪಿರಿಯಾಪಟ್ಟಣದ (ಹಾಲೇರಿ ವಂಶದ ಕುಡಿ) ನಂಜುಂಡ ಅರಸುವಿಗೆ ನಂಜರಾಯಪಟ್ಟಣದಲ್ಲಿ ಆಶ್ರಯ ನೀಡಿದ್ದು ಮುದ್ದುರಾಜ. ಅದು ಕ್ರಿ.ಶ. ೧೬೪೪ರ ಸಮಯದ್ದು. ಸಿರಿಬಾಯಿ ದೊಡ್ಡವೀರಪ್ಪನ ಕಾಲವಾದರೋ (ಕ್ರಿ.ಶ. ೧೬೮೭–೧೭೩೬). ಹೀಗಾಗಿ ಸಿರಿಬಾಯಿ ದೊಡ್ಡವೀರಪ್ಪ, ನಂಜುಂಡ ಅರಸುವಿಗೆ ಆಶ್ರಯ ಕೊಟ್ಟವನು ಎಂಬ ಪಟ್ಟೋಲೆ ಪಳಮೆಯ ಮಾಹಿತಿ ಸೂಕ್ತವಾಗಿಲ್ಲ. ಬಹುಶಃ ಆಕರಗಳು ಸರಿಯಾಗಿ ಲಭ್ಯವಾಗದೆ ಪಳಮೆ ಹಾಗೆ ದಾಖಲಿಸಿರಬಹುದು.

ಕೊಡಗಿನಲ್ಲಿದ್ದ ೧೨ ಕೊಂಬು ಪ್ರದೇಶಗಳು, ೩೫ ನಾಡುಗಳಾಗಿ ರೂಪುಗೊಂಡದ್ದು, ಊರು ಮತ್ತು ನಾಡು, ದೇಶತಕ್ಕಾಮೆಗಳು ಹಾಲೇರಿ ಅರಸರ ಕಾಲದಲ್ಲಿ

ಏರ್ಪಾಡಾದದ್ದು–ತಾವಳಗೇರಿ ಮೂರ್ನಾಡು, ಅಂಜಿಗೇರಿ ನಾಡುವಿನಿಂದ ಹಿಡಿದು ಗಡಿನಾಡು, ಸೂರ್ಲಬಿನಾಡುವರೆಗೆ ಇದ್ದ ೨೬ ನಾಡುಗಳ ೬೪ ಕೊಡವ ಕುಳಗಳ ಮನೆಪದಗಳನ್ನು ಮಾತ್ರ ನೀಡಲಾಗಿದೆ. ಈ ಸಂದರ್ಭವನ್ನು ದೇಶಕ್‌ಟ್ಟ್ ಪಾಟ್‌ನಲ್ಲಿ ನಿರೂಪಿಸಿರುವ ಬಗೆ ಒಂದು ಸುಂದರ ಜನಪದ ಹಾಡುಗಬ್ಬವಾಗಿ, ದೇಸೀಯತೆಯನ್ನು ಡಾಳವಾಗಿ ಅಚ್ಚು ಮಾಡಿದೆ.

*(ಬಾಳೋ ಬಾಳೋ ನಂಗಡ, ದೇವ ಬಾಳೋ ಮಾದೇವ....! ಈದೇಶ ಪವುತತ್ ಎನ್ನತಾಂಡಕೊಂಬಾಪ ? ಕೇಳಿ ಕೇಳಿ ಬೆಂದುವೆ. ಕೈ ಬೈಯಿರಿ ಕೊಂಬಲ್ಲ.... ಚಿತ್ತಾಲ್‌ಡ ಕೊಂಬಲ್ಲ...ಬೊಳ್ಳಾನೆರ ಕೊಂಬಲ್ಲ....ಪಲ್ಲಕಿರ ಕೊಂಬಲ್ಲ; ಪಾಲೇರಿ ಒಡೆವೋಂಡ ಕಚ್ಚಿಕೊಂಬ್...ಪಾಲೇರಿ ಒಡೆವೋಂಡ ಪೊಂದೇವಡಿ ಪಟ್ಟಿಲ್ ಜಾಮ ಕೊಂಬುರ್‌ಪ್‌ಚಿ ಆಂಡ ದನಿ ನಿಂದಲ್ಲಿ ಕೊಂಬ್‌ಡೆಣ್ಣ ಒಂದಾಚಿ...)*

–ಮಾದೇವನ ಕೃಪೆಯಿಂದಾಗಿ ಈ ನಾಡು ಹುಟ್ಟಿದ್ದು, ಕೊಂಬು ಆಗಿ ವಿಂಗಡಣೆ ಆಯ್ತು, ಕೇಳು ಬಂಧುವೆ. ಹಾಲೇರಿ ಅರಸರು ಕೊಟ್ಟ ಕಂಚಿನ ಕೊಂಬು ಊದಿದ ಧ್ವನಿ ಕೇಳಿಸುವಷ್ಟು ದೂರದ ಪ್ರದೇಶ, ಅಲ್ಲಿಂದ ಮತ್ತೆ ಊದಿ ದನಿ ಕೇಳಿಸುವಷ್ಟು ದೂರದ ಪ್ರದೇಶ ಹೀಗೆ ಕೊಂಬು ಗಡಿಗಳು ಸಾಗಿ ಹೋಗುತ್ತವೆ. ಹಾಲೇರಿ ಅರಸರ ಅರಮನೆ ಬಳಿ ನ್ಯಾಯಾಲಯಕ್ಕೆ ಪೊಂದೇವಡಿ ಪಟ್ಟಿ ಎಂಬ ಹೆಸರಿತ್ತು. ಅದು ಸರ್ವೋಚ್ಚ ನ್ಯಾಯಾಲಯವಾಗಿತ್ತು ಎಂದೆಲ್ಲ ಅರ್ಥವಿಲ್ಲಿದೆ.

ಹೀಗೆ ಅಂದಿನ ಭೌಗೋಳಿಕ ಆಡಳಿತ ಹಾಗೂ ನ್ಯಾಯಾಲಯದ ವ್ಯವಸ್ಥೆ, ರಾಜಧಾನಿಯಾಗಿದ್ದ ಹಾಲೇರಿ ; ಊರುಕೇರಿಗಳಲ್ಲಿದ್ದ ದೇವಸಮೂಹ, ಕೆರೆಗಳು, ಅಂಬಲಗಳು, ತಕ್ಕರು, ಗೋಸಂಪತ್ತು, ಕೃಷಿ ಕುರಿತೆಲ್ಲ ಹೇಳಿ, ಸಾಮಾಜಿಕ, ಸಾಂಸ್ಕೃತಿಕ, ಬದುಕನ್ನು ಕಟ್ಟಿಕೊಡುವ ಹಾಡು ಅದಾಗಿದೆ. ಸುಮಾರು ೫೦ ಪುಟಗಳಲ್ಲಿ ಹಾಲೇರಿ ಅರಸರ ರಾಜಕೀಯ ಚರಿತ್ರೆ, ಕಾಟಕಾಯಿ ಅಮರಸುಳ್ಯ ಹೋರಾಟ, ಕಾಶಿಗೆ ಹಾಲೇರಿ ವಂಶದ ಕೊನೆ ಅರಸ ಚಿಕ್ಕವೀರರಾಜೇಂದ್ರನು ಆಂಗ್ಲರಿಂದಾಗಿ ವರ್ಗಾಯಿತಗೊಂಡದ್ದು, ಕಾಟಕಾಯಿ ಯುದ್ಧದಲ್ಲಿ ಪಾಲುಗೊಂಡ ೨೭ ಕೊಡವ, ೫ ಗೌಡ ಮತ್ತು ಇಬ್ಬರು ಮುಸ್ಲಿಂ ಅಧಿಕಾರಿಗಳ ಹೆಸರುಗಳು ಹಾಗು ಆಂಗ್ಲರ ಮೇಲೆ ಅವರು ತೋರಿದ ರಾಜಭಕ್ತಿ ಕಾರಣ ಒದಗಿದ ಸವಲತ್ತುಗಳ ಕುರಿತೂ ಹೇಳಲಾಗಿದೆ.

೨ನೆಯ ಅಧ್ಯಾಯದಿಂದ ಕೊಡವರ ದೈನಂದಿನ ಜೀವನದ ಸಾಂಸ್ಕೃತಿಕ ಬದುಕನ್ನು ವಿವರವಾಗಿ ಮಂಡಿಸಲಾಗಿದೆ. ಅನುಗುಣ ಹಾಡುಗಳನ್ನು ಪೋಣಿಸಲಾಗಿದೆ ಬಾಲಲೀಲೆಯ ಹಾಡಿನಲ್ಲಿ *'ತಟ್ಟಂಡಾಣೆಲ್ ತಾರ್ ಕೊಡಂದೇ ಉದಿಯಾಂಡಾಣೆಲ್ ನೂರ್ ಕುದುರೆ ಪಂಡೇತಜ್ಜಂಡ ಪಡೆ ಬಂದ ಕಾಲ'* ಎಂಬ ಸಾಲುಗಳ ಮೂಲಕ ಸಿರಿಬಾಯಿ ದೊಡ್ಡವೀರಪ್ಪನ ಕಾಲದ, ಮನೆಪದ ನೀಡಿದ, ಮೈಸೂರಿನೊಡನಾದ ಬಾಳೆಲೆ ಯುದ್ಧದ ಗೆಲುವಿನ ಸೂಚನೆ ಕೊಡುವ, ಸಾಂಸ್ಕೃತಿಕ ಹಾಗೂ ಚಾರಿತ್ರಿಕ ಸೂಚನೆಗಳನ್ನು ಮಂಡಿಸಿರುವುದು ವಿಶಿಷ್ಟವೆನಿಸಿದೆ. ಜನಪದಕ್ಕೆ ಚರಿತ್ರೆಯನ್ನು ಮುಟ್ಟಿಸುವ, ಸಂಸ್ಕೃತಿಯನ್ನು ಗೌರವಿಸುವ ಹದವನ್ನು ಈ ಹಾಡಿನಲ್ಲಿ ತೋರಲಾಗಿದೆ.

ಮದುವೆ ಪ್ರಕ್ರಿಯೆಯಲ್ಲಿ ಕೊಡವರ ಜಾನಪದ ನಡಾವಳಿಗಳಲ್ಲಿ ಮದುವೆ ಹಾಡಿನಲ್ಲಿ ಹಾಲೇರಿ ಅರಸರನ್ನು ನೆನೆನೆದು ಹೇಳುವ ಪರಿಯು ವಿಶೇಷವೆನಿಸುತ್ತದೆ. *(**ಪಾಲೇರಿ ಒಡೆಯಂಡ ಪಟ್ಟತಾನೆ ನಿಂದೋಲೆ**–*ಹಾಲೇರಿ ಅರಸರ ಪಟ್ಟದಾನೆ ನಿಲ್ಲುವ ಭಂಗಿಯಲ್ಲಿ ನಾವು ಗಂಭೀರವಾಗಿ ಹೇಳುತ್ತೇವೆ ಎಂಬ ಹೋಲಿಕೆಯ ಮಾತು, ಜನಪದದಲ್ಲಿ ಹಾಲೇರಿ ಅರಸರ ಮೇಲಿದ್ದ ಪ್ರೀತಿಯ ಗೌರವದ ಭಕ್ತಿಯ ಭಾವನೆಗೆ ಚಾರಿತ್ರಿಕ ಸಾಕ್ಷಿಯಂತಿದೆ) ಮದುವೆಯ ಸಡಗರವನ್ನು, ಊರವರಿಗೆ ವೀಳ್ಯ ಕೊಡುವ ಊರುಪತ್ತಿ, ನೆಲ್ಲಕ್ಕಿ ನಡುಬಾಡೆಯಲ್ಲಿ ಬಟ್ಟೆ ಬರಿ ಕಂಚು ಇತ್ಯಾದಿಗಳನ್ನಿಟ್ಟು ಪೆಟ್ಟಿಗೆ ತುಂಬಿಸುವುದು ಹಾಗೂ ಬಿಳಿ ಮಡಿಬಟ್ಟೆಯಿಂದ ಮೇಲ್ಕಟ್ಟು ಚಪ್ಪರ ಹಾಕುವುದು, ಮಧ್ಯಾಹ್ನದಲ್ಲಿ ನಡೆಯುವ ಮುಹೂರ್ತ, ವರನಿಗೆ ಕೇಶಸಿಂಗಾರ, ವಧುವಿಗೆ ಬಳೆ, ಮಂಗಳಸ್ನಾನ, ಬೋಜಕಾರ ಹುಡುಗಿಗೆ, ಬೋಜಕಾರ್ತಿ ಹುಡುಗನಿಗೆ ಉಡಿಸುವ ಉಡುಪು, ಕೊಂಬುಕೊಟ್ ವಾದ್ಯದೊಡನೆ ಹಾಡುವ ಬಟ್ಟೆ ಪಾಟ್ (ಓಣಿ ಹಾದಿಯ ಹಾಡು) ಇತ್ಯಾದಿಗಳ ವಿವರಣೆ, ವರ್ಣನೆ ಮನಮುಟ್ಟುತ್ತವೆ. ವಿಶೇಷವಾಗಿ ತಕ್ಕಮುಖ್ಯಸ್ಥರ ಮನೆಯ ವರ್ಣನೆ ವಾಸ್ತುಶಾಸ್ತ್ರದ ಜನಪದೀಯ ವರ್ಣನೆ ಆಗಿ ಕುತೂಹಲಕಾರಿ ಆಗಿದೆ;

*('ಅೈಯೋರ್ ಒಕ್ಕಡ ಓಣಿಪಣಿಯೊ ಪಾಂಡವ ಪಾರೆಲ್ ಓಣಿ ಪಡತ ; ಅೈಯ್ಯೋರ್ ಒಕ್ಕಡ ಕಕ್ಕಟ್ಟ್ ಬೋಜ। ಕಾಡ್ ಕಲ್ಲ್‌ಂಗುಂಡ್ ಕಕ್ಕಟ್ ಕೆಜ್ಜ; ಅಯ್ಯೋರ್ ಒಕ್ಕಡ ಬಕ್ಕ ಪರೆಯೋ ಕೆತ್ತನ ಕಲ್ಲೊಂಡ್ ಬಕ್ಕ ಪಣಿಯೊ ಬಕ್ಕ ಕಡಕಣೆ ಜೋಮಯ್ಯ ಪಟ್ಟ। ಅಮಾಡೆ ಕಲ್ಲೊಂಡ್ ಪಟ್ಟ ಪಡತ : ಅಯ್ಯೋರ್ ಒಕ್ಕಡ ಮೊಟ್ಟ್ ಪಣಿಯೊ। ಮಾಣಿಕ ಕಲ್ಲೊಂಡ್ ಮೊಟ್ಟ್ ಪಡೆತ : ಮೊಟ್ಟ್ ಮರಿಯುಣೆ ಕೈಯ್ಯಾಲೆ ಕಂಡ ;....')*

–ತಕ್ಕರ ಮನೆ ಓಣಿ ಪ್ರಾಚೀನ ಕಟ್ಟಡವಾಗಿದ್ದು, ಉಭಯ ಬದಿಯಲ್ಲಿ ಕಲ್ಲಿನ ಗುಂಡುಗಳಿಂದ (ಕೋಟೆಯಂತೆ) ಕಟ್ಟಿಡ ಭದ್ರವಾಗಿದೆ. ಕಾಡುಕಲ್ಲುಗಳಿಂದ ಅದನ್ನು ಕಟ್ಟಲಾಗಿದೆ. ಬಕ್ಕಬಾಗಿಲು–ಗುಡ್ಡೋಣಿ ದಾಟ ಕಾಣುವ ಹೊರಮುಖ್ಯ





**ಐನ್ ಮನೆಯ ಬಳಿ ದೇವತೆಗೆ ಎತ್ತುಪೋರಟ ಮತ್ತು ಹುತ್ತರಿ ಹಬ್ಬದ ಸಮಯದ ಸಿದ್ದಿ ಕಾಪಳ ಕಳಿ**

ಪ್ರವೇಶದ್ವಾರವೂ ಕೆತ್ತನೆಗೊಂಡು ಅಂದವಾಗಿದೆ. ಅಲ್ಲಿಂದ ಬಂದರೆ ದನದ ಹಟ್ಟಿ ಇದೆ. ಮನೆಗೆ ಮುಂದಿನ ಹಾದಿಯಲ್ಲಿ ಅಂದವಾದ ಮಾಣಿಕ್ಯದಂಥ ಕಲ್ಲುಗಳಿಂದ ಹಾಸು ಹಾಸಿದೆ. ನಂತರ ಕಯ್ಯಾಲೆ ಇದೆ-ಹೀಗೆ ವರ್ಣನೆ ಮುಂದುವರಿದು ಮದುವೆ ಮನೆಯ ವಾಸ್ತುವನ್ನು ಮನಸ್ಸಿನಲ್ಲಿಟ್ಟುಕೊಂಡು ಹೇಳಿರುವುದು. ವಾಸ್ತುಶಾಸ್ತ್ರದ ಚಾರಿತ್ರಿಕತೆಗೆ ಜನಪದ ಸಾಕ್ಷಿಯೂ ಇಲ್ಲಿ ದಕ್ಕಿದೆ. ಪ್ರಾಗೈತಿಹಾಸಿಕ ಸ್ಮರಣೆಯನ್ನು 'ಪಾಂಡವಪಾರೆ'ಯ (ಬೃಹತ್ ಶಿಲಾಯುಗ ಸಮಾಧಿ ಗದ್ದುಗೆ) ವಾಸ್ತುವನ್ನು ಸ್ಮರಿಸುವ ಮೂಲಕ ಮಾಡಿರುವುದು ಈ ಜನಪದ ಗೀತೆಗೆ ಚಾರಿತ್ರಿಕ ಮಹತ್ವವನ್ನು ತರುತ್ತದೆ.

**ಬಾಳೆಬಿರುದು**-ಎಂಬುದು ಬಾಳೆದಿಂಡುಗಳನ್ನು ಮದುವೆ ಮನೆ ಮುಂದೆ ಗೂಟಗಳಿಗೆ ಹೊಡೆದು ನಿಲ್ಲಿಸಿ ತುದಿಗೆ ಬಾಳೆತಟ್ಟೆಯಿಂದ ಬಾಣ ಹಾಗೂ ಹೂ ಸಿಗಿಸಿ ಮನೆಗೆ ಹತ್ತಿಬರುವ ಅರ್ಹರಿಗೆ ಬಾಳೆ ಕೊಡುವುದು; ಬಂದ ನೆಂಟರಿಗೆ ತೋರಿಸಿ ವಡಿಕತ್ತಿ (ಒಡೆಯನ ಕತ್ತಿಯ ಸಂಕೇತ!) ಕೊಡುತ್ತಾರೆ. ದಿಂಡನ್ನು ಅವರು ಕತ್ತರಿಸಿ ಮುಂದೆ ನಡೆಯುತ್ತಾರೆ. ಈ ಸಂಬಂಧದಲ್ಲಿ ವಾದ್ಯವಾಗುತ್ತಿರುತ್ತದೆ; ಕನ್ಯೆ ಬಂದು ನೆಂಟರ ಕಾಲು ತೊಳೆಯುವುದು, ಮೆಟ್ಟಲು ಹತ್ತುವಲ್ಲಿ ತಳಿಯಕ್ಕಿ ಬೊಳಕು (ತಟ್ಟೆಯಲ್ಲಿ ಅಕ್ಕಿ ಹಾಗು ಕಳಶದೀಪ) ಹಿಡಿಯುವುದು ಇರುತ್ತದೆ. ಬಾಳೆ ಬಿರುದು ಒಂದು ರೀತಿಯಲ್ಲಿ ಕನ್ಯೆಯನ್ನು ಪಡೆಯಲು ಅಡ್ಡಿಗಳನ್ನು ಹಾಯ್ದು ವರಿಸುವ ವೀರತನದ ಸಂಕೇತ. ಅದು ಇಂದು ಸಾಂಸ್ಕೃತಿಕ ನೆನಪಾಗಿ, ಮಂಗಲದ ಸಮಯದ ಶಾಸ್ತ್ರವಾಗಿ ಉಳಿದುಕೊಂಡಿದೆ ಎನ್ನಬೇಕು. ಹೀಗೆಯೇ ಪೊಳಯಪಟ್ಟಿಗೆ, ತಳಿಯಕ್ಕಿ ಬೊಳಕಿಗೆ ಹಾಕುವ ಪಲಂಬು ಪಣ, ಮುಹೂರ್ತವಾದ್ಯ, ಹೆಣ್ಣು, ಗಂಡುಗಳ ಪರವಾದ 'ಅರುವರು' ಇವರ ಕುರಿತೆಲ್ಲ ವಿವರಗಳಿವೆ.



ಕೊಡಾವಳಿ ಮದುವೆಯ ವಿಧಗಳನ್ನೂ ವಿವರಿಸಲಾಗಿದೆ. ಆದರೆ ಹಾಲೇರಿ ಅರಸರು ಇಂಥ ಮದುವೆಗಳು ನ್ಯಾಯಬದ್ಧವಾಗಿರಬೇಕೆಂದು ಹಾಕಿದ ಕಟ್ಟಳೆಗಳನ್ನು (ಹುಕುಂನಾಮೆ ೨೩) ಕುರಿತು ಹೇಳಿ ಚಾರಿತ್ರಿಕ ಮಾನ್ಯತೆಯ ಸ್ವರೂಪವನ್ನು ತಿಳಿಸಲಾಗಿದೆ. ಸಂಬಂಧ ಕೂಡಿಸುವ ಪರಿಜೆ, ಹುಲಿಯನ್ನು ಕೊಂದ ವೀರನಿಗೆ **ನರಿಮಂಗಲ** (ಹುಲಿ ಮದುವೆ) ಆಚರಿಸುವ ಸಮಾರಂಭದ ವಿವರಗಳನ್ನು ಹೇಳಿ ಚಾರಿತ್ರಿಕ ಪದ್ಧತಿಯ ಪರಂಪರೆಯನ್ನು ತಿಳಿಸಿದೆ. ಈ ಸಂದರ್ಭದಲ್ಲಿ ಹಾಡುವ ಹಾಡು ಕೊಡಗಿನ ಹುಲಿಬೇಟೆಯ ಜನಪದ ಚರಿತ್ರೆ (ಬಾಯ್ದೆರೆ ಇತಿಹಾಸ) ಯನ್ನು ಹೇಳಲಾಗಿದೆ. ಸಾವು ಪದ್ಧತಿಯನ್ನು, ಪೊಲಚಿಪಾಟ್ ಮೂಲಕ ತಳಿಯಕ್ಕಿ ಬೊಳಕಿನಲ್ಲಿ ತಾಳವಿಟ್ಟು ಹೇಳುವುದಿತ್ತು. ಇದರಲ್ಲಿ ಸಹಜವಾಗಿ ನಡೆಯುವ ಕರ್ಮಾದಿಗಳನ್ನು ತಿಳಿಸಿದೆ. ಈ ಅಧ್ಯಾಯದಲ್ಲಿ ಒಟ್ಟಾರೆ ದೈನಂದಿನ ಸಾಂಸ್ಕೃತಿಕ ಬದುಕನ್ನು ಚಿತ್ರಿಸಿದ ಪ್ರಯತ್ನವಿದೆ.

ಮೂರನೇ ಅಧ್ಯಾಯದಲ್ಲಿ, ಕೈಲ್ ಪೊಳ್ದು (ಆಯುಧಪೂಜಾ ಹಬ್ಬ), ಕಾವೇರಿ ಸಂಕ್ರಮಣ-ಕಣಿಪೂಜೆ, ಬೊತ್ತು ಇಡುವಿಕೆ, ಹುತ್ತರಿಯ ಆಚರಣೆಗಳನ್ನು ಚಿತ್ರಿಸಲಾಗಿದೆ. ನಾಟಕ ದೃಶ್ಯಗಳನ್ನು ಅಳವಡಿಸಲಾಗಿದೆ. ಹುತ್ತರಿ ಕೋಲಾಟದ ಹಾಡು ಹೇಳಿಕೊಂಡು ಕೋಲಾಟ ಹಾಡುವಲ್ಲಿ, ಕೊಡಗಿನ ಕೃಷಿದೇವತೆ ಇಗ್ಗುತಪ್ಪನನ್ನು ನೆನೆದು, 'ಏಳಕ್ಕಿ ಪುತ್ತರಿ' ಎಂದು ಆ ಪದದ ಮೂಲಕ ಹುತ್ತರಿಯ ಇತಿಹಾಸ ಮುಂದಿಡುತ್ತಾರೆ.



ಶ್ರೀ ಇಗ್ಗುತಪ್ಪ, ಶ್ರೀ ಪಾಲೂರಪ್ಪ, ಶ್ರೀ ಪನ್ನಂಗಾಲತಮ್ಮೆ

ಹುತ್ತರಿ ಹುಟ್ಟಿದ್ದು ಕ್ರಿ.ಶ. ೯ನೇ ಶತಮಾನದಲ್ಲಿ ಎನ್ನಲಾಗಿದೆ. ಏಳಕ್ಕಿಯನ್ನು ಕೇರಳದಿಂದ ತಂದ ಮಾಗೂಳಿಯನ್ನು ನೆನೆದು ಆ ಹೆಸರಿನಲ್ಲಿ ಹುತ್ತರಿಯನ್ನು ಆಚರಿಸುತ್ತಾರೆ. ಕೊಡಗಿನ ಇಗ್ಗುತಪ್ಪನು ತನ್ನ ಸೋದರ, ಸೋದರಿ ಪನ್ನಂಗಾಲತಮ್ಮೆ ಮೂಲಕ ಬಂದ, ಕಾವ್ಯಮಯವಾಗಿ ಹಾಡುವ ಕಥೆಯನ್ನು ದಾಖಲಿಸಲಾಗಿದೆ. ಪಳಮೆಯಲ್ಲಿ 'ಎವ್ವಮಕ್ಕ ದೇಬುವಡ ಪಾಟ್'ನಲ್ಲಿ ಇದು ಬರುತ್ತದೆ. ಇದಲ್ಲದೆ ಕೊಡಿಚಿಯ (ಸೂಳೆ?) ಕುಣಿತದ ಹಾಡು, ಜೋಯಿಪಾಟ್, ಐಯಪ್ಪ, ಮಾದೇವ, ಭಗವತಿ ಹೆಸರಿನಲ್ಲಿ ಆಚರಿಸುವ ಬೆಳಕು ಹಬ್ಬ ಕುರಿತೆಲ್ಲ ವಿವರಗಳಲ್ಲಿ ಸಾಂಸ್ಕೃತಿಕ ಚರಿತ್ರೆಯನ್ನು ಕಟ್ಟಿಕೊಡಲಾಗಿದೆ.

೪ ಮತ್ತು ೫ನೇ ಅಧ್ಯಾಯದಲ್ಲಿ ದೇವತೆಯಡ ಪಾಟ್‌ಗಳು ಇದ್ದು, ಇಗ್ಗುತಪ್ಪ ಮತ್ತು ಸೋದರ ಸೋದರಿಯರು, ಪುತ್ತಲಮ್ಮೆ, ರುದ್ರಗುಪ್ಪಲಮ್ಮೆ, ಮುತ್ತ್‌ಲಪ್ಪ, ಮದೇರಪ್ಪ, ಪೊರಮಲೆ ಭಗವತಿ, ಕಾಕೋಟ್ ಅಜ್ಜಯ್ಯ, ಸಾರ್ತಾವು ಕ್ಷೇತ್ರಪ್ಪ, ನೀಲಕನ್ನಿ ಮಾದೇವಿ, ಹಾಲೇರಿ ಅರಸರ ಕಾಲದ ಐತಿಹಾಸಿಕ ವೀರ ಕಲಿಯಾಟಂಡ ಪೊನ್ನಪ್ಪ, ನಡಿಕೇರಿಯಂಡ ದೇವಯ್ಯ, ಕೈಯ್ಯಂದಿರ ಅಪ್ಪಯ್ಯ, ಜ್ಯೆಯ



ಕಲ್ಯಾಟಜಜ್ಜಪ್ಪನ ಕೈಮಡ ಮತ್ತು ಪಟ್ಟೇದಾರ ಶ್ರೀ ಅಜ್ಜಮ್ಮ (ಚಿತ್ರ :೧೯೭೯)



ಕಾಟಾಳುಬೊಳ್ತುವಿನ ಕೈಮಡ

ಕೋವಿರ ಅಪ್ಪಯ್ಯ, ಪೊಳ್ಳೆದೇವಿರ ಅಪ್ಪೈಯ್ಯ ಅವರ ಕುರಿತ ಹಾಡುಗಳಲ್ಲಿ ಪೌರಾಣಿಕ ಅಂಶಗಳಿವೆ; ಚಾರಿತ್ರಿಕ ಘಟನೆಗಳಿವೆ.

ಸಿದ್ಧಿ ಜನಾಂಗ ಮೂಲದ ಕಾಪಳರ ಕಾಟಾಳು ಬೊಳ್ತುವಿನ ಕತೆ ಇದೆ. ಕೊಡಗಿನ ಮನೆತನಗಳ ಚರಿತ್ರೆಯೂ ಸ್ಥೂಲವಾಗಿ ಸೇರ್ಪಡೆ ಆಗಿದೆ. ಹಾಲೇರಿ ಅರಸರೊಡನೆ ಆ ವೀರರಲ್ಲಿ ಕೆಲವರಿಗೆ ಇದ್ದ ಸಂಪರ್ಕವನ್ನು ತಿಳಿಸಲಾಗಿದೆ. ಕೊಡಗಿನ ನೈಸರ್ಗಿಕ ಚೇತೋಹಾರಿ ದೃಶ್ಯಗಳಿಗೆ, ಆಚರಣೆಗಳ ವರ್ಣನೆಯೂ ಇದೆ.

೬ನೇ ಅಧ್ಯಾಯದಲ್ಲಿ ೭೫೪ ಜನಪದ ಗಾದೆಗಳ ಸಂಗ್ರಹವಿದ್ದು, ಹಬ್ಬಗಳಲ್ಲಿ, ರಾಜಸಂಬಂಧಗಳನ್ನು ಸೂಚಿಸಿ ಇತಿಹಾಸದ ಸ್ಪರ್ಶವನ್ನು ಹೊಂದಿರುವ ಗಾದೆಗಳೂ ದಾಖಲೆಗೊಂಡಿವೆ.

*'ಕುಂದತ್ ಬೊಟ್ಟಲ್ ನೇಂದ ಕುದುರೆ ಪಾರಾಣೆ (ಬೋ)ಮಂಡಲ್ ತಾಂದ ಕುದುರೆ'* : ತುಲಾಸಂಕ್ರಮಣದ ಸಂದರ್ಭದಲ್ಲಿ ಗೋಣಿಕೊಪ್ಪ-ಕೈಕೇರಿ ಹಾದಿಯ, ಪೊನ್ನಂಪೇಟೆಯ ಪಶ್ಚಿಮಕ್ಕಿರುವ ಕುಂದಬೆಟ್ಟದಲ್ಲಿ ಕುದುರೆಕಳಿ ಆರಂಭವಾಗಿ (ಅಕ್ಟೋಬರ್‌ನಿಂದ ಸುಮಾರು ೯ ತಿಂಗಳು) ಜೂನ್ ೧-೨ನೇ ತಾರೀಖಿನಲ್ಲಿ ಪಾರಣಮಾನಿಯಲ್ಲಿ (ಕೈಕೇರಿ-ವೀರರಾಜೇಂದ್ರಪೇಟೆ ಹಾದಿಯ ಎಡ ಮಧ್ಯಪ್ರದೇಶ) ಇಡೀ ಕೊಡಗಿನ ಕುದುರೆ ಕುಣಿತ ಮುಕ್ತಾಯಕ್ಕೆ ಕುದುರೆ ಕಡಿಯವುದು ಎನ್ನುತ್ತಾರೆ. ಈ ೯ ತಿಂಗಳ ಅವಧಿಯಲ್ಲಿ ಕೊಡಗಿನೆಲ್ಲೆಡೆ ಹಬ್ಬ ನಡೆಯಲು ಅವಕಾಶ; ಇನ್ನು 'ಅರಮನೆ ಕತ್ತಿಕ್ ದಂಡ್ ಬರಿ ಬಾಯಿ' ; 'ದೊರೆ ಬಪ್ಪ'ಂದ್ 'ಎಣ್ಣ್‌ಚೇಂಗಿ ಕಂಡ ಚಕ್ಕೆ' ಪಣ್ಣಾಕುವ ; 'ರಾಜ್ಯಕ್ ಬಂದವನೇ ದೊರೆ'-ಇತ್ಯಾದಿ ಗಾದೆಗಳಲ್ಲಿ ಅರಮನೆ ಕತ್ತಿಗೆ ಎರಡೂ ಕಡೆ ಹರಿತ, ಎಂದರೆ ಅರಮನೆಯೊಡನೆ ರಾಜರೊಡನೆ ಮಾಡುವ ವ್ಯವಹಾರಕ್ಕೆ ಬಹಳ ಎಚ್ಚರವಿರಬೇಕು, ದಕ್ಷತೆ ಇರಬೇಕು ಎಂದು ಹೇಳಿ ಅಂದಿನ ಆಡಳಿತದ ಶಿಸ್ತನ್ನು ಸೂಚಿಸಿದೆ; ರಾಜನು ಬರ್‍ತಾನೆ ಎಂದರೆ ಪ್ರಜೆಗಳಿಗೆ ಭಯಭಕ್ತಿ ಇರುತ್ತದೆ. ಹಲಸಿಗೆ ಹೆದರಿಕೆಯೆ! ಹಲಸಿನ ಹಣ್ಣು, ಹಣ್ಣಾಗಲು ಕಾಲ ಕಾಯಬೇಕು; ನಂತರ ಸಮರ್ಥವಾಗಿ ರಾಜ್ಯವಾಳಲು ಬಂದವನೆ ದೊರೆ ಎಂದು ಹಾಲೇರಿಯ ಮೊದಲರಸನನ್ನು ಗಮನದಲ್ಲಿಟ್ಟುಕೊಂಡು ಹೇಳಿದಂತಿದೆ.

ಪಟ್ಟಮ ಪಡೆಕಾಗ, ಪೀರಕ್ಕೆ ಕರಿಕಾಗ-ಅರ್ಚಕ, ಶಾಂತಿಕಾರ ಸೈನ್ಯಕ್ಕೆ ಒಗ್ಗುವುದಿಲ್ಲ; ಕಹಿಯಾದ, ಪೀರೆಕ್ಕೆ ಹಣ್ಣು ಸಾರಿಗೆ ಆಗುವುದಿಲ್ಲ ಎಂದು ಸಾಮಾಜಿಕ ವಾಸ್ತವಗಳ ಗಾದೆಗಳನ್ನು ಹೇಳಲಾಗಿದೆ. ೬೯ ಒಡಪ ಪಡಿಮ-ಒಗಟುಗಳನ್ನು ನೀಡಿ ಉತ್ತರಗಳನ್ನೂ ನೀಡಿದೆ.

ಕೊಡಗಿನಲ್ಲಿ ಮಾತೆಂಬ ಬಳ ಸೇರಿಕೆಗೆ ಎರಡು ಜಾತಿಪ್ರಾತಿಯ ಸ್ವರೂಪ (ನಾಗರಿಗಮಾನ್ಯ ದೃಷ್ಟಿಯನ್ನು ಮುಂದಿರಿಸಲಾಗಿದೆ ಎಂಬುದು ಕೆಲವು ವಿದ್ವಾಂಸರ ಅಂಬೋಣ). ಸಾಂಪ್ರದಾಯಿಕ ಸಂಬಂಧಗಳ ಬಗ್ಗೆ (ಸೋಮವಾರ ಎತ್ತುಗಳನ್ನು ಉಳಲೀಯಾರದು) ಶಿಷ್ಟ ಪಾರಿಭಾಷಿಕ ಅರ್ಥಗಳನ್ನು ನೀಡಲಾಗಿದೆ. ಹೀಗೆ ಜನಜೀವನದಲ್ಲಿ ಕಂಡುಬರುವ ಜನಪದ ಘಟನೆಗಳು, ಪ್ರಕ್ರಿಯೆಗಳನ್ನು ನೀಡಿದ ಕೃತಿ ಪಟ್ಟೋಲೆ ಪಳಮೆ.

ನಡಿಕೇರಿಯಂಡ ಒಕ್ಕದ ಅಯ್ಯಣ ಪೊನ್ನವ್ವ ದಂಪತಿಗಳ ಪುತ್ರರಾಗಿ ಕ್ರಿ.ಶ. ೧೮೭೫ರಲ್ಲಿ ಜನಿಸಿ ೧೯೩೧ರವರೆಗೂ ನಡಿಕೇರಿಯಂಡ ಚಿಣ್ಣಪ್ಪ ಜೀವಿಸಿದ್ದರು. ಕೃಷಿಯನ್ನು ಬಲ್ಲವರಾಗಿದ್ದರು. ಮಡಿಕೇರಿಯ ಸೆಂಟ್ರಲ್ ಹೈಸ್ಕೂಲ್‌ನಲ್ಲಿ ಓದಿ, ನಂತರ ಎಫ್.ಎ(ಕಲೆ) ಪದವಿಗೆ ಮಂಗಳೂರು ಕಾಲೇಜಿನಲ್ಲಿ ಓದುತ್ತಿದ್ದರು. ಸೋದರ ಸುಬ್ಬಯ್ಯನವರು ತೀರಿಕೊಳ್ಳಲು, ಕುಟುಂಬದ ಹೊಣೆ ಹೊರಬೇಕಾಗಿ ಬಂದು ಕೊಡಗಿಗೆ ಹಿಂದಿರುಗಿದರು. ತೀರಿದ ಸೋದರನ ಪತ್ನಿಯನ್ನು ಮದುವೆ ಆಗಿ ಬಾಳು ಕೊಟ್ಟರು. ೧೯೦೦ರಲ್ಲಿ ರೆವೆನ್ಯೂ ಇನ್‌ಸ್ಪೆಕ್ಟರ್ ಆಗಿ ಕೆಲಸಕ್ಕೆ ಸೇರಿದರು. ನಂತರ ೧೯೦೨ರಲ್ಲಿ ಸೇನೆಗೆ ಸೇರಿ ಅಧಿಕಾರಿ ಆದರು. ೧೯೦೪ರಲ್ಲಿ ಕೂರ್ಗ್ ರೆಜಿಮೆಂಟ್ ಅನ್ನು ಮುಖ್ಯವಾಗಿ ಎಸ್.ಪಿ. ಆಗಿ ಪೊಲೀಸ್ ಇಲಾಖೆಗೆ ಸೇರಿದರು. ಕೊಡಗಿನಲ್ಲಿ ಸಂಚಾರ ಮಾಡಿ ಪಡೆದ ಜನಸಂಪರ್ಕದಲ್ಲಿ ಜಾನಪದ ಗೀತೆ, ಕತೆ ಇತ್ಯಾದಿಗಳನ್ನು ಸಂಗ್ರಹಿಸಿದರು. ಅದನ್ನೆಲ್ಲ ಸಂಪಾದಿಸಿ ಸರ್ಕಾರದ ನೆರವಿನಿಂದ ೧೯೨೪ರಲ್ಲಿ 'ಪಟ್ಟೋಲೆ ಪಳಮೆ' ಎಂಬ ಹೆಸರಿನಲ್ಲಿ ಪ್ರಕಟಿಸಿದರು. ಆ ಕೃತಿಯು ಮೈಸೂರು ವಿಶ್ವವಿದ್ಯಾಲಯದಿಂದ, ನಂತರ ಕನ್ನಡ ಪುಸ್ತಕ ಪ್ರಾಧಿಕಾರದಿಂದ ಪುನರ್ಮುದ್ರಣಗೊಂಡಿತು. ೨೦೦೩ರಲ್ಲಿ ಅವರ ಮೊಮ್ಮಕ್ಕಳಾದ ಡಾ॥ ಬೋವೇರಿಯಂಡ ನಂಜಮ್ಮ ಚಿಣ್ಣಪ್ಪ ದಂಪತಿಗಳು ಆಂಗ್ಲಭಾಷೆಗೆ ಈ ಕೃತಿಯನ್ನು ಅನುವಾದಿಸಿ *'PATTOLE PALAME'* ಎಂದು ಪ್ರಕಟಿಸಿದ್ದಾರೆ.



ಕೇಂದ್ರದಲ್ಲಿ ನಡಿಕೇರಿಯಂಡ ಚಿಣ್ಣಪ ಮತ್ತು ಕುಟುಂಬದ ಸದಸ್ಯರು – ಕ್ರಿ.ಶ. ೧೯೨೨



ಚಿಣ್ಣಪ್ಪನವರ ಕುಟುಂಬದ ಇನ್ನೊಂದು ನೋಟ – ಕ್ರಿ.ಶ. ೧೯೨೯
(ಉಭಯ ಚಿತ್ರಕೃಪೆ: ಡಾ. ಬೋವೇರಿಯಂಡ ನಂಜಮ್ಮ ಚಿಣ್ಣಪ್ಪ ದಂಪತಿಗಳು)

'ಮತಾದರ್ಶ' ಕೃತಿಯು ಸಂಪ್ರದಾಯ, ಪೌರಾಣಿಕ ನೆಲೆಯಲ್ಲಿ ರೂಪುಗೊಂಡು ಇತಿಹಾಸದ ಸ್ಪರ್ಶ ಪಡೆದಿದ್ದರೆ, 'ಪಟ್ಟೋಲೆ ಪಳಮೆ' ಜನಪದ ನೆಲೆಯಲ್ಲಿ ಬೆಳೆದು ಇತಿಹಾಸದ ಅಂಕಣದಲ್ಲಿ ಸಾಕಷ್ಟು ಓಡಾಡಿದೆ. ಪಳಮೆಯು ಗಮನ ದಕ್ಷಿಣ ಕೊಡಗಿಗಿಂತ ಉತ್ತರ ಕೊಡಗಿನ ಜನಪದ ಸಂಗ್ರಹದಲ್ಲಿ ಹೆಚ್ಚು ಕೇಂದ್ರೀಕೃತವಾಗಿದೆ ಎನ್ನಬೇಕು. ಅದೇನೇ ಇರಲಿ ಉಭಯ ಕೃತಿಗಳೂ ತಮ್ಮ ಕಾಲದ ಆಶಯಗಳನ್ನು ಮಂಡಿಸಿ ಜನತೆಯ, ಜನಾಂಗದ ಮಡಿಲಿಗಿಟ್ಟಿವೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧.i. ಎಂ.ಜಿ. ನಾಗರಾಜ್, 'ವಿಜಯನಗರದ ಕಾಲದ ತಮ್ಮಡಿಗಳು ಹಿನ್ನೆಲೆ ಮುನ್ನೆಲೆ', **ವಿಜಯನಗರ ಅಧ್ಯಯನ ಸಂಪುಟ–೮**, ೨೦೦೩, (ಸಂ.) **ಕೆ.ಆರ್. ರಾಮಕೃಷ್ಣ, ಡಾ. ಆರ್. ಗೋಪಾಲ್, ಟಿ.ಎಸ್. ಗಂಗಾಧರ, ಪ್ರಾಚ್ಯವಸ್ತು ಮತ್ತು ಸಂಗ್ರಹಾಲಯಗಳ ನಿರ್ದೇಶನಾಲಯ, ಹೊಸಪೇಟೆ**, ಪು. ೬೬–೭೫ ಮತ್ತು ೯೭ನೇ ಪುಟದಲ್ಲಿರುವ ತಮ್ಮಡಿ ವೀರಪ್ಪನ ಚಿತ್ರ

ii. ಎ.ಕ.ಸಂ. ೧೧ (ರೈಸ್ ಆವೃತ್ತಿ) ; ಎ.ಕ. ಸಂ. ೨ (ಹೊಸತು)., ೧೯೭೪ ; ಎ.ಕ. ಸಂ. ೮ (ಹೊಸತು), ೧೯೮೪ ; ಎ.ಕ.ಸಂ. ೧೧ (ಹೊಸತು), ೨೦೦೨ ; ಎ.ಕ.ಸಂ. ೫ (ಹೊಸತು)., ೧೯೭೬–ಶ್ರವಣಬೆಳಗೊಳ, ಹೊಳೆನರಸೀಪುರ ತಾಲ್ಲೂಕು ಮೂಡಲಹಿಪ್ಪೆ, ಮೂಡಿಗೆರೆ ತಾಲ್ಲೂಕು ಕಣಚೂರು, ಮಂಡ್ಯ ತಾಲ್ಲೂಕು ಗುತ್ತಲು ಇತ್ಯಾದಿ ಗ್ರಾಮಗಳ ಶಾಸನಗಳು.

ಶ್ರೀ ಜಿ.ಎ. ಶಿವಲಿಂಗಯ್ಯನವರು, ೨೦೦೫ರಲ್ಲಿ 'ಮತಾದರ್ಶ'ದ ೨ನೇ ಮುದ್ರಣದ ಸಂಪಾದಕರಾಗಿ ಪ್ರಕಟಿಸಿದ್ದಾರೆ. ತಮ್ಮಡಿಗಳ ಕುರಿತು ನಾನು ವಿಚಾರಿಸಿದಾಗಲೆಲ್ಲ (ನಿ) ಎಕ್ಸಿಕ್ಯುಟಿವ್ ಎಂಜನಿಯರ್ ಶ್ರೀ ಎಸ್. ಕುಮಾರಸ್ವಾಮಿ, ಶ್ರೀ ರಾಜಶೇಖರಯ್ಯ, ಮೈಸೂರು ಮಹಾರಾಜ ಸಂಸ್ಕೃತ ಕಾಲೇಜಿನ (ನಿ) ಪ್ರಾಧ್ಯಾಪಕ ಶ್ರೀ ಮಲ್ಲಣ್ಣ, ನಂಜನಗೂಡಿನ (ನಿ) ಶಿಕ್ಷಕ ಹಿರಿಯರಾದ ಶ್ರೀ ಕುಮಾರಸ್ವಾಮಿ ಅವರೂ ನೆರವಾಗಿದ್ದಾರೆ.

೨. ಎಂ.ಜಿ. ನಾಗರಾಜ್., ೧೯೯೩, **ಕೆಂಬಟ್ಟೆ ಹೊಲೆಯರ ಸಂಸ್ಕೃತಿ**, ಕರ್ನಾಟಕ ಸಾಹಿತ್ಯ ಅಕಾದೆಮಿ, ಬೆಂಗಳೂರು, ನೋಡಿ.

ಡಾ. ಎಚ್.ಎಸ್. ಉಷಾರಾಣಿ*

# ಪೂವಿನಪಡಂಗಿಲೆಯ ಮಹಾಜನರು

ಯಾವುದೇ ಗ್ರಾಮದ ಅಭಿವೃದ್ಧಿಯಲ್ಲಿ ಮಹಾಜನರ ಪಾತ್ರ ಪ್ರಮುಖವಾದುದು. ಅವರು ಸ್ಥಳೀಯ ಆಗುಹೋಗುಗಳನ್ನು ನಿಯಂತ್ರಿಸುವುದರ ಜೊತೆಗೆ ದೇವಾಲಯ, ಕೆರೆ, ಕಟ್ಟೆ, ಬಾವಿಗಳ ನಿರ್ಮಾಣಕ್ಕೆ ಪ್ರೇರಕವಾಗಿ ನಿರ್ವಹಿಸುತ್ತಿದ್ದ ಪಾತ್ರವು ಅಲ್ಲಿಯ ಸಾಂಸ್ಕೃತಿಕ ಬೆಳವಣಿಗೆಗೂ ಪೂರಕವಾಗಿರುತ್ತಿತ್ತು.

ಬಳ್ಳಾರಿ ಜಿಲ್ಲೆಗೆ ಸೇರಿದ ಹಡಗಲಿ (ಹೂವಿನ ಹಡಗಲಿ) ಇಂದು ತಾಲೂಕು ಕೇಂದ್ರ. ಪೂವಿನಪಡಂಗಿಲೆಯ ಬಗ್ಗೆ ಶಾಸನಗಳಲ್ಲಿ[೧] "*ಶ್ರೀಮದಾನಾದಿಯ ಮಹಾಅಗ್ರಹಾರಂ ದಕ್ಷಿಣ ವಾರಣಾಸಿ ಪೂವಿನಪಡಂಗಿಲೆಯ ಮಹಾಜನಂ*" ಎಂದೂ *ಕುಂತಳದೇಶದೊಳ್ಗನಂಗೊಳಿಪ ಮುಖಕ್ಕೆ ನಾಸಿಕವೆನಿಪ್ಪ ಪೊಲಿಪ್ಪ ನೊಣಂಬವಾಡಿ ನಾಡೊಳಗಿದು ದ್ರಿಷ್ಟಿ ತಾನೆನಿಪ ಕೋಗಳಿ ನಾಡೋಳಗಗ್ರಹಾರ ಮಗ್ಗಳಿಕೆಯನಾಂತ ಪೂವಿನ ಪಡಂಗಿಲೆ ರಾಜಿಪುದೆಂತು*" ಎಂದು ವರ್ಣಿಸಲ್ಪಟ್ಟಿದೆ. ಉಲ್ಲೇಖಿತ ಅಗ್ರಹಾರದ ಮಹಾಜನರ ವಿಶೇಷತೆಯನ್ನು ಅರಿಯುವುದೇ ಪ್ರಸ್ತುತ ಪ್ರಬಂಧದ ಉದ್ದೇಶ.

ಪೂವಿನಪಡಂಗಿಲೆ ಎಂಬ ಹೆಸರೇ ಅದು ಹೂದೋಟ ಮಾಲೆಗಾರರಿಗೆ ಪ್ರಾಶಸ್ತ್ಯ ನೀಡಿತ್ತೆಂದು ಸೂಚಿಸುತ್ತದೆ. 'ಪಡಂಗಿಲೆ' ಎಂದರೆ ತೆಪ್ಪ. ಇದರಿಂದ ಕಮ್ಮಾರರು, ಚಮ್ಮಾರರು ಸ್ಮರಿಸುವಂತಾಗುತ್ತದೆ. 'ಪೂವಿನ ಪಡಂಗಿಲೆ' ಎಂದಾಗ ತೆಪ್ಪದಲ್ಲಿ ಹೂವಿನ ರಾಶಿಯನ್ನು ತೇಲಿಬಿಡುತ್ತಿದ್ದವರ ನೆಲೆವೀಡು, ತುಂಗಭದ್ರಾ ತೀರದ ಹಂಪೆಯ ವಿರೂಪಾಕ್ಷನಿಗೆ ಪೂಜೆಯ ವೇಳೆಗೆ ಮಲ್ಲಿಗೆ ಹೂ ತಲಪುವಂತೆ ಪಡಂಗಿಲೆಯಲ್ಲಿ ಹೂವಿನ ರಾಶಿಯನ್ನು ತೇಲಿಬಿಡುತ್ತಿದ್ದರೆಂದು ಇಂದಿಗೂ ಪ್ರತೀತಿ ಇದೆ. ಸಮಯಪ್ರಜ್ಞೆ, ಕರ್ತವ್ಯ ನಿಷ್ಠೆಗೆ ಹೆಸರುವಾಸಿಯಾಗಿದ್ದ ಇಲ್ಲಿಯ ಜನತೆಯ ಚಟುವಟಿಕೆಗಳ ಅವಲೋಕನಕ್ಕೆ ಲಭ್ಯವಿರುವ ಪ್ರಕಟಿತ ಶಾಸನಗಳನ್ನು ಬಳಸಿಕೊಳ್ಳಲಾಗಿದೆ.

ಮೊದಲಿಗೆ ಕ್ರಿ.ಶ. ೧೦೪೫ರ ಹಗರಿಬೊಮ್ಮನಹಳ್ಳಿಯ ಮೊರಿಗೇರಿ ಶಾಸನ[೨] ಪೂವಿನಪಡಂಗಿಲೆ ರಾಜನ ನೆಲೆವೀಡಾಗಿತ್ತೆಂದು ತಿಳಿಸುತ್ತದೆ. ಈ ಶಾಸನವು ಮೊರಿಗೇರಿಯ ೧೨ ಮಹಾಜನರನ್ನು ಉಲ್ಲೇಖಿಸುತ್ತದೆ. ಅಂದು ಅಸ್ತಿತ್ವದಲ್ಲಿದ್ದ ಕೋಗಳಿಮಠಕ್ಕೆ ಕೋಗಳಿನಾಡಿನ ಸಾಮಂತರೆನಿಸಿದ್ದ ಘಟ್ಟಿಯರಸ, ಚಟ್ಟರಸ ಮತ್ತು ಸೇನಬೋವ ಗೋವಿಂದಯ್ಯ ಎಂಬುವವರು ಮಠದಲ್ಲಿನ ವಿದ್ಯಾದಾನಕ್ಕೆ, ಕೊಳಲು ನುಡಿಸುವವನಿಗೆ ಪರೆಕಾರನಿಗೆ, ಸೂಳೆವಾಳಂಗೆ, ಸೂಳೆಯರಿಗೆ ಮತ್ತು ಕಲ್ಕುಟಿಗ ಮುಜ್ಜೋನಿಗೆ ಭೂದಾನ ನೀಡಿದ್ದರ ಬಗ್ಗೆ ತಿಳಿಸುತ್ತದೆಯೇ ವಿನಃ ಪೂವಿನಪಡಂಗಿಲೆಯ ಮಹಾಜನರನ್ನು ಪ್ರಸ್ತಾಪಿಸುವುದಿಲ್ಲ. ಪ್ರಸ್ತುತ ಶಾಸನದಲ್ಲಿ ಉಲ್ಲೇಖಿತ ವೃತ್ತಿಯವರಲ್ಲದೆ ಶ್ರೀಮದ್ದಣ್ಣನಾಯಕ ತಿಕಣ್ಣ ಪ್ರಮುಖ ಹಾಗೂ ಲೆಂಕಸಾನಿರ್ವರನ್ನು ಪ್ರಸ್ತಾಪಿಸಲಾಗಿದ್ದು ಸೇವಾವೃತ್ತಿಯವರು ಈ ಗ್ರಾಮದ ವ್ಯಾಪ್ತಿಯಲ್ಲಿದ್ದರೆಂದು ಗೊತ್ತಾಗುತ್ತದೆ.

ಪೂವಿನಪಡಂಗಿಲೆ ರಾಜನ ನೆಲೆವೀಡಾಗಿದ್ದುದರಿಂದ ಜನಸಂಖ್ಯೆಯ ಹೆಚ್ಚಳ ಸಹಜ. ಜೊತೆಗೆ ಸೃಜನಶೀಲ ಪ್ರವೃತ್ತಿಯನ್ನು ವೃದ್ಧಿಸಿಕೊಳ್ಳಲು ಮತ್ತೊಂದು ಬಡಾವಣೆಯ ಅಗತ್ಯವನ್ನು ಅರಿತಿದ್ದಿರಬೇಕು. ಈ ಹಿನ್ನೆಲೆಯಲ್ಲಿ ಪೊಸಪಡಂಗಿಲೆ ಅಸ್ತಿತ್ವಕ್ಕೆ ಬಂದಿರಬಹುದೆಂದು ತೋರುತ್ತದೆ. ಕ್ರಿ.ಶ. ೧೦೫೭ರ ಹಡಗಲಿ ಶಾಸನ[೩]ದ ಪ್ರಕಾರ ಪೊಸಪಡಂಗಿಲೆಯ ಮಹಾಜನರಲ್ಲಿ ತ್ರಿವಿಕ್ರಮನೆಂಬುವವನಿಗೆ ನಕಲಿಮಯ್ಯ ಮತ್ತು ದೇಮರಸ ಎಂಬ ಮಕ್ಕಳಿದ್ದರು. ದೇಮರಸ ಮಹಾಮಾತ್ಯನಾಗಿದ್ದು ವಿಟಚಕ್ರವರ್ತಿಯೆಂದು ಹೆಸರು ಮಾಡಿದ್ದ. ಈತನು ದೇವೇಶ್ವರ ದೇವಾಲಯ ಕಟ್ಟಿಸಿ ಅಲ್ಲಿಯ ಮಹಾಜನರ ದೇವರ ಸೇವಾಕಾರ್ಯಕ್ಕೆಂದು ಭೂದಾನ ನೀಡಿದ್ದ. ಇದೇ ಸಂದರ್ಭದಲ್ಲಿ ೫೦೦ ಬಳಂಜುಗಳು ಹಾಗೂ ಅಲ್ಲಿಯ ೧೨೦ ಮಹಾಜನರು ಎಣ್ಣೆಗಾಗಿ ಮತ್ತು ತೆರಿಗೆಗಳ ಆದಾಯವನ್ನು ದೇವರ ಸೇವಾಕಾರ್ಯಗಳಿಗೆ ದಾನ ಮಾಡಿದ್ದರು. ಅದೇ ಶಾಸನವು ಪೊಸಪಡಂಗಿಲೆಯಲ್ಲಿ ಬೆಳೆಯುತ್ತಿದ್ದ ಪುಷ್ಪಗಳ ಬಗ್ಗೆ ವಿವರ

* ಪ್ರವಾಚಕರು, ಇತಿಹಾಸ ವಿಭಾಗ, ಪ್ರಥಮದರ್ಜೆ ಕಾಲೇಜು, ಮೈಸೂರು.

ನೀಡುತ್ತದೆ. ಅದರ ಪ್ರಕಾರ, ಪೊಗ, ನಾಗವಲೀ ವನದಿಂದ ಸೊಗಯಿಸುವ ಪಡಂಗಿಲೆ ಎಂದೂ "ಚಂಪಕ [illegible] ಮೋಚ ಪಾಟಳ ಪನ ಸಾಂಬ್ರ ಪೂಗವನ ನಾಗಲತಾಳಿಯಿ ನಗ್ರಹಾರ" ಎಂದೂ ಉಲ್ಲೇಖವಿದೆ. ಇದರಿಂದ ಈ ಅಗ್ರಹಾರ ದಲ್ಲಿ ಪಾದರಿ, ಗುಲಾಬಿ, ಮಲ್ಲಿಗೆ, ಸುಗಂದ ದ್ರವ್ಯ, ಅಡಕೆ ಮರ, ವೀಳೆಯ ಬಳ್ಳಿಗಳನ್ನು ಬೆಳೆಯುತ್ತಿದ್ದರೆಂದು ಸ್ಪಷ್ಟವಾಗು ತ್ತದೆ. ಪ್ರಾಯಶಃ ಪೊಸಪಡಂಗಿಲೆಯಿಂದ ಮತ್ತಷ್ಟು ಪುಷ್ಪಗಳನ್ನೇ ಪೂರೈಸುವ ವ್ಯವಸ್ಥೆ ಮಾಡಲಾಗಿತ್ತೆಂದು ಊಹಿಸಬಹುದು. ಅಲ್ಲದೆ ಪೊಸಪಡಂಗಿಲೆಯ ೧೨೦ ಮಹಾಜನರ ಮನೆಮನೆಯೊ ಅಗ್ನಿಹೋತ್ರ ವೇದನಾದದಿಂದಲೂ, ಪೊಸಕಾವ್ಯ, ಪೊಸಗೇಯಂ, ಪೊಸವಾದ್ಯ ಪೊಸವಿ ನೂತರಸವಂ, ನೃತ್ತಂ ಪೊಸವಸ್ತು, ಪೊಳವಿಳಾಸಂ, ಪೊಸದೇಸೆಯಿಂದ ಕೂಡಿತ್ತೆಂದು ಹೊಸ ನೆಲೆಯಲ್ಲಿ ವಾಸಿಸುತ್ತಿದ್ದ ಮಹಾಜನರನ್ನು ಕಂಡುಬರುತ್ತಿದ್ದ ಹೊಸ ಹುರುಪು, ಕಾವ್ಯಸೃಷ್ಟಿ ವಾದ್ಯ ನುಡಿಸುವಿಕೆ ಇತ್ಯಾದಿಗಳ ಬಗ್ಗೆ ಸ್ಪಷ್ಟ ಚಿತ್ರಣ ಸಿಗುತ್ತದೆ.

ಹೂವಿನಹಡಗಲಿಯ ಪಾಂಡುರಂಗ ದೇವಾಲಯದ ಆವರಣದಲ್ಲಿರುವ ಶಾಸನ[೪] ಪೂವಿನಪಡಂಗಿಲೆಯ ಮಹಾಜನರ ಸಂಖ್ಯೆ ೧೨೦ ಎಂದು ಖಚಿತಪಡಿಸುತ್ತದೆಯೇ ವಿನಃ ಗೋತ್ರ ಹಾಗೂ ವ್ಯಕ್ತಿನಾಮವನ್ನು ಸ್ಪಷ್ಟವಾಗಿ ತಿಳಿಸುವುದಿಲ್ಲ. ಬದಲಿಗೆ ಎಂದಿನಂತೆ ಸಾಮೂಹಿಕ ಹೊಣೆಗಾರಿಕೆಯನ್ನು ಎತ್ತಿ ಹಿಡಿಯುತ್ತದೆ. ಉದಾಹರಣೆ ಸ್ಥಳೀಯ ಕಲಿದೇವರ ಗುಡಿ ಕಟ್ಟಲು ಕೆಸರುಗಲ್ಲು ಹಾಕಿದ ಕಲ್ಕುಟಿಗ ಮಾರೋಜನಿಗೆ ೧೨೦ ಮಹಾಜನರು ಭೂದಾನ ನೀಡಿದ್ದರು. ಜೊತೆಗೆ ದೇವಾಲಯ ಕಟ್ಟುವ ಶಿಲ್ಪಿಗಳಿಗೆ ಅದರಲ್ಲೂ ಕಮ್ಮಾರರೂ ಹಾಗೂ ಕಲ್ಕುಟಿಗರಿಗೆ ತೆರಿಗೆಗಳಿಂದ ವಿನಾಯಿತಿ ನೀಡಿದುದು ಮಹಾಜನರ ಆಡಳಿತಾತ್ಮಕ ಅಧಿಕಾರ ವ್ಯಾಪ್ತಿಯ ಬಗ್ಗೆ ಮಾಹಿತಿ ಲಭಿಸಿದಂತಿದೆ. ಇದೇ ಸಂದರ್ಭದಲ್ಲಿ ಮಾಂಡಲಿಕರಾದ ಘಟ್ಟಿಯರಸ ಮತ್ತು ಮಲ್ಲಪ್ಪರಸರು ಪೊಲಿಯಕೆರೆಯ ಮನ್ನೆಯವನ್ನು ಕಲಿದೇವರಿಗೆ ಬಿಟ್ಟುಕೊಟ್ಟದ್ದನ್ನು ಅದೇ ಶಾಸನ ಹೇಳುತ್ತದೆ. ಈ ದಾನದ ನಿರ್ವಹಣೆಯ ಜವಾಬ್ದಾರಿಯನ್ನು ಸ್ಥಳದ ಸ್ಥಾನಿಕ ಮಲೆಯಾಳ ಪಂಡಿತನ ಶಿಷ್ಯ ಸಾಂತರಾಶಿ ಪಂಡಿತ, ಮಲ್ಲಪ್ಪರಸ ಮತ್ತು ಪೂವಿನಪಡಂಗಿಲೆಯ ೧೨೦ ಮಹಾಜನರಿಗೆ ವಹಿಸಿ ಅವರು ಮೇಲ್ವಿಚಾರಕರಾಗಿರುತ್ತಾರೆಂದು ಸೂಚಿಸಲಾಗಿದೆ. ಈ ನಿದರ್ಶನವು ದೇವಾಲಯ ನಿರ್ಮಾಣ ಮಾತ್ರವಲ್ಲದೆ ನಿರ್ವಹಣೆಯ ಜವಾಬ್ದಾರಿಯು ಮಹಾಜನರದ್ದಾಗಿತ್ತೆಂದು ತಿಳಿಸುತ್ತದೆ.

ಪೂವಿನಪಡಂಗಿಲೆಯ ಮಹಾಜನರ ಧೈರ್ಯ ಶೌರ್ಯ ದೈವೀಶಕ್ತಿ ಯೋಗಪಾಲನೆ ಕುರಿತಂತೆ ಪರಿಶೀಲಿಸಿದಾಗ ದೊರೆತ ಮಾಹಿತಿ ಹೀಗಿದೆ : ಹಡಗಲಿ ಶಾಸನವೊಂದರ ಪ್ರಕಾರ ಇವರು "ಯಮ ನಿಯಮ ಸ್ವಾಧ್ಯಾಯಿ ಧ್ಯಾನ ಧಾರಣ ಮೌನಾನುಷ್ಠಾನ ಜಪಶೀಲಗುಣಸಂಪನ್ನರ್, ಸುಜನ ಪ್ರಸನ್ನರ್, ದೇವರಿಷಿ ಪಿತೃತರ್ಪಣಾದಿ ವಿವಿಧ ಹವ್ಯಕವ್ಯ ಪ್ರಯೋಗ ಯೋಜಿತರ್, ಸಕಳಗುಣಾಭರಣ ಭೂಷಿತರ್, ಸತ್ಪಾರ್ಜಿತ ಸುಭಾಷಿತರ್, ಭಯಲೋಭದೂರರ್ ಪ್ರತ್ಯೇಕ ಕಾರ್ಯ ಬೃಹಸ್ಪತಿಗಳ್, ಯಜನ ಯಾಜನಾದಿ ಷಟ್ಕರ್ಮ ನಿರತರ್" ಎಂದು, ಮತ್ತೊಂದು ಶಾಸನ[೫]ದಲ್ಲಿ ಹೂವಿನ ಹಡಂಗಿಲೆಯ ಮಹಾಜನರು "ಪವಿತ್ರೀಕೃತ ಶರೀರರುಂ ಏಕವಾಕ್ಯರುಂ ದುಷ್ಟನಿಗ್ರಹ ಶಿಷ್ಟಪ್ರತಿಪಾಳರುಮಪ್ಪ ಶ್ರೀಮನುಮಹಾಅಗ್ರಹಾರಂ ಹೂವಿನ ಹಡಂಗಿಲೆಯೊ ರೊಡೆಯ ಪ್ರಮುಖವಿಶೇಷ ಮಹಾಜನಂ" ಎಂಬುದಾಗಿ ಅವರ ಸಾಮರ್ಥ್ಯದ ಬಗ್ಗೆ ಹೇಳಲಾಗಿದೆ.

ಮೇಲಿನ ಶಾಸನಗಳಲ್ಲಿ ಉಲ್ಲೇಖಿಸಿದ ಗುಣ ಸಾಮರ್ಥ್ಯ ಗಳುಳ್ಳ ಮಹಾಜನರು ದೀರ್ಘಕಾಲ ಪ್ರಭಾವಶಾಲಿಗಳಾಗಿದ್ದರು. ಉದಾಹರಣೆಗೆ, ದಂಡನಾಯಕ ಚಿದ್ದಯ್ಯ ವಿಜಯ ಸಾಧಿಸಿ ಉತ್ಸಾಹದಲ್ಲಿದ್ದಾಗ ಈ ಅಗ್ರಹಾರದ ಕೊಮಾರಸ್ವಾಮಿದ್ವೇದಿಭಟ್ಟ ಹಾಗೂ ಇತರ ಪ್ರಮುಖ ಮಹಾಜನರು ರಾಜನಿದ್ದಲ್ಲಿಗೆ ಹೋಗಿ ವೇದಘೋಷಗೈದು ಆಶೀರ್ವದಿಸಿದರು. ಇದರಿಂದ ಪ್ರಸನ್ನಚಿತ್ತನಾದ ರಾಜನು ಮಹಾಜನರ ವಿನಂತಿಯ ಮೇರೆಗೆ ಕೋಟಿಗನೂರಿನ ಮನ್ನೆಯ ಸ್ವಾಮ್ಯವನ್ನ ಸ್ಥಳೀಯ ಕಲಿದೇವರ ಸೇವಾಕಾರ್ಯಕ್ಕೆ ಹಾಗೂ ರಾಮೇಶ್ವರದ ಮಲಯಾಳ ಪಂಡಿತದೇವನ ಸಂತತಿಯ ಲಕುಲೇಶ ಪಂಡಿತನ ಮಠದ ಯತಿಗಳ ಆಹಾರಕ್ಕೆ ವಿದ್ಯಾರ್ಥಿಗಳ ಬಟ್ಟೆ ಮತ್ತು ಆಹಾರ, ಸೇವಕರು ಮತ್ತು ಹಾಡುಗಾರರಿಗೆಂದು ದಾನ ಮಾಡಿದನು. ಸಾಮಂತ ಘಟ್ಟಿಯರಸ ಈ ದಾನವನ್ನು ತ್ರಿಭಾಗವಾಗಿ ವಿಂಗಡಿಸಿ ಇದರ ಮೇಲ್ವಿಚಾರಣೆಯ ಜವಾಬ್ದಾರಿಯನ್ನು ೧೨೦ ಮಹಾಜನರಿಗೆ ವಹಿಸಿದ್ದನೆಂದು ಕಲ್ಲೇಶ್ವರ ದೇವಾಲಯದ ದಕ್ಷಿಣ ಗೋಡೆಯ ಬಳಿ ಇರುವ ಶಾಸನ[೬]ದಲ್ಲಿ ದಾಖಲಿಸಲಾಗಿದೆ.

ಅದೇ ರೀತಿ ಕೋಟಿ ಶಂಕರದೇವರ ಸೇವಾಕಾರ್ಯ ಮತ್ತು ಬ್ರಾಹ್ಮಣರ ಆಹಾರಕ್ಕಾಗಿ ವಿಕ್ರಮಾದಿತ್ಯನು ಕೊಟ್ಟಿಗನೂರು ಗ್ರಾಮವನ್ನು ದಾನ ಮಾಡಿ ಮಹಾಜನರಿಗೆ ವಹಿಸಿದ್ದ.[೮] ಮೇಲಿನ ನಿದರ್ಶನಗಳಿಂದ ಈ ಅಗ್ರಹಾರದ ವ್ಯಾಪ್ತಿಯಲ್ಲಿ ಶೈವ ಪಂಥದ ಪ್ರಭಾವ ಹೆಚ್ಚಾಗಿತ್ತೆಂದು ವೇದ್ಯವಾಗುತ್ತದೆ. ಅಂದಮಾತ್ರಕ್ಕೆ ವೈಷ್ಣವ ಪಂಥ ಕಡೆಗಣಿಸಲ್ಪಟ್ಟಿರಲಿಲ್ಲ. ಸಮಾನ ಆದ್ಯತೆ ನೀಡಲಾಗಿತ್ತು. ಪರಸ್ಪರರನ್ನು ಗೌರವಿಸಲಾಗಿತ್ತು ಎಂಬುದಕ್ಕೆ ದಾಖಲೆ ಇದೆ.

ಪೂವಿನಪಡಂಗಿಲೆ ಬ್ರಾಹ್ಮಣ ಸೇನಾನಿ ರವಿಗ ಅಥವಾ ರವಿದೇವನ ಪತ್ನಿ ರೆಬ್ಬಲಾದೇವಿಯ ತವರೂರು. ಆಕೆ ಸದಾಚಾರ, ಭಕ್ತಿ, ದಯೆ, ದಾನ ಧರ್ಮ ಧೈರ್ಯಕ್ಕೆ ಎತ್ತಿದ ಕೈ. ಆಕೆಯ ಶ್ರದ್ಧೆಯ ಫಲವಾಗಿ ಕೇಶವ ದೇವಾಲಯ ನಿರ್ಮಾಣಗೊಂಡಿತು. ದೇವರ ಪ್ರತಿಷ್ಠಾಪನೆ ಮಾಡಿಸಿ ದೇವರ ಸೇವಾ ಕಾರ್ಯಗಳಿಗೆಂದು ಭೂದಾನ ಮಾಡಿದಳು. ಬ್ರಾಹ್ಮಣ ಸೇನಾನಿ ರವಿಗ ಸಹೋದರರಲ್ಲಿ ಕಿರಿಯವನೆಂದೂ, ಶಸ್ತ್ರ ಶಾಸ್ತ್ರ ಸಾಹಿತ್ಯಕಳಾ ಜ್ಞಾನ ನಿಧಿಯೆಂದು ಗುರುತಿಸಲ್ಪಟ್ಟಿದ್ದಾನೆ. ರವಿಗನ ವಿನಂತಿಯ ಮೇರೆಗೆ ದೇವರ ಸೇವಾಕಾರ್ಯಗಳಿಗೆಂದು ತ್ರಿಭುವನಮಲ್ಲದೇವ ಊರಚಲಗೇರಿ ಗ್ರಾಮವನ್ನು ದಾನ ಮಾಡಿದನು. ಊರಿನ ಸಾಂಸ್ಕೃತಿಕ, ಧಾರ್ಮಿಕ ಕ್ಷೇತ್ರದ ಮಹತ್ವವನ್ನು ಹೆಚ್ಚಿಸಿದುದರ ಪ್ರಯುಕ್ತ ಉಲ್ಲೇಖಿತ ಸೇನಾನಿ ಹಾಗೂ ಪತ್ನಿ ರೆಬ್ಬಲಾದೇವಿ ಶಾಶ್ವತವಾಗಿ ಸ್ಮರಿಸಲ್ಪಟ್ಟಿದ್ದಾರೆ. ಉಳಿದವರ ಬಗ್ಗೆ ಮಾಹಿತಿಗಳಿಲ್ಲ. ಅದೇ ಕಲ್ಲಿನಲ್ಲಿರುವ ಕ್ರಿ.ಶ. ೧೧೨೬ರ ಶಾಸನದ[೧೦] ಪ್ರಕಾರ ಬ್ರಾಹ್ಮಿಣಿ ಸೋರಿಕಯ್ವೆ ಕೇಶವ ದೇವರ ಅಂಗಭೋಗಕ್ಕೆ ಗದ್ದೆಯನ್ನು ದಾನ ಮಾಡಿದಳು ಎಂದು ಅರುಹುತ್ತದೆ. ಅಲ್ಲದೆ ಕುಕ್ಕನೂರು ಮತ್ತು ಗವನಿಯ ಬ್ರಾಹ್ಮಣರು ಹಾಗೂ ಬ್ರಾಹ್ಮಣಿ ಚಾಕಿಯಕ್ಕ ಅರಸಿಕಟ್ಟೆ, ಮಹಾಸಾಮಂತ ಘಟ್ಟಿಯರಸರು ನಗದು ರೂಪದಲ್ಲಿ ಕೇಶವದೇವರಿಗೆ ದಾನ ಮಾಡಿದ್ದನ್ನು ದಾಖಲಿಸಿದ್ದು, ಮಹಿಳೆಯರು ಸಮಾನವಾಗಿ ದೇವಾಲಯ ನಿರ್ವಹಣೆಯ ಜವಾಬ್ದಾರಿ ಹೊಂದಿರುತ್ತಿದ್ದದು ಮನದಟ್ಟಾಗುತ್ತದೆ. ಹೀಗೆ ವೈಷ್ಣವ ಪಂಥವು ಜೊತೆ ಜೊತೆಗೆ ಗೌರವಾದರಗಳನ್ನು ಪಡೆದಿತ್ತು ಎಂಬುದರಲ್ಲಿ ಸಂದೇಹವಿಲ್ಲ.

ಮಹಾಜನರ ಸಾರ್ವಜನಿಕ ಕಾರ್ಯಗಳನ್ನು ಮತ್ತಷ್ಟು ತಿಳಿಯಲು ಪೊಸಪಡಂಗಿಲೆಯ ಮಹಾಜನರ ಚಟುವಟಿಕೆಗಳನ್ನು ಪರಿಶೀಲಿಸಲಾಗಿದೆ. ಕ್ರಿ.ಶ. ೧೨೧೨ರ ಶಾಸನ[೧೧] ಇಮ್ಮಡಿ ವೀರಬಲ್ಲಾಳನ ಪಟ್ಟದರಸಿ ಪದುಮಲದೇವಿ ಪೊಸಪಡಂಗಿಲೆಯನ್ನು ಆಳುತ್ತಿದ್ದಾಗ, ಬ್ರಾಹ್ಮಣ ದಂಡನಾಯಕರಾದ ಗಂಗಿಮಯ್ಯನಾಯಕ ಮತ್ತು ದಾಮಣ್ಣ ದಂಡನಾಯಕರು ಹಿರಿಯಕೆರೆ ಮತ್ತು ತುಂಬಿನ ಕೆರೆಗಳ ನಿರ್ವಹಣೆಗೆ ಭೂದಾನ ಮಾಡಿದರು. ಇಲ್ಲಿಯೂ ಮಹಾಜನರ ಸಂಖ್ಯೆ ೧೨೦ನ್ನು ಮೀರಿಲ್ಲ. ಗುಣವಿಶೇಷತೆಗಳಲ್ಲೂ ವ್ಯತ್ಯಾಸವಿಲ್ಲ. 'ತೇಜೋಮಯ ವಿಭಾಸಿಗಳು ರಿಪುನಿಕಾಯ ಸಂತ್ರಾಸಿಗಳು' ಎಂದು ವಿಶೇಷವಾಗಿ ವರ್ಣಿಸಲ್ಪಟ್ಟಿದ್ದಾರೆ. ಕೆರೆ, ಕಟ್ಟೆ, ಜಲಸಂಪತ್ತು ಅದರ ಬಳಕೆ ಹಾಗೂ ಅದರ ನಿರ್ವಹಣೆಯ ಮಹತ್ವದ ಬಗ್ಗೆ ಮನವರಿಕೆ ಮಾಡಿಕೊಡಲಾಗಿದೆ.

ಒಟ್ಟಿನಲ್ಲಿ ಅರ್ಚಕರಾಗಿ ಊರ ಪ್ರಮುಖರಾಗಿ ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಳ್ಳುತ್ತಿದ್ದ ಮಹಾಜನರು ಸರ್ವೇಸಾಮಾನ್ಯ. ಆದರೆ ಸೈನಿಕ ವೃತ್ತಿಯನ್ನು ಅವಲಂಬಿಸಿದ್ದುದು ವಿಶೇಷ ಸಂಗತಿ. ಪ್ರಾಯಶಃ ಕದಂಬರ ಕಾಲದಿಂದಲೂ ಹೋಮ ಹವನ ಕಾರ್ಯಗಳ ಜೊತೆಗೆ ಸನ್ನಿವೇಶಕ್ಕನುಗುಣವಾಗಿ ಶಸ್ತ್ರಾಸ್ತ್ರ ಹಿಡಿಯುವ ಪ್ರವೃತ್ತಿ ಅಗ್ರಹಾರದ ಮಹಾಜನರಲ್ಲಿ ಕಂಡುಬಂದಿದೆ. ಉತ್ತರ ಕರ್ನಾಟಕದ ಅಗ್ರಹಾರಗಳಲ್ಲಿನ ಮಹಾಜನರು ರಾಜಕೀಯ ಸೈನಿಕ ಕ್ಷೇತ್ರದಲ್ಲಿ ಪ್ರಮುಖ ಪಾತ್ರವಹಿಸುತ್ತಿದ್ದರೆಂಬುದಕ್ಕೆ ಪೂವಿನಪಡಂಗಿಲೆಯ ಮಹಾಜನರ ಅಧ್ಯಯನ ಪೂರಕವಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕನ್ನಡ ವಿಶ್ವವಿದ್ಯಾನಿಲಯ ಶಾಸನ ಸಂ. ೧, ಬಳ್ಳಾರಿ ಜಿಲ್ಲೆ,** ಹಗರಿಬೊಮ್ಮನಹಳ್ಳಿ ೩೭ ಕ್ರಿ.ಶ. ೧೧೮೧.
೨. ಅದೇ, ಹಗರಿಬೊಮ್ಮನಹಳ್ಳಿ ೨೪.
೩. ಅದೇ, ಹಡಗಲಿ ೫೨, ಕ್ರಿ.ಶ. ೧೦೫೭.
೪. ಅದೇ, ಹಡಗಲಿ ೮೬, ಕ್ರಿ.ಶ. ೧೦೬೨.
೫. ಅದೇ, ಹಡಗಲಿ ೮೩, ಕ್ರಿ.ಶ. ೧೦೯೦.
೬ ಅದೇ, ಹಡಗಲಿ ೮೧, ಕ್ರಿ.ಶ. ೧೧೪೮.
೭. ಅದೇ, ಹಡಗಲಿ ೮೪, ಕ್ರಿ.ಶ. ೧೦೭೧.
೮. ಅದೇ, ಹಡಗಲಿ ೮೧, ಕ್ರಿ.ಶ. ೧೧೪೮.
೯. ಅದೇ, ಹಡಗಲಿ ೮೩, ಕ್ರಿ.ಶ. ೧೦೯೦.
೧೦. ಅದೇ, ಹಡಗಲಿ ೮೩.
೧೧. ಅದೇ, ಹಡಗಲಿ ೫೩.

ಡಾ. ಎಸ್.ಕೆ. ಜೋಶಿ*

# ಚೋಳರು : ಒಂದು ಚಿಂತನೆ

ದಕ್ಷಿಣ ಭಾರತದ ಪ್ರಾಚೀನ ಹಾಗೂ ಮಧ್ಯಯುಗೀನ ಇತಿಹಾಸದಲ್ಲಿ ಚೋಳರಾಜ ವಂಶವು ಪ್ರಭಾವಿಯಾಗಿದ್ದು ಪ್ರಖ್ಯಾತಿಯನ್ನು ಪಡೆದಿದೆ. ಕ್ರಿ.ಶ. ೧೧೦೦-೧೨೨೪ರ ಕಾಲಾವಧಿಯಲ್ಲಿ ಕರ್ನಾಟಕದ ಈಗಿನ ಜಿಲ್ಲೆಗಳಾದ ಕೋಲಾರ, ಬೆಂಗಳೂರು, ಬೆಂಗಳೂರು ಗ್ರಾಮಾಂತರ, ಮಂಡ್ಯ, ಚಾಮರಾಜನಗರ ಜಿಲ್ಲೆಗಳಲ್ಲಿ ಗಣನೀಯ ತಮಿಳು ಭಾಷೆಯ ಶಾಸನಗಳು ತಲೆಯೆತ್ತಿವೆ. ತಮ್ಮ ಮೂಲ ಮಾತೃನಾಡಾದ ತಮಿಳುನಾಡನ್ನು ದಾಟಿ ಈ ಕರ್ನಾಟಕದ ಪ್ರದೇಶವನ್ನೂ ಈ ಮೇಲಣ ರೀತಿಯಾಗಿ ಆಕ್ರಮಿಸಿದ್ದರು.

ಈವರೆಗೆ ಕದಂಬ ವೃಕ್ಷಕ್ಕೆ ಸಂಬಂಧಿತರು 'ಕದಂಬರು' ಮತ್ತು 'ಚಾಲುಕ್ಯರು' ಚುಳಕ (ಬೊಗಸೆ)ದಲ್ಲಿ ಹುಟ್ಟಿದರು ಹಾಗಾಗಿ ಚಾಲುಕ್ಯ ನಾಮ ಪಡೆದರು. ಸಲಿಕೆ, ಚಲುಕ, ಚಾಲುಕ್ಯ, ಅಂದರೆ ಸಲಿಕೆಯನ್ನು ಉಪಯೋಗಿಸುವ ಕೃಷಿಕರ ವಂಶಜರು-ಚಾಲುಕ್ಯರು **'ರಾಷ್ಟ್ರಕೂಟರು'** ಪುಟ್ಟ ಪುಟ್ಟ ರಾಜ್ಯಗಳನ್ನು ಕೂಡಿಸಿ ಮಹಾ ಸಮಾಜವನ್ನು ಕಟ್ಟಿದವರು. **ಹೊಯ್ಸಳರು** ಎಂಬ ನಿರ್ದೇಶನದ ನುಡಿಯು 'ಸಳನೇ ಹೊಯ್ಯು' (ಸಿಂಹವನ್ನು ಹೊಡೆ, ಸದೆಬಡೆ, ಕೊಲ್ಲು) ಎಂಬದುದಾಗಿ ಹೊಯ್ಸಳರಾದುದು. ಈ ರೀತಿ ವಿವಿಧ ರಾಜವಂಶಗಳ ಬಗ್ಗೆ ಇತಿಹಾಸಕಾರರು ಅರ್ಥೈಸಿದ್ದಾರೆ.

ಹಾಗಾದರೆ 'ಈ ಚೋಳರು' ಯಾರು ? 'ಚೋಳ' ಈ ಶಬ್ದದ ವ್ಯುತ್ಪತ್ತಿ, ಅರ್ಥ, ವಿಸ್ತಾರ, ವಿವರಣೆ, ಸಂಬಂಧ, ವೈಯಾಕರಣ ನೆಲೆ, ಇತ್ಯಾದಿಗಳ ಬಗ್ಗೆ ಈ ಪ್ರಬಂಧದಲ್ಲಿ ಚಿಂತಿಸಲಾಗಿದೆ.

ಈ 'ಚೋಳ' ಎಂಬ ರಾಜನು ಸೂರ್ಯವಂಶದ ದುಷ್ಯಂತನ ಮಗನಾದ ಭರತ ಚಕ್ರವರ್ತಿಯ ಮಗನೆಂದು ಹೇಳಿದೆ ಅಷ್ಟೆ ಆದರೂ, ಈ ಚೋಳನ ಹಿಂದಣ ಆಗಿಹೋದ ರಾಜರುಗಳ, ವಂಶದ ಮೇಲೆ ಇನ್ನಷ್ಟು ಚಿಂತನೆ ಇಲ್ಲಿ ಮಾಡಲಾಗಿದೆ ಇದಕ್ಕೆ ಕನ್ನಡದ ಜೈಮಿನಿ ಭಾರತದ (ಸಂಧಿ ೪, ಪು. ೬೭) ಸಹಾಯ ತೆಗೆದುಕೊಳ್ಳಲಾಗಿದೆ. *(ಸ್ವರೂಪರಾಣಿ ಮಹಿಷಿ, ಅವರ ಸಂಶೋಧನೆಯ ರೀತ್ಯ) :*

ಮೂಲತಃ ಶಂತನು ಮಹಾರಾಜ ಹಾಗೂ ಸತ್ಯವತಿ (ಇವಳು ಮೊದಲು ಮತ್ಸ್ಯಗಂಧಿ) ಇವರಿಂದ ಚಿತ್ರವೀರ್ಯ ಹಾಗೂ ವಿಚಿತ್ರವೀರ್ಯ ಎಂಬ ಮಕ್ಕಳು. ಈ ಚಿತ್ರವೀರ್ಯ ವಿಚಿತ್ರವೀರ್ಯರಿಗೆ ಬೇಗನೇ ಮರಣ ಪ್ರಾಪ್ತಿಯಾದುದರಿಂದ, ಸತ್ಯವತಿಯು ತನ್ನ ಮಗನೇ ಆದ ವ್ಯಾಸನನ್ನು (ಈತನು ಮತ್ಸ್ಯಗಂಧಿಗೆ ಪರಾಶರ ಋಷಿಯಿಂದ ಹುಟ್ಟಿದವ), 'ನಿಯೋಗ ಪದ್ಧತಿ' ಉಪಯೋಗಿಸಿ ತನ್ನ ಪತಿ ಹೀನರಾದ ಸೊಸೆಯಂದಿರರಾದ ಅಂಬಿಕೆ ಹಾಗೂ ಅಂಬಾಲಿಕೆಯರಿಗೆ ಪುತ್ರರನ್ನು ಪ್ರಾಪ್ತಿಪಡಿಸಿದಳು. ಈ ಸೊಸೆಯಂದಿರಿಂದ ಧೃತರಾಷ್ಟ್ರ, ಪಾಂಡುರಾಜ ಹಾಗೂ ವಿದುರರು ಜನಿಸಿದರು. ಇಲ್ಲಿ ಕುರುಪಾಂಡವರ ವಂಶ ಸ್ಪಷ್ಟವಾಗಿ ಮೂಡುತ್ತದೆ. ಅದು ಹೀಗೆ ಮುಂದುವರಿಯುತ್ತದೆ ಹಾಗೂ ಚೋಳರಿಗೆ ಜೋಡಿಸಿದೆ.

ಕಾಲಾನುಕ್ರಮಣಿಕೆಯಲ್ಲಿ : ಪಾಂಡುರಾಜ ; ಅರ್ಜುನ (ಕ್ರಿ.ಪೂ. ೧೫೦೦), ಅಭಿಮನ್ಯು ; ಪರೀಕ್ಷಿತರಾಜ ; ಜನಮೇಜಯ ರಾಜ ; ದುಶ್ಯಂತ ; ಭರತ ಚಕ್ರವರ್ತಿ ; ಚೋಳರಾಜ (ಕ್ರಿ.ಪೂ. ೬-೭ ಶತಮಾನ) ಭರತನ ಮಗ, ದಕ್ಷಿಣ ಭಾರತಕ್ಕೆ ಕಳುಹಿಸಲ್ಪಟ್ಟ ರಾಜ್ಯವಾಳಲು) ಈತನಿಂದಲೇ ಚೋಳವೆಂಬ ದಕ್ಷಿಣದ ಪ್ರದೇಶ ಪ್ರಾರಂಭವಾದುದು. ವಿಜಯರಾಜ ಚೋಳ, ವಿಜಯಾಲರಾಜ ಚೋಳ (ಕ್ರಿ.ಪೂ. ೩ ಶತಕ) (ಅಶೋಕನ ಶಾಸನದಲ್ಲಿ 'ಚೋಳ' ವಂಶನಾಮ ಉಕ್ತ) ನಂತರ ೧೯ ಚೋಳರಾಜರು ಆಗಿಹೋಗಿದ್ದಾರೆ : (ಕ್ರಿ.ಶ. ೯೮೫ರಿಂದ ೧೦೧೪ರವರೆಗೆ). ಪ್ರಸಿದ್ಧ ಚೋಳ ಚಕ್ರವರ್ತಿಗಳು. ಶ್ರೀ ರಾಜರಾಜ ಚೋಳ (ಕ್ರಿ.ಶ. ಸು. ೧೦೦೯) ಶ್ರೀ ರಾಜೇಂದ್ರ ಚೋಳ (ಕ್ರಿ.ಶ. ಸು. ೧೦೩೦ ಆಗ್ನೇಯ ಏಶಿಯಾದಲ್ಲೂ ರಾಜ್ಯ ವಿಸ್ತರಿಸಿದ.)

**'ಚೋಳ'**ನು ಪೌರಾಣಿಕ ಭಾರತದಲ್ಲಿ ದುಷ್ಯಂತ ಹಾಗೂ ಶಕುಂತಲೆಯರಿಂದ ಹುಟ್ಟಿದ ಭರತ ಚಕ್ರವರ್ತಿಯ ಪುತ್ರನು. ಈ ಭರತನಿಂದ ಭರತಖಂಡವೆಂದು

* ಪುರಾತತ್ವವಿದ, ಧಾರವಾಡ.

ನಾಮಗೊಂಡಿತು. ಅಂದರೆ ಭರತನ ಪುತ್ರ ಚೋಳ. ಚೋಳನು ಬಹಳೇ ಪರಾಕ್ರಮಿಯಾದ ಕಾರಣ, ಅವನ ತಂದೆಯಾದ ಭರತನು ದಕ್ಷಿಣ ಭಾರತದ ಒಂದು ಪ್ರಾಂತ್ಯವನ್ನು ಆಳಲು ಈತನನ್ನು ಕಳುಹಿಸಿದನು. *(Epigraphia Carnatica* Vol. No. IV), ಆರ್ಯಾವರ್ತದಿಂದ ದಕ್ಷಿಣಕ್ಕೆ ಬಂದ ಸೂರ್ಯವಂಶದ ಆರ್ಯರಿವರು– ಚೋಳರು. ಹೀಗಾಗಿ ಚೋಳರು ಉತ್ತರ ಭಾರತದಿಂದ ದಕ್ಷಿಣ ಭಾರತಕ್ಕೆ ಬಂದು ಇಲ್ಲಿ ವಲಸೆ ಹೊಂದಿದವರು. *(ಡಾ. ಪಿ. ವೆಂಕಟೇಶನ್ ಚೀಫ್ ಎಪಿಗ್ರಾಫಿಸ್ಟ್, ಮೈಸೂರು ಇವರೊಡನೆ ಚರ್ಚೆ).*

'ಚೋಳಕ್ಕೆ ಹಲವು ಅರ್ಥಗಳಿವೆ. ಚೋಳ ಅಂದರೆ ಬೇತಾಳ, ಭೂತ, ಚೋಲ್ಯ, ಚೋಳ್ಯ = ಅಂಗಿ, ಕುಪ್ಪಸ, ಕವಚ, ಚೊಳಕ = ಯೋಧರು ಧರಿಸುವ ಕವಚ (ಫಿಲಅಕತ್), ಚೋಳಕ = ಬೆಂಕಿಯನ್ನು ಹುಟ್ಟಿಸುವ ಮರದ ಚಕ್ಕೆ. ಚೋಳಿಕ = ಚೋಳದೇಶದ ರಾಜ, ಚೋಳತಿ = ಚೋಳ ದೇಶದವರು ರಾಣಿ ಚೋಳ್ನೆಲ = ಚೋಳದೇಶದ ನೆಲ (Land of Cholas), ಚೋಳರ ನಾಡು, ಚೋಳರ ಪ್ರದೇಶ. ಚೋಳ = ಒಂದು ವಂಶದ ಹೆಸರು. ಚೋಳ. ಪ್ರಾಚೀನ ತಮಿಳು ನಾಡಿನ ಒಂದು ರಾಜ್ಯದ ಹೆಸರು. ಚೋಳ = ಚೇಳ ದೇಶದ ಒಂದು ತರಹದ ಕುದುರೆ, (Horse), ಅಥವಾ ಚೋಳ ದೇಶದ ಜನ. ಹೀಗೆ ಅರ್ಥಗಳು ಇವೆ. ಇದಲ್ಲದೆ; ಕನ್ನಡ ಭಾಷೆಯಲ್ಲಿ 'ಜೋಳ' ಎನ್ನುವುದೊಂದು ಬೆಳವಲ ನಾಡಿನಲ್ಲಿ ಬೆಳೆಯುವ ಧಾನ್ಯ. ಈ ಧಾನ್ಯಕ್ಕೆ ತಮಿಳುನಲ್ಲಿ 'ಚೋಳ' ಅನ್ನುತ್ತಾರೆ. (ಕನ್ನಡ ಸಾಹಿತ್ಯ ಪರಿಷತ್ತು ಬೆಂಗಳೂರಿನಲ್ಲಿ ಪ್ರಕಟಿತ ನಿಘಂಟು, ಪುಟ ೨೯೦೬) 'ಚೋಳಕ್ಕೆ' ಕೆಲವು ಸ್ಥಳವಾಚಕ ನಾಮಗಳೂ ಸಂಬಂಧಿಸಿವೆ. ಉದಾ : ಚೋಳಪುರ, ಗಂಗೈಕೊಂಡ ಚೋಳಪುರಂ, ಚೋಳಕೊಂಡ, ಚೋಳ ನಲ್ಲೂರಪುರ, ಚೋಳಚಗುಡ್ಡ ಚೋಳೂರು (ಜಿ. ಬಾಗಕೋಟ).

ದಕ್ಷಿಣ ಭಾರತದ ಬಲಾಢ್ಯ ಅರಸುಮನೆತನ ಚೋಳರದು ಪೆನ್ನಾರ ನದಿಯ ಆಚೆಯಿಂದ ವೆಲ್ಲರು ನದಿಯ ದಡದವರೆಗೆ, ದಕ್ಷಿಣ ಭಾರತದಲ್ಲಿ, ಚೋಳರ ರಾಜ್ಯವು (ಕ್ರಿ.ಶ. ೮೫೦–೧೨೦೦ವರೆಗೆ) ಹಬ್ಬಿಕೊಂಡಿತ್ತು. ಈ ಪ್ರದೇಶವು ಚೋಳ ಮಂಡಲವೆಂದು ಪ್ರತೀತಿ. ಈ ಚೋಳ ರಾಜ್ಯದ ರಾಜಧಾನಿಯು 'ಪುಹಾರ್' (Puhar) ಅಥವಾ 'ಕಾವೇರಿಪಟ್ಟಿನಂ' ಎಂದು ಪ್ರಸಿದ್ಧ ನಗರವಾಗಿತ್ತು. ಇದು ಕಾವೇರಿ ನದಿಯ ಮುಖದಲ್ಲಿದೆ. ತಂಜಾವೂರು ಕೂಡ ಇದರ ರಾಜಧಾನಿಯಾಗಿತ್ತು.

ಒಟ್ಟು ೧೯ ರಾಜರುಗಳಾದರು. ವಿಜಯಾಲಯ ಅಥವಾ ವಿಜಾಲಯ ಚೋಳನು ವಂಶದ ಮೂಲ ಪುರುಷ ಕರಿಕಾಳನೆಂಬ ಚೋಳ ಅರಸನು ಚೋಳರಾಜರಲ್ಲಿ ಅತ್ಯಂತ ಪ್ರಸಿದ್ಧ. ಆತನು ಕಾವೇರಿ ತಪ್ಪಲು ಪ್ರದೇಶದಲ್ಲಿ ನೀರಾವರಿ ಯೋಜನೆಗಳನ್ನು ಕೈಕೊಂಡನಲ್ಲದೆ ಕಾವೇರಿಗೆ ಅಡ್ಡಲಾಗಿ ಒಂದು ಆಣೆಕಟ್ಟನ್ನೂ ಕಟ್ಟಿಸಿದನೆನ್ನಲಾಗಿದೆ. ರಾಜರಾಜ ಚೋಳನು (ಕ್ರಿ.ಶ. ೯೮೫–೧೦೧೪) ಒಬ್ಬ ಬಲಿಷ್ಠ ರಾಜ. ಈತನ ರಾಜ್ಯವು ಕಾವೇರಿ ಕೃಷ್ಣೆಯರ ಮಧ್ಯದ ಪ್ರದೇಶಗಳಲ್ಲಿ ಹರಡಿತ್ತು. ತನ್ನ ರಾಜ್ಯ ವಿಸ್ತರಣೆಯನ್ನು ಕಲ್ಯಾಣ, ವೆಂಗಿ, ಗಂಗ ಅರಸರ ತಲಕಾಡು, ಕಲಿಂಗ (ಓಡಿಸಾ), ತುಂಗಭದ್ರೆಯಿಂದ ಶ್ರೀಲಂಕೆಯವರೆಗೆ ಹರಡಿಸಿದನು.

ರಾಜೇಂದ್ರ ಚೋಳನ (ಕ್ರಿ.ಶ. ೧೦೧೨–೪೪), ದಂಡಯಾತ್ರೆಗಳು ಬಹಳ ತೀಕ್ಷ್ಣ ಹಾಗೂ ತೀವ್ರ. ವಿಂಧ್ಯ ಪ್ರದೇಶ, ಗಂಗಾನದಿಯ ಕೊಳ್ಳಗಳವರೆಗೂ ಕೈಕೊಳ್ಳಲ್ಪಟ್ಟವೆ. ಗಂಗರಾಜರನ್ನು ಸದೆಬಡಿದು ಗಂಗೈಕೊಂಡ–ಚೋಳಪುರಂ ಎಂಬ ವಿಜಯೋತ್ಸವ ಸಾರುವ ರಾಜಧಾನಿಯನ್ನು ಕಟ್ಟಿಸಿದನು. ಅಲ್ಲಿ ದೊಡ್ಡ ಕೆರೆ, ಕೋಟೆ, ಕಾಲುವೆಗಳನ್ನು ಕಟ್ಟಿಸಿದನು. 'ಕಡಾರಂಗೊಂಡ' ಎಂಬ ಬಿರುದು ಆತನಿಗಿದೆ. ಈತನದು ಬಹು ದೊಡ್ಡ ನೌಕಾಪಡೆ ಇದ್ದಿತ್ತು. ಶ್ರೀಲಂಕಾ, ಜಾವಾ, ಸುಮಾತ್ರಾವರೆಗೂ ಸಮುದ್ರ ಪ್ರಚಲನ ಕೈಕೊಂಡು ತನ್ನ ರಾಜ್ಯವನ್ನು ಅಲ್ಲಿಯವರೆಗೂ ಬೆಳೆಸಿದನು. ಆತನ ಸಮಯದಲ್ಲಿ ವ್ಯಾಪಾರ (Trade) ಹಾಗೂ ವ್ಯಾಪಾರಿ ಸಂಘಗಳು (Trade Guilds) ವೃದ್ಧಿಗೊಂಡವು. ಹಿಂದು ದೇವಾಲಯಗಳನ್ನೂ ಕಟ್ಟಿಸಿದನು.

ಚೋಳರು ಸಂಸ್ಕೃತಿ ಪ್ರಿಯರು. ತಮ್ಮ ತಮ್ಮ ಆಳ್ವಿಕೆಗಳಲ್ಲಿ ಬ್ರಹದ್ ದೇವಸ್ಥಾನಗಳನ್ನು ಕಟ್ಟಿಸಿದರಲ್ಲದೆ, ಸಾಹಿತ್ಯಕ್ಕೂ ಸ್ಫೂರ್ತಿ, ನೀಡಿದರು. ತಂಜಾವೂರು ಬ್ರಹದೀಶ್ವರ ದೇವಸ್ಥಾನ (ಕ್ರಿ.ಶ. ೧೦೦೯ – ರಾಜರಾಜ ಚೋಳನು ನಿರ್ಮಿಸಿದುದು), ದಾಳಾಸುರಮ್, ಗಂಗೈಕೊಂಡ – ಚೋಳಪುರಂ, ತ್ರಿಭುವನಂ, (ಕ್ರಿ.ಶ. ೧೦೩೦ : ಶ್ರೀ ರಾಜೇಂದ್ರನಿಂದ ನಿರ್ಮಾಣ), ಕಾಂಚೀಪುರಂ, ಮಧುರೈ, ಕುಂಭಕೋಣಂ, ತ್ರಿಚೂರ, ತಿರುಪತಿ, (ತಿರುಮಲೈ, ತಿರುವಾಯೂರು, ತಿರುವಾಂಕೂರು, ಶ್ರೀ ರಾಮನಾಥಪುರಂ, ತಿರುವೇಲ್‌ನೆಲ್ಲಿ, ಮಟ್ಟಂಚೇರಿ (ಕೇರಳ), ಪುದುಕೋಟೆ, ಚಿದಂಬರಂ, ಕಾವೇರಿಪಟ್ಟನಂ– (ಪುಹಾರ್), ನಾಗಪಟ್ಟಿನಂ, ಉರೈಯೂರು, ಕೋರ್ಕಾಯಿ, ಕನ್ಯಾಕುಮಾರಿ, ಇತ್ಯಾದಿ ನಗರ–ದೇವಸ್ಥಾನಗಳನ್ನು ಕಟ್ಟಿಸಿದರು, ವೃದ್ಧಿಪಡಿಸಿದರು.

ಕರ್ನಾಟಕದ ಈಗಿನ ಜಿಲ್ಹೆಗಳಾದ ಕೋಲಾರ, ಬೆಂಗಳೂರು, ಬೆಂಗಳೂರು ಗ್ರಾಮೀಣ, ಚಾಮರಾಜನಗರ, ಮಂಡ್ಯ ಜಿಲ್ಲೆಗಳನ್ನೂ ಚೋಳರು ತಮ್ಮ ನಾಡಿನ ಭಾಗಗಳಾಗಿಸಿಕೊಂಡಿದ್ದರು. ಈ ಜಿಲ್ಲೆಯಲ್ಲಿ ತಮಿಳು

ಶಾಸನಗಳು ಸಾಕಷ್ಟು ಇದ್ದು ಅವು ಚೋಳರ ಪ್ರಭಾವ ಸೂಚಿ ಆಗಿವೆ.

**ಚೋಳರ ಸಾಹಿತ್ಯ ಹಾಗೂ ಶಿಲ್ಪ ದರ್ಶನ :** ಚೋಳರ ಕಾಲದಲ್ಲಿ ತಮಿಳು ಸಾಹಿತ್ಯವೂ ಸಂಪದ್ಭರಿತವಾಯಿತು. ಆದಾಗಲೇ ತತ್ ಪೂರ್ವದಲ್ಲಿ ೫ನೇ ಶತಮಾನದ ಸುತ್ತಮುತ್ತ ತಮಿಳು ಸಾಹಿತ್ಯದ ಸಂಪತ್ತುಗಳೇ ಎನ್ನಿಸುವಂತೆ, ಶೌರ್ಯದ ಸಂಕೀರ್ತನೆ ಧ್ವನಿಸುವ ಸಂಗಮ್ ಲಿಟರೇಚರ್ (Sangam literature) ಪ್ರಸಿದ್ಧವೇ ಆಗಿತ್ತು. ಆದರೆ, ಚೋಳರ ಕಾಲದಲ್ಲಿ ತಮಿಳು ಸಾಹಿತ್ಯಕ್ಕೆ (ಕ್ರಿ.ಶ. ೯೮೫-ಕ್ರಿ.ಶ. ೧೨೦೦ರವರೆಗೆ) ಮತ್ತಷ್ಟು ರಾಜಾಶ್ರಯ ದೊರೆಯಿತು. ಕಂಬನ್ ರಾಮಾಯಣವು ಕವಿ ಕಂಬನಿಂದ ರಚಿತವಾದುದು ಈ ಕಾಲದಲ್ಲಿಯೆ, ಜಯಂಗೊಡರ್, ಕಳಿಗಟ್ಟುಪ್ಪದಾನಿ, ಇತ್ಯಾದಿ ಕವಿಗಳು ತಮಿಳು ಸಾಹಿತ್ಯವನ್ನು ಸಂಪದ್ಭರಿಸಿದ್ದಾರೆ ಇದೇ ಸಮಯದಲ್ಲಿಯೇ.

ದಕ್ಷಿಣ ಭಾರತದಲ್ಲಿ ಪ್ರಾಚೀನ ಯುಗ ಹಾಗೂ ಮಧ್ಯಯುಗಗಳ ಸಂಗಮದ ಕಾಲದಲ್ಲಿ, ತಮಿಳು ನಾಡಿನಲ್ಲಿ, ಶೈವ ಸಂಪ್ರದಾಯದ ಆಚಾರ ವಿಚಾರ ವಾಸ್ತುಗಳಿಗೆ ಚೋಳರ ರಾಜಾಶ್ರಯದಲ್ಲಿ ಸ್ಫೂರ್ತಿ ದೊರೆತಂತೆಯೆ, ವಿಷ್ಣು ಸಂಪ್ರದಾಯದ ಆಚಾರ ವಿಚಾರ ಹಾಗೂ ವಾಸ್ತುಗಳಿಗೆ ಮಾನ್ಯತೆ ದೊರೆಯಿತು. ವಿಷ್ಣು ಹಾಗೂ ಶಿವರಲ್ಲಿ ಅವರ ಸಾಹಿತ್ಯಿಕ ಕಥಾನಕಗಳಲ್ಲಿ ಒಂದು ತರಹದ ಸಮನ್ವಯ ಹಾಗೂ ಒಡಂಬಡಿಕೆಗಳನ್ನು ಕಾಣುತ್ತೇವೆ. ವೈದಿಕ ವ್ಯವಸ್ಥಾ ಪದ್ಧತಿಯು ಬಹಳಷ್ಟು ಗಹನವಾಗಿ ಹಾಗೂ ಘನವಾಗಿ ಈ ನಾಡಿನಲ್ಲಿ ಬೆಳೆದವು. ಪ್ರಾಚೀನ ವೈದಿಕ ಧರ್ಮ ವ್ಯವಸ್ಥೆಯು ಸಮಾಜದಿಂದ ಸಿಡಿದು ಹೋಗಲಿಲ್ಲ. ತನ್ನ ಪ್ರಕ್ರಿಯೆಯಲ್ಲಿ ಶೈವ ವೈಷ್ಣವಗಳ ಸಾಹಿತ್ಯ ಹಾಗೂ ಶಿಲ್ಪಗಳು ಒಂದಕ್ಕೊಂದು ಪೂರಕವಾದವು; ಹಾಗೂ ತಂಜಾವೂರು, ಕಾಂಚೀಪುರಂ, ಮಧುರೈಗಳಂಥ ಸಾಂಸ್ಕೃತಿಕ ಕೇಂದ್ರಗಳಲ್ಲಿ ಶೈವ ಸಾಹಿತ್ಯ ಹಾಗೂ ಶೈವ ವಾಸ್ತುಮಂದಿರಗಳು ಬೆಳೆದರೆ, ತಿರುಪತಿ, ತಿರುವಾಯೂರು, ತಿರುವಾಂಕೂರು, ಶ್ರೀರಾಮನಾಥಪುರಂ ಗಳಂಥ ಪ್ರತ್ಯಾಭಿಜ್ಞ ಸಾಂಸ್ಕೃತಿಕ ರಾಜಧಾನಿಗಳಲ್ಲಿ ವಿಷ್ಣು ಸಾಹಿತ್ಯ, ವಿಷ್ಣು ವಾಸ್ತುದೇವಾಲಯಗಳು ಪುಷ್ಟಿಗೊಂಡವು. ಹೀಗಾಗಿ ಶೈವ ಹಾಗೂ ವೈಷ್ಣವ ನಂಬಿಕೆಗಳ ವ್ಯವಸ್ಥೆ, ಸಂಸ್ಥೆ, ಗೊತ್ತುಗುರಿಗಳ ನೀಲನಕ್ಷೆ ಸಮಾಜಗಳ ಬಂಧದಲ್ಲಿ ಸಿದ್ಧಗೊಂಡೀತು ; ಆ ನಕ್ಷೆ ಕೇವಲ ಬೌದ್ಧಿಕ ಪಾತಳಿಯಲ್ಲಿ ಉಳಿಯದೆ, ಭಕ್ತಿಯ ಮಾಧ್ಯಮದ ಮೂಲಕ, ಸಾಮಾಜಿಕ ಸಾರ್ವಜನೀಯ ಅನುದಿನದ ಜೀವನ ವಿಧಿಯಾಯಿತು. ಕಂಬನ್‌ನ ಮಹಾಕಾವ್ಯ ಕಂಬರಾಮಾಯಣ. ರಂಗನಾಯಕಿ ಅಂಡಾಳ್‌ಳ 'ತಿರುಪ್ಪಾವೈ', ಜಯಗೊಂಡರ್ ಸಾಹಿತ್ಯಿಕ ಕೃತಿ, ಕಳಿಗಟ್ಟುಪ್ಪರಾಣಿಯ ಕಾವ್ಯ ತಪಸ್ಸಿನ ಫಲ, ರಾಮಾನುಜರ ರಾಮಸಂಪ್ರದಾಯದ ಹರಿವು ಕರ್ನಾಟಕದ ಮೇಲ್ಕೋಟೆಯ ವರೆಗೆ ಹರಿದು, ಚೋಳರ ನಾಡಿನ ಇಡಿಯಾದ ವಿಸ್ತಾರ ಹಾಗೂ ಸಾಂಸ್ಕೃತಿಕ ಕೊಡುಗೆಯನ್ನು ಸಾರುತ್ತಲಿವೆ.

ಚೋಳರ ಕಾಲೀನ ಭಕ್ತಿ ಚಳುವಳಿಯನ್ನು ಮುಂದುವರಿಸುತ್ತ ಹೇಳುವದಾದರೆ, ೯ರ ಶತಕದ ನಂತರ ವಿಶೇಷವಾಗಿ ಚೋಳ ಅರಸರ ಕಾಲದಲ್ಲಿ ಭಕ್ತಿ ಅಲೆ ರಭಸದಿಂದ ಎದ್ದವು. ಅವು ಎರಡು : ಒಂದು ವೈಷ್ಣವ ಭಕ್ತಿ ಪ್ರತಿಪಾದಕರಾದ ಆಳ್ವಾರರು, ಇನ್ನೊಂದು ಶೈವ ಭಕ್ತಿಮಾರ್ಗದಲ್ಲಿ ನಡೆದ ನಾಯನಾರ್‌ರು ಪ್ರಾರಂಭದಲ್ಲಿ ಇವರೀರ್ವರೂ ಭಾಗವತವು ತೋರಿದ ಧಾರ್ಮಿಕ ಔದಾರ್ಯವನ್ನೇ ತೋರಿದ್ದಾರೆ. ವೈಷ್ಣವ ನಂಬುಗೆ ಬೆಳೆಸಿದವರಲ್ಲಿ ತೊಂಡದ ದಿಪ್ಪೋಡಿ, ನಮ್ಮಾಳ್ವಾರ್, ಪೆರಿಯಾಳ್ವಾರ, ರಾಮಾನುಜ, ಮುಂತಾದವರನ್ನೂ ಶೈವ ನಂಬುಗೆ ಬೆಳೆಸಿದವರಲ್ಲಿ ೬೩ ಶಿವಭಕ್ತರನ್ನೊಡಗೂಡಿದ ನಾಯನಾರ್‌ರನ್ನೂ, ಸುಬಂಧರ್, ಸುಂದರರ್, ಸಂಬಂಧರ್ ಇತ್ಯಾದಿ ಶೈವ ಚಿಂತಕರನ್ನೂ ಜೋಡಿಸಬಹುದು. ಇದು ವೈದಿಕ ಧರ್ಮ ಪರಂಪರೆಯು ಬೆಳೆದ ಚೋಳ ದೇಶದ ಚಿತ್ರ ಹಾಗೂ ಸಾಹಿತ್ಯಿಕ ಚಿತ್ರ.

ಚೋಳರ ಕಾಲೀನ ರಾಜಕೀಯ ಹಾಗೂ ಸಾಹಿತ್ಯಿಕ ಬಿರುದಾಂಕಿತಗಳು ಶಿಲಾಶಾಸನಗಳಲ್ಲಿ ಸಾಕಷ್ಟು ದೊರೆತಿವೆ, (ಡಾ. ಚನ್ನಕ್ಕ ಪಾವಟೆ) ಉದಾ: ಚೋಳಾಂತಕ, ಚೋಳಗಾವುಂಡ, ಚೋಳಭೂಪ, ಚೋಳದೇವ, ಚೋಳದಂಡಾಧಿಪ, ಚೋಳರಾಯ, ಚೋಳಮಾರ್ತಾಂಡ, ಚೋಳ ಸೋಮೇಶ್ವರ ಪಂಡಿತ, ಚೋಳಾಯತ ರೇವಣ ಕ್ರಿ.ಶ. ೮ನೆಯ ಶತಮಾನದಲ್ಲಿ 'ಚೋಲ' ಎಂಬ ರೂಪವೂ ಶಿಲಾಶಾಸನಗಳಲ್ಲಿ ದೊರೆತಿದೆ. ತಳೆಗಾಂವದಲ್ಲಿ (ಮಹಾರಾಷ್ಟ್ರ) ರಾಷ್ಟ್ರಕೂಟರ ಕೃಷ್ಣನ ಶಾಸನದಲ್ಲಿ ಹೀಗಿದೆ. (Talegaou Inscri. of Krishna Raja Epigraphica India, 1953, Vol. XIII, p. 279.)

> "ಕಾಞ್ಚೀಶ ಕೇರಲ ನರಾಧಿಪ **ಚೋಲ** ಪಾಣ್ಡ್ಯ
> ಶ್ರೀಹರ್ಷ ವಜ್ರಟ, ವಿಭೇದ ವಿಧಾನದಕ್ಷಂ
> ಕರ್ನಾಟಕಂ ವನಮನನ್ತಮಜೇಯವನ್ಯೈತ
> ರ್ಭ್ರಿತ್ಯೈಃ ಕಿರದ್ಭಿರಪಿ ಯಸ್ಸಹಸಾಜಿಗಾಯ"

ಇಲ್ಲಿ ಚೋಳ ದೇಶದ ಸಮಕಾಲೀನ ರಾಜ್ಯಗಳ ಹೆಸರುಗಳನ್ನೂ ಸ್ಮರಿಸಲಾಗಿದೆ ; ಕೇರಳ, ಚೋಳ, ಪಾಂಡ್ಯ, ವಿದರ್ಭ, ಕರ್ನಾಟಕ ಇತ್ಯಾದಿಗಳನ್ನು ಹೆಸರಿಸ ಲಾಗಿದೆ.

**ಚೋಳರು ಹಾಗೂ ಅವರ ವಾಸ್ತುಶಿಲ್ಪ :** ಚೋಳರು ೧೨ನೇ ಶತಕದ ಸುತ್ತ ಬಲಾಢ್ಯ ಶಕ್ತಿಯಾಗಿ, ಸಾಂಸ್ಕೃತಿಕ

ಹಾಗೂ ರಾಜಕೀಯ ವಿಶ್ವರೂಪವಾಗಿ ಬೆಳೆದರು. ರಾಜರಾಜ ಚೋಳ ಹಾಗೂ ರಾಜೇಂದ್ರ ಚೋಳರಿಬ್ಬರು ವಿರಾಟ ಪುರುಷರು.

ಅವರ ಕಾಲದಲ್ಲಿ ಶೈವ ಸಂಪ್ರದದ ಬ್ರಹದೀಶ್ವರ ಟೆಂಪಲ್-ತಂಜಾವೂರ, ಚೋಳಬ್ರಹದೀಶ್ವರ ಮಂದಿರ-ಗಂಗೈಕೊಂಡ ಚೋಳಮಂಡಲಂ ಐರಾವತೇಶ್ವರ ದಾರಾ-ಸುರಮ್‌ಗಳಲ್ಲಿ ಹಾಗೂ ಇನ್ನಿತರ ವಿಷ್ಣು ಸಂಪ್ರದ ತಾಣಗಳಾದ ತಿರುಪತಿ, ರಾಮೇಶ್ವರಂ ಇತ್ಯಾದಿಗಳಲ್ಲಿ ಬ್ರಹದ್ ದೇವಾಲಯಗಳು ದ್ರಾವಿಡ ಶೈಲಿಯಲ್ಲಿ ರಚಿಸಿದರು. ಅವುಗಳೆಲ್ಲ ಇಷ್ಟೊಂದು ಬ್ರಹದ್ ಆಗಿದ್ದವೆಂದರೆ, ಅವು 'ನಗರ ದೇವಸ್ಥಾನಗಳೇ' (city temples) ಆದವು. ಆನಂದ ಕುಮಾರ ಸ್ವಾಮಿ ಅವರು ಹೇಳುವಂತೆ, ಅವು ವೈದಿಕ ಸಂಪ್ರದಾಯದ ನಾಲ್ಕೂ ವರ್ಣಗಳನ್ನು ತನ್ನ ಪ್ರಾಕಾರಗಳ ಬಾಹುಗಳಲ್ಲಿ ರಕ್ಷಿಸಿದವು. ಬ್ರಾಹ್ಮಣ ಕ್ಷತ್ರಿಯ ವೈಶ್ಯ ಶೂದ್ರರನ್ನು ತನ್ನ ತನ್ನ ಅಪ್ಪುಗೆಯಲ್ಲಿ ಆಶ್ರಯ ನೀಡಿದವು. ಇಂಥ ದೇವಾಲಯಗಳ ಸುತ್ತ 'ಪೌರಕೋಟೆ'ಗಳು (Civilian forts) ಕಟ್ಟಲ್ಪಟ್ಟವು.

'ಚತುರಸ್ರಾಕೃತಿ ನಾಗರಮ್
ವೃತ್ತಸ್ಯಾಗ್ರೇ ವೇಸರೀ ನಾಮಕಮ್
ಮೂಲಾಗ್ರಾತ್ ಸ್ತೂಪೀ ಪರ್ಯಂತ ಆಷ್ಟಾಸ್ರಕಂ
ವಾ ಷಡಾಸ್ರಕಮ್ ದ್ರಾವಿಡಂ'

ಮಾನಸಾರರ ಶಿಲ್ಪಟೆಕ್ಸ್ಟ್ಸ (ಶಿಲ್ಪಗ್ರಂಥಗಳಲ್ಲಿ), ಮೂಲದಿಂದ ಸ್ತೂಪೀ ಪರ್ಯಂತ ಕಟ್ಟೆ ಕಟ್ಟೆಯಾಗಿ ಕಿರಿಕಿರದಾಗುತ್ತ ಮೇಲೇರುವ ದ್ರಾವಿಡ ಶೈಲಿಯ ದೇವಾಲಯಗಳಿಗೆ ಚೋಳರು ಮಹತ್ವ ಕೊಟ್ಟು ತಮ್ಮ ಪ್ರಾಂತ್ಯದಲ್ಲಿ, ಅಷ್ಟೇ ಅಲ್ಲದೆ ಸಮುದ್ರದಾಚೆಗೆ (South East) ಜಾವಾ, ಸುಮಾತ್ರಾ, ಕಾಂಬೋಡಿಯಾ ಮುಂತಾದ ದ್ವೀಪ ತಾಣಗಳಲ್ಲಿ ತಮ್ಮ ರಾಜ್ಯವಿಸ್ತರಣೆ ಮಾಡಿ, ಅಲ್ಲಿಯೂ ಭಾರತೀಯ ದೇವಸ್ಥಾನಗಳ ವಾಸ್ತುಶಿಲ್ಪವನ್ನು ಹರಡಿದರು. ಅವರ ಸ್ಥಪತಿಗಳು, ಶಿಲ್ಪಿಗಳು, ರೂವಾರಿಗಳು ಅಷ್ಟು ದೂರ ಹಡಗಿನಲ್ಲಿ ಪ್ರಯಾಣಿಸಿ ತಮ್ಮ ಕಲೆಯ ನೈಪುಣ್ಯವನ್ನು, ಅಲ್ಲಿ ವಿವಿಧ ದೇವಾಲಯಗಳನ್ನು ನಿರ್ಮಿಸುವ ಮೂಲಕ ಬೆಳಗಿಸಿದರು.

ಹೀಗೆ ಶಿಲ್ಪ, ಸಾಹಿತ್ಯ, ಸಂಗೀತ, ನಾಟ್ಯ, ನ್ಯಾಯ, ರಾಜಸ್ವ, ನೀರಾವರಿ, ಹಡಗುಪಡೆ, ಯುದ್ಧನೀತಿ, ಶಾಂತಿ ಇತ್ಯಾದಿಗಳನ್ನು ಮಾನವ ಬದುಕಿನ ಅಂಗಗಳನ್ನು ಬೆಳೆಸಿ, ಭಾರತದ ಸಂಸ್ಕೃತಿಯ ಹಾಗೂ ಅದರ ಸಂಸ್ಕೃತೀಕರಣಕ್ಕೆ ವಿಶ್ವರೂಪ ನೀಡಿದರು ಚೋಳರು. ಹೌದು, ಇಷ್ಟು ವಿರಾಟರಾದರೂ 'ಚೋಳ' ರೆಂದರೆ ಯಾರು ? ಇನ್ನೂ ಗೂಢವಾಗಿದೆ. ನನಗೆ ಇದು ಸಮರ್ಪಕ ಉತ್ತರ ದೊರೆಯಬೇಕಾಗಿದೆ.

(ಡಾ. ಶಿಲಾಕಾಂತ ಪತ್ತಾರ, ಇತಿಹಾಸ ಪ್ರಾಧ್ಯಾಪಕರು, ಬಾದಾಮಿ,ಇವರೊಂದಿಗೆ ದೀರ್ಘ ಚರ್ಚೆ. ಅವರು ಕನ್ನಡ ಸಾಹಿತ್ಯ ಪರಿಷತ್ತು ಪ್ರಕಟಿಸಿದ 'ನಿಘಂಟು'ನಿಂದ ಕೆಲ ಅವತರಣಿಕೆಗಳನ್ನು ಝೆರಾಕ್ಸ್ ಮಾಡಿ ಕಳುಹಿಸಿದ್ದಾರೆ. 'ಚೋಳ' ಬಗ್ಗೆ ಸಾಕಷ್ಟು ಮಾಹಿತಿ ನೀಡಿದ್ದಾರೆ. ಅವರಿಗೆ ಈ ಲೇಖಕನು ಕೃತಜ್ಞ; ಶ್ರೀ ಪಿ. ವೆಂಕಟೇಶನ್, Director Epigraphy, ASI, ಮೈಸೂರು ಇವರು 'ಚೋಳರ' ಬಗ್ಗೆ ಚರ್ಚೆಯಲ್ಲಿ ಸಾಕಷ್ಟು ವಿವರ ನೀಡಿದ್ದಾರೆ. ಅವರಿಗೆ ನನ್ನ ಕೃತಜ್ಞತೆಗಳು. ಡಾ. ಚೆನ್ನಕ್ಕ ಪಾವಟೆ, ಪ್ರಾಧ್ಯಾಪಕರು, ಕ.ವಿ.ವಿ. ಧಾರವಾಡ ಇವರು ಸಾಕಷ್ಟು ಆಕರ ನೀಡಿ ನನ್ನ ಕೃತಜ್ಞತೆಗೆ ಪಾತ್ರರಾಗಿದ್ದಾರೆ. ಚಿತ್ರಗಳು ವಿವಿಧ ಮೂಲಗಳಿಂದ. ಅವರಿಗೆಲ್ಲ ಕೃತಜ್ಞತೆಗಳು.)

## ಆಧಾರಸೂಚಿ ಮತ್ತು ಟಿಪ್ಪಣಿಗಳು


1. Dr. S. Radhakrishnan., 1968, *Religon & Culture*, Hind Printings, New Delhi.
2. *Epigraphia Carnatica*, Chola, p. 417. Details about chola.
3. Dr. Prof. K. Nilakant Sastri., *An Advanced History of India.*
4. Jawaharlal Nehru., *Discovery of India.*
5. A.K. Coomaraswamy., 1927, *History of Indian and Indoneshian Art*, London.
6. Dr. Vinay Shigh, Dr. Sunil Kumar., Dr. Junish Seghal., *Go for Social Sciences*, (A Text Book) 6 Good Luck Publishers, New Delhi.
7. Govt. of Karnataka Directorate of text Books (6) (Ed : Dr. S. Settar) : Social Science, (6) Directorate of Text Books, Govt. of Kar., Bangalore.

೮. **ಕನ್ನಡ ಕನ್ನಡ ನಿಘಂಟು,** ಕನ್ನಡ ಸಾಹಿತ್ಯ ಪರಿಷತ್ತು, ಬೆಂಗಳೂರು.

೯. **ಪ್ರೊ. ವಿ.ಜಿ. ಮಾರಿಹಾಳ್., ಕರ್ನಾಟಕ ಸಂಸ್ಕೃತಿಯ ವಿಶ್ವರೂಪ.**

೧೦. **ಫಾಲಾಕ್ಷ., ಪ್ರಪಂಚ ಇತಿಹಾಸ ಪರಿಚಯ,** ಶಶಿ ಪ್ರಕಾಶನ, ತಿಪಟೂರು.

11. L.F. Rushbrook William., *Great men of India*, (Ed) : Home Library Club, Times of India, Publications.

ಎಸ್. ಪರಶಿವಮೂರ್ತಿ*

# ಧರ್ಮಪುರಿಯ ಪಲ್ಲವ ನೊಳಂಬರು

ಇಂದಿನ ತಮಿಳುನಾಡಿನಲ್ಲಿರುವ ಧರ್ಮಪುರಿ ಒಂದು ಜಿಲ್ಲಾ ಕೇಂದ್ರ. ಇದರ ಪ್ರಾಚೀನ ಹೆಸರು ತಗಡೂರು. ಈಗ ಇದು ತಮಿಳುನಾಡಿನಲ್ಲಿದ್ದರೂ ಹಿಂದೆ ಕರ್ನಾಟಕದ ಭಾಗವಾಗಿತ್ತು. ಇಂದಿನ ಆಂಧ್ರಪ್ರದೇಶದ ಅನಂತಪುರ ಜಿಲ್ಲೆಯ ಮಡಕಶಿರಾ ತಾಲ್ಲೋಕಿನ ಹೆಂಜೇರು ಅಥವಾ ಹೇಮಾವತಿ ಪಲ್ಲವ ನೊಳಂಬರ ರಾಜಧಾನಿಯಾಗಿತ್ತು. ಅನಂತರ ಕ್ರಿ.ಶ. ೧೧ನೇ ಶತಮಾನದಲ್ಲಿ ಇವರು ತಮ್ಮ ರಾಜಧಾನಿಯನ್ನು ತುಂಗಭದ್ರಾ ತೀರದಲ್ಲಿರುವ ಕಂಪಿಲಿಗೆ ಬದಲಾಯಿಸಿ ಕೊಂಡರು. ಪ್ರಾರಂಭದಲ್ಲಿ ನೊಳಂಬ ಸಾಸಿರವೆಂಬ ಚಿಕ್ಕ ಪ್ರದೇಶದಲ್ಲಿ ಆಧಿಪತ್ಯ ಪ್ರಾರಂಭಿಸಿ ಅನಂತರ ಚಿತ್ರದುರ್ಗ ಜಿಲ್ಲೆ, ಕೋಲಾರ, ಬೆಂಗಳೂರು ಜಿಲ್ಲೆಗಳು ಸೇರಿದಂತೆ ನೊಳಂಬವಾಡಿ–೩೨೦೦೦ ಎಂಬ ವಿಶಾಲವಾದ ರಾಜ್ಯವನ್ನು ಆಳಿದರು. ನೊಳಂಬವಾಡಿ–೩೨೦೦೦ಕ್ಕೆ ಬಳ್ಳಾರಿ ಜಿಲ್ಲೆ, ಅನಂತಪುರ ಜಿಲ್ಲೆ ಮತ್ತು ತಮಿಳುನಾಡಿನ ಕೃಷ್ಣಗಿರಿ ಧರ್ಮಪುರಿ ಜಿಲ್ಲೆಗಳೂ ಸೇರಿದ್ದವು.

ಪ್ರಾರಂಭದಲ್ಲಿ ತಲಕಾಡು ಗಂಗರ ಕೈ ಕೆಳಗೆ ತಮ್ಮ ಆಳ್ವಿಕೆಯನ್ನು ನಡೆಸಿದ ನೊಳಂಬರು ಅನಂತರ ರಾಷ್ಟ್ರಕೂಟರು ಕಲ್ಯಾಣಿ ಚಾಳುಕ್ಯರ ಮಾಂಡಳಿಕರಾಗಿಯೂ ಆಳ್ವಿಕೆ ನಡೆಸಿದರು. ನೊಳಂಬ ಒಂದನೇ ಮಹೇಂದ್ರನ ಕಾಲದಲ್ಲಿ ಕೋಲಾರ ಜಿಲ್ಲೆಯನ್ನೊಳಗೊಂಡ ಗಂಗಮಂಡಳ ಆರು ಸಾವಿರಕ್ಕೂ ಒಡೆಯರಾದರು.

ಧರ್ಮಪುರಿ ಜಿಲ್ಲೆ ಈ ಗಂಗ ಆರು ಸಾವಿರದಲ್ಲಿ ಸಮಾವೇಶಗೊಂಡಿತ್ತು. ನೊಳಂಬರ ಅಧಿರಾಜರಾದ ತಲಕಾಡು ಗಂಗರ ಶಾಸನಗಳಿಗಿಂತ ನೊಳಂಬ ಪಲ್ಲವರ ಶಾಸನಗಳೇ ಈ ಪ್ರದೇಶದಲ್ಲಿ ಅಧಿಕವಾಗಿವೆ. ಇವರು ಪ್ರಾರಂಭದಿಂದಲೂ ಹೋರಾಟಗಾರರಾಗಿದ್ದು ಗಂಗ ಸಾಮ್ರಾಜ್ಯದ ಪೂರ್ವ ಗಡಿ ಪ್ರದೇಶವನ್ನು ರಕ್ಷಣೆ ಮಾಡಿದ್ದರು. ಇವರ ಯುದ್ಧ ನೈಪುಣ್ಯ ಮತ್ತು ಅವಶ್ಯಕತೆಗಳನ್ನು ಮನಗಂಡ ಗಂಗರು ಇವರೊಂದಿಗೆ ವೈವಾಹಿಕ ಸಂಬಂಧವನ್ನು ಬೆಳೆಸಿದರು. ಅಷ್ಟೇ ಅಲ್ಲದೆ ತಮ್ಮ ರಾಜ್ಯದ ಭಾಗವಾಗಿದ್ದ ಗಂಗಮಂಡಳ ಆರುಸಾವಿರಕ್ಕೆ ಅವರನ್ನು ಒಡೆಯರನ್ನಾಗಿ ಮಾಡಿದರು.[೧]

ಧರ್ಮಪುರಿ ಈ ಗಂಗ ಮಂಡಳಕ್ಕೆ ಸೇರಿದಿತ್ತು. ನೊಳಂಬ ಆಳ್ವಿಕೆಯಲ್ಲಿ ಧರ್ಮಪುರಿಯಲ್ಲಿ ಮಲ್ಲಿಕಾರ್ಜುನ ಮತ್ತು ಕಾಮಾಕ್ಷಿಯಮ್ಮ ದೇವಾಲಯಗಳನ್ನು ಕಟ್ಟಿದರು. ಧರ್ಮಪುರಿ ಪ್ರದೇಶದಲ್ಲಿ ಪಲ್ಲವ ನೊಳಂಬ ವಂಶದ ೧ನೇ ಪೊಳಲ್ ಚೋರ ಅವನ ಮಗ ಮಹೇಂದ್ರ, ಅವನ ಮಗ ಅಯ್ಯಪ್ಪದೇವ ಅಯ್ಯಪ್ಪದೇವನ ಮಗ ಅಣ್ಣಿಗ ಮತ್ತು ಅವನ ಮಗ ಇರುಳ್‌ಚೋರರ ಶಾಸನಗಳು ಕಂಡುಬರುತ್ತವೆ.[೨]

ನೊಳಂಬವಾಡಿ ಪ್ರದೇಶದಲ್ಲಿ ವೀರನೊಳಂಬ ಅಣ್ಣಿಗನ ಅನಂತರ ಅವನ ಮಗ ಇರುಳುಚೋರನು ರಾಜ್ಯಕ್ಕೆ ಅಧಿಪತಿಯಾಗಬೇಕಿತ್ತು. ಆದರೆ ಅಣ್ಣಿಗನ ತಮ್ಮ ಇರಿವ ನೊಳಂಬ ದಿಲೀಪನು ರಾಜನಾದನು. ಕಾರಣ ಅಣ್ಣಿಗನ ತಂದೆ ಅಯ್ಯಪ್ಪದೇವನು ೨೭ ವರ್ಷಗಳಷ್ಟು ದೀರ್ಘಕಾಲ ರಾಜ್ಯಭಾರ ಮಾಡಿದನು. ಅವನ ಮಗ ಅಣ್ಣಿಗನೂ ಮತ್ತು ಮೊಮ್ಮಗ ಇರುಳ್‌ಚೋರನು ಅವನ ಸಾಮಂತರಾಗಿದ್ದರು. ಅಂದರೆ ವೀರ ನೊಳಂಬ ಅಣ್ಣಿಗನಿಗೆ ಆ ಕಾಲಕ್ಕೆ ರಾಜ್ಯವಾಳಲು ಅರ್ಹನಾದ ಮಗನಿದ್ದನು. ಅಣ್ಣಿಗನು ಕ್ರಿ.ಶ. ೯೩೮ರಲ್ಲಿ ರಾಜನಾಗಿ ಅಭಿಷಿಕ್ತನಾಗಿ ೯೪೦ರವರೆಗೆ ಆಳಿದನು. ಇವನ ಮಗ ಇರುಳ್‌ಚೋರನು ಧರ್ಮಪುರಿಯಲ್ಲಿ ಆಳುತ್ತಿದ್ದು, ಬಹುಶಃ ೯೪೦ಕ್ಕೆ ಮುಂಚೆ ಮರಣ ಹೊಂದಿದ ಕಾರಣ ಅಣ್ಣಿಗನ ತಮ್ಮ ಇರಿವನೊಳಂಬ ದಿಲೀಪನು ರಾಜನಾಗಿರುವ ಸಾಧ್ಯತೆ ಇದೆ.[೩]

ಧರ್ಮಪುರಿಯಲ್ಲಿ ಆಳುತ್ತಿದ್ದ ಇರುಳುಚೋರನ ಒಂದೇ ಒಂದು ಶಾಸನ. ಕ್ರಿ.ಶ. ೯೨೯ಕ್ಕೆ ಸೇರಿದ್ದಾಗಿದೆ.[೪] ಇವನ ಮಕ್ಕಳು ಚಿಕ್ಕವಯಸ್ಸಿನವರಾಗಿದ್ದರಿಂದ ಇವನ ಚಿಕ್ಕಪ್ಪ ದಿಲೀಪನು ರಾಜನಾಗುತ್ತಾನೆ. ಇರುಳುಚೋರನಿಗೆ ಇಬ್ಬರು ಮಕ್ಕಳಿದ್ದು ಪ್ರಾಪ್ತ ವಯಸ್ಕರಾದ ನಂತರ ಧರ್ಮಪುರಿಯ

* ಮೇಲಿನ ಮಠ, ಅರಸೀಕೆರೆ – ೫೭೩ ೧೦೩.

ಪ್ರದೇಶವನ್ನು ಆಳಿದಂತೆ ಶಾಸನಗಳಿಂದ ತಿಳಿದುಬರುತ್ತದೆ. ಇವನ ಹಿರಿಯ ಮಗ ಕಲಿಚೋರನು ಯುದ್ಧಲ್ಲಿ ಮರಣ ಹೊಂದಿದ್ದರಿಂದ[೫] ಅವನ ತಮ್ಮ ಇರುಳುಚೋರನು ಆಳ್ವಿಕೆ ನಡೆಸಿದನು. ಇವನ ಶಾಸನ ಒಂದು ಧರ್ಮಪುರಿ ಜಿಲ್ಲೆಯ ಹರೂರು ತಾಲೋಕಿನ ಧಲಪ್ಪಳ್ಳಮ್‌ನಲ್ಲಿ ಕಂಡುಬರುತ್ತದೆ.[೬] ಈ ಶಾಸನದಲ್ಲಿ ೧ನೇ ಪೊಳಲ್ ಚೋರನಿಂದ ಇರುಳು ಚೋರನವರೆಗೆ ವಂಶಾನ್ವಯವನ್ನು ಹೇಳಿ 'ಸ್ವಸ್ತಿ ಸಮಗತ ಪಂಚಮಹಾಶಬ್ದ ಪಲ್ಲವಾನ್ವಯ ಶ್ರೀ ಪೃಥ್ವೀವಲ್ಲಭ ಪಲ್ಲವ ಕುಲ ತಿಲಕ ಶ್ರೀ ಮಧ್ವಿಯಳ ಪಾರಂ' (ಇದು ಚೋರಂ ಎಂದಿರಬೇಕು) ಜಗದೇಕ ಮಲ್ಲನು ಪೃಥ್ವಿರಾಜ್ಯಂಗೆಯುತ್ತಿರೆ ಎಂದು ಹೇಳಿ ಇವನ ಅಣ್ಣನಾದ ಕಲಿಚೋರದೇವನ ಮಗ ಬೆಳಚೋರದೇವನಿಗೆ ಬಿಳಿಯನೂರನ್ನು ಕಲ್ನಾಟಾಗಿ ಕೊಟ್ಟ ವಿಷಯವಿದೆ. ಬಹುಶಃ ಕಲಿಚೋರನು ಯಾವುದೋ ಯುದ್ಧಲ್ಲಿ ಮಡಿದಿರಬೇಕು. ಅನಂತರ ಅದೇ ತಾಲೋಕಿನ ಪೊಮ್ಮಡಿ ಶಾಸನ ಸಂಖ್ಯೆ ೧೦೮ರಲ್ಲಿ ನೊಳಂಬ ಪಲ್ಲವರ ಅನ್ವಯವನ್ನು ಹೇಳಿರುವ ಜಗದೇಕಮಲ್ಲ ಶ್ರೀ ಬೆಳಚೋರ ದೇವನ ಮಗ ಸುಭತುಂಗದೇವನು ಆಳುತ್ತಿದ್ದುದ್ದನ್ನು ಹೇಳಿದೆ[೭].

ಪಲ್ಲವ ನೊಳಂಬರ ಮೂಲ ಶಾಖೆಯಲ್ಲಿ ೨ನೇ ಮಹೇಂದ್ರನಿಂದ ಪರಾಜಿತರಾಗಿದ್ದ ಚೋಳರು ಸಮಯವನ್ನು ಕಾಯುತ್ತಿದ್ದು ಅವನ ಮರಣಾನಂತರ ಅವನ ತಾಯಿ ದೀವಾಂಬಿಕೆಯು ತನ್ನ ಕಿರಿಯ ಮಗ ಪ್ರಾಪ್ತ ವಯಸ್ಕನಾಗುವ ವರೆಗೆ ರಾಜ್ಯ ಪರಿಪಾಲನೆ ಮಾಡುತ್ತಿದ್ದಳು. ಈ ಸಮಯದಲ್ಲಿ ಚೋಳರು ನೊಳಂಬರ ಮೇಲೆ ಯುದ್ಧ ಸಾರಿ ನೊಳಂಬವಾಡಿಯ ದಕ್ಷಿಣ ಭಾಗವನ್ನು ಆಕ್ರಮಿಸಿದರು. ಕ್ರಿ.ಶ. ೯೯೧ರಲ್ಲಿ ಚೋಳರಾಜ ರಾಜರಾಜ ಚೋಳನು ಧರ್ಮಪುರಿಯನ್ನೊಳಗೊಂಡಂತೆ ಗಂಗ ಮಂಡಳ ೬೦೦೦ವನ್ನು ಆಕ್ರಮಿಸಿಕೊಂಡನು.[೮] ಆಗ ಧರ್ಮಪುರಿಯಲ್ಲಿ ಆಳುತ್ತಿದ್ದ ೧ನೇ ಸುಭತುಂಗನು ತನ್ನ ಆಡಳಿತವನ್ನು ಬಿದರೂರಿಗೆ ಬದಲಾಯಿಸಿದನು. ಈ ಬಿದರೂರು ನೆಲಮಂಗಲ ತಾಲೋಕಿನ ಬಿದಲೂರು ಆಗಿದ್ದು ಹತ್ತಿರದಲ್ಲೆ ಇದ್ದ ಮಣ್ಣೆಯನ್ನೂ ಆಳುತ್ತಿದ್ದನು[೯]. ಪುನಃ ಚೋಳರು ಮಣ್ಣೆ ತಲಕಾಡುಗಳನ್ನು ಆಕ್ರಮಿಸಿದಾಗ ಇವರು ಕುಣಿಗಲ್ಲು ಮತ್ತು ಮರುಗೆರೆ ನಾಡಿಗೆ ಸ್ಥಳಾಂತರವಾದರು. ೧ನೇ ಸುಭತುಂಗನ ಮಗ ನೊಳಂಬಗೌಂಡನು. ಹರಪನಹಳ್ಳಿ ತಾಲೋಕಿನ ಅರಸೀಕೆರೆಯನ್ನು ಕೇಂದ್ರವಾಗಿ ಮಾಡಿಕೊಂಡು ಕುಣಿಗಲು-೫೦೦ ಮರುಗೆರೆ-೩೦೦ರನ್ನು ಆಳುತ್ತಿದ್ದುದ್ದು ಹಿರೀಕೋಗಲೂರು ಶಾಸನಗಳಿಂದ ತಿಳಿದು ಬರುತ್ತದೆ.[೧೦] ನೊಳಂಬಗೌಡನ ಮಗ ಪಲ್ಲವಾದಿತ್ಯ ನೊಳಂಬಗೌಡನು ಅರಸೀಕೆರೆಯಿಂದ ತನ್ನ ತಂದೆ ನೊಳಂಬಗೌಡನು ಆಳುತ್ತಿದ್ದ ಕುಣಿಗಲು-೫೦೦ ಮಣ್ಣೆ-೩೦೦ ಮತ್ತು ಮರುಗೆರೆ-೩೦೦ನ್ನು ಆಳುತ್ತಿದ್ದನೆಂದು ಹೇಳಿದೆ. ಆದರೆ ಚೋಳರು ತಲಕಾಡನ್ನು ಆಕ್ರಮಿಸಿದಾಗ ಮಣ್ಣೆ-೩೦೦ರನ್ನು ಆಕ್ರಮಿಸಿಕೊಂಡರು. ಮತ್ತೊಬ್ಬ ಮಗ ೨ನೇ ಸುಭತುಂಗನು ಹಿರಿಕೋಗಲೂರು ಕಿರಿಯಕೋಗಲೂರು ಕೂಡಲಗೆರೆ, ಮೆದಕೇರಿ, ಎರ್ಮೆಯನೂರು, ದುರ್ಮಿ-೧೨ ಇವುಗಳನ್ನು ಆಳುತ್ತಿದ್ದುದು ಅದೇ ಶಾಸನದಿಂದ ತಿಳಿದು ಬರುತ್ತದೆ[೧೧]. ಪಲ್ಲವಾದಿತ್ಯ ಮತ್ತು ೨ನೇ ಸುಭತುಂಗರು ಚಾಲುಕ್ಯ ಚಕ್ರವರ್ತಿ ೧ನೇ ಸೋಮೇಶ್ವರ ತ್ರೈಲೋಕ್ಯಮಲ್ಲನ ಮಹಾಮಂಡಲೇಶ್ವರ ನಾಗಿ ಆಳುತ್ತಿದ್ದ ತಮ್ಮ ವಂಶದವನೇ ಆದ ತ್ರೈಲೋಕ್ಯಮಲ್ಲ ನನ್ನಿನೊಳಂಬ ಪಲ್ಲವ ಪೆರ್ಮನಡಿಯ ಅಧೀನದಲ್ಲಿ ಆಳುತ್ತಿದ್ದರು. ಇವರು ಚಾಯಕುಲ ವಂಶಾನ್ವಯ ಮತ್ತು ವಿನಾಯಕ ನಾಮಾನ್ವಯರೆಂದು ಶಾಸನದಲ್ಲಿ ಹೇಳಿದೆ.[೧೨]

ತ್ರೈಲೋಕ್ಯ ಮಲ್ಲ ನನ್ನಿನೊಳಂಬನು ಕೊಳಗಿ-೫೦೦, ಕದಂಬಳಿಗೆ-೧೦೦೦ ಬಲ್ಲಕುಂದೆ-೩೦೦, ಕಣಿಯಕಲ್ಲು-೩೦೦, ಕುಡಿಹರವಿ-೭೦, ಕರಿವಿಡಿ-೩೦ ಪ್ರಾಂತ್ಯಗಳನ್ನು ಆಳುತ್ತಿದ್ದನು ಕ್ರಿ.ಶ. ೧೦೫೪ರವರೆಗೆ ಇವನು ಸುಖ-ಶಾಂತಿಯಿಂದ ಆಳುತ್ತಿದ್ದು, ತನ್ನ ಹೆಸರಿನಲ್ಲಿ ಚಿನ್ನದ ನಾಣ್ಯಗಳನ್ನು ಮುದ್ರಿಸಿದನು[೧೩]. ಕ್ರಿ.ಶ. ೧೦೫೪ರಲ್ಲಿ ಚೋಳರು ಮುಂದುವರೆದು ಚಾಲುಕ್ಯ ರಾಜ್ಯದ ಮೇಲೆ ದಾಳಿ ಮಾಡಿದರು. ಈ ಯುದ್ಧದಲ್ಲಿ ಚೋಳ ರಾಜಾಧಿರಾಜನು ಗಾಯಗೊಂಡು ಹಿಂದಿರುಗಿದನು. ಆದರೆ ಅವನ ತಮ್ಮ ೨ನೇ ರಾಜೇಂದ್ರನು ಮತ್ತೆ ಮುನ್ನುಗ್ಗಿ ಚಾಳುಕ್ಯ ಸೈನ್ಯವನ್ನು ಚಲ್ಲಾಪಿಲ್ಲಿ ಮಾಡಿ ನನ್ನಿನೊಳಂಬ ದಶಪಣ್ಣನ್ ಮತ್ತು ಜಯಸಿಂಹರನ್ನು ಯುದ್ಧದಲ್ಲಿ ಕೊಂದನು[೧೪]. ಬಹುಶಃ ಪಲ್ಲವಾದಿತ್ಯ ನೊಳಂಬಗೌಡ ಮತ್ತು ಆತನ ತಮ್ಮ ೨ನೇ ಸುಭತುಂಗನು ಕೂಡ ಈ ಯುದ್ಧದಲ್ಲಿ ನನ್ನಿ ನೊಳಂಬ ನೊಂದಿಗೆ ಮಡಿದಿರಬೇಕು. ಏಕೆಂದರೆ ಇವರ ಮತ್ಯಾವುದೇ ಕ್ರಿ.ಶ. ೧೦೫೪ರ ಅನಂತರದ ಶಾಸನಗಳು ಕಂಡುಬರುವುದಿಲ್ಲ.

ಚಿಕ್ಕಮಗಳೂರು ಜಿಲ್ಲೆ ಕಡೂರು ತಾಲೋಕಿಗೆ ಸೇರಿದ ಕಿರಿಯಂಗರಾಜೆ ಗರ್ಜೆಯಲ್ಲಿ ಕ್ರಿ.ಶ. ೧೦೮೯ರಲ್ಲಿ ಹೊಯ್ಸಳ ತ್ರಿಭುವನ ಮಲ್ಲ ವಿನಯಾದಿತ್ಯ ದೇವನ ಸಾಮಂತನಾಗಿ ನೊಳಂಬ ಗೌಡನ ಮಗ ಉದಯಾದಿತ್ಯ ನಾಯಕನು ಆಳುತ್ತಿದ್ದನೆಂದು ಶಾಸನ ಸಂಖ್ಯೆ ೭೬ರಲ್ಲಿ ಹೇಳಿದೆ[೧೫]. ಈ ನೊಳಂಬಗೌಡನು ಅರಸೀಕೆರೆಯ ಪಲ್ಲವಾದಿತ್ಯ ನೊಳಂಬಗೌಡ ನಾಗಿರಬೇಕು. ತ್ರೈಲೋಕ್ಯಮಲ್ಲ ನನ್ನಿ ನೊಳಂಬ ನಂತರ ಅವನ ಮಕ್ಕಳಾಗಲಿ ಅವನ ವಂಶದವರಾಗಿರಲಿ ನೊಳಂಬವಾಡಿಯನ್ನು ಆಳುತ್ತಿದ್ದುದ್ದು ತಿಳಿದುಬರುವುದಿಲ್ಲ.

ಈ ಯುದ್ಧದ ನಂತರ ನೊಳಂಬವಾಡಿಯನ್ನು ವಿಷ್ಣುವರ್ಧನ ವಿಜಯಾದಿತ್ಯ ಕೀರ್ತಿವರ್ಮನು ಕ್ರಿ.ಶ. ೧೦೬೫ರಲ್ಲಿ ಆಳುತ್ತಿದ್ದದ್ದು ಕಂಡುಬರುತ್ತದೆ. ಇವನು ೧ನೇ ಸೋಮೇಶ್ವರನ ಮತ್ತೊಬ್ಬ ಮಗನೆಂದು ತಿಳಿದುಬರುತ್ತದೆ[೧೬]. ಅನಂತರ ಕ್ರಿ.ಶ. ೧೦೬೮ ರಿಂದ ೧೦೮೨ ರವರೆಗೆ ತ್ರೈಲೋಕ್ಯಮಲ್ಲ ನೊಳಂಬ ಪಲ್ಲವ ಪೆರ್ಮನಡಿ ಜಯಸಿಂಹನು ಆಳುತ್ತಿದ್ದು ಇವನು ಚಾಲುಕ್ಯ ಚಕ್ರವರ್ತಿ ೧ನೇ ಸೋಮೇಶ್ವರನ ಮಗನೂ ಮತ್ತು ೬ನೇ ವಿಕ್ರಮಾದಿತ್ಯನ ತಮ್ಮನೆಂದು ಶಾಸನಗಳಲ್ಲಿ ಹೇಳಲಾಗಿದೆ. ಕ್ರಿ.ಶ. ೧೦೮೨ರ ನಂತರ ನೊಳಂಬವಾಡಿಯನ್ನು ತ್ರಿಭುವನ ಮಲ್ಲ ೬ನೇ ವಿಕ್ರಮಾದಿತ್ಯನ ನೆಚ್ಚಿನ ಮಹಾಮಂಡಲೇಶ್ವರ ತ್ರಿಭುವನಮಲ್ಲ ಪಾಂಡ್ಯದೇವರು ಆಳುತ್ತಿದ್ದದ್ದು ತಿಳಿದು ಬರುತ್ತದೆ. ಈ ತ್ರಿಭುವನಮಲ್ಲ ಪಾಂಡ್ಯನ ಮಹಾ ಸಾಮಂತನಾಗಿ ಸುಭತುಂಗನ ವಂಶವಾದ ಚಾಯರ ಕುಲಾನ್ವಯ ಮತ್ತು ವಿನಾಯಕ ನಾಮಾನ್ವಯವಾದ ಸಿಂಗರಸನು ಅರಸೀಕೆರೆಯಲ್ಲಿ ಆಳುತ್ತಿದ್ದು ಶಾಸನ ಸಂಖ್ಯೆ ೨೦೮ರ ಕೆರೆಗುಂಡಿಯಲ್ಲಿ ಕ್ರಿ.ಶ. ೧೧೧೧ರ ಶಾಸನದಿಂದ ತಿಳಿದುಬರುತ್ತದೆ[೧೭].

ಈ ಶಾಸನದಲ್ಲಿ ಪಲ್ಲವಾದಿತ್ಯ ನೊಳಂಬಗೌಡ ಮತ್ತು ೨ನೇ ಸುಭತುಂಗರ ನಂತರ ಆಳಿರಬಹುದಾದ ಮತ್ತು ಸಿಂಗರಸನ ತಾತ ಮುತ್ತಾತಂದಿರ ಹೆಸರುಗಳನ್ನು ಕೊಡಲಾಗಿದೆ. ಅದರ ಪ್ರಕಾರ ಚೆನೆಗಂಗ ಪತ್ನಿ ಸೊವೆಬ್ಬೆಗೆ ಸುಭಗನು, ಸುಭಗನು ಮತ್ತು ಮಾದಿಯಬ್ಬೆಗೆ ಮಾರಸಿಂಗ ಅಥವಾ ದೀರನು, ಮಾರಸಿಂಗ ಮತ್ತು ಚಿಮ್ಮಿಕಬ್ಬೆಗೆ ಭೂಪನು, ಭೂಪ ಮತ್ತು ಸೇವೆಬ್ಬೆಗೆ ಕಾಮನೃಪ ಪುಣಸೆಗಾಂಕನೂ, ಪುಣಸೆಗಾಂಕ ಮತ್ತು ಚಟ್ಟಬ್ಬೆಗೆ ಎಂಟುನೂರಕ್ಕೆ ಅಧಿಪತಿಯಾಗಲು ಮತ್ತು ಕುಣಿಗಲು ನಾಡನ್ನು ಆಳಲು ಹುಟ್ಟಿದವನು ಸಿಂಗರಸ. ಇವನನ್ನು ಕೂಡ "ದಾಯಿಗ ಕುದರ ಕುಳಿಸದಂಡ" ಎಂದು ಕರೆಯಲಾಗಿದೆ. ಇವನ ವಂಶದವರೇ ಆದ ಪಲ್ಲವಾದಿತ್ಯ ನೊಳಂಬ ಗೌವುಂಡ ಮತ್ತು ೨ನೇ ಸುಭತುಂಗರನ್ನು ದಾಯಿಗ ದಲ್ಲಣ ಮತ್ತು ಗೂಳಿಗದಿಸಾಪಟ್ಟಿ



ಸಿಂಹನಾಥೇಶ್ವರ ಲಿಂಗ





ಸಿಂಹನಾಥೇಶ್ವರ ದೇಗುಲದ ಸೂರ್ಯ ಮತ್ತು ಸ್ತಂಭ

ಎಂದು ಶಾಸನಗಳಲ್ಲಿ ಹೇಳಲಾಗಿದೆ. ದಾಯಾದಿಗಳಿಗೆ ತಲ್ಲಣ ವುಂಟು ಮಾಡುವವರು ಮತ್ತು ಗೂಲಿಗರನ್ನು ದಿಕ್ಕಾಪಾಲು ಮಾಡಿದವರೆಂದು ಹೇಳಲಾಗಿದೆ. ದಾಯಿಗರು ಎಂದರೆ ಇವರಿಗೆ ವಿರುದ್ಧರಾಗಿದ್ದ ದಾಯಾದಿಗಳು ಮತ್ತು ಗೂಲಿಗ ರೆಂದರೆ ಕುಣಿಗಲು-೫೦೦ ಮತ್ತು ಮರುಗೆರೆ-೩೦೦ರ ಮಧ್ಯೆ ಇದ್ದ ಗೂಳೂರನ್ನೋ ಅಥವಾ ಕೋಲಾರ ಜಿಲ್ಲೆಯ ಗೂಳೂರನ್ನೋ ಆಳುತ್ತಿದ್ದ ಸಣ್ಣಪುಟ್ಟ ರಾಜರಾಗಿರಬೇಕು.

ಕ್ರಿ.ಶ. ೧೧೧೧ರ ಅನಂತರ ಇದೇ ಸಿಂಗರಸನು ಹೊಯ್ಸಳ ರಾಜ್ಯಕ್ಕೆ ಸೇರಿದ ಅರಸೀಕೆರೆ ತಾಲೋಕಿನ ಕನಕಟ್ಟೆಯಲ್ಲಿ ಹೊಯ್ಸಳ ವಿಷ್ಣುವರ್ಧನನ ಸಾಮಂತನಾಗಿ ಆಳುತ್ತಿದ್ದದ್ದು ಕ್ರಿ.ಶ. ೧೧೨೯ರ ಶಾಸನ ಸಂಖ್ಯೆ ೭೩ರಲ್ಲಿ ಕಾಣಸಿಗುವುದು[೧೮]. ಬಹುಶಃ ಹೊಯ್ಸಳ ವಿಷ್ಣುವರ್ಧನನು ಚಾಲುಕ್ಯ ರಾಜ್ಯದ ಮೇಲೆ ದಾಳಿ ಮಾಡಿ ಹರಪನಹಳ್ಳಿ ತಾಲ್ಲೋಕಿನ ಅರಸೀಕೆರೆ ಮತ್ತು ಉಚ್ಚಂಗಿಗಳನ್ನು ಆಕ್ರಮಿಸಿಕೊಂಡಿರಬಹುದು. ಈ ಸಿಂಗರಸನು ಕಳಿಕಟ್ಟೆಯಲ್ಲಿ ಕ್ರಿ.ಶ. ೧೧೨೯ರಲ್ಲಿ ಸಿಂಗೇಶ್ವರನನ್ನು ಕ್ರಿ.ಶ. ೧೧೩೨ರ ಶಾಸನ ಸಂಖ್ಯೆ ೮೩ರಲ್ಲಿ ಬೆಟ್ಟದ ಕಲಿದೇವರನ್ನು ಸ್ಥಾಪಿಸಿದನೆಂದು ತಿಳಿದುಬರುತ್ತದೆ[೧೯]. ಇವನ ಅನಂತರ ಇವನ ವಂಶದವರು ಆಳಿದ್ದಕ್ಕೆ ದಾಖಲೆಗಳಿಲ್ಲ ಬಹುಶಃ ಪಲ್ಲವ ನೊಳಂಬ ಚಾಯರ ಕುಲದ ವಿನಾಯಕ ನಾಮಾನ್ವಯಕ್ಕೆ ಸೇರಿದ ವಂಶ ಇಲ್ಲಿಗೆ ಕೊನೆಗೊಂಡಿರಬೇಕು.

ಡಾ. ಬಿ. ರಾಜಶೇಖರಪ್ಪನವರು ಸಂಶೋಧಿಸಿದ ಹಿರಿ ಕೋಗಲೂರು ಶಾಸನ ತಮಿಳುನಾಡಿನ ಶಾಸನಗಳಿಗೂ, ಬಳ್ಳಾರಿ ಜಿಲ್ಲೆಯ ಮತ್ತು ಹಾಸನ ಜಿಲ್ಲೆಯ ಶಾಸನಗಳಿಗೆ ಕಳೆದು ಹೋಗಿದ್ದ ಕೊಂಡಿಯಾಗಿ ನೊಳಂಬ ಪಲ್ಲವರ ಮತ್ತೊಂದು ಶಾಖೆಯನ್ನು ಪರಿಚಯಿಸಲು ಸಹಾಯಕವಾಗಿದೆ.

ಮೇಲೆ ಕಂಡ ಶಾಸನಗಳ ಆಧಾರದಿಂದ ಧರ್ಮಪುರಿಯ ಪಲ್ಲವ ನೊಲಂಬ ವಂಶವೃಕ್ಷವನ್ನು ಹೀಗೆ ಗುರುತಿಸಬಹುದು.

## ಅನುಬಂಧ

ವೀರ ನೊಳಂಬ ಅಣ್ಣಿಗನ ಮಗ

|

ಇರುಳು ಚೋರ

|

ಕಲಿ ಚೋರದೇವ — ಜಗದೇಕಮಲ್ಲ ಬಿಯಳ ಚೋರದೇವ

|

ಜಗದೇಕಮಲ್ಲ ಬೆಳಚೋರದೇವ

|

೧ನೇ ಶುಭತುಂಗ ಗೌಡ

|

ನೊಳಂಬ ಗೌಡ

|

ಪಲ್ಲವಾದಿತ್ಯ ನೊಳಂಬಗೌಡ — ೨ನೇ ಶುಭತುಂಗ

|

ಉದಯಾದಿತ್ಯ ನಾಯಕ

ಚೆನೆಗಂಗ + ಸೋವಬ್ಬೆ

|

ಸುಭಗ + ಮಾದಿಯಬ್ಬೆ

|

ಮಾರಸಿಂಗ + ಚಿಮ್ಮಿಕಬ್ಬೆ

|

ಭೂಪ + ಸೇವಬ್ಬೆ

|

ಕಾಮನೃಪ ಪುಣಸೆಗಾಂಕ + ಚಟ್ಟಬ್ಬೆ

|

ಅರಸೀಕೆರೆ ಸಿಂಗರಸ



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. 'ನೊಳಂಬ ಇತಿಹಾಸ ದರ್ಶನ' : ಡಾ. ಎಂ.ಎಸ್. ಕೃಷ್ಣಮೂರ್ತಿಯವರ ಲೇಖನ

೨. ಅದೇ ೩) ಅದೇ.

೪. **ತಮಿಳು ನಾಡಿನ ಕನ್ನಡ ಶಾಸನಗಳು**, ಧರ್ಮಪುರಿ ಶಾಸನ ಸಂಖ್ಯೆ-೮೮, ಹಂಪಿ **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೪.**

೫. ಅದೇ., ಧರ್ಮಪುರಿ ಶಾಸನ ಸಂಖ್ಯೆ-೯೦, ಹಂಪಿ ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೪.

೬ ಅದೇ., ಧರ್ಮಪುರಿ ಶಾಸನ ಸಂಖ್ಯೆ-೧೦೪ ತಮಿಳನಾಡು ಹಂಪಿ **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೪.**

೭. ಅದೇ., ಪೊಮ್ಮಡಿ ಶಾಸನ ಸಂಖ್ಯೆ-೧೦೮ ಧರ್ಮಪುರಿ ಜಿಲ್ಲೆ ಹರೂರು ತಾಲ್ಲೂಕು ತಮಿಳುನಾಡು, ಹಂಪೆ **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ೪.**

೮. ಡಾ. ಎಂ.ಎಸ್. ಕೃಷ್ಣಮೂರ್ತಿಯವರ ಲೇಖನ. **'ನೊಳಂಬ ಇತಿಹಾಸ ದರ್ಶನ'.**

೯. ಹಿರಿಕೋಗಲೂರು ಪ್ರಕಟಿತ ಶಾಸನಗಳು ಡಾ. ಬಿ. ರಾಜಶೇಖರಪ್ಪನವರಿಂದ ಪ್ರಕಟವಾಗಿದೆ. ಕರ್ನಾಟಕ **ಇತಿಹಾಸದರ್ಶನ ಸಂಪುಟ,** ೧೭/೨೦೦೨ ಪು. ೫೦–೫೮ ಈ ಶಾಸನ ಧರ್ಮಪುರಿ ಪೋಮ್ಮಡಿ ಶಾಸನ ಸಂ. ೧೦೮ಕ್ಕೂ ಬಳ್ಳಾರಿ ಜಿಲ್ಲೆಯ ಅರಸೀಕೆರೆಯ ಕೆರೆಗುಡಿಹಳ್ಳಿ ಶಾಸನ ಸಂಖ್ಯೆ ೨೯ಕ್ಕೂ ಸಂಪರ್ಕವನ್ನು ಕಲ್ಪಿಸುವ ಕೊಂಡಿಯಾಗಿದೆ.

೧೦. ಅದೇ., ೧೧. ಅದೇ., ೧೨) ಅದೇ.,

೧೩. "ನನ್ನಿ ನೊಳಂಬನ ಅಪರೂಪದ ಚಿನ್ನದ ಗದ್ಯಾಣ" ಶ್ರೀ ಮಂದರ್ಕೆ ನಿತ್ಯಾನಂದ ಪೈರವರಿಂದ ಪ್ರಕಟವಾಗಿದೆ. **ಇತಿಹಾಸ ದರ್ಶನ,** ಸಂ. ೨೦/೨೦೦೫. ಕರ್ನಾಟಕ ಇತಿಹಾಸ ಅಕಾದೆಮಿ.

೧೪. **'ನೊಳಂಬ ಇತಿಹಾಸ ದರ್ಶನ'** ಡಾ. ಎಂ.ಎಸ್. ಕೃಷ್ಣಮೂರ್ತಿಯವರ ಲೇಖನ.

೧೫. ಗರ್ಜೆ ಶಾಸನ ಸಂಖ್ಯೆ–೭೬ ಚಿಕ್ಕಮಗಳೂರು ಜಿಲ್ಲೆ, ಕಡೂರು ತಾಲ್ಲೂಕು, *E.C. Vol.12,* ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಈ ಶಾಸನದಲ್ಲಿ ಬರುವ ಉದಯಾದಿತ್ಯ ನಾಯಕ ಎಂಬುದು ಜನಾಂಗ ಸೂಚಿಯಲ್ಲ ಅಧಿಕಾರ ಸೂಚಿಯಾಗಿದೆ.

೧೬. ಕೆರೆಗುಡಿಹಳ್ಳಿ ಶಾಸನ ಸಂಖ್ಯೆ–೨೯ ಹಂಪೆ **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂ. ಪು.** ೧, ಬಳ್ಳಾರಿ ಜಿಲ್ಲೆ, ಹರಪನಹಳ್ಳಿ ತಾಲ್ಲೂಕು, ಅರಸೀಕೆರೆ ಹತ್ತಿರ (ಈಗ ದಾವಣಗೆರೆ ಜಿಲ್ಲೆಯಲ್ಲಿದೆ) ಈ ಶಾಸನದಲ್ಲಿ ಬರುವ ಸಿಂಗರಸನ ವಂಶಾವಳಿಯಲ್ಲಿ ಬರುವ ಒಂದು ಹೆಸರು ಸುಭಗ ಇದು ಸುಭತುಂಗ ಹೆಸರಿನ ಸಂಕ್ಷಿಪ್ತ ರೂಪವೇ ಆಗಿದೆ ಮತ್ತು ಸಿಂಗರಸ ಸಿಂಗೇಶ್ವರ ಕೂಡ ಸುಭತುಂಗ ಮತ್ತು ಸುಭತುಂಗೇಶ್ವರ ಹೆಸರಿನ ಸಂಕ್ಷಿಪ್ತ ರೂಪಗಳೇ ಆಗಿವೆ.

೧೭. ಕೆರೆಗುಡಿಹಳ್ಳಿ ಶಾಸನ ಸಂಖ್ಯೆ ೨೦೮, ಹಂಪೆ **ಕನ್ನಡ ವಿಶ್ವವಿದ್ಯಾಲಯ, ಶಾಸನ ಸಂ. ೧.**

೧೮. ಕಣಕಟ್ಟೆ ಶಾಸನ ಸಂಖ್ಯೆ ೭೫, ಕಾಲ ಕ್ರಿ.ಶ. ೧೧೨೯ *E.C. Vol. 10* ಹಾಸನ ಜಿಲ್ಲೆ, ಅರಸೀಕೆರೆ ತಾಲ್ಲೋಕು, ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ.

೧೯. ಶಾಸನ ಸಂಖ್ಯೆ ೮೫, ಕಾಲ ೧೧೩೨ ಕುವೆಂಪು ಅಧ್ಯಯನ ಸಂಸ್ಥೆ, ಮೈಸೂರು ವಿಶ್ವವಿದ್ಯಾನಿಲಯ, ಮೈಸೂರು.

ಶ್ರೀಮತಿ ರಾಜೇಶ್ವರಿ ಸಾಲಿ*

# ಕಲ್ಯಾಣ ಚಾಲುಕ್ಯರು ಮತ್ತು ಗೋವೆಯ ಕದಂಬರ ಸಂಬಂಧಗಳು

ಚಕ್ರವರ್ತಿಗಳಾಗಿ ಕರ್ನಾಟಕವನ್ನಾಳಿದ ಮನೆತನಗಳಲ್ಲಿ ಕಲ್ಯಾಣದ ಚಾಲುಕ್ಯರದು ಒಂದು. ಸಾಮ್ರಾಜ್ಯದ ಗಡಿರೇಖೆಯನ್ನು ನೇಪಾಳದವರೆಗೂ ವಿಸ್ತರಿಸಿ ಕರ್ನಾಟಕದ ಕೀರ್ತಿಪತಾಕೆಯನ್ನು ಉತ್ತರ ಭಾರತದಲ್ಲಿ ಹಾರಿಸಿದ ಶ್ರೇಯಸ್ಸು ಈ ಮನೆತನಕ್ಕೆ ಇದೆ. ಈ ಶ್ರೇಯಸ್ಸಿಗೆ ಸಹಕಾರ ನೀಡಿದವರು ಸಾಮ್ರಾಜ್ಯದೊಳಗಿನ ಮಹಾಮಂಡಳೇಶ್ವರರು. ಇಂಥ ಮಹಾಮಂಡಳೇಶ್ವರರಲ್ಲಿ ಗೋವೆಯ ಕದಂಬರು ಒಬ್ಬರು. ಇವರೀರ್ವರ ಸಂಬಂಧಗಳನ್ನು ವಿವರಿಸುವುದು ಪ್ರಸ್ತುತ ಲೇಖನದ ಉದ್ದೇಶ.

ಸ್ನೇಹ ಸಂಬಂಧವು ಪರಸ್ಪರ ಕಷ್ಟ ಸುಖಗಳಲ್ಲಿ ಭಾಗಿಯಾಗುವಂಥದ್ದು. ರಕ್ತಸಂಬಂಧವು ಪರಸ್ಪರ ಸ್ನೇಹಗಟ್ಟಿಗೊಂಡು ನೆಂಟಸ್ತಿಕೆಯಲ್ಲಿ ಪರ್ಯವಸಾನವಾಗುವಂಥದ್ದು. ಗೋವೆ ಕದಂಬರು ಕಲ್ಯಾಣದ ಚಾಲುಕ್ಯ ಚಕ್ರವರ್ತಿಗಳೊಂದಿಗೆ ಸ್ನೇಹ, ರಕ್ತ ಸಂಬಂಧ ಹೊಂದಿದ್ದನ್ನು ಶಾಸನಗಳು ನಿರೂಪಿಸುತ್ತವೆ. ಗೋವೆಯ ಕದಂಬರು ಆರಂಭದಲ್ಲಿ ಚಂದ್ರಪುರ (ಚಂದೋರ್)ವನ್ನು ತಮ್ಮ ರಾಜಧಾನಿಯನ್ನಾಗಿ ಹೊಂದಿದ್ದು ಅನಂತರ "ಗೋವೆ"ಯನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ಆಳಿದ್ದಾರೆ. (ಕ್ರಿ.ಶ. ೯೭೦-೧೨೬೯-೭೦) ಈ ಮನೆತನ ಆರಂಭಿಸಿದ ವ್ಯಕ್ತಿ ಕಂತಕಾಚಾರ್ಯ. ಇವನ ಪುತ್ರ ನಾಗವರ್ಮ ಶಕ್ತಿಶಾಲಿಯಾಗಿದ್ದಂಥವನು. ಇವನ ಮಗನೇ ಗೊವಲದೇವ। ಇವನು ಮಹಾವೀರನಾಗಿದ್ದು ತನ್ನ ಮುಷ್ಠಿಯಿಂದ ಮಾತ್ರವೇ ಹುಲಿಯನ್ನು ಕೊಂದಂಥವನು. ಇವನ ಪುತ್ರನೇ ಚತುರ್ಭುಜನೆಂದು ಖ್ಯಾತನಾದ ಷಷ್ಠದೇವ।(ಚಟ್ಟದೇವ). ಇವನ ಕಾಲದಲ್ಲಿಯೇ ಗೋವೆ ಕದಂಬರು ಮಹಾಮಂಡಳೇಶ್ವರರ ಸ್ಥಾನಕ್ಕೆ ಏರುತ್ತಾರೆ. ಕಲ್ಯಾಣದ ಚಾಲುಕ್ಯ ಮಹಾಮಂಡಳೇಶ್ವರರ ದೊರೆ ತೈಲಪನು ರಾಷ್ಟ್ರಕೂಟರನ್ನು ಉಚ್ಚಾಟಿಸುವಲ್ಲಿ ಈ ಷಷ್ಠದೇವನೂ ನೆರವಾಗಿದ್ದಾನೆಂಬುದು ತಿಳಿದುಬರುತ್ತದೆ.[೧] ಇಲ್ಲಿಂದ ಗೋವೆ ಕದಂಬರಿಗೂ ಮತ್ತು ಕಲ್ಯಾಣದ ಚಾಲುಕ್ಯರಿಗೂ ಸ್ನೇಹ ಸಂಬಂಧ ಪ್ರಾರಂಭವಾಗುತ್ತದೆ. ಇದರ ಮೂಲಕ ಕದಂಬರ ಸ್ಥಾನಮಾನವೂ ಹೆಚ್ಚಾಗುತ್ತದೆ. ಜೊತೆಗೆ ರಾಜ್ಯವಿಸ್ತಾರವೂ ಆಗುತ್ತದೆ. ಇವರು ಕೊಂಕಣಾಧಿಪತಿಗಳಾಗಿ ಕೊಂಕಣ ಚಕ್ರವರ್ತಿಗಳೆಂಬ ಹೆಸರನ್ನು ಪಡೆಯುತ್ತಾರೆ. ಒಂದನೆಯ ಜಯಕೇಶಿಯು (ಷಷ್ಠದೇವ II ಪುತ್ರ) ಕಲ್ಯಾಣದ ಚಾಲುಕ್ಯ ಚಕ್ರವರ್ತಿ ಒಂದನೆಯ ಸೋಮೇಶ್ವರನೊಂದಿಗೆ ಸ್ನೇಹ ಸಂಬಂಧವನ್ನು ಹೊಂದಿದ್ದನು. ಇವನ ಕಾಲದಲ್ಲಿ ನಡೆದ ಚೋಳದಾಳಿಯನ್ನು ಹಿಮ್ಮೆಟ್ಟಿಸುವಲ್ಲಿ ಜಯಕೇಶಿಯು ಒಂದನೆಯ ಸೋಮೇಶ್ವರನಿಗೆ ನೆರವಾಗಿದ್ದುದನ್ನು ಶಾಸನಗಳು ಹೇಳುತ್ತವೆ. ಗುಡಿಕಟ್ಟಿ[೨] ಶಾಸನದಲ್ಲಿ ಇವನ ಸಾಧನೆಗಳನ್ನು ಹೇಳುತ್ತ

> **"ಸಕಕಾಳಂ ಗುಣ ಸಪ್ತನಂದಮೃತಮಾಗಲ್ಪತ್ತಕಂ**
> **ನನ್ದನಾಬ್ದಕಮಾ ಚೋಳ ನ್ರಿಪಾಳ ಮೌಳ ಹರಣಂ**
> **ತ್ರೈಲೋಕಮಲ್ಲಾವನೀಪಕರಾಜ್ಯಂ ಸಲೆ ಕೊಂಕಣೀಸ**
> **ಜಯಕೇಶಿ ಪ್ರಾಜ್ಯ ಸಾಮ್ರಾಜ್ಯ ವರ್ಧಕರಾದ್ದಂ"** ಎಂದು ಹೇಳುತ್ತದೆ.

ಇವನು ಚೋಳ ಅರಸನ "ಮೌಳಹರಣ'ನೆನಿಸಿ ತ್ರೈಲೋಕ್ಯಮಲ್ಲನ ಸಾಮ್ರಾಜ್ಯವೃದ್ಧಿಗೆ ಕಾರಣನಾಗಿದ್ದಾನೆ. ಇದರಿಂದ ಕೊಪ್ಪ (ಈಗಿನ ಖಿದ್ರಾಪುರ ಕೊಲ್ಹಾಪುರ (ಜಿ) ದಲ್ಲಿ ಚೋಳರೊಂದಿಗೆ ನಡೆದ ಯುದ್ಧದಲ್ಲಿ ತನ್ನ ಚಾಲುಕ್ಯ ಚಕ್ರವರ್ತಿ ಒಂದನೆಯ ಸೋಮೇಶ್ವರನ ಪರವಾಗಿ ಯುದ್ಧ ಮಾಡಿದ್ದಾನೆ. ಈ ಯುದ್ಧದಲ್ಲಿಯೇ ಚೋಳ ಅರಸ ಒಂದನೇ ರಾಜಾಧಿರಾಜನ ತಲೆಯುನ್ನು ಕಡಿಯಲಾಗುತ್ತದೆ. ಹೀಗಾಗಿ ಜಯಕೇಶಿಯುನ್ನು "ಚೋಳನ್ರಿಪಾಳ ಮೌಳಹರಣಂ" ಎಂದು ಶಾಸನದಲ್ಲಿ ಕರೆಯಲಾಗಿದೆ. ಇದು ಗೋವ ಕದಂಬರಿಗೂ ಚಾಲುಕ್ಯ ಚಕ್ರವರ್ತಿಗಳಿಗೂ ಇದ್ದ ಸ್ನೇಹ ಸಂಬಂಧವನ್ನು ಎತ್ತಿ ತೋರಿಸುತ್ತದೆ.

* ಶ್ರೀ ಹುರಕಡ್ಲಿ ಅಜ್ಜ ಮಹಿಳಾ ಮಹಾವಿದ್ಯಾಲಯ, ಧಾರವಾಡ.

ಈ ಸ್ನೇಹ ಸಂಬಂಧ ರಕ್ತ ಸಂಬಂಧಕ್ಕೆ ತಿರುಗಿದುದನ್ನು ಅನೇಕ ಶಾಸನಗಳು ಹೇಳುತ್ತವೆ. ಆರನೆಯ ವಿಕ್ರಮಾದಿತ್ಯನ ಸಾಮರ್ಥ್ಯವನ್ನು ಗಮನಿಸಿದ ಒಂದನೆಯ ಜಯಕೇಶಿಯು ಪ್ರೀತಿಯಿಂದ ತನ್ನ ಮಗಳನ್ನು ಮದುವೆ ಮಾಡಿಕೊಟ್ಟುದನ್ನು ಕುಂಭಾಪುರ ಶಾಸನ ಹೇಳುತ್ತದೆ.[೩]

**ಮುದದಿಂ ತನ್ನಯ ದೇಶದತ್ತಲದಿಪಂ ಪೆರ್ಮಾಡಿ ದೇವಂಬರ**
**ಲ್ಕೆದಿರ್ವನ್ನಾಗಡೆ ಕೂರ್ಪ ತನ್ನ ಮಗಳಂ ಧಾರಾನ್ವಿತಂ ಕೊಟ್ಟುಪೆ**
**ರ್ಚಿದಲಂಪಂ ಪಲವಾನೆಯಂ ಕು(ದು)ರೆಯಂ ಭಣ್ಡಾರ ಮಂತಿಕ್ಕವಿ**
**ಲ್ಲದೆ ತೆಲ್ಲಂಡಿಯನಾರ್ತ್ತು ಕೊಟ್ಟು ನೆಗಳ್ದಂ ಲೋಕೈಕ ಕಲ್ಪದ್ರುಮಂ॥**
**ತದನಂತರ ಎಲೆ ಪೆರ್ಮ್ಮಾಡಿ ನೃಪಾಳ (-) ನೊಲವಿಂ**
**ದಾ(ದ)ಂ ಪೋಗಿ ಕಲ್ಯಾಣದೊಳ್ಪಲರುಂ ಮಣ್ಣಳನಾಥರಾನಜಿವೆ**
**ಮಂದಿರ್ಚ್ಚಿಕ್ಕಪಂ ಬಟ್ಟಿರಲು ಪಟ್ಟಮನೊಲ್ದು ಕಟ್ಟಿದ ಪ**
**ನೆಂದಾ ವೇಗದಿಂದೆತ್ತಿದೋರ್ವಲಿ (....) ಕೊಂಕಣಾಧೀಶನಂ॥**

ಹೀಗೆ ಒಂದನೆಯ ಜಯಕೇಶಿಯು ತನ್ನ ಪ್ರೀತಿಯ ಮಗಳನ್ನು ಆರನೆಯ ವಿಕ್ರಮಾದಿತ್ಯನಿಗೆ ವಿವಾಹ ಮಾಡಿಕೊಟ್ಟುದಲ್ಲದೆ ಆನೆ, ಕುದುರೆ, ಭಂಡಾರ ಲೆಕ್ಕವಿಲ್ಲದಷ್ಟು ಉಡುಗೊರೆಗಳನ್ನು ಕೊಡುತ್ತಾನೆ. ಎರಡನೆಯ ಸೋಮೇಶ್ವರ ಮತ್ತು ವಿಕ್ರಮಾದಿತ್ಯನಿಗೆ ನಡೆದ ಅಂತರ್ಯುದ್ಧದಲ್ಲಿ ವಿಕ್ರಮಾದಿತ್ಯನನ್ನು ಬೆಂಬಲಿಸಿ ಕಲ್ಯಾಣಕ್ಕೆ ಹೋಗಿ ಅವನಿಗೆ ಪಟ್ಟಗಟ್ಟುತ್ತಾನೆ. ಹಾಗೆಯೇ ಮೇರೆದಪ್ಪಿ ಬಂದ ಚೋಳರನ್ನು ತರುಬಿ ಹಿಮ್ಮೆಟ್ಟಿಸುತ್ತಾನೆ.

ಒಂದನೆಯ ಜಯಕೇಶಿಯಲ್ಲಿ ಅಧಿಕಾರಿಯಾಗಿ ಕೆಲಸ ನಿರ್ವಹಿಸುತ್ತಿದ್ದ ಸೌಧೊರೆ ಜಕ್ಕರಾಜ (ಜಕ್ಕರಸ)ನು ಚಕ್ರವರ್ತಿ ವಿಕ್ರಮಾದಿತ್ಯನಿಗಾಗಿ, ಸಾಧಿಸಲು ಕಷ್ಟಮಯವಾದಂಥ ದೇಶಗಳನ್ನು ವಶಪಡಿಸಿಕೊಂಡು ಬರುತ್ತಾನೆ. ಇದರಿಂದ ಚಕ್ರವರ್ತಿಯು ಮೆಚ್ಚಿ ಜಯಕೇಶಿಗೆ ಬೊಪ್ಪಾದೇವಿಯನ್ನು ಕೂಂಡಿರಾಜ್ಯವನ್ನು ಕೊಡುತ್ತಾನೆ. ಜಕ್ಕರಾಜನಿಗೆ ಸೇನಾಧ್ಯಕ್ಷ ಪದವಿಯನ್ನು ದಯಪಾಲಿಸುತ್ತಾನೆ. ಈ ವಿಷಯ ಅಮರಗೋಳ[೭] ಶಾಸನದಲ್ಲಿ ಹೀಗೆ ಬರುತ್ತದೆ.

**"ಬೆಸಸಲ್ ವಿಕ್ರಮ ಚಕ್ರವರ್ತಿ ವಿಷಮ ದೇಶಂಗಳಂ**
**ತಾನೆ ಸಾಧಿಸಿ ತನ್ದಾ ಜಯಕೇಸಿ ಭೂಪತಿಗೆ**
**ಬೊಪ್ಪಾದೇವಿಯಂ ಕೂಂಡಿರಾಜ್ಯ ಸಮೇತಂ, ತನಗೀಯ ಚಕ್ರಿ**
**ನಿಜ ಸೇನಾಧ್ಯಕ್ಷಮಂ ತಾಳ್ದಿ ಸಾಹಸವಿಂದಂ ಪಡೆದಂ**
**ಪ್ರಧಾನ ಪದಮಂ ಸಲ್ಲಕ್ಷಣಂ ಜಕ್ಕಣಂ ॥**

ಹೀಗೆ ಒಂದನೆಯ ಜಯಕೇಶಿಯು ಒಂದನೆಯ ಸೋಮೇಶ್ವರನೊಂದಿಗೆ ಸ್ನೇಹ ಸಂಬಂಧ ಹೊಂದಿದ್ದರೆ ಆರನೆಯ ವಿಕ್ರಮಾದಿತ್ಯನೊಂದಿಗೆ ರಕ್ತಸಂಬಂಧ ಹೊಂದಿದ್ದನು.

ಮುಂದೆ ಒಂದನೆಯ ಜಯಕೇಶಿಯ ಮೊಮ್ಮಗನಾದ (ವಿಜಯಾದಿತ್ಯನ ಮಗ) ಎರಡನೆ ಜಯಕೇಶಿಗೆ ಚಕ್ರವರ್ತಿ ಆರನೆಯ ವಿಕ್ರಮಾದಿತ್ಯನು ತನ್ನ ಮಗಳಾದ ಮೈಳಲದೇವಿಯನ್ನು ಕೊಟ್ಟು ಮದುವೆ ಮಾಡಿ ರಕ್ತಸಂಬಂಧವನ್ನು ಮುಂದುವರೆಸುತ್ತಾನೆ. ಈ ಮೈಳಲದೇವಿಯು ವಿಕ್ರಮಾದಿತ್ಯ ಮತ್ತು ಮಲೆಯಮತಿ ಮಹಾದೇವಿಯರ ಮಗಳಾಗಿದ್ದಾಳೆ. ಬೈಲೂರ[೪] ಶಾಸನದಲ್ಲಿ

"**ಜ(ನಕಂ) ಚಾಳುಕ್ಯ ಪೆರ್ಮಾಡಿ ನೃಪಾಳಂ ಮಲೆಯಮತಿ ಮಹಾದೇವಿ (ಜಗಜ್ಜನ) ಜನನ ಪೆತ್ತತಾಯಿ ತನಗೆನೆ ಮೈಳಲದೇವಿಯೆಸ್ತು ಸೋಸ್ತರುಮಾಳರೇ**" ಎಂದು ಬರುತ್ತದೆ.

ಈ ಮೈಳಲದೇವಿಯ ವಿವಾಹ ಪ್ರಸಂಗವು ತಂಬೂರು[೫] ಶಾಸನದಲ್ಲಿ ಹೀಗೆ ಬರುತ್ತದೆ.

**"ಶ್ರೀಗೆ ಹರಿಯಾಳು ವಿವಾಹೋದ್ಯೋಗಂ ಗೆಯ್ವಸ್ತ ಚಕ್ರಿ**
**ತನುಜೆಯ ಕೊಟ್ಟನು ರಾಗದೆ ಜಯಕೇಸಿಗೆ ತ್ರಿಭೋಗಾಭ್ಯಂತರ**
**ವೆನಿತ್ತು ಪಲಸಿಗೆ ನಾಡಂ ॥ ಕರಿ ಘಟೆಯುಂ ತುರಗವ್ರ ಜವರ**
**ವಾಸ್ತು ಸಮಸ್ತ ಕಾಂಚಣಾಭರಣಗಳ್ವೆರಸಿನ್ತು ಚಕ್ರಿ ನಚ್ಚಿನ**
**ವರಕನ್ನೆಯನಿತ್ತು ಪರಸಿದಂ ಪದೆಪಿಂದಂ ॥ ಕಾಲಂ ಕರ್ಚ್ಚಿದ**
**ನೀರಂ ಮೇಲೆನಿಪತ್ಯುತ್ತಮಾಂಗದೊಳ್ಧರಿಯಿಸಿದಂ ಭೂಲಲನಾ**
**ದೀಶನೆ ನಲ್ಮೇಲೆನಿಸಿದರೊಳರೆ ಕೊಂಕಣೋರ್ವ್ವಿಶ್ವರನಿಂ॥**

ಹೀಗೆ ಜಯಕೇಶಿಗೆ ತನ್ನ ಮಗಳನ್ನು ವಿವಾಹ ಮಾಡಿಕೊಟ್ಟು ಪಲಸಿನಾಡನ್ನು, ಆನೆ, ಕುದುರೆ, ಶ್ರೇಷ್ಠ ಅಮೂಲ್ಯ ವಸ್ತುಗಳನ್ನು ಹಣವನ್ನು ಆಭರಣಗಳನ್ನು ಉಡುಗೊರೆಯಾಗಿ ಕೊಡುತ್ತಾನೆ.

ಅಲ್ಲದೆ ಚಕ್ರವರ್ತಿಯು ಈ ವಿವಾಹೋತ್ಸವ ಸಂದರ್ಭದಲ್ಲಿ ಕುಂದೂರು-೫೦೦ರಲ್ಲಿಯ ಬಾಡ ಕನಕಾಪುರವನ್ನು ಸೌರಾಷ್ಟ್ರದ ಸೋಮನಾಥ ದೇವರ ಧೂಪಕ್ಕೆ ಜಯಕೇಶಿಯು ಧರ್ಮವಾಗಿ ಬಿಡುತ್ತಾನೆ. ಅದನ್ನು ಜಯಕೇಶಿಯ ಕೈಯಿಂದ ಧಾರಾಪೂರ್ವಕ ಮಾಡಿ ಬಿಡಿಸುತ್ತಾನೆ ಈ ವಿಷಯ ಕನಕೂರಿನ[೬] ಶಾಸನದಲ್ಲಿ ಬರುತ್ತದೆ. ಇದರಿಂದ ಎರಡನೆಯ ಜಯಕೇಶಿಯು ಆರನೆಯ ವಿಕ್ರಮಾದಿತ್ಯನಿಗೆ

"ವಿಕ್ರಮ ಸಹಾಯನೆನಿಪ ನಚ್ಚಿನಳಿಯಂ" ಎನಿಸಿದ್ದನು.

ಜಯಕೇಶಿ ॥ ಮತ್ತು ಮೈಳಲದೇವಿಯರಿಗೆ ಸಾವಿತ್ರಿ ಎಂಬ ಮಗಳು ಪೆರ್ಮಾಡಿದೇವ, ವಿಜಯಾದಿತ್ಯ ಎಂಬ ಪುತ್ರರು ಜನಿಸುತ್ತಾರೆ. ಹಿರಿಯ ಪುತ್ರಿಯಾದ ಸಾವಿತ್ರಿಯನ್ನು ತೈಲನೃಪನ ಮಗನಾದ ಗಂಗಿದೇವನಿಗೆ ಕೊಟ್ಟುದನ್ನು ತಂಬೂರು[೮] ಶಾಸನ ಹೇಳುತ್ತದೆ.

ಈ ತೈಲನೃಪನನ್ನು ಗುರವ್ ಅವರು ಆರನೆಯ ವಿಕ್ರಮಾದಿತ್ಯನ ಕಿರಿಯ ಮಗನೆಂದು ಗುರುತಿಸುತ್ತಾರೆ. ಈ ತೈಲನ ಮಗನೇ ಗಂಗಿದೇವನಾಗಿರ ಬಹುದೆಂದು ಊಹಿಸುತ್ತಾರೆ. ಈ ಊಹೆ ನಿಜವಾದರೆ ಈ ರಕ್ತ ಸಂಬಂಧ

ಕೊನೆಯವರೆಗೂ ಮುಂದುವರೆದಿರುವುದು ಸ್ಪಷ್ಟವಾಗುತ್ತದೆ.

ಹೀಗೆ ಕಲ್ಯಾಣದ ಚಾಲುಕ್ಯ ಚಕ್ರವರ್ತಿಗಳೊಂದಿಗೆ ಗೋವೆಯ ಕದಂಬರ ಸಂಬಂಧ ಸ್ನೇಹದೊಂದಿಗೆ ಪ್ರಾರಂಭವಾಗಿ ಕೊನೆಗೆ ರಕ್ತ ಸಂಬಂಧದಲ್ಲಿ ಪರ್ಯವಸಾನವಾಗಿ ನಿರಂತರವಾಗಿ ಕೊನೆಯ ಘಟ್ಟದವರೆಗೂ ನಡೆದುಕೊಂಡು ಬಂದಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


1. Moraes (georgem) : *Kadamaba Kula : A History of Ancient & Mediaeval Karnataka.* Bombay : F.X. Furtado, 1931 p, 168.
2. Gurav (R.N) : *The Kadambas of Goa and their Inscriptions* No. 2 unpublished Thesis submltted on 1969 to KUD) No.2 ಕ್ರಿ.ಶ. ೧೦೫೨-೫೩, ಗುಡಿಕಟ್ಟಿ.
3. E.I. 13, No. 28A 1125 ಅಗಸ್ಟ್ ೨೮, ಕುಂಭಾಪುರ.
4. Gurav (R.N.) : *The Kadambas of Goa and their Inscriptions*, No. 17, ಕ್ರಿ.ಶ. ೧೧೧೯, ಅಮರಗೋಳ.
5. *The Kadambas of Goa and their Inscriptions* No. 45, ಕ್ರಿ.ಶ. ೧೧೬೭-೬೭, ಬೈಲೂರು.
6. Ibid, No. 37, ಕ್ರಿ.ಶ. ೧೧೪೪, ತಂಬೂರು.
7. S.I.I. XI (ii) 154, 1104, ಜನೇವರಿ ೧೧ ಕನಕೂರು ; ಧಾರವಾಡ ತಾಲ್ಲೂಕು ಜಿಲ್ಲೆ.
8. Gurav (R.N) : *op. cit.*, No. 37, ಕ್ರಿ.ಶ. ೧೧೪೪, ತಂಬೂರು.
9. Ibid, p. 203.

ಡಾ. ಎಸ್.ಕೆ. ದೇವೇಗೌಡ*

# ಮುಮ್ಮಡಿ ವೀರಬಲ್ಲಾಳನ ಕಾಲದ ಧಾರ್ಮಿಕ ನೀತಿ

ಹೊಯ್ಸಳ ಮುಮ್ಮಡಿ ವೀರಬಲ್ಲಾಳನ ಆಳ್ವಿಕೆಯ ಅವಧಿಯು (ಕ್ರಿ.ಶ. ೧೨೯೨–೧೩೪೨) ಅರ್ಧ ಶತಮಾನದಷ್ಟು ವ್ಯಾಪಿಸಿದ್ದು ಕರ್ನಾಟಕದ ಇತಿಹಾಸದಲ್ಲಿ ಆ ಕಾಲವು ಧಾರ್ಮಿಕವಾಗಿ ಮತ್ತು ಸಾಂಸ್ಕೃತಿಕವಾಗಿ ಸಮೃದ್ಧವಾದ ಕಾಲ. ಆಗ ಜೈನ, ಶ್ರೀವೈಷ್ಣವ ಶೈವ ಹಾಗೂ ವೀರಶೈವಧರ್ಮಗಳು ಕೂಡಿ ಬಾಳಿದವಲ್ಲದೆ ಉನ್ನತಿಯನ್ನೂ ಕಂಡವು. ರಾಮಾನುಜಾಚಾರ್ಯರು ಮತ್ತು ಬಸವಣ್ಣನವರು ಬದುಕಿ ಧರ್ಮೋಪದೇಶ ಮಾಡಿದ ಈ ಕಾಲವು ಚರಿತ್ರೆಯಲ್ಲಿ ಸ್ಥಿರವಾದ ಪರಿಣಾಮಗಳನ್ನು ಬೀರಿದ ಕಾಲವೂ ಹೌದು. ಮುಮ್ಮಡಿ ಬಲ್ಲಾಳನು ತನ್ನ ಅರ್ಧಶತಮಾನದ ಆಳ್ವಿಕೆಯಲ್ಲಿ ಈ ಎಲ್ಲಾ ಧರ್ಮಗಳನ್ನು ಸಮಾನವಾಗಿ ನೋಡಿಕೊಂಡು ತನ್ನ ರಾಜಧರ್ಮ ನೀತಿಯನ್ನು ಯಶಸ್ವಿಯಾಗಿ ಪಾಲಿಸಿದ್ದಾನೆ. ದೇವಾಲಯ ಹಾಗೂ ಬಸದಿಗಳ ನಿರ್ಮಾಣವು ಮೋಕ್ಷಸಾಧನೆಗೆ ಮಾರ್ಗ ಎಂಬ ಧ್ಯೇಯವೂ ಇತ್ತು. ಅಲ್ಲದೇ ಪುಣ್ಯಪ್ರಾಪ್ತಿಗಾಗಿ ದಾನದತ್ತಿಗಳನ್ನು ನೀಡುವುದು ಧಾರ್ಮಿಕತೆಯ ಮತ್ತೊಂದು ಅಂಗವಾಗಿತ್ತು.

**ಜೈನಧರ್ಮ :** ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಜೈನಧರ್ಮದ ಚಟುವಟಿಕೆಗಳು ಇಳಿಮುಖವಾಗಿದ್ದವೆಂಬ ಅಭಿಪ್ರಾಯವು ಕೆಲವು ಇತಿಹಾಸಕಾರರಲ್ಲಿದೆ. ಹದಿನಾಲ್ಕನೆಯ ಶತಮಾನವು ವಿಧರ್ಮೀಯರ ದಾಳಿಗಳಿಂದಾಗಿ ದಕ್ಷಿಣ ಭಾರತದ ಸಾಮಾಜಿಕ ಜೀವನದಲ್ಲಿ ಗೊಂದಲವನ್ನು ಸೃಷ್ಟಿಸಿದ್ದಿತು. ನೂತನವಾಗಿ, ದೇವಾಲಯ ಅಥವಾ ಬಸದಿಗಳನ್ನು ದೊಡ್ಡ ಪ್ರಮಾಣದಲ್ಲಿ ನಿರ್ಮಿಸಲು ರಾಜರು ಮತ್ತು ಶ್ರೀಮಂತರು ಹಿಂದೇಟು ಹಾಕುತ್ತಿದ್ದ ಕಾಲ ಅದಾಗಿದ್ದಿತು. ಆಗ ಅಸ್ತಿತ್ವದಲ್ಲಿದ್ದ ಬಸದಿ ಮತ್ತು ಮಠಗಳನ್ನು ಸಂರಕ್ಷಿಸಿಕೊಂಡು ಬಂದುದಕ್ಕೆ ಆ ಕಾಲದ ಶಾಸನಗಳು ಸಾಕ್ಷಿ ಒದಗಿಸುತ್ತವೆ. ಹುಣಸೂರು ತಾಲ್ಲೂಕಿನ ಹೊನ್ನೇನಹಳ್ಳಿಯ ಬಸದಿಯಲ್ಲಿ ದೊರಕಿರುವ ಕ್ರಿ.ಶ. ೧೩೦೩–೦೪ರ ಶಾಸನವು[೧] ಇದಕ್ಕೆ ಉದಾಹರಣೆಯಾಗಿದೆ. ಬಾಹುಬಲಿ ಮಲಧಾರಿದೇವರ ಶಿಷ್ಯರಾದ ಪದ್ಮನಂದಿ ಭಟ್ಟಾರಕರು ಹೊನ್ನೇನಹಳ್ಳಿಯ ಬಸದಿಗೆ ಗಂಧದ ಕೋಟಿ ಅಥವಾ ಗಂಧದ ಬಾಗಿಲನ್ನು ಮಾಡಿಸಲು ಹದಿನೈದು ಗದ್ಯಾಣಗಳನ್ನು ವೆಚ್ಚ ಮಾಡಿದರೆಂದು ತಿಳಿದುಬರುತ್ತದೆ.

ಸಾಗರ ತಾಲ್ಲೂಕಿನ ಒಂದು ಶಾಸನ, ಮುಮ್ಮಡಿ ಬಲ್ಲಾಳನು ಗೊಮ್ಮಟನಾಥ ದೇವರನ್ನು ಪೂಜಿಸಿದನೆಂದು ತಿಳಿಸುತ್ತದೆ.[೨] ಈ ಕಾಲದಲ್ಲಿ ಅನೇಕ ಜೈನಧರ್ಮೀಯರು ವಿವಿಧ ಧರ್ಮಕಾರ್ಯಗಳಿಗಾಗಿ ದತ್ತಿಗಳನ್ನು ಬಿಟ್ಟ ವಿಷಯವು ಶಾಸನಗಳಿಂದ ತಿಳಿದುಬರುತ್ತದೆ. ಕರ್ನಾಟಕದಲ್ಲಿ ಆಗ ಮೂಲಸಂಘದ ದೇಶಿಯಗಣದ ಪುಸ್ತಕ ಗಚ್ಛ ಜೈನಪಂಥವು ಜನಪ್ರಿಯವಾಗಿದ್ದಿತು.[೩] ಈ ಪಂಥಕ್ಕೆ ಸಂಬಂಧಪಟ್ಟ ಶಾಸನಗಳು ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ವ್ಯಾಪಕವಾಗಿ ಕಂಡುಬರುತ್ತವೆ. ಕ್ರಿ.ಶ. ೧೩೦೩ರ ಒಂದು ಶಾಸನದಲ್ಲಿ ಪದ್ಮನಂದಿಭಟ್ಟಾರಕನು ಹಸನಾಯಕನಹಳ್ಳಿಯ ಬಸದಿಯಲ್ಲಿ ಗಂಧಕೋಟಿಯನ್ನು ನಿರ್ಮಿಸಿದನೆಂದು ಉಲ್ಲೇಕಿಸಲಾಗಿದೆ.[೪] ಜೈನಧರ್ಮವು ಕರ್ನಾಟಕದಲ್ಲಿ ಅತೀ ವ್ಯಾಪಕವಾಗಿ ಬೆಳೆದು ರಾಜಮಹಾರಾಜರುಗಳಿಂದ ಗೌರವಿಸಲ್ಪಟ್ಟು ಜನಸಾಮಾನ್ಯರಿಗೂ ತಲುಪಿದಂತಹ ಪ್ರಬುದ್ಧವಾದ ಧರ್ಮವಾಗಿತ್ತು.

**ಶೈವಧರ್ಮ :** ಹೊಯ್ಸಳರು ಶೈವಧರ್ಮದ ಬಗ್ಗೆ ಅತ್ಯಂತ ಗೌರವಾದರಗಳನ್ನು ಹೊಂದಿದ್ದರು. ಮುಮ್ಮಡಿ ವೀರಬಲ್ಲಾಳನ ಆಳ್ವಿಕೆಯ ಕ್ರಿ.ಶ. ೧೩೦೭ರ ಶಾಸನದಲ್ಲಿ ಈತನ ದಂಡನಾಯಕನಾದ ಮದಿಗಿದೇವ ದ್ವಾರಸಮುದ್ರದ ಕಲಿಯ ಸೋಮನಾಥ ದೇವಾಲಯಕ್ಕೆ ಭೂದಾನ ನೀಡಿದ್ದರ ಬಗ್ಗೆ ಬೇಲೂರಿನ ಶಾಸನವೊಂದು ಉಲ್ಲೇಖಿಸುತ್ತದೆ.[೫]

ಕ್ರಿ.ಶ. ೧೩೦೦ರ ಶಾಸನವೊಂದರಲ್ಲಿ ಮುಮ್ಮಡಿ ವೀರಬಲ್ಲಾಳನು ಕುಂದಾಣಿ ರಾಜ್ಯದಲ್ಲಿ ಮಠ ಮತ್ತು ಸ್ಥಾನಗಳ ಮುಖ್ಯರುಗಳನ್ನು ಸೇರಿಸಿ ಸಮಾವೇಶ ನಡೆಸಿದನೆಂದು ಉಲ್ಲೇಖಿಸಲಾಗಿದೆ.[೬] ಮುಮ್ಮಡಿ ವೀರಬಲ್ಲಾಳನ ಕಾಲಕ್ಕೆ

* ಉಪನ್ಯಾಸಕರು, ಸರ್ಕಾರಿ ಪ್ರಥಮ ದರ್ಜೆ ಕಾಲೇಜು, ಕೆ.ಆರ್. ಪೇಟೆ, ಮಂಡ್ಯ ಜಿಲ್ಲೆ.

ಜೈನಧರ್ಮದಲ್ಲಿ ಕ್ಷೀಣತೆ ಕಂಡುಬಂದದ್ದರಿಂದ ಮತ್ತೆ ಶ್ರೀ ವೈಷ್ಣವ ಧರ್ಮವು ಜನಸಾಮಾನ್ಯರ ದೈನಂದಿನ ಧರ್ಮವಾಗಿ ವಿಫಲವಾದುದರಿಂದ ಮತ್ತೆ ಪುರಾತನ ಪಂಥವಾದ ಶೈವಪಂಥವು ಪುನಶ್ಚೇತನಗೊಂಡಿತು. ಈತನ ಕಾಲದಲ್ಲಿ ಬೇಲೂರಿನ ಬಳಿ ಇರುವ ಹಂದರಬಾಳು ಗ್ರಾಮದ ಶಂಭೂದೇವಾಲಯಕ್ಕೆ ಮುಮ್ಮಡಿ ವೀರಬಲ್ಲಾಳನ ಪರಿವಾರದ ಮದುರಯ್ಯನ ಮಗ ಚಿಕ್ಕಗುಮ್ಮಣ್ಣನು ಭೂದಾನ ನೀಡಿದ್ದರ ಬಗ್ಗೆ ಕ್ರಿ.ಶ. ೧೩೧೮ರ ಶಾಸನವು ಉಲ್ಲೇಖಿಸುತ್ತದೆ.[೬] ಮುಮ್ಮಡಿ ವೀರಬಲ್ಲಾಳನ ರಾಜ್ಯದಲ್ಲಿ ವಿವಿಧ ಧಾರ್ಮಿಕ ಸಂಸ್ಥೆ ಮತ್ತು ದೇವಾಲಯಗಳು ಪ್ರೋತ್ಸಾಹ ಪಡೆದದ್ದು ಶಾಸನಗಳಿಂದ ವ್ಯಕ್ತವಾಗುತ್ತದೆ. ತಮಿಳುನಾಡಿನ ವಿವಿಧ ಭಾಗಗಳಲ್ಲೂ ಆ ಕಾಲದಲ್ಲಿ ನೀಡಿದ ಧಾರ್ಮಿಕ ದತ್ತಿ ಶಾಸನಗಳಿವೆ.[೮]

ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಎಣ್ಣೆನಾಡ ಪ್ರಾಂತ್ಯಾಧಿಕಾರಿ ಅಥವಾ ಮಹಾಪ್ರಧಾನವಾದ ಮಂಚಿಗೌಡನು ಮಾಗೇಯ ಎಂಬಲ್ಲಿ ಅನಿಲೇಶ್ವರ ದೇವಾಲಯಕ್ಕೆ ರಂಗಮಂಟಪವನ್ನು ಕಟ್ಟಿಸಿದನೆಂದು ಕ್ರಿ.ಶ. ೧೩೪೦ರ ಶಾಸನವು ಉಲ್ಲೇಖಿಸುತ್ತದೆ.[೯] ಹೊಯ್ಸಳರ ರಾಜ್ಯದ ಬಹುತೇಕ ಗ್ರಾಮಗಳಲ್ಲಿ ಭೈರವ ದೇವಾಲಯಗಳಿದ್ದುದು ತಿಳಿದುಬರುತ್ತದೆ. ಅಲ್ಲದೇ ಭೈರವನ ಶಿಲ್ಪವು ಶೈವ ದೇವಾಲಯಗಳಲ್ಲಿ ಪರಿವಾರ ದೇವತೆಗಳ ಸಮೂಹದಲ್ಲಿಯೂ ಕಂಡುಬರುತ್ತದೆ. ವಿಶೇಷವಾಗಿ ಮಲೆನಾಡಿನ ಬಲ್ಲಾಳರಾಯನದುರ್ಗ, ದೇವರಮನೆ, ಭೈರಾಪುರ ಮೊದಲಾದೆಡೆಗಳಲ್ಲಿನ ಭೈರವ ದೇವಾಲಯಗಳು ಪ್ರಸಿದ್ಧವಾಗಿವೆ. ಈ ದೇವಾಲಯಗಳು ಮುಖ್ಯವಾಗಿ ನಾಥಪಂಥಕ್ಕೆ ಸೇರಿದ್ದವಾಗಿದ್ದವು. ದಕ್ಷಿಣ ಭಾರತದ ಪ್ರಮುಖ ನಾಥಪಂಥ ಕ್ಷೇತ್ರಗಳಾದ ಶ್ರೀ ಆದಿಚುಂಚನಗಿರಿ ಮಠ ಮತ್ತು ಕದ್ರಿಮಠಗಳು ಹೊಯ್ಸಳ ರಾಜ್ಯದ ವ್ಯಾಪ್ತಿಯಲ್ಲಿ ಇದ್ದದ್ದು ಗಮನಾರ್ಹವಾಗಿದೆ. ಈ ಮಠವ್ಯವಸ್ಥೆಯು ಉತ್ತರ ಭಾರತದ ನಾಥಪಂಥ ಪೀಠಗಳ ಅಧೀನದಲ್ಲಿ ಕೆಲಸ ಮಾಡುತ್ತಿದ್ದವು. ಈ ಮೇಲಿನ ಅಂಶಗಳು ಶೈವಧರ್ಮವು, ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಹೊಯ್ಸಳ ರಾಜ್ಯದಲ್ಲಿ ಪ್ರಭಾವಿ ಸ್ಥಾನದಲ್ಲಿತ್ತೆಂಬುದನ್ನು ದೃಢಪಡಿಸುತ್ತವೆ. ಹಾಗೂ ಹೊಯ್ಸಳರ ಕಾಲದಿಂದಲೂ ಮಲೆನಾಡಿನಲ್ಲಿ ನಡೆದುಕೊಂಡು ಬರುತ್ತಿರುವ ಸುಗ್ಗಿ ಹಬ್ಬಗಳು ಮತ್ತು ಜಾತ್ರೆಗಳು ಮುಖ್ಯವಾಗಿ ಶೈವಪ್ರಧಾನ ಆರಾಧನೆಗೆ ಹೆಸರಾಗಿವೆ. ಬೆಂಗಳೂರಿನ ಕರಗ ಉತ್ಸವವು ಇಂತಹ ಶೈವ ಪರಂಪರೆಯನ್ನು ಪ್ರತಿಬಿಂಬಿಸುತ್ತದೆ.

**ಶ್ರೀವೈಷ್ಣವ ಧರ್ಮ :** ಶೈವ ಧರ್ಮದಂತೆ ಶ್ರೀವೈಷ್ಣವ ಧರ್ಮವೂ ಬಹು ಹಿಂದಿನಿಂದಲೂ ಆಚರಿಸಲ್ಪಡುತ್ತಿದ್ದ ಧರ್ಮವಾಗಿದೆ. ಮುಮ್ಮಡಿ ವೀರಬಲ್ಲಾಳನ ದಂಡನಾಯಕರುಗಳಾದ ಸಿಂಗೇಯ ದಣ್ಣಾಯಕ ಮತ್ತು ಕೋಟೆಯ ದಣ್ಣಾಯಕರು ಪ್ರಸಿದ್ಧ ಶ್ರೀವೈಷ್ಣವ ಅನುಯಾಯಿಗಳಾದ ಮಹಾಪ್ರಧಾನ ಮಾಧವ ದಣ್ಣಾಯಕನ ಪುತ್ರರಾಗಿದ್ದರು. ಸಿಂಗೇಯ ದಣ್ಣಾಯಕನನ್ನು ಯಾದವರ ಹೊಯ್ಸಳರ ಪ್ರತಿನಿಧಿಯಾಗಿ ನಿಯೋಜಿಸಲಾಗಿತ್ತು. ಅವನು ಶ್ರೀವೈಷ್ಣವ ದೇವಾಲಯಗಳಿಗೆ ಮತ್ತು ಅನ್ನದಾನಕ್ಕೆ ದಾನದತ್ತಿಗಳನ್ನು ನೀಡಿದ ಬಗ್ಗೆ ತಿಳಿದುಬರುತ್ತದೆ.[೧೦] ತುಂಗನೂರನ್ನು ಸಿಂಗನಲ್ಲೂರೆಂದು ಮರುನಾಮಕರಣ ಮಾಡಿ ಅದನ್ನು ದೇವಾಲಯಕ್ಕೆ ದತ್ತಿ ಬಿಡಲಾಯಿತು. ಕಂಚಿಯು ಆ ಕಾಲದ ಪ್ರಮುಖ ಶ್ರೀವೈಷ್ಣವ ಕೇಂದ್ರವಾಗಿದ್ದಿತು. ಮುಮ್ಮಡಿ ವೀರಬಲ್ಲಾಳನು ಅಲ್ಲಿಗೆ ಅನೇಕ ಭಾರಿ ಭೇಟಿ ನೀಡಿ ವಿದ್ವಾಂಸರಿಗೆ ದತ್ತಿಗಳನ್ನು ಬಿಟ್ಟು ಗೌರವಿಸಿದನು. ಅವನು ಅಲ್ಲಿ ವೀರವಲ್ಲಾಳನ್ ಎಂಬ ಸಿಂಹಾಸನವನ್ನೂ ದಾನ ಮಾಡಿ ಅಭಿಷೇಕ ಮಂಟಪದಲ್ಲಿ ಇರಿಸಿದನೆಂದು ತಿಳಿದುಬರುತ್ತದೆ. ಆ ಕಾಲದಲಿ ಮಹಾಪ್ರಧಾನಿ ಸೋಮೆಯ ದಣ್ಣಾಯಕನ ಮಗನು ಸಿಂಗೇಯ ದಣ್ಣಾಯಕನ ಸಹೋದರನು ಆಗಿದ್ದ ವಲ್ಲಪ್ಪದಣ್ಣಾಯಕನು ಶ್ರೀವೈಷ್ಣವ ದೇವಾಲಯಗಳಿಗೆ ಅನೇಕ ಧರ್ಮದತ್ತಿಗಳನ್ನು ಬಿಟ್ಟನು. ಅವನು ಕೋಲಾರದ ಸುತ್ತಮುತ್ತಲ ಪ್ರದೇಶಕ್ಕೆ ಮುಮ್ಮಡಿ ವೀರಬಲ್ಲಾಳನ ಮಾಂಡಲೀಕನಾಗಿ ಅಧಿಕಾರ ನಿರ್ವಹಿಸುತ್ತಿದ್ದನು. ಅವನು ಕ್ರಿ.ಶ. ೧೨೯೩ರಲ್ಲಿ ವಲವಂದಾ ಪೆರುಮಾಳ್ ದೇವರಿಗೆ ಭೂದತ್ತಿಯನ್ನು ಬಿಟ್ಟ ವಿಷಯವು ಶಾಸನಗಳಿಂದ ತಿಳಿದುಬರುತ್ತದೆ.[೧೧] ಸೋಮೆಯ ದಣ್ಣಾಯಕನು ಬೇಲೂರಿನ ಚನ್ನಕೇಶವ ದೇವಾಲಯದಲ್ಲಿ ಮೊದಲಿಗೆ ಇದ್ದ ಮರದ ಶಿಖರವನ್ನು ಬದಲಾಯಿಸಿ ಅದರ ಬದಲಿಗೆ ಇಟ್ಟಿಗೆ ಮತ್ತು ಗಾರೆಗಳಿಂದ ಹೊಸ ಶಿಖರವನ್ನು ಕಟ್ಟಿಸಿದನು.[೧೨] ಕ್ರಿ.ಶ. ೧೩೧೮ರಲ್ಲಿ ನಂಜನಗೂಡು ತಾಲ್ಲೂಕಿನ ಹೆಡತಲೆಯ ಚೆನ್ನಿಗರಾಯ ದೇವಾಲಯದ ಪೂಜಾಕಾರ್ಯಗಳಿಗಾಗಿ ಮಹಾವಡ್ಡ ವ್ಯವಹಾರಿಯ ಮಗ ಸಿಂಧಿಸೆಟ್ಟಿಯು ಮಹಾಪ್ರಧಾನ ಪೆರುಮಾಳ ದಂಡನಾಯಕರ ಅನುಮತಿಯ ಮೇರೆಗೆ ಭೂಮಿಯನ್ನು ನೀರಾವರಿ ಜಮೀನಾಗಿ ಪರಿವರ್ತಿಸಿ ದಾನ ನೀಡಿದ ಬಗ್ಗೆ ಅಲ್ಲಿನ ಶಾಸನದಲ್ಲಿ ದಾಖಲಿಸಲಾಗಿದೆ.[೧೩] ಈ ರೀತಿ ಈ ಕಾಲದಲಿ ಶ್ರೀವೈಷ್ಣವ ಧರ್ಮವು ವಿಶಿಷ್ಟಾದ್ವೈತ ಮತ್ತು ದ್ವೈತ ಪಂಥಗಳೆರಡರ ಮೂಲಕವು ಹೊಯ್ಸಳ ರಾಜ್ಯದಲ್ಲಿ ಪ್ರವರ್ಧಮಾನಕ್ಕೆ ಬಂದು ಒಂದು ಮುಖ್ಯ ಧರ್ಮ ಪ್ರಕಾರವಾಯಿತು. ಕೊಳ್ಳೇಗಾಲ ತಾಲ್ಲೂಕಿನ ಮುಳ್ಳೂರು ಗ್ರಾಮದಲ್ಲಿ ವಿಷ್ಣುದೇವಾಲಯವನ್ನು ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ಸ್ಥಾಪಿಸಿದ್ದು ತಿಳಿದುಬರುತ್ತದೆ.[೧೪]

ವೀರಶೈವ ಧರ್ಮ : ಕರ್ನಾಟಕವು ಭಾರತದ ಧಾರ್ಮಿಕ ಕ್ಷೇತ್ರಕ್ಕೆ ವೀರಶೈವ ಧರ್ಮವನ್ನು ನೀಡಿದ್ದು ಮಹತ್ತರವಾದ ಕೊಡುಗೆಯೇ ಸರಿ. ಸುಮಾರಾಗಿ ವಿಷ್ಣುವರ್ಧನನ ಸಮಕಾಲೀನವಾದ ಬಾಗೇವಾಡಿಯ ಬಸವಣ್ಣನವರು ಕಲ್ಯಾಣದ ಕಳಚೂರಿಗಳಲ್ಲಿ ಮಂತ್ರಿಯಾಗಿದ್ದರು. ಬಸವಣ್ಣ ಮತ್ತು ಅವರ ಸಹಚರರು ಸೇರಿ ಕಲ್ಯಾಣದಲ್ಲಿ ಭಕ್ತಿ ಕಮ್ಮಟವನ್ನು ಸ್ಥಾಪಿಸಿ ಧಾರ್ಮಿಕ ಕ್ಷೇತ್ರದಲ್ಲಿ ವೈಚಾರಿಕ ಚಿಂತನೆಗಳನ್ನು ಪ್ರಚುರಪಡಿಸಿದರು. ಬಹುಪ್ರಾಚೀನ ಕಾಲದಿಂದ ಆಚರಣೆಯಲ್ಲಿದ್ದ ಲಿಂಗಾಯತ ಧರ್ಮಕ್ಕೆ ಹೊಸಚೇತನವನ್ನು ನೀಡಿದರು. ಹೊಯ್ಸಳರ ಕಾಲದಲ್ಲಿ ಶಿವಶರಣರು ಇದ್ದುದಕ್ಕೆ ಶಾಸನಗಳಲ್ಲಿ ಪುರಾವೆಗಳು ದೊರೆಯುತ್ತವೆ. ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ವೀರಶೈವ ಮತಕ್ಕೆ ಪ್ರೋತ್ಸಾಹ ಕೊಟ್ಟಿದ್ದರ ಬಗ್ಗೆ ಕ್ರಿ.ಶ. ೧೩೧೯ರ ಶಾಸನದಿಂದ ತಿಳಿದುಬರುತ್ತದೆ.[೧೫] ವೀರಶೈವಮತಕ್ಕೆ ಮಹಾಜನಗಳು ಮತ್ತು ಪ್ರಜೆಗಳು ಭೂಮಿ ಮತ್ತು ತೆರಿಗೆಯನ್ನು ನೀಡುತ್ತಿದ್ದರೆಂದು ಇದರಲ್ಲಿ ತಿಳಿಸಲಾಗಿದೆ.

ಮುಮ್ಮಡಿ ವೀರಬಲ್ಲಾಳನ ಆಳ್ವಿಕೆಯ ಉತ್ತರಾರ್ಧ ದೇಶದಲ್ಲಿ ದೆಹಲಿ ಸುಲ್ತಾನರ ದಾಳಿಗಳ ಭೀತಿಯಿಂದ ಮತ್ತು ಆಂತರಿಕ ಕ್ಷೋಭೆಯಿಂದ ಅಸ್ಥಿರತೆಯ ಲಕ್ಷಣಗಳು ಕಾಣಿಸಿಕೊಂಡವು. ಆದರೆ ಇಂತಹ ಪರಿಸ್ಥಿತಿಯಲ್ಲಿ ದೇವಾಲಯ ಜೀರ್ಣೋದ್ಧಾರ ಮತ್ತು ಪೂಜಾದಿ ಕಾರ್ಯಗಳು ಸುಗಮವಾಗಿ ನಡೆಯಲು ವ್ಯವಸ್ಥೆ ಮಾಡುತ್ತಿದ್ದ ಸಂಗತಿಗಳು ಶಾಸನಗಳಿಂದ ತಿಳಿದುಬರುತ್ತದೆ. ಕೊಯಮತ್ತೂರು ಜಿಲ್ಲೆಯ ಅವಿನಾಶಿಯ ಲಿಂಗೇಶ್ವರ ದೇವಾಲಯದಲ್ಲಿ ಕಂಡುಬರುವ ಕ್ರಿ.ಶ. ೧೩೨೨ರ ಶಾಸನವು ದೇವರಿಗೆ ಭೂಮಿಯನ್ನು ದಾನ ನೀಡಿದ ವಿಚಾರವನ್ನು ದಾಖಲಿಸಿದೆ.[೧೬] ಅಲ್ಲಿನ ಮಹಾಮಂಟಪದಲ್ಲಿ ದೊರೆತಿರುವ ಕ್ರಿ.ಶ. ೧೩೩೩ರ ತಮಿಳು ಭಾಷೆಯಲ್ಲಿರುವ ಶಾಸನವು ಕೀಳ್‌ನಾಡಿನ ನೆಲ್ಲೂರಿನಲ್ಲಿ ತಿರುಮೇರ್ಕೊಯನಾರ್ ದೇವಾಲಯದ ಬಲಿಪೀಠವನ್ನು ಸ್ಥಾಪಿಸಿದ ವಿಷಯವನ್ನು ತಿಳಿಸುತ್ತದೆ.[೧೭] ಹಾಗೆಯೇ ಧರ್ಮಪುರ ತಾಲ್ಲೂಕಿನ ಅರ್ಚಚಲೂರ್‌ನ ನಯನಾರ್ ದೇವಾಲಯದ ತಳಪಾಯದ ಕಲ್ಲಿನಲ್ಲಿ ದೊರೆತ ಶಾಸನ ಹಾಗೂ ತಲೈನಲ್ಲೂರಿನ ನಾಗೇಶ್ವರಸ್ವಾಮಿ ದೇವಾಲಯದ ದಕ್ಷಿಣ ಗೋಡೆಯ ಮೇಲಿನ ಶಾಸನಗಳು ಧಾರ್ಮಿಕ ಉದ್ದೇಶಗಳಿಗಾಗಿ ಸ್ಥಳೀಯ ಅಧಿಕಾರಿಗಳು ನೀಡಿದ ದತ್ತಿಯ ವಿಚಾರಗಳನ್ನು ತಿಳಿಸುತ್ತವೆ.[೧೮] ಕೃಷ್ಣಗಿರಿ ಜಿಲ್ಲೆಯ ಹೊಸೂರಿನಲ್ಲಿ ದೊರೆತಿರುವ ಶಾಸನವು, ಅಚಲಪ್ಪ ದಂಡನಾಯಕನೆಂಬುವನು ಚೂಡನಾಥ ದೇವರಿಗೆ ಪೂಜೆ ಕಾರ್ಯಗಳಿಗಾಗಿ ಎರಮಂಡಲದ ಕಂದಾಯದ ಅರ್ಧಭಾಗವನ್ನು ಬಿಟ್ಟ ವಿಚಾರವನ್ನು ದಾಖಲಿಸಿದೆ.[೧೯] ಅದೇ ಸ್ಥಳದ ಕಾಳಿಯಮ್ಮನ ದೇವಾಲಯದಲ್ಲಿ ಕಂಡುಬಂದಿರುವ ಕ್ರಿ.ಶ. ೧೩೦೫ರ ತಮಿಳು ಶಾಸನವು ಯಾವುದಾದರೂ ಹಣವನ್ನು ಸ್ವೀಕರಿಸಲು ಸಂಬಂಧಪಟ್ಟವರಾರೂ ಇಲ್ಲದಿದ್ದ ಪಕ್ಷದಲ್ಲಿ ಅಂತಹ ಹಣವು ದೇವರಿಗೆ ಸಲ್ಲಬೇಕೆಂದು ರಾಜ ವೀರವಲ್ಲಾಳ ದೇವರು ಅಥವಾ ವೀರಬಲ್ಲಾಳ ದೇವರು ನೀಡಿರುವ ಆದೇಶವನ್ನು ಉಲ್ಲೇಖಿಸಿದೆ.[೨೦] ಚಾಮರಾಜನಗರ ತಾಲ್ಲೂಕಿನ ನರಸಮಂಗಲ ಗ್ರಾಮವನ್ನು ಎಲ್ಲ ತೆರಿಗೆಗಳಿಂದ ವಿಮುಕ್ತಿಗೊಳಿಸಿ, ರಾಮಲಿಂಗೇಶ್ವರ ದೇವಾಲಯಕ್ಕೆ ದೇವದಾನ ನೀಡಿದ್ದು ೧೩೩೬ರ ಶಾಸನದಿಂದ ತಿಳಿದುಬರುತ್ತದೆ.[೨೧] ಬೆಂಗಳೂರು ಜಿಲ್ಲೆಯ ಮಡಿವಾಳದ ಸೋಮೇಶ್ವರ ದೇವಾಲಯದಲ್ಲಿ ದೊರೆತಿರುವ ಕ್ರಿ.ಶ. ೧೩೦೧ರ ಶಾಸನವು ತಮಿಳು ಭಾಷೆಯಲ್ಲಿದ್ದು ಅದರಲ್ಲಿ ದೇವರ ಪೂಜೆ ಪ್ರಸಾದಗಳಿಗಾಗಿ ಸಿದ್ಧಾಯದ ಕಾಣಿಕೆಯಿಂದ ಬರುವ ಆದಾಯ ಮತ್ತು ಭೂಮಿಯ ದೇವದಾನವನ್ನು ಬಿಟ್ಟಿರುವ ವಿಚಾರ ದಾಖಲಾಗಿದೆ.[೨೨] ಅನೇಕ ನಾಡುಗಳ ಪ್ರತಿನಿಧಿಗಳು ಸಭೆ ಸೇರಿ ಈ ತೀರ್ಮಾನವನ್ನು ಮಾಡಿದ್ದಾರೆ. ಈ ಆಧಾರಗಳು ಹೇಗೆ ಮುಮ್ಮಡಿ ವೀರಬಲ್ಲಾಳನ ಕಾಲದಲ್ಲಿ ದೇವಾಲಯ ಮತ್ತು ಮಠಗಳು ಸಂರಕ್ಷಿತವಾಗಿದ್ದವೆಂಬ ವಿಚಾರಕ್ಕೆ ಸಮರ್ಥನೆ ಒದಗಿಸುತ್ತದೆ.

ರಾಜರು ಮತ್ತು ಅಧಿಕಾರಿಗಳು ಎಲ್ಲ ಧರ್ಮಗಳಿಗೂ ಔಚಿತ್ಯವರಿತು ಪ್ರೋತ್ಸಾಹಿಸುವ ನೀತಿಯನ್ನು ಅನುಸರಿಸುತ್ತಿದ್ದರು. ಇದೇ ಸರ್ಕಾರದ ನೀತಿಯಾಗಿತ್ತು. ಇದಕ್ಕೆ ಸ್ಪಷ್ಟ ಉದಾಹರಣೆಯಾಗಿ ಗುಂಡ್ಲುಪೇಟೆ ತಾಲ್ಲೂಕಿನ ಜೊಮ್ನಾಪುರದಲ್ಲಿ ದೊರೆತಿರುವ ಶಾಸನವು ಸಾಕ್ಷ್ಯ ಒದಗಿಸುತ್ತದೆ. ಕ್ರಿ.ಶ. ೧೩೧೮ರ ಈ ಶಾಸನದಲ್ಲಿ[೨೩] ಹೊಯ್ಸಳ ಮಹಾಪ್ರಧಾನ ಮಾಧವದಂಡನಾಯಕನ ಅಪ್ಪಣೆ ಪಡೆದು ಕೆಂಪಣ್ಣನೆಂಬುವನು ಶ್ರೀರಾಮದೇವರಿಗೆ, ಮೂಲಸ್ಥಾನ ದೇವರಿಗೆ ಮತ್ತು ಹಯಿಗೆಯ ಗ್ರಾಮದೇವತೆಗೂ ಗದ್ದೆಗಳನ್ನು ದಾನ ಮಾಡಿದ ವಿಷಯವನ್ನು ಉಲ್ಲೇಖಿಸಲಾಗಿದೆ. ಶಿಷ್ಟ ಮತ್ತು ಜನಪದ ದೇವತೆಗಳೆನ್ನದೆ ಎಲ್ಲಾ ದೇವತಾರಾಧನೆಗೂ ರಾಜ್ಯದಿಂದ ಮತ್ತು ಜನರಿಂದ ನೆರವು ಒದಗಿಸುತ್ತಿದ್ದುದಕ್ಕೆ ಇದು ಸಾಕ್ಷಿಯಾಗಿದೆ. ಹೀಗೆ ಧರ್ಮಸಮನ್ವಯವನ್ನು ಸಾಧಿಸುವುದು ಹೊಯ್ಸಳರ ಧಾರ್ಮಿಕ ನೀತಿಯಾಗಿತ್ತು. ಅದೇ ತಾಲ್ಲೂಕಿನ ಕಣ್ಣಾಗಾಲದ ಶಾಸನವು ತೆರಕಣಾಂಬಿಯಿಂದ ಆಳುತ್ತಿದ್ದ ಮಾಧವದಣ್ಣಾಯಕನು ಆ ಕಣ್ಣಾಗಾಲ ಗ್ರಾಮವನ್ನು ಗೋವರ್ಧನಗಿರಿಯ ಗೋಪಿನಾಥ ದೇವರಿಗೆ ದತ್ತಿ ನೀಡಿದ ವಿಷಯವನ್ನು ತಿಳಿಸುತ್ತದೆ.[೨೪] ಇದನ್ನು ಗೋಪಾಲಸ್ವಾಮಿ ಬೆಟ್ಟದ ದೇವಸ್ಥಾನವೆಂದು

ಗುರುತಿಸಲಾಗಿದೆ. ಕೇತಯ ದಂಡನಾಯಕನು ಗುಂಡ್ಲುಪೇಟೆ ತಾಲ್ಲೂಕಿನ ಹುಲ್ಲಹಳ್ಳಿಯ ಅಲ್ಲಾಳನಾಥ ದೇವರಿಗೆ ಕೇತಮ್ಮನಹಳ್ಳಿಯನ್ನು ದಾನ ಮಾಡಿದ ವಿಷಯವು ತಿಳಿದುಬರುತ್ತದೆ.[೨೫]

ಕ್ರಿ.ಶ. ೧೩೦೭ರ ಬೇಲೂರು ತಾಲ್ಲೂಕಿನ ಕಟ್ಟೆಸೋಮನಹಳ್ಳಿಯಲ್ಲಿ ದೊರೆತಿರುವ ಶಾಸನವು ಮುಮ್ಮಡಿ ವೀರಬಲ್ಲಾಳನ ಆಪ್ತನೂ ಮಹಾಪ್ರಧಾನನೂ ಆಗಿದ್ದ ಮಾದಿಗಿ ದೇವದಣ್ಣಾಯಕನು ರಾಜನಿಂದ ಜಮೀನನ್ನು ದಾನ ಪಡೆದು ಅದನ್ನು ಕಲಿಯಸೋಮನಾಥ ದೇವರ ಅಮೃತಪಡಿಗಾಗಿ ಬಿಟ್ಟ ವಿಷಯವನ್ನು ತಿಳಿಸುತ್ತದೆ.[೨೬] ಚಾಮರಾಜನಗರ ತಾಲ್ಲೂಕಿನ ಕೊತ್ತಲವಾಡಿಯ ಶಾಸನದಿಂದ (ಕ್ರಿ.ಶ. ೧೩೦೩) ಮಾಧವದಣ್ಣಾಯಕ ಮತ್ತು ಆತನ ಮಗ ಕೇತಯದಂಡನಾಯಕರು ವರದರಾಜದೇವರ ಪ್ರತಿಷ್ಠಾಪನೆ ಮಾಡಿಸಿದ ವಿಷಯವು ತಿಳಿದುಬರುತ್ತದೆ.[೨೭]

ಒಟ್ಟಿನಲ್ಲಿ ಹೊಯ್ಸಳ ಮುಮ್ಮಡಿ ವೀರಬಲ್ಲಾಳನ ಯುಗವು ಧಾರ್ಮಿಕ ಕ್ಷೇತ್ರದಲ್ಲಿ ಮಹತ್ತರವಾದ ಬದಲಾವಣೆಗಳನ್ನು ಕಂಡ ಕಾಲ. ಈ ಕಾಲದಲ್ಲಿ ಮತಪಂಥಗಳಿಗೆ ಹೊಸ ಹೊಸ ವ್ಯಾಖ್ಯಾನಗಳು ಮತ್ತು ಸಿದ್ಧಾಂತಗಳು ಸೇರಿಕೊಂಡವು. ಧರ್ಮ ಪ್ರವರ್ತಕರು ಹುಟ್ಟಿ ಹಿಂದಿನ ಸನಾತನಧರ್ಮದ ದಿಕ್ಕನ್ನೇ ಬದಲಿಸುವಂತಹ ಹೊಸ ಪಂಥಗಳನ್ನು ಕಟ್ಟಿದರು. ಇದರಿಂದಾಗಿ ನಿರ್ದಿಷ್ಟ ಮತಪಂಥಗಳ ಶಿಷ್ಯಕೋಟಿ ಬೆಳೆದು ದೇಶದಲ್ಲಿ ಧಾರ್ಮಿಕ ಪ್ರಜ್ಞೆ ಹೆಚ್ಚಿತು. ವಿವಿಧ ಪಂಥಗಳಲ್ಲಿ ಮೇಲ್ನೋಟಕ್ಕೆ ತತ್ವ ಜಿಜ್ಞಾಸೆಯ ಘರ್ಷಣೆ ಕಂಡುಬಂದರೂ ಆಂತರಿಕವಾಗಿ ಸಮಾಜವು ಸುಧಾರಣೆಯತ್ತ ಮತ್ತು ಹೊಸ ಧಾರ್ಮಿಕ ಆಚರಣೆಗಳ ಶಿಸ್ತಿನತ್ತ ಮುನ್ನಡೆಯಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಎ.ಕ. ಸಂ. ನಾಲ್ಕು, ಪ.ಅ. ಹುಣಸೂರು ೩೭

೨. ಎ.ಕ. ಸಂ. ಎಂಟು, ಸಾಗರ ೧೦೭, ಪು. ೨೯೮

೩. ಎ.ಕ. ಸಂ. ಹನ್ನೆರಡು, ಚಿಕ್ಕನಾಯಕನಹಳ್ಳಿ ೨೪ ಪು. ೨೨೩–೨೪.

೪. ಎ.ಕ. ಸಂ. ಎಂಟು, ೧೯೮೪ ಪ.ಅ. ಹಾಸನ ೮೮.

೫. ಎ.ಕ. ಸಂ. ಒಂಬತ್ತು, ಪ.ಅ. ಬೇಲೂರು ೪೨೫.

೬. ಎ.ಕ. ಸಂ. ಒಂಬತ್ತು, ಬೆಂಗಳೂರು ೫೧.

೭. ಎ.ಕ. ಸಂ. ಒಂಬತ್ತು, ಪ.ಅ. ಬೇಲೂರು ೪೮೭.

೮. *Annual Report of Indian Epigraphy* for 1980-81 and 1961-62.

೯. ಎ.ಕ. ಸಂ. ನಾಲ್ಕು, ಚಾಮರಾಜನಗರ ೨೭೫.

೧೦. *Tirupati Devastanam : Epigraphical Report* P. 12

೧೧. ಎ.ಕ. ಸಂ. ಹತ್ತು, ಕೋಲಾರ ೧೦೨ ಪು. ೩೧.

೧೨. ಎ.ಕ. ಸಂ. ಒಂಬತ್ತು, ೧೯೯೦ ಪ.ಅ. ಬೇಲೂರು ೧೯.

೧೩. ಎ.ಕ. ಸಂ. ಮೂರು, ಪ.ಅ. ನಂಜನಗೂಡು ೩೪೭, ಪು. ೪೦೨.

೧೪. ಎ.ಕ. ಸಂ. ನಾಲ್ಕು, ಪ.ಅ. ಕೊಳ್ಳೇಗಾಲ ೧೬ ಪು. ೪೦೮.

೧೫. ಎ.ಕ. ಸಂ. ನಾಲ್ಕು, ಪ.ಅ. ಯಳಂದೂರು ೨೩ ಪು. ೨೮೭.

೧೬. *A.R.I. Ep.* 1986-87, No. 359.

೧೭. *A.R.I.Ep.* 1986-87 No. 365.

೧೮. ಅದೇ, 1961-62 No. 278.

೧೯. ಅದೇ, 1969-70 No. 298.

೨೦. ಅದೇ, 1969-70 No. 305.

೨೧. ಎ.ಕ. ಸಂ. ನಾಲ್ಕು ಪ.ಅ. ಚಾಮರಾಜನಗರ ೨೯೫ ಪು. ೬೮೮.

೨೨. *A.R.I. Ep.* 1971-72 No. 152.

೨೩. ಎ.ಕ. ಸಂ. ಮೂರು, ಪ.ಅ. ಗುಂಡ್ಲುಪೇಟೆ ೧೭೩, ಪು. ೧೩೬.

೨೪. ಅದೇ, ಗುಂಡ್ಲುಪೇಟೆ ೨೨೩, ಪು. ೧೬೦.

೨೫. ಅದೇ, ನಂಜನಗೂಡು ೧೩೮, ಪು. ೨೬೧.

೨೬. ಎ.ಕ. ಸಂ. ಒಂಬತ್ತು, ಪ.ಅ. ಬೇಲೂರು ೪೨೫, ಪು. ೪೦೧.

೨೭. ಎ.ಕ. ಸಂ. ನಾಲ್ಕು, ಪ.ಅ. ಚಾಮರಾಜನಗರ, ೩೦೪, ಪು. ೨೦೨.

ಸುಂಕಂ ಗೋವರ್ಧನ*

# ವಿಜಯನಗರ ಆಡಳಿತ ಕಾಲದ ಮುಳುಬಾಗಿಲು ರಾಜ್ಯ

ಕೋಲಾರ ಜಿಲ್ಲೆಯ ಮುಳಬಾಗಿಲು; ರಾಮಾಯಣ, ಮಹಾಭಾರತ ಪ್ರಸಂಗಗಳೊಂದಿಗೆ ತಳಕು ಹಾಕಿಕೊಂಡಿರುವ ಈ ಪ್ರದೇಶ ಪ್ರಾಗೈತಿಹಾಸಿಕ ನೆಲೆಗಳಿಂದಲೂ ಪ್ರಸಿದ್ಧವಾಗಿದೆ. ಐತಿಹಾಸಿಕವಾಗಿ ಪ್ರಸಿದ್ಧ ವ್ಯಾಪಾರೀ ಕೇಂದ್ರವಾಗಿ ಹಲವಾರು ರಾಜಕೀಯ ಘಟನೆಗಳಿಗೆ ಸಾಕ್ಷಿಯಾಗಿದೆ.

ಅತ್ಯಂತ ಪ್ರಾಚೀನ ದಾಖಲೆಗಳ ಪ್ರಕಾರ ಬಾಣ, ಗಂಗ, ನೊಳಂಬರ ಆಳ್ವಿಕೆಯ ೯ನೆಯ ಶತಮಾನದ ಹೊತ್ತಿಗೆ ಮುಳುವಾಯ್‌ನಾಡಾಗಿ ಅಸ್ತಿತ್ವದಲ್ಲಿತ್ತು. ಚೋಳರ ಆಳ್ವಿಕೆಯಲ್ಲಿ ಈ ಪ್ರದೇಶ "ನಿಗರಿಲಿ ಚೋಳ ಮಂಡಲ" ದಲ್ಲಿದ್ದ ಮುಳಬಾಗಿಲು ನಂತರ ಮುಮ್ಮಡಿ ಬಲ್ಲಾಳನು, ಹೊಯ್ಸಳರ ಆಳ್ವಿಕೆಗೆ ಒಳಪಡುವ ಎಲ್ಲಾ ಅಳಿದುಳಿದ ಪ್ರದೇಶಗಳನ್ನು ಒಟ್ಟುಗೂಡಿಸಿ 'ಹೆಸರ್ ಕುಂದಾಣಿ ರಾಜ್ಯ'ವನ್ನು ಕಟ್ಟಿದಾಗ ಆ ರಾಜ್ಯದ ಸೆರಗಿನಲ್ಲಿ ಸೇರಿಹೋಯಿತು. ನಂತರ ವಿಜಯನಗರದ ಅರಸರು ತಮ್ಮ ಸಾಮ್ರಾಜ್ಯ ವಿಸ್ತರಣೆಯ ಸಂದರ್ಭದಲ್ಲಿ ಮುಳಬಾಗಿಲನ್ನು ತಮ್ಮ ಉಪರಾಜಧಾನಿಗಳಲ್ಲಿ ಒಂದನ್ನಾಗಿ ಮಾಡಿಕೊಂಡು ಮುಳಬಾಗಿಲ ಸುತ್ತಮುತ್ತಲ ವಿಸ್ತಾರವಾದ ಭೂಪ್ರದೇಶವನ್ನು ಮುಳಬಾಗಿಲ ರಾಜ್ಯವನ್ನಾಗಿ ಕಟ್ಟಿದರು.

ಮುಳವಾಯ್ ಹಾಗೂ ಮುಳಬಾಗಿಲು ಎಂಬ ಪದಗಳು ಸಮಾನಾರ್ಥಕ ಪದಗಳಾಗಿದ್ದು ಕನ್ನಡ ನಾಡನ್ನು ಪ್ರವೇಶಿಸಲು ಇದು ಮೂಡಣ ಬಾಗಿಲಾಗಿಲು ಎಂಬುದಾಗಿ ಜನಜನಿತವಾಗಿದೆ.

ಮುಳಬಾಗಿಲು ರಾಜ್ಯವು ಇಂದಿನ ಬಹುತೇಕ ಕೋಲಾರ ಜಿಲ್ಲೆಯ ಪೂರ್ತಿ ಭಾಗದ ಜೊತೆಗೆ ಬೆಂಗಳೂರು ಜಿಲ್ಲೆಯ ಹೊಸಕೋಟೆ ಹಾಗೂ ಆನೇಕಲ್ ತಾಲ್ಲೂಕುಗಳ ಕೆಲವು ಪ್ರದೇಶ, ತಮಿಳುನಾಡಿನ ಕೃಷ್ಣಗಿರಿ, ಧರ್ಮಪುರಿ ಹಾಗೂ ವೇಲೂರು ಜಿಲ್ಲೆಗಳ ಕೆಲ ಪ್ರದೇಶ ಹಾಗೂ ಆಂಧ್ರಪ್ರದೇಶದ ಚಿತ್ತೂರು ಜಿಲ್ಲೆಯ ಕೆಲವು ಭಾಗಗಳನ್ನು ಒಳಗೊಂಡಿದೆ.

ಈ ಭಾಗದ ಕನ್ನಡ, ತಮಿಳು ಹಾಗೂ ತೆಲುಗು ಶಾಸನಗಳು ಮುಳಬಾಗಿಲು ರಾಜ್ಯವನ್ನು ಪ್ರಸ್ತಾಪಿಸುತ್ತವೆಯಾದರೂ ಈ ರಾಜ್ಯದಲ್ಲಿ ಅಂತರ್ಗತವಾಗಿದ್ದ ಎಲ್ಲಾ ನಾಡುಗಳ ಸಮಗ್ರ ಮಾಹಿತಿ ದೊರೆಯುವುದಿಲ್ಲ. ಪ್ರಸ್ತುತ ಲಭ್ಯವಿರುವಂತೆ ಮುಳವಾಯ್ ರಾಜ್ಯದಲ್ಲಿ ಅಸ್ತಿತ್ವದಲ್ಲಿದ್ದ ನಾಡುಗಳೆಂದರೆ ಯಳವಂಜಿನಾಡು, ಹದಿನಾಡು, ಹೊದೆನಾಡು, ಆವನಿನಾಡು, ಬಿಲುಸೊಣೆನಾಡು, ಕೈವಾರನಾಡು, ತೇಕಲ್‌ನಾಡು, ಪೊನ್‌ವಣಿಕ್ಕನಾಡು, ಪುಲಿನಾಡು, ಬೆಳ್ಳೂರುಸೀಮೆ, ಕುಂದಾಣಿಸೀಮೆ, ಮಂಜಿನಾಡ ಪೆಂಣ್ಣಗರರ ಸೀಮೆಗಳು ಅಸ್ತಿತ್ವದಲ್ಲಿ ಇದ್ದುದಕ್ಕೆ ಸ್ಪಷ್ಟವಾದ ಶಾಸನಾಧಾರಗಳಿವೆ. ಈ ನಾಡುಗಳ ಮಧ್ಯದಲ್ಲಿರುವ ಇನ್ನಿತರ ನಾಡುಗಳೂ ಸಹ ಇದೇ ರಾಜ್ಯದಲ್ಲಿ ಅಂತರ್ಗತವಾಗಿದ್ದವು ಎಂದು ಸುಲಭವಾಗಿ ಊಹಿಸಬಹುದಾಗಿದೆ.

ಮುಳಬಾಗಿಲು ಒಂದು ನಾಡಿನ ಕೇಂದ್ರವಾಗಿ 'ಮುಳಬಾಗಿಲು ನಾಡು' ಎಂದು ೯ನೆಯ ಶತಮಾನದಲ್ಲಿಯೇ ಅಸ್ತಿತ್ವದಲ್ಲಿದ್ದರೂ ಈ ನಾಡನ್ನು ಹಾಗೂ ಸುತ್ತಮುತ್ತಲ ಹಲವಾರು ನಾಡುಗಳನ್ನು ಒಳಗೊಂಡ ಒಂದು ರಾಜ್ಯವಾದದ್ದು ವಿಜಯನಗರದ ಅರಸರ ಕಾಲದಲ್ಲಿಯೇ. ಮುಳುಬಾಗಿಲು ರಾಜ್ಯದ ಅತ್ಯಂತ ಪ್ರಾಚೀನ ದಾಖಲೆ ಸಿಕ್ಕಿರುವುದು ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ ಹೊಸೂರು ತಾಲ್ಲೂಕಿನ ಒನ್ನಲವಾಡಿ ಗ್ರಾಮದ ಕ್ರಿ.ಶ. ೧೩೨೯ರ ಶಾಸನ[1] ಆದರೆ ಮುಳವಾಯ್ ರಾಜ್ಯಕ್ಕೆ ಸಂವಾದಿಯಾಗಿ ಆಗ ಮುಳವಾಯ್ ಚಾವಡಿಯ ಉಲ್ಲೇಖ ಹೊಯ್ಸಳರ ಕಡೆಯ ಕಾಲಕ್ಕೆ ಪ್ರಚಲಿತವಾಗಿತ್ತು. ಮುಂದೆ ೧೫ ಹಾಗೂ ೧೬ನೆಯ ಶತಮಾನದವರೆಗೂ ಅಲ್ಲಲ್ಲಿ ಈ 'ಚಾವಡಿ'ಯನ್ನು ಉಪಯೋಗಿಸಿದ್ದಾರೆ. ಈ **'ಮುಳವಾಯಿ ಚಾವಡಿ'**ಯ ಪ್ರಾಚೀನ ದಾಖಲೆ ಸಿಕ್ಕಿರುವುದು ಮುಳಬಾಗಿಲ ಸೋಮೇಶ್ವರ ದೇವಾಲಯದ ಕ್ರಿ.ಶ. ೧೫೬೧ರ ಶಾಸನದಲ್ಲಿ[2]. ಈ ಶಾಸನದಲ್ಲಿ ಮುಳವಾಯಿ ಚಾವಡಿಯಲ್ಲಿದ್ದ ಯಿಂಡ್ಲಹಳ್ಳಿ,

* ನಂ. ೬೨, ೧ನೇ ಅಂತಸ್ತು, ಕೋದಂಡರಾಮಪುರ, ೫ನೇ ಕ್ರಾಸ್, ಮಲ್ಲೇಶ್ವರಂ, ಬೆಂಗಳೂರು - ೫೬೦ ೦೦೩.

ಗುಮ್ಮಕಲ್ಲು ಗ್ರಾಮ, ಮಾರಂಡಹಳ್ಳಿ, ಕೊಂಡೇನಹಳ್ಳಿ, ಗಡಿಪಲ್ಲಿ, ನೆಲ್ಲಿಕುಂಟೆ ಗ್ರಾಮ, ಕಗ್ಗನಹಳ್ಳಿ, ತಿರುಮಲಹಳ್ಳಿ, ಪಾಲೇನಹಳ್ಳಿ, ತೊಲಡಿ ಗ್ರಾಮ ಹಾಗೂ ಮೇಲುತಾಯಲೂರು ಗ್ರಾಮಗಳನ್ನು ಪ್ರಸ್ತಾಪಿಸುತ್ತದೆ. ಹಾಗೂ ಇದರ ಜೊತೆಗೆ ತ್ಯಾಕಲ್ಲು ಸೀಮೆಯ ಕಂಪಸಮುದ್ರ ಗ್ರಾಮವನ್ನು ಒಳಗೊಂಡ ಈ ಮೇಲಿನ ಊರುಗಳನ್ನು ಮುಳಬಾಗಿಲ ಸೋಮೇಶ್ವರ ದೇವಾಲಯಕ್ಕೆ ಯಳವಂಜಿರಾಯರು ನೀಡಿದ ಕಾಣಿಕೆಯಾಗಿದೆ.

ನಂತರ ಮುಳಬಾಗಿಲು ತಾಲ್ಲೂಕಿನ ಯೆಲ್ಲೂರು ಹೋಬಳಿಯ ಉತ್ತನೂರಿನ ಕ್ರಿ.ಶ. ೧೩೩೨ರ ಶಾಸನವೊಂದು[೩] ಮುಳಬಾಗಿಲ ರಾಜ್ಯದಲ್ಲಿದ್ದ ಹೊದೆನಾಡ ಉತ್ತನೂರ ಮಡವಾಳದ ಕಾವಬ್ಬದೇವಿಯರ ಸ್ತಾನೀಕರನ್ನು ಪ್ರಸ್ತಾಪಿಸುತ್ತದೆ.

ಮೇಲೆ ಹೇಳಿದ ಕೃಷ್ಣಗಿರಿ ಜಿಲ್ಲೆಯ ಒನ್ನಲವಾಡಿ ಗ್ರಾಮದ ಕ್ರಿ.ಶ. ೧೩೭೯ರ ಶಾಸನವು ವೀರಬುಕ್ಕರಾಯರ ಮಗ ಕುಮಾರ ಹರಿಯಪ್ಪ ಒಡೆಯರ ಕಾಲದಲ್ಲಿ, ಅವರ ಮಹಾಪ್ರಧಾನಿಯೂ ಮುಳುವಾಯಿ ರಾಜ್ಯದ ಪ್ರಧಾನರೂ ಆಗಿದ್ದ ಮುದೆಯದಂಡನಾಯಕರು ಶಾಂತಿನಾಥ, ಶ್ರೇಯನಾಥ, ಭೂತನಾಥ ದೇವಾಲಯಗಳಿಗೆ ಸಂಬಂಧಿಸಿದ ಹಾಗೆ ಕೆಲವು ದಾನಗಳನ್ನು ನೀಡಿದ್ದಾನೆ. ಮುಳಬಾಗಿಲಿನ ಶಂಕರ ತೀರ್ಥದ ಬಳಿ ಇರುವ ಪಾಬದೇವಾಲಯದ ಗೋಡೆಯ ಮೇಲಿರುವ ೧೩೬೦ರ ಶಾಸನದಲ್ಲಿ[೪] ಮುಳವಾಯಿ ರಾಜ್ಯದ ಆವನಿ ನಾಡಿನ ಕುಂಮಾದೇವಿಯ ಹಳ್ಳಿಯನ್ನು ಬುಕ್ಕಣ್ಣ ಒಡೆಯನು ವಿದ್ಯಾಶಂಕರ ದೇವರಿಗೆ ದತ್ತಿ ಬಿಟ್ಟುದನ್ನು ದಾಖಲಿಸಿದೆ.

ಶ್ರೀನಿವಾಸಪುರ ತಾಲ್ಲೂಕಿನ ಸೋಮಯಾಜನಪಳ್ಳಿ ತಾಲ್ಲೂಕಿನ ಹೊದಲಿ ಗ್ರಾಮದ ವೆಂಕಟರಮಣನ ದೇವಾಲಯದ ಶಾಸನವೊಂದು ವೀರ ಹರಿಹರರಾಯನು ವಿಜಯನಗರದಲ್ಲಿ ಆಳುತ್ತಿರುವಾಗ ಆತನ ಮಗನಾದ ಇಮ್ಮಡಿ ಬುಕ್ಕರಾಯನು ಮುಳುಬಾಗಿಲಲ್ಲಿ ರಾಜ್ಯವಾಳುವಾಗ ಮುಳಬಾಗಿಲ ರಾಜ್ಯದ ಜಿಲುಸೋಣೆನಾಡಿನ ಹೊದಲಿ ಗ್ರಾಮವನ್ನು ಪ್ರಸ್ತಾಪಿಸಿ ಆ ಗ್ರಾಮದ ನಾಡಪ್ರಭು ತಿಂಣಲ ಚೊಕ್ಕಪ್ಪನು ಹೊದಲಿಯ ಮಾರಪ್ಪ ಹಾಗೂ ಚಿನ್ನಣ್ಣರು ತಮ್ಮ ತಂದೆ–ತಾಯಿಯಾದ ಮಾಚಗಾವುಂಡ ಹಾಗೂ ಮಲೆಯಕ್ಕರಿಗೆ ಪುಣ್ಯವಾಗಲೆಂದು ವಿಘ್ನೇಶ್ವರನಿಗೆ ದೀಪಮಾಲೆಯ ನಿಲ್ಲಿಸಿದ ಸಂದರ್ಭದಲ್ಲಿ ಹಲವಾರು ದಾನಗಳನ್ನು ನೀಡಿದ್ದಾನೆ. ಈ ಶಾಸನದ ಕಾಲ ಕ್ರಿ.ಶ. ೧೩೯೫[೫].

ಮುಳಬಾಗಿಲು ಹೋಬಳಿ ಕಾವುತ್ತನ ಹಳ್ಳಿಯ ಸೋಮೇಶ್ವರ ದೇವಾಲಯದ ಮುಂದೆ ಇರುವ ಕ್ರಿ.ಶ. ೧೩೯೬ರ ಶಾಸನವೊಂದು[೬] ಆವನಿನಾಡಿನ ಕಾವುತ್ತನಹಳ್ಳಿ, ಯಡಲು ಕಚುವನಹಳ್ಳಿ, ಗೋಡಿಯಹಳ್ಳಿ ಗ್ರಾಮಗಳನ್ನು ಈ ಸೋಮೇಶ್ವರ ದೇವರ ಪ್ರತಿಷ್ಠಾ ಕಾಲದಲ್ಲಿ ನೀಡಲಾದ ದತ್ತಿಗಳನ್ನು ದಾಖಲಿಸುತ್ತದೆ. ಇದೇ ವರ್ಷದ ಇನ್ನೊಂದು ಶಾಸನದಲ್ಲಿ[೭] ವೀರ ಬುಕ್ಕಣ್ಣ ಒಡೆಯರಿಗೆ ಧರ್ಮವಾಗಲೆಂದು ಆವನಿನಾಡ ಕಾವುತ್ತರಪಳ್ಳಿಯನ್ನು ವ್ಯಾಪಾರಿಗಳು ಇದೇ ದೇವಾಲಯಕ್ಕೆ ದಾನ ನೀಡಿದ್ದಾರೆ.

ಕ್ರಿ.ಶ. ೧೪೦೭ರ ವಾಣಿಗರಹಳ್ಳಿಯ ಶಾಸನವು[೮] ಉತ್ತನೂರು ಮಡವಳದ ಗೌರಿದೇವಿಯ ಸ್ಥಾನಿಕರು ಹಾಗೂ ನಗರ್ತರು ಮಂಗರಸನಿಗೆ ಕೊಟ್ಟ ಕೊಡುಗೆಯಾಗಿ ಮುಳಬಾಗಿಲು ರಾಜ್ಯದ ಹೊದೆನಾಡಿನಲ್ಲಿರುವ ಹಿರೇಮಂಗ ಸಮುದ್ರ ಕೆರೆಯಲ್ಲಿ ಹಾಗೂ ಆ ಊರಿನ ಒಳಗೆರೆಯಲ್ಲಿ ಆದಂತಹ ಗದ್ದೆಯನ್ನು ನೀಡಿ ಹೊದೆನಾಡ ವಾಣಿಯರ ಹಳ್ಳಿಯನ್ನು ದಾನ ನೀಡಿದ್ದಾರೆ.

ಕ್ರಿ.ಶ. ೧೪೧೭ರ ಮುಳಬಾಗಿಲ ನಾಚಾರಮ್ಮನ ದೇವಾಲಯದ ಬಳಿ ಇರುವ ಶಾಸನವು[೯] ಮುಳುಬಾಗಿಲು ರಾಜ್ಯದ ಹೊದೆನಾಡ ಕತರಿಯಹಳ್ಳಿಯನ್ನು ಮುಳುವಾಯಿ ನಾಚಿಪುರವಾಗಿ ಪರಿವರ್ತಿಸಿ ಮುಳುಬಾಗಿಲು ಬೆಟ್ಟದ ಮೇಲೆ ಮುಳುವಾಯಿ ನಾಚಿದೇವಿಯನ್ನು ಪುನಃ ಪ್ರತಿಷ್ಠೆ ಮಾಡಿ ಅಗ್ರಹಾರವೊಂದನ್ನು ದಾನವಾಗಿ ನೀಡಿದ್ದಾರೆ. ಇದಕ್ಕೆ ಕಾರಣಕರ್ತನು ದೇವರಾಯ ಮಹಾರಾಯನ ಮಹಾಪ್ರಧಾನ ನಾಗಣ್ಣದಣ್ಣಾಯಕ ಹಾಗೂ ಅನ್ನದಾನಿ ಒಡೆಯ.

ಕ್ರಿ.ಶ. ೧೪೨೮ರ ಅಚಟ್ನಹಳ್ಳಿಯ ಶಾಸನವು[೧೦] ಮುಳುವಾಯ್ ರಾಜ್ಯದ ಬೆಳ್ಳೂರು ಸೀಮೆಯ ಬೆಳ್ಳೂರಿನಲ್ಲಿ ದನಿಕದೇವಿಕೆರೆಯೊಂದನ್ನು ಕಟ್ಟಿಸಿದ್ದನ್ನು ತಿಳಿಸುತ್ತದೆ. ಕ್ರಿ.ಶ. ೧೪೨೯ರ ಉಳುವಾಡಿಯ ಶಾಸನವು[೧೧] ಮುಳುವಾಯಿ ರಾಜ್ಯದಲ್ಲಿ ಮಂನೆ, ಗೊಂಡೇನಹಳ್ಳಿ, ಕಾಲುವಳ್ಳಿ, ವೋಬಸಮುದ್ರ ಗ್ರಾಮಗಳು ಇದ್ದುದನ್ನು ತಿಳಿಸುತ್ತದೆ.

ಕ್ರಿ.ಶ. ೧೪೩೧ರಲ್ಲಿ[೧೨] ವಿಜಯರಾಯನ ಧರ್ಮವಾಗಿ ಹೆಗ್ಗಡೆ ದೇವಣ್ಣಗಳ ಮಗನಾದ ಅಕ್ಕಣ್ಣ ದಂಡನಾಯಕರು ಪ್ರಸನ್ನ ವಿರೂಪಾಕ್ಷ ದೇವರಿಗೆ ಮುಳುವಾಯಿ ಸೀಮೆಗೆ ಸಲ್ಲುವ ವಿರೂಪಾಕ್ಷಪುರ, ಗುಟ್ಟಹಳ್ಳಿ, ಸೂರಾದೇವಿಹಳ್ಳಿ, ಮಹಾದೇವನಹಳ್ಳಿ, ಕುಮುದೇವನಹಳ್ಳಿ, ಗ್ರಾಮಗಳನ್ನು ದತ್ತಿಯಾಗಿ ನೀಡಿದನು.

ಕ್ರಿ.ಶ. ೧೪೬೫ರ ಕ್ಯಾಸಂಬಳ್ಳಿ ಮಡಿವಾಳದ ಶಾಸನವು[೧೩] ಮುಳುವಾಯ್ ರಾಜ್ಯದ ಎಳವಂಜಿನಾಡಿನ ಕೆಸಂಬಳಿ ಹಾಗೂ ಮಡಿವಾಳದ ಗ್ರಾಮಗಳನ್ನು ಉಲ್ಲೇಖಿಸುತ್ತದೆ.

ಕ್ರಿ.ಶ. ೧೪೮೨ರ ಮುದುವಾಡಿಯ ಶಾಸನವು[೧೪] ದೇವರಾಯ ಮಹಾರಾಯರ ದಿವ್ಯ ನೆನಪಿನಲ್ಲಿ

ಮುಳಬಾಗಿಲು ರಾಜ್ಯದ ಮುದುವಾಡಿಯನ್ನು ದೇವರಾಯ ಪುರವೆಂದಾಗಿ ಪುನರ್ನಾಮಕರಣ ಮಾಡಿ ಅಗ್ರಹಾರವನ್ನಾಗಿ ಸ್ಥಾಪಿಸುವುದಾಗಿ ತಿಳಿದಿದೆ.

ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿನ ಗುಮ್ಮಳಾಪುರ ಊರಿನ ಕ್ರಿ.ಶ. ೧೪೮೭ರ ಶಾಸನವೊಂದು[೧೫] ದೇವರಾಯನ ಕಾಲದಲ್ಲಿ ಲಕ್ಕಣ್ಣ ಒಡೆಯನು ಮುಳುವಾಯಿ ರಾಜ್ಯವನ್ನು ಆಳುತ್ತಿದ್ದಾಗ ಮುಳುವಾಯ್ ರಾಜ್ಯಕ್ಕೆ ಸಲ್ಲುವ ಗುಮ್ಮಳಾಪುರ ಗ್ರಾಮವನ್ನು ಪ್ರಸ್ತಾಪಿಸುವಂತೆ ತೋರುತ್ತದೆ. ದೇವರಾಯಸಮುದ್ರವನ್ನು ಗೌಡ ಅದಂಣ್ಣನ ದಂಡಿನ ಜೀವಿತಕೆ ಕೊಟ್ಟುದನ್ನು ತಿಳಿಸುತ್ತದೆ.

ಕ್ರಿ.ಶ. ೧೪೯೭ರ ರಾಜಗುಂಡ್ಲಹಳ್ಳಿಯ ಶಾಸನವು[೧೬] ಅಲ್ಲಪ್ಪಗಳ ಮಕ್ಕಳು ಕದಿರಿ ಲಕ್ಷ್ಮೀ ನರಸಿಂಹ ದೇವರಿಗೆ ಸಮನಾದ ಮುಳುಬಾಗಿಲು ರಾಜ್ಯದ ಹೊದೆನಾಡಿನಲ್ಲಿರುವ ಗುಂಡಲಹಳ್ಳಿಯ ನರಸಿಂಹದೇವರ ದೇವಾಲಯವನ್ನು ಮಾಡಿ ಈ ಗ್ರಾಮವನ್ನು ನರಸಿಂಹಪುರ ಎಂದು ಪ್ರತಿನಾಮಕರಣ ಮಾಡಿದರು ಎಂದು ತಿಳಿಸುತ್ತದೆ. ಅಗರದ ಇದೇ ಕಾಲದ ಶಾಸನವೊಂದು[೧೭] ಹೊದೆನಾಡಿನಲ್ಲಿ ಇದ್ದಂತಹ ಅಬಾಚಲಿ ಅಗರದ ಜೊತೆಗೆ ಇನ್ನೆರಡು ಊರುಗಳನ್ನು ಪ್ರಸ್ತಾಪಿಸುತ್ತದೆ.

ಕ್ರಿ.ಶ. ೧೪೯೯ರ ತೇಕಲ್ಲಿನ ಶಾಸನವು[೧೮] ನರಸ ನಾಯಕನ ಕಾಲದಲ್ಲಿ ಅವನ ಮಹಾಮಂಡಲೇಶ್ವರನೂ ಮಂಡಳೀಕ ರವಿರಾಹುತ ಬಿರುದಾಂಕಿತನೂ ಆದ ರಾಮರಾಹುತನೂ ಮುಳುವಾಯಿಚಾವಡಿಗೆ ಸಲ್ಲುವ ತೇಕಲ್ ನಾಡಿನ ತಮ್ಮಟ್ಟಕುನ್ಟ ಗ್ರಾಮವನ್ನು ತೇಕಲ್ಲಿನ ಅರುಳಾಳನಾಥ ನಿಗೆ ದತ್ತಿಯನ್ನು ನೀಡಿದ್ದಾನೆ.

ಕ್ರಿ.ಶ. ೧೫೦೫ರ ಕೋಡಿಹಳ್ಳಿಯ ಶಾಸನವು[೧೯] ಮುಳುವಾಯ್ ನಾಡಿನ ಚಿಂತಾ..ಯ (?) ಗ್ರಾಮವನ್ನು ಉಲ್ಲೇಖಿಸುತ್ತದೆ.

ತಮಿಳುನಾಡಿನ ಕೃಷ್ಣಗಿರಿ ಜಿಲ್ಲೆಯ ಡೆಂಕಣಿಕೋಟೆ ತಾಲ್ಲೂಕಿನ ಕೊತ್ತಪಾಡಿ ಗ್ರಾಮದ ಶಾಸನವೊಂದು[೨೦] ಮುಳಬಾಗಿಲಚಾವಡಿಯ ಡೆಂಕಣಿಕೋಟೆಯ ನಾಯಕತನಕ್ಕೆ ಸಲ್ಲುವ ಮಂಜಿನಾಡ ಪೆಣ್ಣಾಗರದ ಸೀಮೆಯ ಕೂತಪಾಡಿಯ ಗ್ರಾಮವನ್ನು ಏಕಭೋಗ್ಯ ಸರ್ವಮಾನ್ಯವಾಗಿ ತಿಮ್ಮ...ರಸನಿಗೆ ಧರ್ಮವಾಗಲೆಂದು ದತ್ತಿಯನ್ನು ನೀಡಲಾಗಿದೆ. ಈ ಶಾಸನದ ಕಾಲ ಕ್ರಿ.ಶ. ೧೫೦೯.

ಮುಳಬಾಗಿಲು ಹೋಬಳಿ ಸೋಮೇಶ್ವರ ಪಾಳ್ಯದ ದೇವಾಲಯದ ಶಾಸನವು[೨೧] ಕ್ರಿ.ಶ. ೧೫೧೮ರ ಕಾಲಕ್ಕೆ ಸೇರಿದ್ದು, ಕೃಷ್ಣರಾಯಮಹಾರಾಯನಿಂದ ನೇರವಾಗಿ ಕರಣಿಕ ನಾಗಣ್ಣನ ಮೂಲಕ ಸಲಗೆಯ ದೇವನು ಮುಳುವಾಯ್ ರಾಜ್ಯಕ್ಕೆ ಸಲ್ಲುವ ಎಳವಂಜೆನಾಡಿನಲ್ಲಿರುವ ಮಾದನಗೋಟಿ ಎಂಬ ಗ್ರಾಮವನ್ನು ಕೇಳಿ ಪಡೆದು ಮುಳಬಾಗಿಲ ಸೋಮೇಶ್ವರ ದೇವಾಲಯಕ್ಕೆ ದಾನವನ್ನು ನೀಡಿದ್ದಾನೆ.

ಕ್ರಿ.ಶ. ೧೫೨೦ರ ಶಾಸನವು[೨೨] ಕೃಷ್ಣದೇವರಾಯನು ರಾಜ್ಯಭಾರ ಮಾಡುವಾಗ ರಾಯದುರ್ಗದ ತಿಪ್ಪರಸರ ಮಕ್ಕಳು ಭೋಗರಸರು ತಮ್ಮ ಒಡೆಯರಾದ ತಿಪ್ಪರಾಜ ಒಡೆಯರಿಗೆ ಧರ್ಮವಾಗಲೆಂದು ಮುಳುವಾಯಿಚಾವಡಿಗೆ ಸಲ್ಲುವ ಕುಂದಾಣಿಸೀಮೆಯಲ್ಲಿರುವ ಮುಕುಂದಸಾಗರ ಹಾಗೂ ಕಳವೆಕಲ್ಲಿಗೆ ಪ್ರತಿನಾಮವಾದ ತಿಪ್ಪಸಮುದ್ರ ಗ್ರಾಮವನ್ನು ಭಟವೃತ್ತಿಯಾಗಿ ಬಿಟ್ಟನು. ೧೫೨೧ರ ಶಾಸನವೊಂದು[೨೩] ಮುಳವಾಯ್ ಮೂಡಣ ಪರಿಠಿಯ ಹನುಮಂತ ದೇವರ ಗುಡಿಗೆ ಮುಳುವಾಯ್‌ಚಾವಡಿಯ ಮುಳುವಾಯ್‌ಸೀಮೆಗೆ ಸಲ್ಲುವ ತಾತಗಟ್ಟ ಗ್ರಾಮವನ್ನು ಕೊಂಡುಕೊಂಡು ಮುಳುಬಾಗಿಲ ಹನುಮಂತದೇವರ ಗುಡಿಯಲ್ಲಿ ರಾಮಾಲಯ ಮಾಡಿಸಿ ರಾಮಾಲಯದಲ್ಲಿ ರಾಮ, ಲಕ್ಷ್ಮಣ, ಸೀತೆಯರನ್ನು ಪ್ರತಿಷ್ಠಾಪಿಸಿ ಸಿಂಗಣ್ಣ ಒಡೆಯನು ಕೆಲವು ದಾನಗಳನ್ನು ನಡೆಸಿದ್ದಾನೆ.

ಕ್ರಿ.ಶ. ೧೫೨೫ರ[೨೪] ಮುಳುಬಾಗಿಲ ರಾಜ್ಯದ ಹೊರೆನಾಡಿನಲ್ಲಿರುವ ಶಾಸನವು ಪ್ರತಾಪದೇವರಾಯ ಪುರವಾದ ಗುಡಿಪಲ್ಲಿಯ ಸರ್ವ ಮಹಾಜನಗಳು ದೇವಾಲಯವೊಂದಕ್ಕೆ ದತ್ತಿ ಬಿಟ್ಟುದನ್ನು ಹೇಳುತ್ತದೆ.

ಕ್ರಿ.ಶ. ೧೫೩೫ರ ಬಳವನಹಳ್ಳಿಯ ಶಾಸನವೊಂದು[೨೫] ಮುಳುಬಾಗಿಲಿಗೆ ಸಲುವ ಬಳೂರನಹಳ್ಳಿಯನ್ನು ಪ್ರಸ್ತಾಪಿಸುತ್ತದೆ. ಕ್ರಿ.ಶ. ೧೫೪೭ರ ಸದಾಶಿವರಾಯನ ಕಾಲದ ಶಾಸನವು[೨೬] ಮುಳುಬಾಗಿಲು ರಾಜ್ಯದ ಹದಿನಾಡಿನ ಮಹಾಮಂಡಲೇಶ್ವರನಾದ ನಂದ್ಯಾಲರ ವೀರರಾಜ ಶ್ರೀರಂಗರಾಜಗಳ ಮಕ್ಕಳು ತಮ್ಮ ನಾಯಕತನಕೆ ಸಲ್ಲುವ ಮುಳಬಾಗಿಲು ರಾಜ್ಯದ ಹರಿನಾಡಿನ ಹಲವು ಗ್ರಾಮಗಳನ್ನು ದಾನವಾಗಿ ನೀಡಿದ್ದಾನೆ.

ಕ್ರಿ.ಶ. ೧೫೫೨ರ ಶಾಸನವೊಂದು[೨೭] ಮುಳುಬಾಗಿಲು ಸೀಮೆಯ ಬಯಿರಸಮುದ್ರ ಸ್ಥಳದ ಮೈಲಾಂಡಿಹಳ್ಳಿಯನ್ನು ಉಲ್ಲೇಖಿಸುತ್ತದೆ. ಕ್ರಿ.ಶ. ೧೬೪೫ರ ರಾಮಸಾಗರದ ವಿರೂಪಾಕ್ಷೇಶ್ವರ ದೇವಾಲಯದ ಶಾಸನವು[೨೮] ಮುಳುವಾಯಿ ರಾಜ್ಯದ ಬುಕ್ಕಸಾಗರವನ್ನು ಹಾಗೂ ಕ್ರಿ.ಶ. ೧೬೭೪ರ ಶಾಸನವೊಂದು[೨೯] ಮುಳವಾಯಿ ಸೀಮೆಯ ಆವನಿನಾಡಿನ ಕುಪ್ಪಸಮುದ್ರಂ ಗ್ರಾಮವನ್ನು ದಾಖಲಿಸುತ್ತದೆ.

ಒಟ್ಟಿನಲ್ಲಿ ಈ ಮೇಲಿನ ಮಾಹಿತಿಯಂತೆ ವಿಜಯ ನಗರದ ಅರಸರಾದ ಹರಿಹರರಾಯನಿಂದ ಹಿಡಿದು ಬುಕ್ಕಣ್ಣ

ಒಡೆಯ, ಇಮ್ಮಡಿ ಹರಿಹರರಾಯ, ಕಂಪಣ್ಣ ಒಡೆಯ, ಬುಕ್ಕರಾಯ II, ದೇವರಾಯ II, ವಿಜಯರಾಯ, ವಿರೂಪಾಕ್ಷ III, ನರಸಿಂಹನಾಯಕ, ನರಸನಾಯಕ, ಕೃಷ್ಣದೇವರಾಯ ಹಾಗೂ ಅರವೀಡು ವಂಶದ ಸಿಂಗರಾಜ, ರಾಮರಾಜ ಶ್ರೀರಂಗರಾಯನಿಂದ ಹಿಡಿದು ವೆಂಕಟರಾಯನವರೆಗಿನ ಶಾಸನಗಳು ಮುಳುಬಾಗಿಲು ರಾಜ್ಯದಲ್ಲಿ ಲಭ್ಯವಿದ್ದು ಮುಳುವಾಯಿ ರಾಜ್ಯದ ವಿಸ್ತಾರವನ್ನು ಸ್ಥೂಲವಾಗಿ ಖಚಿತವಾಗಿಯಲ್ಲದಿದ್ದರೂ ಎಲ್ಲೆಗಳನ್ನು ಗುರುತಿಸಬಹುದಾಗಿದೆ.

ಈ ಅರಸರ ಮಾಂಡಳೀಕರಾಗಿ ಆಳಿದವರಲ್ಲಿ ಪ್ರಮುಖರೆಂದರೆ ಮುಳಬಾಗಿಲಿನ ಲಕ್ಕಣ್ಣ ದಂಡನಾಯಕ, ಮಾರಣ್ಣ ಒಡೆಯ, ನಾಗಣ್ಣ ದಣ್ಣಾಯಕ ಸಿಂಧಣ್ಣ ಒಡೆಯ ಆವನಿಯಲ್ಲಿ ಸೋಮಪ್ಪ ಒಡೆಯ, ರಾಯದುರ್ಗದಲ್ಲಿ ತಿಪ್ಪರಸ, ತೇಕಲ್ಲಿನಲ್ಲಿ ಗೋಪರಾಜ ಮತ್ತು ರಾಮರಾಜಯ್ಯರು ಶಾಸನೋಕ್ತ ಪ್ರಮುಖರು.

ವಿಜಯನಗರದ ಅರಸರ ಅಧೀನರಾಗಿ ಮುಳುಬಾಗಿಲು ಅರಸರು ಮುಳುಬಾಗಿಲನ್ನು ಕೇಂದ್ರವಾಗಿಟ್ಟುಕೊಂಡು, ಬೈರಕೂರನ್ನು ನೆಲೆವೀಡಾಗಿ ಮಾಡಿ ಕೊಂಡು ಕೆಲವು ಕಾಲ ಆಳಿದರು.[illegible] ವಿಜಯನಗರದ ಕೊನೆ ಕೊನೆಗೆ ಸಾಮ್ರಾಜ್ಯ ಪತನವಾದಾಗ ಮುಳುಬಾಗಿಲು ರಾಜ್ಯವು ಹರಿದು ಹಂಚಿ ಹೋಗಿ ಒಂದು ಭಾಗವನ್ನು ಸುಗಟೂರಿನ ಅರಸರು[illegible] ಇನ್ನು ಹಲವಾರು ಭಾಗಗಳನ್ನು ಉಳಿದ ಪಾಳೆಯಗಾರರು ಪಾಲು ಮಾಡಿಕೊಂಡು ಆಳಲು ಶುರುವಾಗಿ ವಿಸ್ತಾರವಾದ ಮುಳುಬಾಗಿಲು ರಾಜ್ಯವು ಗೊತ್ತೇ ಆಗದ ಹಾಗೆ ಕರಗಿ ಹೋಗಿ ಇವತ್ತಿನ ಕರ್ನಾಟಕ, ಆಂಧ್ರಪ್ರದೇಶ, ತಮಿಳುನಾಡಿನ ಭಾಗಗಳಲ್ಲಿ ಹಂಚಿಕೆಯಾಗಿದೆ.

## ಅನುಬಂಧ

### ಮುಳುವಾಯಿ ರಾಜ್ಯದ ಶಾಸನೋಕ್ತ ನಾಡುಗಳು ಹಾಗೂ ಊರುಗಳು

| ಸಂ. | ಶಾಸನ ಸಂಪುಟ | ಶಾಸನ ಸಂ. | ಕಾಲ ಕ್ರಿ.ಶ. | ರಾಜ್ಯ | ವಿಭಾಗ | ನಾಡು | ಗ್ರಾಮಗಳು |
|---|---|---|---|---|---|---|---|
| ೧. | E.C.X. | MB 18 | 1261 AD | ಮುಳ ವಾಯ್ ಚಾವಡಿ | – | – | ಯಿಂಡ್ಲಹಳ್ಳಿ<br>ಗುಮ್ಮಕಲ್ಲು ಗ್ರಾಮ<br>ಮಾರಂಡಹಳ್ಳಿ<br>ಕೊಂಡೇನಹಳ್ಳಿ<br>ಗಡಿಪಲ್ಲಿ<br>ನೆಲ್ಲಿಕುಂಟೆ ಗ್ರಾಮ<br>ಕಗ್ಗನಹಳ್ಳಿ<br>ತಿರುಮಲಹಳ್ಳಿ<br>ಪಾಲೇನಹಳ್ಳಿ<br>ತೊಲಡಿ ಗ್ರಾಮ<br>ಮೇಲು<br>ತಾಯಲೂರು |
| ೨. | E.C.X. | MB 115 | 1332 AD | – | – | ಹೊದೆನಾಡು | ಉತ್ತನೂರು<br>ಮಡವಳ |
| ೩. | ಕ.ಪ್ರ.ಶಾ.ಸಂ.೪ | ಒನ್ನಲವಾಡಿ | 1379 AD | ಮುಳವಾಯಿ ರಾಜ್ಯ | – | ಬಿಲುಸೋಣೆ ನಾಡು | ಹೊದಲಿ |
| ೪. | E.C.X. | MB 11 | 1390 AD | ಮುಳವಾಯಿ ರಾಜ್ಯ | – | ಆವನಿನಾಡು | ಕುಯಾದೇವಿಯಹಳ್ಳಿ |
| ೫. | E.C.X. | SP 54 | 1395 AD | ಮುಳವಾಯಿ ರಾಜ್ಯ | – | ಬಿಲುಸೋಣೆ ನಾಡು | ಹೊದಲಿ |
| ೬. | E.C.X. | MB 29 | 1395 AD | – | ಮುಳವಾಯಿ ಸೀಮೆ | ಆವನಿನಾಡು | ಕಾಲುತ್ತನಹಳ್ಳಿ<br>ಯಿಡಲು |

| | | | | | | | |
|---|---|---|---|---|---|---|---|
| | | | | | | | ಕಚುವನಹಳ್ಳಿ ಗೋಡಿಯಹಳ್ಳಿ |
| ೭. | E.C.X. | MB 131 | 1407 AD | – | – | ಹೊದೆನಾಡು | ವಾಣಿಯರಹಳ್ಳಿ |
| ೮. | E.C.X. | MB 7 | 1417 AD | – | – | ಹೊದೆನಾಡು | ಕತರಿಯಹಳ್ಳಿ ಮುಳುವಾಯಿ ನಾಚಿಪುರ |
| ೯. | E.C.X. | KL 104 | 1428 AD | – | ಬೆಳ್ಳೂರು ಸೀಮೆ | – | ಬೆಳ್ಳೂರು |
| ೧೦. | E.C.X. | CT 39 | 1429 AD | ಮುಳುವಾಯಿ ಚಾವಡಿ | – | – | ಮಂನೆ ಗೊಂಡನಹಳ್ಳಿ ಕಾಲುವಳ್ಳಿ ವೋಬಸಮುದ್ರ |
| ೧೧. | E.C.X. | M.B. 2 | 1431 AD | – | ಮುಳುವಾಯಿ ಸೀಮೆ | – | ವಿರೂಪಾಕ್ಷನಪುರ |
| | | | | | | | ಗುಟ್ಟೆಹಳ್ಳಿ ಸೂರಾದೇವಿಹಳ್ಳಿ ಮಹಾದೇವನಹಳ್ಳಿ ಕುಮುದೇವನಹಳ್ಳಿ ಕುಂಚಿ ಬಂಡೆ ತರಪು |
| ೧೨. | E.C.X. | BP 18 | 1465 AD | ಮುಳುವಾಯಿ ರಾಜ್ಯ | – | ಎಳವಂಜಿ ನಾಡು | ಕೆಸಂಬಳಿ ಮಡವಳಿ |
| ೧೩. | E.C.X. | KL 194 | 1482 AD | – | – | – | ಮುದುವಾಡಿ |
| ೧೪. | ಕ.ವಿ.ಶಾ.ಸಂ.೪ | ಕಮ್ಮಲೂರು ೫೭ | 1487 AD | – | – | – | ದೇವರಾಯ ಸಮುದ್ರ |
| ೧೫. | E.C.X. | MB 172 | 1497 AD | – | – | ಹೊದೆನಾಡು | ನರಸಿಂಹಪುರ ಗುಡಲಹಳ್ಳಿ |
| ೧೬. | E.C.X. | MB 5 | 1499 AD | ಮುಳವಾಯಿ ಚಾವಡಿ | – | ತೇಕಲ್‌ನಾಡು | ತಮ್ಮಟ್ಟಿ ಕುನ್ಪ |
| ೧೭. | E.C.X. | MB 242 | 1505 AD | – | – | ಮುಳುಬಾಗಿಲು ನಾಡು | ಚಿಂತಾ..ಯ |
| ೧೮. | E.C.XVII | MB 19 | 1518 AD | ಮುಳವಾಯ ರಾಜ್ಯ | – | ಯಳವಂಜಿ ನಾಡು | ಮಂದರ ಗೋಂಟೆ |
| ೧೯. | E.C.X. | MB 97 | 1520 AD | ಮುಳವಾಯಿ ಚಾವಡಿ | ಕುಂದಾಣಿ ಸೀಮೆ | – | ಮುಕುಂದ ಸಾಗರ ಕಳವೆ ಕಲ್ಲು ತಿಪ್ಪ ಸಮುದ್ರ |
| ೨೦. | ಕ.ವಿ.ಶಾ.ಸಂ.೪ | ಕೂ–೮೧ | 1509 AD | ಮುಳವಾಗಿಲ ಚಾವಡಿ | ಡೆಂಕಣಿ ಕೋಟೆ ನಾಯಕ | ಮಂಜಿನಾಡು | ಕೂತಪಾಡಿ |

| | | | | | | | |
|---|---|---|---|---|---|---|---|
| | | | | | [illegible] ಸೀಮೆ | | |
| ೨೧. | E.C.X. | MB 3 | 1521 AD | ಮುಳವಾಯಿ ಚಾವಡಿ | ಮುಳವಾಯಿ ಸೀಮೆ | – | ತಾತಗಟು |
| ೨೨. | E.C.X. | MB 238 | 1525 AD | ಮುಳವಾಗಿಲ | – | ಹೊದೆನಾಡು | ಗುಡುಪಲ್ಲಿ |
| ೨೩. | E.C.X. | BP 39 | 1533 AD | – | ಮುಳಬಾಗಿಲ (ಸೀಮೆ) | ಮುಳಬಾಗಿಲ | ಬಳೂರನಹಳ್ಳಿ |
| ೨೪. | E.C. XVII | BP 114 | 1552 AD | – | – | ಬಯಿರ ಸಮುದ್ರ ಸ್ಥಳ | ಮೈಲಾಂಡಿಹಳ್ಳಿ |
| ೨೫. | E.C.X. | MB 21 | 1674 AD | – | – | ಆವನಿನಾಡು | ಕುಪ್ಪಸಮುದ್ರ |
| ೨೬. | E.C.X. | MB 18 | 1261 AD | ಮುಳಬಾಗಿಲು ಚಾವಡಿ | ತ್ಯಾಕಲ್ಲು ಸೀಮೆ | ತ್ಯಾಕಲ್ಲು ನಾಡು | ಕಂಪಸಮುದ್ರ |

(ಈ ಲೇಖನ ಬರೆಯುವಲ್ಲಿ ಸಲಹೆ ಸೂಚನೆಗಳನ್ನಿತ್ತು ಸಹಕರಿಸಿದ ಪ್ರೀತಿಯ ಗುರುಗಳಾದ ಡಾ॥ ಪಿ.ವಿ. ಕೃಷ್ಣಮೂರ್ತಿ ಹಾಗೂ ಡಾ॥ ಆ.ಲಿ. ನರಸಿಂಹನ್‌ರವರನ್ನು ಗೌರವದಿಂದ ನೆನೆಯುತ್ತೇನೆ.)



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಕನ್ನಡ ವಿಶ್ವವಿದ್ಯಾಲಯ ಶಾಸನ ಸಂಪುಟ** – ೪, ಶಾ. ಸಂ. ೧೨೯– ಒನ್ನಲವಾಡಿ

೨. **ಎಪಿಗ್ರಾಫಿಯಾ ಕರ್ನಾಟಿಕಾ** (ರೈಸ್ ಸಂಪುಟ) – ಸಂ. ೧೦, ಮುಳಬಾಗಿಲು – ೧೮.

೩. ಎ.ಕ. ೧೦, ಮು.ಬಾ. ೧೧೫.

೪. ಅದೇ – ಮು.ಬಾ. ೧೧.

೫. ಅದೇ – ಶ್ರೀನಿವಾಸಪುರ ೫೪.

೬. ಅದೇ – ಮು.ಬಾ. ೨೯.

೭. ಅದೇ – ಮು.ಬಾ. ೩೦.

೮. ಅದೇ – ಮು.ಬಾ. ೧೩೧.

೯. ಅದೇ – ಮು.ಬಾ. ೭.

೧೦. ಅದೇ – ಕೋಲಾರ, ೧೦೪.

೧೧. ಅದೇ – ಚಿಂತಾಮಣಿ ೩೯.

೧೨. ಅದೇ – ಮು.ಬಾ. ೨.

೧೩. ಅದೇ – ಮು.ಬಾ. ೨೫೭.

೧೪. ಅದೇ – ಕೋಲಾರ – ೧೯೪.

೧೫. ಕ.ವಿ.ಶಾ. ಸಂ. ೪, ಶಾ. ಸಂ. ೫೭, ಕುಮ್ಮಲಂ.

೧೬. ಎ.ಕ. ೧೦, ಮು.ಬಾ. ೧೬೨.

೧೭. ಅದೇ – ಮು.ಬಾ. ೧೭೫.

೧೮. ಅದೇ – ಮಾಲೂರು, ೫.

೧೯. ಅದೇ – ಮು.ಬಾ. ೨೪೨.

೨೦. ಕ.ವಿ.ಶಾ.ಸಂ. ೪, ಶಾ. ಸಂ. ೮೧, ಕೊತ್ತಪಾಡಿ.

೨೧. ಎ.ಕ. ೧೦ – ಮು.ಬಾ. ೧೯.

೨೨. ಅದೇ – ಮು.ಬಾ. ೯೭.

೨೩. ಅದೇ – ಮು.ಬಾ. ೩.

೨೪. ಅದೇ – ಮು.ಬಾ. ೨೩೮.

೨೫. ಅದೇ – ಬಂಗಾರಪೇಟೆ ೩೯.

೨೬. ಅದೇ – ಮು.ಬಾ. ೪.

೨೭. ಎ.ಕ. ಬಂಗಾರಪೇಟೆ ೧೧೪.

೨೮. ಎ.ಕ. ೧೦ – ಬಂ. ೧೧

೨೯. ಅದೇ – ಮು.ಬಾ. ೨೧.

೩೦. ಸ್ಮಿತಾರೆಡ್ಡಿ ದೇ., 'ಮುಳುಬಾಗಿಲು ಅರಸರು', **ದಕ್ಷಿಣ ಕರ್ನಾಟಕದ ಅರಸು ಮನೆತನಗಳು**, ಡಾ॥ ವಸು. ಎಂ.ವಿ. (ಸಂ.) ಹಂಪಿ ೨೦೦೧.

೩೧. ಡಾ॥ ಪಿ.ವಿ. ಕೃಷ್ಣಮೂರ್ತಿ., ೧೯೯೪, **ಸಗಟೂರು ವೀರಶೈವ ಅರಸು ಮನೆತನ**, ಧಾರವಾಡ.

ವಸುಂಧರಾ ದೇಸಾಯಿ ಮಹಾಪುರುಷ*

# ಹಂಪಿಯ ಮುಖ್ಯಗೋಪುರ ನಿರ್ಮಾತೃ ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ
## (ಕ್ರಿ.ಶ. ೧೬೦೮-೯೮)

ಹಂಪಿಯ ಮುಖ್ಯಗೋಪುರ ನಿರ್ಮಾಪಕರಾದ ಶ್ರೀ ಬಿಷ್ಟಪ್ಪಯ್ಯ ಮಹಾಪುರುಷ ಅವರು ಬಳ್ಳಾರಿ ಜಿಲ್ಲೆಯ 'ಸೋಗಿ' ಗ್ರಾಮ ಜೋಯಿಸರಾದ ಶ್ರೀ ಅಯ್ಯಂಭಟ್ಟರ ಉದರದಲ್ಲಿ ಕ್ರಿ.ಶ.೧೬೦೮ ರಲ್ಲಿ ಜನಿಸಿದರು. ಬಾಲ್ಯದಿಂದಲೇ ಆಧ್ಯಾತ್ಮದಲ್ಲಿ ಅಪಾರ ಆಸಕ್ತಿ ಹೊಂದಿದ ಇವರು ಉಪನಯನಾ ನಂತರ ಹನ್ನೆರಡು ವರ್ಷ ಕಠಿಣ ತಪಸ್ಸನ್ನಾಚರಿಸಿ ಆತ್ಮಜ್ಞಾನ ಪಡೆದರೆಂದು ತಿಳಿದು ಬರುತ್ತದೆ.[೧]

ನಂತರ ಹಲವಾರು ಸಾಮಾಜಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡ ಬಿಷ್ಟಪ್ಪಯ್ಯ ಅಂದು ಮುಸ್ಲಿಮರ ದಬ್ಬಾಳಿಕೆಗಳಿಂದ ನಲಗುತ್ತಿದ್ದ ಸಂಧರ್ಭದಲ್ಲಿ ಜನತೆಗೆ ಸಾಮಾಜಿಕ, ಧಾರ್ಮಿಕ ಭದ್ರತೆ ನೀಡಲು ಆಯ್ದುಕೊಂಡ ವಿಧಾನಗಳು ಹಲವಾರು. ಅವುಗಳಲ್ಲಿ ಮುಖ್ಯವಾದವು ರಸಶಾಸ್ತ್ರ, ಲೊಹಶಾಸ್ತ್ರ, ಆಯುರ್ವೇದ ವಾಸ್ತುಶಿಲ್ಪ ಯೋಗ ಆಧ್ಯಾತ್ಮ ಮುಂತಾದವು.[೨] ಈ ವಿಷಯಗಳಲ್ಲೂ ಬಹುಮುಖ ಪ್ರತಿಭೆಯ ವಿಶಿಷ್ಟ ಧಾರ್ಮಿಕ ಮುಖಂಡ ಬಿಷ್ಟಪ್ಪಯ್ಯ ಅವರು ಸಮಾಜಕ್ಕೆ ನೀಡಿದ ಬಹುದೊಡ್ಡ ಕೊಡುಗೆಗಳಲ್ಲಿ ಮೊದಲನೆಯದು ಹಂಪೆಯ ಮುಖ್ಯ[೩] ಗೋಪುರ ಎರಡನೆಯದು ರಸಲಿಂಗಗಳೆಲ್ಲೆಲ್ಲ ಅತ್ಯಂತ ದೊಡ್ಡದು ಮತ್ತು ಬಂಗಾರದಂಥ ಹೊದಿಕೆಯಿಂದ ಕೂಡಿ ವಿಶಿಷ್ಟವಾದದ್ದು[೪] ಎಂಬ ಹೆಗ್ಗಳಿಕೆ ಹೊಂದಿದೆ ಶ್ರೀ ಮಹಾಲಿಂಗೇಶ್ವರ. ಈ ರಸಲಿಂಗ ಈಗ ಬಿಷ್ಟಪ್ಪಯ್ಯ ಅವರ ವಂಶಸ್ಥರ ಒಡೆತನದಲ್ಲಿದ್ದು ಗದಗ ಜಿಲ್ಲೆಯ ಮುಂಡರಗಿ ತಾಲೂಕಿನಲ್ಲಿ ತುಂಗಭದ್ರಾ ನದಿಯ ತಟದ ವಿಠ್ಠಲಾಪುರದಲ್ಲಿ ಬಿಷ್ಟಪ್ಪಯ್ಯ ಅವರೇ ಪುನರ್ನಿರ್ಮಿಸಿದ ವಿಠ್ಠಲ ಮಂದಿರದಲ್ಲಿದೆ.[೫]

ಬಿಷ್ಟಪ್ಪಯ್ಯ ಅವರು ನಿರ್ಮಿಸಿದ ಮೊದಲ ಗುಡಿ ಕಾಣುಸಿಗುವುದು ಹಿಂದೆ ಅವರದ್ದೇ ಆಗಿದ್ದ ಸೋಗಿಯ ಜಮೀನಿನ ಮಧ್ಯದಲ್ಲಿ. ಆ ಭೂಮಿ ಈಗ ರಾಮಚಂದ್ರಪ್ಪ ಎಂಬ ರೈತರ ಒಡೆತನದಲ್ಲಿದ್ದರೂ ಆ ಗುಡಿ ಮಾತ್ರ ಬಿಷ್ಟಪ್ಪಯ್ಯ ಅವರ ಗುಡಿ ಎಂದೇ ಕರೆಯಲ್ಪಡುತ್ತದೆ. ಅದೇ ಜಮೀನಿನಲ್ಲಿರುವ ಆಲದ ಮರದ ಹೊದರು. 'ಬಿಷ್ಟಪ್ಪಯ್ಯ ಅನುಷ್ಠಾನಕ್ಕೆ ಕುಳಿತ ಸ್ಥಳ' ಎಂದು ಅವರ ವಂಶಜರಿಂದ ಭಕ್ತರಿಂದ[೬] ಪೂಜಿಸಲ್ಪಡುತ್ತದೆ.

ನಂತರ ಹಗರಿಬೊಮ್ಮನಹಳ್ಳಿ ತಾಲೂಕಿನ ಹಲಸಿ ಗ್ರಾಮಾಧಿಕಾರಿಯಿಂದ ಎಂಬತ್ತು ಎಕರೆ ಭೂಮಿ ಇನಾಂ ಪಡೆದ ಯೋಗಿ ಬಿಷ್ಟಪ್ಪಯ್ಯ[೭] ಅಲ್ಲಿಯೂ ಒಂದು ದೊಡ್ಡದಾದ ವಿಶಿಷ್ಟ ಗುಡಿ ಕಟ್ಟಿಸಿ ತಮ್ಮ ರಸಶಾಸ್ತ್ರದ ಅಧ್ಯಯನ ಪ್ರಯೋಗದಲ್ಲಿ ತೊಡಗಿ ರಸಲಿಂಗವನ್ನು ಮಾಡುವಲ್ಲಿ ಸಫಲರಾದದ್ದು ತಿಳಿದು ಬರುತ್ತದೆ. ಆ ಇಡೀ ಭೂಮಿ ಇಂದಿಗೂ 'ಬಿಷ್ಟಪ್ಪಯ್ಯ ಮಾನ್ಯ' ಭೂಮಿ ಎಂದು ಬಿಟ್ಟೇಶ್ವರಸ್ವಾಮಿಗಳ ಗುಡಿ ಎಂದು ಕರೆಯಲ್ಪಡುತ್ತದೆ. ಮತ್ತು ಜಮೀನಿನ ತುಸು ಭಾಗ ಮಹಾಪುರುಷ ಮನೆತನದ ಜೋಯಿಸರ ಹೆಸರಿನಲ್ಲಿಯೇ ಇದೆ[೮]. ಸೋಗಿ, ಹನಸಿಯ ಗುಡಿಗಳಲ್ಲಿ ಮತ್ತು ಅನುಷ್ಠಾನ ಗೈದ ಸೋಗಿಯ ಆಲದ ಮರದ ತೋಳಿನಲ್ಲಿ ಮೊದಲು **ಪಂಚಲೋಹದ** ಅಮೂಲ್ಯವಾದ ಲಿಂಗಗಳೇ ಇದಿದ್ದು ಸುಮಾರು ೪೦ ವರ್ಷಗಳ ಹಿಂದೆ ಅವು ಕಳವು ಆಗಿವೆ. ಎಂಬ ನನ್ನ ನೆನಪನ್ನು ಆ ಗ್ರಾಮಗಳ ಹಿರಿಯರು ಅನುಮೋದಿಸುತ್ತಾರೆ.[೯]

ಶ್ರೀ ಬಿಷ್ಟೇಶ ಕೃತ ರಸಲಿಂಗಕ್ಕೆ 'ಸಿಂಹಾಸನ ಮಂಟಪ' ಹೆಸರಿನ ಪೀಠವೊಂದಿದ್ದು ಕ್ರಿ.ಶ. ೧೬೩೫ರಲ್ಲಿ ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಬಮ್ಮಿಗಟ್ಟಿ ಗ್ರಾಮದ ಭಕ್ತನೊಬ್ಬರು ಅದನ್ನು ಮಾಡಿಸಿ ಕೊಟ್ಟಿದ್ದಾಗಿ ತಿಳಿಸುವ ಶಾಸನವು ಆ ಪೀಠದ ಮೇಲಿದೆ.[೧೦]

ನಂತರ ಮುಸ್ಲಿಮರ ದಾಳಿಗಳಿಂದ ಭಗ್ನವಾಗಿದ್ದ ಗುಡಿಗಳನ್ನೆಲ್ಲ ಪುನನಿರ್ಮಿಸಿಸುತ್ತಾ ಸಂಚಾರ ಕೈಗೊಂಡ ಯೋಗಿವರ್ಯರು ಬಳ್ಳಾರಿ ಜಿಲ್ಲೆಯ ರಂಗಾಪುರವನ್ನು ತಮ್ಮ ಕಾರ್ಯಕ್ಷೇತ್ರವನ್ನಾಗಿಸಿಕೊಂಡು, ರಂಗಾಪುರ, ಬಿದಿರಹಳ್ಳಿ, ವಿಠ್ಠಲಾಪುರ (ಗದಗ ಜಿಲ್ಲೆ)ಗಳ ಗುಡಿಗಳನ್ನು ಪುನರ್ನಿರ್ಮಿಸಿದ್ದು ತಿಳಿದುಬರುತ್ತದೆ[೧೧]. ಪ್ರತಿಯೊಂದು

* ಶಿವಮೊಗ್ಗ.

ಗುಡಿಯಲ್ಲಿಯೂ ೧೨ನೇ ಶತಮಾನದಲ್ಲಿ ಕಟ್ಟಲ್ಪಟ್ಟ ಗುಡಿಯು ೧೭ನೇ ಶತಮಾನದಲ್ಲಿ ಜೀರ್ಣೋದ್ಧಾರಗೊಂಡ ಕುರುಹು ಸಿಗುತ್ತದೆ. ಅದೇ ಸಮಯದಲ್ಲಿಯೇ ಹಾವೇರಿ ಜಿಲ್ಲೆಯ ಪ್ರಸಿದ್ಧ ಗಳನಾಥದ ನದೀ ತಟದ ಸೋಪಾನ ನಿರ್ಮಿಸಿದರೆಂದೂ ಉಲ್ಲೇಖವಾಗಿದೆ[೧೨].

ಕ್ರಿ.ಶ. ೧೬೫೬ರಲ್ಲಿ ಬಿಜಾಪುರದವರ ಪದೇ ಪದೇ ದಾಳಿಯನ್ನು ಎದುರಿಸಲಾರದೇ ಶ್ರೀ ರಂಗರಾಯರು ಕೆಳದಿ ದೊರೆಯ ಆಶ್ರಯ ಪಡೆದದ್ದು ಇತಿಹಾಸದ ಪುಟಗಳಿಂದ ತಿಳಿದು ಬರುತ್ತದೆ. ಆಗ ಹಂಪಿಯು ರಕ್ಷಕರಿಲ್ಲದೇ ಪೂರ್ತಿ ಅನಾಥವಾಗಿತ್ತು. ವಿದ್ಯಾರಣ್ಯ ಮಠದ ತತ್ಕಾಲೀನ ಗುರುಗಳು ಆಗ ಬಿಷ್ಟಪ್ಪಯ್ಯ ಅವರನ್ನು ಹಂಪಿಗೆ ಕರೆದೊಯ್ದು ಪಂಪಾವತಿ ಗುಡಿಯ ರಕ್ಷಣೆಗಾಗಿ ಪೂರ್ವದಲ್ಲಿ ದ್ವಾರ ಗೋಪುರ ನಿರ್ಮಿಸಲು ಸೂಚಿಸಿದ್ದಾರೆ[೧೩].

ಗುಡಿಯ ಆವರಣದಲ್ಲಿರುವ ಶಿಲಾಶಾಸನವು (SII, Vol. IV No. 259) ಈ ಹಿರಿಗೋಪುರವೂ ಕೃಷ್ಣದೇವರಾಯನಿಂದ ಕ್ರಿ.ಶ. ೧೫೧೦ರಲ್ಲಿ ಜೀರ್ಣೋದ್ಧಾರ ಗೊಳಿಸಲ್ಪಟ್ಟದೆ, ಎಂದು ತಿಳಿಸುತ್ತದೆ. ಅಂದರೆ ಆ ಸ್ಥಳದಲ್ಲಿ ಆ ಮೊದಲೇ ಒಂದು ಗೋಪುರವಿತ್ತು, ಆದರೆ ಸಾಮ್ರಾಜ್ಯ ಪತನಾನಂತರದ ನೂರು ವರ್ಷಗಳ ನಿರ್ಲಕ್ಷ್ಯದಿಂದಾಗಿ ಪೂರ್ತಿಯಾಗಿ ಜೀರ್ಣವಾಗಿ ಗುಡಿಗೆ ರಕ್ಷಣೆ ನೀಡಲು ಅಸಮರ್ಥವಾಗಿತ್ತು. ಅದನ್ನು ಪೂರ್ತಿ ನೆಲಸಮಗೊಳಿಸಿ ಬಿಷ್ಟಪ್ಪಯ್ಯ ಅವರು ಅದೇ ಸ್ಥಳದಲ್ಲಿ ಭದ್ರವಾದ ರಕ್ಷಣಾತ್ಮಕ ಗೋಡೆಯಿಂದ ಕೂಡಿದ ಈ ಗೋಪುರವನ್ನು ನಿರ್ಮಿಸಿದ್ದಾರೆ ಎಂಬುದು ಎಲ್ಲಾ ಇತಿಹಾಸ ತಜ್ಞರ ಅಭಿಮತ[೧೪].

ಮೊದಲ ಅಂತಸ್ತು ನಿರ್ವಿಘ್ನವಾಗಿ ಮುಗಿದು ಎರಡನೆಯ ಅಂತಸ್ತು ಕಟ್ಟುವಾಗ ಅದು ಪದೇ ಪದೇ ಬೀಳತೊಡಗುತ್ತದೆ. ಬಿಷ್ಟಪ್ಪಯ್ಯ ಚಿಂತಿತರಾಗುತ್ತಾರೆ. ನಿರ್ಮಾಣದ ಹಂತದಲ್ಲಿ ಕಟ್ಟಡಗಳು ಗಟ್ಟಿಯಾಗಿ ನಿಲ್ಲದಾದಾಗ ಮಹಿಳೆಯನ್ನು ಆಹುತಿ ಇತ್ತರೆ ಗಟ್ಟಿಯಾಗಿ ನಿಲ್ಲುತ್ತವೆ. ಎಂಬ ಅಂದಿನ ಪ್ರಚಲಿತ ನಂಬಿಕೆಯಂತೆ ದೈವೀ ಪ್ರೇರಣೆಯಂತೆ ಬಿಷ್ಟಪ್ಪಯ್ಯ ಅವರ ಗರ್ಭಿಣಿ ಪತ್ನಿ ಚಿತೆಗೆ ಹಾರಿ ಆತ್ಮಾರ್ಪಣೆ ಮಾಡಿಕೊಂಡು ಸೂಕ್ಷ್ಮದೇಹದಿಂದ ಬಂದು ಗೋಪುರದಲ್ಲಿ ಕೂರುತ್ತಾರೆ[೧೫]. ನಂತರ ಗೋಪುರ ನಿರ್ಮಾಣ ನಿರ್ವಿಘ್ನವಾಗಿ ಸಾಗುತ್ತದೆ. ಇದರ ಸಂಕೇತವಾಗಿ ಗೋಪುರದ ಒಳ ಭಾಗದ ಎರಡನೆಯ ಅಂತಸ್ತಿನಲ್ಲಿ ಕೈಯಲ್ಲಿ ಎಣ್ಣೆಗಿಂಡಿ ಹಿಡಿದಿರುವ ಗರ್ಭಿಣಿ ಸ್ತ್ರೀಯೊಬ್ಬಳು ಶಿವ ಪಾರ್ವತಿಯರಲ್ಲಿ ಲೀನಳಾಗುತ್ತಿರುವ ಶಿಲ್ಪವಿದ್ದು ಗೋಪುರ ದಮ್ಮ ಎಂಬ ಹೆಸರಿನಿಂದ[೧೬] ಪೂಜಿಸಲ್ಪಡುತ್ತದೆ. ಬಿಷ್ಟಪ್ಪಯ್ಯ ವಂಶಜರ ಕುಲದೇವತೆ ಕೂಡ ಗೋಪುರದಮ್ಮನೇ ಆಗಿದೆ[೧೭].



ಗೋಪುರ ನಿರ್ಮಾಣ ಸಮಯದಲ್ಲಿ ಒಂದು ತೊಲೆಯಲ್ಲಿ ಬಿರುಕು ಕಂಡಿತೆಂದೂ ಬಿಷ್ಟಪ್ಪಯ್ಯ ಅವರು ವಿಭೂತಿ ಲೇಪಿಸಿ ಅದನ್ನು ಹಾಗೇ ಬಂಧಿಸಿದರೆಂದೂ ಹಸ್ತಪ್ರತಿಯ ೨೯....೩೨ನೇ ಸಾಲುಗಳಲ್ಲಿ ಉಲ್ಲೇಖವಾದಂತೆ ಅದರ ಕುರುಹು ಇಂದಿಗೂ ಒಂದು ತೊಲೆಯಲ್ಲಿ ಕಂಡು ಬರುತ್ತದೆ. ಆಯುರ್ವೇದ ವೈದ್ಯರಾದ ಡಾ॥ ಪಿ. ಸತ್ಯನಾರಾಯಣಭಟ್ಟ ಅವರ ಅಭಿಪ್ರಾಯದಂತೆ, ರಸಶಾಸ್ತ್ರಜ್ಞರೂ ಆಗಿದ್ದ ಬಿಷ್ಟಪ್ಪಯ್ಯ ಅವರು ಆ ಭಾಗದಲ್ಲಿ ಬೆಳೆಯುವ ವಿಶೇಷ ಕಳ್ಳಿ ರಕ್ಕಸ ಬಳ್ಳಿಯ ರಸಕ್ಕೆ ಸುಣ್ಣ ಮತ್ತು ಭಸ್ಮ ರೂಪದ ಜೇಡಿಮಣ್ಣು ಸೇರಿಸಿದರೆ ಗಟ್ಟಿ ಅಂಟು ತಯಾರಾಗುತ್ತದೆ. ಅದನ್ನೆ ಅಲ್ಲಿ ಲೇಪಿಸಿದ್ದಾರೆ ಮತ್ತು ಮುಂದೆ ನಿರ್ಮಾಣದ ತಂತ್ರ ಕೂಡ ಬದಲಾಗಿದ್ದು ಆ ಅಂಶವನ್ನು ಮಾನ್ಯ ಚಾರ್ಜ್ ಮಿಶೆಲ್ ಅವರು ಕೂಡ ಗುರುತಿಸಿದ್ದಾರೆ.[೧೮]

ಬಿಷ್ಟಪ್ಪಯ್ಯ ಅವರ ವಂಶಾವಳಿ ಲಭ್ಯವಿದ್ದು ಅದರಲ್ಲಿ ಅವರ ಪುತ್ರ ಶಿವಪ್ಪಯ್ಯ ಅವರು ಕ್ರಿ.ಶ. ೧೬೫೮ ರಲ್ಲಿ ಜನಿಸಿದರೆಂದೂ ತಾಯಿ ಆತ್ಮಾರ್ಪಣೆ ಮಾಡಿ ಕೊಂಡಾಗ ಅವರು ಐದು ವರ್ಷದವರಿದ್ದರೆಂದೂ ಉಲ್ಲೇಖವಾಗಿದೆ. ಅದರ ಆಧಾರದಿಂದ ಕ್ರಿ.ಶ.೧೬೬೩ರಲ್ಲಿ ಗೋಪುರ ನಿರ್ಮಾಣ ಆರಂಭವಾಗಿದೆ, ಎಂದು ಊಹಿಸಬಹುದಾಗಿದೆ.

ರಸವೈದ್ಯರು ತಮ್ಮ ಆಧ್ಯಾತ್ಮ ಸಾಧನೆಯ ಅಳತೆಗೋಲಾಗಿ ತಾವು ನಿರ್ಮಿಸುವ ಗುಡಿಗೋಪುರಗಳ ಅಂತಸ್ತುಗಳನ್ನು ನಿರ್ಧರಿಸುತ್ತಿದ್ದರೆಂದು ತಂತ್ರಶಾಸ್ತ್ರ ಹೇಳುತ್ತದೆ[೧೯]. ಮತ್ತು ಹನ್ನೊಂದು ಏಕಾದಶ ರುದ್ರರ ಸಂಕೇತವಾಗಿದ್ದರಿಂದ ದೊಡ್ಡ ಶಿವಭಕ್ತರಾಗಿದ್ದ ಬಿಷ್ಟಪ್ಪಯ್ಯ ಗೋಪುರವನ್ನು 'ಹನ್ನೊಂದು' ಅಂತಸ್ತುಗಳಲ್ಲಿ ನಿರ್ಮಿಸಿದ್ದಾರೆ.[೨೦] ಶಿಖರದ ಪ್ರತಿಬಿಂಬ ತಲೆ ಕೆಳಗಾಗಿ

ಬೀಳುವಂತೆ ನಿರ್ದಿಷ್ಟ ಸಮಯದಲ್ಲಿ ಪಂಪಾವತಿಯ ಮೇಲೆ ಸೂರ್ಯಕಿರಣ ಬೀಳುವಂತೆ ಮಾಡಿರುವ ವ್ಯವಸ್ಥೆಗಳಲ್ಲಿ ಬಿಷ್ಟಪ್ಪಯ್ಯ ಅವರ ವೈಜ್ಞಾನಿಕ ಮನೋಭಾವನೆಯನ್ನು ಕಾಣಬಹುದು.

ರಾಜರಿಗೆ ಗುಡಿಗೋಪುರಗಳನ್ನು ನಿರ್ಮಿಸುವುದು ಭಕ್ತಿಯ ಜೊತೆಗೆ ಪ್ರತಿಷ್ಠೆಯ ಸಂಕೇತವೂ ಆಗಿರುತ್ತಿತ್ತು. ಅಲ್ಲಿ ತಮ್ಮ ಹೆಸರನ್ನು ದಾಖಲಿಸುತ್ತಿದ್ದರು. ಆದರೆ ಬಿಷ್ಟಪ್ಪಯ್ಯ ಅವರು ಅದೆಲ್ಲ ಕೇವಲ ಈಶಸೇವೆ ಜನಸೇವೆ ಎಂದು ಮಾತ್ರ ಭಾವಿಸಿದ್ದರಿಂದ ತಾವು ನಿರ್ಮಿಸಿದ ಯಾವುದೇ ಗುಡಿ ಗೋಪುರಗಳಿಗಾಗಲೀ ಅಥವಾ ತಮ್ಮ ವಿಶಿಷ್ಟ ರಸಲಿಂಗದ ನಿರ್ಮಾಣದ ಬಗ್ಗೆಯಾಗಲೀ ಎಲ್ಲಿಯೂ ತಮ್ಮ ಹೆಸರನ್ನು ದಾಖಲಿಸಲಿಲ್ಲ.

ಸುದೈವದಿಂದ ಅವರ ಸಮಕಾಲೀನ ಸಂಸ್ಕೃತ ವಿದ್ವಾಂಸರಾಗಿದ್ದ ಕಾಶೀಲಕ್ಷಣಶಾಸ್ತ್ರಿ, ಚೋಕನಾಥ, ಬಿಷ್ಟಪ್ಪಯ್ಯ ಅವರ ಮೊಮ್ಮಗ ಮಹಾದೇವಯ್ಯ ಮುಂತಾದವರು. ಬಿಷ್ಟಪ್ಪಯ್ಯ ಅವರ ಬದುಕು ಕಾರ್ಯ ಸಾಧನೆಗಳನ್ನೆಲ್ಲ ಸಂಸ್ಕೃತ ಶ್ಲೋಕಗಳಲ್ಲಿ ದಾಖಲಿಸಿಟ್ಟದ್ದು ಅದಕ್ಕೆ ಪೂರಕವಾದ ಇನ್ನು ಕೆಲ ಹಸ್ತಪ್ರತಿಗಳು, ಅವರು ನಿರ್ಮಿಸಿದ ಗುಡಿಗಳೆಲ್ಲ 'ಶ್ರೀ ಬಿಷ್ಟೇಶ್ವರ ಸ್ವಾಮಿಗಳ ಗುಡಿ' ಎಂಬ ಹೆಸರಿನಿಂದಲೇ ಅರ್ಚಿಸಲ್ಪಡುತ್ತಿರುವುದು,[21] ಬಿಷ್ಟಪ್ಪಯ್ಯ ಅವರ ಮಹತ್ಕಾರ್ಯಗಳಿಗೆ ಪ್ರತಿಯಾಗಿ ಅವರ ಮಗ ಮೊಮ್ಮಗನಿಗೆ ದೊರೆತ ಇನಾಂ ಭೂಮಿಗಳೆಲ್ಲ ಅವರ ವಂಶಸ್ಥರಾದ ಮಹಾಪುರುಷರ ಹೆಸರಿನಲ್ಲಿಯೇ ಇರುವುದು. ಎಲ್ಲಕ್ಕಿಂತ ಮುಖ್ಯವಾಗಿ ಪತಿಯ ಮಹತ್ಕಾರ್ಯ ಸುಸೂತ್ರವಾಗಿ ಮುಗಿಯಲೆಂಬ ಹಾರೈಕೆಯಿಂದ ಆತ್ಮಾರ್ಪಣೆ ಮಾಡಿಕೊಂಡ ಗರ್ಭಿಣಿ ಪತ್ನಿ ಲಕ್ಷ್ಮಾಂಬೆಯವರ[22] ಸಂಕೇತವಾಗಿ ಗೋಪುರದಲ್ಲಿರುವ ಗೋಪುರದಮ್ಮ ಮತ್ತು ಬಿಷ್ಟೇಶ ಕೃತ ವಿಶಿಷ್ಟ ರಸಲಿಂಗ ಹಾಗೂ ಬಿಷ್ಟಪ್ಪಯ್ಯ ಅವರು ಹೆಜ್ಜೆ ಇಟ್ಟ ಎಲ್ಲ ಸ್ಥಳಗಳಲ್ಲೂ ಗೋಪುರ ನಿರ್ಮಾಣವೂ ಸೇರಿದಂತೆ ಅವರ ಎಲ್ಲ ಕಾರ್ಯಗಳ ಬಗ್ಗೆಯೂ ಇರುವ ಗಟ್ಟಿಯಾದ ಒಂದೇ ರೀತಿಯ ಮೌಖಿಕ ಪರಂಪರೆ[23] ಬಿಷ್ಟಪ್ಪಯ್ಯ ಅವರ ಸಾಧನೆಗಳಿಗೆಲ್ಲ ಜ್ವಲಂತ ಸಾಕ್ಷಿಗಳಾಗಿವೆ.

ಹೀಗೆ ನಿಡುಗಾಲದವರೆಗೆ ತಮ್ಮ ಸಮಾಜ ಸೇವೆಯನ್ನು ಮುಂದುವರೆಸಿಕೊಂಡು ಬಂದ ಬಿಷ್ಟಪ್ಪಯ್ಯ ಅವರು ತಮ್ಮ ೮೬ನೆಯ ವಯಸ್ಸಿನಲ್ಲಿ ಸಂನ್ಯಾಸ ಸ್ವೀಕರಿಸಿ ರಂಗಾಪುರದ ಬಳಿ ತುಂಗಭದ್ರ ನದಿಯಿಂದುಂಟಾದ ನಡುಗಡ್ಡೆಯಲ್ಲಿ ಮತ್ತೆ ನಾಲ್ಕು ವರ್ಷ ಅನುಷ್ಠಾನ ಮಾಡಿದ್ದು ತಿಳಿದುಬರುತ್ತದೆ[24]. ತಮ್ಮ ೯೦ನೆಯ ವಯಸ್ಸಿನಲ್ಲಿ ರಂಗಾಪುರದ ಬಳಿ ತುಂಗಭದ್ರಾದಿಯಲ್ಲಿ ಜಲಸಮಾಧಿ ಹೊಂದಿದ್ದಾರೆ. ಕೊನೆಯ ಬಾರಿ ಅನುಷ್ಠಾನಕ್ಕೆ ಕುಳಿತ ಜಾಗದಲ್ಲಿ 'ಶಂಕರ ಯೋಗೀಶ್ವರ' ಎಂಬ ಅವರೇ ಸ್ಥಾಪಿಸಿದ ಶಿವಲಿಂಗ ಮತ್ತು ಸಮಾಧಿ ಹೊಂದಿದ ಸ್ಥಳದಲ್ಲಿ 'ಉದ್ಭವ' ಎಂದು ಹೇಳಲಾಗುವ ಶಿವಲಿಂಗಗಳಿದ್ದು ಅವರ ಭಕ್ತರಿಂದ ಬಿಷ್ಟಪ್ಪಯ್ಯ ಎಂಬ ಭಾವನೆಯಿಂದಲೇ ಅರ್ಚಿಸಲ್ಪಡುತ್ತವೆ.[25]

ಸ್ವತಃ ರಾಜರೇ ಮುಸ್ಲಿಂ ದಾಳಿಯನ್ನು ಎದುರಿಸಲಾಗದೇ ಪರರಾಜರ ಆಶ್ರಯ ಪಡೆದಾಗ ಒಬ್ಬ ಬ್ರಾಹ್ಮಣ ಯೋಗಿ ಶತ್ರುಗಳನ್ನು ಎದುರಿಸಿ[26] ಗಟ್ಟಿಯಗಿ ನಿಂತು ಪಂಪಾಪತಿಯ ಗಡಿಯ ರಕ್ಷಣೆಗೆಂದು ಭವ್ಯ ರಕ್ಷಣಾ ದ್ವಾರ ಗೋಪುರ ನಿರ್ಮಿಸಿದ್ದು ಆ ಕಾರ್ಯಕ್ಕೆ ಪೂರಕವಾಗಿ ಅವರ ಗರ್ಭಿಣಿ ಪತ್ನಿ ಆತ್ಮಾಹುತಿ ಗೈದದ್ದು ಮತ್ತು ಬಿಷ್ಟಪ್ಪಯ್ಯ ಇನ್ನೂ ಹತ್ತು ಹಲವಾರು ವಿಧಾನಗಳಿಂದ ಅಂದಿನ ಆತಂಕದ ದಿನಗಳಲ್ಲಿ ಸಮಾಜಕ್ಕೆ ಭದ್ರತೆ ನೀಡಿದ್ದು ಸಾಮಾನ್ಯ ಜನರ ದೃಷ್ಟಿಯಲ್ಲಿ ಅತಿಮಾನುಷ ಅಸಾಮಾನ್ಯ ಅನಿಸಿಲಿಕ್ಕೆ ಸಾಕು.

ಬಿಷ್ಟಪ್ಪಯ್ಯ ಅವರ ಕಾರ್ಯಗಳನ್ನೆಲ್ಲ ಮುಂದುವರೆಸಿದ ಅವರ ಮೊಮ್ಮಗ ಮಹಾಗೋಪುರ ಕಲಶ ಸ್ಥಾಪಕ ಮಹಾದೇವಪ್ಪಯ್ಯ ಅವರಿಗೆ ಬಿಷ್ಟಪ್ಪಯ್ಯ ಅವರ ಕಾರ್ಯಗಳನ್ನು ಸೇರಿ ನೀಡಿದ[27] ಸನ್ಮಾನ ಪತ್ರಗಳನ್ನು ಅವರ ವಂಶಸ್ಥರಲ್ಲಿ ಕಾಣಬಹುದು. ಅವುಗಳಲ್ಲಿ ಕ್ರಿ.ಶ. ೧೭೪೫ರಲ್ಲಿ ಶೃಂಗೇರಿಯ ತತ್ಕಾಲೀನ ಜಗದ್ಗುರುಗಳು ನೀಡಿದ ೬೦ ಬಿರುದುಗಳ ಸನ್ಮಾನಪತ್ರವೂ ಶ್ರೀ ಸತ್ಯಬೋಧ ಸ್ವಾಮಿಗಳಿಂದ 'ಮಹಾ ಪುರುಷ, ಸಂಸ್ಥಾನ ರಂಗಾಪುರ' ಬಿರುದೂ ಸೇರಿದಂತೆ ಉತ್ತರ ಕರ್ನಾಟಕದ ಹಲವಾರು ಸಂಸ್ಥಾನಿಕರಿಂದ ದೊರೆತ ಸನ್ಮಾನ ಪತ್ರಗಳು ಇವೆ. ಈ ಎಲ್ಲ ಪತ್ರಗಳು ಬಿಷ್ಟಪ್ಪಯ್ಯ ಅವರನ್ನು 'ದೈವಾಂಶ ಸಂಭೂತ', 'ಶ್ರೀ ಪಂಪಾ ವಿರೂಪಾಕ್ಷವತಾರ' ಎಂದೇ ಸಂಬೋಧಿಸಿವೆ.[28]

ಉತ್ತರ ಕರ್ನಾಟಕವಷ್ಟೇ ಅಲ್ಲದೆ ಶಿವಮೊಗ್ಗ, ಚಿಕ್ಕಮಗಳೂರು, ದ.ಕನ್ನಡ ಜಿಲ್ಲೆಗಳಲ್ಲೂ 'ಬಿಷ್ಟಪ್ಪಯ್ಯ' ಹೆಸರು ಸಾಮಾನ್ಯವಾಗಿತ್ತು[29] ಮತ್ತು ಉತ್ತರ ಕರ್ನಾಟಕದ ನೂರಾರು ಮನೆಗಳಲ್ಲಿ ಭಾದ್ರಪದ ಶುಕ್ಲ ಬಿದಿಗೆಯಂದು ಅವರ ಆರಾಧನೆಯನ್ನು ಆಚರಿಸುವಂತೆ ಶಿವಮೊಗ್ಗ ಜಿಲ್ಲೆಯ ಸೊರಬ ತಾಲೂಕಿನ ಕುಪಗಡ್ಡೆ ಗ್ರಾಮದ ನಾಡಗೀರ್, ಕೆರೆಹಳ್ಳಿ ಗ್ರಾಮದ ನಾಡಗೀರ್ ಮುಂತಾದವರು, ಹಾನಗಲ್ಲಿನ ದೇಶಪಾಂಡೆ ಕುಟುಂಬ ಇಂದಿಗೂ ಬಿಷ್ಟಪ್ಪಯ್ಯ ಅವರ ಆರಾಧನೆ ಆಚರಿಸುತ್ತಿದ್ದು ಆ ಕುಟುಂಬಗಳೆಲ್ಲ ಹಂಪಿಯಿಂದ ವಲಸೆ ಬಂದಿರುವುದಾಗಿ ಈಚೀನ ಸಂಶೋಧನೆಯಿಂದ ತಿಳಿದು ಬಂತು. ಹಲವಾರು ಕುಟುಂಬಗಳು ಅಂದು ಅವರಿತ್ತ ಭಸ್ಮ ಬೆತ್ತ ಪಾದುಕೆಗಳನ್ನು ಜೋಪಾನವಾಗಿರಿಸಿ ಪೂಜಿಸುತ್ತಿದ್ದಾರೆ.[30] ಎಲ್ಲಾ ಪಂಚಾಂಗ ಕ್ಯಾಲೆಂಡರ್‌ಗಳಲ್ಲಿ ಭಾದ್ರಪದ ಶುಕ್ಲ ಬಿದಿಗೆಯನ್ನು ಬಿಷ್ಟಪ್ಪಯ್ಯ ಅವರ ಪುಣ್ಯ ದಿನ ಎಂದು ನಮೂದಿಸಿರುತ್ತಾರೆ.

ಮೂಲ ಬಿಷ್ಟಪ್ಪಯ್ಯ ಅವರಿಂದ ಹತ್ತನೆಯ ತಲೆಮಾರಿನ ಮೇವುಂಡಿಯ ಬಿಷ್ಟಪ್ಪಯ್ಯ ಮಹಾಪುರುಷ ಅವರ ಮಗನಾದ ನಾನು ಈ ಮೂಲಕ ಅವರ ಆಗಾಧ ಕೆಲಸಗಳ ಒಂದು ಅಂಶವನ್ನು ಬೆಳಕಿಗೆ ತಂದಿರುವೆ. ಇನ್ನೂ ಹಲವು ಡಾಕ್ಟರೇಟ್ ಪದವಿಗಳಿಗೆ ಗ್ರಾಸ ಒದಗಿಸುವಷ್ಟು ಕಾರ್ಯಗಳು ಅವರಿಂದ ನಂತರ ಅವರ ಮೊಮ್ಮಗ ಮಹಾದೇವಪ್ಪಯ್ಯ ಮಹಾಪುರುಷ ಅವರಿಂದ ನಡೆದಿವೆ, ಎಂಬುದು ಈಚಿನ ಸಂಶೋಧನೆಯಿಂದ ತಿಳಿದು ಬಂದಿದೆ. ಆಸಕ್ತ ವಿದ್ಯಾರ್ಥಿಗಳು ಮತ್ತು ತಜ್ಞ ಸಂಶೋಧಕರಿಂದ ಇನ್ನೂ ಹೆಚ್ಚಿನ ಸಂಶೋಧನೆ ನಡೆಯಲಿ ಎಂಬುದು ನನ್ನ ಆಶಯ.



**ಅನುಬಂಧ**

**ಮಹಾಪುರುಷ ಮನೆತನದ ವಂಶಾವಳಿ**

ಶ್ರೀ ಅಪ್ಪಯ್ಯ ಬಿಷ್ಟರು

| | ಶಾ. ಶಕ ವರ್ಷ | | ಕ್ರಿ.ಶ. ವರ್ಷ | ಮರಣ |
|---|---|---|---|---|
| ೧. ಕೀಲಕ ಸಂವತ್ಸರ | ೧೫೩೦ | ಬಿಷ್ಟಪ್ಪಯ್ಯ | ೧೬೦೮ | ೧೬೯೮ |
| ೨. | ೧೫೮೦ | ಶಿವಪ್ಪಯ್ಯ | ೧೬೫೮ | ೧೭೦೧ |
| ೩. | ೧೬೨೩ | ಮಹಾದೇವಪ್ಪಯ್ಯ | ೧೭೦೧ | ೧೭೪೬ |
| ೪. | ೧೬೫೭ | ಬಿಷ್ಟಪ್ಪಯ್ಯ | ೧೭೩೫ | ೧೭೮೦ |
| ೫. | ೧೬೮೪ | ಶಿವಪ್ಪಯ್ಯ | ೧೭೬೨ | ೧೮೧೨ |
| ೬ | ೧೭೨೪ | ಮಹಾದೇವಪ್ಪಯ್ಯ | ೧೮೦೨ | |
| ೭. | | ಬಿಷ್ಟಪ್ಪಯ್ಯ | ೧೮೨೫ | |
| ೮. | | ಶಿವಪ್ಪಯ್ಯ | ೧೮೫೪ | |

೯. ೧. ಮಹಾದೇವಪ್ಪಯ್ಯ ೨. ಮಹಾದೇವಪ್ಪಯ್ಯ ೩. ಮಹಾದೇವಪ್ಪಯ್ಯ ೪. ಮಹಾದೇವಪ್ಪಯ್ಯ

೧೮೮೪

೧೦. ಕ್ರಿ.ಶ. ೧೯೧೪ ಬಿಷ್ಟಪ್ಪಯ್ಯ ಮೇವುಂಡಿ ೧ನೆಯ ಬಿಷ್ಟಪ್ಪಯ್ಯ ೨ನೆಯ ಬಿಷ್ಟಪ್ಪಯ್ಯ

೧೧. ೧. ಶಿವಪ್ಪಯ್ಯ ಮಹಾಪುರುಷ

೨. ವಸುಂಧರಾ ದೇಸಾಯಿ, ಮಹಾಪುರುಷ ಶಿವಪ್ಪಯ್ಯ

೧ ನೆಯ ಶಿವಪ್ಪಯ್ಯ ೨ನೇ ಶಿವಪ್ಪಯ್ಯ

## ಹಿಂಬದಿ

37 ತಂಮ್ಮ ಮೈಮೇಲಿನ ಛ್ಯಾಟಿ ಮಡಿಕಿ ಮಾಡಿ ಅದನ್ನು ತುಂಗಭದ್ರಾ ← ಛ್ಯಾಟಿ
38 ಪ್ರವಾಹದ ಮೇಲೆ ಹ್ಹಾಸಿ (=ಹಾಸಿ) ಅದರ ಮೇಲೆ ತಾಂವು ಕೂತಕೊಂಡು ಯಲ್ಲ
39 ರಿಗೆ ಫಲ ಮಂತರಾಕ್ಷತಿ ಕೊಟ್ಟು ನದಿ ಆಚೆ ದಂಡಿಗೆ ಬಿದರಹಳ್ಳಿ ಕ್ಷೇತ್ರ
40 ಹತ್ತಿರಾ ದುರ್ಗದ ಕಲ್ಲು ಅಂತ್ತಾ ದೊಡ್ಡದೊಂದು ಬಂಡಿಗಲ್ಲು ನದಿ
41 ಯಲ್ಲಿ ಅದೆ ಅದರ ಹತ್ತಿರಾ ಶಕೆ ೧೬೨೦ ಭಾದ್ರಪದ ಶು|| ದಿವ್ಸ (=ವಸ)
42 ಸದರಿ ಚಿಪ್ಪಲಪ್ಪೆಯಿಂನವರು ಅಪ್ಸೆ (=ಐ) ಕ್ಯರಾದರು ಆಮೇಲೆ ಶಿಷ್ಯರು [ಕ್ರೂ]
43 ಡಿದ ಯಲ್ಲಾ ಮಂಡ್ಲಿ (=ಡಲಿ) ಹರಹರ ಮಹಾದೇವಂತ್ತಾ ಗರ್ಜನೆ ಮಾಡಿದರು
44 ಯಾಗ್ಯ್ಸ ಆ ಗಾದಿ ಮೇಲೆ ಕೂತ ಯಜಮಾನರು ಶಿವರಾತ್ರಿ
45 ದಿವ್ಸ (=ವಸ) ಸದರಿ ಬಂಡಿಗಲ್ಲು ಹತ್ತಿರಾ ಹೋಗಿ ರುದ್ರ ಅಭಿಷೇಕ ಮಾಡ
46 ತಾರೆ ಅಕ್ಕಿ ಅನೇಕ ತರದ ಪುಷ್ಪಗಳು (ಪೂಜ್ಯಾ ಸಾಹಿತ್ಯ)
47 ಮೇಲೆ ತೆಯುತ್ತವೆ ಬಿಲ್ಪ ಪತ್ರಿ ಯಷ್ಟು ಹಾಕಿದಾಗ್ಯಾದರು ಅದು
48 ವಳಗೆ ಹೋಗುತ್ತದೆ ಸದರಿ ಚಿಪ್ಪಲಪ್ಪೆಯಾ ಯವರ ಹೊಟ್ಟೆಲೆ
49 ಶಿವಪ್ಪೆಯಾ ಯವರು ಶಕೆ ೧೫೪೦ ನೇದರಲ್ಲಿ ಹುಟ್ಟಿದರು
50 ಯವರು ಹೊಟ್ಟೆಲೆ ಮಹಾ। ಶಕೆ ೧೬೨೩ನೇದರಲ್ಲಿ ಭಾದ್ರಪದ ಶು||
51 ದಿವ್ಸ (=ವಸ) ದೇಹ ಯಿಟ್ಟರು ಯಿವರ ಹೊಟ್ಟೆಲೆ ಮಹಾದೇವಪ್ಪೆಯಾ
52 ಯಿವರು ಶಕೆ ೧೬೨೩ನೇದಲ್ಲಿ ಹುಟ್ಟಿದರು ಯಿವರು ತಂಮ್ಮ
53 ಅಜ್ಜಂದರಾದ ಚಿಪ್ಪಪ್ಪಯಿಂನವರು ಕಟ್ಟಿಸಿದ ಹಂತಿ ಗೋಪುರ
54 ಮೇಲೆ ಶಿಖರ ಯಿಟ್ಟರು ಸದರಿಯಂದರು ಮಂದೇ ದಿವ್ಸ (=ವಸ) ದಲ್ಲಿ
55 ಲಕ್ಷ ಬ್ರಾಂಹ್ಮರ ಅನ್ನಸಂತರ್ಪಣೆ ಮಾಡಿದರು ಆಗ್ಯೆ ಹುರಗಾಳ್ಳ
56 ಬೇಲ್ಲಾ ಯಿಲ್ಲಾ ಅಂತಾ ಚೋದ್ಯಾಟಿ ಆಯಿತು ಆಗ್ಯೆ ಸದರಿ
57 ಸ್ವಾಮಿಯವರು ಯಿಸ್ಕೊಂಡು ಯಿರಡ ಘಳಿಗಿ ವಳಗೆ ಶ್ರೀ
58 ಮಾರುತ್ತಿ ದೇವರು ಸೂರ ಹೇರು ಬೆಲ್ಲಾ ತೆಗದಕೊಂಡು ಬರುತ್ತಾನ ಅಂತ್ತಾ
59 ಹೇಳಿದರು ಅದರಂತೆ ಯಾವನೊಬ್ಬ ಸ್ವಪ್ನದಷನು ಸೂರ ಹೇರು
60 ಬೆಲ್ಲಾ ತೆಗದುಕೊಂಡು ಬಂದ್ರು. ಆ ಬೆಲ್ಲದ ಹಲಿಗಿಯಲ್ಲಿ ಮಂದು ಕಲ್ಲಿನ
61 ಮಾರುತಿ ಮೂರ್ತಿ ಹೊರಟಿತು ಅದೆ ಯಾಗಾ ರಂಗಾಪುರ
62 ಮಠದಲ್ಲಿ ಅದೆ ಸದರಿ ಮಹಾದೇವಪ್ಪೆಯಾ ಯಿವರು
63 ಶ್ರೀ ಮಹಾಲಿಂಗೇಶ್ವರ ಸಮಾರಾಧನಿ ಕಾಲಕ್ಕೆ ತುಪ್ಪಾ ಕಡ್ಮೆ (=ಡಿಮೆ) ಬಿತ್ತು
64 ಆಗ್ಯೆ ತುಂಗಭದ್ರಾ ನದಿಯು ವಳಗಿನ ನಾಲ್ಕು ಅಪ್ಪೆ (=ಪಿ)ದು ಕೊಡ ನೀರು
65 ತುಂಬ್ಸಿ (=ಬಿಸಿ) ತಂದು ಸದರ ಕೊಡ್ಕ (=ಡಕೆ) ತೀರ್ಥ ಪ್ರೋಕ್ಷಣೆ ಮಾಡಲು ಸದರಿ
66 ನೀರು ತುಪ್ಪ ಆಯಿತ್ತು ಅದನ್ನೆ ಬಡ್ಸಿ (=ಡಿಸಿ)ದರು ಆ ನಂತರಾ ತು
67 ಪ್ಪ ಬಂದ ನಂತರಾ ಗಂಗಮ್ಮನ ಸಾಲಾ ಯಿರಬಾರದು ಅಂತ್ತಾ ಸದರಿ
68 ತುಪ್ಪಾ ಹೊಳೆಯಲ್ಲಿ ಹಾಕ್ಸಿ (=ಕಿಸಿ)ದರು ಅವರ ಮಕ್ಕಳು ಚಿಪ್ಪಪ್ಪ
69 ಯಾ ಯಿವರು ಶಕೆ ೧೬೫೭ನೇದರಲ್ಲಿ ಹುಟ್ಟಿದರು ಸದರಿ ಮಹಾ
70 ದೇವಪ್ಪೆಯಾ ಯಿವರು ಶಕೆ ೧೬೬೮ನೇದಲ್ಲಿ ಕಾರ್ತಿಕ ಶು||
71 ದಿವ್ಸ (=ವಸ) ಸಮಾಧಿಸ್ತರಾದರು
72 ಸಂಪೂರ್ಣ

ಕನ್ನಡ ಮೋಡಿ ಲಿಪಿಯಲ್ಲಿದ್ದ ಪತ್ರವನ್ನು ಓದಿ ಹೊಸಗನ್ನಡ ಲಿಪಿಯಲ್ಲಿ ಬರೆದವರು:
ಡಾ. ಬಿ. ರಾಜಶೇಖರಪ್ಪ, ಚಿತ್ರದುರ್ಗ

## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಹಸ್ತಪ್ರತಿಯ ೬-೭ ಸಾಲು
ಆಪಟೆ ಅನಂತರಾಯರು-**ಹಂಪೆಯ ಶ್ರೀ ವಿರೂಪಕ್ಷ ದೇವಾಲಯದ ಗೋಪುರ ನಿರ್ಮಾಪಕ ಶ್ರೀ ಬಿಷ್ಟಪ್ಪಯ್ಯನವರು,** ಪು. ೪೭.
೨. ಅದೇ ಪ್ರಸ್ತಕ ಮತ್ತು ಕೆ. ರಾಮಸ್ವಾಮಯ್ಯಂಗಾರ್-**ಜೀರ್ಣ ವಿಜಯನಗರಾದರ್ಶನಂ,** ಪು. ೫೪ ಮತ್ತು ಬಿಷ್ಟೇಶಕೃತ ರಸಲಿಂಗವೇ ಪುರಾವೆ.
೪. ಡಾ॥ ಪಿ. ಸತ್ಯನಾರಾಯಣಭಟ್., **ಲಿಂಗ ಮತ್ತು ಕಂತೆ,** ಪು. ೨೧.
೫. ಆಪಟೆ ಆನಂತರಾಯರು., ಅದೇ, ಪು. ೬೪.
೬ ಹಸ್ತಪ್ರತಿಯ ೬-೭ ಸಾಲು ಕ್ಷೇತ್ರಕಾರ್ಯದಲ್ಲಿ ಪ್ರತ್ಯಕ್ಷ ಕಂಡದ್ದು.
೭. ಹಸ್ತಪ್ರತಿಯ ೧೮-೧೯ ಸಾಲು, ಆಪಟೆ ಅನಂತರಾಯರ ಅದೇ ಪುಸ್ತಕದ ೫೬ನೇ ಪುಟ ಮತ್ತು ಕ್ಷೇತ್ರಕಾರ್ಯದಲ್ಲಿ ಪಡೆದ ಮೌಖಿಕ ವಿವರಣೆ.
೮. ಹನಸಿ ಬಿಷ್ವೇಶ್ವರ ಗುಡಿಯ ಆಸುಪಾಸಿನ ಭೂಮಿ ಮಹಾಪುರುಷ ಕುಟುಂಬ ಜೋಯಿಸರಾದ ಬಿಷ್ಟಪ್ಪ ಕೃಷ್ಣಪ್ಪ ಜೋಶಿ ಹೆಸರಿನಲ್ಲಿದೆ.
೯. ಸೋಗಿಯ ಮಾಜಿ ಚೇರ್ಮನ್ ಕೋಶಪ್ಪ, ಹನಸಿಯ ಪಟೇಲರಾಗಿರುವ ಶಿವಗೌಡರು ತಿಳಿಸಿದ್ದು.
೧೦. ಕರ್ನಾಟಕ ಇತಿಹಾಸ ಅಕಾದೆಮಿಯ ಸೊಂಡೂರಿನಲ್ಲಿ ನಡೆದ ಸಮ್ಮೇಳನದಲ್ಲಿ 'ಹರಿಹರ ಶ್ರೀನಿವಾಸರಾವ್ ಅವರು ಮಂಡಿಸಿದ '*ವಿಠ್ಠಲಾಪುರದ ಅಪ್ರಕಟಿತ ಕಂಚಿನ ಶಾಸನ*', ಕುರಿತ ಪ್ರಬಂಧ.
೧೧. ಆಪಟೆ ಅನಂತರಾಯರು., ಅದೇ, ಪುಟ ೬೪.
೧೨. ಅದೇ., ಪುಟ ೬೪.
೧೩. ಆಪಟೆ ಅನಂತರಾಯರ ಅದೇ ಪುಸ್ತಕದ ೭೧ನೇ ಪುಟ ಮತ್ತು ಹಂಪಿಯ ವಿದ್ಯಾರಣ್ಯ ಮಠ ಮತ್ತು ಎಲ್ಲಾ ಕಡೆ ಇರುವ ಮೌಖಿಕ ಪರಂಪರೆ.
೧೪. ಡಾ॥ ಎಸ್.ಕೆ. ಜೋಶಿ. ಡಿಸೆಂಬರ್, **ಕಸ್ತೂರಿ** ಮಾಸ ಪತ್ರಿಕೆಯ ೨-೩ ನೆಯ ಪುಟ ಮತ್ತು ನಾನು ಈಚೆಗೆ ನಡೆಸಿದ ಪತ್ರಿಕಾಗೋಷ್ಠಿಯಲ್ಲಿ ಉಪಸ್ಥಿತರಿದ್ದ ಡಾ॥ ವಸುಂಧರಾ ಫಿಲಿಯೋಜಾ ಅವರ ಈ ಅಭಿಪ್ರಾಯವನ್ನು ದೂರದರ್ಶನದ ಎಲ್ಲ ವಾಹಿನಿಗಳು ಚಿತ್ರಗೋಳಿಸಿವೆ. ದಿ ಹಿಂದು, ೧೯-೧೦-೦೭.
೧೫. ಆಪಟೆ ಅನಂತರಾಯರು., ಅದೇ, ಪು. ೭೫-೭೬ ; ಅದೇ ಪುಸ್ತಕದ ಆಲೂರ ವೆಂಕಟರಾಯರ ಮುನ್ನುಡಿ, ಹಸ್ತಪ್ರತಿಯ ೯-೧೦-೧೧ ಸಾಲು.
೧೬. ಡಾ॥ ಪುರುಷೋತ್ತಮ ಬಿಳಿಮಲೆ ಮತ್ತು ಚೆಲುವರಾಜು., **ಹಂಪಿ ಜಾನಪದ,** ಪು. ೮೦-೮೧ ಹಂಪಿಯ ಎಲ್ಲ ಮಾರ್ಗದರ್ಶಿಗಳು ತಿಳಿಸಿದ್ದು 'ಗೋಪುರದಮ್ಮ' ಶಿಲ್ಪದ ಅಕ್ಕ ಪಕ್ಕದಲ್ಲಿ ದೀಪ ಇಡುವ ಗೂಡುಗಳಿದ್ದು ಎಣ್ಣೆಯಿಂದ ಮಸುಕಾಗಿವೆ. ಶಿಲ್ಪವು ಇಂದು ಗೋಪುರದಮ್ಮ ಹೆಸರಿನಿಂದಲೇ ಅರ್ಚಿಸಲ್ಪಡುತ್ತಿದೆಯಂತೆ.
೧೭. ಹಿಂದೆ 'ದೇವಿಯ ಮುಖವುಳ್ಳ ಶ್ರೀ ಗೋಪುರದಮ್ಮ ಪ್ರಸೀದತು'. ಎಂದು ಶಾಸನ ಇರುವ ಕಲಶ ಇದದ್ದು ಈಚೆಗೆ ಕಳುವಾಗಿದೆ. ಶ್ರೀ ಬಿಷ್ಟೇಶ ಕೃತ ಶ್ರೀಚಕ್ರಮಾತ ಗೋಪುರದಮ್ಮ ಎಂಬ ಹೆಸರಿನಿಂದಲೇ ಅರ್ಚಿಸಲ್ಪಡುತ್ತದೆ. ಮತ್ತು ಬೆಳ್ಳಿಯ ಪಾದುಕೆಗಳು ಅವರು ಗೋಪುರಕ್ಕೆ ಬಲಿಯಾದ ದಿನದಂದು ವಿಶೇಷವಾಗಿ ಪೂಜಿಸಲ್ಪಡುತ್ತವೆ.
೧೮. George Michell-*Vijayanagara Progress* or Research 87-88 page 40-41.
೧೯. ಡಾ॥ ಪಿ. ಸತ್ಯನಾರಾಯಣಭಟ್., ಅದೇ., ಪು. ೫೨.
೨೦. ಆಪಟೆ ಅನಂತರಾಯರು., ಅದೇ, ಪುಟ ೭೯ ಮತ್ತು ಶ್ರೀ ದತ್ತಾತ್ರೇಯ ಶರ್ಮ ಮಠದ ಶ್ರೀ ಭಾಲಚಂದ್ರ ಶಾಸ್ತ್ರಿ ಜೋಷಿ ಮುಂತಾದ ವೈದಿಕ ವಿದ್ವಾಂಸರ ಅಭಿಮತ.
೨೧. ಬಳ್ಳಾರಿಯ ಸೋಗಿ, ಹನಸಿ, ರಂಗಾಪುರ, ಧಾರವಾಡ ಜಿಲ್ಲೆಯ ಕಲಘಟಗಿ ತಾಲೂಕಿನ ಆರೆ ಬಸವನ ಕೊಪ್ಪ ಅಂಜ್ಲಿಕೊಪದಲ್ಲಿರುವ 'ಬಿಷ್ಟೇಶ್ವರ ಸ್ವಾಮಿ' ಗುಡಿ ಎಂಬ ಹೆಸರಿನ ಗುಡಿಗಳು ಅವರ ನಿರ್ಮಾಣ.
೨೨. ಆಪಟೆ ಅನಂತರಾಯರು., ಅದೇ, ಪು. ೪ ಮತ್ತು ಹಸ್ತಪ್ರತಿ ೧೦-೧೧ ಸಾಲು.
೨೩. ಕ್ಷೇತ್ರಕಾರ್ಯದಲ್ಲಿ ಹೊಂದಿದ ಅನುಭವ.
೨೪. ಆಪಟೆ ಅನಂತರಾಯರು., ಅದೇ, ಪು. ೯೦ನೇ ಹಸ್ತಪ್ರತಿ.
೨೫. ಅದೇ., ಪು. ೯೦ನೇ ಹಸ್ತಪ್ರತಿ.
೨೬. ಕೆಳದಿ ಗಂಡಾಜೋಯಿಸ್., 'ವಿಜಯನಗರ ಚಕ್ರವರ್ತಿ ಪಳೆಯುಳಿಕೆ ಆನೆಗೊಂದಿ ಅಚ್ಯುತದೇವರಾಯ', **ವಿಜಯನಗರ ಅಧ್ಯಯನ,** ಸಂಪುಟ ೧೧ ಪು. ೩೯೧.
೨೭. ಹಸ್ತಪ್ರತಿ ೨೩-೨೪ನೇ ಸಾಲು.
೨೮. ಲಭ್ಯ ಇರುವ ಎಲ್ಲ ಸನ್ಮಾನ ಪತ್ರಗಳ ಸಂಶೋಧನೆ, ಡಾ॥ ಸಿ.ಎಂ ಚುರ್ಚಿಹಾಳ ಮಠದ ಅವರು ಸಂಪಾದಿಸಿದ ಮುಂಡರಗಿನಾಡ ಸ್ವಾತಂತ್ರ್ಯ ಸಂಗ್ರಾಮ 'ಪುಸ್ತಕದ ೩೧ನೆಯ ಪುಟ **'ಸದ್ಬೋಧ ಚಂದ್ರಿಕೆ',** ೨೦೦೩, ಜನವರಿ ಸಂಚಿಕೆ, ಪು. ೯.
೨೯. **ವಿಜಯ ಕರ್ನಾಟಕ** ಪತ್ರಿಕೆಯ ವಾಚಕರ ವಿಜಯ, ಮಾರ್ಚ್ ೧೯, ೨೦೦೧ ಮತ್ತು ಕ್ಷೇತ್ರಕಾರ್ಯದಲ್ಲಿ ಪಡೆದ ಅನುಭವ.
೩೦. ಕುಂದಗೋಳದ ರಾಮರಾವ್ ದೇಸಾಯಿ ಅಲ್ಲಿನ ಎಲ್ಲ ಕುಲಕರ್ಣಿ ಮನೆತನಗಳು ಕುಂದಗೋಳದಲ್ಲಿಯೇ ನಾಡಗೀರ್ ಇನಾಂ ಕೊಪ್ಪದವರ ಮನೆಯಲ್ಲಿ ಬಿಷ್ಟಪ್ಪಯ್ಯ ಅವರಿತ್ತ ರುದ್ರಾಕ್ಷಿ ಇಟ್ಟು ವೃಂದಾವನ ನಿರ್ಮಿಸಿಕೊಂಡಿದ್ದಾರೆ. ಕಮಡೊಳ್ಳಿಯ ಕುಲಕರ್ಣಿಯವರ ಮನೆಯಲ್ಲಿ, ಹುಬ್ಬಳ್ಳಿಯ ಪಾಟೀಲ ಕುಲಕರ್ಣಿಯವರ ಮನೆ ಮುಂತಾದೆಡೆ ಅಂದು ಅವರಿಂದ ಪಡೆದ ಭಸ್ಮಪಾದುಕೆ ಮುಂತಾದವು ಇದ್ದು ಅರ್ಚಿಸಲ್ಪಡುತ್ತಿವೆ.

(ಮುಖ್ಯ ಹಸ್ತಪ್ರತಿ ಒದಗಿಸಿದವರು : ವೇ.ಬ್ರ. ಶ್ರೀ ದತ್ತಾತ್ರೇಯಶರ್ಮ ಮಠದ ಗುತ್ತಲ, ಮಾಹಿತಿ ನೆರವು ನೀಡಿದವರು : ದೊಡ್ಡಶಿವಯ್ಯ ಮಹಾಪುರುಷ ವಿಠ್ಠಲಾಪುರ), ಸಣ್ಣಶಿವಯ್ಯ ಮಹಾಪುರುಷ, ವಿಠ್ಠಲಾಪುರ, ಶಿವಪ್ಪಯ್ಯ ಮಹಾಪುರುಷ ಮೇವುಂಡಿ ಮತ್ತು ಹಂಪಿ ಮತ್ತು ಬಿಷ್ಟಪ್ಪಯ್ಯ ಅವರಿಗೆ ಸಂಬಂಧಿಸಿದ ಎಲ್ಲ ಸ್ಥಳಗಳಲ್ಲಿರುವ ಜನತೆ ನೀಡಿದ ವಿವರಣೆಗಳು. ಸಂಶೋಧನೆಗೆ ಮಾರ್ಗದರ್ಶಕರು : ಡಾ॥ ಎಸ್.ಕೆ. ಜೋಶಿ, ಡಾ॥ ಬಿ.ಎಸ್. ರಾಮಭಟ್ಟ, ಡಾ॥ ಎಸ್.ಜಿ. ಸಾಮಕ್, ಡಾ॥ ಜಗದೀಶ್.)

ವೈ. ಹನುಮಂತರೆಡ್ಡಿ*

# ಹಂಡೆ ಅರಸರ ಕಾಲದ ಐತಿಹಾಸಿಕ ಭಾವಿಗಳು

ವಿಜಯನಗರ ಸಾಮ್ರಾಜ್ಯದ ಪತನಾನಂತರ ಬಳ್ಳಾರಿ ಜಿಲ್ಲೆಯ ಪ್ರದೇಶ ವಿಜಾಪುರ ಸುಲ್ತಾನರ ಅಧೀನಕ್ಕೆ ಒಳಪಟ್ಟಿತ್ತು. ಸುಲ್ತಾನರಲ್ಲಿ ಸರದಾರನಾಗಿದ್ದ ಹಂಡೆವಂಶದ ಬಾಲದ ಹನುಮಪ್ಪ ನಾಯಕನನ್ನು ಈ ಭಾಗದ ಆಡಳಿತ ನಡೆಸಲು ಸನ್ನದು ಕೊಟ್ಟು ಕಳುಹಿಸಿದರು. ಈತನು ಇಲ್ಲಿಗೆ ಬಂದು ಬಳ್ಳಾರಿ, ಕುರುಗೋಡು ಮತ್ತು ತೆಕ್ಕಲಕೋಟೆ ಪ್ರದೇಶವನ್ನು ಸ್ವಾಧೀನ ಪಡಿಸಿಕೊಂಡು ಆಡಳಿತ ಪ್ರಾರಂಭಿಸಿದ್ದು, ನಂತರ ಈತನ ವಂಶಸ್ಥರು ರಾಜ್ಯವನ್ನು ವಿಸ್ತರಿಸಿ ಸುಮಾರು ಎರಡು ಶತಮಾನಗಳ ಕಾಲ ಆಳಿದ್ದಾರೆ. ಇವರು ಬಳ್ಳಾರಿ, ಕುರುಗೋಡು, ತೆಕ್ಕಲಕೋಟೆ, ರಾಯದುರ್ಗ, ಗುತ್ತಿ ಮೊದಲಾದ ಕಡೆಗಳಲ್ಲಿ ಕೋಟೆ ಕೊತ್ತಲುಗಳನ್ನು ನಿರ್ಮಿಸಿದ್ದಾರೆ. ಇವರು ಅನೇಕ ಸಾಮಾಜಿಕ ಕಾರ್ಯಗಳನ್ನು ಮಾಡಿ ಹೆಸರು ವಾಸಿಯಾಗಿದ್ದಾರೆ.

**ಸಾಮಾಜಿಕ ಕಾರ್ಯಗಳು :** ಈ ವಂಶದ ಅಂಕುಶರಾಯನು 'ಮಣೂರು' ಗ್ರಾಮವನ್ನು ಕೇದಾರ ದೇವನಿಗೆ ದಾನದತ್ತಿಯಾಗಿ ನೀಡಿದ್ದಾನೆ. ಹಿರೇರಾಮಪ್ಪ ನಾಯಕನು (ಕ್ರಿ.ಶ. ೧೬೮೯-೨೫) ತಮ್ಮ ಹಿರಿಯರಿಗೆ ಪುಣ್ಯವಾಗಬೇಕೆಂದು ಬಳ್ಳಾರಿಯಲ್ಲಿ ಅಮ್ಮವ್ವನ ಹೆಸರಿನಲ್ಲಿ ಶಿಲಾ ಮಠವನ್ನು ನಿರ್ಮಿಸಿ, ಹಲವಾರು ಗ್ರಾಮಗಳ ಉತ್ಪನ್ನವನ್ನು ಆ ಮಠಕ್ಕೆ ದಾನದತ್ತಿಯಾಗಿ ಬಿಟ್ಟಿದ್ದಾನೆ. ಇವರು ಬಳ್ಳಾರಿ ಕುರುಗೋಡು, ಅನಂತಪುರ, ಹೊಸಕೆರೆ ಮೊದಲಾದ ಕಡೆಗಳಲ್ಲಿ ಕೆರೆಗಳನ್ನು ನಿರ್ಮಿಸಿ ಪ್ರಜೆಗಳಿಗೆ ನೀರಾವರಿ ಸೌಕರ್ಯ ಕಲ್ಪಿಸಿ ಕೊಟ್ಟಿದ್ದಾರೆ. ಪ್ರಯಾಣಿಕರಿಗೆ ಮತ್ತು ಪ್ರಜೆಗಳಿಗೆ ಅನುಕೂಲಕ್ಕೆಂದು ಕೆಲವು ಆಳವಾದ ಭಾವಿಗಳನ್ನು ತೋಡಿಸಿ, ಸದಾ ಕಾಲ ನೀರಿನ ಸೌಕರ್ಯ ಒದಗಿಸಿಕೊಟ್ಟಿದ್ದಾರೆ. ಆದರೆ ಈಗ ಅವುಗಳಲ್ಲಿ ಕೆಲವು ಅರ್ಧಭಾಗ ಮತ್ತು ಇನ್ನು ಕೆಲವು ಪೂರ್ಣ ಹೂತು ಹೋಗಿದ್ದು ಹೇಳಲು ಹೆಸರಿಲ್ಲದಂತೆ. ನೋಡಲು ಗುರುತು ಇಲ್ಲದಂತಾಗಿವೆ. ಈಗಿನ ಪೀಳಿಗೆ ಜನರಿಗೆ ಇವುಗಳ ನಿರ್ಮಾಣ, ಕಾಲ ಮತ್ತು ಮಹತ್ವಗಳು ತಿಳಿಯದೆ, ಅವುಗಳ ನಾಶಕ್ಕೆ ಮುಂದಾಗಿದ್ದಾರೆ. ಇವುಗಳ ಐತಿಹಾಸಿಕ ಹಿರಿಮೆ ಮತ್ತು ಪರಂಪರೆಗಳನ್ನು ಇಂದಿನ ಮತ್ತು ಮುಂದಿನ ಪೀಳಿಗೆಗೆ ತಿಳಿಸುವ ಉದ್ದೇಶ ಈ ಪ್ರಬಂಧದ್ದು.

**ಅಮ್ಮವ್ವನ (ಅವ್ವಮ್ಮ) ಭಾವಿ :** ಇದು ಬಳ್ಳಾರಿ ನಗರದಿಂದ ೩ ಕಿ.ಮೀ. ದೂರದಲ್ಲಿ, ಸಿರುಗುಪ್ಪ ರಸ್ತೆಯ ಪಕ್ಕದಲ್ಲಿದೆ. ಈ ಭಾವಿಯಿಂದಲೇ ಈ ಊರಿಗೆ 'ಅವ್ವಮ್ಮನ' ಭಾವಿ (ಅವ್ವಂಭಾವಿ) ಎಂದು ಹೆಸರು ಬಂದಿದೆ. ಇದು ವಾಸ್ತುಶಿಲ್ಪ ಕಲೆ ಮತ್ತು ಕೆತ್ತನೆಯ ಕೌಶಲ್ಯಕ್ಕೆ ಪ್ರಸಿದ್ಧಿಯಾಗಿದೆ. ಇದರ ಅಳತೆ ಉದ್ದ, ೫೫ ಅಡಿ ಅಗಲ ೫೦ ಅಡಿ, ಆಳ ೬೦ ಅಡಿ. ಇದನ್ನು ಮೇಲಿನಿಂದ ಕೆಳಗಿನವರೆಗೆ ಸುಮಾರು ೮-೧೦ ಅಡಿ ಉದ್ದದ ೧, ೧ ೧/೨ ಅಡಿ ದಪ್ಪದ ಕೆತ್ತಿ ಸಮತಟ್ಟಾಗಿ ಮಾಡಿದ ಬೆಣಚು ಕಲ್ಲುಗಳನ್ನು ಹೊಂದಿಸಿ, ಜೋಡಿಸಿ ಬಂಧುರವಾಗಿ ನಿರ್ಮಿಸಲಾಗಿದೆ. ಆಗ್ನೇಯ ದಿಕ್ಕಿನಿಂದ ಪಶ್ಚಿಮಕ್ಕೆ ಕೆಳಕ್ಕೆ ಇಳಿಯಲು ೧೦ ಅಡಿ ಅಗಲದ ಮೆಟ್ಟಲುಗಳು ಇದ್ದು, ಸುಮಾರು ೧೦ ಅಡಿ ಕೆಳಗೆ ಇಳಿದ ನಂತರ ೨೦ ಅಡಿ ಉದ್ದದ ೧೦ ಅಡಿ ಅಗಲದ ಮುಚ್ಚಿದ ವಿಶಾಲವಾದ ಮಂಟಪ ಇದೆ. ಇದು ಪ್ರಯಾಣಿಕರು ಅಡುಗೆ ತಯಾರಿಸಲು. ಊಟ ಉಪಚಾರ ಮತ್ತು ವಿಶ್ರಾಂತಿ ಪಡೆಯಲು



* ವಿಶ್ರಾಂತ ಉಪನ್ಯಾಸಕರು, ಶ್ರೀ ಜಂಬುನಾಥ ನಿಲಯ, ೬ನೇ ಅಡ್ಡರಸ್ತೆ, ರೇಣುಕಾನಗರ, ಬಳ್ಳಾರಿ.

ಅನುಕೂಲಕರವಾಗಿದ್ದು, ಮಳೆ ಮತ್ತು ಬಿಸಿಲಿನಿಂದ ರಕ್ಷಣೆ ಒದಗಿಸುತ್ತದೆ. ಈ ಮಂಟಪದಿಂದ ಈ ಭಾವಿಯ ಉಳಿದ ಮೂರು ದಿಕ್ಕುಗಳಿಗೆ ಸಂಚರಿಸಲು ೮ ಅಡಿ ಅಗಲದ ಕಟ್ಟೆಯಿದ್ದು, ಅದರ ಹಿಂಭಾಗದಲ್ಲಿ ೯ ಸುಂದರ ಕಮಾನುಗಳ ಮಂಟಪ ಇದೆ. ಇವುಗಳಲ್ಲಿ ಕಡೆಯ ಕಮಾನಿನಲ್ಲಿ ಒಂದು ಚಿಕ್ಕ ದ್ವಾರ ಇದ್ದು, ಅದು ಈಗ ಮುಚ್ಚಿಹೋಗಿದ್ದು, ಬಹುಶಃ ಇಲ್ಲಿಂದ ತಪ್ಪಿಸಿಕೊಂಡು ಹೊರ ಹೋಗಲು ಸುರಂಗ ಮಾರ್ಗ ಇರಬಹುದು. ಇದರ ಹಿಂಭಾಗದಲ್ಲಿ ನೀರನ್ನು ಮೇಲೆತ್ತಲು ಎರಡು ಕಪ್ಪಲೆ ಸಾಧನಗಳನ್ನು ನಿರ್ಮಿಸಲಾಗಿದೆ. ಇಂತಹ ಐತಿಹಾಸಿಕ ಮಹತ್ವದ ಭಾವಿಯು ಅರ್ಧ ಭಾಗ ಹೂತುಹೋಗಿತ್ತು. ಇದರ ಬಗ್ಗೆ ಈಗ್ಗೆ ೩ ವರ್ಷಗಳ ಹಿಂದೆ ನನ್ನ ಲೇಖನ ಪತ್ರಿಕೆಗಳಲ್ಲಿ ಪ್ರಕಟವಾಗಿದ್ದರಿಂದ, ಬಳ್ಳಾರಿ ಮಹಾನಗರ ಪಾಲಿಕೆಯುವರು ಇದರ ಹೂಳನ್ನು ಸ್ವಚ್ಛಗೊಳಿಸಿದ್ದಾರೆ. ನಂತರ ಕುರುಗೋಡು ಕ್ಷೇತ್ರದ ಶಾಸಕರ ಅನುದಾನದಿಂದ ಪಕ್ಕದಲ್ಲಿ ಒಂದು ಬೋರನ್ನು ಕೊರೆಸಿ, ಅದರಿಂದ ನೀರನ್ನು ಆಗಾಗ್ಗೆ ಈ ಭಾವಿಯಲ್ಲಿ ತುಂಬಿಸುತ್ತಿದ್ದು, ಈಗ ಶುದ್ಧ ನೀರಿನಿಂದ ಕಂಗೊಳಿಸುತ್ತಿದ್ದು, ಅಲ್ಲಿನ ಜನರು ಇದೇ ನೀರನ್ನು ಕುಡಿಯುಲು ಮತ್ತು ಬಳಸಲು ಉಪಯೋಗಿಸಿದ್ದಾರೆ. ಈಗ ಆ ಭಾವಿಗೆ ಹಿಂದಿನ ದೆಶೆ ಬಂದಿದ್ದು, ನಿರ್ಮಾಪಕರ ಉದ್ದೇಶ ಸಫಲವಾಗುತ್ತಿದೆ.

**ಸೋಲ್ಜರ್ಸ್ ಭಾವಿ :** ಇದು ಬಳ್ಳಾರಿ ನಗರದ ಕೆಳಗಿನ ಕೋಟೆಯ ಹೊರಗಡೆ ಪೂರ್ವ ಭಾಗದಲ್ಲಿ ನಿರ್ಮಿಸಲಾಗಿದೆ. ಇದು ಮೇಲಿನಿಂದ ಕೆಳಗಿನವರೆಗೆ ಕೆತ್ತಿ ಸಮ ಮಾಡಿದ ಕಲ್ಲುಗಳಿಂದ ನಿರ್ಮಿಸಲಾಗಿದ್ದು, ಸುಮಾರು ೫೦ ಅಡಿ ಉದ್ದ ಮತ್ತು ೩೦ ಅಡಿ ಅಗಲವಾಗಿದ್ದು, ೫೦ ಅಡಿ ಆಳವಿದೆ. ಇದರ ಆಗ್ನೇಯ ದಿಕ್ಕಿನಿಂದ ಕೆಳಗೆ ಇಳಿಯಲು ಕಲ್ಲಿನ ಸೋಪಾನಗಳು ಇದ್ದು, ಸುಮಾರು ೧೦ ಅಡಿ ಕೆಳಗೆ ೨೦ ಅಡಿ ಉದ್ದ X೧೦' ಅಗಲದ ಮುಚ್ಚಿದ ಶಿಲಾ ಮಂಟಪ ಇದ್ದು, ಇದರ ಮುಂಭಾಗಕ್ಕೆ ೭ ಕಮಾನುಗಳನ್ನು ರಚಿಸಲಾಗಿದೆ. ಇದು ಪ್ರವಾಸಿಗರ ಅಡುಗೆ, ಊಟ ಉಪಚಾರ ಮತ್ತು ವಿಶ್ರಾಂತಿಗೆ ಅನುಕೂಲಕರವಾಗಿದೆ. ಇದರ ಹಿಂಭಾಗದಲ್ಲಿ ನೀರನ್ನು ಮೇಲೆತ್ತಲು ಒಂದು ಕಪ್ಪಲೆಯ ವ್ಯವಸ್ಥೆಯನ್ನು ಮಾಡಲಾಗಿದೆ. ಈ ಭಾವಿಯ ಸುತ್ತಲೂ ಮೇದಾರು ಜನಾಂಗದವರು ವಾಸದ ಮನೆಗಳನ್ನು ನಿರ್ಮಿಸಿಕೊಂಡಿದ್ದು, ಒತ್ತುವರಿಯಾಗಿದ್ದು, ಅರ್ಧಭಾಗ ಹೂತುಹೋಗಿದ್ದು, ಗಿಡ ಗಂಟೆಗಳು ಬೆಳೆದು ಇನ್ನು ಕೆಲವು ವರ್ಷಗಳಲ್ಲಿ ಪೂರಾ ಹೂತುಹೋಗಬಹುದು. ಈ ಭಾವಿಯಿಂದ ೫' ಅಗಲದ ಸುರಂಗ ಮಾರ್ಗವಿದ್ದು, ಕೋಟೆಯ ಒಳ ಭಾಗದಲ್ಲಿ ಸುಮಾರು ೨೫೦ ಮೀ. ದೂರದಲ್ಲಿರುವ ಇನ್ನೊಂದು ಭಾವಿಗೆ ಪ್ರವೇಶ ಕಲ್ಪಿಸುತ್ತಿದ್ದು, ಈಗ ಪ್ರವೇಶ ದ್ವಾರ ಮತ್ತು ಆ ಭಾವಿಯೂ ಹೂತುಹೋಗಿವೆ. ಬ್ರಿಟೀಷರ ಕಾಲದಲ್ಲಿ ಈ ಭಾವಿಯನ್ನು ಸಿಪಾಯಿಗಳು (ಸೋಲ್ಜರ್ಸ್) ಉಪಯೋಗಿಸುತ್ತಿದ್ದುದರಿಂದ ಆ ಹೆಸರು ಪ್ರಾಪ್ತವಾಗಿರುವಂತೆ ತೋರುತ್ತದೆ.

**ಕೋಟೆಯ ಒಳಭಾಗದ ಭಾವಿ :** ಕೋಟೆಯ ಒಳ ಭಾಗದಲ್ಲಿ, ಸೋಲ್ಜರ್ಸ್ ಭಾವಿಯಿಂದ ಪಶ್ಚಿಮ ದಿಕ್ಕಿನಲ್ಲಿ ನಗರೇಶ್ವರ ಗುಡಿಯ ಹಿಂಭಾಗದಲ್ಲಿರುವ ಭಾವಿಯು ಮೇಲಿನ ಭಾವಿಗಳಂತೆ ನಿರ್ಮಿತವಾಗಿದ್ದು, ಅದು ಈಗ ಪೂರಾ ಹೂತುಹೋಗಿದೆ. ಪರೀಕ್ಷಿಸಿ ನೋಡಿದಾಗ ಅದರ ಮೇಲಿನ ತುದಿಯ ಕಟ್ಟಡದ ಭಾಗವು ಮಾತ್ರ ಅಲ್ಲಲ್ಲಿ ಕಾಣಿಸುತ್ತದೆ. ಈ ಭಾವಿಯಿಂದ ಸೋಲ್ಜರ್ಸ್ ಭಾವಿಗೆ ಪ್ರವೇಶ ನೀಡುತ್ತಿದ್ದ ಸುರಂಗ ಮಾರ್ಗವು ಶತ್ರುಗಳ ಅಕ್ರಮಣ ಕಾಲದಲ್ಲಿ ತಪ್ಪಿಸಿಕೊಂಡು ಹೋಗಲು ನಿರ್ಮಿತವಾಗಿದ್ದು, ಈಗ ನೋಡಲು ಕಾಣದಂತಾಗಿದೆ.

**ದುರುಗಮ್ಮನ ಗುಡಿಯ ಮುಂದಿನ ಭಾವಿ :** ಬಳ್ಳಾರಿ ದುರುಗಮ್ಮನ ಗುಡಿಯ ಮುಂದಿನ ಮೈದಾನದ ಪಶ್ಚಿಮದ ಅಂಚಿನಲ್ಲಿ ಅದೇ ಕಾಲದಲ್ಲಿ ನಿರ್ಮಿಸಲಾಗಿರುವ ಸುಮಾರು ೫೫' X ೩೫' ಅಗಲದ ಆಯತಾಕಾರದ ಭಾವಿ ಇದೆ. ಕೆಳಗಡೆಯಿಂದ ದೊಡ್ಡ ಗಾತ್ರದ ಕೆತ್ತಿದ ಕಲ್ಲುಗಳಿಂದ ನಿರ್ಮಿತವಾದ ಕಟ್ಟಡವಿದ್ದು, ಮೇಲ್ಭಾಗದ ೧೦-೧೨ ಅಡಿಯ ಕಟ್ಟಡ ಕಾಲಾನಂತರದಲ್ಲಿ ಬಿದ್ದುಹೋಗಿದ್ದು ಅದನ್ನು ಚಿಕ್ಕ ಕಲ್ಲುಗಳಿಂದ ಪುನರ್ ನಿರ್ಮಿಸಲಾಗಿದೆ. ಇದರ ಉತ್ತರ ಭಾಗದಲ್ಲಿ ನೀರೆತ್ತುವ ಕಪ್ಪಲಿಯ ಸಾಧನವೂ ಇದ್ದು, ಈಗ ಹಾಳಾಗಿದೆ. ಈ ಭಾವಿಯಲ್ಲಿ ಈಗಲೂ ೧೦-೧೫ ಅಡಿ ಆಳ ನೀರು ಇದ್ದು, ಬಳಕೆಯಾಗದೆ ಭಾವಿ ಹಾಳು ಬಿದ್ದಿದೆ.

**ದೊಡ್ಡ ಭಾವಿ :** ಇದು ಬಳ್ಳಾರಿ ಕೋಟೆಯ ೨ನೇ ದ್ವಾರದ ಹೊರಭಾಗದಲ್ಲಿ ಬಳ್ಳಾರಿ ಹೊಸಪೇಟೆ ಹೆದ್ದಾರಿಯ ಪಕ್ಕದಲ್ಲಿದೆ. ಇದು ಸುಮಾರು ೭೦' ಉದ್ದ X೫೦' ಅಗಲ ಆಯತಾಕಾರದಲ್ಲಿದ್ದು, ಸುತ್ತಲೂ ಕೆತ್ತಿದ ಕಲ್ಲುಗಳಿಂದ ಹೊಂದಿಸಿ ನಿರ್ಮಿಸಲಾಗಿದೆ. ಮೇಲಿನಿಂದ ೨೫' ಕೆಳಗಡೆ ಕಟ್ಟಡದ ಸುತ್ತಲೂ ೮' ಅಗಲದ ಕಟ್ಟೆಯಿದ್ದು, ಇದರ ಉತ್ತರ ದಿಕ್ಕಿನಲ್ಲಿ ಭಾವಿಯಿಂದ ನೀರೆತ್ತಲು ಯಂತ್ರವನ್ನು ಜೋಡಿಸಿ ಕೋಣೆ ಕಟ್ಟಲಾಗಿದೆ. ಈ ಭಾವಿಯಿಂದ ನೀರನ್ನು ನಗರದ ಬೇಕಾದ ಜನರಿಗೆ ಟ್ಯಾಂಕರ್‌ಗಳ ಮೂಲಕ ಒದಗಿಸಲಾಗುತ್ತದೆ. ಈ ಭಾವಿಯ ಹಿಂಭಾಗದಲ್ಲಿ ಬೆಟ್ಟದ ಮೇಲಿನಿಂದ ಹರಿದು ಬರುವ ನೀರಿನ ಕೆರೆ ಇರುವದರಿಂದ ಈ ಭಾವಿಯಲ್ಲಿ ಸದಾ ಕಾಲದಲ್ಲಿ ನೀರು ಇರುತ್ತದೆ. ಈಗ್ಗೆ

೨ ವರ್ಷಗಳ ಹಿಂದೆ ಈ ನೀರನ್ನು ಉಪಯೋಗಿಸಿಕೊಂಡು ಪಕ್ಕದಲ್ಲಿ ಚಿಕ್ಕ ಪಾರ್ಕ್‌ನ್ನು ನಿರ್ಮಿಸಲಾಗಿದೆ.

**ಬಳ್ಳಾರಿ ಗುಡ್ಡದ ಹಿಂಬದಿಯ ಭಾವಿ ಮತ್ತು ಮಂಟಪ:** ಬಳ್ಳಾರಿ ಗುಡ್ಡದ ಪಶ್ಚಿಮ ಭಾಗದಲ್ಲಿ ನಾಗರ ಕೆರೆಯ ಪಕ್ಕದಲ್ಲಿ ಅದೇ ಕಾಲದಲ್ಲಿ ಒಂದು ಭಾವಿಯನ್ನು ಮತ್ತು ಅದರ ಪಕ್ಕದಲ್ಲಿ ಸಿಂಹಾಸನದ ಕಟ್ಟೆ (ಮಂಟಪ)ಯನ್ನು ನಿರ್ಮಿಸಿದ ಬಗ್ಗೆ ಕೈಫಿಯತ್ತಿನಿಂದ ತಿಳಿದುಬರುತ್ತದೆ. ಆದರೆ ಆ ಮಂಟಪ ಬಿದ್ದುಹೋಗಿದ್ದು, ಆ ಭಾವಿ ಕೂಡ ಪೂರ್ಣ ಮುಚ್ಚಿಹೋಗಿದೆ. ಅವುಗಳನ್ನು ನಿರ್ಮಿಸಿದ್ದ ೧೦'-೧೨' ಉದ್ದದ, ೨' ದಪ್ಪದ ತೊಲೆಗಳೂ ಕಲ್ಲುಗಳೂ ಮಾತ್ರ ಅವುಗಳ ಕುರುಹಾಗಿ ಅಲ್ಲಿ ಬಿದ್ದಿವೆ. ಆ ಪ್ರದೇಶವನ್ನು ಇತ್ತೀಚೆಗೆ ಸಮತಟ್ಟಾಗಿ ಮಾಡಿ ಮನೆ ನಿವೇಶನಗಳನ್ನಾಗಿ ಮಾಡಲಾಗಿದೆ. ಇನ್ನು ಕೆಲವು ದಿನಗಳಲ್ಲಿ ಅಲ್ಲಿನ ಸ್ಮಾರಕಗಳ ಕುರುಹುಗಳೂ ನೋಡಲು ಸಿಗುವುದಿಲ್ಲ. ಇದೇ ರೀತಿ ಬಳ್ಳಾರಿ ನಗರದ ಇತರ ಭಾಗಗಳಲ್ಲಿದ್ದ ಎರಡು ಭಾವಿಗಳು ಪೂರಾ ಮುಚ್ಚಿಹೋಗಿ ಕುರುಹುಗಳು ಇಲ್ಲದಾಗಿವೆ.

**ಇತರ ಊರುಗಳ ಭಾವಿಗಳು :** ಬಳ್ಳಾರಿಯಿಂದ ೧೫ ಕಿ.ಮೀ. ದೂರದಲ್ಲಿರುವ ಮೋಕಾ ಗ್ರಾಮದ ಆಸುಪಾಸಿನಲ್ಲಿ ಆ ಕಾಲದಲ್ಲಿ ಅಂದರೆ ಹಂಡೆ ವಂಶದ ಪಾಳೇಗಾರರ ಕಾಲದಲ್ಲಿ ನಿರ್ಮಿಸಿದ್ದ ೨ ಭಾವಿಗಳು ಇವೆ. ಬಳ್ಳಾರಿಯಿಂದ ೨೦ ಕಿ.ಮೀ. ದೂರದಲ್ಲಿರುವ ಕೊರ್ಲಗುಂದಿ ಗ್ರಾಮದಲ್ಲಿಯೂ ಭಾವಿಯಿದ್ದು, ಸುಸ್ಥಿತಿಯಲ್ಲಿದ್ದು, ಗ್ರಾಮಸ್ಥರು ಅದರ ನೀರನ್ನು ಈಗಲೂ ಬಳಸುತ್ತಿದ್ದಾರೆ. ಬಳ್ಳಾರಿ ಕಂಪ್ಲಿ ರಸ್ತೆಯಲ್ಲಿ ೩೫ ಕಿ.ಮೀ. ದೂರದಲ್ಲಿ ಕಲ್ಲುಕಂಬ ಗ್ರಾಮದ ಪಕ್ಕದಲ್ಲಿಯೂ ಒಂದು ಭಾವಿಯಿದ್ದು, ಅದರ ಕಟ್ಟಡ ಸುಸ್ಥಿಯಲ್ಲಿದ್ದು, ಭಾವಿಯಲ್ಲಿ ನೀರು ಇಲ್ಲದೆ ಕಸ ಕಡ್ಡಿ ಹಾಕಲಾಗಿದೆ.

**ಸಮಾರೋಪ :** ಮೇಲೆ ತಿಳಿಸಿದ ಎಲ್ಲಾ ಭಾವಿಗಳು ಉತ್ತಮವಾದ ವಾಸ್ತುಶಿಲ್ಪ, ಕಲೆ, ನೈಪುಣ್ಯತೆ ಮತ್ತು ಬಂಧುರತೆಯಿಂದ ನಿರ್ಮಿಸಲ್ಪಟ್ಟಿವೆ. ಅವುಗಳನ್ನು ಪ್ರಮುಖ ಸ್ಥಳಗಳಲ್ಲಿ, ಹೆದ್ದಾರಿಗಳ ಪಕ್ಕದಲ್ಲಿ ನಿರ್ಮಿಸಿದ್ದು, ನಿರ್ಮಾತೃಗಳ ಉದ್ದೇಶ ಪ್ರಶಂಸನೀಯವಾದದ್ದು. ಆ ಕಾಲದ ಆಡಳಿತಗಾರರು ಕೇವಲ ತಮ್ಮ ಸುಖ, ಸಂತೋಷ ಮತ್ತು ಲೋಲುಪ್ತತೆಗಳಲ್ಲಿ ಮುಳುಗದೆ ಪ್ರಜೆಗಳ, ಜನ ಸಾಮಾನ್ಯರ ಮತ್ತು ಪ್ರಯಾಣಿಕರ ಸುಖ, ಸೌಕರ್ಯ ಮತ್ತು ಅನುಕೂಲತೆಗಳ ಬಗ್ಗೆ ಗಮನ ಹರಿಸಿ, ದಾನ ಧರ್ಮದ ಕಾರ್ಯಗಳನ್ನು ಮಾಡಿ ಅನುಕರಣೀಯರಾಗಿದ್ದಾರೆ. ಪರಹಿತದ ಅವರ ನಿರ್ಮಾಣಗಳನ್ನು ಇಂದಿನ ಜನರು ತಮ್ಮ ಅನುಕೂಲಕ್ಕೆ ಮತ್ತು ಸ್ವಾರ್ಥಕ್ಕೆ ಬಳಸಿಕೊಂಡು ಹಾಳು ಮಾಡುತ್ತಿರುವುದು ಅತ್ಯಂತ ಖೇದಕರವಾಗಿದೆ. ಇನ್ನು ಮೇಲಾದರೂ ನಮ್ಮ ಸಂಸ್ಕೃತಿ ಮತ್ತು ಪರಂಪರೆಯನ್ನು ಉಳಿಸುವ ಕಾರ್ಯವನ್ನು ಕೈಗೊಳ್ಳಬೇಕಾಗಿದೆ.



ಹೆಚ್. ಪದ್ಮಾ ವಿಠಲ್*

# ಹಗರಿಬೊಮ್ಮನಹಳ್ಳಿ ಮತ್ತು ತಾಲೂಕಿನ ಐತಿಹಾಸಿಕ ಪರಂಪರೆ

ಬಳ್ಳಾರಿ ಜಿಲ್ಲೆಯ ಪಶ್ಚಿಮ ತಾಲ್ಲೂಕುಗಳಲ್ಲೊಂದಾದ ಹಗರಿಬೊಮ್ಮನಹಳ್ಳಿ ತಾಲ್ಲೂಕು ಕೇಂದ್ರ ಬಳ್ಳಾರಿಯಿಂದ ೯೮ ಕಿ.ಮೀ ದೂರದಲ್ಲಿದ್ದು, ಪ್ರಸಿದ್ಧ ಹಂಪೆಯಿಂದ ೬೦ ಕಿ.ಮಿ ದೂರದಲ್ಲಿ ನೆಲೆಗೊಂಡಿದೆ. ಹಗರಿಬೊಮ್ಮನಹಳ್ಳಿ ತಾಲೂಕಿನ ಅನೇಕ ಪ್ರಸಿದ್ಧ ಸ್ಥಳಗಳು ಇತಿಹಾಸ ಪರಂಪರೆ ಕೇಂದ್ರಗಳೇ ಆಗಿವೆ. ಚಿಕ್ಕಹಗರಿ ನದಿಯ ದಂಡೆ ಮೇಲೆ ಕಟ್ಟಿಕೊಂಡ ಅದರ ಬದುಕು. ನಾರಾಯಣದೇವರಕೆರೆ ಎಂಬ ಸುಪ್ರಸಿದ್ಧ ಸ್ಥಳ ತುಂಗಭದ್ರ ಅಣೆಕಟ್ಟೆಯಲ್ಲಿ ಮುಳುಗಡೆಯಾದ ಸಂದರ್ಭದಲ್ಲಿ ಮರುವಸತಿ ಪ್ರದೇಶವೂ ಆಗಿ ಅನೇಕ ಕುಟುಂಬಗಳಿಗೆ ನೆಲೆ ಒದಗಿಸುವುದರೊಟ್ಟಿಗೆ ಭಿನ್ನ ಸಂಸ್ಕೃತಿ ನೆಲೆಯೂರಲು ಅವಕಾಶವಾಯಿತು. ತಾಲೂಕಿನ ದಶಮಾಪುರ ಗ್ರಾಮದ ಪರಿಸರದಲ್ಲಿ ಬೃಹತ್ ಶಿಲಾಯುಗಕ್ಕೆ ಸೇರಿದ ನೆಲೆಗಳ ಬಗ್ಗೆ ಡಾ. ಎಂ. ದುರುಗಪ್ಪನವರು ಈಗಾಗಲೇ ಬೆಳಕು ಚೆಲ್ಲಿದ್ದು, ಆ ಬಗ್ಗೆ ಹೆಚ್ಚಿನ ಸಂಶೋಧನೆಗೆ ಅವಕಾಶ ಒದಗಿಸಿಕೊಟ್ಟಿದ್ದಾರೆ. ಸದ್ಯ ಹಗರಿಬೊಮ್ಮನಹಳ್ಳಿಯ ಐತಿಹಾಸಿಕ ಘಟನೆಯೊಂದನ್ನು ತೆರೆದಿಟ್ಟು ತಾಲೂಕಿನ ಚಾರಿತ್ರಿಕ ಪರಂಪರೆಯ ಬಗ್ಗೆ ಬೆಳಕು ಚೆಲ್ಲುತ್ತಾ ಇಂದಿನ ಬದಲಾದ ಸಂದರ್ಭದವರೆಗೆ ಒಂದು ಕಿರುನೋಟ ಬೀರುವ ಪ್ರಯತ್ನ ಇದಾಗಿದೆ.

ಮೂಲ ಹಳೇ ಹಗರಿಬೊಮ್ಮನಹಳ್ಳಿ ದೇವಸ್ಥನ ೧೫ನೇ ಶತಮಾನದ ವಿಜಯನಗರ ಶೈಲಿಯ ಕಲ್ಲೇಶ್ವರವಿದ್ದು ಊರಿಗೆ ೬ ಶತಕಗಳ ಅಸ್ತಿತ್ವವನ್ನು ದೊರಕಿಸಿ ಕೊಡುತ್ತದೆ. ಗರ್ಭಗೃಹ, ಅಂತರಾಳ ಹಾಗೂ ಸಭಾಮಂಟಪದಿಂದ ಕೂಡಿರುವ ದೇವಾಲಯ ಜೀರ್ಣೋದ್ಧಾರಗೊಂಡಿದೆ. ಮುಂಭಾಗದಲ್ಲಿ ವೀರಗಲ್ಲೊಂದಿದ್ದು ಅದರಲ್ಲಿನ ಶಾಸನ ಬರಹ ಸ್ಪಷ್ಟವಾಗಿಲ್ಲ. ಅಂದಿಗೆ ಇದೊಂದು ಕುಗ್ರಾಮವಾಗಿದ್ದು, ವಿಶೇಷವಾಗಿ ಗೊಲ್ಲರು ಹಾಗೂ ಕುರುಬರು ವಾಸಿಸುತ್ತಿದ್ದರೆಂದು ಐತಿಹ್ಯವಿದೆ. ಇದಕ್ಕೆ ಹೊಂದುವಂತೆ ಊರಿನ ಪಶ್ಚಿಮ ದಿಕ್ಕಿನಲ್ಲಿ ಕಿಲೋ ಮೀಟರ್ ದೂರದ ಹೊಲವೊಂದರ ಹಿಂಭಾಗದಲ್ಲಿ





ಒಂದು ಅತ್ಯಂತ ಹಳೆಯ ಕುಬ್ಜ ದೇವಸ್ಥಾನ ಎಂದು ಕರೆಯಲ್ಪಡುವ ಕಲ್ಲುಚಪ್ಪಡಿ ಕಟ್ಟಡವಿದ್ದು ಒಳಗಡೆ ಗೋಡೆ ಮೇಲೆ ಉಬ್ಬುಚಿತ್ರಗಳಿವೆ. ಅವುಗಳಿಗೆ ಸುಣ್ಣ ಬಳಿದು ಬೀರದೇವರೆಂದು ಪೂಜಿಸುತ್ತಾರೆ. ಇದಲ್ಲದೆ ಹಗರಿನದಿಯ ಮೇಲ್ಭಾಗದಲ್ಲಿ ಒಂದು ಬಸವಣ್ಣನ ಬುರಜು ಇದ್ದು ವಿಜಯನಗರದ ಕಾಲಘಟಕ್ಕೆ ಸಾಕ್ಷಿ ಎಂದು ಸಂಶೋಧಕರು ಅಭಿಪ್ರಾಯ ಪಟ್ಟಿದ್ದಾರೆ.

ಇತಿಹಾಸ ಪುಟಗಳನ್ನು ಬೆದಕಿದಂತೆ ತಾಲೂಕಿನ ಕೋಗಳಿ ಗ್ರಾಮ ಅತ್ಯಂತ ಪುರಾತನ ಇತಿಹಾಸ ನೆಲೆಯಾಗಿರುವುದು ಅರಿವಾಗುತ್ತದೆ. ಅಂತೆಯೇ ಬೆಣ್ಣೆಕಲ್ಲು, ಅಂಬಳಿ, ಅಲಬೂರು, ಮೋರಗೇರಿ ಮುಂತಾದ ಸ್ಥಳಗಳು ಐತಿಹಾಸಿಕ ಸ್ಮಾರಕಗಳಾಗಿವೆ. ಕಲ್ಯಾಣ ಚಾಲುಕ್ಯರ, ರಾಷ್ಟ್ರಕೂಟರ, ಹೊಯ್ಸಳರ ಆಳ್ವಿಕೆಗೆ ಈ ಪ್ರದೇಶ ಒಳಪಡುವುದರ ದಾಖಲೆಯ ಜೊತೆಗೆ ಗಂಗರ ಉಲ್ಲೇಖವೂ ಇದೆ. ವಿಜಯನಗರ ಸಾಮ್ರಾಜ್ಯದಲ್ಲಿದ್ದು ನಂತರ ಪಾಳೇಗಾರರ ಆಳ್ವಿಕೆಗೆ ಒಳಪಟ್ಟಿದೆ. ಎಲ್ಲಕ್ಕಿಂತ ವಿಶೇಷವಾಗಿ ಈ ಸ್ಥಳದಲ್ಲಿ ನಡೆದಿದೆ ಎನ್ನಲಾದ ಒಂದು ಐತಿಹಾಸಿಕ ಘಟನೆಯು ಗಮನಾರ್ಹವಾಗಿದೆ. ಹಗರಿಬೊಮ್ಮನಹಳ್ಳಿ ಒಂದು ಬಯಲು ಸೀಮೆ. ಮಹತ್ವಾಕಾಂಕ್ಷಿ ಯುದ್ಧಪ್ರೇಮಿ ಅರಸುಗಳ ಹೋರಾಟದ ಸಂದರ್ಭದಲ್ಲಿ ದಂಡು ಪ್ರದೇಶವಾಗಿರಲಿಕ್ಕೆ ಸಾಕು. ಇಂದೂ ಇಲ್ಲೇ ಸಮೀಪದಲ್ಲಿರುವ "ಮಿಲಿಟರಿ ಬಯಲು" ಎಂಬ ಪ್ರದೇಶವೂ ವಿಜಯನಗರದ ದಂಡು,

*ಡಾ. ಎನ್.ಪಿ. ವಿಠಲ್, 'ಅಶ್ವಿನಿ', ಹಗರಿಬೊಮ್ಮನಹಳ್ಳಿ.

ಹರಪನಹಳ್ಳಿಯವರ, ಟಿಪ್ಪುವಿನ ದಂಡಿಗೆ ನಿಲುಗಡೆಯಾಗಿರಬಹುದೆಂದು ಊಹೆ ಸಂಶೋಧಕರಲ್ಲಿದೆ.

ವಿಜಯನಗರೋತ್ತರ ವಿಜೃಂಭಿಸಿದ ಅನೇಕ ಪಾಳೇಗಾರರು ಕಿರಾತಪಡೆಯ ದಂಡಾಧಿಕಾರಿಗಳಾಗಿದ್ದು ಸ್ವತಂತ್ರ ಪಾಳೆಯಪಟ್ಟು ರಚಿಸಿಕೊಂಡವರು. ಅವರಲ್ಲಿ ಹರಪನಹಳ್ಳಿಯವರು ಪ್ರಮುಖರು. ಒಬ್ಬ ಮಹಿಳೆಯೂ ಸೇರಿದಂತೆ ೧೬ ಜನ ಪಾಳೆಗಾರರು ಸುಮಾರು ೨೫೦ ವರ್ಷಗಳ ಕಾಲ ನಡೆಸಿದ್ದು ಬಳ್ಳಾರಿ ಗ್ಯಾಸೆಟಿಯರ್‌ನಲ್ಲಿ ಉಲ್ಲೇಖವಿದೆ. ಇವರು ಹೊಸಪೇಟೆ ಬಳಿಯ ನಾರಾಯಣ ದೇವರಕೆರೆಯನ್ನು ತಮ್ಮ ಈಶಾನ್ಯ ಗಡಿನಾಡಿನ ರಕ್ಷಣಾ ಕೋಟೆಯನ್ನಾಗಿಯೂ ಹಾಗೂ ಎರಡನೇ ರಾಜಧಾನಿಯಂತೆ ಬೆಳೆಸಿದ್ದರು. ಇಲ್ಲಿನ ಕೋಟೆ ಮತ್ತು ಜಲದುರ್ಗವನ್ನು ಭರಮನಗೌಡನೆಂಬ ಸಾಮಂತ ಕಟ್ಟಿಸಿ ರಕ್ಷಣೆಗೆ ಸ್ವಂತ ನೆಲೆನಿಂತದ್ದು ಕಂಡುಬರುತ್ತದೆ. ೧೮ನೇ ಶತಮಾನದಲ್ಲಿ ಮೈಸೂರನ್ನು ಆಳಿದ ಹೈದರಾಲಿ ಮತ್ತು ಟಿಪ್ಪುಸುಲ್ತಾನರು ಮಹತ್ವಾಕಾಂಕ್ಷಿಗಳು, ಶೂರರು, ಯುದ್ಧವೀರರು ಅಂತೆಯೇ ಅವರ ಮಿತ್ರದ್ರೋಹದ ಇನ್ನೊಂದು ಘಟನೆಗೆ ಹಗರಿಬೊಮ್ಮನಹಳ್ಳಿ ಸಾಕ್ಷಿಯಾಗುವುದು ಇತಿಹಾಸ. ಹೈದರನ ನಂತರ ಕ್ರಿ.ಶ. ೧೭೮೨ ರಲ್ಲಿ ಪಟ್ಟಾಭಿಷಿಕ್ತನಾದ ಟಿಪ್ಪುಸುಲ್ತಾನ ಮೈಸೂರು ಪ್ರಾಂತ್ಯದ ಉತ್ತರಗಡಿಯಿಂದಾಚೆ ಅನೇಕ ಬಾರಿ ಆಕ್ರಮಣ ನಡೆಸಿ ಚಿತ್ರದುರ್ಗ, ಜರ್ಮಲಿ, ಗುಡೇಕೋಟೆವರೆಗೆ ಬಂದಿರುತ್ತಾನಾದರೂ ಕೊಪ್ಪಳ ದುರ್ಗದ ಕಡೆ ಹೋಗಿರುವುದಿಲ್ಲ, ಈ ನಡುವೆ ಹರಪನಹಳ್ಳಿ ಪಾಳೇಗಾರರು ಮಾತ್ರ ಅವನೊಡನೆ ವಿಶ್ವಾಸ ಮತ್ತು ಸ್ನೇಹದಿಂದಿಂದ್ದು ಉತ್ತಮ ಸಂಬಂಧ ಇರಿಸಿಕೊಂಡವರು.

ಕ್ರಿ.ಶ. ೧೭೬೮ ರಿಂದ ೧೭೮೭ರ ವರೆಗೆ ಹರಪನಹಳ್ಳಿಯ ಪಾಳೇಗಾರನಾಗಿದ್ದ ಬಸಪನಾಯಕನ ದುರಂತ ಅಂತ್ಯಕ್ಕೆ ಆತನ ಶೂರತ್ವ, ಸ್ನೇಹ ಉತ್ಸಾಹಗಳೇ ಕಾರಣವಾಗುತ್ತದೆ. ಸೋಮಶೇಖರನಾಯಕ ಕ್ರಿಶ ೧೭೪೨ ರಿಂದ ೧೭೬೬ರ ವರೆಗೆ ಆಳಿದ ಸುಪ್ರಸಿದ್ಧ ಪಾಳೇಗಾರ. ಆತನ ಮಡದಿ ಸೋಮಮ್ಮಾಜಿ ಅತ್ಯಂತ ಚತುರಳೂ, ಕುಶಾಗ್ರಮತಿಯೂ ಆಗಿ ಆಡಳಿತ ನಡೆಸಿದ ಮಹಿಳೆ. ಗಂಡನ ಸಾವು, ಇದ್ದ ಒಬ್ಬನೇ ಮಗನ ಅಕಾಲಿಕ ಮರಣದ ನಂತರ ವೀರಬಸಪ್ಪನೆಂಬುವನನ್ನು ಆಕೆ ದತ್ತು ಪಡೆಯುತ್ತಾಳೆ. ಆತ ಲೋಲುಪ ಮತ್ತು ಹೇಡಿಯಾಗಿದ್ದು ಹೆಚ್ಚು ದಿನ ಬದುಕದೆ ಗತಿಸಿದಾಗ ಬಸಪ್ಪನಾಯಕನನ್ನು ದತ್ತು ಪಡೆದು ಪಟ್ಟ ಕಟ್ಟುತ್ತಾಳೆ. ಈತ ಶೂರ, ವೀರಾಗ್ರಣಿ, ದೈವ, ಗುರು, ಹಿರಿಯರಲ್ಲಿ ಭಕ್ತಿ ಉಳ್ಳವ. ತಂದೆಯ ಬಗ್ಗೆ ಅಪಾರ ಗೌರವದಿಂದಾಗಿ ತನ್ನ ಹೆಸರಿಗೆ ಸೋಮಶೇಖರ ಬಸಪ್ಪನಾಯಕನೆಂದು ಸೇರಿಸಿಕೊಂಡವ. ಮೈಸೂರಿನ ಹೈದರ-ಟಿಪ್ಪುವಿನೊಡನೆ ಅತ್ಯಂತ ವಿಶ್ವಾಸ ಸ್ನೇಹ ಇರಿಸಿದವ. ದಾನ-ಧರ್ಮದಲ್ಲಿ ಕೊಡುಗೈದಾನಿ. ಮಠ-ಮಾನ್ಯಗಳಿಗೆ ಗ್ರಾಮಗಳನ್ನು ದಾನವಾಗಿತ್ತ ಶಾಸನ, ದಾಖಲೆಗಳು ಕಂಡುಬರುತ್ತವೆ. ಇವನ ಪರಮ ಶೂರತನ ಮಹತ್ವಾಕಾಂಕ್ಷೆಗಳು ಸಾವಿಗೆ ಆಹ್ವಾನ ಕೊಟ್ಟದ್ದು ಇತಿಹಾಸದ ದಾಖಲೆ.

ಕ್ರಿ.ಶ. ೧೭೮೬ ರಲ್ಲಿ ಟಿಪ್ಪುವಿನ ಉತ್ತರ ಗಡಿಯ ಪ್ರಮುಖ ದುರ್ಗ ಬಾದಾಮಿ ಮರಾಠರ ವಶವಾಗುತ್ತದೆ. ಶಿರಹಟ್ಟಿ, ಡಂಬಳ, ಕನಕಗಿರಿ, ಆನೆಗುಂದಿಗಳು ಮರಾಠರ ಅಧಿಕಾರ ಒಪ್ಪಿಕೊಂಡು ಸ್ವತಂತ್ರರಾಗುತ್ತಾರೆ. ಈಗ ಟಿಪ್ಪು ಕೊಪ್ಪಳ ದುರ್ಗದ ಆಕ್ರಮಣಕ್ಕೆ ಸಿದ್ಧನಾಗುತ್ತಾನೆ. ಆಪ್ತ ಪಾಳೆಗಾರರ ೨ ನೇ ರಾಜಧಾನಿ ನಾರಾಯಣದೇವರ ಕೆರೆಗೆ ಬಂದು ಬೀಡು ಬಿಡುತ್ತಾನೆ. ಅಲ್ಲಿನ ಅಧಿದೈವವಾದ ನಾರಾಯಣದೇವರು ಮತ್ತು ಶ್ರೀದೇವಿ ಭೂದೇವಿಯರಿಗೆ ತನ್ನ ಕಾರ್ಯ ಸಾಧನೆಯಾದರೆ ಕಾಣಿಕೆ ಸಲ್ಲಿಸುವ ಹರಕೆಯನ್ನು ಕೈಗೊಳ್ಳುತ್ತಾನೆ. ಕೊಪ್ಪಳ ದುರ್ಗಕ್ಕೆ ಮುತ್ತಿಗೆ ಹಾಕಿ ೭ ದಿನಗಳ ಕಾಲ ಸತತ ಪ್ರಯತ್ನ ಮಾಡಿದರೂ ಜಯ ದೊರೆಯದಾಗುತ್ತದೆ. ವಿಷಯ ಅರಿತ ಬಸಪ್ಪನಾಯಕ ಸುಲ್ತಾನನ ಮನ್ನಣೆಗಳಿಸಲೋಸುಗ ಸ್ವತಃ ಸೈನ್ಯ ಸಮೇತ ಹೋಗಿ ಕೊಪ್ಪಳ ದುರ್ಗವನ್ನು ಮುತ್ತಿ ಹೋರಾಟ ಮಾಡುತ್ತಾನೆ. ಅದನ್ನು ಗೆದ್ದು ಸುಲ್ತಾನನಿಗೆ ಜಯಘೋಷ ಮಾಡುತ್ತಾ ಬಂದು ಅರ್ಪಿಸುತ್ತಾನೆ. ಮೇಲ್ನೋಟಕ್ಕೆ ಸಂತಸಗೊಂಡ ಟಿಪ್ಪು ಬಸಪ್ಪನಾಯಕನ ಶೂರತ್ವಕ್ಕೆ ಅಸೂಯೆಪಡುತ್ತಾನೆ. ಭಯವೂ ಉಂಟಾಗುತ್ತದೆ. ಇಂತಹ ಶೂರ ಮುಂದೊಂದು ದಿನ ತನ್ನ ಸೆರಗಿನ ಕೆಂಡ ಎಂದು ಭಾವಿಸಿ ಅಧೈರ್ಯ ಹಾಗೂ ಚಿಂತೆಗೀಡಾಗುತ್ತಾನೆ. ನಾರಾಯಣ ಶ್ರೀದೇವಿ-ಭೂದೇವಿಯರಿಗೆ ರತ್ನ ಖಚಿತ ಕಿರೀಟಗಳನ್ನು ಅರ್ಪಿಸಿ ಹರಕೆ ತೀರಿಸಿ ಎಲ್ಲರಿಂದ ಮನ್ನಣೆಗೆ ಪಾತ್ರನಾಗುತ್ತಾನೆ. ಇದು ಟಿಪ್ಪುವಿನ ಒಂದು ಮುಖವಾದರೆ ಇನ್ನೊಂದು ಬೀಭತ್ಸ ಮಿತ್ರದ್ರೋಹದ ಮುಖದರ್ಶನ ಹಗರಿಬೊಮ್ಮನಹಳ್ಳಿಯಲ್ಲಿ ಘಟಿಸಿ ಇತಿಹಾಸದ ಪುಟದಲ್ಲಿ ದಾಖಲಾಗಿ ಬಿಡುತ್ತದೆ. (ಇಂದೂ ಮರಿಯಮ್ಮನಹಳ್ಳಿಯ ನಾರಾಯಣದೇವರ ರಥೋತ್ಸವ ಸಂದರ್ಭದಲ್ಲಿ ಈ ದೇವರ ಕಿರೀಟಗಳು ನೋಡ ಸಿಗುತ್ತವೆ.)

ತಕ್ಷಣ ರಾಜಧಾನಿ ಶ್ರೀರಂಗಪಟ್ಟಣಕ್ಕೆ ಹಿಂದಿರುಗಿದ ಸುಲ್ತಾನ ತಿರುಗಿ ಹಗರಿಬೊಮ್ಮನಹಳ್ಳಿಗೆ ಬಂದು ವಾಸ್ತವ್ಯ ಹೂಡುತ್ತಾನೆ. ಬಂದವನೇ ಬಸಪ್ಪನಾಯಕನಿಗೆ "ಕೊಪ್ಪಳ ದುರ್ಗ ಜಯಿಸಿಕೊಟ್ಟದ್ದಕ್ಕೆ ಪಾರಿತೋಷಕ ಕೊಡುವುದಾಗಿ

ಸಂಕಲ್ಪಮಾಡಿದ್ದೇವೆ. ಕಾರಣಾಂತರದಿಂದ ಹಗರಿಬೊಮ್ಮನಹಳ್ಳಿಗೆ ಬಂದ್ದಿದೇವೆ. ತಕ್ಷಣ ಇಷ್ಟಮಿತ್ರರೊಡಗೂಡಿ ಹಗರಿಬೊಮ್ಮನಹಳ್ಳಿಗೆ ಬರುವುದು" ಎಂದು ಆಹ್ವಾನ ಕಳಿಸುತ್ತಾನೆ. ಪಾಳೇಗಾರನಿಗೆ ಪರಮಾನಂದವಾಗುತ್ತದೆ. ಆದರೆ ಆತನ ಅಮಾತ್ಯ ಹಂಪರಸಪ್ಪನೆಂಬಾತನಿಗೆ ಇದರ ಹಿಂದೆ ಸಂಚೊಂದಿದೆ ಎನ್ನಿಸುತ್ತದೆ. ಹಗರಿಬೊಮ್ಮನಹಳ್ಳಿಗೆ ಹೋಗಲು ಹರಪನಹಳ್ಳಿ ಮೂಲಕ ನೇರಮಾರ್ಗ. ಎಲ್ಲೋ ಸುತ್ತಿ-ಬಳಸಿ ಅಲ್ಲಿಗೆ ಹೋಗಿ ಕರೆಯ ಕಳಿಸಿದುದರ ಉದ್ದೇಶವೇನು? ಪಾರಿತೋಷಕ, ಗೌರವ ಅರ್ಪಣೆಗೆ ಹರಪನಹಳ್ಳಿ ಕೋಟೆ ಅಥವಾ ನಾರಾಯಣದೇವರಕೆರೆ ಲೋಕಮಾನ್ಯ. ಅದನ್ನು ಬಿಟ್ಟು ಕುಗ್ರಾಮ ಹಗರಿಬೊಮ್ಮನಹಳ್ಳಿ ಆರಿಸುದುದು ದುರುದ್ದೇಶ ಎಂದು ಊಹಿಸಿ ದೊರೆಯನ್ನು ತಡೆಯಲು ಬಹುವಿಧ ಪ್ರಯತ್ನಿಸುತ್ತಾನೆ. ಶೂರಾಗ್ರೇಶರನಾದ ತನ್ನನ್ನು ಅದೂ ತನ್ನ ಆಳ್ವಿಕೆಯ ಪ್ರದೇಶದಲ್ಲಿ ಸುಲ್ತಾನ ಏನು ಮಾಡಲು ಸಾಧ್ಯ ಎಂದು ಚಿಂತಿಸಿ ಬಸಪ್ಪನಾಯಕ ಹೊರಡಲು ನಿಶ್ಚಯಿಸುತ್ತಾನೆ. ಕೊನೆಗೆ ರಾಜಸ್ತ್ರೀಯರನ್ನು, ರಾಣಿವಾಸದವರನ್ನಾದರೂ ತಡೆಯಲು ಹಂಪರಸಯ್ಯ ಪ್ರಯತ್ನಿಸುತ್ತಾನೆ. ಆದಾಗ್ಯೂ ಅಣ್ಣ ಅಯ್ಯಪ್ಪ, ಅತ್ತಿಗೆ, ಅಣ್ಣನ ಇಬ್ಬರ ಮಕ್ಕಳು, ಅನೇಕ ಶೂರ ನಾಯಕರನ್ನೂ, ಕೆಲ ರಾಜಸ್ತ್ರೀಯರನ್ನು ಸ್ವಲ್ಪವೇ ಫೌಜನ್ನು ತೆಗೆದುಕೊಂಡು ಬಸಪ್ಪನಾಯಕ ಹಗರಿಬೊಮ್ಮನಹಳ್ಳಿಗೆ ತಲುಪುತ್ತಾನೆ. ಮಿತ್ರದ್ರೋಹಿ ಟಿಪ್ಪುಸುಲ್ತಾನ ನಾಯಕರನ್ನೊಳಗೊಂಡಂತೆ ಎಲ್ಲರನ್ನೂ ಬೇಡಿಗಳಿಂದ ಬಂಧಿಸಿ ಕಬ್ಬಾಳದುರ್ಗದ ಸೆರೆಮನೆಗೆ ಅಟ್ಟುತ್ತಾನೆ. ಕ್ರಿಶ. ೧೭೮೭ ರಲ್ಲಿ ತನ್ನ ರಾಜಸ್ತ್ರೀಯರೊಂದಿಗೆ ಶ್ರೀರಂಗಪಟ್ಟಣದ ಸೆರೆಮನೆಗೆ ದೂಡಲ್ಪಟ್ಟ ನಾಯಕ ಪ್ರಾಣತ್ಯಾಗ ಮಾಡಿದನೆಂದು ದಾಖಲೆಗಳಲ್ಲಿ ಹೇಳಲಾಗಿದೆ. ಹೀಗೊಂದು ಸ್ವಾರ್ಥ, ಮಿತ್ರದ್ರೋಹಕ್ಕೆ ಹಗರಿಬೊಮ್ಮನಹಳ್ಳಿ ಸಾಕ್ಷಿಯಾಗಿ ಇತಿಹಾಸದಲ್ಲಿ ಗುರುತಿಸಲ್ಪಡುತ್ತದೆ. ಈ ಘಟನೆ ಹರಪನಹಳ್ಳಿ ಪಾಳೇಗಾರಿಕೆಗೆ ಕೊಡಲಿಯ ಪೆಟ್ಟಾಗಿ ಪರಿಣಮಿಸುತ್ತದೆ. ಕೊಟ್ಟೂರು, ವೀರನದುರ್ಗ, ನಾರಾಯಣದೇವರಕೆರೆ, ಹರಪನಹಳ್ಳಿ, ಉಚ್ಚಂಗಿದುರ್ಗಗಳ ಮೇಲೆ ಒಂದೇ ಸಮಯಕ್ಕೆ ದಾಳಿ ಇಟ್ಟು ವಿಜಯಯಾತ್ರೆಯನ್ನು ಸುಲ್ತಾನ ಮುಂದುವರೆಸುತ್ತಾನೆಂದು ತಿಳಿದುಬರುತ್ತದೆ.

ಹಗರಿಬೊಮ್ಮನಹಳ್ಳಿ ತಾಲೂಕಿಗೆ ಸೇರಿದ ಇಂದಿನ ಹೋಬಳಿ ಗ್ರಾಮ ತಂಬ್ರಹಳ್ಳಿ ಐತಿಹಾಸಿಕವಾಗಿ ಪ್ರಸಿದ್ಧ ಸ್ಥಳ. ಹರಪನಹಳ್ಳಿಯನ್ನು ೩೪ ವರ್ಷಗಳ ದೀರ್ಘ ಕಾಲ ಆಳಿದ ಭರಮಣ್ಣ ನಾಯಕ(ಕ್ರಿಶ ೧೬೧೫ ರಿಂದ ೧೬೫೦)ನ ವೀರಸೇನಾಪತಿ ಓಬಳನಾಯಕ. ಅನೇಕ ಯುದ್ಧಗಳಲ್ಲಿ ಜಯಗಳಿಸಿಕೊಟ್ಟು ರಾಜ್ಯವಿಸ್ತರಣೆಗೆ ಕಾರಣನಾದವ ದೊರೆಗೆ ವಿಶೇಷ ಪ್ರೀತಿ ಪಾತ್ರ. ಹಾಗಾಗಿ ತಂಬ್ರಹಳ್ಳಿ ಕೋಟೆಯ ಸಾಮಂತನೆನಿಸಿ, ರಾಜನ ಅಗತ್ಯಕ್ಕೆ ನೆರವು ನೀಡುತ್ತ ನಿಷ್ಠಾವಂತನೆನಿಸಿದವನೆಂದು ಕಂಡು ಬರುತ್ತದೆ. ತಂಬ್ರಹಳ್ಳಿ ತಾಲೂಕು ಕೇಂದ್ರದಿಂದ ೧೮ ಕಿ.ಮೀ ದೂರದಲ್ಲಿದ್ದು, ತುಂಗಭದ್ರಾ ನದಿ ಸಮೀಪದಲ್ಲಿದೆ. ಸುಂದರ, ಫಲವತ್ತಾದ ಪರಿಸರ, ಊರಿನಿಂದ ೩ ಕಿ.ಮೀ ದೂರದ ಗುಡ್ಡದ ಮೇಲೆ ಶೇಷಶಾಯಿ ರಂಗನಾಥನ ದೇವಸ್ಥಾನ, ಲಕ್ಷ್ಮಿ ದೇವಸ್ಥಾನ, ಓಬಳನಾಯಕನಿಂದ ನಿರ್ಮಿತವಾಗಿದೆ. ಗೋಪುರದ ಮೇಲೆ ಬಾಲಕೃಷ್ಣ, ಉಗ್ರ ನರಸಿಂಹ, ವರಹಾಮೂರ್ತಿಗಳ ಕೆತ್ತನೆಯಿದ್ದು ಸದಾ ತಣ್ಣನೆಯ ಗಾಳಿಯಿಂದಾಗಿ ಗಾಳಿಗೋಪುರವೆಂದೇ ಕರೆಯಲ್ಪಡುತ್ತದೆ.

ಗುಡ್ಡದ ಕೆಳಗೊಂದು ಸುಂದರ ಬಾವಿ ಓಬಳನಾಯಕನಿಂದ ನಿರ್ಮಿತವಾಗಿದ್ದು, ಮುಖಮಂಟಪದ ಹೊರಮೈಯಲ್ಲಿ ಆಮೆ, ಮೀನು, ಗರುಡರ ಉಬ್ಬು ಚಿತ್ರಗಳಿವೆ. ಬಾವಿಯಲ್ಲಿ ಇಳಿದರೆ ಗೋಡೆಗಳ ಮೇಲೆ ಗೋಪಾಲಕೃಷ್ಣ, ಮತ್ಸ್ಯಾವತಾರ, ಕೂರ್ಮಾವತಾರ, ಕಾಳಿಂಗಮರ್ದನನ ಉಬ್ಬು ಚಿತ್ರಗಳಿವೆ. ಬಾವಿಯ ಮೇಲೆ ನೆಲಮಾಳಿಗೆ ಇದ್ದು ಅಲ್ಲಿಂದ ಇಳಿದು ನೋಡಿದರೆ ಬಾವಿಯ ಮೂರುಬದಿ ಗೋಡೆಗಳ ಮೇಲೆ ಗರುಡ, ಗಣೇಶ, ಆಂಜನೇಯ ಶಿಲ್ಪಗಳಿವೆ. ಒಟ್ಟಾರೆ ನಾಯಕನ ಪರಿಸರ ಕಾಳಜಿ, ಪ್ರಕೃತಿಪ್ರೇಮ, ದೈವಭಕ್ತಿಗೆ ಸಾಕ್ಷಿಯಾಗಿ ಬಾವಿ ಕಾಣುತ್ತದೆ. ಮಳೆಗಾಲದ ದಿನಗಳಲ್ಲಿ ತುಂಗಭದ್ರಾ ಜಲಾಶಯದ ಹಿನ್ನೀರಿನಿಂದ ತುಂಬಿದ ಬಾವಿ ನೋಡಲು ಸಾಧ್ಯ ಆಗದು. ಈ ಹಿಂದೆ ಹೂಳು ಮುಚ್ಚಿದ ಈ ಬಾವಿಯನ್ನು ಸ್ವಚ್ಛಗೊಳಿಸಿ ಜನರಿಗೆ, ಇತಿಹಾಸ ಪ್ರೇಮಿಗಳಿಗೆ ತೆರೆದುಕೊಟ್ಟ ಕೀರ್ತಿ ಒಬ್ಬ ಪೊಲೀಸ್ ಅಧಿಕಾರಿಗೆ ಸಲ್ಲುತ್ತದೆ. ಪ್ರತಿವರ್ಷ ಫಾಲ್ಗುಣ ಹುಣ್ಣಿಮೆ ಇಲ್ಲಿ ಪರಂಪರಾಗತ ಜಾತ್ರೆ ನಡೆಯುತ್ತದೆ.

ಇನ್ನು ತಾಲೂಕಿನ ಕೋಗಳಿ ಗ್ರಾಮ ಅತ್ಯಂತ ಪುರಾತನ ಐತಿಹಾಸಿಕ ನೆಲೆವೀಡು. ಕೋಗಳಿ-೫೦೦ರ ನಾಡು ಎಂದು ಕರೆಯಲ್ಪಟ್ಟಿದ್ದ ಈ ಪ್ರದೇಶ ಚಾಲುಕ್ಯ, ರಾಷ್ಟ್ರಕೂಟರ ಕೇಂದ್ರವಾಗಿತ್ತು. ಅಲ್ಲಿ ಪ್ರಾಚೀನ ಅವಶೇಷಗಳನ್ನು ಇಂದೂ ಕಾಣಬಹುದು. ಜೈನಸಂಸ್ಕೃತಿಯ ಕೇಂದ್ರವಾಗಿ ಬಸದಿ, ತುಂಡಾದ ದೇವತಾ ಮೂರ್ತಿಗಳನ್ನು ಗುರುತಿಸಬಹುದು. ಗಂಗರಾಜ ದುರ್ವಿನೀತ ಶಿಕ್ಷಣಕ್ಕಾಗಿ ದತ್ತಿ ಬಿಟ್ಟ ಶಾಸನವಿಲ್ಲಿದೆ. ಸುತ್ತಲಿನ ಅನೇಕ ಊರುಗಳು ಶಾಸನಗಳಲ್ಲಿ ಕೋಗಳಿನಾಡಿನ ಉಲ್ಲೇಖವಿದ್ದು ಇದೊಂದು ಪ್ರಸಿದ್ಧ ಐತಿಹಾಸಿಕ ಕೇಂದ್ರವೆನಿಸಿದೆ. ಶಿವಕೋಟ್ಯಾಚಾರ್ಯನ ಪ್ರಥಮ ಕನ್ನಡ ಸಂಕಲನ "ವಡ್ಡರಾಧನೆ" ಇಲ್ಲಿಯದು ಎಂದು ಡಿ.ಎಲ್. ನರಸಿಂಹಾಚಾರ್ಯರು ಗುರುತಿಸುತ್ತಾರೆ.

ತಾಲೂಕಿಗೆ ಸೇರಿದ ಅಂಬಳಿಯಲ್ಲಿ ಕಲ್ಯಾಣ ಚಾಲುಕ್ಯ ಶೈಲಿಯ ಕಲ್ಲೇಶ್ವರ, [illegible] ಹಾಗೂ ರಾಮಲಿಂಗೇಶ್ವರ ದೇವಾಲಯಗಳು ಶಿಲಕಲೆಗೆ ಹೆಸರಾಗಿವೆ. ಕ್ರಿಶ ೧೨ ನೇ ಶತಮಾನದ ವೀರಗಲ್ಲುಗಳನ್ನು ಕಾಣಬಹುದು. ಈ ದೇಗುಲಗಳು ಗಂಗದೊರೆ ದುರ್ವಿನೀತನ ಮೇಲ್ವಿಚಾರಣೆಯಲ್ಲಿ ನಿರ್ಮಾಣಗೊಂಡ ಉಲ್ಲೇಖವಿದೆ.

ಇನ್ನು ಅಲಬೂರಿನ ರಾಮಲಿಂಗೇಶ್ವರ, ಗೋಪಾಲಕೃಷ್ಣ ದೇವಾಲಯಗಳು ಇದೇ ಕಾಲಘಟ್ಟದ ನಿರ್ಮಿತಿಗಳಾಗಿದ್ದು ಅವುಗಳಲ್ಲಿಯು ಸುಂದರ ಶಿಲ್ಪಕೆತ್ತನೆಯನ್ನು ನೋಡಬಹುದು. ದೇವಳದ ಹೊರಭಾಗದಲ್ಲಿ ಶಾಸನವಿದ್ದು ಕ್ರಿ.ಶ. ೧೧೪೭ ರಲ್ಲಿ ಜಗದೇಕಮಲ್ಲ ಪಾಂಡ್ಯದೇವನು ಮೂಲದೇವರ ಪೂಜೆಗೆ ದಾನ ನೀಡಿದ ಉಲ್ಲೇಖವಿದೆ.

೧೨ ಕಿ.ಮೀ. ದೂರದ ಬೆಣ್ಣೆಕಲ್ಲು ಗ್ರಾಮದಲ್ಲಿ ಷಷ್ಟಕೂಟಗಳನ್ನೊಳಗೊಂಡ ದೇವಾಲಯ ಕದಂಬ ನಾಗರ ಶೈಲಿಯಲ್ಲಿದೆ. ಕ್ರಿಶ. ೧೩ನೇ ಶತಮಾನದಲ್ಲಿ ಹೊಯ್ಸಳ ದೊರೆ ೩ನೇ ವೀರನರಸಿಂಹದೇವನ ದಂಡನಾಯಕ ಅಮಿತಯ್ಯ ಈ ದೇಗುಲವನ್ನು ನಿರ್ಮಿಸಿದ ಬಗ್ಗೆ ಶಾಸನವು ದಾಖಲಿಸಿದೆ. ನೊಣಂಬವಾಡಿನಾಡಿನ ಕೋಗಳಿ ಗ್ರಾಮಕ್ಕೆ ಸೇರಿದ ಬೆಣ್ಣೆಕಲ್ಲಿನಲ್ಲಿ ಪದುಮಲೇಶ್ವರ, ಅಮೃತೇಶ್ವರ, ಲಕ್ಷ್ಮಿನಾರಾಯಣ, ವಾಮೇಶ್ವರ, ಬಲ್ಲಾಳೇಶ್ವರ, ನರಸಿಂಹ ದೇವರುಗಳಿಗಾಗಿ ಈ ದೇಗುಲ ನಿರ್ಮಿತವಾಗಿದೆ. ಶಿಲ್ಪಕಲೆಗಳಿಗೆ, ಕುಸುರಿ, ನಯವಂತಿಕೆಗೆ, ಕೆತ್ತನೆಗೆ ಹೆಸರುವಾಸಿಯಾಗಿದೆ. ನರಸಿಂಹನ ಮುಂದಿದ್ದ ಪ್ರಹ್ಲಾದ ವಿಗ್ರಹವನ್ನು ದೆಹಲಿಗೆ ಸ್ಥಳಾಂತರಿಸಲಾಗಿದೆ ಎಂದು ಊರಿನ ಹಿರಿಯರ ಉಲ್ಲೇಖ.

ತಾಲೂಕಿಗೆ ಸೇರಿದ ಹನಸಿ ಪಾಳೇಗಾರರ ಗಡಿಪ್ರದೇಶವಾಗಿ ಸಾಮಂತರ ವಶದಲ್ಲಿದ್ದ ಉಲ್ಲೇಖವಿದೆ. ಇಲ್ಲಿಯೂ ಕಲ್ಯಾಣಚಾಲುಕ್ಯ, ವಿಜಯನಗರ ಶೈಲಿಯ ದೇವಸ್ಥಾನಗಳಿದ್ದು ಶಾಸನಗಳೂ ಇವೆ. ಮೋರಿಗೇರಿ ಗ್ರಾಮದಲ್ಲಿ ಅಪರೂಪದ ಬ್ರಹ್ಮದೇವಾಲಯ ಕಲ್ಯಾಣ ಚಾಲುಕ್ಯ ಶೈಲಿಯದಿದೆ. ಬ್ರಹ್ಮ-ಪದ್ಮಾವತಿ ವಿಗ್ರಹಗಳಿವೆ. ಜೈನದೇವಾಲಯದ ಕುರುಹು ಕಾಣಬಹುದು. ಸುಮಾರು ೨೦ವೀರಗಲ್ಲುಗಳು ಇಲ್ಲಿವೆ.

ಈ ರೀತಿ ತಾಲೂಕಿನ ವಿವಿಧ ಭಾಗದಲ್ಲಿ ಅನೇಕ ಚಾರಿತ್ರಿಕ ದಾಖಲೆಗಳನ್ನು ಕಾಣಬಹುದಾಗಿದೆ. ಸ್ವಸ್ಥಳ ಹಗರಿಬೊಮ್ಮನಹಳ್ಳಿಗೆ ಮುಳುಗಡೆ ಪ್ರದೇಶದಿಂದ ಬಂದು ನಿಂತ ಜನತೆ ಹೊಸ ಸಂಸ್ಕೃತಿಗೆ ಆಕರವಾದದ್ದನ್ನು ಇಲ್ಲಿ ನೆನಪಿಸಬೇಕು. ನಾರಾಯಣದೇವರಕೆರೆಯ ಸ್ಥಾಪಿತ ಆಚಾರ-ವಿಚಾರ, ಸಂಸ್ಕೃತಿ, ಹಬ್ಬ-ಹುಣ್ಣಿಮೆ, ಆಚರಣೆಗಳನ್ನು ಇಲ್ಲಿ ಪ್ರತಿಷ್ಠಾಪಿಸಿ ಮುಂದುವರೆಸಿಕೊಂಡು ಬಂದ ಕೀರ್ತಿ ಅವರಿಗೆ. ರಾಮನಗರ ಎಂಬ ಹೆಸರಿನ ಬಡಾವಣೆ ಜೊತೆಗೆ ಕುರುದಗಡ್ಡೆ, ಅರಳಿಹಳ್ಳಿಗಳೂ ನಿರ್ಮಾಣವಾಗಿವೆ. ಕಂಬದ ರಾಯನ ದೇವಸ್ಥಾನವು ಒಂಬತ್ತು ಗರ್ಭಗುಡಿಗಳೊಡನೆ ನೆಲೆನಿಂತು ಊರಿನ ಪ್ರತಿಷ್ಠಿತ ರಥೋತ್ಸವ, ವಿಧಿ-ವಿಧಾನಗಳಿಗೆ ಕೇಂದ್ರವಾಗಿದೆ. ಸಮೀಪದ ಗುಡ್ಡದ ಮೇಲೆ ಹನುಮಪ್ಪನ ಗುಡಿಕಟ್ಟಿ "ತಂಬಿಟ್ಟಿನ ಜಾತ್ರೆ" ಶ್ರಾವಣ ಶುದ್ಧ ನವಮಿ-ದಶಮಿ ನಡೆಯುತ್ತದೆ. ಕಾರಹುಣ್ಣಿಮೆ, ಕರಿಹರಿದು, ಹೋರಿ ಓಡಿಸಿ ರೈತರ ಸಡಗರ ಹೆಚ್ಚಿಸಿದರೆ, ಗೋಕುಲಾಷ್ಟಮಿಯಂದು "ಒಟ್ಲು ಒಡೆಯುವ" ಪದ್ಧತಿ ಭಾರೀ ಮೋಜಿನಿಂದ ಕೂಡಿದ್ದು ಅನೂಚೂನವಾಗಿ ನಡೆದುಬಂದಿದೆ. ಬಹುತೇಕ ಉತ್ಸವಗಳು ಗಂಗಾವತಿ ವೆಂಕೋಬಣ್ಣ ಕುಟುಂಬದವರ ಮೇಲ್ವಿಚಾರಣೆಯಲ್ಲಿ ನಡೆಯುತ್ತಿರುವುದು ಹೆಮ್ಮೆಯ ಸಂಗತಿ.

ಕಾಲಕ್ಕೆ ತಕ್ಕಂತೆ ಅನೇಕ ಬದಲಾವಣೆಗಳಾಗಿ ಇತಿಹಾಸದಲ್ಲಿ ಕುಗ್ರಾಮ ಎನಿಸಿದ್ದ ನಮ್ಮೂರು ಹಳ್ಳಿಯ ಹೆಸರಿನ ಪಟ್ಟಣವೇ ಆಗಿ ರೂಪಾಂತರಗೊಂಡಿವೆ. ವಿದ್ಯಾಕ್ಷೇತ್ರದಲ್ಲಿ ಜಿಲ್ಲೆಯಲ್ಲೇ ಹೆಸರು ಮಾಡಿದ ಶಾಲೆ, ಪದವಿ ಕಾಲೇಜು, ತಾಂತ್ರಿಕ ಹಾಗೂ ಡಿಪ್ಲೋಮ ಮಹಾವಿದ್ಯಾಲಯಗಳು ಸ್ಥಾಪಿಸಲ್ಪಟ್ಟಿವೆ. ಸಾಂಸ್ಕೃತಿಕವಾಗಿ, ಸಾಹಿತ್ಯಕವಾಗಿ, ಕಲಾತ್ಮಕವಾಗಿ, ಸಾಕಷ್ಟು ಬೆಳೆದು ಜಿಲ್ಲೆಯಲ್ಲಿ ಈ ಊರುಗಳು ವಿಶೇಷ ಸ್ಥಾನ ಪಡೆದಿದೆ. ಇದೀಗ ವಿಧಾನ ಸಭಾ ಕ್ಷೇತ್ರವೆಂದೂ ಘೋಷಿಸಲ್ಪಟ್ಟಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧ **ಕರ್ನಾಟಕ ದೇವಾಲಯ ಕೋಶ,** (ಬಳ್ಳಾರಿ ಜಿಲ್ಲೆ) ೧೯೯೯, ಕನ್ನಡ ವಿಶ್ವವಿದ್ಯಾಲಯ, ಹಂಪಿ.

೨ **ಇತಿಹಾಸ ದರ್ಶನ,** ಸಂ ೧೯/ ೨೦೦೪, ಪುಟ ೧೪.

೩ ಕುಂ.ಬಾ. ಸದಾಶಿವಪ್ಪ., **ಹರಪನಹಳ್ಳಿ ಪಾಳೆಯಗಾರರು.**

೪ **ನೂರು ಹೆಜ್ಜೆ :** ಶಾಲಾ ಶತಮಾನೋತ್ಸವ ಸ್ಮರಣ ಸಂಚಿಕೆ, ತಂಬ್ರಹಳ್ಳಿ

೫ ಚಿಕ್ಕೇಲೂರು ಗೋವಿಂದಾಚಾರ್ಯರ ಹಸ್ತಪ್ರತಿ.

೬ ೧೯೭೨ರ **ಬಳ್ಳಾರಿ ಜಿಲ್ಲಾ ಗೆಜೆಟಿಯರ್.**

೭ ಗೊಲ್ಲರ ಭೀಮಪ್ಪ ಮತ್ತು ವಿಜಯ ಕುಮಾರ್, ಹಳೇ ಹಗರಿಬೊಮ್ಮನಹಳ್ಳಿ.

ಕೆಳದಿ ಗುಂಡಾಜೋಯಿಸ್*

# ಪೋರ್ಚುಗೀಸ್ ಅಸೆಂಟೋ ಸಂಪುಟಗಳಲ್ಲಿ ಕೆಳದಿ ಇತಿಹಾಸ

ಕ್ರಿ.ಶ.೧೫೪೭ ರಿಂದ ೧೬೭೯ರವರೆಗೆ ಹಿರಿಯ ವೆಂಕಟಪ್ಪನಾಯಕನಿಂದಾರಂಭಿಸಿ ೧೭೫೭-೬೩ರವರೆಗೆ ಆಳಿದ ರಾಣಿ ವೀರಮ್ಮಾಜಿಯವರೆಗೆ ಕಾರವಾರದಿಂದ ಕೇರಳದ ವಾಲಾರ್‌ಪಟಮ್‌ವರೆಗಿನ ಕಡಲ ತೀರವೆಲ್ಲವೂ ಕೆಳದಿ ಅರಸರ ಆಡಳಿತ ವ್ಯಾಪ್ತಿಗೆ ಸೇರಿತ್ತು. ಪೋರ್ಚಗೀಸ್, ಡಚ್, ಇಂಗ್ಲೀಷ್, ಇಟಾಲಿಯನ್, ಫ್ರೆಂಚ್, ಅರೇಬಿಯನ್ ಆಡಳಿತವು ಕೆಳದಿಯೊಂದಿಗೆ ಸೇರಿ ವ್ಯಾಪಾರೋದ್ದಿಮೆಯಲ್ಲಿ ಅಭಿವೃದ್ಧಿ ಸಾಧಿಸಿದ್ದವು. ಇವುಗಳ ಇತಿಹಾಸವೇ ಹಲವಾರು ಸಂಪುಟಗಳಷ್ಟಿವೆ. ಇವನ್ನು ಬೆಳಕಿಗೆ ತಂದವರು ಮುಂಬಯಿಯ ಪೀಟರ್ ಆಳ್ವಾರಿಸ್, ಚೆನ್ನೈನ ಡಾ. ಸ್ವಾಮಿನಾಥನ್ ಮತ್ತು ಗೋವಾದ ದಿ। ಡಾ. ಬಿ.ಎಸ್. ಶಾಸ್ತ್ರಿ. ಇದಕ್ಕೆ ಚಾಲನೆ ನೀಡಿದವರು ವಸಂತ ಮಾಧವ ಹಾಗೂ ನನ್ನ ಪ್ರಯತ್ನವೂ ಇದರಲ್ಲಿದೆ. ಪ್ರಸ್ತುತ ಪೋರ್ಚುಗೀಸ್ ಅಸೆಂಟೋಸ್ ಡು ಕಾಂಸೆಲ್ಹೊ ಡು ಎಸ್ಟಾಡೋ (Assentos do conselho do Estado) ಸಂಪುಟಗಳಲ್ಲಿರುವ ಮಾಹಿತಿಯನ್ನು ಆಧರಿಸಿ ಕೆನರಾದ ಕೆಳದಿ ಇತಿಹಾಸ ಸಂಗತಿಗಳನ್ನು ವಿದ್ವಾಂಸರ ಗಮನಕ್ಕೆ ತರಲಾಗಿದೆ.

**ಅಸೆಂಟೋಸ್ ಸಂಪುಟಗಳು :** ಗೋವಾದ ಪೋರ್ಚುಗೀಸ್ ಭಾಷಾತಜ್ಞ ಪಾಂಡುರಂಗ ಎಸ್.ಎಸ್. ಪಿಸುರ್ಲಂಕರ್‌ರವರು, ಇವುಗಳ ಅಧ್ಯಯನ ಕೈಗೊಂಡು ಸ್ಪೆಯಿನ್ ಮತ್ತು ಪೋರ್ಚುಗಲ್‌ನಲ್ಲಿರುವ ಐತಿಹಾಸಿಕ ಮಾಹಿತಿಗಳನ್ನು ಕಲೆಹಾಕಿ ಈ ಕೆಳಗಿನಂತೆ ಐದು ಸಂಪುಟಗಳನ್ನು ೧೯೫೩-೫೭ರವರೆಗೆ ಟಿಪೋಗ್ರಾಫಿಯ ರಾಂಗೆಲ್ ಬಸ್ಟೋರಾ ಗೋವಾ ಮುಖಾಂತರ ಪ್ರಸಿದ್ಧಿಸಿದ್ದಾರೆ.

(೧) ಸಂಪುಟ I ಕ್ರಿ.ಶ. ೧೬೧೮-೧೬೩೩ವರೆಗೆ; (೨) ಸಂಪುಟ II ಕ್ರಿ.ಶ. ೧೬೩೪-೧೬೪೩ವರೆಗೆ; (೩) ಸಂಪುಟ III ಕ್ರಿ.ಶ. ೧೬೪೪-೧೬೫೮ವರೆಗೆ; (೪) ಸಂಪುಟ IV ಕ್ರಿ.ಶ. ೧೬೫೯-೧೬೯೫ವರೆಗೆ; (೫) ಸಂಪುಟ V ಕ್ರಿ.ಶ. ೧೬೯೬-೧೭೫೦ವರೆಗೆ;

ಪಿಸುರ್ಲಂಕರ್‌ರವರಿಗಿಂತಲೂ ಮುಂಚೆ ಜೆ.ಎಚ್.ಡಾ. ಕನ್ಹಾರಿವಾರಾ[1] ಮತ್ತು ಎ. ಬಿ. ಡೇಬ್ರಗ್ರಾಂಝಾ ಪೆರೀರಾ[2] (J.H.Dr canha Rivara and A.B De Braganza pereira) ರವರ ಸಂಶೋಧನೆಗಳು ಆಕರಗಳಿಗೆ ಸಹಕಾರಿಯಲ್ಲವೆಂಬುದನ್ನು ಪೋರ್ಚುಗೀಸ್ ಭಾಷಾತಜ್ಞ ಡಾ.ಬಿ.ಎಸ್.ಶಾಸ್ತ್ರಿಗಳೇ-

J.H. Dr canha Rivara and A.B De Braganza pereira had done it earlier.But the work of pissurlencar is certainly_better.The work of Braganza peeira "has seen compiled, edited and printed so carelessly that its numerous omissions, misreadings and misprints render it in many ways more of a hindrance than a help"[3] none of thses draw backs and short commings is present in the work of Pissurlencar.

ಎಂದು ಉದ್ಗರಿಸಿ ಪ್ರತಿಪಾದಿಸಿದ್ದಾರೆ. ಮುಂದುವರಿದು ಪಿಸುರ್ಲೆಂಕರ್‌ರವರ ಅಸೆಂಟೋಸ್ ಡು ಕೋಂಸೆಲ್ಹೋಡು ಎಸ್ಟಾಡೋ ಕುರಿತು-

Assentos do conselho do Estado (proceeding or Minuts of the council of state)

This series contains of the minutes of the meetings of the council of state, on advisory body to the Govemment or viceroy of Goa.include Each minutes include opinion pressed by the member and decision the governor or viceroy. The summaries of relevant papers such as letter and reports. The volumes are indeed a verittle treasure house of information on portuquese foreign policy during the period 1618-1750.

Pissurenar has edited the documents meticulously. The reproduction is faithful to the original. He has also published a number of

*ಕೆಳದಿ, ಸಾಗರ, ಶಿವಮೊಗ್ಗ ಜಿಲ್ಲೆ.

supplementary documents such as official letters and reports as appendices to each volumes inorder to fill up the gaps left by the minutes

ಹೀಗೆ ಉಲ್ಲೇಖಿಸಿದ್ದಾರೆ.

**ಅಸೆಂಟೋದಲ್ಲಿರುವ ಕೆಳದಿ ಇತಿಹಾಸ ದಾಖಲೆಗಳು**

ಹಿರಿಯ ವೆಂಕಟಪ್ಪ ನಾಯಕನ ಕಾಲದವರೆಗೆ–

Assents I (1) p.20 (2) pp30-3 (3)pp 37-9
(4) pp39-40 (5) pp45-8 (6) pp61-4
(7) pp65-6(8) pp95-7 (9) pp 97-9
(10) p 94 (11) pp99-100(12) p102
(13) pp104-6 (14) pp 107-10 (15) pp101-3,110
(16) p 110 (17) pp 111-2 (18)p 115
(19) pp146-7 (20) p.201
(21) Assentos III p.639.

**ವೀರಭದ್ರನ ನಾಯಕನ ಕಾಲ**

Assentos I(1) p.303 (2) pp 249-50 (3) pp 252-3, 254.

(4) pp 256-8 (5) p 248 (6) p 264.
(7) p. 513 (8) pp 513-4 (9) pp 389-90
(10)pp 536-41 (11) III p.644 (12)I p .390 .
(13)pp 390-1 (14) pp 391-3 (15) p 411
(16)pp 426-7 (17) pp 554-5 (18) pp 555-6
(19) pp 448-50; 559-60 (20)p.449. (21) pp 456-7.
(22) pp 458-9 (23) pp 469-70. (24) pp 569-71
(25) p. 571 (26) IIpp 12-3 (27) pp 528-9
(28) pp 54-6 (29) pp 75-8 (30) pp 78-9
(31)pp 79-83 (32) p.84 (33) pp 116-7
(34) pp167-9 (35) pp 173-74 (36) p 202
(37) pp202-4 (38) pp 555-6 (39) p 270
(40)pp 561-2 (41)p 658.
(42) III pp 24-5

**ಕೆಳದಿ ಶಿವಪ್ಪನಾಯಕ (೧೬೪೫–೧೬೬೦)**

Assentos III (1) pp 100-1 (2) pp 101-2 (3)p 478
(4) p 101 (5) p 481 (6)p 522
(7) pp 526-7 (8) pp197-8 (9) pp 202-3
(10) pp 563-4 (11) pp 199-200 (12) IVth vol.
(13) pp 523-5 (14) pp211-2 (15) pp208-9
(16) pp 212-3 (17) pp 213-5 (18) p.218
(19) pp 530-3 (20) pp533-5 (21) pp 219-21
(22) pp 540-1 (23) pp544-5 (24) pp229-30
(25) p 239 (26) p 249 (27) pp 270-1
(28) pp 558-9 (29) pais leonardo : quoted in Assentos ; III p 559

(30) pp 307-8, 559 (31) p 311 (32) pp 319-22
(33) pp 565-7 (34) pp 326-8 (35) pp 569-70
(36) pp 329-30 (37) pp331-3 (38) pp 333-7
(39) pp 571-3 (40) pp 350-1 (41) pp 555-7
(42) pp 351-5 (43) pp357-60; 581-2.
(44) pp 395-7 (45) p 624.

**ಕೆಳದಿ ಅರಸರ ಕಾಲ ೧೬೬೦ ರಿಂದ ೧೭೬೩ ರವರೆಗೆ**

**ಅಸೆಂಟೋಸ್** IV (1) p 33 (2) p527 (3) pp 530-1
(4) p 553 (5) pp 534-5 (6) pp 535-6
(7) p 537 (8) pp 537-8 (9) pp 552-3
(10) p 540-1 (11) p.542 (12) p 543.
(13) p 545-7 (14) p 546 (15) p 548
(16) pp 549-52 (17) p 555 (18) p 171
(19) pp 175-6 (20) p 169 (21) pp564-5
(22) pp 216-7 (23) pp 226-7 (24) pp 233-4 236; 240, (25) pp 274-5; 278-80;
(26) pp 314-5 (27) pp 338-9 (28) pp 487-8
(29) p.499

**ಅಸೆಂಟೋಸ್** V (1)p 42 (2) pp 57-8 (3) pp 134-6
(4) pp 136-9 (5) pp 163-4 (6) pp 166-7
(7) pp 289-92 (8) pp 369-72 (9) pp 372-3
(10) p 370 (11) p 471 (12) pp 688-9.

**ಕೆಳದಿಯ ಐತಿಹಾಸಿಕ ಪ್ರಮುಖಾಂಶಗಳು**

ಮಂಗಳೂರು ಕೋಟೆಯ ಸಲ್ವದೋರ್ ರಿಬೈರು ಮರೀನ್ಯ, ಪೋರ್ಚುಗೀಸ್ ದಂಡನಾಯಕ ಗಜ್ವಾರ್‌ದೆ ಮೇಲ್ಲು ಪಂಪೈವ್ಹ, ಹೊನ್ನವರ ಕೋಟೆಯ ಫರ್ನಾಂಡಿಶ್ ಲೈತಾಂವ್, ವೆಂಕಟಪ್ಪನಾಯಕನ ಅಚ್ಚುಮೆಚ್ಚಿನ ಸಲಹೆಗಾರ ಪುಟ್ಟಪ್ಪ, ಬಂಗರಾಜನೊಡನಿದ್ದ ಲೈತಾಂವ್, ವೆಂಕಟಪ್ಪನ ಭಾಷಾಂತರ ಪರಿವರ್ತನಕಾರ ರಾಮಕೃಷ್ಣ (ಈತನ ಕುರಿತ ಓಲೆಗರಿಯೊಂದು ನನ್ನ ಹಸ್ತಪ್ರತಿ ಅಭಿಯಾನ ಸಮೀಕ್ಷೆಯಲ್ಲಿ ಲಭಿಸಿದೆ), ಕೆಳದಿ ರಾಜ್ಯದಲ್ಲಿ ಬಂಗರಾಜನಿಗೆ ಆಶ್ರಯ,

ವೆಂಕಟಪ್ಪನ ಸೇನಾಧಿಕಾರಿ ಬಸಪ್ಪನು ಪೋರ್ಚುಗೀಸರಿಗೆ ನೀಡಿದ ಕಿರುಕುಳಗಳು ವೈವಿಧ್ಯಮಯ ಕರಾರುಗಳು ವ್ಯಾಪಾರೋದ್ದಿಮೆಗಳು, ಬಂಗರಾಜನು ವೆಂಕಟಕಪ್ಪನಿಂದ ಪಡೆಯುತ್ತಿದ್ದ ಜೀವನಾಂಶಗಳು, ಕೆಳದಿ ಮತ್ತು ಡಚ್ಚರ ಬಾಂಧವ್ಯ, ದಿ ೧೦-೧೧-೧೬೨೯ರ ವೆಂಕಟಪ್ಪನ ಮರಣ ಕಾಲದ ಉಲ್ಲೇಖಗಳು ವೀರಪ್ಪ ಮರಣ ಕಾಲದ ವರದಿ ರಾಯಭಾರಿ ವಿಠಲ ಶೆಣೈ, ಬಸವಾಪಟ್ಟಣ ಕೆಂಪೇಗೌಡನ ವಿರುದ್ಧ ಸ್ವತಹ ವೀರಭದ್ರನ ಯುದ್ಧ, ಪೋರ್ಚುಗೀಸ್-ವೀರಭದ್ರನ ಕದನಗಳು, ವೀರಭದ್ರನು ಗಂಗೋಳ್ಳಿಯಲ್ಲಿ ನಿರ್ಮಿಸಿದ ಕೋಟೆ, ಜಲಯಾನಧಿಕಾರ ಪತ್ರಗಳು[೪] ಸರಾಮಪ್ಪೆ ದೇವರಸನ ಶೆಣೈ-ಕೆಳದಿ ರಾಯಭಾರಿಗಳು ಬಂಗರಾಣಿ, ಪೋರ್ಚುಗೀಸರ ಸ್ನೇಹ ಉಳ್ಳಾಲ ಮತ್ತು ಬಂಗರಾಣಿಯರು ಕೆಳದಿಗೆ ನೀಡುತ್ತಿದ್ದ ಕಪ್ಪ ಕಾಣಿಕೆ, ಶಿವಪ್ಪನು ಪೋರ್ಚುಗೀಸರ ಕೋಟೆ ವಶ ಪಡಿಸಿಕೊಂಡು ಹಾಗೂ ಮಂಗಳೂರಿನಿಂದ ಅವರನ್ನು ಓಡಿಸಿದ್ದು, ಪೋರ್ಚುಗೀಸರ ಭಾಷೆ ಅರಿತಿದ್ದ ಕನ್ನಡಿಗರು, ಶಿವಪ್ಪನ ರಾಜ್ಯ ವಿಸ್ತೀರ್ಣ, ಅಂಕೋಲದ ಅಧಿಪತಿ ವಿಠೋಜಿ ವಿಶ್ವಾಸರಾಯ, ಶರಾವತಿಯು ಸಮುದ್ರಕ್ಕೆ ಸೇರುವಲ್ಲಿ ಶಿವಪ್ಪನಿಂದ ನಿರ್ಮಿಸಿದ ಕೋಟೆ, ಕೆಳದಿ ರಾಣಿ ಚೆನ್ನಮ್ಮಾಜಿ ನಿಧನ ಕಾಲ ೨೯-೩-೧೬೭೭.[೫] ಏಳು ಬುರುಜುಗಳಿಂದ ಕಲ್ಯಾಣಪುರ ಕೋಟೆ[೬] (ಈಗ ಕಣ್ಮರೆಯಾಗಿದ್ದು ಅವಶೇಷವಿದೆ) ಆಶ್ರಫಿ, ಕ್ಸೆರಾಫಿನ್ ನಾಣ್ಯ ವಿನಿಮಯಗಳು, ಕೆಳದಿ ಅರಸರ ಹಡಗುಗಳು, (ಹೆಸರು "ಈಶ್ವರೀ ಮಹಾಮಾಯಿ"), ಮಸ್ಕತ್ತಿಗೆ ಕೆಳದಿ ರಾಜಧಾನಿ ಬಿದನೂರಿನಿಂದ ಅಕ್ಕಿ ಮರಮುಟ್ಟುಗಳ ರಫ್ತು, ಪೋರ್ಚುಗೀಸರು ಗೋಕರ್ಣ ದೇವಾಲಯ ಅಗ್ನಿಗಾಹುತಿ ಮಾಡಿದ ಸಂಗತಿಗಳು ವಿಪುಲವಾಗಿವೆ.

### ಅರಬರನ್ನು ಕೆಳದಿ ಅರಸರು ಓಡಿಸಿದ್ದು

ಡಾ। ಸ್ವಾಮಿನಾಥನ್‌ರವರ ಈ ಕೆಳಗಿನ ಮಾಹಿತಿಯನ್ನು ಡಾ। ಬಿ.ಎಸ್. ಶಾಸ್ತ್ರಿಗಳು :-

In 1707 the portuguese invaded the territories of Basavappa Nayaka and attacked the fort of mangalore.But the forces of Basavappa were able to put up a stiff resistance and the portuguese were compelled to suspend hostilities. Basappa nayaka deputed Damarasa prabhu as his ambassador to Goa with a letter to concude peace with them

ಈ ಉಲ್ಲೇಖನವನ್ನು ಖಂಡಿಸಿ ಇದು ಆಧಾರ ರಹಿತವೆಂದು ಕೆಳದಿ ರಾಜ್ಯದ ಕನ್ನಡ ಕರಾವಳಿಯನ್ನು ಆಕ್ರಮಿಸಿದವರು ಅರೇಬಿಯನ್‌ರಾಗಿದ್ದು ಅರಸನು ಹಿಮ್ಮೆಟ್ಟಿಸಿ ಓಡಿಸಿದ್ದು ಈ ಕಾಲದಲ್ಲಿ ಬಸವಪ್ಪನಿಗೆ (೧೭೧೩) ದಾಮರಸನು ರಾಯಭಾರಿಯಾಗಿದ್ದುದನ್ನು ಅಸೆಂಟೋ ಆಕರಗಳು ಉಲ್ಲೇಖಿಸಿರುವುದನ್ನು ಖಚಿತಪಡಿಸಿದ್ದಾರೆ.

### ಅಸೆಂಟೋದಲ್ಲಿರುವ ಕೆಳದಿ ಅರಸನ ನಿರೂಪ

Governo Genral do Estado da india ದಿಂದ ಪ್ರಕಟವಾದ Assentos do Conselho do Estado vol II (1634-1643) ರ ಪೋರ್ಚುಗೀಸ್ ಸಂಪುಟಗಳ ದಾಖಲೆ ೨೮ ಪುಟ ೫೪೫ ರಲ್ಲಿರುವ ಕೆಳದಿ ವೀರಭದ್ರನಾಯಕನ ನಿರೂಪವು ಕನ್ನಡದಲ್ಲಿರುವುದು ಗಮನಾರ್ಹವಾಗಿದ್ದು, ಪಠ್ಯಭಾಗವು ಈ ಕೆಳಕಂಡಂತಿದೆ.

**ಪಠ್ಯಭಾಗ**

ಸಾಲು ೧ ಶ್ರೀ ಸದಾಶಿವ ೧

ಸಾಲು ೨ ಶ್ರೀಮದ್ಗೊವೆ ವಿಜರಯಿರಾದ ದೊಂಮಿಗೆದಲದೆನೊ

೩ ರೊನ್ಸಾಕೊಯೊರಿನತರಿಗೆ। ಕೆಳದಿ ವಿರಭದ್ರನಾಯಕರೂ

೪ ***ಯಿಂ ಕಾರ್ಯಕ್ಕೆ ಕಳುಹಿಸಿದ ವಿನೆಯೊರ್ಥನಿಉನಂ

೫ ಮ ಹೆಜಬ ವಿಠಂಣನ ಕಯ್ಯ ಕಳುಹಿಸಿದ ಕಾಗದ ೧***

೬ ಕಾಗದ ಸಹಾ(ವೊ)ದಿಸಿ ಕೆಳಿ ಮನಸಿಗೆ ತಂದೆಉ ನಂ**

೭ ನಿಂಮ***ಕಾರ್ಯಗಳು ಪುರ್ತಗಾಲ್[೭] ಅರಸುಗಳ

೮ ನಂಮ(ಗೆ) ಉತ್ತರೊತ್ತರವಾಗಬೇಕೆಂದು ಆಡಿ ಮಾಡಿದ

೯ **(ಬ್ರಿಯರಿ) ಕಾಗದವನು ನಂಮ ವಿಠಂಣನ ಕಯ್ಯತರಿಸಿಕೊ

೧೦ (ಡು) ನಿಂಮ ಪ್ರಮಾಣಪುರಸರವಾಗಿ ಬರಸಿ ಕಳುಹಿದ್ರಿ ಆ ವಿವರವೆಲ್ಲ

೧೧ ವನು ವಿಠಂಣನು ಹೇಳಿದನು ನಿಲು ಹದನಾಮಿ ಕಾಗದವ ಬರೆಸಿದ

೧೨ ರಿತ್ತಿಯಲ್ಲೆ ನಾಲು ಅಪೊಹವಿಲ್ಲದೆ ನಡೆಸಿಲು। ಯಿ ಹದನಾಮಿ ಪ್ರ

೧೩ ಕಾರದಲ್ಲಿ ಯಿ ನಂಮ ವಿಠಂಣ ನಿಮಗೆ ಬರಸಿ ಕೊಟ್ಟಿಧಾನಲ್ಲ ಪ್ರ

೧೪ ಂನು ಹೊಸತಾಗಿ ನಾಲು ಬೆರೆ ದ್ರುಡವಾಗಿ ಹೆಳಿ ಕಳುಹಿಸುವದೆನಿ

೧೫ (ಥಿ)ತಾಗಿ। ಯಿ ಕಾಗದ ಪ್ರಮಾಣಿನ ಹದನಾಮಿಯಲ್ಲಿ[೭] ನಡವ

೧೬ ಹಾಗೆ ನಂಮ ಮಣಿಹಗಾರರಿಗೆ ಕಯ್ಯ ಮಾಡಿ ಸಿಧೆವೇನಿಉನಿ

೧೭ ಂಮ (ಕವಿ) ಕರುಗಳಿಗೆ ತಾಕಿ(ದಿ) ಮಾಡಿಸುವ ಹಾಗೆ ವಾಡುವದು

೧೮ ಕೆಲವು ವಿರಾಲು ಮಕಬು*ನಲಾಗಬೆಕೆಂದು ಖಿರದ* ನಂಮ*

೧೯ ದಕೆಲಉ ಕಲುನವ ಕ್ರಯಮಾಡಿಕೊಡುವ ಹಾಗೆ (ಕಟುಮಾಡಿ)

೨೦ ಧವೆ। ಪೆಯುಉಕ್ಷನು ಯಿದಲ್ಲಿ ವಿಚಾರಿಸುವ ಹಾಗೆ ಕಯಿ ಮಾಡಿ(ಅಸ್ಪಷ್ಟ)

೨೧ ಗಿ ಹೊಂನಾವರಕೆ ಖಿಂ* ಹಲರಮಾಯಿನಗುಠಾಖಿಗಳ (ಅಸ್ಪಷ್ಟ)

೨೨ ಮಾಡಿಕೊಂಬರೆ (ಮರಮುಟ್ಟು) ಕೊಡಬೇಕೆಂದು ಬರಸಿದ (ಅಸ್ಪಷ್ಟ)

೨೩ ರಿತ್ತಿಯಲ್ಲಿ ಕಡಿದುಕೊಂಡು ಹೊದರೆ ಬಿಡುವ ಹೆಚ್ಚಿಗೆ ಕಯಿ (ಅಸ್ಪಷ್ಟ)

೨೪ ಸಿಧವೆ ನಿಉ ಹೆಳಿದರೆಂದು ವಿಠಂಣ ಹೆಳಲಾಗಿ(ಅಸ್ಪಷ್ಟ)

೨೫ ಗಳಿಗ ಕೆಲಉ ಮರಕೆ ಅಪ್ಪಣಿ ಕೊಟ್ಟಧೆಉ ನಮಗೆ (ಅಸ್ಪಷ್ಟ)

೨೬ ರೆ ಯಾಗಿ ಹಲ್ಲಣ ಮುಸ್ತಿ*ಸಹಾಕೆ ***ಕಳುಹಿದ್ರಿ ನಂಮ

೨೭ ಮಿಡೆಯಲ್ಲಿ ಕಳುಹಬೇಕೆಂಬದೆನು ಹಾ*ವರು। ನಂಮ (ಅಸ್ಪಷ್ಟ)

೨೮ (ಅಸ್ಪಷ್ಟ) ಯಿಂದ ಕಳುಹಿಸ್ತ ಹಲ್ಲಣವ* ಸಹಾ(ಅಸ್ಪಷ್ಟ)

೨೯ (ಅಸ್ಪಷ್ಟ) ತೆಗದುಕೊಂಡೆಉ ಆ (ಅಸ್ಪಷ್ಟ)

೩೦ *ನೆಲ್ಲಾ ಮುಸ್ತೈದೆ ಮಾಡಿಸಿಧೆ(ಅಸ್ಪಷ್ಟ)

೩೧ (ಅಸ್ಪಷ್ಟ) ಹಾಗೆ ಮಾಡುವದು। ಹೆಚ್ಚಾಗಿ (ಅಸ್ಪಷ್ಟ)

೩೨ ಮರಿಯ ಹರದರಿಂದಲೆ ಕೋಡಿಸಿಉ ಯಿ (ಅಸ್ಪಷ್ಟ)

೩೩ ವಿಠಂಣ ಬರಯಿಧಾನಾಗಿ

Reproducao do texto canares da carta do rei virabhadra Naique (p.544)

### ಪೋರ್ಚುಗೀಸ್ ಭಾಷಾಂತರ

Elrey virabadranaique me escreveo sabre se desmantelar a fortzy do combolim e o seu embaxadar folon tambem sabere esta materia a q se respondeo q se amia dado contadalla a s.m.de pell q semu rdem porticular sua se nao podia catomar resolncao nella pello que qundo este Rey vos trate sabre a dita fortythe dareis a entender q nao lennais sobre is to order olgna minha. porque se elle viere to do o q pretendemos e lenais a cargo derrlando primeiro a sua forty q aly tem feild na mesma the de camlolim the direis q intercedereis comigo de maneira q en m desmantelar a nassa persuadindo e asegurando neste eaxyo q aealaries comrigo q en mande assy faser. adnertion do poonto se ade entender uando porontro made nao fassion s concluin co elle tado o q lenais a cargo na forma q vas ordeno e ha sede obrigar o dito virabadra naiq a q nunca enu tempo algum far a forty na dita tha, meuimlo awos engares q podem sernir de desembar eadonos dandanos para isto tadas as segnraneas que the apontardes que serao as que vos parecer conum e adnerty que de nenhuna pessoa fieis este capitnlo nemse saitra que tendes tal order porqcome minto ao sermico de s mg o segredo nella jprocuauco de primeio qnanto vas for passiuel effect nandes todo o q leuais para concluir co este rey de fortxy di camtolim empee dado em goa x pondao de meneses o fezzy a 19 de may de 1637e eu o secr selastiao soares paes o fis escreuer p.o.da sylna

ಆಂಗ್ಲೇಯ ಲಿಪಿ ಹಾಗೂ ಪೋರ್ಚುಗೀಸ್ ಭಾಷೆಯಲ್ಲಿರುವ ಈ ಅಮೂಲ್ಯ ದಾಖಲೆಯು ಕೆಳದಿ ಹಾಗೂ ಕರ್ನಾಟಕ ಕರಾವಳಿ ಇತಿಹಾಸದಲ್ಲಿ ಗಮನಾರ್ಹವಾದುದು.[೮]

### ಉಪಸಂಹಾರ

ಪೋರ್ಚುಗೀಸ್ ಭಾಷೆಯ ಅಸೆಂಟೋ ಸಂಪುಟಗಳಲ್ಲಿ ಕೆಳದಿ, ವಿಜಯನಗರ ಆದಿಯಾಗಿ ದೇಶೀಯ ಸಂಸ್ಥಾನಗಳ ಇತಿಹಾಸಗಳು ವಿಪುಲವಾಗಿವೆ. ಸುಪ್ತವಾಗಿದ್ದ ಇವುಗಳನ್ನು ಬೆಳಕಿಗೆ ತಂದು ದಿ॥ ಡಾ.ಬಿ.ಎಸ್. ಶಾಸ್ತ್ರಿಗಳು ಮಹೋಪಕಾರ ಮಾಡಿದ್ದಾರೆ. ಸಂಶೋಧಕರಿಗೆ ಈ ಬಗ್ಗೆ ಚಾಲನೆಯಿತ್ತ ಡಾ. ವಸಂತಮಾಧವ ಅವರ ನಂತರ ಕೆಳದಿ ಸಂಶೋಧನಾಲಯ ಮುಖಾಂತರ ಈ ಬಗ್ಗೆ ಪ್ರಯತ್ನವಾಗಿದೆ.

ರಾಜಕೀಯ ಇತಿಹಾಸ ಜೊತೆಗೆ ಸಾಮಾಜಿಕ, ಆಡಳಿತ ಹಾಗೂ ಸಾಂಸ್ಕೃತಿಕ ಇತಿಹಾಸಗಳು ಬೆಳಕು ಕಾಣುವುದು ಅಗತ್ಯವಿದೆ. ಡಾ॥ ಶಾಸ್ತ್ರಿಗಳು ಲಿಸ್ಬನ್‌ನಿಂದಲೂ ಸಂಗ್ರಹಿಸಿ ಕಲೆಹಾಕಿದ ಮಾಹಿತಿಗಳು ಅಪ್ರಕಟಿತವಾಗಿದ್ದು, ಕನಿಷ್ಠ ಪಕ್ಷ ಸೂಚಿ (catalogue) ಸಿದ್ಧಪಡಿಸಿದಲ್ಲಿ ಮುಂದಿನ ಸಂಶೋಧನಾ ಪೀಳಿಗೆಗೆ ಉಳಿಸುವಲ್ಲಿ ಉಪಕಾರವಾಗುತ್ತದೆ. ಇವುಗಳನ್ನು ನನಗೆ ಕೆಳದಿ ಮ್ಯೂಜಿಯಂನಲ್ಲಿರಿಸಲು ಕೇಳಲಾಗಿದೆ. ಕೆಳದಿ ಮ್ಯೂಜಿಯಂ ಕ್ಯೂರೇಟರ್ ಡಾ॥ ವೆಂಕಟೇಶ್‌ಜೋಯಿಸ್ I.C.H.R. ಸಹಾಯದಿಂದ ಗೋವಾದ ಪತ್ರಾಗಾರದಲ್ಲಿರುವ ಕೆಳದಿ ಇತಿಹಾಸದ ಕಡಲ ತೀರದ ಮಾಹಿತಿಯನ್ನು ಕಲೆಹಾಕಿದ್ದಾರೆ. ರಾಜ್ಯ ಪತ್ರಾಗಾರದ ಸಹಾಯದಿಂದ ಕೆಳದಿ ಸಂಶೋಧನಾಲಯದ ಮುಖಾಂತರ

ಡಾ|| ವೆಂಕಟೇಶ್ ಜೋಯಿಸ್ ಸಂಪಾದಕತ್ವದಲ್ಲಿ 'ಕೆಳದಿ ಪ್ರಸಾರ ದಾಖಲೆಗಳು' ಕುರಿತು ಎರಡು ಸಂಪುಟಗಳು ಬೆಳಕು ಕಂಡಿವೆ. ಈ ಮಾಲೆಯಲ್ಲಿ ಇವುಗಳನ್ನು ಹಾಗೂ ಪೋರ್ಚುಗೀಸ್ ಆರ್ಕೈವ್ಸ್ ದಾಖಲೆಗಳನ್ನು ಸಮೀಕರಿಸಿ ಪ್ರಕಾಶಪಡಿಸುವ ಅಗತ್ಯ. ಮುಂದಿನ ಸಂಶೋಧನೆಗಳಿಗಾಗಿ ಕೆಳದಿ ಸಂಶೋಧನಾ ಕೇಂದ್ರವನ್ನು ಕುವೆಂಪು ವಿಶ್ವವಿದ್ಯಾಲಯಕ್ಕೆ ಅಭಿವೃದ್ಧಿಗಾಗಿ ವಹಿಸಲಾಗಿದೆ. ಹಾಗೆಯೇ ಕೆಳದಿ ಪೋರ್ಚುಗೀಸ್ ಕಡಲ ತೀರವನ್ನು ಕುರಿತು ಮಾಡಬಹುದಾದ ಪಿ.ಎಚ್.ಡಿ ಮಹಾಪ್ರಬಂಧಕ್ಕೆ ಇದು ನಾಂದಿಯಾಗಬಲ್ಲದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ|| ಬಿ.ಎಸ್. ಶಾಸ್ತ್ರಿ, ೧೯೭೨. ಕೆಳದಿ ಅರಸರು ಹಾಗೂ ಪೋರ್ಚುಗೀಸರು, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ.

೨. ಡಾ|| ಪಿಯುಸ್ ಫಿಡೆಲಿಸ್ ಪಿಂಟೋ., ಕರಾವಳಿ ಕರ್ನಾಟಕದ ಕ್ರೈಸ್ತರ ಇತಿಹಾಸ, ಸಮನ್ವಯ ಪ್ರಕಾಶನ, ಮಂಗಳೂರು, ೧೯೯೯ (ಪಿ.ಎಚ್.ಡಿ ಪ್ರಬಂಧ).

೩. Dr B.S.shastary., *Studies in indo portuguese history,* I.B.H Prakashana Bangalore 1981.

೪. Panduranga . s.s. pissurlankar., 1953, Assentos do conselho do Estado vol II 1634-1643.tipographia Rangel Bastora, Goa.

೫. Archivo Portuguese oriental (10.vols noua Goa)1857-1876.

೬ irid 1936-1940.

೭. Boxer art cit p 299 (Boxer C.R. " A glimpes of the goa archives" BSOAS, 1952 XIX/2) studies in indo portuguese history pp 16,17& 23, 24.

೮. ಜಲಯಾನಾಧಿಕಾರ ಪತ್ರಗಳು (Cartazes) ಕುರಿತಂತೆ **"ಇತಿಹಾಸ ದರ್ಶನ"** ಸಂ ೧೭/೨೦೦೨ ಪುಟ ೨೬೮ ನೋಡಿರಿ.

೯. ಮತ್ತು ೬ ಕೆಳದಿ ರಾಣಿ ಚೆನ್ನಮ್ಮಾಜಿಯು ಮಂಗಳೂರಿನ ಕ್ರೈಸ್ತ ಇಗರ್ಜಿಗೆ ನೀಡಿದ ಸಹಾಯದ ದಾಖಲೆಗಳನ್ನು ಮಿಲಾಗ್ರೀಸ್ ಚರ್ಚಿನ ಮೊಂಟೇರೋರವರು ಕೆಳದಿಗೆ ಭೇಟಿಯಿತ್ತು, ಮ್ಯೂಜಿಯಂ ಕ್ಯೂರೇಟರ್ ಡಾ||ವೆಂಕಟೇಶ್ ಜೋಯಿಸ್‌ಗೆ ದಿ.೮-೨-೨೦೦೬ರಂದು ನೀಡಿದ್ದಾರೆ. ಇದರ ಜ್ಞಾಪಕಾರ್ಥವಾಗಿ ಮಾದರಿ ಸಿದ್ಧಪಡಿಸಿ ಕೆಳದಿ ಮ್ಯೂಜಿಯಂಗೆ ಸಲ್ಲಿಸಲಾಗಿದೆ.

೧೦. ಪುರ್ತಗಾಲ>ಪೋರ್ಚುಗಲ್.

೧೧. ಹದನಾಮಿ> true state.

೧೨. Livro da segredo no 1 fis 15: doc 28-1637, maio 9, p 545.

ವಿಜಯಲಕ್ಷ್ಮಿ ಎಸ್. ಕಲಗುಡಿ*

# ಕರಾವಳಿ ಕರ್ನಾಟಕದಲ್ಲಿ ಕೆಳದಿ ಅರಸರ ಕಾಲದ ಧಾರ್ಮಿಕ ಸಂಘರ್ಷ ಮತ್ತು ಸಮನ್ವಯತೆ

ಕರಾವಳಿಯಲ್ಲಿ ಕೆಳದಿ ಅರಸರ ಕಾಲ ತುಂಬ ಮಹತ್ವದ್ದು. ಕರಾವಳಿ ಕರ್ನಾಟಕ ಪ್ರಾಚೀನ ಕಾಲದಿಂದಲೂ ಕರ್ನಾಟಕದ ಪರಧರ್ಮ ಸಹಿಷ್ಣುತೆ ಭಾಷಾಸೌಹಾರ್ದತೆ, ಭವ್ಯ ಪರಂಪರೆಗೆ ಹೆಚ್ಚು ಒತ್ತು ಕೊಡುತ್ತ ಬಂದಿದೆ.ಇಲ್ಲಿ ರಾಜ್ಯಭಾರ ಕೈಗೊಂಡ ಪ್ರತಿಯೊಬ್ಬ ರಾಜನು, ರಾಜಮಹಿಳೆಯರು ಧರ್ಮ ಸಹಿಷ್ಣುತೆ ಮತ್ತು ಸಮನ್ವಯತೆಯ ಭವ್ಯ ಪರಂಪರೆಗೆ ಸ್ಪಂದಿಸಿರುವುದರೊಂದಿಗೆ ಸರ್ವಧರ್ಮಗಳಿಗೂ ಉದಾರ ಆಶ್ರಯ, ಪ್ರೋತ್ಸಾಹ ನೀಡಿ ಸೌಹಾರ್ದ ಸುಮಧುರ ಸಾಮರಸ್ಯ ವಾತಾವರಣವನ್ನು ಕಾಪಾಡಿಕೊಂಡು ಬಂದಿರುವುದು ಗಮನಾರ್ಹ ಸಂಗತಿಯಾಗಿದೆ.

### ಕೆಳದಿ ಅರಸರು

ಕೆಳದಿ ಸದಾಶಿವರಾಯನ ಆಜ್ಞೆಯ ಮೇರೆಗೆ ಅಚ್ಚಪ್ಪ ಒಡೆಯನು ಬಾರಕೂರು ರಾಜ್ಯದ ರಾಜ್ಯಪಾಲನಾಗಿ ಕಾರ್ಯ ನಿರ್ವಹಿಸುತ್ತಿರುವಾಗ ಕುಪ್ಪೂಶೆಟ್ಟಿ ಮತ್ತು ಸೂರಿಶೆಟ್ಟಿಯು ವಿಠಲದೇವರ ಮಠವನ್ನು ಜೀರ್ಣೋದ್ಧಾರ ಮಾಡಿ ನಿತ್ಯಪೂಜೆಗೆ ಭೂಮಿ, ಹೊನ್ನು ದಾನಬಿಟ್ಟಿರುವರು. ಪಡುಕೇರಿಯ ತಿರುಮಲ ದೇವರಿಗೂ ವಿಶೇಷದಾನ ಮಾಡಿರುವರು.

ದೊಡ್ಡ ಸಂಕಣ್ಣನಾಯಕನು ತೀರ್ಥಯಾತ್ರೆ ಕೈಗೊಂಡಿದ್ದಾಗ ಕಾಶಿಯಾತ್ರೆಯ ಸಂದರ್ಭದಲ್ಲಿ ಅಲ್ಲಿದ್ದ ಒಂದು ಜಂಗಮ ಮಠವನ್ನು ಮುಸ್ಲಿಮರು ಆಕ್ರಮಿಸಿ ಕೊಂಡಿದ್ದರು. ಈ ವಿಷಯವನ್ನು ಅರಿತ ದೊರೆ ಅವರಿಂದ ಈ ಮಠವನ್ನು ಬಿಡಿಸಿಕೊಂಡು ಅದಕ್ಕೆ "ಜಂಗಮವಾಡಿ" ಎಂಬುದಾಗಿ ಹೆಸರಿಟ್ಟು ಅಲ್ಲಿ ಪಂಚಮಠಗಳನ್ನು ಕಟ್ಟಿಸಿ ಜಂಗಮರಿಗೆ ಮಠದ ಉಸ್ತುವಾರಿಕೆ ಕೊಟ್ಟಿರುವುದನ್ನು ಗಮನಿಸಿದರೆ ದೊಡ್ಡ ಸಂಕಣ್ಣ ನಾಯಕನು ಲಿಂಗವಂತ ಧರ್ಮಕ್ಕೆ ನೀಡಿದ ಕೊಡುಗೆ ಅಪಾರವಾದುದಾಗಿದೆ.

ಕಾರ್ಕಳದ ಬೈರರಸ ಒಡೆಯರು ಶೃಂಗೇರಿಪುರದ ಮಠವನ್ನು ಲೂಟಿ ಮಾಡಲು ಅದು ಕೆಳದಿ ವೆಂಕಟಪ್ಪನ ಕಿವಿಗೆ ತಲುಪಿತು. ಆತ ಲೂಟಿಗಾರರನ್ನು ಸೋಲಿಸಿ ಶೃಂಗೇರಿ ಸ್ವಾಮಿಗಳಿಂದ ತೆಗೆದುಕೊಂಡುದನ್ನು ಮರಳಿ ಕೊಡುವಂತೆ ಮಾಡಿದನು. ಅಲ್ಲದೆ ಈತನು ಮೂಡಬಿದಿರೆಯಲ್ಲಿರುವ "ಚಂದ್ರನಾಥ ಸ್ವಾಮಿ" "ತ್ರಿಭುವನತಿಲಕ" ಚೈತಾಲಯಕ್ಕೆ ಆರ್ಥಿಕ ಸಹಾಯ ನೀಡಿದ್ದಲ್ಲದೆ ಸ್ವಾಮಿಯ ರಥೋತ್ಸವ ಸಾಂಗವಾಗಿ ಜರುಗುವುದಕ್ಕೆ ನಿಯಮಾವಳಿಗಳನ್ನು ರಚಿಸಿಕೊಟ್ಟಿರುವನು.

ವೆಂಕಟಪ್ಪ ನಾಯಕನ ಕಾಲದಲ್ಲಿ ತುಂಡರಸರ ಆಳ್ವಿಕೆ ಅಧಿಕವಾಗಿತ್ತು. ಇವರು ಸಮಯ ಸಂದರ್ಭ ಸಾಧಿಸಿ ಧಾರ್ಮಿಕ ಸಂಘರ್ಷವನ್ನು ಹತ್ತಿಕ್ಕಿರುವರು. ವಿಟ್ಲದ ಡೊಂಬ ಹೆಗ್ಗಡೆ ಇಕ್ಕೇರಿಗೆ ಕಪ್ಪವನ್ನು ಕೊಡದೆ ಹೋಗಿದ್ದರಿಂದ ಅವನನ್ನು ಬಂಧಿಸಿ ಅರಮನೆಗೆ ಕೊಂಡು ಹೋಗುವಾಗ ಸಂಸ್ಥಾನದ ಪ್ರತಿನಿಧಿ ಸುಂಕಪ್ಪಶೆಟ್ಟಿಯ ಮಗ ನಿರ್ವಾಣ ಶೆಟ್ಟಿ ಅವನಿಗೆ ಜಾಮೀನು, ಕೊಟ್ಟು ಹಣವನ್ನು ಪಾವತಿಸಿ ಹೆಗ್ಗಡೆಯನ್ನು ಬಿಡುಗಡೆ ಮಾಡಲಾಯಿತು. ಈ ಸಹಾಯ ಸ್ಮರಿಸಿ ವಿಟ್ಲದ ಅರಸರು ಕೊಲ್ಕಡು ಮತ್ತು ವಿಟ್ಲದ ಗ್ರಾಮಗಳಾದ ಚಂದ್ರಪಡಿ ಕಾಡುಮಠ ಮತ್ತು ಸರ್ಕಳ ಎಂಬ ಮೂರು ಭಾಗಗಳಲ್ಲಿ ಭೂಮಿಯನ್ನು ನಿರ್ವಾಣಶೆಟ್ಟಿಗೆ ಉಂಬಳಿ ಕೊಟ್ಟ ಬಗೆಗೆ ಕ್ರಿ.ಶ. ೧೬೭೦ರ ಶಾಸನ ಉಲ್ಲೇಖವಿದೆ. ಇಂದಿಗೂ ನಿರ್ವಾಣ ಶೆಟ್ಟಿಯ ಮನೆತನ ಆ ಭೂಮಿಯ ಪ್ರಯೋಜನ ಪಡೆಯುತ್ತಿದೆ.

ವೀರಭದ್ರನಾಯಕನ ಆಡಳಿತವನ್ನು ಬಸ್ರೂರಿನ ಜೈನ ವರ್ತಕರು ಕಟ್ಟೆಯ ಬಸವಣ್ಣನಿಗೆ ಮಠ ಕಟ್ಟಿಸಲು ಸಹಾಯ ಮಾಡಿ ಅಲ್ಲಿ ಲಿಂಗವಂತ ಧರ್ಮ ನೀತಿ ನಿಯಮ ಮುಂದುವರೆಸಿಕೊಂಡು ಬರಲು ತಮ್ಮ ಭೂಮಿಯ ಕೆಲವು ಉತ್ಪನ್ನಗಳನ್ನು ಕೊಟ್ಟಿರುವುದನ್ನು ಗಮನಿಸಿದರೆ ಧರ್ಮ ಸಮನ್ವಯತೆಯ ಮಹತ್ವ ವಿಧಿತವಾಗುತ್ತದೆ. ಸುಮಾರು ಕ್ರಿ.ಶ. ೧೬೩೦ರಲ್ಲಿ ಪೋರ್ಚುಗೀಸರು ಕ್ರೈಸ್ತರನ್ನು ಗಂಗೊಳ್ಳಿ ಪ್ರದೇಶಕ್ಕೆ

* ಸಂಶೋಧನಾ ವಿದ್ಯಾರ್ಥಿನಿ, ಕನ್ನಡ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ಕರೆಸಿ ಅವರಿಗೆ ಅಲ್ಲಿ ನೆಲೆ ನಿಲ್ಲಲು. ಎಲ್ಲಾ ರೀತಿಯ ಸೌಕರ್ಯಗಳನ್ನು ಒದಗಿಸಿಕೊಟ್ಟಿರುವುದನ್ನು ಗಮನಿಸಿಯೂ ವೀರಭದ್ರನಾಯಕನು ಈ ವಿಷಯದ ಕುರಿತಾಗಿ ಯಾವುದೇ ರೀತಿಯ ಕ್ರಮ ಕೈಗೊಳ್ಳದ ಕಾರಣ ಗಂಗೊಳ್ಳಿಯ ಸ್ಥಳೀಯರ ವಿರೋಧ ಕಟ್ಟಿಕೊಂಡುದು ಈತನ ಕಾಲದಲ್ಲಿ ನಡೆದ ಧಾರ್ಮಿಕ ಸಂಘರ್ಷಕ್ಕೆ ಒಂದು ಉತ್ತಮ ನಿದರ್ಶನವಾಗಿದೆ.

ಕೆಳದಿ ಅರಸರಲ್ಲೆ ಪ್ರಸಿದ್ಧನಾದ ಶಿವಪ್ಪನಾಯಕ ತನ್ನ ಆಳ್ವಿಕೆಯಲ್ಲಿ ಕ್ರೈಸ್ತರು ಉಪದೇಶ ನೀಡಲು ಮತ್ತು ಕ್ರೈಸ್ತಧರ್ಮಕ್ಕೆ ಸ್ಥಳೀಯರನ್ನು ಮತಾಂತರ ಗೊಳಿಸಲು ಅನುಕೂಲ ಕಲ್ಪಿಸಿಕೊಟ್ಟದ್ದು ಆದರೆ ಪಾದ್ರಿಗಳು ಸ್ಥಳೀಯರೇ ಆಗಿರಬೇಕೆಂದು ಕಡ್ಡಾಯಗೊಳಿಸುತ್ತಿರುವುದನ್ನು ಗಮನಿಸಿದಾಗ ಈತನು ತನ್ನ ರಾಜ್ಯದಲ್ಲಿ ಜನರಿಗೆ ಧರ್ಮಾಚರಣೆ ಕುರಿತಾಗಿ ಸ್ವಾತಂತ್ರ್ಯ ನೀಡಿರುವುದು ಸ್ಪಷ್ಟವಾಗುತ್ತದೆ. ಅಲ್ಲದೆ ಕ್ರಿ.ಶ. ೧೬೫೭ರಲ್ಲಿ "ಕಾರ್ಮಲೈಟ್ ಸಂನ್ಯಾಸಿಯಾದ ಸಂತಮರಿಯಾ" ಕೆಳದಿ ರಾಜ್ಯದಲ್ಲಿ ಇದ್ದ ೬೦,೦೦೦ ಕ್ರೈಸ್ತ ಮತೀಯರ ವಾಸ್ತವ್ಯವನ್ನು ತಿಳಿಸಿರುವರು.

ಕೆಳದಿ ಮನೆತನದಲ್ಲಿ ಪ್ರಸಿದ್ಧಿ ಪಡೆದ ಏಕೈಕ ರಾಣಿ ಎಂದರೆ 'ಚೆನ್ನಮ್ಮ'. ಈಕೆಯ ಕಾಲದಲ್ಲಿ ಕೊಂಕಣಿಗರು ಮಂಜೇಶ್ವರ ದೇವಾಲಯಕ್ಕೆ ಚೆನ್ನಮ್ಮನಿಂದ ಸಹಾಯ ಪಡೆದಿರುವರು. ಚೆನ್ನಮ್ಮ ಮಂಗಳೂರಿನ ಮಿಲಾಗ್ರಿಸ್ ಚರ್ಚ್ ಕಟ್ಟಲು ಭೂಮಿ ಉಂಬಳಿ ಬಿಟ್ಟಿರುವುದಾಗಿ ತಿಳಿದುಬರುತ್ತದೆ.

ಇದಿಷ್ಟು ಕೆಳದಿ ಅರಸರ ಕಾಲದಲ್ಲಿ ಧಾರ್ಮಿಕ ಸಂಘರ್ಷ ಮತ್ತು ಸಮನ್ವಯತೆ ಕಂಡರೆ ಪ್ರಸ್ತುತ ಸಮಾಜದಲ್ಲಿ (ಕರಾವಳಿ ಕರ್ನಾಟಕದಲ್ಲಿ) ಕಾಣಸಿಗುವ ಮಠಮಾನ್ಯಗಳಲ್ಲಿನ (ವಿರಶೈವ) ಧಾರ್ಮಿಕ ಸಂಘರ್ಷ ಮತ್ತು ಸಮನ್ವಯವನ್ನು ಈ ಕೆಳಗಿನಂತೆ ತಿಳಿಯಬಹುದು. ಅವುಗಳೆಂದರೆ

೧) ಅಯ್ಯನವರ ಮಠ [ಕುಂದಾಪುರ ತಾಲೂಕು]
೨) ಜಂಗಮೇಶ್ವರ ಮಠ [ಕಾರ್ಕಳ ತಾಲೂಕು]
೩) ಗಂಜಿಮಠ [ದ.ಕನ್ನಡ]

### ಅಯ್ಯನವರ ಮಠ

ಈ ಮಠವು ಕುಂದಾಮರ ತಾಲೂಕಿನ ತಲ್ಲೂರು ಗ್ರಾಮದ ಅಲ್ಲೂಕುದ್ರು ಎಂಬ ಪ್ರದೇಶದಲ್ಲಿ ಕಾಣಸಿಗುತ್ತದೆ.

ಈ ಮಠವು ಕೆಳದಿ ಅರಸರ ಕಾಲದ ಮಠವೆಂದು ಹೇಳಲಾಗಿದೆ. ಈ ಮಠವು ಗೋಪಾಲಕೃಷ್ಣ ದೇವಸ್ಥಾನದ ಉತ್ತರ ಭಾಗದಲ್ಲಿರುವ ಪ್ರತ್ಯೇಕ ಗುಡಿಯಲ್ಲಿದ್ದು ಪೂರ್ವಾಭಿಮುಖವಾಗಿದೆ. ಕೆಂಪು ಕಲ್ಲಿನ ಗರ್ಭಗುಡಿಇದೆ. ಮುಖಮಂಟಪ ಹಾಗೂ ಮಠದ ಮುಚ್ಚಿಗೆ ಇದೆ. ಸುತ್ತಲು ಪೌಳಿ ಇದ್ದ ಹಾಗೆ ಕಲ್ಲಿನ ಪಂಚಾಂಗ ಇದೆ. ಬಹಳ ಪ್ರಾಚೀನ ಕಾಲದ ಮಠದ ಮುಚ್ಚಿಗೆ ಮತ್ತು ಹೆಂಚಿನ ಮಾಡಿನ ಈ ಮಠದಲ್ಲಿ ಪಾಣಿಪೀಠದ ಮೇಲೆ ಪುಟ್ಟ ಶಿವಲಿಂಗವಿದೆ

ಈ ಮಠದಲ್ಲಿ ಎರಡು ಹೊತ್ತು ಪೂಜೆ ನಡೆಯುತ್ತದೆ. ಆದರೆ ಈ ಮಠದ ಅರ್ಚಕರು ಮತ್ತು ಆಡಳಿತ ಮಂಡಳಿಯನ್ನು ನಡೆಸುತ್ತಿರುವವರು 'ಶ್ರೀಕೃಷ್ಣ ಐತಾಳ್' ಎಂಬ ಬ್ರಾಹ್ಮಣ ಮನೆತನದವರು. ಸುಮಾರು ಐದಾರು ತಲೆಮಾರಿನಿಂದ ಈ ಮಠದ ಉಸ್ತುವಾರಿಯನ್ನು ಈ ಮನೆತನದವರೇ, ನಡೆಸಿಕೊಂಡು ಬಂದಿರುವರೆಂಬ ಹೇಳಿಕೆ ಅವರದಾಗಿದೆ. ಈ ಮಠ ಇವರ ಕೈಗೆ ಹೇಗೆ ಬಂದಿತು ಎಂಬುದು ತಿಳಿದಿಲ್ಲ.

### ಜಂಗಮೇಶ್ವರ ಮಠ

ಕಾರ್ಕಳ ತಾಲೂಕಿನ ಅಜಕಾರಿನಿಂದ ಹೆಬ್ರಿ ಮಾರ್ಗವಾಗಿ ಹೋಗುವ ದಾರಿಯಲ್ಲಿ ಅಜಕಾರಿನಿಂದ ಸುಮಾರು ಐದಾರು ಕಿ.ಮೀ. ದೂರದ 'ಮುನಿಯಾಲು' ಎಂಬ ಪ್ರದೇಶದಲ್ಲಿ ಈ ಮಠ ಕಾಣಸಿಗುತ್ತದೆ.

ಉತ್ತರಾಭಿಮುಖವಾಗಿ ಕಾಣಬರುವ ಈ ಮಠದ ಮೂಲ ಹೆಸರು ಸಿದ್ಧೇಶ್ವರ ಮಠ. ಕಾಲಾಂತರದಲ್ಲಿ ಅಂದರೆ ಬ್ರಾಹ್ಮಣರ ಅಧೀನಕ್ಕೆ ಒಳಪಟ್ಟ ಪರಿಣಾಮವಾಗಿ ಈ ಮಠ ಜಂಗಮೇಶ್ವರ ಮಠವಾಗಿ ಬದಲಾವಣೆ ಹೊಂದಿತು. ಈ ಮಠಕ್ಕೆ ಸುಮಾರು ೨೦೦ ಮುಡಿ ಅಕ್ಕಿಯನ್ನು ಬೆಳೆಯುವಷ್ಟು ಜಾಗ ಇತ್ತೆಂದು ತಿಳಿದುಬರುತ್ತದೆ. ಈ ಮನೆತನದ ವಂಶಸ್ಥರಾದ ಎಂ. ಗುರುಶಾಂತಯ್ಯ ಎಂಬವರು ಕಾರ್ಕಳದ ವೀರಭದ್ರ ದೇವಾಲಯದಲ್ಲಿ ಈಗಲೂ ಇದ್ದಾರೆ. ಆದರೆ ಈ ಮಠ ಈಗ ರಾಘವೇಂದ್ರ ಭಟ್ ಎಂಬ ಬ್ರಾಹ್ಮಣ ಅರ್ಚಕರ ಉಸ್ತುವಾರಿಯಲ್ಲಿ ನಡೆಯುತ್ತಲಿದೆ. 'ಚಿರಂಜಿತು ಅಜಿಲರು' ಎಂಬ ಜೈನ ಮನೆತನದವರು ಅಧ್ಯಕ್ಷತೆ ವಹಿಸಿಕೊಂಡಿದ್ದಾರೆ. ೧೯೭೧ರಲ್ಲಿ ಈ ಮಠವನ್ನು ಜೀರ್ಣೋದ್ಧಾರ ಮಾಡಲಾಯಿತು. ಈ ಮಠ ಇವರ ಕೈಗೆ ಹೇಗೆ ಬಂದಿತು ಎಂಬುದು ತಿಳಿದಿಲ್ಲ.

### ಗಂಜಿ ಮಠ

ಇದು ಗುರುಪುರದಿಂದ ಉತ್ತರಕ್ಕೆ ೧೦ ಕಿ.ಮೀ. ದೂರದಲ್ಲಿದೆ. ಕೆಳದಿ ಕಾಲದಲ್ಲಿ ಇಲ್ಲಿ ಅನ್ನ ದಾಸೋಹ ಕಾರ್ಯವು ಭರದಿಂದ ಸಾಗುತ್ತಿತ್ತೆಂದು ತಿಳಿದುಬರುತ್ತದೆ. ಬಹುಶಃ ಈ ಕಾರಣದಿಂದಲೇ ಇದಕ್ಕೆ 'ಗಂಜಿಮಠ' ಎಂಬ ಹೆಸರು ಬಂದಿರಬೇಕು. ಪ್ರಸ್ತುತ ಇಲ್ಲಿ ಮಠದ ಸ್ವರೂಪವೇನು ಉಳಿದಿಲ್ಲ. ಆದರೆ ಮಠದ ಪಂಚಾಂಗ ಹಾಗೂ ಅದರ ಪಕ್ಕದಲ್ಲಿ ಒಂದು ಬಾವಿ ಇದೆ. ಅಲ್ಲದೆ ಈ ಮಠಕ್ಕೆ ಸಂಬಂಧಿಸಿದಂತೆ ಸ್ವಲ್ಪ ಜಾಗ ಇದೆ. ಕೆಳದಿ ಕಾಲದಲ್ಲಿ ಈ

ಮಠಕ್ಕೆ ಸಂಬಂಧಿಸಿದಂತೆ ಸುಮಾರು ಜಾಗ ಇದ್ದಿತು. ನಂತರದಲ್ಲಿ 'ಭೂಮಿಕಾಯ್ದೆ' ಆದೇಶದ ಮೇರೆ ಸ್ವಲ್ಪ ಭಾಗವೂ ಹೋದರೆ, ಇನ್ನು ಉಳಿದ ಜಾಗವನ್ನೆಲ್ಲ ಬೇರೆ ಬೇರೆ ಧರ್ಮದವರು, ಮತೀಯರು ಆಕ್ರಮಣ ಮಾಡಿರುವುದು ತಿಳಿದು ಬರುತ್ತದೆ. ಇದು ಅಲ್ಲಿನ ಪರಿಸರದ ಜನರ ಅಭಿಪ್ರಾಯವೂ ಹೌದು; 'ಗುರುಪುರ' ಮಠದ ಸ್ವಾಮಿಯವರ ಅಭಿಪ್ರಾಯವೂ ಇದೇ ಆಗಿದೆ. ಅಲ್ಲದೆ ಇವರ ಪ್ರಕಾರ ಗಂಜಿಮಠದ ಎದುರಿನಲ್ಲಿ ಒಂದು ಗಣಪತಿ ದೇವಸ್ಥಾನವಿದೆ. ಆ ದೇವಸ್ಥಾನವು ಈ ಮಠಕ್ಕೆ ಸಂಬಂಧಿಸಿದ್ದು. ಅಲ್ಲಿರುವ 'ಗಣಪತಿ' ಕೊರಳಲ್ಲಿ ಬೆಳ್ಳಿಯ ಕರಡಿಗೆ (ಲಿಂಗು) ಇದ್ದದು ಇವರು ತಮ್ಮ ಬಾಲ್ಯದಲ್ಲಿ ಗಮನಿಸಿರುವುದಾಗಿ ಮತ್ತು ತಮ್ಮ ಗುರುಗಳು ಈ ಮಾತನ್ನು ಹೇಳುತ್ತಿದ್ದರು ಎಂಬ ಪ್ರಮುಖವಾದ ಅಂಶವನ್ನು ಹೇಳಿದ್ದಾರೆ. ಅಲ್ಲದೆ ಈ ಮಾತನ್ನು ಪ್ರಸ್ತುತ 'ಗಣಪತಿ' ದೇವಸ್ಥಾನದ ಅರ್ಚಕರೂ (ಬ್ರಾಹ್ಮಣರು) ಒಪ್ಪುತ್ತಿದ್ದರೂ, ತಾವೂ ಅದನ್ನು ನೋಡಿಲ್ಲ ಅದರೆ ಹಿಂದಿನವರು ಹೇಳಿರುವುದನ್ನು ಕೇಳಿದ್ದೇನೆ. ಎಂಬ ಹೇಳಿಕೆ ನೀಡುತ್ತಾರೆ.ಅಲ್ಲದೆ ಇವರು 'ಗಂಜಿಮಠ'ದ ಕಾರಣಿಕದ ಬಗ್ಗೆ ನೆಡೆದ ಸತ್ಯ ಘಟನೆಯನ್ನು ವಿವರಿಸುತ್ತಾರೆ. ಇದು ಈ ಮಠಕ್ಕೆ ಸಂಬಂಧಿಸಿದ ಪ್ರಸ್ತುತವಾಗಿ ದೊರೆಯುವ ಒಂದು ಪ್ರಮುಖವಾದ ಅಂಶವಾಗಿದೆ. ಅದೇನೆಂದರೆ ಈ ಮಠದ ಜಾಗವನ್ನೆಲ್ಲ ಬೇರೆ ಮತೀಯರು ಆಕ್ರಮಣ ಮಾಡಿದ್ದಾರೆ. ಆದರೆ ಈ ಮಠದ ಸುತ್ತಲೂ ಇರುವ ಜಾಗವನ್ನು ಆಕ್ರಮಣ ಮಾಡಲೆಂದು ಅದೇ ಪರಿಸರದ ಒಂದು ಮುಸಲ್ಮಾನ ಮನೆತನದ ನಾಲ್ಕು ಜನ ಅಣ್ಣತಮ್ಮಂದಿರು ಬಂದು ಆ ಜಾಗವನ್ನು ಸ್ವಚ್ಛಗೊಳಿಸಿ ಅಲ್ಲಿ ಮನೆಕಟ್ಟಲೆಂದು ಯೋಚಿಸಿ ಅವರು ಆ ಜಾಗಕ್ಕೆ ಗುದ್ದಲಿ ಹಾಕಿದಾಗ ಅಲ್ಲಿ 'ನಾಗನ' ದರ್ಶನವಾಯಿತು. ಅಲ್ಲದೆ ಆ ನಾಲ್ಕು ಜನ ಅಣ್ಣತಮ್ಮಂದಿರ ಬಾಯಿ ಬಿದ್ದು ಬಾಯಿಹೋಯಿತು (ಮೂಕರಾದರು) ಈಗ ಆ ನಾಲ್ಕು ಜನ ಅಣ್ಣತಮ್ಮಂದಿರ ಪೈಕಿ ಇಬ್ಬರು ಮಾತ್ರ ಉಳಿದುಕೊಂಡಿದ್ದಾರೆ. ಇವರನ್ನು ಸತ್ತಮುತ್ತಲಿನ ಪರಿಸರದವರು 'ಪೊಟ್ಟಸಾಹೇಬ' ಎಂಬ ಹೆಸರಿನಿಂದ ಕರೆಯುತ್ತಿರುವುದು ಗಮನಕ್ಕೆ ಬಂದಿದೆ. ಇದಿಷ್ಟು 'ಗಂಜಿಮಠದ' ಕಾರಣಿಕವಾಗಿದೆ. ಈ ಕಾರಣದಿಂದಾಗಿಯೆ ಇಲ್ಲಿ ಇನ್ನು ವಿರಶೈವ ಧರ್ಮದ ಅಸ್ತಿತ್ವ ಉಳಿದುಕೊಂಡಿರುವುದಲ್ಲದೆ ಅಲ್ಲಿನ ಪರಿಸರದ ಜನರಿಗೆ ಆ ಜಾಗದ ಕುರಿತು ಭಯ ಇದೆ. ಇಷ್ಟೆಲ್ಲ ಗೊಂದಲಗಳ ನಡುವೆ ಈ ಮಠ ತನ್ನ ಅಸ್ತಿತ್ವ ಉಳಿಸಿಕೊಂಡಿರುವುದು ಗಮನಾರ್ಹ ಸಂಗತಿಯಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಡಾ॥ ವೆಂಕಟೇಶ್ ಜೋಯಿಸ್–ಕೆಳದಿ ಶಾಸನಗಳ ಸಾಂಸ್ಕೃತಿಕ ಅಧ್ಯಯನ.

೨. ಬಸ್ರೂರು – ಒಂದು ಅಧ್ಯಯನ.

೩. ಡಾ॥ ಸಾ.ಶಿ. ಮರುಳಯ್ಯ–ಕೆಳದಿ ಅರಸರ ಕಾಲದ ಮೂರ್ತಿ ಮತ್ತು ವಾಸ್ತುಶಿಲ್ಪ.

೪. ಗಣಪತಿರಾವ್ ಐತಾಳ್–ದಕ್ಷಿಣ ಕನ್ನಡ ಜಿಲ್ಲೆಯ ಪ್ರಾಚೀನ ಇತಿಹಾಸ.

೫. ಡಾ॥ ಗುರುರಾಜ ಭಟ್ಟ–ತೌಳವ.

೬. ಡಾ॥ ವೆಂಕಟೇಶ್ ಜೋಯಿಸ್–ಮರೆಯಲಾಗದ ಕೆಳದಿ ಸಾಮ್ರಾಜ್ಯ.

೭. ಎಪಿಗ್ರಾಫಿಯ ಕರ್ನಾಟಕ–VII, ತೀರ್ಥಹಳ್ಳಿ ನಂ. ೫೨.

೮. S.I.I.V ರೆ Pt.11, No. 620.

೯. ತುಕಾರಂ ಪೂಜಾರಿ., ಬಂಟ್ವಾಳ ದರ್ಶನ.

೧೦. ಕನ್ನಡ ಸಾಹಿತ್ಯ ಪರಿಷತ್ ಪತ್ರಿಕೆ, ೧೨ ಐಗಳ್.

೧೧. ಡಾ॥ ಶೈಲಾ. ಟಿ ವರ್ಮ., ತುಳುನಾಡಿನ ಶಾಸನಗಳ ಸಾಂಸ್ಕತಿಕ ಅಧ್ಯಯನ.

೧೨. ಡಾ॥ ಗುಂಡಾ ಜೋಯಿಸ್., ಕೆಳದಿ ನೃಪ ವಿಜಯ.

೧೩. ಕೆಳದಿ ಗುಂಡಾ ಜೋಯಿಸ್, ಇಕ್ಕೇರಿ ಸಂಸ್ಥಾನ ಚರಿತ್ರೆ

೧೪. ಕ್ಷೇತ್ರಾ ಕಾರ್ಯದಿಂದ ತಿಳಿದ ಕೆಲವು ಮಾಹಿತಿಗಳು.

ಎಸ್. ಬಾಲಚಂದ್ರ ಕರಣಿಕ*
ಡಾ. ಕೆಳದಿ ವೆಂಕಟೇಶ್ ಜೋಯಿಸ್**

# ಬಾರಕೂರು ಸೂರಪ್ಪಯ್ಯನ ಮಠ, ಅಗ್ರಹಾರ ಮತ್ತು ಮನೆತನ

ಘಟ್ಟದ ಕೆಳಗಣ ಮಂಗಳೂರು ಪ್ರಾಂತ್ಯಕ್ಕೆ ಕೆಳದಿಯ ಇಮ್ಮಡಿ ಸೋಮಶೇಖರ ನಾಯಕನ ಕಾಲ [೧೭೧೪–೧೭೩೯] ದಲ್ಲಿ ಸಂಸ್ಥಾನದ ಪ್ರತಿನಿಧಿಯಾಗಿ ಬಾರಕೂರು ಸೂರಪ್ಪಯ್ಯನು ನೇಮಿಸಲ್ಪಟ್ಟಿದ್ದನು. ಇವನು ಸೋಮಶೇಖರ ನಾಯಕನ ಪಟ್ಟಾಭಿಷೇಕ ಸಮಾರಂಭದಲ್ಲಿ ಭಾಗವಹಿಸಿದ ಕುರಿತು ಕೆಳದಿ ನೃಪವಿಜಯ ಉಲ್ಲೇಖಿಸುತ್ತದೆ.[1] ಈ ಬಾರಕೂರು ಸೂರಪ್ಪಯ್ಯನನ್ನು ಮಂಗಳೂರು ರಾಜ್ಯಪಾಲ ಎಂದೂ ಕನ್ನಡ ಸೈನ್ಯದ ದಂಡನಾಯಕ ಎಂದೂ ಇತಿಹಾಸಕಾರರು ಗುರುತಿಸಿದ್ದಾರೆ[2]. ಈತನು ಮಂಗಳೂರಿನಲ್ಲಿ ವಾಸ್ತವ್ಯ ಇದ್ದು ಬ್ರಿಟಿಷ್ ಅಧಿಕಾರಿಗಳು ಮತ್ತು ಮಲೆಯಾಳಿ ರಾಜರು ಗಳೊಂದಿಗೆ ವ್ಯಾಪಾರ, ಗಡಿ ಕುರಿತು ಮಾಡಿಕೊಂಡ ಕರಾರುಗಳು ಸಾಕಷ್ಟಿವೆ.[3] ಪ್ರಸ್ತುತ ಈ ಪ್ರಬಂಧದಲ್ಲಿ ಉಡುಪಿ ಜಿಲ್ಲೆಯ ಬಾರಕೂರು ಮತ್ತು ಸುತ್ತಮುತ್ತಲಲ್ಲಿ ಅವರ ಹೆಸರಿನಲ್ಲಿ ಕಂಡು ಬರುವ ಮಠ, ಅಗ್ರಹಾರ ಮತ್ತು ದೇವಸ್ಥಾನಗಳ ಬಗೆಗೆ ಬೆಳಕು ಚೆಲ್ಲಲು ಪ್ರಯತ್ನಿಸಲಾಗಿದೆ.

ಈಗ ಲಭ್ಯವಾಗುತ್ತಿರುವ ದಾಖಲೆ ಮತ್ತು ಮಾಹಿತಿಗಳ ಮೇರೆಗೆ ಬಾರಕೂರು ಸೂರಪ್ಪಯ್ಯನಿಗೆ ಸಂಬಂಧಿಸಿದ ಪಾಂಡೇಶ್ವರ ಮನೆತನವು ೧೮ನೇ ಶತಮಾನದಿಂದ ಈ ಕೆಳಗಿನ ದೇವಸ್ಥಾನಗಳ ಆಡಳಿತದ ಜೊತೆಗೆ ಕೆಲ ದೇವಸ್ಥಾನಗಳ ಉಪಾಧಿಯನ್ನು ಹೊಂದಿತ್ತು. ಆ ವಿವರವನ್ನು ಈ ಕೆಳಗಿನಂತೆ ಕೊಡಬಹುದಾಗಿದೆ.

೧) ಬ್ರಹ್ಮಾವರದ ಚಾಂತಾರು ಗ್ರಾಮದ ಸೂರಪ್ಪಯ್ಯ ಅಗ್ರಹಾರದ ಯಜಮಾನ ವೃತ್ತಿ/ವಿಶ್ವನಾಥ ದೇವರ ಪೂಜೆ; ೨) ಮಹಾಲಿಂಗೇಶ್ವರ ದೇವಸ್ಥಾನದ ಆಡಳಿತ; ೩) ಬಾರ್ಕೂರು ಸಮೀಪದ ಮೂಡುಹಡು ಗ್ರಾಮದ ಪಾಂಡೇಶ್ವರದಲ್ಲಿನ ರಾಮೇಶ್ವರ ದೇವರ ಅಮ್ರುತಪಡಿ; ೪) ಬಾರ್ಕೂರು ಮೂಡ್ಕೇರಿ ಕಂಬದ ಗಣಪತಿ ದೇವಾಸ್ಥಾನದ ಅಮ್ರುತಪಡಿ[4]; ೫) ಬಾರ್ಕೂರುಶ್ರೀ ಗೋಪಾಲಕೃಷ್ಣ ದೇವಸ್ಥಾನದ ಅಮ್ರುತಪಡಿ; ೬) ಬಾರ್ಕೂರು ಶ್ರೀ ತಿರುಮಲ ದೇವಸ್ಥಾನದ ಅಮ್ರುತಪಡಿ; ೭) ಬಾರ್ಕೂರು ಮಣಿಗಾರಕೇರಿ ಸೋಮನಾಥ ದೇವಾಸ್ಥಾನದ ಸಹಸ್ರನಾಮ ಉಪಾಧಿ; ೮) ಬಾರ್ಕೂರು ಪಂಚಲಿಂಗೇಶ್ವರ ದೇವಸ್ಥಾನದಲ್ಲಿ ಸಹಸ್ರನಾಮ ಉಪಾಧಿ; ೯) ಚಾಂತಾರು ತಿರುಮಲ ದೇವಾಸ್ಥಾನದ ಮೇಲ್ತನಿಖೆ; ೧೦) ಉಡುಪಿ ಅಂಬಾಗಿಲು ಸಮೀಪದ ಮಾಯಗುಂಡಿ ಉಮಾ ಮಹೇಶ್ವರಿ ದೇವಸ್ಥಾನದ ಅಮ್ರುತಪಡಿ; ೧೧) ಪಳ್ಳಿ (ಕಾರ್ಕಳ ತಾಲ್ಲೂಕು) ಗ್ರಾಮದ ಮಠದ ಲಕ್ಷ್ಮಿನಾರಾಯಣ ದೇವಸ್ಥಾನದ ಅಮ್ರುತಪಡಿ; ೧೨) ಉಡುಪಿಯ ತೆಂಕಪೇಟೆಯ ಸೂರಪ್ಪಯ್ಯನ ಮಠದ ಆಡಳಿತ.

ಈ ದೇವಾಲಯಗಳ ಉಪಾಧಿ ಮತ್ತು ಆಡಳಿತ ನೋಡಿಕೊಳ್ಳಲು ಬೇರೆ ಬೇರೆ ಬ್ರಾಹ್ಮಣ ಮನೆತನಗಳನ್ನು ನೇಮಿಸಿದುದಲ್ಲದೇ ಆ ಕುಟುಂಬಗಳಿಗೆ ಉಂಬಳಿ ಉತ್ತಾರಗಳನ್ನು ನೀಡಿ ಗೇಣಿ ರೂಪದಲ್ಲಿ ದಾನಶಾಸನ ಮೂಲಕ ಕೃಷಿ ಭೂಮಿ ಕೊಟ್ಟ ಕುರಿತು ದಾಖಲೆಗಳು ತಿಳಿಸುತ್ತವೆ.

**ಚಾಂತಾರು ಸೂರಪ್ಪಯ್ಯನ ಅಗ್ರಹಾರ :** ಮಂಗಳೂರು ಪ್ರಾಂತ್ಯದ ಗವರ್ನರ್ ಆಗಿದ್ದ ಬಾರಕೂರು ಸೂರಪ್ಪಯ್ಯನ ಹೆಸರಿನಲ್ಲಿ ಬ್ರಹ್ಮಾವರದ ಸಮೀಪದ ಚಾಂತಾರು ಎಂಬಲ್ಲಿ ಒಂದು ಅಗ್ರಹಾರವು ಸ್ಥಾಪಿಸಲ್ಪಟ್ಟಿತು.[5] ಇದು ಕ್ರಿ.ಶ. ೧೭೪೨ರ ದುಂದುಭಿ ಸಂವತ್ಸರದ ಮಾರ್ಗಶಿರ ಶುದ್ಧ ಪಂಚಮಿಯಂದು ಕೆಳದಿ ನಾಯಕರ ಮತ್ತು ಜನರಲ್ ಸೂರಪ್ಪಯ್ಯನವರ ಸಮ್ಮುಖದಲ್ಲಿ ಅಗ್ರಹಾರ ವೃತ್ತಿ ಮತ್ತು ತತ್ಸಂಬಂಧಿತ ಛಟಮಾನ್ಯಗಳನ್ನು ನಡೆಸಿಕೊಂಡು ಬರುವಂತೆ, ಅಲ್ಲಿನ ಬ್ರಾಹ್ಮಣರಿಗೆ ಧರ್ಮ ಸಾಧನಗಳನ್ನು ನೀಡುವುದರ ಮೂಲಕ ಮತ್ತು ಕಾಶಿವಿಶ್ವನಾಥ ದೇವಾಲಯದಲ್ಲಿ ದೇವರ ಲಿಂಗವನ್ನು ಪ್ರತಿಷ್ಠಾಪಿಸುವ ಮೂಲಕ ಈ ಅಗ್ರಹಾರ ಪ್ರಾರಂಭವಾಗಿರುವುದಾಗಿ ದಾಖಲೆಗಳು ತಿಳಿಸುತ್ತವೆ[6].

ಈ ಅಗ್ರಹಾರದಲ್ಲಿ ಕಾಶಿವಿಶ್ವನಾಥ ದೇವಸ್ಥಾನ ಪೂರ್ವಮುಖವಾಗಿ ಸ್ಥಾಪಿಸಲ್ಪಟ್ಟಿದ್ದು ಅದರ ಇಕ್ಕೆಲಗಳಲ್ಲಿ ಮತ್ತು ಹಿಂಬದಿಯಲ್ಲಿ ಬ್ರಾಹ್ಮಣರ ಮನೆಗಳಿವೆ. ದೇವಸ್ಥಾನದ

* ಕೆಳದಿ, ಸಾಗರ ತಾ. ಶಿವಮೊಗ್ಗ ಜಿಲ್ಲೆ.

ಪೌಳಿಯಲ್ಲಿ ದುರ್ಗಾದೇವಿ ಮತ್ತು ಗಣಪತಿ ದೇವಾಲಯಗಳಿವೆ. ವಿಶ್ವೇಶ್ವರ ದೇವಸ್ಥಾನದಿಂದ ಸುಮಾರು ೪೦ ಮೀಟರ್ ದೂರದಲ್ಲಿ ವೆಂಕಟರಮಣ ದೇವಸ್ಥಾನ ಉತ್ತರಾಭಿಮುಖವಾಗಿ ಸ್ಥಾಪಿತವಾಗಿದೆ. ವೆಂಕಟರಮಣಮೂರ್ತಿ ಸುಂದರವಾದ ಕೆತ್ತನೆಯಿಂದ ಕೂಡಿದೆ. ಇದು ಹೊಯ್ಸಳ ಕಾಲದ ಶಿಲ್ಪ ಮತ್ತು ಸುಮಾರು ೧೧ನೇ ಶತಮಾನದಷ್ಟು ಹಿಂದಿನದೆಂದು ಪ್ರೊ. ಗುರುರಾಜಭಟ್ಟರು ಅಭಿಪ್ರಾಯಪಡುತ್ತಾರೆ[೬]. ಇದರಿಂದಾಗಿ ಬಹಳ ಹಿಂದಿನಿಂದಲೇ ಇಲ್ಲಿ ಬ್ರಾಹ್ಮಣರ ಮನೆಗಳಿದ್ದವೆಂದು ಸ್ಪಷ್ಟವಾಗುತ್ತದೆ. ಅಲ್ಲಿಂದ ಪೂರ್ವಕ್ಕೆ ದೊಡ್ಡದಾದ ಕೆರೆ ಇದೆ. ಕೆರೆಗೆ ಅಗ್ರಹಾರದ ಬದಿಯಿಂದ ಉತ್ತಮವಾದ ಪಾವಟಿಗೆಗಳಿವೆ. ಕೆರೆಯ ಆಚೀಚೆ ವಿಶಾಲ ಗದ್ದೆ ಬಯಲುಗಳಿವೆ. ಆಗ್ನೇಯ ಮೂಲೆಯಲ್ಲಿ ಬೆಳೆದ ಮರಗಿಡಗಳ ಮಧ್ಯೆ ಇರುವ ಬನದಲ್ಲಿ ಬ್ರಹ್ಮ, ಯಕ್ಷಿ, ಪಂಜುರ್ಲಿ, ನಂದಿ, ನಾಗ ಹೀಗೆ ಬೇರೆ ಬೇರೆ ದೈವಗಳ ಸ್ಥಾನ ಇದೆ.

ಕೆಳದಿ ಅರಸರಿಂದ ಬಾರ್ಕೂರು ಸೂರಪ್ಪಯ್ಯನಿಗೆ ಕೊಡಲ್ಪಟ್ಟ ಹುದ್ದೆ, ಭೂಮಿಗಳ ವಿವರ, ಕರ್ತವ್ಯದ ವ್ಯಾಪ್ತಿಯನ್ನೊಳಗೊಂಡ ಮೂಲಸ್ಥಾನವು ಕಡತದ ಬಟ್ಟೆಯಲ್ಲಿ ಬರೆಯಲ್ಪಟ್ಟಿತು. ಈಗ ಆ ಬಟ್ಟೆ ಜೀರ್ಣವಾಗಿದ್ದು ಲಭ್ಯವಿರುವುದಿಲ್ಲ. ಅದರ ಪ್ರತಿಯೊಂದನ್ನು ಸೂರಪ್ಪಯ್ಯನ ಮನೆತನದವರು ಕೋರ್ಟು ಕೇಸು ಸಂಬಂಧ ಕ್ರಿ.ಶ. ೧೮೬೩ರಲ್ಲಿ ಕೋರ್ಟಿಗೆ ಹಾಜರು ಪಡಿಸಿದ್ದು, ಆ ಕೋರ್ಟಿನ ಕೇಸಿನ ತೀರ್ಪಿನಲ್ಲಿ ಅದನ್ನು ಉದ್ಧರಿಸಲಾಗಿದೆ. ಅದರಲ್ಲಿ ಬ್ರಹ್ಮಾವರ ಬಾರಕೂರು, ಉಡುಪಿ, ಹಳ್ಳಿ ಮತ್ತು ಮೂಡಪಡು ಗ್ರಾಮಗಳಲ್ಲಿ ಈ ಮನೆತನಕ್ಕೆ ಅರಸರಿಂದ ಕೊಡಲ್ಪಟ್ಟ ಭೂಮಿಯ ವಿವರಗಳು ಮತ್ತು ಆ ಬಗ್ಗೆ ಕುಟುಂಬಕ್ಕೆ ಇರುವ ಬಾಧ್ಯತೆಗಳ ವಿವರಗಳಿವೆ. ಅದರಲ್ಲಿ ಈ ಅಗ್ರಹಾರದಲ್ಲಿರುವ ಬ್ರಾಹ್ಮಣರ ದೈನಂದಿನ ನಿತ್ಯಕರ್ಮ, ವೇದಾಧ್ಯಯನ ವಿದ್ಯಾರ್ಥಿಗಳಿಗೆ ಅಧ್ಯಾಪನ, ಬ್ರಹ್ಮಯಜ್ಞ, ಅಗ್ನಿಹೋತ್ರ ಇವುಗಳನ್ನು ಅಗ್ರಹಾರ ವೃತ್ತಿ ಎಂದು ಪರಿಗಣಿಸಲ್ಪಟ್ಟಿರುವುದನ್ನು ನೋಡಬಹುದು. ಅಲ್ಲದೆ ಅವರು ಅಗ್ರಹಾರ ವೃತ್ತಿಯಲ್ಲಿ ನಿಷ್ಠರಾಗಿ ದೊರೆಗಳಿಗೆ ಹೆಚ್ಚಿನ ಅಭಿವೃದ್ಧಿಯಾಗಲಿ ಅಲ್ಲದೆ ಪ್ರಜೆಗಳಿಗೆ ಸುಖ ದೊರೆಯಲಿ ಎಂದು ಶ್ರೀ ದೇವರಲ್ಲಿ ಪ್ರಾರ್ಥನೆ ಮಾಡುವಂತೆ ದೊರೆತನದವರು ನಡೆದು ಬಂದ ಪ್ರಕಾರ ನಡೆಯುವಂತಾದ್ದಕ್ಕೆ ಪೂರಕವಾಗಿ ಉಂಬಳಿಯಲ್ಲಿ[೮] ಬ್ರಹ್ಮಾದಾಯವನ್ನು ವೈದಿಕ ಧರ್ಮದಲ್ಲಿ ನಂಬಿಕೆ ಇಟ್ಟು ಅಗ್ರಹಾರಕ್ಕೆ ಆದಂತಹ ಇತರರಿಗೆ ಅಗತ್ಯವಾದ ಇಷ್ಟ ಹೋಮಗಳು, ಪೂಜೆ, ಜಪಾನುಷ್ಠಾನ, ನಿತ್ಯಕರ್ಮ, ಅಗ್ನಿಹೋತ್ರ ಇತಿಹಾಸ ಪುರಾಣಗಳ ವ್ಯಾಖ್ಯಾನ, ಚರ್ಚೆ, ವಿಮರ್ಶೆ ಜ್ಯೋತಿಷಕ್ಕನುಗುಣವಾಗಿ ಪ್ರಾಪಂಚಿಕ ವ್ಯವಹಾರಗಳ ಬಗ್ಗೆ ಮಾರ್ಗದರ್ಶನ ಮಾಡುವ ಇತರ ವಿಷಯಗಳನ್ನು ಚಿಲ್ಲರೆ ಭಟಮಾನ್ಯ ಎಂದೂ ಗುರುತಿಸಿ ಆ ಕುರಿತು ಸೂರಪ್ಪಯ್ಯನಿಗೆ ರಾಜರು ಕೊಟ್ಟ ಉಂಬಳಿಯಿಂದ ದಾನಶಾಸನ ರೂಪದಲ್ಲಿ ಉತ್ತಾರವಾಗಿ ಅಗ್ರಹಾರದ ಬ್ರಾಹ್ಮಣರಿಗೆ ಉಂಬಳಿಗಳು ಕೊಡಲ್ಪಟ್ಟಿದೆ ಎಂಬುದಾಗಿ ದಾಖಲಿಸುತ್ತದೆ.

ಇವಲ್ಲದೆ ಈ ಬ್ರಾಹ್ಮಣರು ಅಗ್ರಹಾರಕ್ಕೆ ಸಂಬಂಧಿಸಿದ ಅಥವಾ ಸೂರಪ್ಪಯ್ಯನ ಉಸ್ತುವಾರಿಯ ಇತರ ದೇವಸ್ಥಾನಗಳ ಉಪಾಧಿಗಳನ್ನು ನಡೆಸಿಕೊಂಡು ಬರಬೇಕಿತ್ತು. ಆ ಕುರಿತು ಇಲ್ಲಿನ ಅಗ್ರಹಾರದ ಬ್ರಾಹ್ಮಣ ಮನೆತನದ ಹಳೆಯ ದಾಖಲೆಗಳಲ್ಲಿ ಮತ್ತು ಸೂರಪ್ಪಯ್ಯನ ಮನೆತನದವರು ಅಗ್ರಹಾರದ ಪಕ್ಕದಲ್ಲಿಯೇ ಹೊಂದಿರುವ ದೊಡ್ಮನೆಯ ಪತ್ರಾಗಾರದಲ್ಲಿ ಇಂದೂ ಲಭ್ಯವಿರುವ ದಾಖಲೆಗಳಲ್ಲಿ ಕಾಣಬಹುದಾಗಿದೆ.

**ವೆಂಕಟೇಶೀ ಪ್ರಯೋಗ ಮಾಲಾ :** ಇದೇ ಅಗ್ರಹಾರದ ಜೋಯಿಸ ಮನೆತನದ ವೆಂಕಟೇಶ ಭಟ್ಟ ಎಂಬುವನು 'ಯಜುರ್ವೇದೀಯ ಬೋಧಾಯನ ವೆಂಕಟೇಶೀ ಪ್ರಯೋಗಮಾಲಾ' ಎಂಬ ಪುಸ್ತಕವನ್ನು ತಿಗಳಾರಿ ಲಿಪಿಯಲ್ಲಿ ರಚಿಸಿದ್ದು ಎಲ್ಲಾ ವೈದಿಕರಿಂದ ಅದು ಮನ್ನಣೆಗಳಿಸಿದೆ. ವೇದೋಕ್ತವಾದ ಪೂರ್ವ ಷೋಡಶ ಸಂಸ್ಕಾರಗಳು, ಮತ್ತು ಔರ್ಧ್ವ ದೈಹಿಕ ಅಪರ ಷೋಡಶ ಸಂಸ್ಕಾರಗಳನ್ನು ನಡೆಸುವ ವಿಧಿ ವಿಧಾನಗಳು, ತತ್ಸಂಬಂಧಿತ ಮಂತ್ರಗಳು ಈ ಹೊತ್ತಗೆಯಲ್ಲಿದೆ. ಅಲ್ಲದೆ ನಿತ್ಯಕರ್ಮಗಳು ದೇವತಾಪೂಜೆಗಳು, ಗ್ರಹಚಾರ ಶಾಂತಿಯ ವಿಧಿ ವಿಧಾನಗಳು ಹಾಗೂ ಅವಕ್ಕನುಗುಣವಾದ ಜ್ಯೋತಿಷ್ಯ ಸಂಬಂಧಿ ಪ್ರಶ್ನೋತ್ತರಗಳು ಈ ಪುಸ್ತಕದಲ್ಲಿವೆ. ವೆಂಕಟೇಶಭಟ್ಟನ ಕಾಲನಿರ್ಣಯ ಮತ್ತು ವೆಂಕಟೇಶೀ ಪ್ರಯೋಗದ ಸಮಗ್ರ ಅಧ್ಯಯನ ಸಂಶೋಧನಾ ದೃಷ್ಟಿಯಿಂದ ಇನ್ನು ಆಗಿಲ್ಲ. ಈ ವೆಂಕಟೇಶೀ ಪ್ರಯೋಗವು ಅಗ್ರಹಾರದ ಮೇಲ್ವಿಚಾರಕರಾಗಿದ್ದ ಸೂರಪ್ಪಯ್ಯನ ಕುಟುಂಬದ ಪಾಂಡೇಶ್ವರ ಪರಮೇಶ್ವರಯ್ಯ ಎಂಬವರ ಮೂಲಕ ಕರ್ಕಿಯ ಸೂರಿ ವೆಂಕಟರಮಣ ಭಟ್ಟರು ಸಂಪಾದಿಸಿ ಕ್ರಿ.ಶ. ೧೮೮೩ರಲ್ಲಿ ಮುಂಬಯಿ ಕರ್ನಾಟಕ ಮುದ್ರಣಾಲಯದಲ್ಲಿ ದೇವನಾಗರಿ ಲಿಪಿಯಲ್ಲಿ ಮುದ್ರಿಸಿ ಪ್ರಕಟಿಸಿದರು[೯]. ಬಹು ಬೇಡಿಕೆಯ ಈ ಪುಸ್ತಕ ಈಗಾಗಲೇ ಹಲವಾರು ಮುದ್ರಣಗಳನ್ನು ಕಂಡಿದೆ.

**ಅಗ್ರಹಾರದ ಅವನತಿ :** ಸೂರಪ್ಪಯ್ಯನ ಅಗ್ರಹಾರ ೧೮ ಮತ್ತು ೧೯ನೆಯ ಶತಮಾನದ ಆದಿ ಭಾಗದಲ್ಲಿ ಬಹಳ ಉಚ್ಛ್ರಾಯ ಸ್ಥಿತಿಯಲ್ಲಿತ್ತು. ಹುಲ್ಲುಮಾಡಿನ ಆಗಿನ ಈ ಬ್ರಾಹ್ಮಣರ ಮನೆಗಳು ಎರಡು ಬಾರಿ ಅಂದರೆ ಕ್ರಿ.ಶ. ೧೮೧೭ ಮತ್ತು ೧೮೪೦ರಲ್ಲಿ ಬೆಂಕಿಗಾಹುತಿಯಾದ ಬಗ್ಗೆ

ದಾಖಲೆಗಳಿವೆ. ಕ್ರಿ.ಶ. ೧೮೧೭ರಲ್ಲಿ ಬೆಂಕಿ ಅನಾಹುತವಾದ ಕುರಿತ ತನಿಖೆಯ ವರದಿಗಳು ಈ ಮನೆತನದ ಪತ್ರಾಗಾರದಲ್ಲಿವೆ. ಇದಲ್ಲದೆ ಕ್ರಿ.ಶ. ೧೮೪೦ರಲ್ಲಿ ಆಗಿನ ಜಿಲ್ಲಾ ಕಲೆಕ್ಟರರು ಭೇಟಿ ನೀಡಿದ ಸಂದರ್ಭದಲ್ಲಿ ಸಭೆ ಸಮಾರಂಭಕ್ಕೆ ಅಡಚಣೆಗಳ ಮನೆಯ ಮಾಡುಗಳಿಗೆ ಸೇರಿಸಿದಂತೆ ಭಾರೀ ಚಪ್ಪರ ಹಾಕಿದ್ದರು. ಅಗ್ರಹಾರದ ಶಿಸ್ತು, ವ್ಯವಸ್ಥೆ, ವೆಂಕಟೇಶೀ ಪ್ರಯೋಗ ಮಾಲಾದಂತಹ ಉತ್ತಮ ಗ್ರಂಥ ಇರುವುದು ಇವನ್ನೆಲ್ಲಾ ಗಮನಿಸಿದ ಜಿಲ್ಲಾ ಕಲೆಕ್ಟರರು ಅಗ್ರಹಾರವೆಂದರೆ ಸೂರಪ್ಪಯ್ಯನ ಅಗ್ರಹಾರ, ಬಾಕಿ ಅಗ್ರಹಾರಗಳು ನೆಪಕ್ಕೆ ಮಾತ್ರ ಎಂದು ಹೊಗಳಿದರು[೧೦]. ಇದರಿಂದಾಗಿ ಜನರ ಕಣ್ಣಿಗೆ ಈ ಅಗ್ರಹಾರ ಜಿತ್ತು ಎನ್ನುತ್ತಾರೆ. ಅದೇ ದಿನ ರಾತ್ರಿ ಒಂದು ಸಣ್ಣ ಅಜಾಗರೂಕತೆಯಿಂದಾಗಿ ಇಡೀ ಚಪ್ಪರಕ್ಕೆ ಬೆಂಕಿ ಹಿಡಿದು ಎಲ್ಲಾ ಮನೆಗಳೂ ಮತ್ತೊಮ್ಮೆ ಸುಟ್ಟು ಹೋದವು. ಅಂದಿನಿಂದ ಈ ಅಗ್ರಹಾರ ತನ್ನ ವೈಭವವನ್ನು ಕಳೆದುಕೊಂಡಿತ್ತು. ಇಲ್ಲಿನ ಯಜಮಾನಿಕೆ ಮಾತ್ರ ಇಂದಿಗೂ ಸೂರಪ್ಪಯ್ಯನ ಕುಟುಂಬಸ್ಥರಾದ ಪಿ. ವಾಸುದೇವರಾವ್ ರವರು ನಡೆಸಿಕೊಂಡು ಬರುತ್ತಿದ್ದಾರೆ.

**ಸೂರಪ್ಪಯ್ಯನ ಮಠ :** ಈ ಮಠವು ಉಡುಪಿಯ ತೆಂಕಪೇಟೆ ರಸ್ತೆಯಲ್ಲಿದೆ. ಇಲ್ಲಿ ಶ್ರೀ ಪ್ರಸನ್ನ ಸೋಮೇಶ್ವರ ದೇವಸ್ಥಾನವಿದೆ. ಬಹಳ ಹಿಂದಿನಿಂದಲೂ ಬಾರಕೂರು ಸಂಸ್ಥಾನಕ್ಕೆ ಸೇರಿದ ಸ್ಮಾರ್ತ ಸಂಪ್ರದಾಯದ ಮಠವು ಉಡುಪಿಯಲ್ಲಿ ಮಾಧ್ವ ಸಂಪ್ರದಾಯದ ಮಠಗಳ ಪ್ರಾಬಲ್ಯದಿಂದಾಗಿ ಬಹಳ ಜೀರ್ಣಾವ್ಯಸ್ಥೆಯಲ್ಲಿತ್ತು. ೧೮ನೇ ಶತಮಾನದಲ್ಲಿ ಬಾರಕೂರು ಸೂರಪ್ಪಯ್ಯನವರು ಇದರ ಜೀರ್ಣೋದ್ಧಾರ ಮಾಡಿ ಕೋಟದ ಸಮೀಪ ಸಾಲಿಗ್ರಾಮದಿಂದ[೧೧] ಭದ್ರಭಟ್ಟ ಎಂಬುವರನ್ನು ಪೂಜೆಗಾಗಿ ನಿಯೋಜಿಸಿದರು ಮಾತ್ರವಲ್ಲ, ಉಡುಪಿಯ ಆಸುಪಾಸಿನಲ್ಲಿ ಸಾಕಷ್ಟು ಜಮೀನನ್ನು ಉತ್ತಾರವಾಗಿ ಬಿಟ್ಟರು. ಆ ಕಾಲದಲ್ಲಿ ಕಟ್ಟಲ್ಪಟ್ಟ ಈ ಮಠದ ಕಂಬಗಳ ವಿನ್ಯಾಸ ಸೂರಪ್ಪಯ್ಯನವರ ಬ್ರಹ್ಮಾವರದ ದೊಡ್ಡಮನೆಯ ಕಂಬಗಳ ವಿನ್ಯಾಸದಂತೆಯೇ ಇತ್ತು. ಈ ಮಠವು ವಿದ್ಯಾರ್ಥಿಗಳ ಕಲಿಕೆಯ ಮಠವಾಗಿತ್ತೇ ಪ್ರಯಾಣಿಕರ ತಂಗುದಾಣವಾಗಿತ್ತೇ ಅಥವಾ ಜ್ಯೋತಿಷ್ಯ ಆಧಾರಿತ ಗ್ರಹಚಾರ ಶಾಂತಿ ಹೋಮ, ಪೂರ್ವ ಸಂಸ್ಕಾರ ಇತ್ಯಾದಿಗಳನ್ನು ನಡೆಸುವ ಧಾರ್ಮಿಕ ಕೇಂದ್ರವಾಗಿತ್ತೇ ಎಂಬುದು ಸ್ಪಷ್ಟವಾಗುವುದಿಲ್ಲ. ಇತ್ತೀಚೆಗೆ ಪುನಃ ಈ ಮಠವನ್ನು ಜೀರ್ಣೋದ್ಧಾರ ಮಾಡಲಾಗಿದೆ. ಇಂದು ಇದರ ಆಡಳಿತವನ್ನು ಭದ್ರಭಟ್ಟರ ಕುಟುಂಬದವರಾದ ಗೌರೀಶಂಕರ ಭಟ್ಟ ಎಂಬವರು ನೋಡಿಕೊಳ್ಳುತ್ತಿದ್ದಾರೆ.

**ಮಾಯಗುಂಡಿ ಮಠ :** ಒಂದು ಐತಿಹ್ಯದ ಪ್ರಕಾರ ಬಹಳ ಹಿಂದೆ ಇಲ್ಲಿನ ಪಾಳೆಯಗಾರ ಪಳಪಟ್‌ನಾಯಕ ಒಂದು ಕೆರೆ ಕಟ್ಟಿಸಲಿಕ್ಕಾಗಿ ಈ ಪ್ರದೇಶದಲ್ಲಿ ಗುಂಡಿ ತೋಡಿಸಿದನಂತೆ. ಆದರೆ ನೀರು ಬರಲಿಲ್ಲ. ಆಗ ಸಮೀಪದ ಹಂಗಾರಕಟ್ಟೆಯ ಬಾಳಕುದ್ರು ಮಠದ ಸ್ವಾಮಿಗಳಲ್ಲಿ ತನ್ನ ಅಳಲನ್ನು ತೋಡಿಕೊಂಡಾಗ ಅವರು ಕಾಶಿಗೆ ತೀರ್ಥಯಾತ್ರೆಗೆ ಹೊರಟಿರುವುದಾಗಿಯೂ ಆ ಯಾತ್ರೆ ಮುಗಿಸಿ ಬಂದು ಆತನ ಸಮಸ್ಯೆ ಬಗೆಹರಿಸುವುದಾಗಿಯೂ ತಿಳಿಸಿದರಂತೆ. ಮುಂದೆ ಕೆಲವು ತಿಂಗಳ ಸಂಚಾರದ ಬಳಿಕ ಸ್ವಾಮಿಗಳ ಸವಾರಿ ಈ ಪ್ರದೇಶಕ್ಕೆ ಚಿತ್ತೈಸಿತು. ಸ್ವಾಮಿಗಳು ಪಳಪಟ್‌ನಾಯಕ ತೋಡಿಸಿದ ಗುಂಡಿಯ ವಾಯವ್ಯ ಭಾಗದಲ್ಲಿ ತಪಸ್ಸಿಗೆ ಕುಳಿತರು.ತಪಸ್ಸಿನಿಂದಾಗಿ ನೀರು ತರಿಸುತ್ತೇನೆ. ನೀರು ಎದೆಮಟ್ಟಕ್ಕೆ ಬಂದಾಗ ನನ್ನನ್ನು ಎಚ್ಚರಿಸಿ ಎಂದು ಶಿಷ್ಯರಿಗೆ ಹೇಳಿದ್ದರಂತೆ ರಾತ್ರಿ ದಡದ ಬಳಿ ಶಿಷ್ಯರು ನಿದ್ದೆ ಹೋದರು. ಬೆಳಗ್ಗೆ ಶಿಷ್ಯರು ಅವರನ್ನು ನೋಡುವುದರೊಳಗೆ ಕೆರೆಯಲ್ಲಿ ನೀರು ತುಂಬಿ ಸ್ವಾಮಿಗಳು ಕಾವಿ ಬಟ್ಟೆ ಕಮಂಡಲು ನೀರಲ್ಲಿ ತೇಲುತ್ತಿತ್ತಂತೆ. ಬಾಳಕುದ್ರು ಮಠದ ಪ್ರಥಮ ಯತಿಗಳಾದ ಕೈವಲ್ಯ ಮಠಾಧೀಶರು ಈ ಗುಂಡಿಯಲ್ಲಿ ದೈವಾಧೀನರಾದರು ಅಥವಾ ಮಾಯವಾದರು. ಆದುದರಿಂದ ಈ ಪ್ರದೇಶಕ್ಕೆ ಮಾಯಗುಂಡಿ ಎಂದು ಹೆಸರಾಯಿತಂತೆ . ಈಗಲೂ ಕೆರೆಯ ದಕ್ಷಿಣ ದಂಡೆಯಲ್ಲಿ ಅವನತಿಯಂಚಿನಲ್ಲಿರುವ ಒಂದು ಶಿಲಾ ಶಾಸನವಿದೆ. ಓದಲು ಅಸ್ಪಷ್ಟವಾಗಿರುವ ಈ ಶಾಸನವನ್ನು ಅಲ್ಲಿಯವರು ಈ ರಾಜನ ನೆನಪಿಗಾಗಿ ಹಾಕಿರುವುದಾಗಿ ತಿಳಿದಿದ್ದಾರೆ.

ಈ ಕೆರೆತಟದಲ್ಲಿ ಶ್ರೀ ಉಮಾಮಹೇಶ್ವರ ದೇವಸ್ಥಾನವಿದೆ. ಇದೇ ಮಾಯಗುಂಡಿ ಮಠವೆಂದು ಕರೆಯಲ್ಪಡುತ್ತದೆ. ಮಠವು ಸುಮಾರು ೮೦೦ ವರ್ಷಗಳಿಂದ ಅಸ್ತಿತ್ವದಲ್ಲಿರುವುದಾಗಿ ತಿಳಿದು ಬರುತ್ತದೆ. ಪಳಪಟ್‌ನಾಯಕ ಕೆರೆ ತೋಡಿಸಿದ್ದಲ್ಲದೇ ಅಲ್ಲಿಯೇ ಮೇಲುಗಡೆ ಸುಮಾರು ೩೦೦ ಮೀಟರ್ ದೂರದಲ್ಲಿ ಉಡುಪಿಗೆ ಹೋಗುವ ದಾರಿಯಲ್ಲಿ ಅರವಟ್ಟಿಗೆ ಎಂದು ಕರೆಯಲ್ಪಡುವ ಒಂದು ಅಂಬಾಗಿಲನ್ನು ಮಾಡಿಸಿದ. ಮಾಯಗುಂಡ ಮಠವೂ ಸಹ ಅಂಬಾಗಿಲನ್ನು (ಅರವಟ್ಟಿಗೆ) ನಡೆಸುತ್ತಿದ್ದ ಒಂದು ತಂಗುದಾಣ ವಾಗಿತ್ತು. ಇದರ ಒಡೆತನ ಕೆಳದಿ ಕಾಲಕ್ಕೆ ಬಾರ್ಕೂರು ಸೂರಪ್ಪಯ್ಯನ ಮನೆತನದವರಿಗೆ ಸೇರಿತ್ತು. ಪ್ರಕೃತ ಇಂದೂ ಸಹ ಇದು ಮಾಯಗುಂಡಿ ವಾಸುದೇವ ಭಟ್ ಇವರ ಅಧ್ಯಕ್ಷತೆಯಲ್ಲಿ ಅವರದೇ ಕುಟುಂಬದ ಸದಸ್ಯತ್ವದ ಆಡಳಿತ ಮಂಡಳಿಯಿಂದ ನಡೆಯಲ್ಪಡುತ್ತಿದೆ.

**ಬ್ರಹ್ಮಾವರದ ಪೇಟೆ ಹನುಮಂತ ದೇವರ ಗುಡಿ :** ಕೃಷ್ಣಾ ತೀರದ ಮಾಧ್ವ ಸಂಪ್ರದಾಯದ ಶ್ರೀ ಶ್ರೀ ಪ್ರದ್ಯುಮ್ನ ತೀರ್ಥರು ಮತ್ತು ಶ್ರೀ ಶ್ರೀ ಅನಿರುದ್ಧ ತೀರ್ಥರು ಬ್ರಹ್ಮಾವರಕ್ಕೆ

ಬಂದು ಇಲ್ಲಿ ಶ್ರೀ ಹನುಮಂತ ದೇವರನ್ನು ಪ್ರತಿಷ್ಠಾಪಿಸಿ ಪೂಜಾದಿಗಳನ್ನು ನಡೆಸಿಕೊಂಡು ಬರುತ್ತಿದ್ದರು. ಇವರು ದೈವಾಧೀನರಾದ ನಂತರ ಇಲ್ಲಿನ ಪೂಜಾವಿಧಿಗಳಿಗೆ ಆರ್ಥಿಕ ಕೊರತೆ ಉಂಟಾಯಿತು. ಇದಕ್ಕೆ ತನ್ನ ಆಸ್ತಿಗಳನ್ನು ಉತ್ತಾರವಾಗಿ ಬಿಡುವುದರ ಮೂಲಕ ಸೂರಪ್ಪಯ್ಯನವರು ಸಹಾಯಹಸ್ತ ನೀಡಿ ಪೂಜಾದಿಗಳು ಸಾಂಗವಾಗಿ ನಡೆದುಕೊಂಡು ಹೋಗುವಂತೆ ನೋಡಿಕೊಡರು[೧೨]. ಶ್ರೀ ಶ್ರೀ ಪ್ರದ್ಯುಮ್ನ ತೀರ್ಥರು ಮತ್ತು ಶ್ರೀ ಶ್ರೀ ಅನಿರುದ್ಧ ತೀರ್ಥರ ವೃಂದಾವನಗಳು ಹನುಮಂತ ದೇವರ ಗುಡಿಯ ಎದುರಿನ ಅಂಗಳದ ಬದಿಯಲ್ಲಿವೆ. ಈಗ ಈ ಗುಡಿಯ ಆಡಳಿತ ಅರ್ಚಕರಾದ ಬಿ. ರಾಮಕೃಷ್ಣ ಆಚಾರ್ ಎಂಬುವರ ಕುಟುಂಬ ನೋಡಿಕೊಳ್ಳುತ್ತಿದೆ.

ಕ್ರಿ.ಶ. ೧೭೩೪ ರಲ್ಲಿ ಬಾರ್ಕೂರು ಸೂರಪ್ಪಯ್ಯನವರು ಉಡುಪಿಯ ನಿಡಂಬೂರು ಶ್ರೀಧರ ಬಲ್ಲಾಳರಿಂದ ನಯಂಪಳ್ಳಿ ಗ್ರಾಮದಲ್ಲಿ ನೂರು ಮುಡಿ ಆಸ್ತಿ ಖರೀದಿಸಿದುದನ್ನು ದಾಖಲೆಯೊಂದು ತಿಳಿಸುತ್ತದೆ.[೧೩] ಈ ಆಸ್ತಿಯನ್ನು ಸೂರಪ್ಪಯ್ಯನವರು ತಮ್ಮ ಹೆಸರಿನಲ್ಲಿದ್ದ ಸೂರಪ್ಪಯ್ಯನ ಮಠ, ಮಾಯಗುಂಡ ಮಠ, ಹನುಮಂತ ದೇವರ ಗುಡಿ ಮತ್ತು ಚಾಂತಾರು ಅಗ್ರಹಾರಕ್ಕೆ ಮತ್ತು ಮಠದ ಅರ್ಚಕ ಭದ್ರಭಟ್ಟರ ಕುಟುಂಬಕ್ಕೆ ಉತ್ತಾರವಾಗಿ ನೀಡಿದ್ದರು. ಆದರೆ ಉತ್ತಾರದ ಒಡಂಬಡಿಕೆಯ ಶರ್ತ ಉಪಶರ್ತಗಳನ್ನು ಕಾಲಕಾಲಕ್ಕೆ ಕಾನೂನಿನ ಚೌಕಟ್ಟಿನ್ನಿಟ್ಟು ವಕೀಲರುಗಳು ತಪ್ಪಾಗಿ ಅರ್ಥೈಸಿ ವ್ಯಾಖ್ಯಾನಿಸಿದ್ದರ ಪರಿಣಾಮ ಆ ಭೂಮಿಗಳೆಲ್ಲ ಇಂದು ಕೈ ತಪ್ಪಿಹೋಗಿರುವುದಾಗಿ ತಿಳಿದು ಬರುತ್ತದೆ.

**ಬಾರ್ಕೂರಿನ ದೇವಸ್ಥಾನಗಳ ಕೈಂಕರ್ಯ :** ಸ್ವತಃ ಬಾರ್ಕೂರಿನವರೇ ಆದ ಸೂರಪ್ಪಯ್ಯನ ಕುಟುಂಬಕ್ಕೆ ಬಾರ್ಕೂರಿನ ವಿವಿಧ ದೇವಸ್ಥಾನಗಳ ಉಪಾಧಿ ಲಭಿಸಿತ್ತು. ಅದರಲ್ಲಿ ಬನ್ನಿ ಮಹಂಕಾಳಿ ದೇವಾಸ್ಥಾನದ ಆಡಳಿತ ತೀರ ಇತ್ತೀಚಿನವರೆಗೂ ಅವರ ಕೈಯಲ್ಲಿತ್ತು.

**ಮನೆತನದ ವಿಶೇಷತೆ :** ಕೆಳದಿ ಅರಸರಿಂದ ಮಂಗಳೂರು ಪ್ರಾಂತದ ಜನರಲ್ ಮತ್ತು ಧರ್ಮ ಪ್ರತಿನಿಧಿಯಾಗಿದ್ದ ಬಾರ್ಕೂರು ಸೂರಪ್ಪಯ್ಯನ ಮನೆತನ ಬ್ರಹ್ಮಾವರ ಪ್ರದೇಶದ ಒಂದು ಪ್ರತಿಷ್ಠಿತ ಜಮೀನ್ದಾರಿ ಮನೆತನವಾಗಿದೆ. ಜನರಲ್ ಸೂರಪ್ಪಯ್ಯನವರಿಗೆ ಸಂತಾನ ಇರಲಿಲ್ಲ. ಅವರು ತುಂಬಾ ಶ್ರೀಮಂತರಾಗಿದ್ದರೂ ಬೇರೆಯೇ ಮನೆಯನ್ನು ಹೊಂದಿದ್ದರೂ (ಪ್ರತ್ಯೇಕ ಕುಟುಂಬವಾಗಿದ್ದರೂ) ತಮ್ಮ ಕುಟುಂಬದಿಂದ ದತ್ತು ತೆಗೆದುಕೊಳ್ಳಲಿಲ್ಲ. ಅವರ ಮೂಲಕ ಸೋದರ ಹಾಗೂ ಗೋತ್ರ ಸಂಬಂಧಿಗಳು ಮೂಲಕ ಮನೆತನ ಮುಂದುವರಿದುಕೊಂಡು ಬಂದಿತು. ಸೂರಪ್ಪಯ್ಯನ ನಂತರವೂ ಈ ಮನೆಯವರು ಕೆಳದಿ ರಾಜ್ಯದಲ್ಲಿ ಈ ಭಾಗದ ಧರ್ಮಪ್ರತಿನಿಧಿಗಳಾಗಿ ಮುಂದುವರಿದಿದ್ದರು[೧೪].

ಕುಟುಂಬದ ಹಿಸ್ಸೆಬಾಬ್ತು ಕೋರ್ಟು ಕಮಿಶನರು ತಾ. ೨೬-೧-೧೯೦೦ರಲ್ಲಿ ತಯಾರಿಸಿದ ಪಟ್ಟಿಯಲ್ಲಿನ ಆಸ್ತಿಯ ಮತ್ತು ಸ್ಥಿರ ಚರ ಸ್ವತ್ತುಗಳ ಪಟ್ಟಿ ಪುಟಗಟ್ಟಲೆ ಇವೆ. ಮನೆಯಲ್ಲಿ ಆ ಕಾಲಕ್ಕೆ ಒಂದು ಲಕ್ಷಕ್ಕೂ ಅಧಿಕ ಬೆಲೆ ಬಾಳುವ ಚಿನ್ನದ ಆಭರಣಗಳು, ಚಿನ್ನದ ಕಟ್ಟಿನ ಬಲಮುರಿ ಶಂಖ, ಒಂದು ಲಕ್ಷಕ್ಕೂ ಅಧಿಕ ಬೆಲೆಯ ಬೆಳ್ಳಿಯ ಸಾಮಾನುಗಳು ನಾಲ್ಕು ರತ್ನಗಂಬಳಿಗಳು, ಮೂರು ಮಂಚಾಲುಗಳು ಮೂರು ಪಾಲಕಿಗಳು ೨೫ಕ್ಕೂ ಮಿಕ್ಕ ಪಟ್ಟೆ ಸೀರೆಗಳು ನೂರಕ್ಕೂ ಮಿಕ್ಕ ತಾಳೆಗರಿ ಹಾಗೂ ಇತರ ಮುದ್ರಿತ ಪುಸ್ತಕಗಳು ಇದ್ದವು. ಹಿಸ್ಸೆ ವ್ಯಾಜ್ಯಕ್ಕಾಗಿ ಕೋರ್ಟ್ ಮೆಟ್ಟಿಲನ್ನೇರಿದ್ದರೂ ಕೊನೆಗೆ ರಾಜಿಯಲ್ಲಿ ಕ್ರಿ.ಶ. ೧೯೦೫ರಲ್ಲಿ ಹಿಸ್ಸೆಯಾಗಿದೆ. ಮೂಲ ಮನೆಯಾದ ಉಡುಪಿ ತಾಲೂಕಿನ ಮೂಡಪಡು ಗ್ರಾಮದ ಪಾಂಡೇಶ್ವರದಲ್ಲಿ, ಬ್ರಹ್ಮಾವರದಲ್ಲಿ ದೊಡ್ಮನೆ ಹಾಗೂ ಬಾರ್ಕೂರಿನ ಹೊಸಾಳ ಎಂಬಲ್ಲಿ ಮೂರನೇ ಮನೆ ಇದ್ದಿತು. ಸುಮಾರು ೬೦ ಅಂಕಣವಿದ್ದ ಇವರ ಬ್ರಹ್ಮಾವರದ ದೊಡ್ಮನೆಯಲ್ಲಿ ಈಗ ಅರ್ಧಾಂಶ ಮಾತ್ರ ಉಳಿದಿದೆ.[೧೫] ಮಂಗಳೂರಿನ ಬೋಳಾರ ಎಂಬಲ್ಲಿ ಜನರಲ್ ಸೂರಪ್ಪಯ್ಯನವರು ಮನೆ ಹೊಂದಿರುವ ಕುರಿತು ಬ್ರಹ್ಮಾವರ ಮನೆಯ ಪತ್ರಾಗಾರದ ದಾಖಲೆಗಳು ತಿಳಿಸುತ್ತವೆ.[೧೬] ಈ ಕುಟುಂಬದ ಶ್ರೀ ಜಿ.ಆರ್. ಪಾಂಡೇಶ್ವರ (ಗಣಪತಿರಾವ್ ಪಾಂಡೇಶ್ವರ) ಇವರ ಸಾಹಿತಿಯಾಗಿ, ಪತ್ರಕರ್ತರಾಗಿ ಸಂಯುಕ್ತ ಕರ್ನಾಟಕ, ಕರ್ಮವೀರ, ಕಸ್ತೂರಿ ಮಾಸಪತ್ರಿಕೆಗಳ ಮೂಲಕ ಹಾಗೂ ಸಮಾಜ ಸುಧಾರಕರಾಗಿ ಉತ್ತಮ ವಾಗ್ಮಿ ಮತ್ತು ಯಕ್ಷಗಾನ ಕಲಾವಿದರಾಗಿ (೧೯೦೮-೧೯೮೦ರ ತನಕ) ಜೀವಿಸಿದ್ದರು. ಮನೆಯ ಇತರರೂ ಸ್ಥಳೀಯ ಮಟ್ಟದಲ್ಲಿ ಸಾಮಾಜಿಕ ನೇತಾರರಾಗಿ ಸಾಕಷ್ಟು ಮನ್ನಣೆ ಗಳಿಸಿದ್ದಾರೆ. ಕ್ರಿ.ಶ. ೧೯೩೭ರಲ್ಲಿ ಮೈಲಿಗೆ ರೋಗ ಬಂದು ಬ್ರಹ್ಮಾವರ ಮನೆಯಲ್ಲಿ ಸಮೂಹಿಕ ಬಂದಿತು. ಇಂತಹ ಅನಾಹುತಗಳನ್ನೂ ಮೀರಿ ಈ ಮನೆತನದ ವ್ಯಕ್ತಿಗಳು ವಿದ್ಯಾವಂತರಾಗಿ ದೇಶದ ಹಲವಡೆ ವಾಸಿಸುತ್ತಿದ್ದಾರೆ.[೧೭]

**ಆಡಿತೋಡ ಸಾಧನ ಪ್ರತಿ**

ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಾಮರ ಚಾರವೆ ತ್ರೈಲೊಕ್ಯ ನಗರಾರಂ
ಛ ಮೂಲಸ್ತಂಭವಾದು ಶಂಭವೆ। ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವ
ರುಷ ೧೮೫೭ನೆಯ ಪ್ರಮಾದೀಚ ಸಂವತ್ಸರದ ಶ್ರಾವಣ ಶು ೧೪ಲ್ಲು ಶ್ರೀ ಮತ್ತು
ವಶಿಷ್ಠ ಗೋತ್ರದ ಬೋಧಾಯನ ಸೂತ್ರದ। ಯಜುಃಶಾಖೆಯ। ಬಾರಕೂರಾತ
ಸ್ಥಾಯಿಭಟ್ಟರ ಪ ಉತ್ತರಾದ। ಗಣೇಶ ಭಟ್ಟರ ಪ ಉತ್ತರಾದ ಭೀಮಭಟ್ಟರ ಪು
ತ್ರ ರಾದ। ಸೂರ್ಯಭಟ್ಟರಿಗೆ। ವಿಶ್ವಾಮಿತ್ರಗೋತ್ರದ। ಅಶ್ವಲಾಯನ ಸೂತ್ರದ।
ಋಕ್ಶಾಖೆಯ। ರಂಗನಾಥ ಬಲ್ಲಾಳರ ಪ್ರಪಉತ್ತರಾದ ಶ್ರೀಧರ ಬಲ್ಲಾಳರ ಪ ಉ
ತ್ರ ರಾದ। ರಂಗನಾಥ ಬಲ್ಲಾಳರ ಪುತ್ರರಾದಶ್ರೀಧರ ಬಲ್ಲಾಳರುಕೊಟ್ಟ ಭೂಸ್ವಾ
ಸ್ತಿ ಕ್ರಯದಾನ। ಪಟ್ಟೆ ಕ್ರಮವೆತೆಂದರೆ। ಬಾರಕೂರ ಹೋಬಳಿ ನಿಡಂಬೂರ ಮಾ
ಗಣೆ ವಳಗಣ । ನಂಮ ನಷ್ಟದ ಉಂಬಳಿಯಿಂದ। ನಯಂಪಳ್ಳಿ ಗ್ರಾಮದ।ಅರಿತೊಡ
ಬಯಲಲ್ಲು। ಯೆಳುವರಹಾಂನು..ಣ ವಡ್ಡದ। ಸ್ವಾಸ್ತಗೆ ಚತುರ್ಗಡಿ ವಿ
ವರ। ಮೂಡಲ್ಲು ಅಂಣೆಗೌಡನ ಗದ್ದೆಯಿಂದಂ ಪಡವಲು। ತ್ರೆಂಕಯಿ ಕೃಷ್ಣದೇ...
ರಸಂಕೇತರ ಗದ್ದೆಯಿಂದ ಬಡಗಲ್ಲು ಪಡುಬಯಿ ಸಸ್ಂಕೆತರದ್ದೆಯಿಂದಂಮೂ
ಡಲ್ಲುಬಡಗಲ್ಲು ಅಂಣೆಗಡಣಗದ್ದೆಯಿಂದಂ ತೆಂಕಲ್ಲು। ಯಿಂತಿ ಚತುರ್ಗಡಿವಳ
ಗಣ ಗದೆ--ಅಡಿಗಳ ಮನೆ-----ಯಿಗದ್ದೆವದ್ದಿಬ್ಬರ ಕೊಯಿಲ್ಲು ೭
ಅಂತೆಂಕಲು ವ ೧ರ ಹ ಳ ಆ ಕೆ -----ಕೊ ಳ ಆ ತೆಂಕಲುವ ೧ ರ ಕೊಲಿಲಾ
ತೆಂಕಯಿವ ೧ರ ಕೊ ಅ ತೆಂಕಲು ಮಜಲುಗದ್ದವ ೨ರ ಕೊಯಿಲ ೨ಆತೆಂಕಲು
ವದಿ ೧ರಕೊಶಿ ಅಂ----- ..ಕೊಯಿ ೨೦ಮಜಿಯಿಕೊಯಿಲು ೬ ಉಭಯಂ ಕೊ
ಯಿಲು ೨೬ ಯೀ ವಿಷ್ಣು ಮೂರ್ತಿ ದೇವರ ಪೂರ್ವ ಉತ್ತರ ದಿಕ್ಕಿನಲ್ಲು ಯಿಹ। ಮಕಿಹ
ಲವಕೊಯಿಲು ೧೪ ಕೆಳಗಣ ಬೈಲಲ್ಲು। ಮೂಡಲು ಅಂಮನವರ ದೇವಸ್ಥದ।
ಗಡಿಯಿಂದ।ಪಡುವಲ್ಲು।ತೆಂಕಲ್ಲು ಅಂಣಿಗಡದಗದ್ದೆಯಿಂದಂ ಬಡಗಲ್ಲು
ಪಡುವಲು।ಸಸ್ಂಂಸ್ತಕದಗದಿಯಿಂದಂ ಮೂಡಲು। ಬಡಗಲು ಅಂಣಿಗಡದ
ಗದ್ದೆಯಿಂದಂತ್ಗೆಂಕಲ್ಲು।ಯಿಂತ್ತಿ ಚತುರ್ಗಡ್ತಿವಳಗಣ।ಗದ್ದೆವ ೨ ರಕೊ ೬ ಲ್ಲೂ
ಡಲು ಅಂಮನವರ ದೇವಸ್ಥಾನದ ಗದ್ದೆಯಿಂದ ಪಡುವಲ್ಲು । ತೆಂಕಲು ಅಂಮನ
ಕಾಟು ಹೊಡೆದಿದೆ.
ದೆವರ ದೆವಸ್ವ ಸಂಣಿಗಡದ್ನ ಗದ್ದೆ ತೆಕಲು ಯೀರಿತಿ ಚತುರ್ಗಡಿಯ।
ಒಳಗಣ ಗಡನ ಗದ್ದೆಯಿಂದತೆಂಕಲ್ಲು। ಯಿಂತ್ತಿ ಚತರ್ಗಡಿವಳಗಣ ಗದ್ದೆ।
ವ ೨ ರ ಕೊಯಿಲು ೬ ಮೂಡಲು ಅಮ್ಮನವರ ದವಸ್ಥದಗದ್ದೆ ಯಿಂದಂ ಪಡು
ವಲು।ತೆಂಕಲ್ಲು।ಸಂಕೇತದ ಮಂಣೆಗದ್ದೆಯಿಂದಂ ಬಡಗಲು।ಪಡುವಲು
ಸಂಕೆತದ ಗದ್ದೆಯಿಂದಂ ಮೂಡಲ್ಲು।ಬಡಗಲು।ಅಂಣಿಗಡನಗದ್ದೆಯಿಂ
ದ್ದತೆಂಕಲ್ಲು। ಯಿಂತ್ತಿ ಚತರ್ಗಡಿ ಒಳಗಣ ವಥಿ೨ರ ಕೊಯಿಲು ೭ ಅಂ
ತು ಕೊಯಿಲು ೧೯ಅಂತು ಬೆಂ ಲು ಣಯಿಯಿ ೩೯ಮಜಿಯ ಕೈಯಲು
೬ ಮಕಿಕೊಯಿಯ೧೪ ಅಂತು ಕೊಯಿಲು೫೯ರ ವಿವರ ಅರಿತೊಡ ವಿಷ್ಣು

ಮೂರ್ತಿ ದೇವರಿಗೆ।ಅಮೃತಪಡಿ।ನಂದಾದೀಪ್ತಿ ಸಾಂತ ಉರುತ್ತಿಗೆ ಸಹಾ।ಪ್ರಾಕು
ಉತ್ತಾರ ಗ ೧॥೩ ಯೀ ಗ ಕೃಷ್ಣೂರ್ಪಿತವಾಗಿ ಬಿಟ್ಟರು ಗ ೧ ಹ ೩॥ಉಭಂ ಗ ೩ ಹ ೧॥೦
ಭೂಮಿ ವಿವರ॥ ಅಡಿಗಳ ಮನೆಮುಂದಣ ಬೈಲುಗದ್ದೆವ ೨ವ ಕೊಯಿಲು ೭ ಆ
ತೆಂಕಲುವಕೋಜ ಆ ತೆಂಕಲು ಕೊಟೆ ಆ ತೆಂಕವ ೨ರ ಕೊ ೪ ಆ ತೆಂಕಲು
ವ ಕೊ ೩ ಆ ತೆಂಕಲು ಕೊ ೨ ಅ ವಧಿ ೭ರ ಕೊಯಿಲು ೨೦ರ ಗೇಣಿ ಆ
ಹೂ ೫೦ಯಿಮು೧೨ ದೇವರ ಕೆರೆ ಬನದಲ್ಲು।ಅಂಣಿಗಡ ದಗಡ್ದೆಯಿಂದಂತೆಂ
ಕಲ್ಲು ಕೊ೩ಗೆ ೬ ಅಕ್ಕಿಮು॥ ೫೮ ಯಂಕೊಯಿಲುತಿ ೩ರ ಗೇಣಿ ಅಕೆಮು
೩ ೧೨॥೫ ಗ ೩ ಹ ೧॥ ಟ್ಟು ಗ ೪ ಯ್ವರಹೋರದೃಷ್ಟಿಯಂನ್ನ ನಿಉ
ಉದ್ರಿಸಿದಲ್ಲು ಪ್ರತಿಶೆ ಮಾಡಿದ।ರಾಮಲಿಂಗೇಶ್ವರ ದೇವರ ಅಮೃತ ಪಡಿ ಬಗೆ
ನಿಂಮ ಕೈಯ ಕ್ರಯ ಪರಿವಿದ್ಯವಾಗಿ ತೆಗೆದುಕೊಂಡದು ಗ ೪೦ ನಾಲ್ವತ್ತವರ
ಹಾನು ತೆಗೆದುಕೊಂಡು ಶಿವಾರ್ಪಿತವಾಗಿ ಕೊಟ್ಟರುದಾಲ್ಕು ವರಹಾಂಸ ಭೂ
ಮಿ ವಿವರ ವೇದಮುರ್ತಿ ದೇವಂನೆ ರೈಯಿಂದಂತೆಂಕಲ್ಲು।ಮಜಯಿಗದ್ದೆ
ವ ೩ರ ಕೊಯಿಲು ೬ರ ಗೇಣಿಹಾಗೆ ॥೭॥೦ ಆಪಡುವಲುಮಕಿಕೊ
ಯಿಲ್ಲು ೧೧ರ ಲ್ಮು ೨ ಹಾ ೧೦ ತೆಳಗಣ ವೈಲುವ ೬ರ ಕೊ ೧೯ ರಗೇಣಿಕೊ೧೧।೭
ಅಂತು ಯೊಯಿಲು ೩೬ ಗೇಣಿಅಕಿ ಅಕ್ಕಿಯ ೧೬ರ ಗಟಿಸ್ಥ ಭೂಸ್ವಸ್ತಿಯಂನು
ವಸಿಷ್ಠ ಗೋತ್ರದ।ಬೋಧಾಯನ ಸೂತ್ರದ।ಯಜುಶಾಖೆಯ।ಅಪ್ಪಯಭಟ್ಟರ ಪ್ರ ಪ
ಉತ್ರರಾದ।ಗಣೆಶಭಟರ ಪೌತ್ರರಾದ ಶ್ರೀ ಮ ಭಟರ ಪುತ್ರರಾದ । ಸೂರ್ಯೆಯ
ಬಟ್ಟರಿಗೆ ವಿಶ್ವಾಮಿತ್ರ ಗೊತ್ರದ।ಆಶ್ವಾಯನ ಸೂತ್ರದ।ರುಶ್ಯಾಖೆಯ।ರಂಗನಾಥ ಬಲ್ಲಾಳರ ಪ್ರಪ
ಉತ್ರರಾದ। ಶ್ರೀ ಧರ ಬಲ್ಲಾಳರ ಪೌತ್ರದ।ರಂಗನಾಥ
ಬಲ್ಲಾಳರ ಪುತ್ರರಾದ।ಶ್ರೀಧರ ಬಲ್ಲಾಳರು।ವಿಷ್ಣುಮೂರ್ತಿ ದೇವ್ಸರ ಶಾಂತಿಸಭಾಸ
ಹಿಲ್ರಂಣೋದಸ್ಕ। ದಾನದಾರಾಪೂರ್ವಕವಾಗಿ।ಧಾರೆಯನೆರದುಕೊಟ್ಟೆವಾಗಿ
ಯೀ ಭೂಸ್ವಾಸ್ತಿ ವಳಗುಳ್ಳ ನಿಧಿನಿಕ್ಷೇಪ ಜಲಪಾಶಾಣ ಅಕ್ಷಿಣಿ ಆಗಾಮಿ ಸಿಧ್ಧಸಾ
ಧ್ಯಂಗಳೆಂಬ ಅಷ್ಟಭೋಗತೇಜಸಾಂಮ್ಯವನು।ಈಉದ್ದೇಶದಲ್ಲಿ ನಿ ಉ ಪ್ರತಿಷ್ಠೆ ಮಾಡಿದ।
ರಾಮಲಿಂಗೆಶ್ವರ ದೇವರ।ಅಮೃತಪಡಿ ದೇವತ್ತಾಸೆವೆಮುಂತ್ತಾಗಿ ನಡುಶಿಕೊಂಡು ನಿಂಮ
ಸಂತಾನ ಪಾರಂಪರ್ಯವಾಗಿ।ಅಚಂದ್ರಾರ್ಕ ಸ್ಥಾಯಿಗಳಾಗಿ ಸುಖದಿಂದ ಅನುಭವಿಶಿ
ಕೊಂಡು ಬಹಿರಿ ಯೆಂದು।ಸಾಉ ನಂಮ ಪುತ್ರ ಪೌತ್ರ ಜ್ನಾತಿ।ನೆರೆ ಸಾಮಂತ ದಾಯಾದ್ಯ
ನುಮತದಿಂದ।ನಮಸ್ಯಾವಂಡಂಬಟು। ವಿಶ್ವಾಮಿತ್ರಗೊತ್ರದ।ಆಶ್ಲಾಯನ
ಸೂತ್ರದ।ರುಕ್ಕುಶಾಖೆಯ।ರಂಗನಾಥ ಬಲ್ಲಾಳರ ಮಪೌತ್ರರಾದ ಶ್ರೀಧರ ಬಲ್ಲಾಳ್ಲರ ಪ ಉತ್ರ
ರಾದ।ರಂಬನಾಥ ಬಲ್ಲಾಳರ ಪುತ್ರರಾದ ಶ್ರೀಧರ ಬಲ್ಲಾಲರು। ವಸಿಷ್ಟ ಗೊತ್ರದ।
ಬೊದಾಯನ ಸೂತ್ರದ ಯಜುಶಾಖೆಯ।ಅಪ್ಪಯಭಟ್ಟರ ಪ್ರಪೌತ್ರರಾದ। ಗಣೆಶಭಟರ ಪ
ಉತ್ರರಾದ।ಭೀಮಭಟ್ಟರ ಪುತ್ರ
ರಾದ ಸೂರೈಭಟರಿಗೆ । ಕೊಟ್ಟ ಸ್ವಾಸ್ತಿಕ್ರಯದಾನಪಟ್ಟೆಯಿದಕೆ ದೆವಸಾಕ್ಷಿಗಳು।
ಆದಿತ್ಯ।ಚಂದ್ರಾ।ಅವನಿಲೊಳಶ್ಚ ದೌರ್ಭೂ
ಮಿರಾಪೊಹೃದಯಂ ಯಮಶ್ಚ। ಅಹಶ್ಚ ರಾತ್ರಿಶ್ಚ ಉಬೇಚ ಸಂಧ್ಯೆ ಧರ್ಮಸ್ಯ ಜಾನಾತೆ ನರಸ್ಯ
ಉತಂ। ದಾನಪಾಲನಯೋರ್ಮಧ್ಯೆ ದಾ।ಅನಾಸ್ರೇಯೊನುಪಾಲನಂ।ದಾನಾಸ್ವರ್ಗಮ ವಾಪ್ನೋತಿ

ಪಾಲನಾದಚ್ಯುತಂ ಪಲಂ। ನರಸಾಕ್ಷಿಕಂತಿಪಾತ್ರಯಕಲ್ಲು ಕೋಡ
[illegible]
[illegible]
[illegible]

**ಐತಿಹ್ಯಗಳು**

೧. ಸೂರಪ್ಪಯ್ಯನ ಅಗ್ರಹಾರ ಬೆಂಕಿ ದುರಂತಗಳು– ಮಂಜುನಾಥ ಜೋಶಿ.
೨. ಸೂರಪ್ಪಯ್ಯನ ಮಠದ ಹಿನ್ನಲೆ –ಗೌರಿ ಶಂಕರಭಟ್.
೩. ಮಾಯಾಗುಂಡಿಯಲ್ಲಿ ನೀರು ಬಂದ ವಿಚಾರ–ಎಂ ವಾಸುದೇವಭಟ್

**ಐತಿಹಾಸಿಕ ಕುರುಹುಗಳು**

೧. ನಿಡಂಪಳ್ಳಿಯ ಸೂರಪ್ಪಯ್ಯನ ಅಗ್ರಹಾರ ಮತ್ತು ಬ್ರಾಹ್ಮಣರ ಮನೆಗಳು
೨. ಸೂರಪ್ಪಯ್ಯನ ಮಠ ತೆಂಕಪೇಟೆ ಉಡುಪಿ.
೩. ಮಾಯಗುಂಡಿ ಮಠ ನಿಟ್ಟೂರು ಗ್ರಾಮ ಉಡುಪಿ.
೪. ಅಂಬಾಗಿಲು ಪ್ರದೇಶ ನಿಟ್ಟೂರು ಗ್ರಾಮ ಉಡುಪಿ.
೫. ಪಾಂಡೇಶ್ವರ ಮನೆಯ ದೇವತಾಮೂರ್ತಿಗಳು/ ಆಭರಣಗಳು.
೬ ಬಾರಕೂರಿನ ವಿವಿಧ ದೇವಾಲಯಗಳು.

(ಈ ಸಂಶೋಧನಾ ಪ್ರಬಂಧವನ್ನು ಸಿದ್ಧಪಡಿಸಲು ನಮ್ಮ ಜೊತೆಗೆ ಸಹಕರಿಸಿದ ಪಿ. ವಾಸುದೇವರಾವ್ ದೊಡ್ಮನೆ, ಬ್ರಹ್ಮಾವರ, ಪಿ. ರಾಮರಾವ್ ಪಾಂಡೇಶ್ವರ, ಪಿ. ಶ್ರೀಧರಮೂರ್ತಿ ಹೊಸಾಳ, ಬಾರ್ಕೂರು, ಇವರುಗಳಿಗೆ ಧನ್ಯವಾದಗಳು. ಅಲ್ಲದೆ ಮಾಹಿತಿ ಸಂಗ್ರಹ ಸಂದರ್ಭದಲ್ಲಿ ಕ್ಷೇತ್ರ ಕಾರ್ಯ ಕಾರ್ಯದಲ್ಲಿ ನಮಗೆ ಮಾಹಿತಿ ನೀಡಿದ ಹಾಗೂ ಜತೆಗೆ ಸಹಕರಿಸಿದ ಎಲ್ಲರಿಗೂ ಧನ್ಯವಾದಗಳು.)



## ಆಧಾರಸೂಚಿ

೧. **ಕೆಳದಿ ನೃಪವಿಜಯ.,** ೧೯೭೭, ಲಿಂಗಣ್ಣ ಕವಿ ಪುಟ ೨೧೫ ಕ.ಸಾ.ಪ. ಪ್ರಕಟಣೆ.
೨. **ಕೆನರಾ ಗ್ಯಾಸೆಟಿಯರ್.**
೩. ಗಣಪತಿರಾವ್ ಐಗಳ್., ದಕ್ಷಿಣ ಕನ್ನಡದ ಇತಿಹಾಸ–ಉಡುಪಿ ಸಂಶೋಧನಾ ಕೇಂದ್ರದ ಪ್ರಕಟಣೆ ಪುಟ ೨೬೬.
೪. ಪಾಂಡೇಶ್ವರ ಮನೆತನದ ಹಿಸ್ಸೆಪಟ್ಟಿ (ಕ್ರಿ.ಶ. ೧೯೦೦).
೫. ವ್ಯಾಜ್ಯಸಂಖ್ಯೆ ೩೬೬–ಕ್ರಿ.ಶ. ೧೮೬೩ರ ಮುನ್ಸೀಫ್ ಕೋರ್ಟು ಉಡುಪಿ ಇದರ ತೀರ್ಪಿನ ನಕಲು.
೬ ಅಗ್ರಹಾರದ ರಂಗಜೋಯ್ಸ ಇವರ ಮನೆತನಕ್ಕೆ ನೀಡಿದ ದಾನಪತ್ರದ ಪ್ರತಿ.
೭. Dr.P.Gururaja Bhat ANTIQUITIUS OF SOUTH CANARA DT.
೮. ವ್ಯಾಜ್ಯಸಂಖ್ಯೆ ೩೬೬– ಇದರಲ್ಲಿ ಆಂಗ್ಲ ನ್ಯಾಯಾಧಿಕಾರಿಗಳಿಗೆ "ಅಗ್ರಹಾರ ವೃತ್ತಿ"ಯ ಕುರಿತು ರೆವಿನ್ಯೂ ಅಧಿಕಾರಿಗಳು ನೀಡಿದ ವಿವರಣಾತ್ಮಕ ಅಫಿದಾವಿತ್.
೯. 'ವೆಂಕಟೇಶೀ ಪ್ರಯೋಗಮಾಲಾ'ದ ೧೮೮೬ರ ಪ್ರಕಟಣೆಯ ಮುನ್ನುಡಿ.
೧೦. ಮಾಹಿತಿ : ಮಂಜುನಾಥ ಜೋಶಿ, ನಿವೃತ್ತ ಅಧ್ಯಾಪಕರು, ಚಾಂತಾರು ಅಗ್ರಹಾರ. ಈ ಘಟನೆಗೆ ಸಂಬಂಧಿಸಿದ ಪತ್ರಗಳೂ ಸಿಕ್ಕಿವೆ.
೧೧. ಗೌರೀಶಂಕರ್‌ಭಟ್, ಸೂರಪ್ಪಯ್ಯನ ಮಠ, ಉಡುಪಿ ಇವರಿಂದ ಮಾಹಿತಿ.
೧೨. ಬಿ.ರಾಮಕೃಷ್ಣ ಆಚಾರ್ ಇವರಿಂದ ಮತ್ತು ಎಂ. ವಾಸುದೇವಭಟ್ ಮಾಯಗುಂಡಿ ಇವರಿಂದ ಮಾಹಿತಿ ಪಡೆಯಲಾಗಿದೆ.
೧೩. ಮನೆಯ ಪತ್ರಾಗಾರದಲ್ಲಿ ಕೊರೆತ ಕ್ರಯದಾನ ಪತ್ರ.
೧೪. ವಂಶವೃಕ್ಷ– ತಯಾರಿಸಿದ ದಿನಾಂಕ ೩೧–೭–೧೮೯೧.
೧೫. ೨೬–೧–೧೯೦೦ರಲ್ಲಿ ಕೋರ್ಟುಕಮೀಶನರು ತಯಾರಿಸಿದ ಪಟ್ಟಿ
೧೬. ಗುಂಡ್ಮಿಚಂದ್ರಶೇಖರ ಐತಾಳ ಬೆಳಕಿನ ಬೀಜ–ಜಿ.ಆರ್.ಪಾಂಡೇಶ್ವರರ ಪರಿಚಯ ಪುಸ್ತಕ.
೧೭. ಕಸ್ತೂರಿ ಮಾಸ ಪತ್ರಿಕೆ ೨೦೦೪ ಇದರಲ್ಲಿ, ಸುಧಾ ವೆಂಕಟೇಶ್ವರರಾವ್ ಇವರ ಲೇಖನ; ಇವಲ್ಲದೇ ಈ ಮನೆತನದ ಅಧ್ಯಯನಕ್ಕೆ ಕ್ರಿ.ಶ. ೧೮೦೭ರಲ್ಲಿ ಅಗ್ರಹಾರಕ್ಕೆ ಅಂದಿನ ಬಾರ್ಕೂರು ತಹಸೀಲ್ದಾರ್ ಸೂರ್ಯನಾರಣಪ್ಪ ನೀಡಿದ ತಖ್ತೀಕಿನ ವಿವರ, ಸೂಟ್ ನಂ. ೩೬೬ ಕ್ರಿ.ಶ. ೧೮೬೩ ಮುನ್ಸೀಫ್ ಕೋರ್ಟು, ಉಡುಪಿ ಇದರಲ್ಲಿನ ಹೇಳಿಕೆಗಳು ಮತ್ತು ತೀರ್ಪು ಜಿಲ್ಲಾ ಕೋರ್ಟಿನ ವ್ಯಾಜ್ಯ ಸಂಖ್ಯೆ ೩೨೬ ಕ್ರಿ.ಶ. ೧೮೯೨. ಕ್ರಿ.ಶ.೧೯೦೦ರಲ್ಲಿ ಕೋರ್ಟ್ ಕಮೀಶನರರು ತಯಾರಿಸಿದ ಪಾಲು ಪಟ್ಟಿಯಲ್ಲಿನ ವಿಚಾರಗಳು. ವ್ಯಾಜ್ಯ ೬೩೭ ಕ್ರಿ.ಶ. ೧೯೦೧ ಉಡುಪಿ.

ಡಾ. ಕೆಳದಿ ವೆಂಕಟೇಶ್ ಜೋಯಿಸ್*

# ಐತಿಹಾಸಿಕ ಕಾಸರವಳ್ಳಿ ಮನೆ, ಮನೆತನ

ಕಾಸರವಳ್ಳಿ ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿಯಿಂದ ಶೃಂಗೇರಿಗೆ ಹೋಗುವ ಮಾರ್ಗದಲ್ಲಿ ತೀರ್ಥಹಳ್ಳಿಯಿಂದ ಸುಮಾರು ೨೨ ಕಿ.ಮೀ. ದೂರದಲ್ಲಿ ತುಂಗಾ ನದಿಯ ಬಲದಂಡೆಯ ಮೇಲಿದೆ. ಇಲ್ಲಿರುವ ಕಟ್ಟಡವು ೧೬-೧೭ನೇ ಶತಮಾನದ ತಂತ್ರವಿಧಾನ, ಕಟ್ಟಡ ನಿರ್ಮಾಣ, ನೈಪುಣ್ಯತೆ ಕಲೆ, ತಂತ್ರ ಮತ್ತು ವಾಸ್ತು ವಿನ್ಯಾಸ ಅಧ್ಯಯನ ಮಾಡುವ ಸಿವಿಲ್ ಇಂಜಿನಿಯರಿಂಗ್ ಹಾಗೂ ಆರ್ಕಿಟೆಕ್ಟ್ ಅಭ್ಯಾಸಿಗಳಿಗೆ ಈ ಮನೆ ಉತ್ತಮ ನಿದರ್ಶನವಾಗಿದೆ. ಸ್ಥಳೀಯ ಸಾಮಗ್ರಿಗಳನ್ನೇ ಬಳಸಿ ಮುನ್ನೂರು ವರ್ಷಗಳಿಗಿಂತಲೂ ದೀರ್ಘಕಾಲ ಬಾಳಬಲ್ಲ ವಾಸ್ತುರಚನೆಯ ರಹಸ್ಯ ಅರಿಯಲು, ಅಲ್ಲಿಯ ಮರದ ಕೆತ್ತನೆಯ ಪಡಿಯಚ್ಚನ್ನು ಗಮನಿಸಬೇಕು.

ಕಾಸರವಳ್ಳಿ ಮನೆಯು ಕೆಲವು ದಶಕಗಳ ಕಾಲ ಮಲೆನಾಡಿನ ತೀರ್ಥಹಳ್ಳಿ ಮತ್ತು ಸುತ್ತಮುತ್ತಲಿನ ಆರ್ಥಿಕ, ಸಾಮಾಜಿಕ ಮತ್ತು ಧಾರ್ಮಿಕ ಸ್ಥಿತಿ ಗತಿಗಳ ಮೇಲೆ ಹೆಚ್ಚಿನ ಪರಿಣಾಮ ಬೀರಿದೆ. ಈ ಮನೆತನದವರು ಕೆಳದಿ ಸಂಸ್ಥಾನದಲ್ಲಿ ಉಚ್ಚ ಅಧಿಕಾರಿಗಳಾಗಿದ್ದರೆಂದು ತಿಳಿದುಬರುತ್ತದೆ. ಕಾಸರವಳ್ಳಿ ಮನೆ, ಮನೆತನದ ಕುರಿತು ಹಲವು ಐತಿಹ್ಯಗಳು ಈ ಸುತ್ತಮುತ್ತಲಲ್ಲಿ ಹರಡಿಕೊಂಡಿವೆ. ಅವುಗಳಲ್ಲಿ ಕೆಳದಿ ಅರಸರಲ್ಲಿ ಪ್ರಮುಖನಾದ ಶಿವಪ್ಪನಾಯಕನು ನಗರದಿಂದ ಕೊಲ್ಲೂರಿಗೆ ಹೋಗುವಾಗ ಕಾಸರವಳ್ಳಿ ಮೂಲಕ ಹೋಗುತ್ತಿದ್ದನೆಂಬ ಐತಿಹ್ಯವಿದೆ. ಕೆಳದಿ ರಾಜ್ಯದ ಅವನತಿಯ ಕಾಲದಲ್ಲಿ ಚಿನ್ನ, ಬೆಳ್ಳಿ ಮೊದಲಾದ ಆಭರಣಗಳನ್ನು ಹೊತ್ತು ಬರುತ್ತಿದ್ದ ಒಂಟೆಯೊಂದು ಈ ಮನೆಯ ಹೊರ ಭಾಗದಲ್ಲಿ ಉಳಿದಿತ್ತೆಂದೂ, ಆಕಸ್ಮಿಕವಾಗಿ ದೊರೆತ ಈ ಸಂಪತ್ತಿನಿಂದ ಇವರು ಆಗರ್ಭ ಶ್ರೀಮಂತರಾದರೆಂದೂ ಪ್ರತೀತಿ ಇದೆ. ಹಾಗಾಗಿ ಕಾಸರವಳ್ಳಿ ಮನೆಯಲ್ಲಿ ಕೊಪ್ಪರಿಗೆ ಹಣವಿದೆ. ನೆಲಮಾಳಿಗೆ ಇದೆ. ಇದಕ್ಕೆ ಸರ್ಪಕಾವಲಿದೆ ಮೊದಲಾದ ಐತಿಹ್ಯಗಳೂ ಹುಟ್ಟಿಕೊಂಡಿವೆ. ಅಂದು 'ಕಾಸಿನಲ್ಲಿ ಕಾಸರವಳ್ಳಿಯವರು ಆಸ್ತಿಯಲ್ಲಿ ಕಾರಂತರು' ಎಂಬ ನಾಣ್ಣುಡಿಯೂ ಬಳಕೆಯಲ್ಲಿತ್ತು. ಬ್ರಿಟಿಷ್ ಸರಕಾರಕ್ಕೆ, ಮೈಸೂರು ಅರಸರಿಗೆ ಸಾಲ ಕೊಟ್ಟವರಿವರು. ಈ ಕಾಸರವಳ್ಳಿ ಮನೆ ಮನೆತನವು ಹತ್ತು ಹಲವು ಏಳು ಬೀಳುಗಳನ್ನು ಕಂಡಿದೆ. ಸಾಮಾಜಿಕ ಹಿರಿಮೆಗೆ ಒಳಗಾಗಿದೆ. ಹಲವಾರು ಬದಲಾವಣೆಗಳಿಗೆ ಕಾರಣವಾಗಿದೆ.[೧]

## ಕಾಸರವಳ್ಳಿ ಮನೆ : ಪೂರ್ವ ಇತಿಹಾಸ

ಕಾಸರವಳ್ಳಿಯ ಸಾಹುಕಾರರು ಮೂಲತಹ ದಕ್ಷಿಣ ಕನ್ನಡದವರು. ಕೆಳದಿ ಅರಸರ ಕಾಲದಲ್ಲಿ ಇವರ ಪೂರ್ವಜರು ದಕ್ಷಿಣ ಕನ್ನಡದಿಂದ ಘಟ್ಟ ಹತ್ತಿ ಮಲೆನಾಡಿಗೆ ಬಂದವರಾಗಿದ್ದಾರೆ. ಇವರು ಕ್ರಿ.ಶ. ೧೬೬೪ರ ಸುಮಾರಿನಲ್ಲಿ ತೀರ್ಥಹಳ್ಳಿ ಹತ್ತಿರವಿರುವ ಸಿರುಪತಿಯಲ್ಲಿರುವ ನರಸಿಂಹ ದೇವಸ್ಥಾನದ ಪೂಜೆ ಕಾರ್ಯಕ್ಕಾಗಿ ನೇಮಕಗೊಂಡು ಕೆಳದಿಯ ಅರಸರ ರಾಜಾಶ್ರಯ ಪಡೆದರು. ಇವರು ವಿಶ್ವಾಮಿತ್ರ ಗೋತ್ರದ ಆಶ್ವಲಾಯನ ಸೂತ್ರದ ಋಕ್ ಶಾಖೆಯ ಕೋಟ ಮತಸ್ಥರಾದ ಕಾರಂತರು. ಇವರ ಕುಲದೇವರು ಸಾಲಿಗ್ರಾಮದಲ್ಲಿರುವ ನರಸಿಂಹ. ಮೊದಲು ಈ ಪ್ರಾಂತದವರು ಇವರನ್ನು ಅಯ್ಯ, ಅಪ್ಪ ಎಂದು ಕರೆದಿದ್ದಾರೆ. ನಾಗಭೂಷಣರಾಯರ ಕಾಲದಿಂದ ರಾವ್ ಎಂಬುದು ಇವರ ಹೆಸರಿನ ಮುಂದೆ ಸೇರಿಕೊಂಡಿತು.[೨]

**ಶಾಸನಗಳಲ್ಲಿ ಕೋಟ ಕಾರಂತರು :** ಕೋಟ ಜನಾಂಗದಲ್ಲಿ ಕಾರಂತ, ಹೊಳ್ಳ, ಅಲ್ಸೆ, ಭಾತ್ರಿ, ತುಂಗ, ಹೆದ್ಲೆ, ನಾವುಡ, ಹಂದೆ ಮೊದಲಾದ ಒಳ ಪಂಗಡಗಳನ್ನು ಗುರುತಿಸಲಾಗುತ್ತದೆ. ಕೋಟ ಪ್ರದೇಶದ ೧೪ ಗ್ರಾಮಗಳಲ್ಲಿ ಶಾಸನಗಳು ವಿರಳವಾಗಿ ದೊರೆಯುತ್ತವೆ. ಲಭ್ಯವಿರುವ ಶಾಸನಗಳಲ್ಲಿ ಆಡಳಿತಾತ್ಮಕವಾಗಿ ಕಂಡುಬರುವ ಕೆಲವು ಪದಗಳಿವೆ. ಅವುಗಳಲ್ಲಿ ಆದಿವಾಸ, ಮಹಾಜಗತ್ತು, ಭಂಡಾರ ಸ್ಥಳ ಎಂಬವು ಮುಖ್ಯವಾಗುತ್ತವೆ. ಗ್ರಾಮದ ಉಪ ವಿಭಾಗವನ್ನು ಆದಿವಾಸ ಎಂದು ಗುರುತಿಸಲಾಗಿದೆ. ಇದು ಒಂದು ಆಡಳಿತ ಘಟಕವಾಗಿತ್ತು. ಬ್ರಾಹ್ಮಣರ ಕುಲನಾಮವಿರುವ ಆದಿವಾಸಿಗಳ ಸಂಖ್ಯೆ ಬಹಳ

* ಕೆಳದಿ, ಸಾಗರ ತಾಲ್ಲೂಕು, ಶಿವಮೊಗ್ಗ ಜಿಲ್ಲೆ.

ದೊರೆಯುತ್ತವೆ. ಕುಂದಾಪುರ ತಾಲ್ಲೂಕಿನ ವೊಡೇರ [illegible] ಕ್ರಿ.ಶ. ೧೪೦೬ರ ಶಾಸನದಲ್ಲಿ' ಕೋಟಾಧಿವಾಸದ ಮಾಧವ ಸಭಾಯಿತನ ಮಗ ನಾರಾಯಣ ಸಭಾಪತಿ. ನಾರಾಯಣ ಕಾರಂತನ ಮಗ ವಿಷ್ಣುಕಾರಂತ ಎಂದು ಕೋಟ ಬ್ರಾಹ್ಮಣರ ಕುಲನಾಮಗಳಿರುವ ಅಧಿವಾಸಿಗಳ ಹೆಸರು ಬರುತ್ತದೆ. ಅಲ್ಲದೆ 'ಕೋಟ ಅಧಿವಾಸಿ ಯಿಕ್ಕಿದಕ್ಕಲ್ಲೆಂದಂ' ಎಂಬ ಉಲ್ಲೇಖವೂ ಈ ಶಾಸನದಲ್ಲಿ ಕಂಡುಬರುತ್ತದೆ.[1] ಪಾರಂಪಳ್ಳಿ ವಿಷ್ಣುಮೂರ್ತಿ ದೇವಸ್ಥಾನದ ಕ್ರಿ.ಶ. ೧೪೬೭ರ ಶಾಸನದಲ್ಲಿ ವಿಜಯನಗರದ ಅರಸ ವಿರೂಪಾಕ್ಷರಾಯರ ಕಾಲದಲ್ಲಿ ಬಾರಕೂರಿನ ರಾಜ್ಯಪಾಲರಾದ ವಿಠರಸ ಮೊಡೆಯರ ಕೋರಿಕೆಯಂತೆ ಕೃಷ್ಣ ಪ್ರಕಾಶ ಶ್ರೀ ಪಾದಂಗಳು ದೇವಸ್ಥಾನಕ್ಕೆ ಸಂಬಂಧಪಟ್ಟ ಹೊಂನ ಕೊಡುಗೆ ನೀಡಿದುದು ತಿಳಿಯುತ್ತದೆ. ಈ ಕೊಡುಗೆಯನ್ನು ಪಾರಂಬಳ್ಳಿಯ ಅಧಿವಾಸಿಗಳು ಸ್ವೀಕರಿಸಿದ ಪ್ರಸ್ತಾಪ ಬರುತ್ತದೆ.[2] ಸಾಲಿಗ್ರಾಮದ ಕ್ರಿ.ಶ. ೧೪೬೮ರ ಶಾಸನದಲ್ಲಿ 'ಕೋಟದ ಗ್ರಾಮ ಹದಿನಾರು ಮಂದಿ ಆದಿವಾಸಿಗಳು ಹತ್ತು ಸಾವಿರ ಮಹಾಜಗತ್ತು ಮುಪುವ ಹೆಗಡೆಯೆಂ' ಎಂಬ ಉಲ್ಲೇಖ ಕಂಡುಬರುತ್ತದೆ. ಈ ವಂಶದವರು ಪುರಾಣ, ವಾಚನದಂತಹ ಧಾರ್ಮಿಕ ನಿರ್ವಹಣೆಯ ಜೊತೆಗೆ ಶಾಸನ ನೆಡುವ ದಾನದತ್ತಿಗಳನ್ನು ಸ್ವೀಕರಿಸುವ ತೆರಿಗೆ ರಿಯಾಯಿತಿಗೆ ಒತ್ತಾಯಿಸುವ ಪ್ರಬಲ ಘಟಕವಾಗಿತ್ತು. ಕೋಟ ಪ್ರದೇಶದ ಶಾಸನಗಳಲ್ಲಿ ಭೂ ವರ್ಗಾವಣೆಗೆ ಸಂಬಂಧಪಟ್ಟಂತೆ ಕೋಟ ಬ್ರಾಹ್ಮಣರ ಕುಲನಾಮಗಳ ಪ್ರಸ್ತಾಪ ಬರುತ್ತದೆ. ದೇವಸ್ಥಾನದ ನಂದಾದೀಪಕ್ಕಾಗಿ ಪೂಜೆಗಾಗಿ, ಉಂಬಳಿ ಉತ್ತಾರಗಳನ್ನು ಬಿಟ್ಟ ದಾನಶಾಸನಗಳ ಪ್ರಸ್ತಾಪವೂ ಬರುತ್ತದೆ. ಇಂಥಾ ಶಾಸನಗಳಲ್ಲಿ ಕೋಟ ಪ್ರದೇಶದ ಭೂ ವಿವರದ ಜೊತೆಗೆ ಕುಲನಾಮದ ಸಾಂಸ್ಕೃತಿಕ ವಿವರಗಳೂ ಲಭಿಸುತ್ತವೆ. ಕ್ರಿ.ಶ. ೧೫೪೯ ಮಣೂರು ಶಾಸನದಲ್ಲಿ ವಿಷ್ಣುಮಯ್ಯ, ಅಲಕಶೆಟ್ಟಿ ಮತ್ತು ನಾರಾಯಣ ಹೇರ್ಳೆಯವರೊಳಗೆ ನಡೆದ ಭೂ ಹಿಡುವಳಿಯ ಬದಲಾವಣೆಯ ಅಂಶ ದಾಖಲಾಗಿದೆ.[3] ಇಲ್ಲಿ ಮಯ್ಯ ಹೇರ್ಳೆ ಎಂಬ ಕೋಟ ಬ್ರಾಹ್ಮಣರ ಕುಲನಾಮಗಳ ಪ್ರಸ್ತಾಪ ಬರುತ್ತದೆ. ಕ್ರಿ.ಶ. ೧೬೨೯ರ ಗುಂಡ್ಮಿ ಶಾಸನದಲ್ಲಿ ಐವರು ಸ್ಥಾನಿಕರಿಗೆ ಕೆಳದಿಯ ಅರಸನು ನೀಡಿದ ಆಸ್ತಿಯನ್ನು ಅವರ ಒಪ್ಪಿಗೆಯ ಮೇರೆಗೆ ಕಾರಂತ, ತುಂಗ, ನಾವಡ, ಮುಂತಾದವರು ಸೇರಿ ದೇವಸ್ಥಾನದ ಹಬ್ಬದ ಬಾಬ್ತು ನಂದಾದೀಪದ ಬಾಬ್ತು, ಅಮೃತಪಡಿ ಬಾಬ್ತು ಎಂದು ಭೂಮಿ ವರ್ಗಾಯಿಸಿದುದು ಕಂಡುಬರುತ್ತದೆ.[4] ಕಾರಂತರ ಮೂಲ ಕಸುಬೇನು ? ಏಕೆ ಕಾರಂತ ಎಂದು ಬಂದಿತೆಂಬ ಕುರಿತು ಹೆಚ್ಚಿನ ಮಾಹಿತಿ ದೊರೆಯುವುದಿಲ್ಲ. ಆದರೆ ಶಾಸನ ಆಧಾರದಿಂದ ಗಮನಿಸಿದಾಗ ಕೋಟ ಜನಾಂಗದ ೧೪ ಪಂಗಡದಲ್ಲಿ ಇವರೂ ಒಬ್ಬರೆಂಬುದು ಸ್ಪಷ್ಟವಾಗುತ್ತದೆ. ಕಾಸರವಳ್ಳಿಯ ಕಾರಂತರನ್ನು ಘಟ್ಟದ ಕೆಳಗಿನಿಂದ ಮೇಲೆ ಬಂದ ಮೇಲೆ ಸಾಹುಕಾರ್ ಎಂದು ಕರೆದಿರುವುದು ದಾಖಲೆಗಳಿಂದ ತಿಳಿದುಬರುತ್ತದೆ.[5]

**ಕಾಸರವಳ್ಳಿ ಮನೆತನ :** ಈಗ ದೊರೆತಿರುವ ದಾಖಲೆಗಳ ಆಧಾರದಿಂದ ಕಾಸರವಳ್ಳಿ ಮನೆತನವು ತಿರುಪತಿ ವಿಶ್ವೇಶ್ವರ ಕಾರಂತರ ಮಗ ಶಂಕರ ಕಾರಂತರಿಂದ ಪ್ರಾರಂಭವಾಗುತ್ತದೆ. ಇವರ ಮೊಮ್ಮಗ ನಾಗಪ್ಪಯ್ಯ ಯಾನೆ ನಾಗಣ್ಣ ಅಂದರೆ ಈತ ವಿಶ್ವೇಶ್ವರಯ್ಯನವರ ಮಗ. ಈತನ ಕಾಲದಲ್ಲಿ ತಿರುಪತಿಯಿಂದ ಕಾಸರವಳ್ಳಿಗೆ ಬಂದು ಇಲ್ಲಿ ಶ್ರೀ ಸೋಮೇಶ್ವರ ದೇವರ ದೇವಸ್ಥಾನವನ್ನು ಕಟ್ಟಿಸಿ ಕೆಳದಿ ಅರಸರಿಂದ ನಿರೂಪವನ್ನು ಕೇಳಿಕೊಂಡಿರುವ ಕುರಿತು ದಾಖಲೆ ಇದೆ. ಇದು ಕೆಳದಿ ಶಿವಪ್ಪನಾಯಕನ ಕಾಲಕ್ಕೆ ಅಂದರೆ ಕ್ರಿ.ಶ. ೧೬೬೦ಕ್ಕೆ ಸರಿಹೊಂದುತ್ತದೆ. ಶಿವಪ್ಪನಾಯಕನ ಮಗ ಸೋಮಶೇಖರ ನಾಯಕನ (ಕ್ರಿ.ಶ. ೧೬೬೪–೧೬೭೧) ಕಾಲದಲ್ಲಿ ತುಂಗಾ ತೀರದಲ್ಲಿ ನಾಗಪ್ಪಯ್ಯ ಯಾನೆ ನಾಗಣ್ಣನು ಸೋಮೇಶ್ವರ ದೇವಸ್ಥಾನ ಕಟ್ಟಿಸಿ ಕ್ರಯವನ್ನು ಕೊಡುತ್ತೇನೆ. ಭೂಮಿಯನ್ನು ಕ್ರಯ ದಾನವಾಗಿ ನೀಡುವಂತೆ ಕೇಳಿಕೊಂಡ ಮೇರೆಗೆ ಎಂಟು ಎಕರೆ ಬಾಗಾಯ್ತುವನ್ನು ದೇವಸ್ಥಾನಕ್ಕೆ ಕ್ರಯದಾನವಾಗಿ ನೀಡಿದ್ದನ್ನು ದಾಖಲೆ ತಿಳಿಸುತ್ತದೆ.[6] ಅದರ ಪೂಜೆ ಮೇಲ್ವಿಚಾರಣೆಗೆ ಕೋಟ ಕಾರಂತರ ಮನೆತನದ ನಾಗಪ್ಪಯ್ಯನದಾಗುತ್ತದೆ. ಅಲ್ಲಿಂದ ಕಾಸರವಳ್ಳಿ ಎಂಬ ಹೆಸರಿನಲ್ಲಿ ಈ ಮನೆ ಮತ್ತು ನಾಗಪ್ಪಯ್ಯನವರ ಮನೆತನ ಎರಡೂ ಉಚ್ಛ್ರಾಯ ಸ್ಥಿತಿಗೇರುತ್ತಾ ಬಂದಿತು. ಕೆಳದಿ ನಂತರ ಮೈಸೂರು ಸಂಸ್ಥಾನದ ಕೃಷ್ಣರಾಜ ಒಡೆಯರ ಕಾಲದವರೆಗೂ ಈ ಮನೆತನ ತನ್ನ ಪ್ರಭಾವಲಯವನ್ನು ವಿಸ್ತರಿಸಿಕೊಳ್ಳುತ್ತ ಬಂದಿತು. ಮೈಸೂರಿನ ವಿಶ್ವೇಶ್ವರಯ್ಯನವರೇ ಮೊದಲಾಗಿ ದಿವಾನರುಗಳು ಈ ಮನೆಯ ಬಗ್ಗೆ ಗೌರವ ಇಟ್ಟುಕೊಂಡಿದ್ದರು. ಈ ಮನೆತನಕ್ಕೆ ತೀರ್ಥಹಳ್ಳಿ, ಶೃಂಗೇರಿ ಮತ್ತು ಕೊಪ್ಪ ತಾಲ್ಲೂಕುಗಳ ನಲವತ್ತು ಗ್ರಾಮಗಳಲ್ಲಿ ಎರಡು ಸಾವಿರ ಎಕರೆ ಜಮೀನಿನ ಒಡೆತನವಿತ್ತು. ಹದಿನಾಲ್ಕು ದೇವಸ್ಥಾನಗಳ ಯಜಮಾನಿಕೆ ಈ ಮನೆತನದ್ದಾಗಿತ್ತು. ಹೆಚ್ಚಿನವು ನರಸಿಂಹ ದೇವಾಲಯದ್ದವು ಆಗಿತ್ತು. ನಾಲ್ಕು ಕಡೆಗಳಲ್ಲಿ ಇವರಿಗೆ ಶಾನುಭೋಗಿಕೆ ಇತ್ತು. ೧೯೩೪–೩೫ರವರೆಗೆ ಇದನ್ನು ಗುಮಾಸ್ತರ ಸಹಕಾರದೊಂದಿಗೆ ನಡೆಸಿಕೊಂಡು ಬಂದಿರುವುದು ತಿಳಿದುಬರುತ್ತದೆ. ತಮಗೆ ಆಗದಿದ್ದಾಗ ತಮ್ಮ ವಿಶ್ವಾಸಿಕರಿಗೇ ಇದನ್ನು ಬಿಟ್ಟುಕೊಟ್ಟಿದ್ದಾರೆ. ಹಳೆಯ ಮೈಸೂರು ಅರಸರ ಕಾಲದಲ್ಲಿ ಅತ್ಯಧಿಕ ಕಂದಾಯ ಕೊಡುವ

ಮನೆತನಗಳಲ್ಲಿ ಕಾಸರವಳ್ಳಿ ಮನೆ ಪ್ರಮುಖವಾಗಿತ್ತು. ಐದು ಊರುಗಳಲ್ಲಿ ಧಾನ್ಯದ ಪಣತಗಳಿದ್ದವು. ದಿನವೂ ಅನ್ನಸಂತರ್ಪಣೆ ವೈಭವದ ಪೂಜೆ ಪುನಸ್ಕಾರ ನಡೆಸಲಾಗುತ್ತಿತ್ತು. ರಾಜರ ಯೋಜನೆಗಳಿಗೆ ದೇಣಿಗೆ ನೀಡಿರುವ ಕುರಿತು, ದೇವಸ್ಥಾನ ಮೆತ್ತಿನ ಮೇಲೆ ಕರಣಿಕರು ಲೆಕ್ಕ ಪತ್ರಗಳನ್ನು ಗಮನಿಸುತ್ತಿದ್ದು ಕುರಿತು, ಗಾಳಿ ಉಪ್ಪರಿಗೆಯಲ್ಲಿ ಯಜಮಾನರ ಒಡ್ಡೋಲಗ ನಡೆಸುತ್ತಿರುವ ಕುರಿತು, ಕೆಳಕ್ಕೆ ಗೇಣಿದಾರರು ಸಾಹುಕಾರರಿಗೆ ತಮ್ಮ ಗೌರವ ತೋರುತ್ತಿದ್ದ ಕುರಿತು ಈ ಮನೆಯಲ್ಲಿರುವ ಶಹ ಪುಸ್ತಕಗಳ ದಾಖಲೆಗಳು ತಿಳಿಸುತ್ತವೆ. ನಾಗಪ್ಪಯ್ಯ ಯಾನೆ ನಾಗಣ್ಣನ ನಂತರ ಸುಮಾರು ಒಂಬತ್ತು ತಲೆಮಾರಿನ ವಂಶವೃಕ್ಷ ಈ ಮನೆಯಲ್ಲಿ ಸಿಗುತ್ತದೆ.[೯]

ಈ ಮನೆತನವನ್ನು ಉಚ್ಛ್ರಾಯ ಸ್ಥಿತಿಗೆ ತಂದವರಲ್ಲಿ ಸಿ.ಸಂ. ಶೇಷಪ್ಪಯ್ಯ, ಸಿ.ಸಂ. ನಾಗಭೂಷಣರಾವ್ ಇವರು ಪ್ರಮುಖರಾಗಿದ್ದಾರೆ. ಸಿ.ಸಂ. ನಾಗಪ್ಪಯ್ಯ ಯಾನೆ ನಾಗಣ್ಣನವರು ತಮ್ಮ ಮನೆಯ ಚಂದ್ರಸಾಲೆಯನ್ನು ಅಗ್ರಹಾರವಾಗಿ ರೂಪಿಸಿದ್ದರು. ಖಾಸಗಿಯಾಗಿ ಸ್ವತಂತ್ರವಾಗಿ ಅಗ್ರಹಾರವನ್ನು ನಿರ್ಮಿಸಿ, ನಿರ್ವಹಿಸಿದ್ದನ್ನು ಕೆಳದಿ ಅರಸರೂ ಮೆಚ್ಚಿಕೊಂಡಿದ್ದಾರೆ. ದಾನ ದತ್ತಿ ನೀಡಿದ್ದರು. ಸೋಮಶೇಖರ ನಾಯಕರ ದೊಡ್ಡಮ್ಮ ಬಸವಮ್ಮಾಜಿ ಯಾತ್ರೆ ಮಾಡುವ ಸಮಯದಲ್ಲಿ ಕಾಸರವಳ್ಳಿಗೆ ಭೇಟಿಯಿತ್ತು, ಅಗ್ರಹಾರದಲ್ಲಿ ನಡೆಯುತ್ತಿದ್ದ ದೇವತಾ ಕಾರ್ಯಗಳನ್ನು ವೀಕ್ಷಿಸಿ ಮಾಗಲಬೈಲು ಎಂಬಲ್ಲಿ ಅಡಿಕೆ ತೋಟವನ್ನು ದೇವರ ಅಮೃತಪಡಿ ಮತ್ತು ನಂದಾದೀಪಕ್ಕಾಗಿ ನೀಡಿದ ಬಗ್ಗೆ ದಾಖಲೆ ಇದೆ. ೨೦ನೇ ಶತಮಾನದ ಆರಂಭ ಕಾಲದ ನಾಗಭೂಷಣರಾವ್ ಅವರ ಕಾಲದಲ್ಲಿ ಕಾಸರವಳ್ಳಿ ಉನ್ನತ ಸ್ಥಾನ ಪಡೆದುಕೊಂಡಿತು. ಕಾಸರವಳ್ಳಿ ಮನೆತನದಲ್ಲಿ ನಾಗಭೂಷಣರಾವ್ ಅವರಿಗೆ ಕುಟುಂಬದಲ್ಲಿ ಕೊನೆಯವರಿಗೆ ಮಾತ್ರ ಗಂಡು ಸಂತಾನವಿತ್ತು. ಹೆಚ್ಚಾಗಿ 'ನಾಗರಾಜ' ಎಂಬ ಹೆಸರನ್ನೇ ಮಕ್ಕಳಿಗೆ ಇಡಲಾಗಿತ್ತು. ಕಾಸರವಳ್ಳಿಯವರು ಘಾಟಿ ಸುಬ್ರಹ್ಮಣ್ಯ ದೇವರ ಪರಮ ಭಕ್ತರಾಗಿದ್ದರು. ಆದ್ದರಿಂದ ಈ ಕುಟುಂಬದಲ್ಲಿ ಬುಸ್ಸಯ್ಯ, ಶೇಷಯ್ಯ, ನಾಗಪ್ಪಯ್ಯ, ಫಣಿಯಮ್ಮ, ದುಗ್ಗಪ್ಪಯ್ಯ ಮೊದಲಾದ ಹೆಸರುಗಳು ಸಾಮಾನ್ಯವಾಗಿದ್ದವು. ಆದರೆ ಇಂದು ಹೊಸ ಹೆಸರುಗಳು ಬಂದಿವೆ. ಈ ಮನೆತನವು ಮಲೆ ಪ್ರದೇಶದ ಆರ್ಥಿಕ ಸಂಕಷ್ಟಗಳಿಗೆ ತಮ್ಮನ್ನು ಅರ್ಪಿಸಿಕೊಂಡಿದ್ದಲ್ಲದೆ ಮುಂದೆ ಮೈಸೂರು ಅರಸರು, ದಿವಾನರು ಬ್ರಿಟೀಷರ ಕಾಲದಲ್ಲಿ ಪ್ರಾಮುಖ್ಯತೆ ಪಡೆದಿತ್ತು.[೧೦]

ಕಾಸರವಳ್ಳಿ ಮನೆತನದ ಇತಿಹಾಸವನ್ನು ತಿಳಿಯಲು ನಮಗೆ ಅವರಲ್ಲಿರುವ ಶಹಾ ಪುಸ್ತಕಗಳು ಸಹಕಾರಿಯಾಗಿವೆ. ಶಹಾ ಪುಸ್ತಕಗಳ ನಿರ್ವಹಣೆಯೇ ಗಮನಿಸುವಂತಹುದು. ಶಹ ಪುಸ್ತಕದಂತೆಯೇ ಸಾಕಷ್ಟು ಐತಿಹಾಸಿಕ ದಾಖಲೆಗಳಿವೆ. ಇವು ೧೬ ರಿಂದ ೧೮ನೇ ಶತಮಾನದ ಇತಿಹಾಸ ರಚನೆಗೆ ಮತ್ತು ಸ್ವಾತಂತ್ರ್ಯಪೂರ್ವ, ಸ್ವಾತಂತ್ರ್ಯ ನಂತರದ ಇತಿಹಾಸ ರಚನೆಗೆ ಪ್ರಮುಖ ಆಕರಗಳಾಗಿವೆ. ಇವರಲ್ಲಿ ಸುಮಾರು ೧೮೦೦ ರಿಂದ ೧೯೫೦ರವರೆಗಿನ ಶಹಾ ಪುಸ್ತಕಗಳಿವೆ. ೧೮೦೦ಕ್ಕೂ ಹಿಂದಿನವು ಕಡತ ಮತ್ತು ತಾಳೆಯೋಲೆ ಗರಿಯಲ್ಲಿವೆ. ಈಗ ಈ ಮನೆಯಲ್ಲಿರುವ ಶ್ರೀ ರಾಮಸ್ವಾಮಿಯವರು ಇದನ್ನು ರಕ್ಷಿಸಿಕೊಂಡು ಬಂದಿದ್ದಾರೆ. ಈ ಮನೆಯ ಆಗುಹೋಗುಗಳು, ಜಮಾ ಖರ್ಚು, ಉಳಿಗ ವೆಚ್ಚ, ಪತ್ರ ವ್ಯವಹಾರಗಳು, ಎಲ್ಲವೂ ಇದರಲ್ಲಿ ದಾಖಲಾಗಿವೆ. ಕೆಳದಿಯ ಬಸಪ್ಪನಾಯಕನು ಶಿವತತ್ವರತ್ನಾಕರ ಪುಸ್ತಕವನ್ನು ಬರೆದು ಮುಗಿಸಿದ ದಿನಾಂಕವುಳ್ಳ ಚಾರಿತ್ರಿಕ ದಾಖಲೆ ದೊರೆತದ್ದು ಇದೇ ಕಾಸರವಳ್ಳಿ ಮನೆಯಲ್ಲಿ. ಇದರಲ್ಲಿ ೧೮೯೬ರ ಆಸುಪಾಸಿನಲ್ಲಿ ಬುಸ್ಸಯ್ಯನ ಹೆಂಡತಿ (ದುಗ್ಗಮ್ಮ) ಇವರಿಗೆ ಈ ಕುಟುಂಬ ಮಾಸಾಶನ ಕೊಟ್ಟಿರುವ ದಾಖಲೆ ಗಮನಾರ್ಹವಾಗಿದೆ. ಆದರೆ ಇವರು ದಾನ ಕೊಟ್ಟಿರುವುದನ್ನು ಹೇಳಿಕೊಂಡಿಲ್ಲ. ಶಿವಮೊಗ್ಗದ ಬ್ರಾಹ್ಮಣ ಹಾಸ್ಟೆಲ್‌ಗೆ ದಾನ ನೀಡಿದ್ದನ್ನು (೨೨.೧.೨೯೪೭) ಬಿಟ್ಟು ಬೇರೆಲ್ಲೂ ಅದನ್ನು ಹೇಳಿಕೊಂಡಿರುವ ಉಲ್ಲೇಖವಿಲ್ಲ. ೧೯೧೫ರಲ್ಲಿ ಸ್ಟೇಟ್ ಬ್ಯಾಂಕ್ ಆಫ್ ಮೈಸೂರು ಪ್ರಾರಂಭವಾದ ಸಂದರ್ಭದಲ್ಲಿ ಇವರು ಅತಿ ಹೆಚ್ಚಿನ ಶೇರನ್ನು ಕೊಂಡಿದ್ದರು. ೧೯೧೫ರಲ್ಲಿ ಶಿವಮೊಗ್ಗ ತೀರ್ಥಹಳ್ಳಿ ಮಾರ್ಗವಾಗಿ ರೈಲ್ವೆ ಲೈನ್ ನಿರ್ಮಾಣ ಮಾಡಬೇಕೆಂದು ಸರಕಾರ ಮುಂದಾದಾಗ ಇವರು ಸರಕಾರಕ್ಕೆ ದೇಣಿಗೆಯಾಗಿ ಮತ್ತು ಸಾಲವಾಗಿ ಸುಮಾರು ಐದು ಲಕ್ಷದ ತೊಂಬತ್ತು ಸಾವಿರ ದೇಣಿಗೆ/ಸಾಲ ನೀಡಿದ್ದರು. ೧೯೨೩-೨೪ರಲ್ಲಿಯೇ ಈ ಕುಟುಂಬಕ್ಕೆ ಇನ್ ಕಂ ಟ್ಯಾಕ್ಸ್ ಹಾಕಿರುವ ಬಗ್ಗೆ ಮತ್ತು ಇವರು ಅದನ್ನು ಪಾವತಿಸಿರುವ ಬಗ್ಗೆ ಇವರಲ್ಲಿರುವ ಶಹಾ ಪುಸ್ತಕ ದಾಖಲಿಸುತ್ತದೆ. ೧೯೪೮ರಲ್ಲಿ ಸಾಹುಕಾರ್ ನಾಗಭೂಷಣರಾಯರು ದಿವಂಗತರಾದ ನಂತರ ಈ ಕುಟುಂಬದ ನಾಲ್ವರು ಸಹೋದರರು ೧೯೫೫ರಲ್ಲಿ ತಮ್ಮ ಆಸ್ತಿ ಹಂಚಿಕೆ ಸಂದರ್ಭದಲ್ಲಿ ಕುಟುಂಬದ ಸದಸ್ಯರೆಲ್ಲ ಸೇರಿ ಒಟ್ಟು ಒಂದು ಲಕ್ಷ ರೂಪಾಯಿ ಸ್ಟಾಂಪ್ ಪೇಪರ್ ಪಡೆದುಕೊಂಡಿರುವ ದಾಖಲೆ ಈ ಕುಟುಂಬದ ಶ್ರೀಮಂತಿಕೆಯನ್ನು ಪ್ರತಿನಿಧಿಸುತ್ತದೆ.[೧೧]

ಕ್ರಿ.ಶ. ೧೮೬೮ರ ಫೆಬ್ರವರಿ ತಾರೀಖು ೧೧ರಲ್ಲಿ ಈ ಮನೆಗೆ ಕಳ್ಳರು ನುಗ್ಗಿ ಕಳವು ಮಾಡಿದ ಸಾಮಾನುಗಳ ತಪಸೀಲು ಪಟ್ಟಿ ಬಂಗಾರ ಬೆಳ್ಳಿ ಬಾಬ್ತು ಲೆಕ್ಕದ ವಿವರ ಈ ಕುಟುಂಬದ ವೈಭವವನ್ನು ತೋರಿಸುತ್ತದೆ.[೧೨] ಈ ಕುಟುಂಬ

ವಿವಿಧ ಬಗ್ಗಾರ ವ್ಯಾಪಾರಿಗಳಲ್ಲಿ, ಗಣಿಗೆ ಸೀನಪ್ಪ, ಮುಂಡಾಸದ ಸುತ್ತ ಸೀನಪ್ಪನವರು ಮೊದಲಾದವರ ಜೊತೆ ಲಕ್ಷಗಟ್ಟಲೆ ವ್ಯಾಪಾರ, ವ್ಯವಹಾರ ಮಾಡಿರುವುದನ್ನು ಶಹಾ ಪುಸ್ತಕ ದಾಖಲಿಸುತ್ತದೆ. ಈ ಸಂದರ್ಭದಲ್ಲಿ ಮಾಡುವ ಹಣದ ವ್ಯವಹಾರಕ್ಕೆ ಸಂಬಂಧಿಸಿದಂತೆ ಪ್ರತಿ ನೋಟಿನ ಅಂಕೆಯನ್ನೂ ಶಹಾ ಪುಸ್ತಕದಲ್ಲಿ ದಾಖಲಿಸಿಕೊಳ್ಳಲಾಗುತ್ತಿತ್ತು. ಶಹಾ ಪುಸ್ತಕದಲ್ಲಿ ಲಕ್ಷಗಟ್ಟಲೆ ನೋಟಿನ ನಂಬರುಗಳು ದೊರೆಯುತ್ತವೆ. ಮನೆಯ ಸಂರಕ್ಷಣೆಗೆ ಹೆಂಚು ಇತ್ಯಾದಿಗಳಿಗೆ ತಗುಲಿದ ವೆಚ್ಚಗಳೂ ಇತ್ಯಾದಿಗಳ ದಾಖಲಾತಿ, ೧೯೨೩ರಲ್ಲಿ ಉತ್ತರ ಕರ್ನಾಟಕ ಮತ್ತು ದಕ್ಷಿಣ ಕರ್ನಾಟಕದಲ್ಲಿ ಬರುತ್ತಿದ್ದ ಎಲ್ಲಾ ಪತ್ರಿಕೆಗೆ ಚಂದಾದಾರರಾಗಿದ್ದರೆಂಬುದನ್ನು ಚಂದಾ ಪಾವತಿ ಮಾಡಿರುವ ದಾಖಲೆ ಮತ್ತು ಶಹಾ ಪುಸ್ತಕ ತಿಳಿಸುತ್ತದೆ. ೧೮೬೭ರ ಕನ್ನಡದ ಕ್ರಿಮಿನಲ್ ಕೋಡ್, ಸಿವಿಲ್ ಕೋಡ್ ಮೊದಲಾದ ಅಗತ್ಯ ಕಾನೂನು ಕಟ್ಟಳೆಗಳ ಪುಸ್ತಕಗಳ ಸಂಗ್ರಹ ಇಲ್ಲಿವೆ. ತಮ್ಮ ಮನೆಯ ಮಂಗಳ ಕಾರ್ಯಕ್ರಮಕ್ಕೆ ಆಹ್ವಾನಿಸುವ ಸಂದರ್ಭದಲ್ಲಿ ಕರೆಯೋಲೆಯನ್ನು ವ್ಯಕ್ತಿತ್ವವನ್ನು ಆಧರಿಸಿ ನೀಡಲಾಗುತ್ತಿತ್ತು. ಅಡಿಕೆ ಬಗೆಗೆ ಇವರಿಗೆ ಎಲ್ಲಿಲ್ಲದ ಕಾಳಜಿ ಇತ್ತು. ಇವರು ದಕ್ಷಿಣ ಕನ್ನಡದ ಶ್ರೀ ಜೀಡೆ ಎಂಬುವರು ಅಧ್ಯಕ್ಷರಾಗಿದ್ದ ಆಲ್ ಇಂಡಿಯಾ ಸುಪಾರಿ (ಬೆಟಲ್ ನೆಟ್) ಫೆಡರೇಷನ್ ಎಂಬ ಸಂಸ್ಥೆಯ ಸದಸ್ಯರಾಗುವುದರ ಮೂಲಕ ಭೂಪಾಳಂ ಚಂದ್ರಶೇಖರಯ್ಯ ಮೊದಲಾದ ಗಣ್ಯರುಗಳ ಜೊತೆ ಸೇರಿ ಅಡಿಕೆಗೆ ಮಾನ ಕೊಡುವ ಹೋರಾಟ ನಡೆಸಿದ ದಾಖಲೆಗಳಿವೆ. ೧೯೫೫ರಲ್ಲಿ ಮಲೆನಾಡು ಅಡಿಕೆ ಪರಿಷ್ಕರಣೆ ಮತ್ತು ಮಾರಾಟ ಸಹಕಾರ ಸಂಘದ ಆರಂಭಿಕರಲ್ಲಿ ಈ ಮನೆತನವದರು ಪ್ರಮುಖರಾಗಿದ್ದಾರೆ. ಅಂದಿನ ಜಿಲ್ಲಾಧಿಕಾರಿ ಶ್ರೀ ಡಿ. ಶೇಷಾದ್ರಿ ಅಯ್ಯರ್‌ರವರು ತಹಸೀಲ್ದಾರ್ ರಘುನಾಥರಾವ್ ಮಾನ್ಯರವರ ಮೂಲಕ ೩೦.೧೦.೧೯೩೯ರಲ್ಲಿ ಇವರಿಗೆ ಪತ್ರ ಬರೆದು ಸೊಸೈಟಿ ಸ್ಥಾಪನೆಗೆ ಸಹಿ ಹಾಕುವುದಕ್ಕೆ ದಿನಾಂಕ ೧.೧೧.೩೯ರಂದು ಬರುವಂತೆ ಸೂಚಿಸಿದ ದಾಖಲೆ ಇದನ್ನು ಸ್ಪಷ್ಟಪಡಿಸುತ್ತದೆ. ಸ್ವಾತಂತ್ರ್ಯ ಪೂರ್ವದಲ್ಲಿ ಟಿ. ಸುಬ್ರಹ್ಮಣ್ಯರವರು ಮೈಸೂರು ಕಾಂಗ್ರೆಸ್ ಅಧ್ಯಕ್ಷರು ನಿಧಿ ಸಂಗ್ರಹಕ್ಕಾಗಿ ನಾಗಭೂಷಣರಾವ್‌ರವರಲ್ಲಿಗೆ ಬಂದಿದ್ದು ಅವರಿಂದ ೧೦೦೦ ರೂ. ನಿಧಿ ಪಡೆದಿದ್ದರು. ಅನಂತರ ಅವರಿಬ್ಬರಲ್ಲಿ ಏನು ಭಿನ್ನಾಭಿಪ್ರಾಯ ಬಂದಿತೆಂದು ತಿಳಿಯುವುದಿಲ್ಲ. ಆದರೆ ಸುಬ್ರಹ್ಮಣ್ಯರವರು ಹಿಂತಿರುಗಿದ ನಂತರ ಇವರಲ್ಲಿ ಕ್ಷಮಾಪಣೆ ಕೇಳಿ ಪತ್ರ ಬರೆದು ಒಂದು ಸಾಲು ಉತ್ತರ ಬರೆಯುವಂತೆ ವಿನಂತಿಸಿರುವ ಪತ್ರ ಗಮನ ಸೆಳೆಯುತ್ತದೆ. ಈ ಮನೆತನಕ್ಕೆ ಗೌರವ ತರುವಂತಹ ಹತ್ತು ಹಲವು ಪತ್ರಗಳು ಈ ಮನೆಯಲ್ಲಿದೆ. ಮೊದಲನೆ ಮಹಾಯುದ್ಧಲ್ಲಿ ರೂ. ಒಂದು ಸಾವಿರ ಯುದ್ಧನಿಧಿಯಾಗಿ ಈ ಮನೆತನದವರು ಕೊಟ್ಟುದ್ದನ್ನು ಅಂದು ಕನ್ನಡದಲ್ಲಿ ಮುದ್ರಣವಾಗಿ ಹೊರಬರುತ್ತಿದ್ದ ಮೈಸೂರು ಗ್ಯಾಸೆಟಿಯರ್ ಪ್ರಕಟಿಸಿದೆ. ೧೯೪೭ರ ಈ ಗ್ಯಾಸೆಟಿಯರ್‌ಗಳೂ ಇಲ್ಲಿವೆ. ಇಂದು ಈ ಮನೆ ಹಳೆಯ ವೈಭವವನ್ನು ಕಳೆದುಕೊಂಡು ಅದರ ಮೆಲುಕಿನಲ್ಲಿ ಮೂಕ ಸಾಕ್ಷಿಯಾಗಿ ನಿಂತಿದೆ.

**ಕಾಸರವಳ್ಳಿ ಮನೆ :** ಇಲ್ಲಿರುವ ಮನೆಯ ಕಂಬ, ತೊಲೆ, ಜಂತಿಗಳಲ್ಲಿರುವ ಅಪೂರ್ವ ಕುಸುರಿ ಕಲೆ ಗಮನ ಸೆಳೆಯುತ್ತದೆ. ಈ ಮನೆಯ ಹತ್ತಿರದಲ್ಲಿಯೇ ಶ್ರೀ ಸೋಮೇಶ್ವರ ದೇವಸ್ಥಾನ ಇದೆ. ಆರು ಮಗ್ಗುಲ ಛಾವಣಿ ಹೊತ್ತಿರುವ ಇದರ ಮುಂಬಾಗಿಲು ಗಮನಿಸುವಂತಹುದು. ಅದ್ಭುತ ಕುಸುರಿ ಕೆಲಸದ ಕಲಾಕೃತಿಗಳು, ಮರದ ಕಂಬಗಳು, ಅದರ ಮೇಲಿನ ಬೋದಿಗೆ ಚೌಕಟ್ಟು, ಪಳಿ ಜುಳದಿ, ಛಾವಣಿ ಅಂಗುಲಂಗುಲಕ್ಕೂ ಮೊಗ್ಗು, ಮಿಡಿ, ಬಳ್ಳಿ, ಹೂ ಹಣ್ಣು, ಗೊನೆ ನೊಂಚಲುಗಳ ಅಂದ ಚೆಂದದ ಅನಂತ ಚಿತ್ತಾರ, ಮರ ಇಲ್ಲಿ ಅಮರ. ಇದನ್ನು ಗಂಗೆ ಬಾಗಿಲು ಎಂದು ಕರೆಯುತ್ತಾರೆ. ಈ ಚೌಕಟ್ಟಿನ ಮೇಲುಪ್ಪರಿಗೆ ಇನ್ನೂ ಸುಂದರವಾಗಿದೆ. ಆರು ಕಟ್ಟಿನ ಕಂಬಗಳ ಮೇಲಿನ ಚೌಕಟ್ಟುಗಳ ಮೇಲೆ ವಿಲಕ್ಷಣ ನಿಬಿಡ ವಿನ್ಯಾಸದಲ್ಲಿ ಒತ್ತಾಗಿ ಜೋಡಿಸಿದ ಪಕಾಸುಗಳು ಅವುಗಳನ್ನು ಒಂದೊಂದಾಗಿ ಬಿಚ್ಚಿ ತೆಗೆಯಲು ಸಾಧ್ಯವಿಲ್ಲದಂತೆ ಕೋಳಿನ ಎರಡೂ ತುದಿಗೆ ಬುಗುರಿಗಳು, ಕೋಳು ಕಂಟ ಕಳಚಿ ತೆಗೆದರೂ ಸೂರು ಕುಸಿಯದಂಥಾ ಮಲಕಿನ ಜೋಡಣೆ ಗಮನೀಯ ಇದನ್ನು ಗಾಳಿ ಗೋಪುರ, ಗಾಳಿ ಉಪ್ಪರಿಗೆ ಎಂದು ಕರೆಯಬಹುದು. ಇದರಲ್ಲಿನ ಕಲಾತ್ಮಕ ಕೆತ್ತನೆಗಳು ಪ್ರಾಣಿ ಪಕ್ಷಿಗಳು ಹೂಬಳ್ಳಿಗಳು. ಜ್ಯಾಮಿತಿ ಆಕೃತಿಗಳು ಬಹಳವಿದೆ. ಅಲ್ಲದೆ ಆನೆ, ಕುದುರೆ, ಕಲ್ಪವೃಕ್ಷ, ಕಾಮಧೇನು, ನಾಗ, ನವಿಲು, ಸಿಂಹ, ಘೇಂಡಾಮೃಗ ಹಾಗೂ ವೃಷಭಗಳ ಜೀವಕಲ್ಪದ ಫಲಕಗಳಿವೆ. ತಳಿರು ತೋರಣವಿದೆ. ಇಲ್ಲಿರುವ ನಾಲ್ಕು ಬೃಹತ್ ಕಂಬಗಳು ಶ್ರೀ ಗಂಧದ್ದಾಗಿದೆ.೧೯

ಈ ದೇವಾಲಯವು ಇಂದು ಖಾಸಗಿ ಒಡೆತನದಲ್ಲಿದೆ ಗಂಗೆ ಬಾಗಿಲಿಂದ ಮುಂದೆ ಹೋದರೆ ಚಂದ್ರಸಾಲೆ ಇದೆ ಎಂಟು ಅಡಿ ದಪ್ಪದ ಗೋಡೆ ನಮ್ಮ ಅಳಪಿಗೆ ಸಿಗದಿದ್ದರೂ ಒಂದಡಿ ದಪ್ಪದ ಹಲಗೆಯಿಂದ ಮಾಡಿದ ಬಾಗಿಲು ಗಮನಸೆಳೆಯುತ್ತದೆ. ಚಂದ್ರಸಾಲೆಯಲ್ಲಿ ಗಜಗಾತ್ರಾ ಹದಿನೆಂಟು ಕಂಬಗಳಿವೆ. ಅವುಗಳ ವಿನ್ಯಾಸ ಬೇರೆ ಬೇರೆಯೇ ಇದೆ ಚಂದ್ರಸಾಲೆಯ ಎರಡೂ ಮಗ್ಗುಲಲ್ಲಿ ಅಗ್ರಹಾರಗಳಿವೆ ಒಂದೊಂದಕ್ಕೂ ಪ್ರತ್ಯೇಕ ಹಜಾರ ನಡುಮನೆ, ಒಳಮನೆ ಅಡುಗೆ ಮನೆ ಇದೆ. ಚಂದ್ರಸಾಲೆಯ ಹಿಂಭಾಗದಲ್ಲಿ ನಾಲ್ಕು

ಎತ್ತರದ ಬಾಗಿಲಿನಿಂದ ಬಳಸಿ ಹೊಕ್ಕಾಗ ನಿಜವಾದ ಕಾಸರವಳ್ಳಿ ಸಿಕ್ಕುತ್ತದೆ. ಈ ಸಣ್ಣ ಬಾಗಿಲ ಮೂಲಕ ಒಳ ಹೊಕ್ಕರೆ ಕೋಣೆ, ಅಲ್ಲಿ ಒಂದು ಹಜಾರ, ಚೌಕಿ, ಮಲಗುವ ಕೋಣೆ, ದಿವಾನ್ ಖಾನೆ, ಉಗ್ರಾಣ, ಪಣತ, ಒಳಮನೆ, ಚೌಕಿ, ದೊಡ್ಡ ಚೌಕಿ, ಸಾಲು ಸಾಲು ಕೋಣೆ, ಅಟ್ಟ ಬಿಸಿಲು ಮಚ್ಚೆ, ದೇವರಕೋಣೆ, ಮೊಗಸಾಲೆ, ಮಡಿಮನೆ, ಗ್ರಂಥಾಲಯ, ಅತಿಥಿ ಗೃಹ, ದಸ್ತಾವೇಜು ಸಂಗ್ರಹಾಲಯ, ಪಡಸಾಲೆ, ಪಾತ್ರೆ ಪಗಡೆ ಉಗ್ರಾಣ ಕೋಣೆ, ಹಜಾರ ಮೊದಲಾದವುಗಳಿವೆ. ಇದು ಏಳು ಸುತ್ತಿನ ಕೋಣೆ ಹೊಂದಿರುವ ಮನೆ. ಆ ಕಾಲದ ಕೊಡ, ಬಾನಿ, ಚರಿಗೆ, ಮರಿಗೆ, ಖುರ್ಚಿ, ನೀಲಾಂಜನ, ಲಾಂದ್ರ, ಪಾಣಿ ಪೀಠ, ಸೀಮೆಎಣ್ಣೆ ಚಾಲಿತ ಫ್ಯಾನು, ತೂಗುದೀಪ ಚಲಾವಣೆ, ದಳ್ಳಿ, ಚವುರಿ, ತಾಮ್ರದ ಸ್ನಾನದ ತೊಟ್ಟಿ, ಆಳೆತ್ತರ ಸೌಟು ಕೊಪ್ಪರಿಗೆ ನವರಾತ್ರಿ ವಿಗ್ರಹ, ಇತ್ಯಾದಿ ಇತಿಹಾಸ ಹೇಳುವ ವಸ್ತುಗಳು ಅಲ್ಲಿವೆ. ಈ ದೇವಾಲಯಕ್ಕೆ ಹೆಬ್ಬಾಗಿಲು ಮೂಲಕ ಒಳ ಹೋಗಲು ರಸ್ತೆ ಇಲ್ಲ.[೧೫]

ಕಾಸರವಳ್ಳಿ ಮನೆಗೆ ಮೈಸೂರು ಅರಮನೆಯಲ್ಲಿ ನಡೆಯುತ್ತಿದ್ದ ಪ್ರತಿಯೊಂದು ಸಮಾರಂಭಕ್ಕೂ ಕರೆಯೋಲೆ ಬರುತ್ತಿತ್ತು. ಮೈಸೂರು ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ ಆಡಳಿತದ ಚಿನ್ನದ ಹಬ್ಬವನ್ನು ಜೆ.ಜಿ. ಮಲ್ಲಾರಾಧ್ಯರ ಅಧ್ಯಕ್ಷತೆಯಲ್ಲಿ ಸಂಭ್ರಮದಿಂದ ಆಚರಿಸಲು ಕೂಡಿಸಿದ ನಿಧಿಗೆ ಅತ್ಯಂತ ಹೆಚ್ಚು ಹಣ ನೀಡಿದವರಲ್ಲಿ ಕಾಸರವಳ್ಳಿ ಸಾಹುಕಾರರೂ ಒಬ್ಬರು. ಸ್ವಾತಂತ್ರ್ಯ ಬಂದ ನಂತರ, ಅವರಿಗೆ ಬಂದಾಗಿದ್ದ ಮನೆತನ ೧೯೫೫ರಲ್ಲಿ ಮೊಟ್ಟ ಮೊದಲ ಬಾರಿಗೆ ಪಾಲಾಯಿತು. ಭೂ ಸುಧಾರಣೆಯಿಂದ ಜಮೀನುಗಳು ಕೈಬಿಟ್ಟು ಹೋಯಿತು. ಆ ಕಾರಣದಿಂದ ಮಲೆನಾಡಿನ ಐದು ಆಗರ್ಭ ಶ್ರೀಮಂತ ಮನೆತನಗಳೆನಿಸಿದ್ದ ಕಾಸರವಳ್ಳಿ, ಶೀರ್ನಾಳಿ, ಕಿತ್ತಂದೂರು, ಮೇಳಿಗೆ ಮತ್ತು ಯಡೂರು ಮನೆತನಗಳು ಅವನತಿ ಹಂತ ತಲುಪಿದವು.[೧೬]

ಮಲೆನಾಡಿಗೆ ಹೊರಗಿನಿಂದ ಬೇಳೆ ಕಾಳುಗಳನ್ನು ತರಿಸುವ, ಇಲ್ಲಿಂದ ಅಡಿಕೆ ವ್ಯಾಪಾರ ಮಾಡುವುದರ ಮೂಲಕ ತಮ್ಮನ್ನು ಗುರುತಿಸಿಕೊಂಡ ಈ ಕಾಸರವಳ್ಳಿ ಮನೆತನದ ಪಾಲಿಗೆ ಈಗಿರುವ ದೇವಸ್ಥಾನ, ಭೂತಾಕಾರದ ಈ ಬಂಗಲೆ ಸುಮಾರು ಹನ್ನೆರಡು ಎಕರೆ ಬಾಗಾಯ್ತು, ಹದಿನೈದು ಎಕರೆ ತರಿ ಹಾಗೂ ಭವ್ಯ ಇತಿಹಾಸ ಮಾತ್ರ ಉಳಿದುಕೊಂಡಿದೆ. ಈ ಮನೆತನದಲ್ಲಿ ಏಳು ಪೀಳಿಗೆಗಳ ಇತಿಹಾಸವಿದೆ. ಭೂ ಸುಧಾರಣೆ ಕಾನೂನು ಮತ್ತು ಕೌಟುಂಬಿಕ ಸಮಸ್ಯೆ ಈ ಮನೆಯ ಇತಿಹಾಸವನ್ನು ಕಾಲಗರ್ಭದಲ್ಲಿ ಮರೆಮಾಚಲು ಕಾರಣವಾಯಿತು.[೧೭]

## ಕಾಸರವಳ್ಳಿ ಮನೆಯಲ್ಲಿ ದೊರೆತ ಮೋಡಿ ಲಿಪಿ ದಾಖಲೆ ೧

೦॥ ಪಿಂಗಳ ಸಂವತ್ಸರದ ಆಷಾಡ ಶು ೫ ಲೂ ಶ್ರೀಮತ್ಕೆಳದಿ ಸೊಮಶೆಖರನಾಯಕರೂ
ದಾಸಿವಾಸದ ಬಸವಣಗೆ ಬರಸಿ ಕಳುಹಿದ ಕಾರ್ಯ ಸಿರುಪತಿನಾಗಣನೂ ಆಲುಮಾನಿಸಿ
ಮೆ ಕಾಸರವಳ್ಳಿ ಅಗ್ರಹಾರದಲೂ ಮಾಗಲಿಬಯಲೂ ಯಂಬ ಸ್ಥಳದಲ್ಲೂ ತುಂಗಭದ್ರ ತಿರ
ದಲ್ಲು ತ್ತಾನು ದೆವಸ್ಥಾನವ ಕಟ್ಟಿಸಿ ಸೊಮೆಶ್ವರ ದೆವರ ಪ್ರತಿಷ್ಠೆ ಮಾಡಿಸುಧನೆ ಯೀ ಅಗ್ರಹಾರದ
ಲ್ಲೂ ಗ್ರಾಮ ದೆವರಿಗೆ ಉತ್ತಾರವಾದ ಯರಡು ವರಹನ ಸ್ವಾಸ್ಥೆ ಸಲಪಿಟ್ಟದೆ. ಕ್ರಯವ ಕೊಠೆ
ನು ಯೀ ಅಗ್ರಹಾರದೊಳಗಣ ಮಾಗಲಬಯಲೂ ಯಂಬ ಭೂಮಿಯಲ್ಲೂ ಉತ್ತಾರ
ಕೊಟ್ಟು ಯೀ ಸ್ಥಳದಲ್ಲೂ ಸಸಿಬಳೆ ಹಾಕಿಕೊಂಡು ಆದ ಹುಟ್ಟುವಳಿಯಿಂದ ದೆವ
ರ ಅಮೃತಪಡಿ ನಂದಾದೀಪ ಸಹಾನಡಸಿ ಜಾಹಾಗೆ ನಿರೂಪಕ್ಕೆ ಅಪ್ಪಣೆಯಾಗ ಬೆಕೆಂ
ದು ಹೆಳಿಕೊಳುಧಾನೆ ಅರಿತಿ ಅಪ್ಪಣೆಯಾಗಬೇಕೆಂದು ಕುಮಾರಿ ಬಸವಂಮ್ಮಾಜಿಯ
ವರೂ ಹೆಳಿಕೊಂಡ ಸಂಬಂಧ ಯೀ ನಾಗಣನ ಕೈಯ್ಯ ಕ್ರಯ ಗ ೨೦ ಕಾಣಿಕೆ ಗ ೧॥೩ ಉಭ
ಯಂಗ ೨೧॥೩ ಇಪ್ಪತ್ತೊಂದು ವರಹನ್ನೂ ಯೆಂಟ್ಟು ಹಣವನ್ನೂ ಅರಮನೆಗೆ ತೆಗದು ಕೊಂ
ಡು ಉತ್ತಾರವ ಕೊಟ್ಟದು ಆಲುಮಾನಿ ಸಿಮೆಸ್ಥಳದ ಸೇನಬವ ಬರಸಿದ ಪ್ರಮಾಣೆ ಯೀ ಸಿ
ಮೆ ಕಾಸರವಳ್ಳಿ ಅಗ್ರಹಾರದಲೂ ಮಾಗಲಬಯಲೂ ಯಂಬ ಭೂಮಿಯಲ್ಲೂ ಗದ್ದೆಬಿಜ
ಖ ೬ ಕೆ ಸಿಸ್ತು ಗ ೧॥೩= ನಿಲಿಸ್ತ ನಷ್ಟದಿಂದ ಹ ೧॥= ಉಭಯಂ ಗ ೨ ಯೀ ಅಗ್ರಹಾರ
ದ ಉತ್ತಾರದಲ್ಲೂ ಯೀತನ ಉತ್ತಾರದಿಂದ ಗ ॥ ೧ ಉಭಯಂಗ ೨॥೧ ಯರಡು ವರಹ
ನೂ ಆರು ಹಣವಿನ ಸ್ವಾಸ್ಥೆಯನೂ ಯೀ ನಾಗಣನೂ ಯೀ ಸ್ಥಳದಲ್ಲೂ ದೆವಸ್ಥಾನವ ಕ

ಟ್ಟಿಸಿ ಪ್ರತಿಷ್ಠೆ ಮಾಡುವ ಸೊಮೆಶ್ವರ ದೆವರಿಗೆ ಶಿವಾರ್ಪಿತವಾಗಿ ಉತ್ತಾರವ ಕೊಟ್ಟು ಯೀ ।
ಭೂಮಿಯಲ್ಲು ಸಸಿ ಬಾಳೆ ಮುಂತ್ತಾಗಿ ಹಾಕಿಕೊಂಡು ಆದ ಹುಟ್ಟುವಳಿಯಿಂದ ಯೀ
ದೆವರ ಅಮ್ರುತಪಡಿ ನಂದಾದಿಪ ಸಹಾ ನಡಸಿ ಬಾಹಾಗೆಕಟ್ಟು ಮಾಡಿಸಿ ಕಳುಹಿಸಿಥವ ।
ಯೀ ಭೂಮಿಯಲ್ಲೂ ರೆಖೆ ಪ್ರಮಾಣೆ ಗದ್ದೆ ಭೂಮಿ ವಿಂಗಡಿಸಿ ಕೊಟ್ಟು ಯೀ ಕಾಗದವ ।
ಸೆನಬರ ಕಡಿತಕ್ಕೆ ಬರಸಿ ತಿರಿಗಿ ಯೀತನ ವಶಕ್ಕೆ ಕೊಡುವದಾಗಿ (ಮೊಹರಿದೆ.)

## ಕಾಸರವಳ್ಳಿ ಮನೆಯಲ್ಲಿ ತಾಡೆಯೋಲೆಯಲ್ಲಿರುವ ದಾಖಲೆ ೨

ಶ್ರೀಗಣಾಧಿಪತಯೇ ನಮಃ । ನಮಸ್ತುಂಗ ಶಿರಶ್ಚುಂಬಿ ಚಂದ್ರ ಚಮರ ಚಾರವೇ ತ್ರ್ಯೈಲೋಕ್ಯ ನಗರಾರಂಭ
ಮೂಲಸ್ತಂಬಾಯ ಶಂಭವೇ । ಸ್ವಸ್ತಿ ಶ್ರೀ ಜಯಾಭ್ಯುದಯ ಶಾಲಿವಾಹನ ಶಕ ವರುಷ ೧೭೩೮ನೆಯ
ಪರಿವರ್ತತಮಾನಕ್ಕೆ ಸಲುವ ಧಾತು ಸಂವತ್ಸರದ । ಮಾರ್ಗಶಿರ ಶು. ೫ ಆದಿವಾರದಲ್ಲು ಶ್ರೀಮ
ತ್ತು ॥ ಅಂಗೀರ್ಸ ಗೋತ್ರದ ಅಶ್ವಲಾಯನ ಸೂತ್ರದ । ರುಕ ಶಾಖೆಯ । ಕ್ಸಾರವಳಿ ಕೃಷ್ಣಭಟರ ಪ್ರಪೌತ್ರರಾದ ।
ಶಂಕರ ಭಟ್ಟರ । ಪೌತ್ರರಾದ ಕೃಷ್ಣಭಟ್ಟರ ಪುತ್ರರಾದ । ಸುಭಯನವರಿಗೆ ಅಗಸ್ತ್ಯಗೋತ್ರದ । ಆಶ್ವಲಾಯನ
ಸೂತ್ರದ । ರುಖ ಶಾಖೆಯ । ಆಗುಂಬೆ ಸಿಮೆ ಅರೆಹಳಿ ಪಾಲವಳಗಣ ಯಿಮರಿ
ದೇವರಾಜಪುರಕೆ ಪ್ರತಿನಾಮದೆಯವಾದ ಕೆಸಲೂರ ಅಗ್ರಹಾರದ । ದುಗಾಭಟರ ಪ್ರಪಉತ್ರರಾದ ।
ಅಕ್ಷಂಭಟರ ಮುತ್ರರಾದ ಸುಬಾಭಟನ ಪುತ್ರನಾದ ನಾಗಪ್ಪ – ಯೀತನ ತಂಮ ಫಣಿಯಪ್ಪ ಸುಭಯ ಸಹ
ಯಕಸ್ತರಾಗಿ । ಬರೆಸಿಕೊಟ್ಟ ಸ್ವಾಸ್ತಿ ಕ್ರಯದಾನ ಪಟ್ಟ ಕ್ರಮವೆಂತೆಂದರೆ ನಾನು ನಂನ ಪ್ರಸ್ತಾಪ ನಿಮಿತ್ಯವಾಗಿ
ಕೆಸಲೂರ
ಅಗ್ರಹಾರದಲ್ಲೂ । ನಮಗೆ । ಪಿತರಾರ್ಜಿತವಾಗಿ ಶಾಸನಸ್ತವಾಗಿ ಬಂದ ಬಗೆಯಲ್ಲೂ ಕಡಲುಗದೆಯಲ್ಲೂ
ಬಿಜವರಿ ಗದೆ ಖಂ ೭ಕ್ಕೆ ಖ ೧ಕ್ಕೆ ಹಾ ೩ರಲೂ ೦೪।೦ಕ್ಕೆ ಸಿಸ್ತು । ಗ ೧ ಹಾ ೨॥೦ ದರ ಹಾ ೨॥೦
ಲುಖ ೨॥ ಕ್ಕೆ ಗ ॥೧॥= ಉಭಯಂ । ಗದೆ ಖ ೭ಕ್ಕೆ ಸಿಸ್ತು ಗ ॥೪॥= ಕಡುಸಿಕೋಪಿನಲ್ಲೂ ಸಾಗಿನಿಂದ
ಬದನಿಪುರಿನ ಸಾಲಿನಲ್ಲು ಗದೆ ಖ ೧ಕ್ಕೆ ಖ
ನಿಂದ ಗದೆ ಖ ೧।೦ ಉಭಯಂ । ಗದೆ ೫೨।೦ ದರ ಹಾ ೩ಲು ಸಿಸ್ತು ಗ ॥೧॥೦ ಉಭಯಂ । ಗದೆ ಖ
೧।೦ಕ್ಕೆ ಸಿಸ್ತು । ಗ೨॥೧।= ಕ್ಕೆ ವಿವರ । ಸರಕಾರದ ಸಿಸ್ತು ಬಾಕಿ ತೆತು ಗದೆ ಖ ೪॥ ಕ್ಕೆ ಸಿಸ್ತುಗ ೧ ಹಾ ೨॥=
ಬ್ರಹ್ಮಾದಯ ಉತ್ತಾರ ಬಾಬಿತ್ತಿನ ಗದೆ ಖ ೪॥೦ ಕ್ಕೆ ಸಿಸ್ತು ದರ ಹಾ ೩ಲು । ಹಾ೧ ಹಾ೩॥೦ ಉಭಯಂ ಖ
। ಕ್ಕೆ ಸಿಸ್ತು ಹಾ ೨॥೧।= ಯರಡು ವರಹ
ಂನ್ನೂ ೬ ಹಣ ಹಾಗು ಬೆಳೆಭೂಮಿಯುಂನ್ನು ನಿಮಗೆ । ಕ್ರಯದಾನವಾಗಿ ದಿಟವಾಗಿ ಯಿ ಭೂಮಿಗೆ ಸಲುವ
ಕ್ರಯದವ್ಯ । ತತ್ಕಾಲೋಚಿತ್ತಾವದ್ಯಸ್ತ ಪರಿಕಲ್ಪಿತ ಉಭಯವಾದಿ ಸಂಪ್ರತ್ತಿ ಸಂಪನ್ನ ಲಿಕ್ಷಣ ಲಕ್ಷಿತ ತ್ರಯದ್ರುವ್ಯ
। ಸಿಸ್ತು ಸರಕಾರ ಬಾಬಿತ್ತು । ಗ ೧॥ ಕ್ಕೆ ಗ ೫೧ಲ್ಲು ಸಿಸ್ತು ಗ ೫೧ ಸಿಸ್ತು ಗ ೧೨॥ ಗೆ ಕ್ರಯಗ ೬॥ ೦
ಬ್ರಹ್ಮಾದಯ
ಉಭಯ ಖ ೩ ಯಲು ಗ ೧।೦ ಕ್ಕೆ ಹಾ ೭।೦ಲ್ಲೂ ೦ ಸಿಸ್ತು ಗ ೧೩॥೦ ಕ್ಕೆ ಗ ೧೦।೧೦ ಉಭಯಂ ।
ಸಿಸ್ತು । ಗ ೨॥೧।= ಗೆ ಕ್ರಯ ಗ ೧೬॥೧೦ ಹದಿನಾರು ವರಹಂನ್ನು ೬ ಹಣ ಹಾಗವಂನು ಸದ್ಯಪರಿಜಿತವಾಗಿ
ಹಸ್ತಾವಳಿಯಲ್ಲೂ ತಾರವಿಸಲು ಯದಂತೆ ತೆಗೆದುಕೊಂಡು ಅಂಗೀರಸ ಗೋತ್ತದ ಆಶ್ವಲಾಯನ ಸೂತ್ರದ
ರುಖ ಶಾಖೆಯ ಕ್ಸಾಸರವಳಿ ಕೃಷ್ಣ ಭಟರ ಪ್ರಪೌ
ತ್ರರಾದ। ಕೃಷ್ಣಭಟರ ಪುತ್ರರಾದ ಸುಬ್ಬಯ್ಯನವರಿಗೆ । ಅಗಸ್ತ್ಯಗೋತ್ರದ ಆಶ್ವಲಾಯನಸೂತ್ರದ ರುಖಶಾಖೆಯ
ಕೆಸಲೂರ ಅಗ್ರಹಾರದ ದುಗಭಟರ ಪ್ರಪೌತ್ರರಾದ ಅಕ್ಷಂಭಟರ ಪೌತ್ರರಾದ ಸುಬಾಭಟರ ಪುತ್ರರಾದ
ನಾಗಪ್ಪಯ್ಯ

ಯರ ಸುಬಯ । ಸಹ ಕ್ರಯದಾನವಾಗಿ ಕೊಟೆವಾಗಿ ಈ ಭೂಮಿಗೆ ಸಲುವ ಸಂಪ್ರತಿ ನೆಲ ಪರಿಶ ಕಲ್ಲು
ಕೊಟ್ಟೆನೆಂದು । [illegible] [illegible] ನಿಧಿ ನಿಕ್ಷೇಪ ಅಕ್ಷೀಣಿ ಆಗಾಮಿ ಸಿದ್ಧಸಾಧ್ಯಂಗಳೆಂಬ ಅಷ್ಟಭೋಗ ತೇಜ
ಸ್ವಾಮ್ಯವಾಗಿ ಅನುಭವಿಸಿಕೊಂಡು ಈ ಭೂಮಿಯಂನ್ನು - ಸರಕಾರದ ಉಪ

ಹಿಂಭಾಗ :

ದ ಸಿಸ್ತಿಗೆ ಸಹ ಅರ್ತಿಕಾ ನಿಂಮ ಹೃದಲು ವರ್ಗ ಹಾಕಿಸಿಕೊಂಡು ಅರಮನೆಗೆ ಸಲುವ ಸರಕಾರದ । ಹಣ
ಉತ್ತಾರದ ಅರೆ ಹಣ ಸಹಾ ಕೊಟ್ಟು ಕೊಂಡು ಬಂದ ಉತ್ತಾರವಂನು ಅನುಭವಿಸಿಕೊಂಡು ಸಮಯ ವಿಷಯ ।
ದಲ್ಲಿ ದಾನಾದಿ ಕ್ರಯಪರಿತವರ್ತನೆಗೆ ಸಲಿಸಿಕೊಂಡು ನೀವು ನಿಂಮ ಸಂತಾನ ಪಾರಂಪ
ರ್ಯ ಅನುಭವಿಸಿಕೊಂಡು ಆಚಂದ್ರಾರ್ಕಸ್ಥಾಯಿಗಳಾಗಿ ಬದುಕಿ ಬಾಳಿರಿಯೆಂದು ಅಗಸ್ತ್ಯ ಗೋತ್ರದ
ಅಶ್ವಾಲಾಯನ ಸೂತ್ರ ದ ರುಕು ಶಾಖೆಯ ರಂಗಾಭಟರ ಪ್ರಪೌತ್ರರಾದ ಅಕ್ಷಂಭಟರ ಪೌತ್ರರಾದ ಸುಬಾಭಟರ
ಪುತ್ರನಾದ ನಾಗಪ್ಪ ಘಣಿಯಪ್ಪ ಸುಭಯ ಸಹ ಅಂಗೀರಸ ಗೋತ್ರದ ಅಶ್ವಲಿ
ಯನ ಸೂತ್ರದ ರುಖ ಶಾಖೆಯ ಕ್ಲರವಳಿಕೃಷ್ಣಭಟರ ಪ್ರಪೌತ್ರರಾದ ಶಂಕರಭಟರ ಪೌತ್ರರಾದ ಕೃಷ್ಣಭಟರ
ಪುತ್ರನಾದ ಸುಬಯನವರಿಗೆ ನಾವು ನಂಮ ಸ್ತ್ರೀಪುತ್ರ ಜ್ಞಾತಿ ದಾಯವಾದಿ ಸಾರಂತನುಮತದಿಂದ ಸ್ವಯಂ
ಬಟ್ಟು । ಬರೆಸಿಕೊಟ್ಟ ಕ್ರಯದಾನ ಪಟ್ಟೆ । ದೆವಸಾಕ್ಷಿಗಳು ಆದಿತ್ಯ ಚಂದ್ರ
ಅನಿಲೊನಲಶ್ಚ ದೌರ್‌ಭೂಮಿರಾಪೂ ಹೃದಯಂ ಯಮಶ್ಚ ಧರ್ಮಶ್ಚ್ಯ ಜಾನಾತಿ ನರಸ್ಯ ವೃತ್ತಿಂ ನರ
ಸಾಕ್ಷಿಗಳು । ಈ ಅಗ್ರಹಾರದ ಪ್ರತಿ ಜೋಯಿಸರ । ಮಗ ಸುಬ್ಬಾಜೋಯಿಸರು ..............................
ರ ಮಗ
ಶಿವರಾಮಭಟರು ಲಕ್ಷ್ಮಣಭಟರ ಮಗ ಮಂಜುಭಟ ಪುಟ್ಯೆಯನ ಮಗ।ತಂಮ್ಮಯ್ಯ................. ಭಟ್ರು
ಭಂಕಗಡುಪಿನ ರಾಂಭಟ್ರು। ತಂಮರಡಿ ತ್ತಂಮ್ಮೈಭಟ್ರು........... ದುಗಯ್ಯ .......ಮಂನ ಗಯ್ಯನು ಸಾಕ್ಷಿ।
ಜೊಂಮಂಣನು ತಂದು ಮುಟ್ಟಿಕೊಟ್ಟ ಸಾಕ್ಷಿ ಮುಟಗೊಡ ಪುಟಂಣನು ತಂದು ಮುಟ್ಟಿ ಕೊಟ್ಟ ಸಾಕ್ಷಿ
(ನಾಗರಿಯಲ್ಲಿ ತಂಮ್ಮೈ ಯ ಜೊಯಿಸನು ಸಾಕ್ಷಿ ರುಜು) ಯೊಯಿ ಸಾಕ್ಷಿ। ಮಂಜೈಯ ಜೊಯಿಸ ಸಾಕ್ಷಿ।
ದೆವರಜೊಯಿಸನು ಸಾಕ್ಷಿ।ಬ್ಯರಣದದಗ್ಯೆಯನು ಸಾಕ್ಷಿ ಬೊಂಮಂಣನು
ಉಬಯಾನುಮತ್ತದಿಂದಾ ಯೀ ಪಟ್ಟೆ ಬರದಾತ್ತ ಸ್ಥಳದ ಶಾಚಂಗಪ್ಪಯನ ಮಗ ಗಿರಿಯಪ್ಪ ಶಾನುಭೋಗ
ಅಪ್ಪಯನ ದುಂ। ಪುಟ್ಟಯನ ಬರಹ.

## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. **ಮಂಜುವಾಣಿ,** ಜೂನ್ ೧೯೮೮. ಪು. ೨೧-೨೨. ತಾಳೆಯೋಲೆ ಹಸ್ತಪ್ರತಿ ಮತ್ತು ಕಡತ ದಾಖಲೆಗಳು.

೨. ಕಾಸರವಳ್ಳಿ ಮನೆಯಲ್ಲಿರುವ ಅಪ್ರಕಟಿತ ದಾಖಲೆ, ಕಡತದ ದಾಖಲೆಗಳು.

೩. ಶಾಮಾಶಾಸ್ತ್ರಿ, ಆರ್ ಮತ್ತು ಎನ್.ಎಲ್. ರಾವ್ ೧೯೪೧.

೪. ಅಪ್ರಕಟಿತ ವಿವರವನ್ನು ಡಾ. ಬಿ. ವಸಂತಶೆಟ್ಟರು ಮತ್ತು ಕುಂದಾಪುರದ ಅಚ್ಚುತ ಹೆಬ್ಬಾರರಿಂದ ಪಡೆಯಲಾಗಿದೆ.

೫. ವಸಂತಮಾಧವ ಕೆ.ಜಿ., ೧೯೯೯ : ಪು. ೧೪೭ ಮತ್ತು **ಕೋಟ ಸಾಂಸ್ಕೃತಿಕ ಅಧ್ಯಯನ.**

೬. ಅದೇ ೧೯೯೯. ಪು. ೩೦೮ ಮತ್ತು ಕೋಟ ಸಾಂಸ್ಕೃತಿಕ ಅಧ್ಯಯನ. ಕಾಸರವಳ್ಳಿ ಮನೆಯ ಪ್ಲಾನ್ ಆರ್ಕಿಟೆಕ್ಟ್ ಮಾಡಿ ಪರಿಚಯಿಸಿದವರು vivek L. helbe, Architect, Srusin Associates, Architects, Engineers, 20, Krupa I Flook, Jaladarshin layout, RMV Extn II stage, Bangalore. ಇವರು ಈ ಮನೆ/ಇಲ್ಲಿಯ ಸಾಮಗ್ರಿಗಳನ್ನು ವಿದೇಶದಲ್ಲಿ ಪ್ರದರ್ಶನಕ್ಕೆ ಮಾಡಿದ್ದರೆಂದು ತಿಳಿದುಬರುತ್ತದೆ.

೭. ಈ ಮನೆತನದಲ್ಲಿರುವ ಅಪ್ರಕಟಿತ ದಾಖಲೆಗಳು. ತಾಳೆಗರಿಯಲ್ಲಿರುವ ದಾಖಲೆ.

೮. ಈ ಮನೆತನದಲ್ಲಿರುವ ಅಪ್ರಕಟಿತ ದಾಖಲೆಗಳು.

೯. ಈ ಮನೆತನದಲ್ಲಿರುವ ಶಹಾ ಪುಸ್ತಕಗಳು.

೧೦. ಈ ಮನೆತನದಲ್ಲಿರುವ ಶಹಾ ಪುಸ್ತಕಗಳು. ಇಲ್ಲಿ ಕಂಡು ಬರುವ ದಾನಿವಾಸ ಎಂಬುದು ಊರಿನ ಹೆಸರು. ಇದು ನರಸಿಂಹರಾಜಪುರ ಎಡೆಹಳ್ಳಿ ಪಕ್ಕ ಇತ್ತು. ಇವರು ದೊರೆಗಳಾಗಿದ್ದರು. ಇವರದೇ ನಾಲ್ಕು ಶಾಸನಗಳು ದೊರೆತಿವೆ. ಎಡೆಯೂರು ತೋಂಟದ ಸಿದ್ಧಲಿಂಗ ಮಠ ಇವರಿಂದ ನಿರ್ಮಾಣವಾಯಿತು. ನರಸಿಂಹರಾಜಪುರದಲ್ಲಿ ಒಂದು ಶಿಲಾ ಶಾಸನ, ಸಿರಾನಗದ್ದೆ ಮಠದಲ್ಲಿ ೩ ತಾಮ್ರ ಶಾಸನ, ಯಡಿಯೂರು ೧, ಬಾಳೆಹೊನ್ನೂರಿನಲ್ಲಿ ೧ ಶಾಸನ ದೊರೆತಿದೆ. ಮಾಹಿತಿ ಡಾ. ನಂಜುಂಡಸ್ವಾಮಿ, ತುಮಕೂರು.

೧೧. ಈ ಮನೆತನದಲ್ಲಿರುವ ಶಹಾ ಪುಸ್ತಕಗಳು.

೧೨. ಕಾಸರವಳ್ಳಿ ಮನೆಯಲ್ಲಿರುವ ಅಪ್ರಕಟಿತ ಪತ್ರ.

೧೩. ಈ ಮನೆತನದಲ್ಲಿರುವ ಶಹಾ ಪುಸ್ತಕಗಳು. ಹಳೆಯ ಪುಸ್ತಕಗಳು.

೧೪. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಮಾಹಿತಿ. ಈ ಕುರಿತು ಶರತ್ ಕಲ್ಕೋಡ್‌ರವರು **ತರಂಗ ವಿಶೇಷಾಂಕ**ದಲ್ಲಿ ಮಲೆನಾಡಿನ ಮನೆ ಮನೆತನ ಕಾಸರವಳ್ಳಿ ಎಂಬ ಒಂದು ಲೇಖನ ಬರೆದಿದ್ದಾರೆ. ಅಂತೆಯೇ ಚೇತನ ಶೀತಲಬಾವಿ ಎಂಬುವವರು **ಕಾಸರವಳ್ಳಿ ಮಲೆನಾಡಿನ ಮ್ಯೂಸಿಯಂ** ಎಂಬ ಲೇಖನವನ್ನು ದಿನಾಂಕ ೧೫.೫.೧೯೯೩ರಲ್ಲಿ **ಸುಧಾ**ದಲ್ಲಿ ಬರೆದಿದ್ದಾರೆ. ಪು. ೧೨.

೧೫. ಕ್ಷೇತ್ರ ಕಾರ್ಯದಿಂದ ಸಂಗ್ರಹಿಸಿದ ಮಾಹಿತಿ ಮತ್ತು ಕಾಸರವಳ್ಳಿ ಮನೆಯ ಶ್ರೀ ರಾಮಸ್ವಾಮಿಯವರು ಮತ್ತು ಶಿವಮೊಗ್ಗದಲ್ಲಿರುವ ಕಾಸರವಳ್ಳಿ ನಾಗರಾಜ್‌ರವರು ಈ ಮನೆ ಮತ್ತು ಮನೆತನದ ಕುರಿತು ಹೆಚ್ಚಿನ ಮಾಹಿತಿ ನೀಡಿದ್ದಾರೆ. ದಾಖಲೆಗಳನ್ನು ಜೆರಾಕ್ಸ್ ಮಾಡಿಸಿಕೊಟ್ಟಿದ್ದಾರೆ. ಅದನ್ನು ಲೇಖನಕ್ಕೆ ಬಳಸಿಕೊಳ್ಳಲು ಅನುಮತಿ ನೀಡಿದ್ದಾರೆ. ಇವರುಗಳಿಗೆ ನಾನು ಅಭಾರಿಯಾಗಿದ್ದೇನೆ.

೧೬. ಅಪ್ರಕಟಿತ ದಾಖಲೆಯಿಂದ.

೧೭. **ಕಾಸರವಳ್ಳಿ ಮನೆ :** ಮನೆತನದ ಕುರಿತು ಒಂದು ಪ್ರಬಂಧ ಸಿದ್ಧಪಡಿಸಲು ಒತ್ತಾಸೆ ತಂದವರು ನನ್ನ ತಂದೆ ಕೆಳದಿ ಗುಂಡಾಜೋಯಿಸರು. ಇದು ಕಳೆದ ಮೂರು ವರ್ಷದ ಹಿಂದೆಯೇ ಆಗಬೇಕಿತ್ತು. ಅಂದಿನಿಂದಲೂ ಹೇಳುತ್ತಿದ್ದರು. ಈಗ ಇದು ಕೈಗೂಡಿದೆ. ಅವರ ಒತ್ತಾಸೆ ಮತ್ತು ಸಹಕಾರಕ್ಕೆ ನಾನು ಅಭಾರಿಯಾಗಿದ್ದೇನೆ.

ಡಾ. ಎ.ಕೆ. ಶಾಸ್ತ್ರಿ*

# ಸ್ವರ್ಣವಲ್ಲೀ ಮಠಕ್ಕೆ ಕೆಳದಿ ನಾಯಕರ ಧರ್ಮ

ವಿಜಯನಗರದ ಸಾಮಂತರಲ್ಲಿ ಪ್ರಬಲರೆನಿಸಿದ ಕೆಳದಿಯ ನಾಯಕರು ಸಾಮ್ರಾಜ್ಯದ ಪತನಾನಂತರ, ಕರ್ನಾಟಕದ ರಾಜಕೀಯ ಬೆಳವಣಿಗೆಯಲ್ಲಿ ಮಹತ್ವದ ಪಾತ್ರವಹಿಸಿದರು. ವಿಜಯನಗರ ಸಾಮ್ರಾಜ್ಯದ ಭವ್ಯ ಪರಂಪರೆಯನ್ನು ಮುಂದುವರಿಸುವಲ್ಲಿ ಕೆಳದಿಯ ನಾಯಕರು ಯಶಸ್ವಿಯಾದರು. ಈಗ ಕೆಳದಿ ಶಿವಮೊಗ್ಗ ಜಿಲ್ಲೆಯ ಸಾಗರ ತಾಲೂಕಿನ ಒಂದು ಚಿಕ್ಕ ಗ್ರಾಮ. ಆದರೆ ಪೂರ್ವದಲ್ಲಿ ಅದು ಕೆಳದಿ ನೃಪರ ರಾಜಧಾನಿ. ಸುಮಾರು ಎರಡೂವರೆ ಶತಮಾನಗಳ ಕಾಲ (ಕ್ರಿ.ಶ. ೧೪೯೯–ಕ್ರಿ.ಶ೧೭೬೩) ಕೆಳದಿ ನೃಪರು ಕರ್ನಾಟಕ ಮಧ್ಯ-ಪಶ್ಚಿಮ ಭಾಗದ ಒಡೆಯರಾಗಿದ್ದರು. ಕೆಳದಿ ರಾಜ್ಯವು ಉಚ್ಛ್ರಾಯ ಸ್ಥಿತಿಯಲ್ಲಿದ್ದಾಗ ಈಗಿನ ಶಿವಮೊಗ್ಗ, ಮಂಗಳೂರು, ಚಿಕ್ಕಮಗಳೂರು ಮತ್ತು ಹಾಸನ ಜಿಲ್ಲೆಗಳ ಬಹುಭಾಗ ಕಾರವಾರ, ಧಾರವಾಡ, ಮತ್ತು ಚಿತ್ರದುರ್ಗ ಜಿಲ್ಲೆಗಳ ಕೆಲವು ಭಾಗ ಮತ್ತು ಕೇರಳದ ಸ್ವಲ್ಪ ಭಾಗಗಳನ್ನು ಒಳಗೊಂಡಿತ್ತು. ಕೆಳದಿಯ ಅರಸುಗಳು ಮುಸಲ್ಮಾನರ ದಾಳಿಗಳನ್ನು ಎದುರಿಸಲು ಮತ್ತು ಅನುಕೂಲಕ್ಕೆ ತಕ್ಕಂತೆ ಕ್ರಮವಾಗಿ ಕೆಳದಿ, ಇಕ್ಕೇರಿ, ಬಿದನೂರು ಮತ್ತು ಭುವನಗಿರಿದುರ್ಗ (ಕವಲೆದುರ್ಗ) ಗಳೆಂಬ ರಾಜಧಾನಿಗಳಿಂದ ರಾಜ್ಯವನ್ನಾಳಿದರು[1]. ಕೆಳದಿಯ ನಾಯಕರು ವೀರಶೈವ ಶಕ್ತಿ ವಿಶಿಷ್ಟಾದ್ವೈತ ಸಿದ್ಧಾಂತಗಳನ್ನು ಪ್ರತಿಪಾದಿಸುವ ಗುರುಗಳನ್ನು ಅವರ ಮಠಗಳನ್ನು ಮತ್ತು ಪ್ರಜೆಗಳನ್ನು ಗೌರವಿಸಿ, ಪೋಷಿಸಿದರೆಂಬುದು ಐತಿಹಾಸಿಕ ಸತ್ಯ. ಜೈನರ ಬಸದಿ ಮತ್ತು ಮುಸಲ್ಮಾನರ ಮಸೀದಿಗಳಿಗೂ ನಾಯಕರು ದಾನ-ದತ್ತಿ ನೀಡಿದರು, ಶೃಂಗೇರಿ ಮಠದ ಜಗದ್ಗುರುಗಳನ್ನು ಗೌರವಿಸಿ, ಮಠಕ್ಕೆ ದಾನ ದತ್ತಿ ನೀಡಿ, ಮಠವನ್ನು ರಕ್ಷಿಸಿದ್ದು ಬಹು ಪ್ರಖ್ಯಾತ. ಉತ್ತರಕನ್ನಡ ಜಿಲ್ಲೆಯ ಶಿರಸಿ ತಾಲೂಕಿನ ಸ್ವರ್ಣವಲ್ಲಿ ಮಠಕ್ಕೂ ಕೆಳದಿ ನಾಯಕರು ಭೂದಾನ ಮಾಡಿದ್ದು ನೆನಪಿಡಬೇಕಾದ ಸಂಗತಿ ಮತ್ತು ಪ್ರಸ್ತುತ ಲೇಖನ ಈ ವಿಷಯಕ್ಕೆ ಸಂಬಂಧಿಸಿದುದರಿಂದ ಇನ್ನುಳಿದ ವಿಷಯಗಳ ವಿವರಣೆ ಅನಗತ್ಯ.

ಕಾಶಿಯಲ್ಲಿ ಆದಿಶಂಕರರ ಸಮ್ಮುಖದಲ್ಲಿ ಅವರ ಶಿಷ್ಯರಲೊಬ್ಬರಾದ ಭಾಸ್ಕರೇಂದ್ರ ಸರಸ್ವತಿಗಳಿಂದ ಗುಣನಿಧಿಗಳು ಸನ್ಯಾಸ ದೀಕ್ಷೆ ಪಡೆದು ಕಾಶಿಯಲ್ಲಿ ಪ್ರಥಮ ಮಠ ಸ್ಥಾಪನೆಯಾಗಿ, ಮುಂದೆ ಕ್ರಮೇಣ ಉಜ್ಜಯಿನಿ, ಗೋಕರ್ಣ, ಕಡತೋಕೆ, ಸಹಸ್ರಲಿಂಗ ಮತ್ತು ಕ್ರಿ.ಶ. ೧೫೫೬ ರಲ್ಲಿ ಇಂದಿನ ಸ್ವರ್ಣವಲ್ಲಿಗೆ ಮಠ ಸ್ಥಳಾಂತರಗೊಂಡಿದ್ದು ಶ್ರೀಮಠದಲ್ಲಿಯ ಚಾರಿತ್ರಿಕ ದಾಖಲೆಗಳಿಂದ ಸ್ಪಷ್ಟವಾಗುತ್ತದೆ[2]. ಪ್ರತ್ಯಕ್ಷವಾಗಿ ಸ್ವರ್ಣವಲ್ಲಿ ಮಠ ಸೋದೆ (ಸ್ವಾದಿ) ರಾಜ್ಯದಲ್ಲಿತ್ತಾದರೂ, ಪರೋಕ್ಷವಾಗಿ ಈ ಸ್ಥಳ ಕೆಲವೊಮ್ಮೆ ಕೆಳದಿ ನಾಯಕರ ನಿಯಂತ್ರಣಕ್ಕೊಳಪಟ್ಟಂತೆ ತೋರುತ್ತವೆ. ಪ್ರಸ್ತುತ ಲೇಖನವು 'ಸ್ವರ್ಣವಲ್ಲಿ ಮಠಕ್ಕೆ ಕೆಳದಿನಾಯಕರ ಧರ್ಮ' ಎಂಬುದಕ್ಕೆ ಸೀಮಿತವಾಗಿರುವದರಿಂದ, ಈ ವಿಷಯಕ್ಕೆ ಸಂಬಂಧಿಸಿ ಸ್ವರ್ಣವಲ್ಲಿ ಮಠದಲ್ಲಿ ದೊರೆತ ಕೆಲವು ಚಾರಿತ್ರಿಕ ದಾಖಲೆಗಳ ಪರಿಚಯ ಇಂತಿದೆ.

ಒಟ್ಟು ಮೂರು ದಾಖಲೆಗಳು ಲಭ್ಯವಾಗಿದ್ದು, ಅವು ಕ್ರಮವಾಗಿ ವೆಂಕಟಪ್ಪನಾಯಕ ಬಸವಪ್ಪನಾಯಕ ಮತ್ತು ಚೆನ್ನಮ್ಮಾಜಿಯವರಿಗೆ ಸಂಬಂಧಿಸಿದವು.

ಮೊದಲನೆಯದು ವೆಂಕಟಪ್ಪನಾಯಕರ ಕಾಲಕ್ಕೆ ಸೇರಿದ್ದು. ದೊಡ್ಡ ಸಂಕಣ್ಣ ನಾಯಕರ ಪುತ್ರ, ಹಿರಿಯರ ವೆಂಕಟಪ್ಪನಾಯಕರು (ಕ್ರಿ.ಶ.೧೫೮೨–೧೬೨೯) ಕೆಳದಿ ಅರಸು ಮನೆತನದ ಘನವಂತ ದೊರೆಗಳು. ವಿಜಯನಗರ ಸಮ್ರಾಟರ ಹಿಡಿತದಿಂದ ಪಾರಾಗಿ, ತಮ್ಮ ಮನೆತನದಲ್ಲಿಯೇ ಸ್ವತಂತ್ರ ದೊರೆಯೆನಿಸಿದ ಹಿರಿಯ ವೆಂಕಟಪ್ಪನಾಯಕರು ಶ್ರೇಷ್ಠ ಕವಿಗಳೂ ವಿದ್ಯಾಪೋಷಕರೂ ಆಗಿದ್ದರು ಸರ್ವಮತಧರ್ಮಗಳನ್ನು ಸಮಾನವಾಗಿ ಪೋಷಿಸಿದ ಕೀರ್ತಿ ಹಿರಿಯ ವೆಂಕಟಪ್ಪನಾಯಕರದು ಸ್ವರ್ಣವಲ್ಲಿ ಮಠದ ಗರುಪರಂಪರೆಯಲ್ಲಿ ೩೬ನೆಯ ವರಾದ ಶ್ರೀರಾಮಚಂದ್ರ ಸರಸ್ವತಿಗಳು (ಕ್ರಿ.ಶ. ೧೬೨೦–೧೬೪೨) ವೆಂಕಟಪ್ಪ ನಾಯಕರ ಸಮಕಾಲೀನರು.

* 'ಭವಾನಿ', ಟಿ.ಎಸ್.ಎಸ್. ರೈಸ್ ಮಿಲ್ ಕೆಳಗೆ, ವಿದ್ಯಾಗಿರಿ, ಶಿರಸಿ (ಉ.ಕ.) –೫೮೧ ೪೦೨.

ಕ್ರಿ.ಶ. ೧೫೪೨, ರೌದ್ರಿ ಸಂವತ್ಸರದ ಚೈತ್ರ ಬ. ೩ (೬-೪-೧೬೨೦) ರವಿವಾರದಂದು, ಚಂದಾವರ (ಹೊನ್ನಾವರ ತಾಲೂಕ್) ಹೋಬಳಿಯೊಳಗಿನ ಅಗಸೆ ಮಾಡಗೆರೆ ಗ್ರಾಮಗಳೊಳಗಿನ ಸ್ಥಳವನ್ನು ಪೂರ್ವಮರ್ಯಾದಿಯಂತೆ ಒಪ್ಪಿಕೊಂಡು ೩೩೯ ವರಹ ಮತ್ತು ಹಣಗಳನ್ನು ಕಾಲಂಪ್ರತಿ (ಪ್ರತಿವರ್ಷ) ಅರಮನೆಗೆ (ಕೆಳದಿ ಸರಕಾರಕ್ಕೆ) ಸಲ್ಲಿಸುತ್ತ, ಧರ್ಮನಡೆಸುವಂತೆ, ಹೊನ್ನೆಹಳ್ಳಿ (ಸ್ವರ್ಣವಲ್ಲಿ) ರಾಮಚಂದ್ರ ಸರಸ್ವತಿಗಳಿಗೆ ವೆಂಕಟಪ್ಪನಾಯಕರು ಪಟ್ಟೆ ಬರಿಸಿಕೊಟ್ಟರು. ಆರಮನೆಗೆ ನೀಡುವ ಶಿಸ್ತಿನ ವಿವರವನ್ನು ಪ್ರಸ್ತುತ ಪಟ್ಟೆಯಲ್ಲಿ ವಿವರಿಸಲಾಗಿದೆ. ಗೋಕರ್ಣದ ಮಹಾಬಲೇಶ್ವರ ದೇವರಿಗೆ ಗುರುಗಳ ಭಿಕ್ಷೆಗೆ, ಮಠಗಳಿಗೆ ಮಾಡಗೆರೆ ಮೇಗಣ ಮಠದ ಗೋಪಿನಾಥ ದೇವರಿಗೆ, ಕೆಳಮಠದ ನರಸಿಂಹ ದೇವರಿಗೆ, ವೇದೇಶ್ವರ ದೇವರಿಗೆ ಮತ್ತು ಅಗಸೆ ಕಾಮೇಶ್ವರ ದೇವರಿಗೆ ಸಂಬಂಧಿಸಿದ ಧರ್ಮದ ವಿವರವೂ ಸದರಿ ಪಟ್ಟೆ ಪ್ರತಿಯಲ್ಲಿ ನಮೂದಿಸಲಾಗಿದೆ. ನಷ್ಟಕ್ಕೆ ಬಿಟ್ಟ ಅಕ್ಕಿಯನ್ನು ಉಲ್ಲೇಖಿಸಲಾಗಿದೆ. ಕ್ರಿ.ಶ. ೧೯೯೦ರ ಪೂರ್ವದಲ್ಲಿಯೇ ಅಗಸೆ ಮೂಡಗೆರೆ ಗ್ರಾಮದೊಳಗಿನ ಸ್ಥಳವು ಸ್ವರ್ಣವಲ್ಲಿ ಮಹಾಸಂಸ್ಥಾನಕ್ಕೆ, ಬಹುಶಃ ಅರ್ಥಮಾನ್ಯವಾಗಿ ದೊರೆಕಿತ್ತೆಂದು ಪ್ರಸ್ತುತ ಪಟ್ಟೆ ಪ್ರತಿಯಿಂದ ಖಚಿತವಾಗುತ್ತದೆ.

ವೆಂಕಟಪ್ಪ ನಾಯಕರು ಶೃಂಗೇರಿಯ ಪ್ರಥಮ ಶ್ರೀ ಅಭಿನವ ನರಸಿಂಹ ಭಾರತೀ (ಕ್ರಿ.ಶ. ೧೫೯೯-೧೬೨೨) ಸ್ವಾಮಿಗಳಿಗಾಗಿ ಶೃಂಗೇರಿಯಲ್ಲಿಯ ಮಠದ ಕಟ್ಟಡವನ್ನು ವಿಸ್ತರಿಸಿದರು. ಇದಲ್ಲದೆ, ಅಗ್ರಹಾರವನ್ನು ನಿರ್ಮಿಸಿ, ೫೦ ಪಗೋಡಗಳಿಗಿಂತಲೂ ಹೆಚ್ಚು ಉತ್ಪತ್ತಿಯುಳ್ಳ ಮುಕ್ಕರನಾಡಿನ ಭೂಮಿಯನ್ನು ದಾನಮಾಡಿದರು. ಈ ಸತ್ಕಾರ್ಯಕ್ಕಾಗಿ, ನಾಯಕರಿಗೆ "ಶೃಂಗೇರಿ ಪ್ರತಿಷ್ಠಾಪಕ" ಮತ್ತು "ವಿಶುದ್ಧ ವೈದಿಕಾದ್ವೈತ ಸಿದ್ಧಾಂತ ಪ್ರತಿಷ್ಠಾಪಕ" ಎಂಬ ಬಿರುದುಗಳೂ ಜಗದ್ಗುರುಗಳಿಂದ ದಯಪಾಲಿಸಲ್ಪಟ್ಟವು. ಎಂಬೆಲ್ಲ ಸಂಗತಿಗಳನ್ನು ಪ್ರಸ್ತುತ ಸಂದರ್ಭದಲ್ಲಿ ಸ್ಮರಿಸಿಕೊಳ್ಳಬಹುದಾಗಿದೆ.[೫]

ಎರಡನೇ ದಾಖಲೆ ಬಸವಪ್ಪ ನಾಯಕರ ಕಾಲದ್ದು ಶಾ.ಶ. ೧೫೯೦ನೆಯ ಕೀಲಕ ಸಂವತ್ಸರದ ಚೈತ್ರ ಶು. ೫ (೨-೩-೧೬೬೮),ಶನಿವಾರದಂದು ಚಂದಾವರ ಸೀಮೆಯೊಳಗಿನ ಅಗಸೆ-ಮೂಡಗೆರೆ ಗ್ರಾಮಗಳನ್ನು ಕೆಳದಿ ಬಸವಪ್ಪ ನಾಯಕರು ಹೊನ್ನೆಹಳ್ಳಿ ಮಠದ ಮಾಧವೇಂದ್ರ ಸರಸ್ವತೀ ಶ್ರೀಪಾದಂಗಳಿಗೆ ಬರೆಸಿಕೊಟ್ಟ ಮೂಲ ಗುತ್ತಿಗೆ ರಾಯಸದ ಪಟ್ಟೆಯೂ ಸ್ವರ್ಣವಲ್ಲಿ ಮಠದಲ್ಲಿ ದೊರೆಕಿದೆ. ಸ್ಥಳದ ಶಾನಭೋಗನ ಕಡತದ ಲೆಕ್ಕದ ಪ್ರಕಾರ, ಗುತ್ತಿಗೆ ಮಾಡಿಕೊಟ್ಟ ಪ್ರಕಾರ, ಮಠದ ಶುಕ್ಲಭಟ್ಟನ ಮುಖಾಂತರ ಆ ಗ್ರಾಮದಿಂದ ಅರಮನೆಗೆ ಸಲ್ಲುವ ಶಿಸ್ತಿನ [ಸಿಸ್ತಿನ] ಹಣವನ್ನು ಅರಮನೆಗೆ ಸಂದಾಯ ಮಾಡುವಂತೆ ಸದರಿ ಮೂಲಗುತ್ತಿಗೆಯ ರಾಯಸದ ಪಟ್ಟೆಯಲ್ಲಿ ಉಲ್ಲೇಖಿಸಲಾಗಿದೆ. ಅಗಸೆ ಮಾಡಗೆರೆ ಗ್ರಾಮವನ್ನು ಮೊದಲಿನಿಂದಲೂ ಕೆಳದಿ ನಾಯಕರು ಆಳಿ ಬರುತ್ತಿದ್ದರೆಂತಲೂ ಮತ್ತು ಹಿಂದಿನಿಂದಲೂ ಆ ಗ್ರಾಮವನ್ನು ಹೊನ್ನೆಹಳ್ಳಿ ಮಠಕ್ಕೆ ಮೂಲ ಗುತ್ತಿಗೆಗೆ ನೀಡುತ್ತ ಬಂದಿರುವ ವಿಷಯ ಪ್ರಸ್ತುತ ದಾಖಲೆಯಿಂದ ತಿಳಿದುಬರುತ್ತದೆ. ದಾಖಲೆಯಲ್ಲಿ ನಮೂದಿಸಲಾದ ಕಾಲ (ಕ್ರಿ.ಶ. ೧೬೬೮) ಬಸಪ್ಪ ನಾಯಕರ ಕಾಲಕ್ಕೆ ಸರಿ ಹೊಂದದಿದ್ದರೂ ಅಲ್ಲಿ ದಾಖಲಿಸಲಾದ ವಿಷಯ ಮಾತ್ರ ಸತ್ಯ ಎಂಬುದನ್ನು ಓದುಗರು ಗಮನದಲ್ಲಿಡಬೇಕು.[೭]

ರಕ್ತಾಕ್ಷಿ ಸಂವತ್ಸರದ ಆಶ್ವಿಜ ಬ. ೧೨ (೨೫-೧೦-೧೬೮೪) ರಂದು, ಸ್ವರ್ಣವಲ್ಲಿ ಮಠದ ಹವಾಲೆಯಾಗಿದ್ದ ಅಡಕಳ್ಳಿ ನರಸಿಂಹ ದೇವರಿಗೆ ಹೆಚ್ಚುವರಿಯಾಗಿ ವಿಧಿಸಲಾದ ಗ. ೧೦॥೦॥=(ಹತ್ತು ವರಹ, ಒಂದು ಹೊನ್ನು, ಮುಪಾಗ, ಬೇಳೆ)ಯನ್ನು ಆ ದೇವತಾ ವೆಚ್ಚಕ್ಕೆ ಬಿಟ್ಟು ಬಿಡಬೇಕಾಗಿ ಕೆಳದಿ ಚೆನ್ನಮ್ಮಾಜಿಯವರು ಬಸ್ವಯಣೆ ಬರೆಸಿ ಕಳುಹಿದ ಕಾರ್ಯವು (ನಿರೂಪ) ಸ್ವರ್ಣವಲ್ಲಿ ಮಠದ ದಾಖಲೆಗಳಲ್ಲಿ ಲಭ್ಯವಾಗಿದೆ[೮], ನರಸಿಂಹದೇವರಿಗೆ ಉತ್ತಾರವಾದ ಭೂಮಿಯನ್ನು ಮತ್ತೊಮ್ಮೆ ಅಳತೆ ಮಾಡಿ ಗುತ್ತಿಗೆ ಹಣವನ್ನು ಹೆಚ್ಚಿಸಿದ್ದರಿಂದ ಹೊನ್ನೆಹಳ್ಳಿ ಮಠದ ಸ್ವಾಮಿಯವರ ಬಣಯವರು ಈ ವಿಷಯವನ್ನು ಹುಜೂರರಿಗೆ ಬಂದು ತಿಳಿಸಿದ್ದರಿಂದ ಚೆನ್ನಮ್ಮಾಜಿಯವರು ವಿನಂತಿಯನ್ನು ಮನ್ನಿಸಿ, ಹೆಚ್ಚು ವಿಧಿಸಿದ ತೆರಿಗೆಯನ್ನು ಆ ದೇವತಾ ವೆಚ್ಚಕ್ಕೇ ಬಿಡುವಂತೆ ಬಸ್ವಯನೆಂಬ ಅಧಿಕಾರಿಗೆ ಆಜ್ಞೆ ವಿಧಿಸಿದಳೆಂಬುದು ನಿರೂಪದಿಂದ ತಿಳಿದುಬರುತ್ತದೆ. ಗುರುಪೀಠದಲ್ಲಿ ೪ಳನೆಯವರಾದ ಶ್ರೀರಾಮಚಂದ್ರ ಸರಸ್ವತಿಗಳು (ಕ್ರಿ.ಶ. ೧೬೭೮-೧೭೧೨) ಹೊನ್ನೆಹಳ್ಳಿ ಮಠದ ಅಂದಿನ ಗುರುಗಳು.

ಕೆಳದಿಯ ಇತಿಹಾಸದಲ್ಲಿಯೇ ಅತ್ಯಂತ ಪ್ರಸಿದ್ಧ ರಾಣಿ ಚೆನ್ನಮ್ಮಾಜಿಯವರು (ಕ್ರಿ.ಶ. ೧೬೭೨-೧೯೯೮) ತನ್ನ ಪತಿ ಹಿರಿಯ ಸೋಮಶೇಖರ ನಾಯಕನಿಗೆ ಚೆನ್ನಮ್ಮ ಆಡಳಿತದಲ್ಲಿ ಸಹಕರಿಸಿದರು. ಪತಿಯ ಕಗ್ಗೊಲೆ ನಂತರ ಆಡಳಿತ ಸೂತ್ರವನ್ನು ತಾವೇ ವಹಿಸಿಕೊಂಡರು. ತನ್ನ ನಾದಿನಿಯ ಮಗನಾದ ಬಸಪ್ಪನನ್ನು ದತ್ತು ಪುತ್ರನಾಗಿ ಸ್ವೀಕರಿಸಿದರು. ರಾಜಕೀಯ ಚಾತುರ್ಯ ಮತ್ತು ಧೈರ್ಯಕ್ಕೆ ಹೆಸರಾದ ಚೆನ್ನಮ್ಮ ಪುಂಡರ ಹಾವಳಿಯನ್ನು ಅಡಗಿಸಿ, ವಸುಧಾರೆ, ತನನಿಧಿ, ಹೊನ್ನಾಳಿ, ಜಡೆ, ಸ್ವಾದಿ, ಶಿರಸಿ, ಬನವಸೆ, ಕಡೂರು, ಬಾಣಾವರ, ಹಾಸನ, ಬೇಲೂರು ಮೊದಲಾದ ಪ್ರದೇಶಗಳನ್ನು ಅಂಕಿತದಲ್ಲಿರಿಸಿದರು. "ಚೆನ್ನಮ್ಮಾಜಿಯು ಶಿವಾಜಿಯ ಮಗ ರಾಜಾರಾಮನಿಗೆ ಆಶ್ರಯವಿತ್ತು, ಮೊಗಲರನ್ನು ಸೋಲಿಸಿ, ಅವನಿಗೆ ರಕ್ಷಣೆ ಒದಗಿಸಿದ ಘಟನೆಯು ಭಾರತದ ಇತಿಹಾಸದ ಮೇಲೆಯೇ ಪರಿಣಾಮ ಬೀರಿತ್ತು. ಎಂದು ಡಾ॥ ಬಿ.ಎ.

ಸಾಲೆತೂರರು ಕನ್ನಡ ನಾಡಿನ ಚರಿತ್ರೆಯಲ್ಲಿ ಉಲ್ಲೇಖಿಸಿದ್ದಾರೆ. ತಮ್ಮ ಸೇವಕರಾದ ಶಿವಭಕ್ತರ ಮುಖಂಡರೂ, ಶೈವ ಹಾಗೂ ವೈಷ್ಣವ ಬ್ರಾಹ್ಮಣ ಮುಖಂಡರೂ ಅವರ ಮುಖಾಂತರ ಮಠ, ಮಾನ್ಯ, ದೇವಸ್ಥಾನ, ಅಗ್ರಹಾರ, ಮೊದಲಾದವುಗಳಿಗೆ ದಾನ ಧರ್ಮಗಳನ್ನು ಮಾಡಿ ಶಾಶ್ವತವಾದ ಧರ್ಮ ಮತ್ತು ಕೀರ್ತಿ ಸಂಪಾದಿಸಿ ಸದ್ಧರ್ಮದಿಂದ ರಾಜ್ಯವನ್ನು ಪರಿಪಾಲಿಸಿದಳು ಉನ್ನತವಾದ ಗುಣಸಂಪನ್ನತೆಯಿಂದಲೂ, ಪರಾಕ್ರಮ ಹಾಗೂ ದಾನಧರ್ಮಾದಿಗಳಿಂದಲೂ ಚೆನ್ನಮ್ಮಾಜಿಗೆ ಸರಿಸಮಾನರಾದ ರಾಜರೇ ಇಲ್ಲವೆನ್ನುವ ರೀತಿಯಲ್ಲಿ ರಾಜ್ಯವನ್ನು ರಕ್ಷಿಸಿದಳೆಂದು 'ಕೆಳದಿ ನೃಪವಿಜಯ'ದಲ್ಲಿ ವರ್ಣಿಸಲಾಗಿದೆ.

"ಉನ್ನತ ಶುಭಗುಣ ಸಂಪನ್ನತೆಯಿಂ ಕ್ಷಾತ್ರ ದಾನ ಧರ್ಮಾದಿಗಳಿಂ ಚನ್ನಮ್ಮಾಜಿಗೆ ಸರಿಯಹ ಮನ್ನೆಯರಿಲ್ಲೆನಿಸಿ ರಾಜ್ಯಮಂ ರಕ್ಷಿಸಿದಳ್"

ಈ ರೀತಿಯಾಗಿ, ಸ್ವರ್ಣವಲ್ಲಿ ಮಠದಲ್ಲಿ ದೊರೆತ ಮೂರು ದಾಖಲೆಗಳು, ಕೆಳದಿ ನಾಯಕರು ಸ್ವರ್ಣವಲ್ಲಿ ಮಠದೊಂದಿಗೆ ಇರಿಸಿಕೊಂಡ ಸಂಬಂಧವನ್ನರಿಯಲು ಉಪಯುಕ್ತವಾಗಿವೆ. ಲೇಖಕರು ಸ್ವರ್ಣವಲ್ಲೀ ಮಠದ ಸಹಸ್ರಾರು ದಾಖಲೆಗಳ ಅಧ್ಯಯನ ಮಾಡುವ ಸಂದರ್ಭದಲ್ಲಿ ಕಾಲ ಸರಿದಂತೆ, ಅದೆಷ್ಟು ಸಹಸ್ರ ದಾಖಲೆಗಳು ನಾಶವಾಗಿರುವುದನ್ನು ಗಮನಿಸಿದ್ದಾರೆ. ನಾಶವಾದ ಅಂಥ ದಾಖಲೆಗಳಲ್ಲಿ, ಪ್ರಸ್ತುತ ವಿಷಯಕ್ಕೆ ಸಂಬಂಧಿಸಿದ ದಾಖಲೆಗಳು ಅದೆಷ್ಟಿದ್ದವೊ ಸಾಕು! ಇನ್ನುಳಿದ ಕೆಲವು ಸಂಸ್ಥಾನಗಳಂತೆ ಕೆಳದಿ ಸಂಸ್ಥಾನವೂ ಕ್ರಿ.ಶ. ೧೭೬೩ರಲ್ಲಿ ಹೈದರಲಿಯ ದಂಡಿಗೆ ಬಲಿಯಾಗಿ, ಪತನಗೊಂಡಿತು. ಆದರೆ ಸ್ವರ್ಣವಲ್ಲಿ ಮಠ, ಅನೇಕ ರಾಜಕೀಯ ಬದಲಾವಣೆಗಳಾದಾಗ್ಯೂ, ತನ್ನ ಅಸ್ತಿತ್ವವನ್ನುಳಿಸಿಕೊಳ್ಳುವದರ ಜೊತೆಗೆ, ಮಹಾಸಂಸ್ಥಾನವಾಗಿ ರೂಪುಗೊಂಡಿದ್ದು ವಿಶೇಷ.



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. ಕೆಳದಿ ನಾಯಕರಿಗೆ ಸಂಬಂಧಿಸಿ, ಹೆಚ್ಚಿನ ಮಾಹಿತಿಗಾಗಿ ಈ ಕೆಳಗಿನ ಗ್ರಂಥಗಳನ್ನು ಓದಿರಿ.

I ಡಾ॥ ಜಿ.ಎಸ್. ದೀಕ್ಷಿತ, **'ಕೆಳದಿ ನಾಯಕರು'**, ಕರ್ನಾಟಕ ವಿಶ್ವವಿದ್ಯಾಲಯ ಧಾರವಾಡ, ೧೯೬೯.

II ಕೆಳದಿಗುಂಡಾ ಜೋಯ್ಸ, **'ಬದನೂರಿನ ಕೆಳದಿ ನಾಯಕರು'**, ಪ್ರಸಾರಾಂಗ ಮೈಸೂರು ವಿ.ವಿ., ೧೯೮೦, ಪು. ೨೪-೩೨ ಮತ್ತು ಇದೇ ಲೇಖಕರ ಸಂಪಾದಿತ **'ಲಿಂಗಣ್ಣ ಕವಿಯ ಕೆಳದಿನೃಪ ವಿಜಯ'**, ಕನ್ನಡ ಸಾಹಿತ್ಯ ಪರಿಷತ್ತು ೧೯೭೭.

III ಕೆಳದಿ ಬಸವರಾಜನ 'ಶಿವತತ್ವ ರತ್ನಾಕರ'., ೧೯೨೭., (ಸಂ.) ಆರ್. ರಾಮರಾವ್ ಮತ್ತು ಸುಂದರ ಶಾಸ್ತ್ರಿ ಮಂಗಳೂರು.

IV ಡಾ॥ ಎ.ಕೆ.ಶಾಸ್ತ್ರಿ., A History of Sringeri ಕ.ವಿ.ವಿ. ಧಾರವಾಡ, ಪ್ರಥಮ ಮುದ್ರಣ, ೧೯೮೨, ದ್ವಿತೀಯ ಮುದ್ರಣ ೧೯೯೯.

V ಡಾ॥ ಎ.ಕೆ. ಶಾಸ್ತ್ರಿ, 'ಶೃಂಗೇರಿ ಧರ್ಮಸಂಸ್ಥಾನ' ಶೃಂಗೇರಿ ಮಠ ೧೯೮೨.

VI ಡಾ॥ಎ.ಕೆ.ಶಾಸ್ತ್ರಿ, *'The records of the Sringeri Matha relating to Keladi'*, Keladi museum and HRB, 2001.

VII K.N.Chitnis , *Keladi polity*, Karnatak University, Dharwad 1974.

೨. ಲೇಖಕರ ಮೇಲ್ಕಾಣಿಸಿದ ಗ್ರಂಥಗಳನ್ನು ಓದಿರಿ.

೩. ಡಾ॥ ಎ.ಕೆ. ಶಾಸ್ತ್ರಿ., **'ಶ್ರೀಸೋಂದಾ ಸ್ವರ್ಣವಲ್ಲಿ ಮಹಾಸಂಸ್ಥಾನದ ಐತಿಹಾಸಿಕ ದಾಖಲೆಗಳು (ಸ್ವದಾ.)**, ಕರ್ನಾಟಕ ರಾಜ್ಯ ಪತ್ರಾಗಾರ, ಬೆಂಗಳೂರು, ೧೯೯೨.

೪. ಸ್ವಾದಾ. ೧೮.

೫. ಡಾ॥ ಎ.ಕೆ. ಶಾಸ್ತ್ರಿ., **'ಶೃಂಗೇರಿ ಧರ್ಮಸಂಸ್ಥಾನ'**, ಪು. ೩೮.

೬ ಸ್ವದಾ ೨೯ ಮಾಧವೇಂದ್ರ ಸರಸ್ವತಿಗಳು (ಕ್ರಿ.ಶ. ೧೬೬೮-೧೬೭೨) ಪೀಠದಲ್ಲಿ ೪೯ ನೆಯವರು.

೭. ಕೆಳದಿ ಅರಸು ಮನೆತನದಲ್ಲಿ ಬಸಪ್ಪನಾಯಕ I (ಕ್ರಿ.ಶ. ೧೬೯೭-೧೭೧೪), ಬಸಪ್ಪನಾಯಕ (ಕ್ರಿ.ಶ. ೧೭೩೭-೧೭೫೪) ಮತ್ತು ಚೆನ್ನಬಸವಪ್ಪನಾಯಕ (ಕ್ರಿ.ಶ. ೧೭೫೪-೧೭೫೭) ಎಂಬ ಮೂವರು ಬಸವಪ್ಪರಿದ್ದು, ಪ್ರಸ್ತುತ ದಾಖಲೆಯಲ್ಲಿ ನಮೂದಿಸಲಾದ ಕ್ರಿ.ಶ. ೧೬೬೮, ಇವರಾರ ಕಾಲಕ್ಕೂ ಸರಿ ಹೊಂದುವದಿಲ್ಲ ಕ್ರಿ.ಶ ೧೬೬೮ರಲ್ಲಿ ಮೊದಲನೇ ಸೋಮಶೇಖರ ನಾಯಕರ ಪತ್ನಿ ಚೆನ್ನಮ್ಮಾಜಿಯವರು (ಕ್ರಿ.ಶ. ೧೯೯೧-೧೯೯೨) ರಾಜ್ಯಭಾರ ನಡೆಸಿದ್ದರು. ಆದರೂ ಹಿಂದೆ ನಮೂದಿಸಲಾದ ವೆಂಕಟಪ್ಪನಾಯಕರ ಪಟ್ಟೆಯಲ್ಲಿಯೂ (ಸ್ವ. ದಾ.೧೮) ಅಗಸೆ ಮಾಡಗೆರೆ ಗ್ರಾಮವನ್ನು ಹೊನ್ನೆಹಳ್ಳಿ ಮಠವು ಮೂಲಗುತ್ತಿಗೆ ಗ್ರಾಮವಾಗಿ ಅನುಭವಿಸುತ್ತ ಬಂದಿತ್ತೆಂಬುದನ್ನು ಗಮನಿಸಿದಾಗ ದಾಖಲೆಯಲ್ಲಿ ನಮೂದಿಸಲಾದ ಸಂಗತಿ ಸತ್ಯ ಎಂಬುದು ಸುಸ್ಪಷ್ಟ. ಹೆಸರಿನಲ್ಲಿ ಮಾತ್ರ ವ್ಯತ್ಯಾಸ ಕಂಡು ಬರುತ್ತದೆ.

೮. ಸ್ವದಾ. ೩೭ ೯. ಪು. ೨೪೨-೨೪೩.

ಎನ್. ತೇಜಸ್ವಿ*

# ಶ್ರೀರಂಗಪಟ್ಟಣದ ದರಿಯಾದೌಲತ್ ಬಾಗ್‌ನ ಸಂರಕ್ಷಣೆ

ಬೆಂಗಳೂರು-ಮೈಸೂರು ಹೆದ್ದಾರಿಯಲ್ಲಿ ಮೈಸೂರಿನಿಂದ ೧೬ ಕಿ.ಮಿ. ದೂರದಲ್ಲಿ ಪೂರ್ವಾಭಿಮುಖವಾಗಿ ಹರಿಯುವ ಕಾವೇರಿ ನದಿ ಕವಲಾಗಿ ಒಡೆದು ನಿರ್ಮಾಣವಾಗಿರುವ ನಡುಗಡ್ಡೆ ಪ್ರದೇಶವೇ ಶ್ರೀರಂಗಪಟ್ಟಣ. ಮಧ್ಯಕಾಲೀನ ರಾಜಕೀಯ, ಧಾರ್ಮಿಕ ಹಾಗೂ ಸಾಂಸ್ಕೃತಿಕ ಪರಂಪರೆಯನ್ನು ಆಸ್ವಾದಿಸಿದ ಈ ಸ್ಥಳವು ಹೈದರಾಲಿ ಹಾಗೂ ಟಿಪ್ಪು ಸುಲ್ತಾನರ ಕಾಲದಲ್ಲೂ ರಾಜಧಾನಿಯಾಗಿ ವಿಜೃಂಭಿಸಿ ಇಂದಿಗೂ ಚಾರಿತ್ರಿಕ ಹಾಗೂ ಸಾಂಸ್ಕೃತಿಕ ಪಟ್ಟಣವಾಗಿದೆ. ರಂಗನಾಥ ಸ್ವಾಮಿ ದೇವಾಲಯ, ದರಿಯಾ ದೌಲತ್ ಬಾಗ್ (ಟಿಪ್ಪು ಸುಲ್ತಾನನ ಬೇಸಿಗೆ ಅರಮನೆ), ಜುಮ್ಮಾ ಮಸೀದಿ, ಕೋಟೆ-ಕೊತ್ತಲ, ವೆಲ್ಲೆಸ್ಲಿ ಸೇತುವೆ, ನೆಲಮಾಳಿಗೆ ಬಂದೀಖಾನೆ, ಗುಂಬಜ್, ಟಿಪ್ಪುಸುಲ್ತಾನರ ಮೃತಸ್ಥಳ ಇತ್ಯಾದಿಗಳು ಶ್ರೀರಂಗಪಟ್ಟಣದ ಅತ್ಯಂತ ಆಕರ್ಷಣೀಯ ನೆಲೆಗಳು.

ರಾಷ್ಟ್ರೀಯ ಸ್ಮಾರಕ ದರಿಯಾ ದೌಲತ್ ಬಾಗ್(ಟಿಪ್ಪು ಸುಲ್ತಾನನ ಬೇಸಿಗೆ ಅರಮನೆ)ನಲ್ಲಿರುವ ವರ್ಣಚಿತ್ರಗಳು ಶ್ರೀರಂಗಪಟ್ಟಣದ ಪ್ರಮುಖ ಆಕರ್ಷಣೆಯಾಗಿವೆ. ೧೭೮೪ರಲ್ಲಿ ಈ ಭವ್ಯವಾದ ಅರಮನೆಯನ್ನು ಆಯತಾಕಾರದ ವಿನ್ಯಾಸ ಹಾಗೂ ಎತ್ತರವಾದ ಜಗಲಿಯ ಮೇಲೆ ಇಂಡೋ-ಸಾರ್ಸನಿಕ್ ಶೈಲಿಯಲ್ಲಿ ಸುಂದರವಾದ ಉದ್ಯಾನದ ನಡುವೆ ನಿರ್ಮಿಸಲಾಗಿದೆ. ಕಟ್ಟಿಗೆಯನ್ನೆ ಹೆಚ್ಚಾಗಿ ಉಪಯೊಗಿಸಿ ಕಟ್ಟಿದ ಅರಮನೆಯ ಗೋಡೆ, ಛಾವಣಿ, ಕಂಬ, ಮೇಲ್ಚಪ್ಪರ ಹಾಗೂ ಕಮಾನುಗಳ ಮೇಲೆ ವೈವಿಧ್ಯಮಯ ವರ್ಣಚಿತ್ರಗಳನ್ನು ಚಿತ್ರಿಸಲಾಗಿದೆ. ಇವುಗಳಲ್ಲಿ ಪಶ್ಚಿಮ ಹೊರಗೋಡೆಯ ಮೇಲಿನ ಹೈದರಾಲಿ ಹಾಗೂ ಟಿಪ್ಪುಸುಲ್ತಾನರು ತಮ್ಮ ತಮ್ಮ ಸೈನ್ಯದೊಂದಿಗೆ ಯುದ್ಧಕ್ಕೆ ಹೊರಟಿರುವ ದೃಶ್ಯ, ಪೂರ್ವ ಗೋಡೆಯ ಮೇಲಿನ ಅನೇಕ ಸಮಕಾಲೀನ ಭಾರತೀಯ ರಾಜರು ನಡೆಸಿದ ರಾಜದರ್ಬಾರು, ಭಾವಚಿತ್ರ ಹಾಗೂ ಒಳಗೋಡೆಗಳನ್ನು ಸುರುಳಿ ಆಕಾರದ ಎಲೆಬಳ್ಳಿಗಳಿಂದ ಅಲಂಕರಿಸಲಾದ ವರ್ಣಚಿತ್ರಗಳು ಅತ್ಯಂತ ಗಮನಾರ್ಹವಾಗಿವೆ.

ಭಾರತೀಯ ಪುರಾತತ್ವ ಸರ್ವೇಕ್ಷಣದ ಬೆಂಗಳೂರು ವಲಯ ಈ ಭವ್ಯ ಅರಮನೆಯನ್ನು ಪುರಾತನ ಸ್ಮಾರಕಗಳ ಸಂರಕ್ಷಣೆಯ ಮೂಲತತ್ವ ಮತ್ತು ವಿಧಾನಗಳನ್ನು ಅನುಸರಿಸಿ ಅದರ ಮೂಲಸ್ವರೂಪಕ್ಕೆ ಧಕ್ಕೆಯಾಗದಂತೆ ಯಶಸ್ವಿಯಾಗಿ ಸಂರಕ್ಷಿಸುತ್ತಿದೆ. ಆದರೆ ಈ ಅರಮನೆಯ ಮೇಲ್ಛಾವಣಿಯಲ್ಲಿಯ ಸಣ್ಣಸಣ್ಣ ಬಿರುಕುಗಳ ಮೂಲಕ ಮಳೆಯ ನೀರು ಒಳ ಇಳಿದು ಅದರ ವಿವಿಧ ಭಾಗಗಳಲ್ಲಿ ಸೋರಿ ಈ ವರ್ಣಚಿತ್ರಗಳು ತೇವಗೊಂಡು ವಾಯುಮಂಡಲದ ರಾಸಾಯನಿಕ ಪ್ರಕ್ರಿಯೆಗೊಳಗಾಗಿ ಹಾನಿಗಿಡಾಗುತ್ತಿದ್ದವು. ಈ ನೀರಿನ ಸೋರುವಿಕೆಯನ್ನು ತಡೆಗಟ್ಟಲು ಹಾಗೂ ವರ್ಣಚಿತ್ರಗಳು ಯಾವುದೇ ರೀತಿಯ ಹಾನಿಗೊಳಗಾಗದಂತೆ ಸಮಕಾಲೀನದಲ್ಲಿ ಪ್ರಚಲಿತವಿದ್ದ ವಿವಿಧ ಸಂರಕ್ಷಣಾ ಕಾರ್ಯಗಳನ್ನು ಅನುಸರಿಸಿ ಮೇಲ್ಛಾವಣಿಯನ್ನು ದುರಸ್ತಿಮಾಡಿ ಸಂರಕ್ಷಿಸಲಾಗುತಿತ್ತು. ಆದರೂ ಅಲ್ಲಲ್ಲಿ ನೀರು ಸೋರುವುದು ಸಂಪೂರ್ಣವಾಗಿ ನಿಂತಿರಲಿಲ್ಲ. ಆದ್ದರಿಂದ ಮೇಲ್ಛಾವಣಿಯ ಸ್ವರೂಪ ಹಾಗೂ ಅದನ್ನು ಸಂರಕ್ಷಿಸಿದ ರೀತಿನೀತಿಯನ್ನು ಪರೀಕ್ಷಿಸುವುದು ಅನಿವಾರ್ಯವಾಗಿತ್ತು. ಈ ಮಹತ್ವಪೂರ್ಣ ಶೋಧನೆಗಾಗಿ ಮೇಲ್ಛಾವಣಿಯ ಒಂದು ಭಾಗದಲ್ಲಿ ಪ್ರಾಯೋಗಿಕ ರಂಧ್ರಕೊಳವೆಯನ್ನು ಕೊರೆಯಲಾಯಿತು. ಅದನ್ನು ಪರೀಕ್ಷಿಸಿದಾಗ ನೀರಿನ ಸೋರುವಿಕೆಯನ್ನು



ದರಿಯಾ ದೌಲತ್ ಬಾಗ್ : ಮೇಲ್ಛಾವಣಿ-ಸಂರಕ್ಷಣೆಯ ಪೂರ್ವ

* ಸಹಾಯಕ ಸಂರಕ್ಷಣಾ ಅಧಿಕಾರಿ, ಭಾರತೀಯ ಪುರಾತತ್ವ ಸರ್ವೇಕ್ಷಣ, ಶ್ರೀರಂಗಪಟ್ಟಣ - ೫೭೧ ೪೩೮.



ದರಿಯಾ ದೌಲತ್ ಬಾಗ್ : ಮೇಲ್ಛಾವಣಿ–ಪ್ರಾಯೋಗಿಕ ರಂಧ್ರ ಕೊಳವೆ

ತಡೆಗಟ್ಟಲು ಮೇಲ್ಛಾವಣಿಯನ್ನು ಕಾಲಾನುಕ್ರಮದಲ್ಲಿ ಪ್ರಚಲಿತವಿದ್ದ ಮೂರು ವಿವಿಧ ರೀತಿಯ ಹವಾಮಾನ ತಡೆಯುವ ಸ್ತರಗಳಿಂದ (weather proof course) ಆಚ್ಛಾಧಿಸಿತ್ತೆಂದು ತಿಳಿಯಿತು. ಮೊದಲನೆಯ ಸ್ತರವನ್ನು ಸುಮಾರು ೩೦ ಸೆಂ.ಮಿ. ದಪ್ಪದ ಇಟ್ಟಿಗೆಯ ಚೂರಿನ ಕಾಂಕ್ರಿಟ್ ಮಿಶ್ರಣವನ್ನು ಹಾಕಿ ಅದರ ಮೇಲೆ ಸುಮಾರು ೩೦ ಮಿ.ಮೀ.ನ ಸಿಮೆಂಟ್ ಮಿಶ್ರಣದ ಗಾರೆ(combination mortar)ಯಿಂದ ಲೇಪನವನ್ನು ಮಾಡಲಾಗಿತ್ತು. ಕೆಲಕಾಲದ ಮೇಲೆ ೧೨ ಮಿ.ಮೀ. ದಪ್ಪ ಹೆಂಚುಗಳನ್ನು ಸಿಮೆಂಟ್ ಮಿಶ್ರಣದ ಗಾರೆಯಲ್ಲಿ ಒಂದರಮೇಲೊಂದಾಗಿ ಎರಡು ಸ್ತರಗಳಲ್ಲಿ ಹಾಸಲಾಗಿತ್ತು. ಪುನಃ ಸ್ವಲ್ಪ ಸಮಯದ ನಂತರ ಮೇಲ್ಛಾವಣಿಯನ್ನು ೨೫ ಮಿ.ಮಿ. ದಪ್ಪವಾದ ಸಿಮೆಂಟ್ ಮಿಶ್ರಣದ ಗಾರೆಯಿಂದ ಆಚ್ಛಾಧಿಸಲಾಗಿತ್ತು. ಇವೆಲ್ಲ ಪ್ರಯತ್ನಗಳು ನಿರೀಕ್ಷಿಸಿದಷ್ಟು ಪರಿಣಾಮಕಾರಿಯಾಗಿರಲಿಲ್ಲ

ನದಿಯ ತಟದಲ್ಲಿ ಉದ್ಯಾನದ ನಡುವೆ ನಿರ್ಮಿಸಿದ ಈ ಅರಮನೆಯು ಸಹಜವಾಗಿ ವಾಯುಮಂಡಲದ ರಸಾಯನಿಕ ಪ್ರಕ್ರಿಯೆ, ವಾತಾವರಣದ ಆರ್ದ್ರತೆ, ಉಷ್ಣಾಂಶ–ತೇವಾಂಶ ಅಸ್ಥಿರತೆಗಳನ್ನು ಅನುಭವಿಸಿತ್ತು. ತತ್ಪರಿಣಾಮವಾಗಿ, ಮೇಲ್ಛಾವಣಿಯ ಹವಾಮಾನ ತಡೆಯುವ ಸ್ತರಗಳು ತಮ್ಮ ಸತ್ವವನ್ನು ಕಳೆದುಕೊಂಡು ನಿರ್ಜೀವವಾಗಿ ಅವುಗಳಲ್ಲಿ ಸಣ್ಣ ಸಣ್ಣ ಬಿರುಕುಗಳುಂಟಾಗಿ ನೀರಿನ ಸೋರುವಿಕೆಯ ಸಮಸ್ಯೆಯು ಉದ್ಭವಿಸುತ್ತಿತ್ತು. ಮೇಲ್ಛಾವಣಿಯ ಈ ನಿರ್ಜೀವ ಲೇಪನಗಳನ್ನು ಸಂಪೂರ್ಣವಾಗಿ ತೆಗೆದು ನೀರು ಸೋರುವಿಕೆಯನ್ನು ತಡೆಗಟ್ಟುವ ಕ್ಷಮತೆಯುಳ್ಳ ಹೊಸಲೇಪನದ ಆಚ್ಛಾದನೆಯ ಹೊರತಾಗಿ ಬೇರಾವುದೇ ಮಾರ್ಗವಿರಲಿಲ್ಲ.

ನೀರು ಸೋರುವಿಕೆ ಹಾಗೂ ಅದರ ಪರಿಣಾಮಗಳನ್ನು ಗಮನದಲ್ಲಿಟ್ಟುಕೊಂಡು ೧:೨ರ ಅನುಪಾತದ ಸಾಂಪ್ರದಾಯಿಕ ಸುರ್ಕಿ ಮಿಶ್ರಣವೇ ಸೂಕ್ತವೆಂದು ನಿರ್ಧರಿಸಲಾಯಿತು. ಮೇಲ್ಛಾವಣಿಯ ಸಂರಕ್ಷಣಾ ಕಾರ್ಯವನ್ನು ಪ್ರಾರಂಭಿಸುವ ಮೊದಲು ಅದನ್ನು ಛಾಯಾಚಿತ್ರ ಹಾಗೂ ನಕ್ಷೆಗಳಿಂದ ಸಂಪೂರ್ಣವಾಗಿ ದಾಖಲಿಸಲಾಯಿತು. ಸ್ಮಾರಕಕ್ಕೆ ಯಾವುದೇ ರೀತಿಯ ಧಕ್ಕೆಯಾಗದಂತೆ ಮೇಲ್ಛಾವಣಿಯ ನಿರ್ಜೀವವಾಗಿದ್ದ ಎಲ್ಲಾ ಸ್ತರಗಳನ್ನು ಸಂಪೂರ್ಣವಾಗಿ ತೆಗೆಯಲಾಯಿತು. ಮೇಲೆ ಹೇಳಿದ ರೀತಿಯ ಸುರ್ಕಿ ಮಿಶ್ರಣವನ್ನು ಸರಾಸರಿ ೩೦ ಸೆಂ.ಮೀ ದಪ್ಪನಾದ ಸ್ತರವನ್ನು ಮೇಲ್ಛಾವಣಿಯಲ್ಲಿ ಮಳೆಯ ನೀರು ಸಂಗ್ರಹವಾಗದೆ ಅದು ಸುವ್ಯವಸ್ಥಿತ ರೀತಿಯಾಗಿ ಹರಿದುಹೋಗುವಂತೆ ಏರಿಳಿತಗಳ ಪ್ರಮಾಣಕ್ಕನು ಗುಣವಾಗಿ ಹಾಕಲಾಯಿತು. ಈ ಸ್ತರವನ್ನು ೧:೨ರ



ದರಿಯಾ ದೌಲತ್ ಬಾಗ್ : ಮೇಲ್ಛಾವಣಿ–ಸಂರಕ್ಷಣೆಯ ಸಮಯದಲ್ಲಿ

ಅನುಪಾತದ ಸರಾಸರಿ ೨೫ ಮಿ.ಮಿ. ಸುಣ್ಣದ ಗಾರೆಯಿಂದ ಲೇಪಿಸಲಾಯಿತು. ಈ ರೀತಿಯಲ್ಲಿ ದರಿಯಾ ದೌಲತ್ ಬಾಗ್ (ಟಿಪ್ಪುಸುಲ್ತಾನನ ಬೇಸಿಗೆಅರಮನೆ)ಯನ್ನು ಸಂರಕ್ಷಿಸಲಾಯಿತು.



ದರಿಯಾ ದೌಲತ್ ಬಾಗ್ : ಮೇಲ್ಛಾವಣಿ–ಸಂರಕ್ಷಣೆಯ ನಂತರ

(ಶ್ರೀಮತಿ ಅನ್ಶು ವೈಶ್, ಮಹಾ ನಿರ್ದೇಶಕರು, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ನವದೆಹಲಿ ಹಾಗೂ ಡಾ. ಎಸ್.ವಿ.ಪಿ. ಹಳಕಟ್ಟಿ, ಪುರಾತತ್ತ್ವ ಅಧೀಕ್ಷಕರು, ಬೆಂಗಳೂರು ವಲಯ, ಬೆಂಗಳೂರು, ಇವರು ಪುರಾತತ್ತ್ವ ಸಂಶೋಧನೆಗಳಿಗೆ ನೀಡುತ್ತಿರುವ ಪ್ರೋತ್ಸಾಹ ಹಾಗೂ ಮಾರ್ಗದರ್ಶನಕ್ಕೆ ಈ ಲೇಖನವನ್ನು ಪ್ರಸ್ತುತೆ ಪಡಿಸಲು ಸೂಕ್ತ ಸಲಹೆಗಳನ್ನು ನೀಡಿದ ಶ್ರೀ ಎಸ್.ವಿ.ಪಿ. ಹಳಕಟ್ಟಿ ಹಾಗೂ ಎಲ್ಲಾ ಸಹೋದ್ಯೋಗಿ ಮಿತ್ರರಿಗೆ ಕೃತಜ್ಞತೆಗಳು. ಛಾಯಾಚಿತ್ರಗಳು ಭಾರತೀಯ ಪುರಾತತ್ವ ಸರ್ವೇಕ್ಷಣದ ಸೌಜನ್ಯದಿಂದ ಪ್ರಾಪ್ತವಾಗಿವೆ ಹಾಗೂ ಅದರ ಸ್ವಾಮ್ಯಕ್ಕೊಳಪಟ್ಟಿವೆ.)



ಡಿ. ರಾಜಣ್ಣ*
ರಾಜೇಂದ್ರ

# ಚಿತ್ರದುರ್ಗ ಕೋಟೆಯ ಸಂರಕ್ಷಣೆ ಹಾಗೂ ಅಭಿವೃದ್ಧಿ

ಬೆಂಗಳೂರು-ಪುಣೆ ರಾಷ್ಟ್ರೀಯ ಹೆದ್ದಾರಿಯಲ್ಲಿ ಬೆಂಗಳೂರಿನಿಂದ ಸುಮಾರು ೨೦೦ ಕಿ.ಮೀ. ದೂರದಲ್ಲಿರುವ ಚಿತ್ರದುರ್ಗವು ಅಲ್ಲಿನ ದೈತ್ಯಾಕಾರದ ಕಲ್ಲಿನ ಕೋಟೆಯಿಂದ ಪ್ರಸಿದ್ಧಿ ಪಡೆದ ಐತಿಹಾಸಿಕ ಹಾಗೂ ಸಾಂಸ್ಕೃತಿಕ ಪರಂಪರೆಯ ಪ್ರೇಕ್ಷಣೀಯ ಸ್ಥಳ. ನಾಯಕ ಪಾಳೆಯಗಾರರಿಂದ ಹದಿನಾರನೇ ಶತಮಾನದಲ್ಲಿ ಪ್ರಾರಂಭಗೊಂಡ ಈ ಕೋಟೆ ಹದಿನೆಂಟನೇ ಶತಮಾನದ ವೇಳೆಗೆ ಅಭೇದ್ಯ ಕೋಟೆಯೆಂದು ಹೆಸರುವಾಸಿಯಾಗಿ ರಕ್ಷಣಾ ಕಲೆಯ ಚಾತುರ್ಯದ ನಿದರ್ಶನ ವಾಗಿತ್ತು. ಏಳು ಸುತ್ತಿನ ಕೋಟೆ, ಎಂದು ಕರೆಯಲ್ಪಡುವ ಈ ಕೋಟೆಯನ್ನು ಚಿತ್ರಕಲ್‌ದುರ್ಗ, ಬೆಮ್ಮಟ್ಟನೂರು, ಸುಳಗಲ್ ಎಂದು ಶಾಸನಗಳಲ್ಲಿ ಉಲ್ಲೇಖಿಸಲಾಗಿದೆ. ಗಿರಿದುರ್ಗಕ್ಕೆ ಉತ್ತಮ ಉದಾಹರಣೆಯಾಗಿರುವ ಈ ಕೋಟೆ ಏಳು ಸುತ್ತಿನ ಕೋಟೆ ಗೋಡೆಗಳಿಂದ ಆವರಿಸಿ ಚೌಕಾಕಾರ, ಷಡ್ಕೋಣ ಹಾಗೂ ಅಷ್ಟಕೋನಾ ಕೃತಿಯ ಬುರುಜುಗಳನ್ನು ಹೊಂದಿ, ಹತ್ತೊಂಬತ್ತು ಮುಖ್ಯ ಬಾಗಿಲು, ಮೂವತ್ತೆಂಟು ದಿಡ್ಡಿ ಬಾಗಿಲು ಹಾಗು ಮುವತ್ತೈದು ರಹಸ್ಯ ಬಾಗಿಲುಗಳನ್ನೊಳಗೊಂಡಿತ್ತು. ಮೊದಲನೆಯ ಸುತ್ತಿನ ಕೋಟೆ ಗೋಡೆಯಲ್ಲಿ ಪೂರ್ವಕ್ಕೆ ರಂಗಯ್ಯನ ಬಾಗಿಲು, ಉತ್ತರಕ್ಕೆ ಸಂತೆ ಬಾಗಿಲು, ಪಶ್ಚಿಮಕ್ಕೆ ಸಿಹಿನೀರಿನ ಬಾಗಿಲು ಹಾಗೂ ದಕ್ಷಿಣಕ್ಕೆ ಲಾಲಕೋಟೆ ಬಾಗಿಲುಗಳಿದ್ದವು. ಶರವೇಗದ ನಗರೀಕರಣದಿಂದ ಮೊದಲ ಎರಡು ಸುತ್ತಿನ ಕೋಟೆಯ ಬಹುತೇಕ ಭಾಗಗಳು ಹಾನಿಗೊಳಗಾಗಿ ಅದರ ಅವಶೇಷಗಳು ಅಲ್ಲಲ್ಲಿ ಹರಡಿವೆ. ಉಳಿದ ಐದು ಸುತ್ತಿನ ಕೋಟೆಯ ಆವರಣ ಹಾಗೂ ವಿವಿಧ ಹೆಬ್ಬಾಗಿಲುಗಳು, ಏಕನಾಥೇಶ್ವರಿ, ಹಿಡಂಬೇಶ್ವರ, ಸಂಪಿಗೆಸಿದ್ದೇಶ್ವರ, ಗೋಪಾಲಸ್ವಾಮಿ, ಗಣೇಶ, ಆಂಜನೇಯ, ಫಲ್ಗುಣೇಶ್ವರ ದೇವಾಲಯಗಳು, ಮುರುಘರಾಜೇಂದ್ರ ಮಠ, ಅರಮನೆಯ ಆವರಣ, ಕಣಜಗಳು, ಎಣ್ಣೆಯ ಸಂಪುಗಳು ಬೃಹದಾಕಾರದ ಬೀಸುವ ಕಲ್ಲುಗಳು, ಸಿಹಿನೀರಿನ ಹಾಗೂ ಅಕ್ಕ ತಂಗಿಯರ ಹೊಂಡಗಳು, ಜೋಡು ಹಾಗೂ ಲಾಲ್ ಬತೇರಿಗಳು ಇಂದಿಗೂ ಗತ ವೈಭವದಿಂದ ಮೆರೆದ ಈ ಕೋಟೆ ಪಟ್ಟಣದ ಅನನ್ಯ ಕುರುಹುಗಳಾಗಿವೆ.

ಈ ಭವ್ಯ ಕೋಟೆಯನ್ನು ರಾಷ್ಟ್ರೀಯ ಮಹತ್ವದ ಸ್ಮಾರಕವೆಂದು ಗುರುತಿಸಲಾಗಿದೆ. ಭಾರತೀಯ ಪುರಾತತ್ವ ಸರ್ವೇಕ್ಷಣದ ಸ್ವಾಮ್ಯಕ್ಕೊಳಪಟ್ಟಿರುವ ಈ ಕೋಟೆಯ ನಿರ್ವಹಣೆ ಹಾಗೂ ಸಂರಕ್ಷಣೆಯನ್ನು ಬೆಂಗಳೂರು ವಲಯ ಅವಿರತವಾಗಿ ಅದರ ಮೂಲ ಸ್ವರೂಪಕ್ಕೆ ಧಕ್ಕೆಯಾಗದಂತೆ ನಿರ್ವಹಿಸುತ್ತಿದೆ. ಅಂದಿನ ಮಾನ್ಯ ಪ್ರವಾಸೋದ್ಯಮ ಹಾಗೂ ಸಂಸ್ಕೃತಿ ಸಚಿವರಾಗಿದ್ದ ಶ್ರೀ ಜಗಮೋಹನ್ ೦೯-೦೪-೨೦೦೨ರಂದು ಈ ಕೋಟೆಯನ್ನು ವೀಕ್ಷಿಸಿ ಅದರ ದೈತ್ಯಾಕಾರ ಹಾಗೂ ಅಭೇದ್ಯತೆಯಿಂದ ಆಕರ್ಷಿತರಾಗಿ ಈ ಕೋಟೆಯ ಸಂಪೂರ್ಣ ಸಂರಕ್ಷಣೆ ಹಾಗೂ ಅಭಿವೃದ್ಧಿಯಾಗ ಬೇಕೆಂದು ಸ್ಥಳೀಯ ಅಧಿಕಾರಿಗಳು ಹಾಗೂ ಬೆಂಗಳೂರು ವಲಯದ ಪುರಾತತ್ವ ಅಧೀಕ್ಷಕರೊಡನೆ ಸಮಾಲೋಚಿಸಿ ಇದರ ಅಭಿವೃದ್ಧಿಗೆ ಚಾಲನೆ ನೀಡಿದರು. ಈ ಸಮಾಲೋಚನೆ ಯಲ್ಲಿ ಕೋಟೆಯ ಈಶಾನ್ಯ ದಿಕ್ಕಿನ, ಬುರುಜನಹಟ್ಟಿ ಎಂದು ಸ್ಥಳೀಯವಾಗಿ ಕರೆಯಲ್ಪಡುವ ಪ್ರದೇಶದಲ್ಲಿ ಅಕ್ರಮವಾಗಿ ತಲೆ ಎತ್ತಿದ್ದ ಮನೆಗಳನ್ನು ತೆರವುಗೊಳಿಸಿ, ಅವರಿಗೆ ಸುವ್ಯವಸ್ಥಿತ ಸ್ಥಳದಲ್ಲಿ ಪುನರ್ವಸತಿ ಕಲ್ಪಿಸುವುದು ಹಾಗೂ ಭಾರತ ಸರಕಾರ ಪುನರ್ವಸತಿ ವ್ಯವಸ್ಥೆಯ ವೆಚ್ಚದ ಅರ್ಧಭಾಗವನ್ನು ಆರ್ಥಿಕ ಸಹಾಯವಾಗಿ ನೀಡಿರುವುದು ಈ ಯೋಜನೆಯ ಗಮನಾರ್ಹವಾದ ಅಂಶ. ಮಾನ್ಯ ಸಚಿವರು ಪುನಃ ೪.೧೧.೨೦೦೩ರಂದು ಈ ಕೋಟೆಗೆ ಭೇಟಿ ನೀಡಿ, ಪ್ರಗತಿಯಲ್ಲಿದ್ದ ಯೋಜನೆಯ ವಿವಿಧ ಕಾರ್ಯಗಳನ್ನು ಪರಿಶೀಲಿಸಿ, ಅಭಿವೃದ್ಧಿಗೆ ಅವಶ್ಯಕವಿದ್ದ ಇನ್ನೂ ಅನೇಕ ಸಲಹೆಗಳನ್ನು ನೀಡಿದರು.

ಬೆಂಗಳೂರು ವಲಯದ ಪುರಾತತ್ವ ಅಧೀಕ್ಷಕ ಎಸ್.ವಿ.ಪಿ. ಹಳಕಟ್ಟಿ ಅವರ ಮಾರ್ಗದರ್ಶನದಲ್ಲಿ ಚಿತ್ರದುರ್ಗ

* ಸಹಾಯಕ ಸಂರಕ್ಷಣಾಧಿಕಾರಿ, ಭಾರತೀಯ ಪುರಾತತ್ವ ಸರ್ವೇಕ್ಷಣ, ಚಿತ್ರದುರ್ಗ - ೫೭೭ ೫೦೧

ಕೋಟೆಯ ಸಮಗ್ರ ಸಂರಕ್ಷಣೆ ಹಾಗೂ ಅಭಿವೃದ್ಧಿಯ ನೀಲಿ ನಕ್ಷೆಯನ್ನು ತಯಾರಿಸಲಾಯಿತು. ಕೋಟೆಯ ವಿವಿಧ ಭಾಗಗಳ ಸಂರಕ್ಷಣಾ ಸಮಸ್ಯೆಗಳನ್ನು ಗಮನದಲ್ಲಿಟ್ಟುಕೊಂಡು ಈ ಯೋಜನೆಯನ್ನು ಹಂತ ಹಂತವಾಗಿ ಪೂರೈಸಬೇಕೆಂದು ನಿರ್ಧರಿಸಲಾಯಿತು. ಈ ಬೃಹತ್ ಯೋಜನೆಯಲ್ಲಿ ಕೋಟೆಯ ಗೋಡೆ, ಕಂದಕ, ಬುರುಜು, ಹೆಬ್ಬಾಗಿಲು, ದೇವಾಲಯ, ಅರಮನೆ ಆವರಣ ಹಾಗೂ ನೀರಿನ ಹೊಂಡಗಳ ಸಂರಕ್ಷಣೆಗಳಿಗೆ ಆದ್ಯತೆ ನೀಡಲಾಯಿತು. ಪರಿಸರ ಅಭಿವೃದ್ಧಿ ಸೌಂದರ್ಯವೃದ್ಧಿಗಾಗಿ ಅಕ್ರಮ ಮನೆಗಳ ತೆರವು, ಸರಳ ಉದ್ಯಾನವನಗಳ ನಿರ್ಮಾಣ, ವ್ಯವಸ್ಥಿತವಾದ ಮಾರ್ಗಗಳು, ಕುಡಿಯುವ ನೀರಿನ ವ್ಯವಸ್ಥೆ, ವಿಶ್ರಾಂತಿ ಸ್ಥಳ ಮತ್ತು ಸೂಚನಾ ಫಲಕಗಳಿಗೆ ಪ್ರಾಮುಖ್ಯತೆಯನ್ನು ಕೊಡಲಾಯಿತು. ಇದಲ್ಲದೇ ವಿವಿಧ ರೀತಿಯ ಸಂದರ್ಶಕರಿಗೆ ಅಗತ್ಯ ಪ್ರವಾಸಿ ಸೌಲಭ್ಯ ಹಾಗೂ ವಿದ್ಯುತ್ ದೀಪಾಲಂಕಾರ ಗಳು ಈ ಯೋಜನೆಯ ಇನ್ನುಳಿದ ಗಮನಾರ್ಹ ಆಕರ್ಷಣೆ ಗಳು.

ಈ ಸಮಗ್ರ ಅಭಿವೃದ್ಧಿ ಯೋಜನೆಯಡಿ ಮೊದಲನೆಯ ಹಂತದಲ್ಲಿ ಕಂದಕದ ಸಂರಕ್ಷಣೆಯ ಜೊತೆಗೆ ಅಕ್ರಮವಾಗಿ ತಲೆಎತ್ತಿದ್ದ, ಮನೆಗಳ ತೆರವುಗೊಳಿಸುವಿಕೆಯನ್ನು ಪ್ರಾರಂಭಿಸಲಾಯಿತು. ಅಕ್ರಮವಾಗಿ ನಿರ್ಮಿಸಿದ್ದ ಮನೆಗಳ ಪೈಕಿ ಸುಮಾರು ೧೩೫ ಮನೆಗಳನ್ನು ಗುರುತಿಸಲಾಯಿತು. ಅವುಗಳ ಪುನರ್ವಸತಿಗಾಗಿ ಚಿತ್ರದುರ್ಗ ನಗರದ ಹೊರವಲಯ ಹಾಗೂ ರಾಷ್ಟ್ರೀಯ ಹೆದ್ದಾರಿಯ ಸಮೀಪ ಐ.ಯು.ಡಿ.ಪಿ. ಬಡಾವಣೆಯು ಸೂಕ್ತ ಸ್ಥಳವೆಂದು ಸ್ಥಳೀಯ ಅಧಿಕಾರಿಗಳು ಮತ್ತು ಜನಪ್ರತಿನಿಧಿಗಳು ನಿರ್ಧರಿಸಿದರು. ಈ ಬಡಾವಣೆಯಲ್ಲಿ ಹೊಸದಾಗಿ ಮನೆಗಳನ್ನು ನಿರ್ಮಿಸಿ ಕೋಟೆಯ ಭಾಗದಲ್ಲಿ ಅಕ್ರಮವಾಗಿ ವಾಸಿಸುತ್ತಿದ್ದ ೧೩೫ ಕುಟುಂಬಗಳನ್ನು ಇಲ್ಲಿಗೆ ಸ್ಥಳಾಂತರಿಸಲಾಯಿತು. ಈ ಪುನರ್ವಸತಿ ಕುಟುಂಬಗಳಿಗೆ ಅವರವರ ಹಕ್ಕುಪತ್ರಗಳನ್ನು ೮.೯.೨೦೦೮ರಂದು ನಡೆದ ವಿಶೇಷ ಸಮಾರಂಭದಲ್ಲಿ ವಿತರಿಸಲಾಯಿತು. ಸ್ಮಾರಕಗಳ ಸುತ್ತ ಅಕ್ರಮವಾಗಿ ತಲೆಎತ್ತಿದ್ದ ಮನೆಗಳನ್ನು ಇಷ್ಟೊಂದು ಭಾರಿ ಪ್ರಮಾಣದಲ್ಲಿ ತೆರವುಗೊಳಿಸಿರುವುದು ಸ್ಮಾರಕಗಳ ಅಭಿವೃದ್ಧಿಯ ಅನನ್ಯ ಉದಾಹರಣೆಯಾಗಿದೆ. ಇದಲ್ಲದೆ ಯಾವುದೇ ರೀತಿಯ ಅಡ್ಡಿ ಆತಂಕಗಳಿಲ್ಲದೆ ಜನರು ಸ್ವಯಂಸ್ಫೂರ್ತಿಯಿಂದ ತೆರವುಗೊಳಿಸಿದ ವಿಶೇಷ ಸಂಗತಿಯೂ ಇದಾಗಿದೆ. ಇದಲ್ಲದೇ ಪುನರ್ವಸತಿಗಾಗಿ ಕರ್ನಾಟಕ ಹಾಗೂ ಭಾರತ ಸರ್ಕಾರಗಳ ಸಮಭಾಗಿತ್ವದಲ್ಲಿ ಆರ್ಥಿಕ ವೆಚ್ಚವನ್ನು ಭರಿಸಿರುವುದು ಈ ಯೋಜನೆಯ ಇನ್ನೊಂದು ವಿಶೇಷ ಸಂಗತಿಯಾಗಿದೆ. ಇಂತಹ ಅಕ್ರಮ ಮನೆಗಳ ಪುನರಾವರ್ತನೆಯಾಗದಂತೆ ತಡೆಗೋಡೆಯನ್ನು ನಿರ್ಮಿಸುವ ಕಾರ್ಯ ಪ್ರಾರಂಭಗೊಂಡಿದ್ದು, ಮೊದಲ ಹಂತದ ಗೋಡೆಯನ್ನು ಈಗಾಗಲೇ ಬುರುಜನಹಟ್ಟಿಯ ಕಡೆ ನಿರ್ಮಿಸಲಾಗಿದ್ದು ಉಳಿದ ಕೆಲಸವೂ ಪ್ರಗತಿಯಲ್ಲಿದೆ.

ಈ ಮೊದಲೇ ಹೇಳಿದಂತೆ ಕೋಟೆಯಲ್ಲಿ ಮಾಡಬೇಕಾದ ಅಭಿವೃದ್ಧಿ ಕಾರ್ಯಗಳನ್ನು ವಿವಿಧ ಹಂತಗಳಲ್ಲಿ ಯೋಜಿಸಲಾಗಿದೆ. ಈ ಯೋಜನೆಯ ಅಂಗವಾಗಿ ಮೊದಲ ಹಂತದಲ್ಲಿ ಕೋಟೆಯ ಕಂದಕದ ಸಂರಕ್ಷಣಾ ಕಾರ್ಯವನ್ನು ಕೈಗೆತ್ತಿಕೊಳ್ಳಲಾಯಿತು. ಸುಮಾರು ೩೦೦ ಮೀ. ಉದ್ದ ಹಾಗೂ ಸುಮಾರು ೧೫ ಮೀ. ಅಗಲದ ಕಂದಕವು ಉತ್ತರ-ದಕ್ಷಿಣವಾಗಿದ್ದು, ಮಧ್ಯದಲ್ಲಿ ಕೋಟೆಯ ಕಾಮನ ಹೆಬ್ಬಾಗಿಲಿದೆ. ಇದನ್ನು ಸಾಮಾನ್ಯ ಕಲ್ಲುಗಳಿಂದ, ಮಣ್ಣನ್ನು ಬಂಧಕ ಸಾಮಗ್ರಿಯಾಗಿ ಬಳಸಿ ಕಟ್ಟಲಾಗಿದೆ. ಕಾಲಾನುಕ್ರಮದಲ್ಲಿ ಈ ಕಂದಕವು ಶಿಥಿಲಗೊಂಡು ಅದರ ಭಾಗಗಳು ಅಲ್ಲಲ್ಲಿ ಬಿದ್ದುಹೋಗಿದ್ದವು. ಕಂದಕದಲ್ಲಿ ಮಳೆಯ ನೀರಿನ ಜೊತೆ ಜೊತೆಯಾಗಿ ಹರಿದ ಮಣ್ಣು ಶೇಖರಣೆಯಾಗಿ ಅಲ್ಲಲ್ಲಿ ಅನೇಕ ಗಿಡಬಳ್ಳಿಗಳು ಬೆಳೆದಿದ್ದವು.



**ಚಿತ್ರದುರ್ಗ : ಕೋಟೆಯ ಕಂದಕ-ಸಂರಕ್ಷಣೆಯ ಪೂರ್ವ**

ಈ ಕಂದಕದ ಸಂರಕ್ಷಣಾ ಕಾರ್ಯವನ್ನು ಪ್ರಾರಂಭಿಸುವ ಮೊದಲು ಅದನ್ನು ಛಾಯಾಚಿತ್ರ ಹಾಗೂ ನಕ್ಷೆಗಳಿಂದ ಸಂಪೂರ್ಣವಾಗಿ ದಾಖಲಿಸಲಾಯಿತು. ಈ ಕಂದಕವನ್ನು ಪೂರ್ವಜರು ನಿರ್ಮಿಸಿದ ರೀತಿ ನೀತಿಗಳನ್ನು ಅರಿತುಕೊಳ್ಳಲು ಅಲ್ಲಲ್ಲಿ ಕೆಲವು ಶೋಧನಾ ಗುಂಡಿಗಳನ್ನು ನಿರ್ಮಿಸಿ ಕಂದಕ ಕಟ್ಟಿದ ವಿಧಾನ ಬುನಾದಿಯ ಸ್ವರೂಪ, ಬಂಧಕ ಸಾಮಗ್ರಿಗಳ ವಿವರಗಳನ್ನು ಸಂಗ್ರಹಿಸಲಾಯಿತು. ಹಾನಿಗೊಳಗಾಗಿದ್ದ ಅಡಿಪಾಯದ ಭಾಗಗಳನ್ನು ಭದ್ರಗೊಳಿಸಿ ನಂತರ ಬಿದ್ದುಹೋಗಿದ್ದ ಕಲ್ಲುಗಳಿಂದಲೇ ಕಂದಕದ ಗೋಡೆಗಳನ್ನು ಪುನರ್ ನಿರ್ಮಿಸಲಾಯಿತು. ಇದರ ಸುರಕ್ಷತೆಯನ್ನು ಗಮನದಲ್ಲಿಟ್ಟುಕೊಂಡು ಮಣ್ಣಿನ ಜೊತೆ ಸುಣ್ಣವನ್ನು ೧:೩ರ ಅನುಪಾತದಲ್ಲಿ ಬೆರೆಸಿದ ಮಿಶ್ರಣವನ್ನು ಬಂಧಕ

ಸಾಮಗ್ರಿಯಾಗಿ ಉಪಯೋಗಿಸಲಾಗಿದೆ. ಈ ರೀತಿಯಾಗಿ ಕಾಮನ ಬಾಗಿಲಿನ (ಉತ್ತರ ಭಾಗ) ಬಲಭಾಗದ


ಚಿತ್ರದುರ್ಗ : ಕೋಟೆಯ ಕಂದಕ–ಸಂರಕ್ಷಣೆಯ ನಂತರ

ಕಂದಕವನ್ನು ಸಂರಕ್ಷಿಸಲಾಗಿದ್ದು ಎಡಭಾಗದ (ದಕ್ಷಿಣ ಭಾಗ) ಕಾರ್ಯವು ಪ್ರಗತಿಯಲ್ಲಿದೆ.

ಕಾಮನ ಬಾಗಿಲಿರುವ ಮೊದಲನೇ ಸುತ್ತಿನ (ಮೂಲತಃ ೩ನೇಯ) ಕೋಟೆಗೋಡೆಯ ಸಂರಕ್ಷಣಾ ಕಾರ್ಯವನ್ನು ಸಹ ಪ್ರಾರಂಭಿಸಲಾಯಿತು. ಉತ್ತರ–ದಕ್ಷಿಣಾಭಿ ಮುಖವಾಗಿರುವ ಈ ಗೋಡೆಯನ್ನು ಹೊರಮೈ ನಯಗೊಳಿಸಿದ ಬೃಹದಾಕಾರದ ಕಲ್ಲುಗಳಿಂದ ಕಟ್ಟಲಾಗಿದೆ. ಈ ಕೋಟೆಗೋಡೆಯು ಕಾಲಾನುಕ್ರಮದಲ್ಲಿ ಶಿಥಿಲಗೊಂಡು ಅಲ್ಲಲ್ಲಿ ಅಲಂಬಿತವಾಗಿ ಬಿದ್ದು ಹೋಗಿತ್ತು. ಮಳೆಯ ನೀರು ಈ ಗೋಡೆಯೊಳಗೆ ಸೋರಿಹೋಗಿ ಅಲ್ಲಲ್ಲಿ ಸಹ ಹಾನಿಗೊಳಗಾಗಿತ್ತು. ಅಲಂಬಿತವಾದ ಹಾಗೂ


ಕೋಟೆಯ ಗೋಡೆ ಹಾಗೂ ಬುರುಜು–ಸಂರಕ್ಷಣೆಯ ಪೂರ್ವ

ಹಾನಿಗೊಳಗಾದ ಭಾಗಗಳ ಕಲ್ಲುಗಳನ್ನು ಜಾಗರೂಕತೆಯಿಂದ ಹೊರತೆಗೆದು ವ್ಯವಸ್ಥಿತವಾಗಿ ಸನಿಹದ ಇನ್ನೊಂದು ಸ್ಥಳದಲ್ಲಿ ಇಡಲಾಯಿತು. ಹತ್ತಿರದಲ್ಲಿಯೇ ದೊರೆತ ಕಲ್ಲುಗಳು ಮತ್ತು ಅಲಂಬಿತವನ್ನು ಸರಿಪಡಿಸಲು ತೆಗೆದ ಕಲ್ಲುಗಳಿಂದ ಪುನಃ ಯಥಾವತ್ತಾಗಿ ಗೋಡೆಯನ್ನು ನಿರ್ಮಿಸಲಾಯಿತು. ಈ ಗೋಡೆಯನ್ನು ನಿರ್ಮಿಸುವಾಗ ಸಾಂಪ್ರದಾಯಿಕ ಗಾರೆಯ ಮಿಶ್ರಣವನ್ನು ಬಂಧಕ ಸಾಮಗ್ರಿಯಾಗಿ ಉಪಯೋಗಿಸಲಾಯಿತು. ಕಾಮನಬಾಗಿಲಿನ ಸುತ್ತಮುತ್ತ ಹಾಗೂ ಉಳಿದ ಭಾಗಗಳಲ್ಲಿ ಮಳೆಯ ನೀರು ಸೋರಿ ಕೋಟೆಯ ಗೋಡೆಗೆ ಹಾನಿಯುಂಟಾಗುತ್ತಿತ್ತು. ಇದನ್ನು ತಡೆಗಟ್ಟಲು ಗೋಡೆಯ ಮೇಲ್ಭಾಗವನ್ನು ೩೦ ಸೆಂ.ಮಿ. ದಪ್ಪನಾದ ಸುರ್ಕಿ ಮಿಶ್ರಣದಿಂದ ಆಚ್ಛಾದಿಸಿ, ಅದರ ಮೇಲ್ಭಾಗವನ್ನು ಸಾಂಪ್ರದಾಯಿಕ ಗಾರೆಯ ಮಿಶ್ರಣವನ್ನು ೨೫ ಮಿಮಿ ದಪ್ಪನಾದ ಲೇಪನದಿಂದ ಲೇಪಿಸಲಾಯಿತು. ಮಳೆಗಾಲದ ಸಮಯದಲ್ಲಿ ಕೋಟೆಯ


ಕೋಟೆಯ ಗೋಡೆ ಹಾಗೂ ಬುರುಜು–ಸಂರಕ್ಷಣೆಯ ನಂತರ

ವಿವಿಧ ಭಾಗಗಳಿಂದ ಮಳೆಯ ನೀರು ಮುಖ್ಯ ಪ್ರವೇಶದ್ವಾರ ಕಾಮನ ಬಾಗಿಲಿನಿಂದ ಹರಿದು ಕಂದಕದಲ್ಲಿ ಸಂಗ್ರಹವಾಗುತಿತ್ತು. ಇದರಿಂದ ಪ್ರವೇಶದ್ವಾರದಲ್ಲಿ ಭೂಕೊರೆತವಾಗಿ ಕೋಟೆಯ ಗೋಡೆ ಹಾಗೂ ಪ್ರವೇಶದ್ವಾರಗಳು ಹಾನಿಗೊಳಗಾಗುತ್ತಿದ್ದವು. ಇವುಗಳ ಸುರಕ್ಷತೆಗೆ ಹಾಗೂ ಯಾವುದೇ ರೀತಿಯ ಧಕ್ಕೆಗೊಳಗಾಗದಂತೆ ಕಾಮನ ಬಾಗಿಲಿನಲ್ಲಿ ಕಲ್ಲು ಚಪ್ಪಡಿಗಳ ನೆಲಹಾಸನ್ನು ಹಾಕಲಾಗಿದೆ. ಸಂರಕ್ಷಿಸಿದ ಕಂದಕದ ಉತ್ತರ ಭಾಗವನ್ನು


ಕೋಟೆಯ ಪ್ರವೇಶ ದ್ವಾರ; ಕಾಮನ ಬಾಗಿಲು –ಸಂರಕ್ಷಣೆಯ ಪೂರ್ವ



ಕೋಟೆಯ ಪ್ರವೇಶ ದ್ವಾರ; ಕಾಮನ ಬಾಗಿಲು–ಸಂರಕ್ಷಣೆಯ ನಂತರ

ಕೋಟೆಯ ಮುಂಭಾಗಕ್ಕೆ ವಿದ್ಯುತ್ ದೀಪಾಲಂಕಾರ ಮಾಡಲಾಗಿದ್ದು, ಹಾಗೂ ಸರಳ ಉದ್ಯಾನದಿಂದ ಸೌಂದರ್ಯಗೊಳಿಸಲಾಗಿದೆ.



ಕೋಟೆ–ಪರಿಸರ ಅಭಿವೃದ್ಧಿಯ ಪೂರ್ವ



ಕೋಟೆ–ಪರಿಸರ ಅಭಿವೃದ್ಧಿಯ ನಂತರ

ಈ ರೀತಿಯಾಗಿ ಕಂದಕ ಹಾಗೂ ಮೊದಲನೇ ಸುತ್ತಿನ ಕೋಟೆ (ಮೂಲತಃ ೩ನೇಯ) ಸಂರಕ್ಷಣಾ ಕಾರ್ಯವನ್ನು ಸಂಪೂರ್ಣಗೊಳಿಸಲಾಗಿದೆ. ಯೋಜನೆಯ ಇನ್ನುಳಿದ ವಿವಿಧ ಸಂರಕ್ಷಣೆ ಕಾರ್ಯಗಳು ಪ್ರಗತಿಯಲ್ಲಿವೆ.

(ಶ್ರೀಮತಿ ಅನ್ನು ವೈಶ್ಯ, ಮಹಾ ನಿರ್ದೇಶಕರು, ಭಾರತೀಯ ಪುರಾತತ್ತ್ವ ಸರ್ವೇಕ್ಷಣ, ನವದೆಹಲಿ ಹಾಗೂ ಡಾ. ಎಸ್.ವಿ.ಪಿ. ಹಳಕಟ್ಟಿ, ಪುರಾತತ್ತ್ವ ಅಧೀಕ್ಷಕರು ಬೆಂಗಳೂರು ವಲಯ. ಬೆಂಗಳೂರು ಇವರು ಪುರಾತತ್ತ್ವ ಸಂಶೋಧನೆಗಳಿಗೆ ನೀಡುತ್ತಿರುವ ಪ್ರೋತ್ಸಾಹ ಹಾಗೂ ಮಾರ್ಗದರ್ಶನಕ್ಕೆ ಹಾಗೂ ಈ ಲೇಖನವನ್ನು ಪ್ರಸ್ತುತ ಪಡಿಸಲು ಸೂಕ್ತ ಸಲಹೆಗಳನ್ನೀಡಿದ ಡಾ. ಎಸ್.ವಿ.ಪಿ. ಹಳಕಟ್ಟಿ ಮತ್ತು ಎಲ್ಲಾ ಸಹೋದ್ಯೋಗಿ ಮಿತ್ರರಿಗೆ ಧನ್ಯವಾದಗಳು. ಛಾಯಾಚಿತ್ರಗಳು ಭಾರತೀಯ ಪುರಾತತ್ತ್ವ ಸರ್ವೇಕ್ಷಣದ ಸೌಜನ್ಯದಿಂದ ಪ್ರಾಪ್ತವಾಗಿವೆ ಹಾಗೂ ಅದರ ಸ್ವಾಮ್ಯಕ್ಕೊಳಪಟ್ಟಿವೆ.)



ಡಾ. ಟಿ.ವಿ. ನಾಗರಾಜ*

# ಕೆರೆಗಳ ಸಾಂದ್ರತೆ – ಒಂದು ಅವಲೋಕನ

ಭಾರತದ ಇತರೆಡೆಗಳಲ್ಲಿದ್ದಂತೆ ರಾಜ್ಯದಲ್ಲೂ ಕೃಷಿ ಆರ್ಥಿಕ ಬದುಕು ನೀರಾವರಿಯನ್ನೇ ಅವಲಂಬಿಸಿದೆ. ಪ್ರಾಚೀನ ಕಾಲದಿಂದಲೂ ಈ ಪ್ರದೇಶದಲ್ಲಿ ನಿರ್ಮಾಣಗೊಂಡ ಕೆರೆ ಕಾಲುವೆಗಳು ಕೃಷಿ ಚಟುವಟಿಕೆಗಳಿಗೆ ಪೂರಕವಾಗಿದ್ದು ಆರ್ಥಿಕಾಭಿವೃದ್ಧಿಯಲ್ಲಿ ಮುಖ್ಯ ಪಾತ್ರವಹಿಸಿವೆ. ಈ ಪ್ರದೇಶದಲ್ಲಿ ಲಭ್ಯವಿರುವ ಅವಕಾಶಗಳನ್ನು ಪೂರ್ಣವಾಗಿ ಬಳಸಿಕೊಂಡು ಕೆರೆ ಕಟ್ಟೆಗಳನ್ನು ಕಟ್ಟಲಾಗಿದೆ. ಕರ್ನಾಟಕದ ಮೈದಾನ ಪ್ರದೇಶದಲ್ಲಿರುವ ಕೋಲಾರ ಜಿಲ್ಲೆಯಲ್ಲಿ (ಅವಿಭಜಿತ) ಸದಾ ತುಂಬಿ ಹರಿಯುವ ನದಿಗಳು ಇಲ್ಲದ ಕಾರಣ ಇತರ ಯಾವುದೇ ಬೃಹತ್ ನೀರಾವರಿ ಕಾಮಗಾರಿಗಳಿಗೆ ಅವಕಾಶವೇ ಇಲ್ಲದ ಕಾರಣ, ಮಳೆ ಪ್ರಮಾಣ ವಿಪರೀತ ಏರುಪೇರುಗಳಿಂದ ಕೂಡಿದ್ದು, ನಿರಂತರ ಅನಾವೃಷ್ಟಿ ಎದುರಿಸುತ್ತಿರುವ ಹಿನ್ನೆಲೆಯಲ್ಲಿ, ಜಿಲ್ಲೆಯಲ್ಲಿ ಕೆರೆ ನೀರಾವರಿ ವ್ಯವಸ್ಥೆ ಪ್ರಾಮುಖ್ಯತೆ ಪಡೆಯುತ್ತಿದೆ. ಈ ಹಿನ್ನೆಲೆಯಲ್ಲಿ ಜಿಲ್ಲೆಯಾದ್ಯಂತ ಪಾರಂಪರಿಕವಾಗಿ ಬೆಳೆದ ಬಂದಿರುವ ಕೆರೆ ನೀರಾವರಿ ಚೌಕಟ್ಟಿನಲ್ಲಿ ಕೆರೆಗಳ ಸಾಂದ್ರತೆಯನ್ನು, ಅಲ್ಲಿನ ವಿವಿಧ ಆಕರಗಳ ಸಹಾಯದಿಂದ ಪ್ರಸ್ತುತ ಲೇಖನದಲ್ಲಿ ವಿಶ್ಲೇಷಿಸುವ ಪ್ರಯತ್ನ ಮಾಡಲಾಗಿದೆ.

೧೯ನೇ ಶತಮಾನದ ಪ್ರಾರಂಭದವರೆವಿಗೂ ಮೈಸೂರು ಸಂಸ್ಥಾನದ ಕೆರೆ ಕಟ್ಟೆಗಳ ಸಂಖ್ಯೆಯಾಗಲಿ ಹಾಗೂ ಅವುಗಳ ಸ್ಥಿತಿಗತಿಗಳ ಬಗ್ಗೆಯಾಗಲಿ ಸ್ಪಷ್ಟ ಮತ್ತು ನಿಖರ ಮಾಹಿತಿ ಲಭ್ಯವಾಗುವುದಿಲ್ಲ. ೧೭೯೯ರಲ್ಲಿ ಟಿಪ್ಪು ಪತನಾನಂತರ ಮೈಸೂರು ಬ್ರಿಟೀಷರ ವಶವಾದ ಸಂದರ್ಭದಲ್ಲಿ ಸಂಸ್ಥಾನದ ನೈಸರ್ಗಿಕ ಸಂಪತ್ತಿನ ಸಮೀಕ್ಷೆ ನಡೆಸಿದರು. ಅವುಗಳಲ್ಲಿ ೧೭೯೯ರಲ್ಲಿ ಕರ್ನಲ್ ಮೆಕೆಂಜಿ ನಡೆಸಿದ ಸಮೀಕ್ಷೆ ಪ್ರಮುಖವಾದುದು. ಮೆಕೆಂಜಿ "ಮೆಮೊಯರ್ಸ್ ಆಫ್ ಮೈಸೂರು" ನಲ್ಲಿ ಸಂಸ್ಥಾನದ ಕೆರೆ–ಕುಂಟೆಗಳ ಬಗ್ಗೆ ಅಮೂಲ್ಯ ಮಾಹಿತಿ ಇದೆ. ಈ ಸಮೀಕ್ಷೆಯ ಪ್ರಕಾರ ಸಂಸ್ಥಾನದಾದ್ಯಂತ ೧೪,೮೦೩ ಕೆರೆಗಳು ಹಾಗೂ ೮೬೩೭ ಕುಂಟೆಗಳು ಇದ್ದವು. ಇದರಲ್ಲಿ ಕೋಲಾರ ಜಿಲ್ಲಾ ವ್ಯಾಪ್ತಿಯಲ್ಲಿ ೫೦೨೪ ಕೆರೆ ಹಾಗು ೧೪೯೯ ಕುಂಟೆಗಳು ಉಲ್ಲೇಖಿತ ವಾಗಿವೆ.[೧]

೧೮೦೦ರಲ್ಲಿ ಗವರ್ನರ್ ಜನರಲ್ ಮಾರ್ಕಸ್ ವೆಲ್ಲೆಸ್ಲೆ ಮೈಸೂರು ಬ್ರಿಟೀಷರ ವಶವಾದ ನಂತರ ಸರ್ವೇಕ್ಷಣೆ ನಡೆಸಲು ಫ್ರಾನ್ಸಿಸ್ ಬುಖಾನನ್‌ರನ್ನು ನಿಯುಕ್ತಿಗೊಳಿಸಿದನು. ಬುಖಾನನ್ ತನ್ನ ಪ್ರವಾಸದ ದಿನಚರಿಯಲ್ಲಿ ಕೋಲಾರ ಪ್ರದೇಶದಲ್ಲಿ ಕೆರೆ ನೀರಾವರಿ ಪದ್ಧತಿ ಪರಂಪರಾನುಗತವಾಗಿ ಬೆಳೆದು ಬಂದ ವಿವರಗಳನ್ನು ದಾಖಲಿಸುತ್ತಾ[೨] ಇಲ್ಲಿನ ಕೆರೆಗಳು ಬೆಳೆದ ಬಂದ ಸಂದರ್ಭ ಹಾಗು ಅವುಗಳ ನಿರ್ವಹಣೆಯ ಬಗ್ಗೆ ವಿವರಿಸಿದ್ದಾನೆ. ಆದರೆ ಅವುಗಳ ಸಂಖ್ಯಾ ಪ್ರಮಾಣಕ್ಕೆ ಯಾವುದೇ ಮಾಹಿತಿ ನೀಡುವುದಿಲ್ಲ. ೧೮೪೬ರಲ್ಲಿ ಸಂಸ್ಥಾನದ ಮುಖ್ಯ ಇಂಜನಿಯರ್ ಆಗಿದ್ದ ಕರ್ನಲ್ ಗ್ರೀನ್, ಸಂಸ್ಥಾನದಲ್ಲಿ ೩೦,೦೦೦ಕ್ಕೂ ಅಧಿಕ ಕೆರೆಗಳಿದ್ದವು ಎಂದು ಅಂದಾಜು ಮಾಡಿದ್ದರು.[೩]

೧೮೬೬ರಲ್ಲಿ ಭಾರತ ಸರ್ಕಾರ ಬರಗಾಲ ಹಾಗು ಕ್ಷಾಮ ಪರಿಸ್ಥಿತಿಯನ್ನು ನಿಯಂತ್ರಿಸಲು ಪರಿಹಾರ ಹುಡುಕುವ ದೆಸೆಯಲ್ಲಿ ನೀರಾವರಿ ಯೋಜನೆಗಳ ಸಮೀಕ್ಷೆ ನಡೆಸಿತು. ಆ ಸಂದರ್ಭದಲ್ಲಿ ಮೈಸೂರು ಸಂಸ್ಥಾನದ ನೀರಾವರಿ ವ್ಯವಸ್ಥೆಯ ಬಗ್ಗೆ ಅಂಕಿ ಅಂಶಗಳನ್ನು ಕಲೆ ಹಾಕಿದ ಸಂಸ್ಥಾನದ ಮುಖ್ಯ ಇಂಜನಿಯರ್ ಮೇಜರ್ ಸ್ಯಾಂಕೆ, ವಿವರವಾದ ವರದಿಯನ್ನು ಸಿದ್ಧಪಡಿಸಿದರು. ಈ ವರದಿಯಲ್ಲಿ ಸಂಸ್ಥಾನದ ಕೆರೆ ನೀರಾವರಿ ವ್ಯವಸ್ಥೆಯು ಒಂದು ಸ್ಪಷ್ಟ ಚಿತ್ರ ಹೊರಹೊಮ್ಮುತ್ತದೆ. ೧೮೫೩–೫೪ರ ಸರ್ಕಾರಿ ವಾರ್ಷಿಕ ಅಂಕಿ–ಅಂಶಗಳನ್ನು ಉಲ್ಲೇಖಿಸುವ ಸ್ಯಾಂಕೆಯ ವರದಿಯ ಪ್ರಕಾರ ಸಂಸ್ಥಾನದಲ್ಲಿ ೪೧೦೬ ದೊಡ್ಡ ಪ್ರಮಾಣದ ಕೆರೆಗಳು, ೧೩,೭೩೭ ಸಣ್ಣ ಪ್ರಮಾಣದ ಕೆರೆಗಳು ಹಾಗು ೧೬೮೯ ಪಾಳು ಬಿದ್ದ ಕೆರೆಗಳಿದ್ದವು ಎಂದು ಪ್ರಸ್ತಾಪಿಸುತ್ತಾನೆ.[೪] ೧೮೭೧ರಲ್ಲಿ ಮೈಸೂರು ಸಂಸ್ಥಾನದ ನೀರಾವರಿ ಇಲಾಖೆಯ

* ಇತಿಹಾಸ ಪ್ರಾಧ್ಯಾಪಕರು, ಸರ್ಕಾರಿ ಕಲಾ ಕಾಲೇಜು, ಬೆಂಗಳೂರು – ೧.

ಸೂಪರಿಂಟೆಡೆಂಟ್ ಇಂಜನಿಯರ್ ಮೇಜರ್ ಜಾನ್‌ಸನ್ ಕೆರೆ ನಿರ್ವಹಣೆ ಮತ್ತು ಸಂರಕ್ಷಣೆ ಕುರಿತು ಬರೆದ ಟಿಪ್ಪಣಿಯಲ್ಲಿ ಆಗಿನ ಸರ್ಕಾರದ ವಾರ್ಷಿಕ ವರದಿಯನ್ನು ಉಲ್ಲೇಖಿಸಿ, ಸಂಸ್ಥಾನದಲ್ಲಿ ಒಟ್ಟು ೩೬,೨೬೬ ಕೆರೆಗಳಿದ್ದು, ಅವುಗಳಲ್ಲಿ ೯೮೬೫ ದುಸ್ಥಿತಿಯಲ್ಲಿದ್ದು, ಉಳಿದ ೨೬,೪೦೧ ಕೆರೆಗಳು ಸುಸ್ಥಿತಿಯಲ್ಲಿದ್ದವೆ ಎಂದು ಪ್ರಸ್ತಾಪಿಸುತ್ತಾನೆ.[೫]

ಅದರಂತೆ ೧೮೭೧ರಲ್ಲಿ ಕೋಲಾರ ಜಿಲ್ಲೆಯಲ್ಲಿ ಆದಾಯ ತಂದುಕೊಡದ ೧೪೨೭ ಕೆರೆಗಳು ಇದ್ದವು.

ರೂ. ೫೦ ಆದಾಯ ತಂದು ಕೊಡುವ ೨೦೨೮ ಕೆರೆಗಳು "
ರೂ. ೫೦–೧೦೦ – " – ೭೮೩ "
ರೂ. ೧೦೦೦–೨೦೦೦ – " – ೮೮೬ "
ರೂ. ೫೦೦ – ೧೦೦೦ – " – ೧೦೮ "
ರೂ. ೧೦೦೦ – ೨೦೦೦ – " – ೩೩ "
ರೂ. ೨೦೦೦ – ೩೦೦೦ – " – ೦೭ "
ರೂ. ೩೦೦೦ – ೪೦೦೦ – " – ೦೭ "
ರೂ. ೪೦೦೦ – ೫೦೦೦ – " – ೦೧ "
ರೂ. ೫೦೦೦ ಮೇಲ್ಪಟ್ಟು ಆದಾಯ – " – ೦೨ "

ಒಟ್ಟಾರೆ ೫೨೮೨ ಕೆರೆಗಳಿದ್ದ ಬಗ್ಗೆ ಹಾಗೂ ಕಂದಾಯದ ಆದಾಯದ ಪ್ರಮಾಣಕ್ಕೆ ಅನುಗುಣವಾಗಿ ನವೀಕರಿಸಲಾಗಿದ್ದು ರೂ. ೪,೬೬,೮೯೯ ಆದಾಯ ಹೊಂದಿದ್ದವು. ಬಿ.ಎಲ್. ರೈಸ್ (೧೮೭೬) ಕೋಲಾರ ಜಿಲ್ಲೆಯಲ್ಲಿ ೫೪೯೭ ಕೆರೆಗಳಿದ್ದು ೧,೨೦,೦೦೦ ಎಕರೆಗೂ ಹೆಚ್ಚು ಪ್ರದೇಶ ನೀರಾವರಿಗೆ ಒಳಪಟ್ಟಿತ್ತು ಎಂದು ಉಲ್ಲೇಖಿಸಿದ್ದಾನೆ.[೬] ೧೮೮೪ರಲ್ಲಿ ಮೈಸೂರು ಪ್ರಜಾಪ್ರತಿನಿಧಿ ಸಭೆಯನ್ನು ಉದ್ದೇಶಿಸಿ ಭಾಷಣ ಮಾಡಿದ ದಿವಾನ್ ಶೇಷಾದ್ರಿ ಅಯ್ಯರ್, ಸ್ಯಾಂಕೆ ವರದಿಯನ್ನು ಉಲ್ಲೇಖಿಸಿ ಸಂಸ್ಥಾನದಲ್ಲಿ ಸುಮಾರು ೩೮,೦೦೦ ಸಣ್ಣ ಹಾಗು ದೊಡ್ಡ ಪ್ರಮಾಣದ ಕೆರೆಗಳಿದ್ದು ಹೊಸ ಕೆರೆಗಳನ್ನು ನಿರ್ಮಿಸಲು ಸೂಕ್ತ ಸ್ಥಳ ಆಯ್ಕೆ ಮಾಡುವುದೇ ದುಸ್ತರ ಎಂದು ಅಭಿಪ್ರಾಯ ಪಡುತ್ತಾರೆ.[೭]

೧೯೦೮ರಲ್ಲಿ ಮೈಸೂರು ಸರ್ಕಾರವು ಸಂಸ್ಥಾನದ ಕೆರೆ ಕಾಲುವೆಗಳ ಬಗ್ಗೆ ಸಮಗ್ರ ಮಾಹಿತಿ ಸಂಗ್ರಹಿಸಲು ಮುಂದಾಗಿ ಆ ವಿವರಗಳನ್ನು ತಾಲ್ಲೂಕುವಾರು ವಿಂಗಡಿಸಿ" ನ್ಯೂ ಟ್ಯಾಂಕ್ ರಿಜಿಸ್ಟರ್" ಎಂಬ ಹೆಸರಿನಲ್ಲಿ ಪ್ರಕಟಿಸಿತು.[೮] ಮೈಸೂರು ಸಂಸ್ಥಾನದ ಕೆರೆ ನೀರಾವರಿ ವ್ಯವಸ್ಥೆ ಕುರಿತಂತೆ ನಿಖರವಾದ ಅಧಿಕೃತ ಮಾಹಿತಿ ಈ ದಾಖಲೆಯಲ್ಲಿ ಲಭ್ಯವಿದ್ದು ಪ್ರತಿಯೊಂದು ತಾಲ್ಲೂಕಿನಲ್ಲಿ ಬರುವ ಜಲಾನಯನ ಪ್ರದೇಶವಾರು, ಮುಖ್ಯ ಸರಣಿ, ಉಪ ಸರಣಿ, ಕೆರೆಗಳ ಹೆಸರು, ಗ್ರಾಮಗಳ ಹೆಸರು, ಅಚ್ಚುಕಟ್ಟು, ಕೆರೆಗಳ ಆಳ, ಅಗಲ, ಪ್ರಮಾಣ ಮುಂತಾದ ಪೂರ್ಣ ವಿವರಗಳನ್ನು ಇದು ಒಳಗೊಂಡಿದೆ. ಹಾಗೆಯೇ ಕೆರೆಗಳ ಸ್ಥಿತಿಗತಿಗಳ ಬಗ್ಗೆ ವಿವರವಾದ ಮಾಹಿತಿ ಇದ್ದು ಇದೊಂದು ಅಮೂಲ್ಯ ಆಕರವೆನಿಸಿದೆ.

ವಿಶೇಷವೆಂದರೆ ಒಂದು ಶತಮಾನದ ಹಿಂದಿನ ೧೯೦೮ರ ದಾಖಲೆಯನ್ನು ಈ New Tank Registers ಗಳನ್ನು ಇಂದಿಗೂ ಸಹ ನೀರಾವರಿ ಇಲಾಖೆ ಸರ್ಕಾರದ ಯೋಜನೆಗಳಿಗೆ ಅಧಿಕೃತವಾದ ಮಾಹಿತಿಯಾಗಿ ಬಳಸಿಕೊಳ್ಳುತ್ತಿರುವುದು !

ಪ್ರಸ್ತುತ ಕೋಲಾರ ಜಿಲ್ಲೆಯಲ್ಲಿ ಹತ್ತು ಜಲಾನಯನ ಪ್ರದೇಶಗಳು, ಮೂರು ಪ್ರಧಾನ ಜಲಾನಯನ ಪ್ರದೇಶಗಳಾದ (೧) ಪಾಲಾರ್ ಜಲಾನಯನ ಪ್ರದೇಶ, (೨) ಉತ್ತರ ಪೆನ್ನಾರ್ ಜಲಾನಯನ ಪ್ರದೇಶ ಮತ್ತು (೩) ದಕ್ಷಿಣ ಪೆನ್ನಾರ್ ಜಲಾನಯನ ಪ್ರದೇಶದಲ್ಲಿ ೭ ಮುಖ್ಯ ಸರಣಿಗಳು ಹಾಗೂ ೩೨ ಉಪ ಸರಣಿಗಳಲ್ಲಿ ಕೆರೆ ನೀರಾವರಿ ಚೌಕಟ್ಟು ರೂಪುಗೊಂಡಿದೆ. ಕೋಲಾರ ಜಿಲ್ಲೆಯಲ್ಲಿ ಹರಿಯುವ ಪಾಲಾರ್, ಉತ್ತರ ಹಾಗೂ ದಕ್ಷಿಣ ಪೆನ್ನಾರ್‌ನ ತಲಾ ಶೇ. ೧೦೦, ಶೇ. ೮೫.೩೫ ಹಾಗು ಶೇ. ೮೫.೬೦ ಪ್ರಮಾಣದ ಪ್ರದೇಶವು ಕೆರೆ ಪದ್ಧತಿಗೆ ಒಳಪಟ್ಟಿದೆ.[೯]

೧೯೦೮ರ 'ನ್ಯೂ ಟ್ಯಾಂಕ್ ರಿಜಿಸ್ಟರ್' ಪ್ರಕಾರ ಕೋಲಾರ ಜಿಲ್ಲೆಯ ೩೦೭೧ ಚ. ಮೈಲಿ ಜಲಾನಯನ ಪ್ರದೇಶದಲ್ಲಿ ೩೮೦೬ ಕೆರೆಗಳಿವೆ.[೧೦] ಜಿಲ್ಲೆಯ ವಿಸ್ತೀರ್ಣ ಪ್ರಮಾಣಕ್ಕೆ ಅನುಗುಣವಾಗಿ ಪ್ರತಿ ೦.೮೩ ಚ. ಮೈಲಿಗೆ ೧ ಕೆರೆಯಂತೆ ಕಂಡುಬಂದಿದೆ. ಜಿಲ್ಲೆಯ ಪ್ರತಿ ಹಳ್ಳಿಗೆ ೧.೨ ಕೆರೆ ನಿರ್ಮಾಣಗೊಂಡು ಪ್ರತಿ ೧೮೩ ಜನರಿಗೆ ಒಂದು ಕೆರೆಯಂತೆ ವ್ಯಾಪಕ ಪ್ರಮಾಣದಲ್ಲಿ ಇವೆ. ಕೋಲಾರ ಜಿಲ್ಲೆಯಲ್ಲಿ ಕೆರೆಗಳು ವ್ಯಾಪಕ ಕಂಡುಬಂದಿದ್ದು ಅವುಗಳ ಗಾತ್ರ, ಆಳ, ವಿಸ್ತಾರ ಮತ್ತು ಪ್ರಮಾಣಗಳಲ್ಲಿ ವೈವಿಧ್ಯತೆ ಕಂಡುಬರುತ್ತದೆ.

ಕೋಲಾರ ಜಿಲ್ಲೆಯಲ್ಲಿ ಅತ್ಯಂತ ಹೆಚ್ಚು ಪ್ರಮಾಣದ ಅಚ್ಚುಕಟ್ಟು (೨೪೨೫ ಎಕರೆ) ಗೌರಿಬಿದನೂರು ತಾಲ್ಲೂಕಿನ ವಾಟದ ಹೊಸಹಳ್ಳಿ ಕೆರೆಯದಾಗಿದೆ. ಜಿಲ್ಲೆಯಲ್ಲಿ ಅತ್ಯಂತ ಆಳ ಹೊಂದಿರುವ ಕೆರೆಯೂ ಸಹ ಆಗಿದೆ. (೩೫ ಅಡಿ) ನೀರಿನ ಸಂಗ್ರಹಣಾ ಸಾಮರ್ಥ್ಯದಲ್ಲಿ ೧೭೩೦ ಯೂನಿಟ್ಸ್ ಪ್ರಮಾಣ ಹೊಂದಿರುವ ಬಂಗಾರುಪೇಟೆ ತಾಲ್ಲೂಕಿನ ರಾಮಸಾಗರ ಕೆರೆ ಮೊದಲ ಸ್ಥಾನದಲ್ಲಿದೆ. ಶಿಡ್ಲಘಟ್ಟ ತಾಲೂಕಿನ ಬಸ್ರನಕೆರೆ ಅತ್ಯಂತ ಹೆಚ್ಚಿನ ನೀರು ನಿಲ್ಲುವಂತಹ ಕೆರೆ ಅಂಗಳವನ್ನು ಹೊಂದಿದೆ. (೧೩೩೬ ಎಕರೆ) ಕೇವಲ ೦.೧೧ ಗುಂಟೆ ಅಚ್ಚುಕಟ್ಟು ಹೊಂದಿರುವ ಶ್ರೀನಿವಾಸಪುರ ತಾಲ್ಲೂಕಿನ

ಅರಶಿನಕುಂಟೆ, ೧ ಯೂನಿಟ್ ಪ್ರಮಾಣದ ಚಿಂತಾಮಣಿ ತಾಲ್ಲೂಕಿನ ಜಂಜನಹಳ್ಳಿ, ೨ ಅಡಿ ಆಳವಿದ್ದು, ೧ ಎಕರೆ ಕೆರೆ ಅಂಗಳ ಮತ್ತು ರೂ. ೭ ಆದಾಯದ ಸಣ್ಣ–ಅತಿ ಸಣ್ಣ ಕೆರೆಗಳೂ ಜಿಲ್ಲೆಯ ನೀರಾವರಿ ಚೌಕಟ್ಟಿನಲ್ಲಿ ಕಂಡುಬರುತ್ತವೆ."

ಒಟ್ಟಾರೆ ಇಷ್ಟೊಂದು ಅಗಾಧ ಸಂಖ್ಯೆಯಲ್ಲಿ ಕಂಡುಬಂದಿರುವ ಕೆರೆ ನೀರಾವರಿ ಚೌಕಟ್ಟು, ಜಿಲ್ಲೆಯ ಜೀವನಾಡಿಯ ಜಾಲ ಸಮುದಾಯದ ಕೊಡುಗೆಗಳಲ್ಲಿ ಅಮೂಲ್ಯವಾದುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. *Memories of Mysore 1799,* A manuscript preserved at Karnataka State archlives. B.lore, It is presumed that these are memories of survey Conducted by Col. Makenzel.

೨. Francis Bucanan., *A Journey from Madnas through the countries of Mysore Canara and Malabar* 3 vols. The Asin Educational series. 1988. Vol. I. P. 279.

೩. Col. Grees's Memorandum is an Appeldis to "Report on the interior Administration of Mysore"; Reports of Wilkinson (Acting Resident) Madns. 5-12-1804.

೪. Sankey Reprot: Paragraph No. 35. in a letter dated 19th november 1866 from R.H. Sankey.

೫. Major Johnson., *Note on Tank Maintenance and Conservotion scheme.* Appendix-B. Quoted by R.H. Sankey P. 101.

೬ Ibid., p-101.

೭. *Mysore Gazetteer.,* (ed) B.L. Rice, Vol. II. P-84.

೮. *New Tank Registers* (Taluk wise) Compiled by U.V. Deshikacharya B.lore 1908.

೯. The letter dated 19th Nov. 1866 from Sankey.

೧೦. *New Tank Registers* (Tank wise) Statement 3 and 4 op. cir.,

೧೧. Nagaraja T.V. "ಮೈಸೂರು ಸಂಸ್ಥಾನದಲ್ಲಿ ನೀರಾವರಿ : ಕೋಲಾರ ಜಿಲ್ಲೆ ಒಂದು ಅಧ್ಯಯನ" ಅಪ್ರಕಟಿತ ಪಿಹೆಚ್.ಡಿ., ಪ್ರಬಂಧ.

ತುಳಸಿರಾಮನಾಯ್ಡು*

# ಬೆಂಗಳೂರು ನಗರದ ಕೆಂಪೇಗೌಡ ವೃತ್ತದ (ಮೆಜೆಸ್ಟಿಕ್) ಇತಿಹಾಸ

ಸುಮಾರು ಮೂರು ಶತಮಾನಗಳ ಸುದೀರ್ಘ ಇತಿಹಾಸದಲ್ಲಿ ನಡೆದ ಸ್ಥಿತ್ಯಂತರದ ಕತೆಯನ್ನು ಇಲ್ಲಿ ಬಿಚ್ಚಿಕೊಡುವ ಪ್ರಯತ್ನ ಮಾಡಲಾಗಿದೆ. ನಗರೀಕರಣದ ಪ್ರಭಾವದಿಂದ ಮಠಗಳಂತಹ ಧಾರ್ಮಿಕ ಸಂಸ್ಥೆಗಳು ಕ್ಷೀಣಿಸಿದವು. ಕೆಲವು ಮಾಯವಾದವು. ನಗರದ ಕೇಂದ್ರ ಭಾಗದಲ್ಲಿದ್ದ ವಸತಿ ಗೃಹಗಳು ಬಡಾವಣೆಗಳಿಗೆ ಸ್ಥಳಾಂತರವಾದವು. ಈ ಎಲ್ಲಾ ಬದಲಾವಣೆ ವರ್ಗಾವಣೆಗಳ ನಡುವೆ ನಿಶ್ಚಲವಾಗಿ ನಿಂತಿರುವ ೭ ಅಡಿ ೨ ಅಂಗಲ ಎತ್ತರದ ಕಂಬ ಮೂರೂವರೆ ಶತಮಾನಗಳ ಹಿಂದಿನ ಇತಿಹಾಸದ ಏಕೈಕ ಸಾಕ್ಷಿಯಾಗಿದೆ.

ಬೆಂಗಳೂರು ನಗರದ ಕೇಂದ್ರಬಿಂದುವಾದ ಕೆಂಪೇಗೌಡ ವೃತ್ತವು (೧೯೫೮–ಮೆಜೆಸ್ಟಿಕ್) ಇಂದು ದಟ್ಟವಾದ ಸಂಚಾರ ವ್ಯವಸ್ಥೆ ಬಹು ಅಂತಸ್ತಿನ ವ್ಯಾಪಾರಿ ಮಳಿಗೆ ಹಾಗೂ ಅಂಗಡಿ ಮುಗ್ಗಟ್ಟುಗಳಿಂದ ಜನನಿಬಿಡ ಪ್ರದೇಶವಾಗಿ ಕಂಗೊಳಿಸುತ್ತಿದೆ. ಆದರೆ ಈ ಪ್ರದೇಶಕ್ಕೆ ಸುಮಾರು ೫೦೦ ವರ್ಷಗಳ ಇತಿಹಾಸವಿದ್ದು, ಅದು ಹಲವಾರು ದೇವಾಲಯ, ಮಠ ಹಾಗೂ ಧಾರ್ಮಿಕ ಸಂಸ್ಥೆಗಳ ಕೇಂದ್ರವಾಗಿತ್ತು. ಅದರ ಪ್ರಮುಖ ಮಜಲುಗಳನ್ನು ನಿರೂಪಿಸಲು ಇಲ್ಲಿ ಪ್ರಯತ್ನಿಸಲಾಗಿದೆ.

ಈ ವೃತ್ತವು ಸುತ್ತಲೂ ರಸ್ತೆಯಿಂದ ಕೂಡಿದ್ದು, ಮಧ್ಯೆ ಭಕ್ತ ಮಾರ್ಕಂಡೇಯ ಹಾಗೂ ಗಣಪತಿ ದೇವಸ್ಥಾನ, ಅರಳೀಮರ ಹಾಗೂ ದೊಡ್ಡದಾದ ಎರಡು ಗಂಟೆಗಳಿಂದ ಕಂಗೊಳಿಸುತ್ತಿದೆ. ಇದರ ಹತ್ತಿರದಲ್ಲಿಯೇ ದಕ್ಷಿಣ ಭಾಗದಲ್ಲಿ ಮೆಜೆಸ್ಟಿಕ್ ಹೆಸರಿನ ಚಿತ್ರಮಂದಿರ ಇದ್ದುದರಿಂದ ಮೆಜೆಸ್ಟಿಕ್ ಎಂದೂ ಸಹ ಕರೆಯುತ್ತಾರೆ. ಹಿಂದೆ ಬೆಂಗಳೂರು ಪಟ್ಟಣದ ಸುತ್ತ ಇತಿಹಾಸ ಪ್ರಸಿದ್ಧವಾಗಿದ್ದ ಕೆಂಪೇಗೌಡನ ಕೋಟೆಯ ಉತ್ತರ ದಿಗ್ಭಾಗಕ್ಕೆ ಎರಡು ಹೆಬ್ಬಾಗಿಲುಗಳಿದ್ದವು. ಅವುಗಳೇ ಯಲಹಂಕದ ಬಾಗಿಲು ಮತ್ತು ಯಶವಂತಪುರ ಬಾಗಿಲುಗಳು. ಯಶವಂತಪುರ ಬಾಗಿಲನ್ನು ಬಳೆಯ ಬಾಗಿಲು ಅಥವ ನೆಲಮಂಗಲದ ಬಾಗಿಲು ಎಂದೂ ಕರೆಯುವುದು ರೂಢಿಯಲ್ಲಿತ್ತು. ಈ ಬಾಗಿಲಿಗೆ ಅಭಿಮುಖವಾಗಿ ಹಾಗೂ ಧರ್ಮಾಂಬುಧಿ (ದೊಡ್ಡ ಕರೆ) ಕೆರೆಯ ಪೂರ್ವದ ದಂಡೆಗೆ ಬೆಂಗಳೂರು ಪಟ್ಟಣದಿಂದ ಪ್ರತ್ಯೇಕವಾಗಿ ಒಂದು ಸಣ್ಣ ಗ್ರಾಮವಿತ್ತು.[1] ಆ ಸಣ್ಣ ಗ್ರಾಮವೇ ಹನುಮಂತಪುರ (ನಕ್ಷೆ ನೋಡಿ)

ನಗರದ ಹೃದಯ ಭಾಗದಂತಿರುವ ಇಂದಿನ ಗಾಂಧಿನಗರ ಹಾಗೂ ಅದರ ಸುತ್ತಮುತ್ತಲ ಭಾಗದಲ್ಲಿರುವ ಹಲವಾರು ದೇವಾಲಯ, ಮಠ ಹಾಗೂ ಧಾರ್ಮಿಕ ಸಂಸ್ಥೆಗಳು ಹನುಮಂತಪುರ ಗ್ರಾಮಕ್ಕೆ ಒಳಪಟ್ಟಿದ್ದವು. ಈ ಹೆಸರಿನ ಹಿಂದೆ, ಜನಸಾಮಾನ್ಯರು ಮಾತನಾಡಿಕೊಳ್ಳುವ ಪ್ರಕಾರ, ಇಮ್ಮಡಿ ಕೆಂಪರಾಯನು ಬೆಂಗಳೂರು ಪಟ್ಟಣದ ಜನತೆಗೆ ನೀರಿನ ಸೌಲಭ್ಯಕ್ಕಾಗಿ ಹಾಳಿ ಇದ್ದ ದೊಡ್ಡ ಕೆರೆಯನ್ನು ಜೀರ್ಣೋದ್ಧಾರ ಮಾಡಿ ಆ ಕೆರೆಯಿಂದ ನೀರು ಪೂರೈಸುವ ವ್ಯವಸ್ಥೆ ಮಾಡಿದ್ದನು. ಆ ಸಂದರ್ಭದಲ್ಲಿ ಹಿರಿಯ ಕೆಂಪೇಗೌಡನ ಧಾರ್ಮಿಕ ಕೆಲಸ ಕಾರ್ಯಗಳನ್ನು ಅರಿತು, ವಿಜಯನಗರದ ಅರಸರು ಧರ್ಮಪ್ರಭು ಕೆಂಪೇಗೌಡ ಎಂಬ ಬಿರುದನ್ನು ಕೊಟ್ಟರು.[2] ಕಾಲಕ್ರಮೇಣ, ಕಾಲನ ದವಡೆಯಲ್ಲಿ ಸಿಕ್ಕಿ ನೀರು ಬತ್ತಿಹೋಗಿ ಕೆರೆ ರೂಪ ಬದಲಿಸಿತು. ಇತ್ತೀಚೆಗೆ ಕೆರೆಗೆ ಕೆಂಪೆಗೌಡ ಬಸ್ ನಿಲ್ದಾಣ ಎಂದು ನಾಮಕರಣ ಮಾಡಿದ್ದರೂ ಸಹ ಜನರು ಇದನ್ನು ಧರ್ಮಾಂಬುಧಿ (ದೊಡ್ಡ ಕರೆ) ಕೆರೆ ಇದ್ದ ಪ್ರದೇಶ ಎಂದು ಗುರುತಿಸುತ್ತಾರೆ. ಈ ಕೆರೆಯ ಕಟ್ಟಡಗಳನ್ನು ಕಟ್ಟಲು ರಾಯರ ಬಲಗೈ ಭಂಟನಾದ ಹನುಮಂತ ನಾಯಕ ಎಂಬುವನು ಮುಂದೆ ನಿಂತು ಅದನ್ನು ಯಶಸ್ವಿಯಾಗಿ ಪೂರ್ಣಗೊಳಿಸಿ ರಾಯರ ಕೃಪೆಗೆ ಪಾತ್ರ

* ನಂ. ೨೩೯೧, 'ಆನಂದ ಭವನ', ೭ನೇ ಮುಖ್ಯರಸ್ತೆ, ಬನಶಂಕರಿ ೨ನೇ ಹಂತ, ಬೆಂಗಳೂರು – ೫೬೦ ೦೭೦.

ನಾದನು. ಸಂತುಷ್ಟನಾದ ರಾಯನು ಕೆರೆಯ ಆಸುಪಾಸಿನ ಭಾಗವನ್ನು ಹನುಮಂತನಾಯಕನಿಗೆ ಉಂಬಳಿಯಾಗಿ ಕೊಟ್ಟನು, ಆ ಭಾಗವೇ ಈ ಹನುಮಂತಪುರ. ಹನುಮಂತ ನಾಯಕನು ಕೆರೆಯ ದುರಸ್ತಿ ಕೆಲಸ ಕಾರ್ಯಗಳನ್ನು ಮಾಡಿಸುತ್ತಿರುವಾಗ ಕೋಡಿಯಲ್ಲಿ ಲಭಿಸಿದ ಎರಡು ಮೂರ್ತಿಗಳ ಸ್ಮರಣಾರ್ಥವಾಗಿ ಹನುಮಂತನಾಯಕನು ತನ್ನ ಹಾಗೂ ತನ್ನ ಮಡದಿ ಅಣ್ಣಮ್ಮಳ ಹೆಸರಿನಲ್ಲಿ ಧರ್ಮಾಂಬುಧಿ (ದೊಡ್ಡ ಕೆರೆ) ಕೆರೆದಂಡೆಗೆ ಅಭಿಮುಖವಾಗಿ ಎರಡು ಪುಟ್ಟ ಗುಡಿಗಳನ್ನು ಕಟ್ಟಿಸಿದ್ದನು.[೩] ಅವೇ ಈಗಿನ ಗಾಂಧಿನಗರದ ಸುಭೇದಾರ ಛತ್ರಂ ರಸ್ತೆಯಲ್ಲಿರುವ ಆಂಜನೇಯ ಮತ್ತು ನಗರದೇವತೆ ಅಣ್ಣಮ್ಮ ದೇಗುಲಗಳು. ಇವು ಈ ಶತಮಾನದ ಅರಂಭದ ವೇಳೆಗೆ ಪೂರ್ವಾಭಿಮುಖವಾಗಿ ಪುನರುಜ್ಜೀವನ ಗೊಂಡವೆಂದು ಹೇಳಲಾಗುತ್ತದೆ.

ಈ ವೃತ್ತದ ಅಕ್ಕ ಪಕ್ಕ ಕೆಂಪೇಗೌಡನ ಕಾಲದಲ್ಲಿ ಹಲವಾರು ಮಠಗಳು, ದೇವಾಲಯಗಳು ಈತನ ಪ್ರೋತ್ಸಾಹದಿಂದ ಸ್ಥಾಪಿಸಲ್ಪಟ್ಟವು ಎಂದು ಬಲವಾದ ನಂಬಿಕೆ. ಬೆಂಗಳೂರಿನಲ್ಲಿ ಈತನ ಕಾಲದಲ್ಲಿ ೧೦೦ಕ್ಕೂ ಹೆಚ್ಚಿನ ಮಠ ಮಾನ್ಯಗಳು ಸ್ಥಾಪಿಸಲ್ಪಟ್ಟಿವೆ ಎಂದು ಹೇಳಲಾಗುತ್ತದೆ. ಇದರಲ್ಲಿ ಸುಮಾರು ೭೪ ಮಠಗಳು ಗುರುತಿಸಲ್ಪಟ್ಟಿವೆ. ಉಳಿದವುಗಳ ದಾಖಲೆಗಳು ಅಪೂರ್ಣವಾಗಿದ್ದು ಇನ್ನುಳಿದ ಸ್ಥಳಗಳಲ್ಲಿ ಮೂಲ ವಿನ್ಯಾಸಗಳು ಪರಿವರ್ತನೆಯಾಗಿರುವ ಸಾಧ್ಯತೆಗಳಿವೆ.

ಹತ್ತೊಂಬತ್ತನೆಯ ಶತಮಾನದ ಆದಿಭಾಗದಲ್ಲಿ ಬಳೆಪೇಟೆಯ ಪೂರ್ಣಯ್ಯನವರ ಛತ್ರದ ಹಿಂಭಾಗದಲ್ಲಿದ್ದ ಕಲ್ಮಠವೆ ಗೊಟ್ಟೂರಯ್ಯನ ಮೂಲಮಠವಾಗಿತ್ತು. ದಿವಾನ್ ಪೂರ್ಣಯ್ಯನವರು ಕ್ರಿ.ಶ. ೧೮೦೬ ರಲ್ಲಿ ಧರ್ಮಾಂಬುಧಿ ಕೆರೆಯ ಹಿಂಬದಿಗೆ ತಮ್ಮ ಸ್ಮರಣಾರ್ಥವಾಗಿ ಸಾರ್ವಜನಿಕರಿಗೆ ಉಪಯೋಗವಾಗುವಂತೆ ಒಂದು ಧರ್ಮಛತ್ರವನ್ನು ನಿರ್ಮಿಸಿದ್ದಾರೆ.[೪] ಪೂರ್ಣಯ್ಯನವರ ಈ ಧರ್ಮಛತ್ರದ ನಿರ್ಮಾಣಕ್ಕೆ, ತಮ್ಮ ಮಠದ ಮುಂಭಾಗದಲ್ಲಿ ಅನುಕೂಲ ಮಾಡಿಕೊಟ್ಟಿದ್ದವರೆ ಆಗಿನ ಕಲ್ಲುಮಠದ ಗುರುಗಳಾಗಿದ್ದ ಗೊಟ್ಟೂರಯ್ಯನವರು, ಇದರ ಸಹಾಯಾರ್ಥವಾಗಿ ಪೂರ್ಣಯ್ಯನವರು ಮುಮ್ಮಡಿ ಕೃಷ್ಣರಾಜ ಒಡೆಯರಲ್ಲಿ ಪ್ರಭಾವ ಬೀರಿ ಗೊಟ್ಟೂರಯ್ಯನವರಿಗೆ ಪಕ್ಕದ ಹನುಮಂತಪುರ ಗ್ರಾಮದಲ್ಲಿ ಧರ್ಮಾಂಬುಧಿ ಕೆರೆಯ ಪೂರ್ವದ ದಂಡೆಗೆ ಸರ್ವೆ ಸಂಖ್ಯೆ ೨೫ರಲ್ಲಿ ೮ ಕೊಳಗ ೨ ಪಡಿ ಬೀಜವರಿ ವಿಸ್ತೀರ್ಣದ (೭ ಎಕರೆ, ೧೧ ಗುಂಟೆ) ಜಮೀನನ್ನು ಇನಾಮಾಗಿ ಕೊಡಿಸಿ ಕೊಟ್ಟಿದ್ದಕ್ಕೆ ಕ್ರಿ.ಶ. ೧೮೧೦ರ ಪೂರ್ಣಯ್ಯನವರ ಹುಜೂರು ಜಾರಿ ದಾಖಲೆಯು 'ಗೊಟ್ಟೂರಯ್ಯನವರ ಮಠ'ವೆಂದು ದೃಢೀಕರಿಸಿದೆ.[೫]

ಮುಂದೆ ೧೮೩೧ರ ಹುಜೂರ್ ಜಾರಿ ದಾಖಲೆ ಪ್ರಕಾರ ಗೊಟ್ಟೂರಯ್ಯನವರ ನಂತರ ಅಧಿಕಾರಕ್ಕೆ ಬಂದವರು ಚನ್ನವೀರ ಒಡೆಯ(ದೇವ)ರು. ಬಹುಶಃ ಈ ವೇಳೆಗಾಗಲೇ ಗೊಟ್ಟೂರಯ್ಯನವರು ತೀರಿಕೊಂಡಿರಬೇಕು. ಗೊಟ್ಟೂರಯ್ಯ ನವರ ಗದ್ದುಗೆಯನ್ನು ಹನುಮಂತಪುರದ ಇನಾಂ ಜಮೀನಿನಲ್ಲೇ ಮಾಡಲಾಗಿತ್ತು. ಚನ್ನವೀರ ಒಡೆಯ(ದೇವ)ರು ೧೮೪೮ರವರೆಗೂ ಸದರಿ ಗೊಟ್ಟೂರಯ್ಯನವರ ಮಠದ ಅಧಿಪತಿಗಳಾಗಿ ಮುಂದುವರೆದಿದ್ದರು. ಇವರ ಕಾಲದಲ್ಲಿ ಗ್ರಾಮದ ಇನಾಂ ಜಮೀನಿನಲ್ಲಿ ಗೊಟ್ಟೂರಯ್ಯನವರ ಗದ್ದುಗೆ ಜೊತೆಗೆ ನಂಜುಂಡೇಶ್ವರನ ಸಣ್ಣ ಗುಡಿ ಹಾಗೂ ಹದಿನೈದು ಅಂಕಣಗಳ ಕಲ್ಲು ಮಠವನ್ನು ನಿರ್ಮಾಣ ಮಾಡಲಾಗಿತ್ತು. ಇವರ ಕಾಲದ ವ್ಯವಹಾರದ ದಾಖಲೆಗಳನ್ನು ಆಧರಿಸಿ ಹೇಳುವುದಾದರೆ, "ಗೊಟ್ಟೂರಯ್ಯನವರ ಮಠವು ಮುರಿಗಾ ಸಮಯಕ್ಕೆ ಸೇರಿದ್ದ ಮಠವಾಗಿತ್ತು."[೬] ಗೊಟ್ಟೂರಯ್ಯ ನವರ ಮಠದ ಮೂಲಮಠ ಕಲ್ಲುಮಠವೇ ಆಗಿದ್ದರೂ ಗೊಟ್ಟೂರಯ್ಯನವರಿಗೆ ಮಹಾರಾಜರಿಂದ ಇನಾಮತಿ ಬಂದಿದ್ದ ಹನುಮಂತಪುರದ ಜಮೀನಿನಲ್ಲಿ ೧೮೫೦ರ ವೇಳೆಗೆ ನೂತನ ಗದ್ದುಗೆ ಮಠದ ಕಟ್ಟಡಗಳೆಲ್ಲಾ ನಿರ್ಮಾಣ ವಾಗಿದ್ದರಿಂದ ಇದನ್ನೇ ಜನರು ಗೊಟ್ಟೂರಯ್ಯನವರ ಮಠವೆಂದೂ ಕರೆಯುವುದು ರೂಢಿಗೆ ಬಂದಿತ್ತು.

ಚನ್ನವೀರ ಒಡೆಯ(ದೇವ)ರ ನಂತರ ಮಠಾಧಿಕಾರಕ್ಕೆ ಬಂದವರೇ ಸಿದ್ಧರಾಮ (ಒಡೆಯರು) ದೇವರು. ಇವರ ಕಾಲದ ಬಗೆಗೆ ಖಚಿತವಾದ ಮಾಹಿತಿ ಲಭ್ಯವಾಗಿಲ್ಲವಾದರೂ ಇವರು ೧೮೪೯ ರಿಂದ ಅಧಿಕಾರದಲ್ಲಿದ್ದುದಕ್ಕೆ ಸೂಚನೆಗಳಿವೆ.[೭] ಆಗ ಮಠದ ಭಕ್ತರಾಗಿದ್ದ ಉದ್ದಣ್ಣ ಎಂಬುವರು ತಮ್ಮ ಸ್ವಂತ ಖರ್ಚಿನಲ್ಲಿ ವರ್ಷಂಪ್ರತಿ ಮಠದಲ್ಲಿ ನಡೆಯುವ ಹಿರಿಯ ಗುರುಗಳ ಗಣಾರಾಧನೆಯನ್ನು ನಡೆಸಿಕೊಡಲು ಪ್ರಾರಂಭಿಸಿ ದರು. ಈ ಕಾರ್ಯವು ೧೮೪೯ ರಿಂದ ೧೮೬೩ರವರೆವಿಗೂ ನಿರಂತರವಾಗಿ ನಡೆದುಬಂದಿತ್ತು. ಮುಂದೆ ೧೮೬೩ರಲ್ಲಿ ಸಿದ್ದಲಿಂಗದೇವರು ಗೊಟ್ಟೂರಯ್ಯನವರ ಮಠದ ಅಧಿಪತಿ ಗಳಾಗಿದ್ದರು ಇವರ ಕಾಲದಲ್ಲಿ ಮಠದ ಜಮೀನುಗಳನ್ನು ಸಾಲಗುತ್ತಿಗೆ ಕರಾರು ಮಾಡಿಕೊಂಡಿದ್ದಕ್ಕೆ ಕೆಲವು ದಾಖಲೆಗಳಿವೆ. ಗೊಟ್ಟೂರಯ್ಯ (ಗೋದೂರಯ್ಯ) ಮಠದ

[illegible] ೧೯೩೬ರಲ್ಲಿ ದೊಡ್ಡ ದೇವರಿಗೆ ಛತ್ರ [illegible] ಕಾರ್ಯಗಾರರೊಬ್ಬರದೇ ದೊಡ್ಡ ದೊಡ್ಡ ಕಂಬಗಳಿಂದ (ಸು. ೨೦ ಯಿಂದ) ಕೂಡಿದ ಛತ್ರ ಹಾಗೂ ಉಯ್ಯಾಲೆಯನ್ನು ನಿರ್ಮಾಣ ಮಾಡಿಸಿದರು. ಮುಂದೆ ಈ ಛತ್ರವನ್ನು ಜನರು ಉಯ್ಯಾಲೆ ಛತ್ರವೆಂದು ಕರೆಯಲಾರಂಭಿಸಿದರು.[೮] ೧೯೩೦ರವರೆವಿಗೂ ಇಲ್ಲಿ ಮದುವೆ, ಮುಂಜಿಗಳು, ಪಕ್ಕದಲ್ಲಿರುವ ಗ್ರಾಮದೇವತೆ ಅಣ್ಣಮ್ಮ ದೇವಿಯ ಉತ್ಸವ, ಜಾತ್ರೆಗಳ ಸಮಯದಲ್ಲಿ ದೇವಿಗೆ ಉಯ್ಯಾಲೆ ಆಡಿಸುವುದು ತಪ್ಪದೆ ನಡೆಯುತ್ತಿತ್ತು, ದೇವಿಯ ಸೇವಕ ಅಥವ ಕಾವಲುಗಾರ ಅಥವಾ ಸೈನ್ಯಾಧಿಪತಿ ಎಂದು ಕರೆಯಿಸಿಕೊಳ್ಳುತ್ತಿದ್ದ ವಿಶಿಷ್ಟ ವೇಷ, ಭೂಷಣದಿಂದ ಅಲಂಕರಿಸಿಕೊಂಡ ಸಿಡೀರಣ್ಣ ವೇಷಧಾರಿಯು ಆಟವಾಡಿ ನೆರೆದಿದ್ದ ಜನಸ್ತೋಮವನ್ನು ಸಂತೋಷಪಡಿಸುತ್ತಿದ್ದ. ಇದನ್ನು ನೋಡಿದ ಜನರು ಸಂತೋಷದಿಂದ ಕುಣಿದು ಕುಪ್ಪಳಿಸುತ್ತಿದ್ದರು ಎಂದು ಸ್ಥಳೀಯರು ಈಗಲೂ ಜ್ಞಾಪಿಸಿಕೊಳ್ಳುತ್ತಾರೆ.

ಗೊಟ್ಟೂರಯ್ಯನವರ ಮಠದ ಕೊನೆಯ ಅಧಿಪತಿಗಳಾಗಿದ್ದವರೇ ಅನ್ನದಾನಿಸ್ವಾಮಿಗಳು. ಇವರು ೧೮೮೯ರ ವರೆವಿಗೂ ಅಧಿಕಾರದಲ್ಲಿದ್ದುದಾಗಿ ಸಪ್ಪಣ್ಣಸ್ವಾಮಿ ಮಠದ ದಾಖಲೆಗಳಿಂದ ಸ್ಪಷ್ಟವಾಗುತ್ತದೆ. ಹನುಮಂತಪುರ ಗ್ರಾಮದ ಗೊಟ್ಟೂರಯ್ಯನವರ ಮಠಕ್ಕೆ ಮೈಸೂರು ದೊರೆಗಳ ಸರಕಾರದಿಂದ ದಿನಾಂಕ ೦೧-೦೧-೧೮೭೬ ರಂದು ಅಧಿಕೃತವಾದ ಇನಾಂ ಸರ್ಟಿಫಿಕೇಟ್ ನೀಡಲಾಗಿದೆ. ಇದರಲ್ಲಿ ಗೋದೂರಯ್ಯನವರ ಮಠವೆಂದು ಸಂಬೋಧಿಸಿರುತ್ತಾರೆ.

ಸುಮಾರು ೧೮೦೦ ರಿಂದ ೧೮೮೬ರವರೆವಿಗೂ ಗೊಟ್ಟೂರಯ್ಯನವರ ಮಠದಲ್ಲಿ ಆಗಿ ಹೋದ ಐವರು ಮಠಾಧೀಶ್ವರರ ಸಂಕ್ಷಿಪ್ತ ಮಾಹಿತಿ ಲಭ್ಯವಿದೆಯೇ ಹೊರತು, ಅವರ ಕಾಲದ ಹೆಚ್ಚಿನ ವಿವರಗಳೇನೂ ದೊರೆಯುವುದಿಲ್ಲ. ಈ ಅವಧಿಯಲ್ಲಿ ಬಳೇಪೇಟೆಯ ಕಲ್ಲು ಮಠ ಹಾಗೂ ಹನುಮಂತಪುರದ ಗೊಟ್ಟೂರಯ್ಯನವರ ಮಠಗಳೆರಡೂ ಒಂದೇ ಆಡಳಿತದಲ್ಲಿದ್ದವು. ಕೊನೆಯ ಗುರುಗಳಾಗಿದ್ದ ಅನ್ನದಾನಯ್ಯನವರು ೧೮೮೬ರಲ್ಲಿ ಶಿವಾಧೀನರಾದ ಮೇಲೆ ಸದರಿ ಮಠಗಳು ಗುರುವಣ್ಣದೇವರ ಮಠದ ಗುರುಮಹಾಂತ ಒಡೆಯರ ಸ್ವಾಧೀನದಲ್ಲಿದ್ದವು. ಇವರು ತಮ್ಮ ಸೋದರ ಸಂಬಂಧಿಯಾಗಿದ್ದ ಬಳೇಪೇಟೆಯ ಸಿದ್ಧಲಿಂಗಪ್ಪನ ಮಗ ಸಿದ್ಧಯ್ಯ ಎಂಬುವನನ್ನು ೧೮೮೮ ರಲ್ಲಿ ಮೇಲ್ಕಂಡ ಕಲ್ಲುಮಠ ಹಾಗೂ ಗೊಟ್ಟೂರಯ್ಯನವರ ಮಠಗಳ ಅಧಿಕೃತ ವಹಿವಾಟುದಾರರೆಂದು ನೇಮಿಸಿಕೊಂಡರು. ಮುಜರಾಯಿ ಇಲಾಖೆ ಕೂಡ ಇದನ್ನು ಮಾನ್ಯ ಮಾಡಿತ್ತು.[೯] ಆಗ ಸಾಕಷ್ಟು ವ್ಯತ್ಯಾಸವಾಗಿದ್ದ ಮಠಗಳ ಆಸ್ತಿ ಪಾಸ್ತಿಗಳ ರಕ್ಷಣೆಗಾಗಿ ಸಿದ್ದಯ್ಯ ಅವಿರತ ಪ್ರಯತ್ನ ನಡೆಸಿದ್ದರು. ಈ ಮಧ್ಯೆ ಮಠದ ಭಕ್ತರೆಲ್ಲಾ ಸೇರಿ ಸಿದ್ಧಯ್ಯನೇ ಮಠದ ಅಧಿಕೃತ ವಹಿವಾಟುದಾರರೆಂದು ಸರಕಾರ ಒಪ್ಪಿಕೊಂಡಿರುವುದು ಸರಿಯಲ್ಲವೆಂದು ಮಠದ ಐತಿಹಾಸಿಕ ಪರಂಪರೆಗೆ ಅನುಗುಣವಾಗಿ ವಿದ್ಯಾವಂತ ವಟು ಒಬ್ಬರನ್ನು ಸ್ವಾಮಿಗಳನ್ನಾಗಿ ಆಯ್ಕೆ ಮಾಡಲು ಸರಕಾರ ಅನುವು ಮಾಡಿಕೊಡಬೇಕೆಂದು ಸುದೀರ್ಘವಾದ ಅಹವಾಲು ಸಲ್ಲಿಸಿದ್ದರು. ೧೯೨೬ರ ವೇಳೆಗೆ ಮಠದ ಇನಾಮ್ ಜಮೀನುಗಳನ್ನು ಗುತ್ತಿಗೆ ಮಾಡಿಕೊಂಡಿದ್ದ ರೈತರು ಹಾಗೂ ಅರ್ಚಕರು ಸೇರಿ, ಮಠದ ಜಮೀನಿನಲ್ಲಿ ನೂರಾರು ತಾತ್ಕಾಲಿಕ ಗುಡಿಸಲುಗಳನ್ನು ನಿರ್ಮಾಣ ಮಾಡಿ ಮಾಹೆಯಾನ ಗುಡಿಸಲೊಂದಕ್ಕೆ ೪ ರಿಂದ ೬ ಆಣೆಗಳ ಬಾಡಿಗೆ ವಸೂಲಿ ಮಾಡುತ್ತಿದ್ದರು.[೧೦] ಈ ವೇಳೆಗೆ ಮಠದಲ್ಲಿ ಹಿಂದಿನ ಕಾಲದಿಂದಲೂ ನಡೆದು ಬಂದಿದ್ದ ಸಂಪ್ರದಾಯಗಳಿಗೆ ಪುರಸ್ಕಾರವೇ ಇಲ್ಲದಂತಾಗಿ ಮಠದ ಮೂಲ ಧಾರ್ಮಿಕ ಪರಂಪರೆಗೆ ಬಲವಾದ ಹೊಡೆತ ಬಿದ್ದಿತ್ತು.

ಮಠದ ಹೆಸರಿನಲ್ಲಿದ್ದ ಒಟ್ಟು ಆಸ್ತಿ ೭ ಎಕರೆ ೧೧ ಗುಂಟೆ ಜಮೀನಿನಲ್ಲಿ ೫ ಎಕರೆ ೩೦.೫ ಗುಂಟೆ ವಿಸ್ತೀರ್ಣದ ಭೂಮಿಯನ್ನು ಗಾಂಧಿನಗರದ ನೂತನ ಬಡಾವಣೆಯ ನಿರ್ಮಾಣಕ್ಕೆ ಸ್ವಾಧೀನ ಪಡಿಸಿಕೊಳ್ಳಲು ದಿನಾಂಕ ೩೧-೦೩-೧೯೨೮ರಂದು ಸರಕಾರವು ಪುರಸಭೆಗೆ ಅನುಮತಿ ನೀಡಿತ್ತು.[೧೧] ಮಠದ ಕಟ್ಟಡ, ಗದ್ದುಗೆ ಇತ್ಯಾದಿಗಳಿದ್ದ ಪ್ರದೇಶದ ೮ ಗುಂಟೆ ಉಳಿದು, ಬೇರೆ ೨ ಗುಂಟೆಯ ಭಾಗವನ್ನು ಸರಕಾರವೇ ರಾಮಚಂದ್ರಯ್ಯ ಎಂಬುವರಿಗೆ ಪರಭಾರೆ ಮಾಡಿತ್ತು. ಈ ಪೈಕಿ ೧೧ ಗುಂಟೆ ಜಮೀನನ್ನು ಸರಕಾರದ ಪರವಾಗಿ ಕಲ್ಯಾಣಪ್ಪ ಎಂಬುವವರಿಗೆ ಗುತ್ತಿಗೆಗೆ ನೀಡಲಾಗಿತ್ತು. ಉಳಿದ ಭೂಮಿಯಲ್ಲಿ ೨ ಗುಂಟೆಯಷ್ಟು ಜಾಗ ಸಿ.ವಿ. ನರಸಿಂಹಯ್ಯಂಗಾರ್ ಅವರ ಅನುಭೋಗದಲ್ಲೂ, ಇನ್ನುಳಿದಿದ್ದ ೩೭.೦೫ ಗುಂಟೆಯಷ್ಟು ಜಮೀನು ಸಯ್ಯದ್ ಮಸ್ತಾಫ ಮತ್ತು ಸಯ್ಯದ್ ಹುಸೇನ್ ಸ್ವಾಧೀನದಲ್ಲೂ ಇತ್ತು. ಉಯ್ಯಾಲೆ ರಾಜಮ್ಮ ಎಂಬ ಹೆಸರಿನಿಂದ ಕರೆಯುತ್ತಿದ್ದ ಮಹಿಳೆಯೂ ಸಹ ಅಲ್ಲಿ ಕಾರ್ಯಕರ್ತೆಯಾಗಿದ್ದಳು. ಹೀಗೆ ೧೯೪೫ರ ವೇಳೆಗೆ ಗೊಟ್ಟೂರಯ್ಯ (ಗೋದೂರಯ್ಯ)ನವರ

ಮಠದ ಆಸ್ತಿಯು ಸರಿಯಾದ ವಾರಸುದಾರರಿಲ್ಲದೆ ಹರಿದು ಹಂಚಿಹೋಗಿತ್ತು. ಈ ಮಧ್ಯೆ ಮಠದ ವಹಿವಾಟುದಾರನಾಗಿದ್ದ ಸಿದ್ಧಯ್ಯ ೧೯೪೨ರಲ್ಲಿ ತೀರಿಕೊಂಡಿದ್ದನು. ಸಿದ್ಧಯ್ಯನು ಬರೆದಿದ್ದ ಮರಣ ಶಾಸನ ಪ್ರಕಾರ ಈತನ ಸಾಕು ಮಗನಾದ ವೀರಭದ್ರಯ್ಯನೇ ಮಠದ ಮುಂದಿನ ವಹಿವಾಟುದಾರನಾಗ ಬೇಕಾಗಿತ್ತು. ಆದರೆ ೧೯೩೮ ರಿಂದ ೧೯೪೨ರವರೆಗೆ ನಡೆದ ಇವರ ಕೌಟುಂಬಿಕ ಜಗಳಗಳಿಂದಾಗಿ ಮಠದ ಆಸ್ತಿ–ಪಾಸ್ತಿಗಳ ಸಂಪೂರ್ಣ ಅಧಿಕಾರವನ್ನು ಸರಕಾರವೇ ವಹಿಸಿಕೊಂಡು ವೀರಭದ್ರಯ್ಯನನ್ನು ಕೇವಲ ಅರ್ಚಕನನ್ನಾಗಿ ಮಾತ್ರ ಮುಂದುವರೆಸಿತ್ತು.[೧೨]

ಸರಕಾರವು ಮುಂದೆ ಗೊಟ್ಟೂರಯ್ಯನವರ ಮಠದ ಆಸ್ತಿ ಪಾಸ್ತಿಗಳ ವಿಲೇವಾರಿಯಿಂದ ಸಂಗ್ರಹವಾಗಿದ್ದ ಹಣವನ್ನು ಮಠದ ಹೆಸರಿನಲ್ಲಿ ಧಾರ್ಮಿಕ ದತ್ತಿ ಇಲಾಖೆಯಲ್ಲಿ ಕಾಯ್ದಿರಿಸಿತ್ತು. ದಿನಾಂಕ : ೨೪–೧೦–೧೯೭೯ ರಲ್ಲಿ ಒಂದು ಆದೇಶವನ್ನು ಹೊರಡಿಸಿದ್ದ ಧಾರ್ಮಿಕ ದತ್ತಿ ಇಲಾಖೆಯು ಮೇಲ್ಕಂಡ ನಿಧಿಯಿಂದ ಬರುವ ವಾರ್ಷಿಕ ಬಡ್ಡಿ ಹಣವನ್ನು ಈ ಕೆಳಕಂಡ ಧರ್ಮಕಾರ್ಯಗಳಿಗೆ ಖಾಯಂ ಆಗಿ ವಿನಿಯೋಗವಾಗುವಂತೆ ಸೂಚನೆ ನೀಡಿತ್ತು.[೧೩] ಅದರಂತೆ, ಪ್ರತಿವರ್ಷ ಕೆಳಕಂಡಂತೆ ವಿನಿಯೋಗಿಸಲಾಗುತ್ತಿತ್ತು.

### ಗೊಟ್ಟೂರಯ್ಯನವರ ಮಠದ ಗುರು ಪರಂಪರೆ

೧. ಗೊಟ್ಟೂರಯ್ಯನವರು ಸು. ಕ್ರಿಶ. ೧೮೦೦–೧೮೩೦

೨. ಚನ್ನವೀರ ಒಡೆಯ (ದೇವ) ಸು. ಕ್ರಿಶ. ೧೮೩೧–೧೮೪೮

೩. ಸಿದ್ಧರಾಮ (ಒಡೆಯರು)ದೇವರು ಸು.ಕ್ರಿಶ. ೧೮೪೯–೧೮೬೨

೪. ಸಿದ್ಧಲಿಂಗ ದೇವರು ಸು. ಕ್ರಿಶ. ೧೮೬೩–೧೮೭೨

| ಕ್ರಸಂ. | ವಿವರಗಳು | ಮೊತ್ತ |
|---|---|---|
| ೦೧ | ಗೊಟ್ಟೂರಯ್ಯನವರ ಮಠದ ನಿತ್ಯ ಖರ್ಚಿಗಾಗಿ (ವಾರ್ಷಿಕ) | ೧,೮೦೦.೦೦ |
| ೦೨ | ಅರ್ಚಕನ ವೇತನ | ೨,೭೦೦.೦೦ |
| ೦೩ | ವಿದ್ಯುತ್, ನೀರು, ಇತರೆ ಸಾದಿಲ್ವಾರು ವೆಚ್ಚ | ೩೦೦.೦೦ |
| ೦೪ | ಮಠದ ದುರಸ್ತಿ, ಕಂದಾಯ ವಗೈರೆ | ೨,೭೦೦.೦೦ |
| ೦೫ | ವೀರಶೈವ ಆಗಮ ಅಧ್ಯಯನದ ವಿದ್ಯಾರ್ಥಿಗಳಿಗೆ ಪ್ರೋತ್ಸಾಹಕ್ಕಾಗಿ | ೨,೪೦೦.೦೦ |
| ೦೬ | ಅಕ್ಕಮಹಾದೇವಿ ಸಮಾಜದ ವಿದ್ಯಾರ್ಥಿನಿಯರಿಗಾಗಿ | ೩,೮೦೦.೦೦ |
| ೦೭ | ಬಸವ ಸಮಿತಿಯಲ್ಲಿ ಗೊಟ್ಟೂರಯ್ಯನವರ ಸ್ಮರಣಾರ್ಥ ಕಾರ್ಯಗಳಿಗಾಗಿ | ೪,೦೦೦.೦೦ |
| | ಒಟ್ಟು | ೧೭,೭೦೦.೦೦ |

೫. ಅನ್ನದಾನಯ್ಯಸ್ವಾಮಿ ಸು. ಕ್ರಿಶ. ೧೮೭೨–೧೮೮೬

೬. ನಂತರ ಗುರುವಣ್ಣದೇವರ ಮಠದ ಗುರುಮಹಾಂತ ಒಡೆಯರು ೨೦ನೆಯ ಶತಮಾನದ ಮಧ್ಯಭಾಗದವರೆಗೂ ಈ ಮೂಲ ಮಠದ ಉತ್ತರಾಧಿಕಾರಿಗಳು, ಅರ್ಚಕ ರಾಗಿದ್ದರು.[೧೪]

ಬೆಂಗಳೂರು ಆಧುನಿಕ ಯುಗದಲ್ಲಿ ಒಂದು ಪ್ರಮುಖ ನಗರವಾಗಿ ಅಭಿವೃದ್ಧಿಗೊಂಡಾಗ ೧೧ ಗುಂಟೆ (೧೧,೩೩೩ ಚದರ ಅಡಿಗಳು) ಅಥವಾ ೧೮೯೯ ಗಜಗಳು, ೭೧೧ ಗಜ ವಿಸ್ತೀರ್ಣ (ಅಳತೆಯಲ್ಲಿ ವ್ಯತ್ಯಾಸ ಕಂಡು ಬರುತ್ತದೆ)ದ ಜಮೀನನ್ನು ಸುತ್ತಲೂ ಇದ್ದ ಮಠಗಳು, ಅಂಗಡಿಯವರು, ಖಾಸಗಿಯವರೂ ಸಹ ವೈಯುಕ್ತಿಕವಾಗಿ ತಮ್ಮ ಸ್ವಾಧೀನಪಡಿಸಿಕೊಳ್ಳಲು ಸುಧೀರ್ಘವಾದ ಹೋರಾಟ ನಡೆಸಿದರು.

ಶ್ರೀ ಗೋವಿಂದಪ್ಪ (ಪಿಳ್ಳಪ್ಪ) ಬಿನ್ ಲೇಟ್ ಪಟಡಿ ತಿಮ್ಮರಾಯಪ್ಪನವರು ಸರ್ವೆ ಸಂಖ್ಯೆ ೧೩/೩ ಹನುಮಂತಪುರ ಗ್ರಾಮದಲ್ಲಿ ಮುಜರಾಯಿ ಇಲಾಖೆಯಿಂದ ಆತನ ತಂದೆಯ ಹೆಸರಿಗೆ ೧೧ ಗುಂಟೆ ಅಥವಾ ೧೧,೩೩೩ ಚದರ ಅಡಿಗಳು ಗುತ್ತಿಗೆ ಆಧಾರದ ಮೇಲೆ ೫೦ ವರ್ಷಗಳ ಷರತ್ತಿನೊಡನೆ ದಿನಾಂಕ : ೨೯–೧೧–೧೯೨೪ ರಲ್ಲಿ ಪಡೆದರು. ಸದರಿ ಸ್ವತ್ತಿನಲ್ಲಿ ೩೪ ಚಿಕ್ಕ ಸಂಸಾರಗಳು ಹಾಗು ೫ ಸಣ್ಣ ಅಂಗಡಿಗಳನ್ನು ನಿರ್ಮಿಸಿ, ಬಾಡಿಗೆ ಹಣವನ್ನು ವಸೂಲಿ ಮಾಡುತ್ತಿದ್ದು ಸರ್ಕಾರಕ್ಕೆ ೧೯೭೮–೭೯ರವರೆವಿಗೆ ಕಂದಾಯ ಪಾವತಿ ಮಾಡುತ್ತಿದ್ದುದು ದಾಖಲೆಗಳಿಂದ ತಿಳಿದುಬರುತ್ತದೆ. ೫೦ ವರ್ಷ ಗುತ್ತಿಗೆ ಮುಗಿದ ನಂತರ ದಿನಾಂಕ ೨೯–೧೧–೧೯೭೪ರಲ್ಲಿ ಗೋವಿಂದಪ್ಪನವರು ಈ ಜಾಗವನ್ನು ಬಿಟ್ಟುಕೊಟ್ಟರು. ಹಾಗೂ ಅಲ್ಲಿ ತಮ್ಮ ಪೂರ್ವಿಕರ

ಕಾಲದಿಂದಲೂ ದಾನ ಮಾಡಿಕೊಂಡಿದ್ದ ಬಡಜನರಿಗೆ ಸದರಿ ಸ್ವತ್ತು ವಿತರಣೆ ಮಾಡಬೇಕೆಂದು ಸಹ ಸರ್ಕಾರಕ್ಕೆ ಮನವಿ ಮಾಡಿಕೊಳ್ಳುತ್ತಾರೆ.[೧೪] ಅದೇ ಅವಧಿಯಲ್ಲಿ ಅಲ್ಲಿದ್ದವರು ಒಬ್ಬರೆ ಸೇರಿ ಉಯ್ಯಾಲೆ ಛತ್ರ ಅಸೋಸಿಯೇಷನ್ ಸ್ಥಾಪಿಸಿ ಇದರ ಮುಖಾಂತರ ಸ್ವತ್ತು ಪಡೆಯಲು ಸರ್ಕಾರಕ್ಕೆ ಪತ್ರ ವ್ಯವಹಾರ ಮಾಡಿದ್ದರು. ಉಯ್ಯಾಲೆ ರಾಜಮ್ಮ ಎಂದೇ ಹೆಸರುವಾಸಿಯಾಗಿದ್ದ ಛತ್ರದ ಕಾರ್ಯಕರ್ತೆ ಏಕಾಂಗಿಯಾಗಿ ಹೋರಾಟ ಮಾಡಿದರೂ ಸಹ ಆಕೆಗೆ ಈ ಸ್ಥಳ ದಕ್ಕಲಿಲ್ಲ.

ಗೊಟ್ಟೂರಯ್ಯ (ಗೋದೂರಯ್ಯ)ನವರ ಮಠದ ಸ್ವತ್ತು ಕ್ರಿ.ಶ. ೧೪೯೩ರಲ್ಲಿ ಕೆಳದಿ ಅರಸರಿಂದ ದಾನವಾಗಿ ಬಂದಿರುತ್ತದೆಂದೂ ತಿಳಿದುಬರುತ್ತದೆ. ದಿನಾಂಕ ೯-೮-೧೯೧೧ ರಲ್ಲಿ ಶಾನ್‌ಭೋಗ್‌ರಂಗಪ್ಪ ಹರದನಹಳ್ಳಿ ಕಸಬಾ ಶಿವಮೊಗ್ಗ ಜಿಲ್ಲೆ ಹಾಗು ಟಿ.ಎನ್. ಶ್ರೀಕಂಠಶಾಸ್ತ್ರಿ (ಜಿ.ಪಿ.ಎ. ಹೋಲ್ಡರ್)ರವರು ಶ್ರೀ ರಾಮಲಿಂಗೇಶ್ವರ ಸ್ವಾಮಿ ಮಠ, ಇವರುಗಳು ಅಂದಿನ ರೆವೆನ್ಯೂ ಕಮೀಷನರ್ ಕಛೇರಿಯಲ್ಲಿ ಪತ್ರ ವ್ಯವಹಾರ ಮಾಡಿದ್ದು, ಶ್ರೀ ಗುರುಲಿಂಗರಾಜ ಒಡೆಯರ್ ವಂಶದವರು ಕೆಳದಿ ರಾಜರಿಗೆ ಕುಲಬೋಧ ಗುರುಗಳಾಗಿ ದ್ದರು. ಶ್ರೀ ರಾಮರಾಜ ನಾಯಕ, ಕೆಳದಿಯ ರಾಜ ಈತನ ಹೆಸರಿನಲ್ಲಿ ಹರದನಹಳ್ಳಿ (ಶಿವಮೊಗ್ಗ ಜಿಲ್ಲೆ) ಯಲ್ಲಿ ಶ್ರೀ ರಾಮಲಿಂಗೇಶ್ವರ ವಿಗ್ರಹವನ್ನು ಪ್ರತಿಷ್ಠಾಪನೆ ಮಾಡಿರುತ್ತಾರೆ. ಇದೇ ತರಹ ಕೆಳದಿಯಲ್ಲಿ ಕೌಲೇಗುಡ್ಡ ಮತ್ತು ಬೆಂಗಳೂರಿನಲ್ಲಿರುವ ಹನುಮಂತಪುರ ಗ್ರಾಮದಲ್ಲಿ ಶ್ರೀ ರಾಮಲಿಂಗೇಶ್ವರ ಮಠ ಸ್ಥಾಪಿಸಿದರು.[೧೫] ಈ ರಾಜರು ಪ್ರವಾಸ ಹೋಗುವ ಕಡೆ, ಅವರು ಇಳಿದುಕೊಂಡ ಸ್ಥಳಗಳಲ್ಲಿ ಮಠಗಳನ್ನು ಸ್ಥಾಪಿಸಿ ಅವುಗಳಲ್ಲಿ ವಿಗ್ರಹ ಪ್ರತಿಷ್ಠಾಪನೆ ಮಾಡುವುದು ಅವರ ಅಂದಿನ ಧ್ಯೇಯಗಳಾಗಿದ್ದವು. ಈ ಮಠ, ದೇವಸ್ಥಾನ ಮತ್ತು ಕೆರೆ ಕುಂಟೆಗಳು ಇನಾಂ ಜಮೀನುಗಳಿಗೆ ಒಳಪಡುತ್ತಿತ್ತು. ಇವುಗಳನ್ನು ಧಾರ್ಮಿಕ ಚಟುವಟಿಕೆಗಳಿಗೆ ಉಪಯೋಗಿಸುತ್ತಿದ್ದರು. ಈ ರಾಜರು ಹೋಗುವ ಎಲ್ಲಾ ಕಡೆ ಶ್ರೀ ಗುರುಲಿಂಗರಾಜ ಒಡೆಯರ್‌ರವರ ವಂಶಸ್ಥರು ಜೊತೆಯಲ್ಲಿ ಹೋಗುತ್ತಿದ್ದರು. ಶ್ರೀ ಗಂಗಾಧರಯ್ಯ ಬಿನ್ ಶ್ರೀ ಶಿವನಂಜಯ್ಯ, ಶ್ರೀ ರಾಮಲಿಂಗೇಶ್ವರ ಮಠದ ಕೆಳದಿ ಸಂಸ್ಥಾನಕ್ಕೆ ಸರ್ವಾಧಿಕಾರಿಯಾಗಿದ್ದು ಈತನಿಗೆ ಮೂರು ಜನ ಗಂಡು ಮಕ್ಕಳು – ನಂಜುಂಡಾರಾಧ್ಯ, ಬಸವಾರಾಧ್ಯ ಹಾಗೂ ಈಶ್ವರಾರಾಧ್ಯರು – ಉತ್ತರಾಧಿಕಾರಿಗಳು. ಆದ್ದರಿಂದ ಬೆಂಗಳೂರು ಹನುಮಂತಪುರ ಗ್ರಾಮದಲ್ಲಿರುವ ಗೊಟ್ಟೂರಯ್ಯನ (ಗೋದೂರಯ್ಯ) ಮಠವು ಸಹ ಶ್ರೀ ರಾಮಲಿಂಗೇಶ್ವರ ಮಠದ ಶಾಖಾ ಮಠವಾಗಿರುತ್ತದೆ ಎಂದು ಮುಜರಾಯಿ ಇಲಾಖೆಯವರ ಜೊತೆಯಲ್ಲೇ ಪತ್ರ ವ್ಯವಹಾರ ಮಾಡಿದ್ದು ತಿಳಿದುಬರುತ್ತದೆ.[೧೬] ಬೆಂಗಳೂರಿನಲ್ಲಿರುವ ಹನುಮಂತಪ್ಪುರದ ಗ್ರಾಮದಲ್ಲಿನ ಗೋದೂರಯ್ಯನವರ ಮಠದ ಪರಂಪರೆಯಲ್ಲಿನ ನಾಮಧೇಯಗಳು (ಒಡೆಯರ್, ಮುರಿಗಾ ಸಮಯ ಭೇದಕ್ಕೆ ಸೇರಿದ್ದರು) ಹಾಗೂ ಕೆಳದಿರಾಜರ ಕಾಲದಲ್ಲಿದ್ದ ಅವರ ಕುಲಗುರುಗಳ ನಾಮಧೇಯಗಳು (ಜಂಗಮ ವಂಶ) ಸ್ವಲ್ಪ ಹೆಚ್ಚು ಕಡಿಮೆ ತಾಳೆಯಾಗುತ್ತದೆ. ಆದರೂ ಸಹ ಯಾರಿಗೂ ಮಠದ ಸ್ವತ್ತು ದಕ್ಕಲಿಲ್ಲ.

ಮೈಸೂರು ವೀರಶೈವರ ಸಂಘದ ಬೆಂಗಳೂರಿನ ಪದಾಧಿಕಾರಿಗಳು ಪಕ್ಕದಲ್ಲಿರುವ ಶ್ರೀ ಸಯ್ಯದ್ ಹುಸೇನ್ ಹಿಮಾಲಯ ಚಿತ್ರಮಂದಿರದ ಮಾಲೀಕರ ಹಾಗೂ ಸರ್ಕಾರದ ವಿರುದ್ಧ ನ್ಯಾಯಾಲಯದಲ್ಲಿ ದಾವೆ ಹೂಡಿದ್ದರು. ಇದೂ ಕೂಡ ಇವರ ಕೈವಶವಾಗದೆ ಗೋದೂರಯ್ಯನ ಮಠಕ್ಕೆ ಪೂಜಾ ಪುರಸ್ಕಾರಗಳಿಗೆ ಹಣ ಕೊಡುವಂತೆ ನಿಗಧಿಪಡಿಸಿ ರೂ. ೧,೩೪,೪೮೫/- ಗಳನ್ನು ಸರ್ಕಾರಕ್ಕೆ ಪಾವತಿ ಮಾಡಿಸಿ, ಸ್ವತ್ತು ಶ್ರೀ ಸ್ಯೆಯ್ಯದ್ ಹುಸೇನ್‌ರವರ ಪರವಾಗಿ ನ್ಯಾಯಾಲಯದಲ್ಲಿ ತೀರ್ಮಾನವಾಗಿರುತ್ತದೆ[೧೭] (ದಾವೆ ಸಂಖ್ಯೆ ೮೦೫/೧೯೬೭) ಈಗ ಈ ಜಾಗದಲ್ಲಿ ವಾಣಿಜ್ಯ ಕಟ್ಟಡವಿದೆ. ಇದರ ಪಕ್ಕದಲ್ಲಿಯೇ ಗೋದೂರಯ್ಯನ ಮಠ, ಉಯ್ಯಾಲೆ ಛತ್ರ, ಶ್ರೀ ರಾಮಲಿಂಗೇಶ್ವರ ಸ್ವಾಮಿ ಮಠ ಎಂದು ವಿವಿಧ ಹೆಸರುಗಳಿಂದ ಕರೆಯುತ್ತಿದ್ದ ಸ್ಮಾರಕದ ಕುರುಹಾಗಿ ಒಂದು ಕಲ್ಲಿನ ಕಂಬ ಉಳಿದಿದೆ. ಇದಕ್ಕೆ ಸಾರ್ವಜನಿಕರಿಂದ ಪೂಜೆ ಪುರಸ್ಕಾರಗಳು ನಡೆಯುತ್ತಿರುತ್ತದೆ. (ಚಿತ್ರ ನೋಡಿ) ಇದನ್ನು ಬೆಂಗಳೂರು ಮೂಲದ 'ಗಡಿಗಂಭ'ವಿರಬಹುದು ಎಂದೂ ಸಹ ಊಹಿಸಬಹುದಾಗಿದೆ. ಇದು ಸಿಡಿಗಂಬ ಎಂಬ ಅಭಿಪ್ರಾಯವೂ ರೂಢಿಯಲ್ಲಿದೆ.



**ಕಂಬವು ಮೊದಲು ಇದ್ದ ರೀತಿ**



ಕಂಬದ ಇಂದಿನ ನೋಟಗಳು

ಈ ಕಂಬದ ಒಟ್ಟು ಉದ್ದ ೭ ಅಡಿ. ೨ ಇಂಚು ಇರುತ್ತದೆ. ಕಂಬದ ಕೆಳಭಾಗದಲ್ಲಿ (ನೆಲದ ಮೇಲೆ) ೮" ಉದ್ದವಿದ್ದು ಸುತ್ತಳತೆ ೯ ಅಡಿ ೧೦ ಅಂಗುಲವಿರುತ್ತದೆ. ಇದರ ಮೇಲೆ ಸುತ್ತಲೂ ೪ ದಿಕ್ಕುಗಳಲ್ಲಿ ದೀವಟಿಗೆ (ತ್ರಿಕೋನಾಕಾರದ) ಗೂಡುಗಳಾಗಿ ಸುಟ್ಟ ಇಟ್ಟಿಗೆ ಮತ್ತು ಸಿಮೆಂಟಿನಿಂದ ಮಾರ್ಪಡಿಸಿರುತ್ತಾರೆ. ಕಂಬದ ಮೇಲೆ ತುದಿಯಲ್ಲಿ ೧ ಅಡಿ ಉದ್ದ ೬ ಅಂಗುಲ ಗೋಳಾಕಾರವಾಗಿರುತ್ತದೆ. ಹಾಗು ಇದರ ಸುತ್ತಳತೆ ೧.೭ ಅಡಿಯಾಗಿರುತ್ತದೆ. ಮೇಲೆ ಗೋಳಾಕಾರ ಭಾಗದಿಂದ ಕೆಳಗಡೆ ದೀಪಗಳಿರುವ ಭಾಗದವರೆಗೆ ಸುತ್ತಳತೆ ೪ ಅಡಿ ೧ ಇಂಚು ಆಗಿದ್ದು ಇದು ಚಚ್ಚೌಕವಾಗಿದ್ದು ಕೆಂಪು (ಮೆರಿನ್) ಮತ್ತು ಬಿಳಿ ಬಣ್ಣದ ಪಟ್ಟೆಗಳಿಂದ ಕಂಬ ಪೂರ್ತಿ ಕಾಣುತ್ತದೆ. ಇಲ್ಲಿ ಎಲ್ಲಿಯೂ ಶಾಸನ ಕಂಡುಬರುವುದಿಲ್ಲ.

ಒಟ್ಟಿನಲ್ಲಿ ಬೆಂಗಳೂರು ನಗರದ ಹೃದಯಭಾಗದಲ್ಲಿದ್ದ ಅತ್ಯಂತ ಬೆಲೆ ಬಾಳುವ ಈ ಜಾಗವು ಸುಮಾರು ಇನ್ನೂರು ವರ್ಷಗಳ ಅವಧಿಯಲ್ಲಿ ರೂಪಾಂತರಗೊಂಡು ಕಡೆಗೆ ಒಂದು ವಾಣಿಜ್ಯ ಸಂಕೀರ್ಣವಾಗಿ ತಲೆ ಎತ್ತಿದ ಕತೆ ವಿಚಿತ್ರವಾದರೂ ಬೆಂಗಳೂರಿನ ನಗರೀಕರಣದ ಪ್ರಕ್ರಿಯೆಯ ಒಂದು ಸ್ವಾರಸ್ಯಕರ ಭಾಗವಾಗಿದೆ. ಇತ್ತೀಚಿನವರೆವಿಗೂ ಹನುಮಂತಪುರ ಎಂಬ ಹೆಸರಿನ ಗ್ರಾಮಕ್ಕೆ ಸೇರಿದ್ದ ೭ ಎಕರೆ ೧೧ ಗುಂಟೆ ಜಮೀನು ಹೇಗೆ ಹಂತ ಹಂತವಾಗಿ ಛಿದ್ರಗೊಂಡು ಬೆಂಗಳೂರು ನಗರದ ಬೆಳವಣಿಗೆಯಲ್ಲಿ ಲೀನವಾಗಿ ಹೋದ ಕತೆ ಕುತೂಹಲಕಾರಿಯಾದುದು. ಕೆಳದಿರಾಜ್ಯದ ದೊರೆಗಳು ಯಾತ್ರೆಗೆ ಹೋಗುವಾಗ ನಿರ್ಮಿಸಿಕೊಂಡಿದ್ದ ಈ ಸ್ಥಳ ಅವರ ಧಾರ್ಮಿಕ ವಿಧಿಗಳು ಹಾಗೂ ವಿಹಾರಕ್ಕೆಂದು ಮೀಸಲಾಗಿದ್ದಿದು ಕಡೆಗೆ ಆ ರಾಜ ವಂಶ ನಿರ್ನಾಮ ಆದಮೇಲೆ ವೀರಶೈವ ಗುರುಗಳ ಅಧೀನಕ್ಕೆ ಬಂದು ಒಂದು ಮಠವೆಂಬ ರೂಪವನ್ನು ಪಡೆದುಕೊಂಡದ್ದು, ಅನಂತರ ಈ ಗುರು ಪರಂಪರೆಯು ಶಿಥಿಲವಾಗಿ ಅದು ಪರಭಾರೆಯಾಗಬೇಕಾದ ಪ್ರಸಂಗವು ಆಡಳಿತದ ನಿರ್ಲಕ್ಷವನ್ನು ಸೂಕ್ತವಾದ ಕಾನೂನುಗಳ ಅಭಾವವನ್ನು ಎತ್ತಿ ತೋರಿಸುತ್ತದೆ. ಶ್ರೀ ರಾಮಲಿಂಗೇಶ್ವರ ಮಠ, ಗೊಟ್ಟೂರಯ್ಯನ ಮಠ, ಉಯ್ಯಾಲೆ ಛತ್ರ ಮೊದಲಾದ ಹೆಸರುಗಳಿಂದ ಬೆಳೆದುಬಂದ ಈ ಪ್ರಮುಖ ಆಸ್ತಿಯು ಹಂತ ಹಂತವಾಗಿ ಆಡಳಿತದ ಅದಕ್ಷತೆಯಿಂದಲೂ, ಆಸಕ್ತರ ಕುತಂತ್ರದಿಂದಲೂ ಕೈತಪ್ಪಿ ಹೋದ ಕತೆ ನಿಜಕ್ಕೂ ಬೋಧಪ್ರದವಾದುದು. ಈ ಪ್ರಕ್ರಿಯೆಯ ಅಧ್ಯಯನವು ರೂಢಿಯಲ್ಲಿದ್ದ ಭೂವ್ಯವಸ್ಥೆ ಮತ್ತು ಮುಜರಾಯಿ ಇಲಾಖೆಯ ಆಡಳಿತ ವೈಖರಿಯ ಒಳನೋಟವನ್ನು ನೀಡುತ್ತದೆ. ಈಗಿನ ಗಾಂಧಿನಗರದ ಅದರಲ್ಲೂ ಮೆಜೆಸ್ಟಿಕ್ ವೃತ್ತದ ಅತ್ಯಧಿಕ ಬೆಲೆಯುಳ್ಳ ಈ ಸ್ಥಿರಾಸ್ತಿಯನ್ನು ಕೆಲವು ಸ್ವಾರ್ಥಿಗಳು ಕಬಳಿಸಿದ ಸಂದರ್ಭದಲ್ಲಿ ಧಾರ್ಮಿಕ ಸಂಸ್ಥೆಗಳು, ಸರ್ಕಾರಿ ಇಲಾಖೆಗಳು ನಿರ್ಲಕ್ಷ ಭಾವನೆಯಿಂದಲೂ ಅಥವಾ ಪಟ್ಟಭದ್ರ ಹಿತಾಸಕ್ತಿಗೆ ಮಣಿದು ಕಾನೂನು ಉಲ್ಲಂಘಿಸಿ ಈ ಬೆಲೆ ಬಾಳುವ ಸ್ವತ್ತನ್ನು ಕಾಪಾಡಿಕೊಳ್ಳಲು ವಿಫಲರಾದರೋ ಎಂಬುದನ್ನು ಊಹಿಸಿಕೊಳ್ಳಬಹುದು. ಈ ಸುಂದರವಾದ ಉದ್ಯಾನ ನಗರಿಯಲ್ಲಿ ಇಂತಹ ಅನೇಕ ಪ್ರಕರಣಗಳು ನಡೆದಿದ್ದು, ಇಂದಿಗೂ ನಡೆಯುತ್ತಿದ್ದು ಸರ್ಕಾರದ ಅದಕ್ಷತೆ ಮತ್ತು ಭ್ರಷ್ಟಾಚಾರ ಮತ್ತು ಭೂಗಳ್ಳರ ಕೃತಿಮ ವ್ಯವಹಾರ ಜಾಲಕ್ಕೆ ಬಲಿಯಾಗಿ ಎಷ್ಟೋ ಅಮೂಲ್ಯವಾದ ನಿವೇಶನಗಳು, ವಿಸ್ತಾರವಾದ ಸ್ವತ್ತುಗಳು ಬಲಿಪಶುಗಳಾಗಿ ಸರ್ಕಾರಕ್ಕೆ, ಸಂಬಂಧಪಟ್ಟವರಿಗೆ ಅಪಾರವಾದ ಹಾನಿಯನ್ನುಂಟು ಮಾಡಿವೆ. ಸರ್ಕಾರದ ಮುಜರಾಯಿ ಇಲಾಖೆಯ ಕಡತಗಳಲ್ಲೂ ಭೂಮಾಪನಾ ಇಲಾಖೆ ಮತ್ತು ನಗರಸಭೆಯ ಪುರಾತನ ದಾಖಲೆಗಳನ್ನು ಪರಿಶೀಲಿಸಿದರೆ ಇಂತಹ ಅಸಂಖ್ಯಾತ ಪ್ರಸಂಗಗಳು ಬೆಳಕಿಗೆ ಬಂದು ನಗರೀಕರಣದ ಇತಿಹಾಸವನ್ನು ಶ್ರೀಮಂತಗೊಳಿಸುವುದರಲ್ಲಿ ಸಂದೇಹವಿಲ್ಲ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. [illegible] ಗ್ರಾಮದ ನಕ್ಷೆ, ಭೂಮಾಪನ ಇಲಾಖೆ, ಬೆಂಗಳೂರು.

೨. ಅದೇ ಪು. ೧೦೬, ಡಾ. [illegible]ರಪ್ಪ, ೨೦೦೧, ಬೆಂಗಳೂರು ನಗರದ ವೀರಶೈವ ಮಠಗಳು ಒಂದು ಸಾಂಸ್ಕೃತಿಕ ಅಧ್ಯಯನ, ಅಖಿಲ ಭಾರತ ಶರಣ ಸಾಹಿತ್ಯ ಪರಿಷತ್ತು, ಬೆಂಗಳೂರು, ೨೦೦೧.
ಹೇಳಿಕೆ : ಶ್ರೀ ವೈ. ರೂಪ್ಲ ನಾಯಕ್, ಐ.ಎ.ಎಸ್., (ನಿವೃತ್ತಿ) ವಯಸ್ಸು ಸುಮಾರು ೮೬.

೩. ಅದೇ ಪು. ೧೦೬, ಹಾಗೂ ಶ್ರೀ ವೈ. ರೂಪ್ಲ ನಾಯಕ್, ಐ.ಎ.ಎಸ್., (ನಿವೃತ್ತಿ) ವಯಸ್ಸು ಸುಮಾರು ೮೬.

೪. ಅದೇ .ಪು. ೧೧೫.

೫. ಅದೇ ಪು. ೧೨೧.

೬. ಅದೇ ಪು. ೧೩೦.

೭. ಅದೇ ಪು. ೧೨೦.

೮. ಮುಜರಾಯಿ ಇಲಾಖೆಯ ದಾಖಲೆಗಳು, ಹೇಳಿಕೆ : ಶ್ರೀ ಸುಬ್ಬಣ್ಣ, ವಯಸ್ಸು ೭೦, ಅಣ್ಣಮ್ಮದೇವಿಯ ಕಾರ್ಯಕರ್ತರು.

೯. ಅದೇ ಪು. ೧೨೦.

೧೦. ಅದೇ ಪು. ೧೨೨.

೧೧. ಅದೇ ಪು. ೧೨೨.

೧೨. ಅದೇ ಪು. ೧೨೨.

೧೩. ಅದೇ ಪು. ೧೨೨.

೧೪. ಅದೇ ಪು. ೧೨೩.

೧೫. ಮುಜರಾಯಿ ಇಲಾಖೆಯ ಪತ್ರ ವ್ಯವಹಾರದ ನಕಲಿನ ದಾಖಲೆಗಳು.

೧೬. ಮುಜರಾಯಿ ಇಲಾಖೆಗೆ ಬರೆದಿರುವ ದಿನಾಂಕ ೯-೮-೧೯೧೧ರ ಪತ್ರದ ನಕಲಿನ ವಿವರಗಳು.

೧೭. ನ್ಯಾಯಾಲಯದ ದಾವೆ ಸಂಖ್ಯೆ ೮೦೫/೧೯೬೭ರ ನಕಲು.


### ಇತರ ಆಕರಗಳು


೧. ಡಾ. ಬ.ನ. ಸುಂದರರಾವ್., **ಬೆಂಗಳೂರಿನ ಇತಿಹಾಸ,** ಬೆಂಗಳೂರು ೧೯೮೫.

೨. ಕೆ.ಹೆಚ್. ಕೃಷ್ಣರಾವ್, ೧೯೩೧, **ಸಿಟಿ ಆಫ್ ಬೆಂಗಳೂರು ಮುನಿಸಿಪಲ್ ಹ್ಯಾಂಡ್ ಬುಕ್,** ಬೆಂಗಳೂರು.

೩. ಕಾರ್ಪೊರೇಷನ್ ಆಫ್ ದಿ ಸಿಟಿ ಆಫ್ ಬೆಂಗಳೂರು, ಬೆಂಗಳೂರು ಆನ್ ದಿ ಮೂವ್ ಸಿವಿಕ್ ಅಫೇರ್ಸ್ (ಡಿಸೆಂಬರ್ ೧೯೭೬ ಮಂತಲಿ ಜರ್ನಲ್ ವಾಲ್ಯೂಂ ೨೪ ಸಂಖ್ಯೆ ೫)

೪. ಟಿ.ಪಿ. ಇಸ್ಸಾರ್, **ದಿ ಸಿಟಿ ಬ್ಯೂಟಿಫುಲ್,** ಬೆಂಗಳೂರು ಅರ್ಬನ್ ಆರ್ಟ್ಸ್ ಕಮೀಷನ್, ೧೯೮೮.

೫. ಕರ್ನಾಟಕ ಪತ್ರಾಗಾರ ಇಲಾಖೆ, ಬೆಂಗಳೂರು.

೬. ಭೂ ಮಾಪನ ಇಲಾಖೆ, ಬೆಂಗಳೂರು.

೭. ಬೆಂಗಳೂರು ಮಹಾನಗರ ಪಾಲಿಕೆ, ಬೆಂಗಳೂರು.

೮. ಮುಜರಾಯಿ ಇಲಾಖೆ, ಬೆಂಗಳೂರು.

೯. **'ಅನುಭವ ಮಾರ್ಗ'.,** ೧೯೯೭, (ಸಂ.) ವೈ. ರಾಮಚಂದ್ರ, ಮಾಜಿ ಮೇಯರ್, ಬೆಂಗಳೂರು ಮಹಾನಗರ ಪಾಲಿಕೆ, ಪ್ರಕಟಣೆ : ಶ್ರೀ ವೈ. ರಾಮಚಂದ್ರ ಎಜುಕೇಷನಲ್ ಟ್ರಸ್ಟ್, ಬೆಂಗಳೂರು.

ಡಾ. ಅಮರೇಶ ಯತಗಲ್*

# ಸುರಪುರದ ನಾಲ್ವಡಿ ವೆಂಕಟಪ್ಪನಾಯಕನ ಅಂತ್ಯ

ಗುಲಬರ್ಗಾ ಜಿಲ್ಲೆಯ ಸುರಪುರ ಸಂಸ್ಥಾನವು ಕ್ರಿ.ಶ. ೧೬೫೬ರಲ್ಲಿ ಸ್ಥಾಪಿಸಲ್ಪಟಿತ್ತು. ಇಲ್ಲಿ ೧೩ ಜನ ನಾಯಕ ಅರಸರು ಆಳ್ವಿಕೆಯನ್ನು ಮಾಡಿದ್ದಾರೆ. ಅವರಲ್ಲಿ ಪ್ರಸಿದ್ಧ ಅರಸ ನಾಲ್ವಡಿ ವೆಂಕಟಪ್ಪನಾಯಕ. ಈತ ಕ್ರಿ.ಶ. ೧೮೪೩ ರಿಂದ ೧೮೫೮ ರವರೆಗೆ ಆಳ್ವಿಕೆ ಮಾಡಿದ್ದಾನೆ. ಕ್ರಿ.ಶ. ೧೮೫೭ರ ಸಂದರ್ಭದಲ್ಲಿ ಭಾರತದಲ್ಲಿ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಗಾಳಿ ಜೋರಾಗಿ ಬೀಸುತ್ತಿತ್ತು. ಆಗ ದಕ್ಷಿಣ ಭಾರತದ ರಾಜರನ್ನೆಲ್ಲ ಒಗ್ಗೂಡಿಸಿ, ಬ್ರಿಟೀಷರನ್ನು ಕಾಲ್ತೆಗೆಸಬೇಕೆಂಬ ಮಹಾದಾಸೆಯನ್ನು ವೆಂಕಟಪ್ಪ ನಾಯಕ ಹೊಂದಿದ್ದನು. ಜಮಖಂಡಿ, ಆನೆಗೊಂದಿ, ನರಗುಂದ, ಹುನಗುಂದ, ಶಿರಹಟ್ಟಿ, ಅಕ್ಕಲಕೋಟೆ, ಕೊಲ್ಲಾಪುರ, ಬಳ್ಳಾರಿ, ಮೀರಜ್, ಜತ್ತು, ಮುಧೋಳ, ಧಾರವಾಡ, ಕಲಾದಗಿ, ರಾಯಚೂರು ಮುಂತಾದ ಭಾಗದ ಅರಸರು ವೆಂಕಟಪ್ಪ ನಾಯಕನನ್ನು ನೇತೃತ್ವ ವಹಿಸಿಕೊಳ್ಳಲು ಕೋರಿಕೊಂಡರು. ಆಗ ವೆಂಕಟಪ್ಪ ನಾಯಕ ತನ್ನ ಅಧೀನದ ಸೈನಿಕರಿಗೆ ವ್ಯವಸ್ಥಿತವಾದ ತರಬೇತಿಯನ್ನು ನೀಡಿದನಲ್ಲದೆ, ತನ್ನ ಸೈನ್ಯಕ್ಕೆ ಶೂರ ಬೇಡರನ್ನು, ಅರಬ್‌ರನ್ನು, ರೋಹಿಲ್‌ರನ್ನು ಸೇರಿಸಿಕೊಂಡನು. ಸುರಪುರ ಸ್ವಾತಂತ್ರ್ಯ ಸಂಗ್ರಾಮದ ಕೇಂದ್ರ ತಾಣವಾಯಿತು. ಈ ಸಂಗತಿ ಅರಿತ ಬ್ರಿಟೀಷರು, ವೆಂಕಟಪ್ಪ ನಾಯುಕನನ್ನು ಸದೆಬಡೆಯುಲು ಆಲೋಚಿಸಿದರು. ಸುರಪುರವನ್ನು ಆಕ್ರಮಿಸಬೇಕೆಂಬ ತಂತ್ರಗಳನ್ನು ಹೂಡಲು ಪ್ರಯತ್ನಿಸಹತ್ತಿದರು. ಈತನ ಚಲನವಲನಗಳನ್ನು ಸೂಕ್ಷ್ಮವಾಗಿ ಗಮನಿಸಹತ್ತಿದರು. ಆದರೆ ತಕ್ಷಣವೇ ಅದು ಫಲಿಸಲಿಲ್ಲ.



ವೆಂಕಟಪ್ಪನಾಯಕನ ಅನೇಕ ಕಾರ್ಯತಂತ್ರಗಳನ್ನು ಗಮನಿಸಿದ ಬ್ರಿಟೀಷರು, ಬೆಳಗಾವಿಯ ೨೯ನೇ ನಂಬರಿನ ದಳದಲ್ಲಿ ಕ್ರಾಂತಿಯ ಕಿಡಿಯನ್ನು ಹಚ್ಚಿ ಸೈನ್ಯದಲ್ಲಿ ದಂಗೆಯನ್ನು ಎಬ್ಬಿಸಲು ವೆಂಕಟಪ್ಪನಾಯಕ ಮಹಿಪಾಲಸಿಂಗನೆಂಬ ಗೂಢಾಚಾರನನ್ನು ಕಳುಹಿಸಿದಾಗ, ಈತನನ್ನು ಗುರುತಿಸಿದ ಬ್ರಿಟೀಷರು ಬಂಧಿಸಿ, ವಿಚಾರಣೆಗೊಳಪಡಿಸಿದಾಗ, ಇದಕ್ಕೆ ವೆಂಕಟಪ್ಪನಾಯಕನೇ ಕಾರಣವೆಂದು ಗೊತ್ತಾಯಿತು[1]. ಫೆಬ್ರವರಿ, ೭, ೧೮೫೮ ರಂದು ವೆಂಕಟಪ್ಪನಾಯಕನ ಮೇಲೆ ಯುದ್ಧ ಸಾರಿದರು. ಕ್ಯಾಪ್ಟನ್ ವಿಂಡ್‌ಹ್ಯಾಂ ಎಂಬ ಬ್ರಿಟಿಷ್ ಸೈನ್ಯದ ಕ್ಯಾಪ್ಟನ್ ಸುರಪುರದಿಂದ ೫ ಕಿ.ಮೀ. ಅಂತರದಲ್ಲಿರುವ ರುಕ್ಮಾಪುರ ದಿಬ್ಬದ ಮೇಲೆ ಶಿಬಿರವನ್ನು ಹಾಕಿದನು. ನಂತರ ಹೆಚ್ಚಿನ ಪ್ರಮಾಣದ ಬ್ರಿಟೀಷ್ ಸೈನ್ಯ ಬಂದು ಅವರನ್ನು ಸೇರಿಕೊಂಡಿತು. ಸುರಪುರ ಸೈನ್ಯ ಬ್ರಿಟೀಷ್ ಸೈನ್ಯದ ಮೇಲೆ ದಾಳಿ ಮಾಡಿತು. ಬ್ರಿಟೀಷ್ ಸೈನಿಕರನೇಕರು ಗಾಯಗೊಂಡರು. ಸುದ್ದಿ ಬ್ರಿಟೀಷ್ ಅಧಿಕಾರಿಗಳಿಗೆ ತಿಳಿಯಿತು.

* ಅಧ್ಯಾಪಕ, ಸ.ಪ.ಪೂ. ಕಾಲೇಜು, ಲಿಂಗಸೂಗೂರು, ರಾಯಚೂರು ಜಿಲ್ಲೆ.

ಮರುದಿನವೇ ಬ್ರಿಟೀಷರ ಮೇಜರ್ ಹ್ಯಾಗ್ಸನ ನೇತೃತ್ವದ ಸೈನ್ಯ ಪಲಾಯನ್ಮುಖ ಸೈನ್ಯಕ್ಕೆ ಬಂದು ಸೇರಿಕೊಂಡಿತು. ಆಗ ಸೇನಾಪತಿ ಕ್ಯಾಪ್ಟನ್ ಜಾರ್ಜ್ ನ್ಯೂಬರಿ ಸುರಪುರದ ಮೇಲೆ ದಾಳಿ ಮಾಡಿದ. ಆದರೆ ವೆಂಕಟಪ್ಪ ನಾಯಕನ ಹೊಡೆತಕ್ಕೆ ಸಿಕ್ಕು ನೆಲಕ್ಕುರುಳಿದ. ಈತನ ಸಮಾಧಿಯು ರುಕ್ಮಾಪುರದ ಹತ್ತಿರ ಇದೆ.

ಆಗ ಬ್ರಿಟೀಷರು ಮದ್ರಾಸ್ ಹಾಗೂ ಲಿಂಗಸೂಗೂರುಗಳಲ್ಲಿ ಬೀಡುಬಿಟ್ಟಿದ್ದ ಸೈನ್ಯವನ್ನು ಕರೆಸಿಕೊಂಡು ಸುರಪುರದ ಮೇಲೆ ದಾಳಿ ಮಾಡಿದರು. ಸುರಪುರದ ಕೆಲ ಅತೃಪ್ತ ಅಧಿಕಾರಿಗಳು, ಬ್ರಿಟೀಷರ ಹಣದ ಆಸೆಗೆ ಬಲಿಯಾಗಿ, ವೆಂಕಟಪ್ಪನಾಯಕನಿಗೆ ಮೋಸ ಮಾಡಿದರು. ಗುಪ್ತಮಾರ್ಗಗಳ ಮಾಹಿತಿ ನೀಡಿದರು. ಸುರಪುರ ಸಂಪೂರ್ಣ ಬ್ರಿಟಿಷರ ವಶವಾಯಿತು.

ವೆಂಕಟಪ್ಪನಾಯಕ ಹೈದರಾಬಾದಿಗೆ ತೆರಳಿದನು. ಸುರಪುರ ಸೈನ್ಯವನ್ನು ಇನ್ನಷ್ಟು ಸಂಘಟಿಸಬೇಕು. ಬ್ರಿಟೀಷರನ್ನು ಕಾಲ್ತೆಗೆಸಬೇಕೆಂಬ ಛಲದಿಂದ ಅರಬ್, ರೋಹಿಲರನ್ನು ಸೈನ್ಯಕ್ಕೆ ಭರ್ತಿ ಮಾಡಿಕೊಳ್ಳುತ್ತಿದ್ದ. ಇದನ್ನು ಗಮನಿಸಿದ ಹೈದರಾಬಾದ್ ನಿಜಾಮನ ಮಂತ್ರಿ ಸಾಲಾರಜಂಗ್ ಹಾಗೂ ವನಪರ್ತಿಯ ಅರಸ ರಾಮೇಶ್ವರರಾವ್ ಕೂಡಲೇ ಈತನನ್ನು ಬಂಧಿಸಿ, ಬ್ರಿಟೀಷ್ ರೆಸಿಡೆಂಟನಿಗೆ ಒಪ್ಪಿಸಿದರು. ಈತನನ್ನು ಸಿಕಂದ್ರಾಬಾದ್ ಜೈಲಿನಲ್ಲಿಡಲಾಯಿತು. ಆಗ ಮೆಡೋಸ್ ಟೇಲರ್‌ನು ಭೇಟಿಯಾದಾಗ ವೆಂಕಟಪ್ಪನಾಯಕನು ಆಡಿದ ಮಾತುಗಳು ಆತನ ಧೈರ್ಯೋತ್ಸಾಹಕ್ಕೆ ಹಿಡಿದ ಕನ್ನಡಿಯಂತಿವೆ. ಟೇಲರ್‌ನೇ ಹೇಳುವಂತೆ "ಒಂದು ವೇಳೆ ರಾಜನು ಅಪೇಕ್ಷೆಪಟ್ಟರೆ, ಸ್ವತಃ ರೆಸಿಡೆಂಟನು ಆತನನ್ನು ಭೇಟಿಯಾಗಲು ಬರುವನು" ಎಂದು ತಿಳಿಸಿದಾಗ ವೆಂಕಟಪ್ಪನಾಯಕನು ಕೊಟ್ಟ ಉತ್ತರ "ನಾನು ನನ್ನ ಜೀವವನ್ನುಳಿಸಲು ರೆಸಿಡೆಂಟನನ್ನು ಬೇಡಿಕೊಳ್ಳಬೇಕೆಂಬ ಅಪೇಕ್ಷೆ ಆತನಿಗಿದ್ದುದಾದರೆ, ಅಂದೆಂದಿಗೂ ಆಗದ ಮಾತು. ಬ್ರಿಟೀಷರು ನನ್ನನ್ನು ಉಳಿಸಿದರೆ ಅವರಿಗೆ ಋಣಿಯಾಗಿರುವೆ. ಆದರೆ ಹೇಡಿಯಂತೆ ಜೀವವನ್ನುಳಿಸಲು ಅವರನ್ನು ಬೇಡಿಕೊಳ್ಳಲಾರೆ ಮತ್ತು ನನ್ನವರೊಡನೆ ವಿಶ್ವಾಸಘಾತ ಮಾಡಲಾರೆ" ಟೇಲರ್ ೨ನೇ ಸಾರಿ ಭೇಟಿಯಾದಾಗ ವೆಂಕಟಪ್ಪನಾಯಕನು "I would rather die than be sent over the black water or shut up in a fortress always. Suppose they sentence me to that I could not bear it, and the meanest Beyder could not live in if he were imprisoned and shall I, a Raja ? I Shall not tremble when they tie me up to a gun he answered gravely....only one thing do not let them hang me. I have done nothing to be hanged like a robber. Tell the resident that is all the favour I ask".

ಬ್ರಿಟೀಷ್ ಬ್ರಿಗೇಡಿಯರನ ನೇತೃತ್ವದ ಮಿಲಿಟರಿ ಅಧಿಕಾರಿಗಳ ನ್ಯಾಯಾಲಯದಲ್ಲಿ ವಿಚಾರಣೆಯಾಯಿತು; ಮರಣದಂಡನೆಯನ್ನು ವಿಧಿಸಿತು. ಕೊನೆಗೆ ರೆಸಿಡೆಂಟ್ ಡ್ಯಾವಿಡ್ಸನ್‌ನ ಕೋರಿಕೆಯಂತೆ ಆಜನ್ಮ ಕಾರಾವಾಸಕ್ಕೆ ಶಿಕ್ಷೆಯನ್ನು ಬದಲಿಸಿದನು. ಗೌರ್ನರ್ ಜನರಲ್ ೪ ವರ್ಷ ಸೆರೆಮನೆವಾಸವೆಂದು ನಿಗದಿಗೊಳಿಸಿದನು.

ಬ್ರಿಟೀಷ್ ಸೈನಿಕರ ಸರ್ಪಗಾವಲು, ಲೆಫ್ಟಿನೆಂಟ್ ಓಕ್-ಟಾಟ್‌ನ ನೇತೃತ್ವದಲ್ಲಿ ಮದ್ರಾಸ್ ಹತ್ತಿರದ ಚಂಗಲ್‌ಪೇಟೆಗೆ ವೆಂಕಟಪ್ಪನಾಯಕನನ್ನು ಕರೆದುಕೊಂಡು ಹೋಗುವಾಗ, ಸಿಕಂದ್ರಾಬಾದ್‌ನಿಂದ ಹುಸೇನಸಾಗರದಿಂದ ೬ ಮೈಲು ದೂರದಲ್ಲಿರುವ ಅಂಬರಪೇಟೆಯಲ್ಲಿ ಬಿಡಾರ ಹೂಡಿದರು. ಬಿಡಾರದಲ್ಲಿ ಲೆಫ್ಟಿನೆಂಟ್ ಓಕ್-ಟಾಟ್ ರಿವಾಲ್ವರ್ ಅಲ್ಲಿಯೇ ಇಟ್ಟು ಮುಖ ತೊಳೆಯಲು ಹೋದನು. ಆತ ಮರಳಿ ಬರುವಷ್ಟರಲ್ಲಿಯೇ ವೆಂಕಟಪ್ಪನಾಯಕ ರಕ್ತದ ಮಡುವಿನಲ್ಲಿ ಬಿದ್ದಿದ್ದ. ಗುಂಡು ಆತನ ಹೊಟ್ಟೆಯಿಂದ-ಬೆನ್ನಿನೊಳಗಿಂದ ಹೊರ ಬಂದಿತ್ತು. ಸ್ವತಃ ಅರಸನೇ ಆತ್ಮಹತ್ಯೆ ಮಾಡಿಕೊಂಡ ಎಂದು ಹೇಳಲಾಯಿತು.

ಬ್ರಿಟೀಷ್ ದಾಖಲೆಗಳು, ಹೈದರಾಬಾದ್‌ನ ಇತಿಹಾಸಕಾರರು, ಸ್ಥಳೀಯ ಕೆಲವು ಸಂಶೋಧಕರು ತಮ್ಮ ಕೃತಿಗಳಲ್ಲಿ ವೆಂಕಟಪ್ಪನಾಯಕ ಆತ್ಮಹತ್ಯೆ ಮಾಡಿಕೊಂಡನೆಂದೇ ಬರೆಯುತ್ತಾರೆ.

ಕೆಲವು ಇತಿಹಾಸತಜ್ಞರು, ಆತ್ಮಹತ್ಯೆಯ ಕುರಿತು ಸಂಶಯವನ್ನು ವ್ಯಕ್ತಪಡಿಸಿದ್ದಾರೆ. ಆದರೆ ಅದಕ್ಕೆ ಯಾವುದೇ ರೀತಿಯ ಆಧಾರಗಳನ್ನು ನೀಡಿಲ್ಲ. ಜಯತೀರ್ಥ ರಾಜಪುರೋಹಿತರು ಅಭಿಪ್ರಾಯಪಡುವಂತೆ "ಆ ದಿನ ತಂಗುವ ಸ್ಥಳದಲ್ಲಿ ಆಂಗ್ಲ ಅಧಿಕಾರಿಯು ತನ್ನ ರಿವಾಲ್ವರ್ ಇದ್ದ ನಡುಪಟ್ಟಿಯನ್ನು ಬಿಚ್ಚಿ ರಾಜನಿದ್ದ ಡೇರೆಯಲ್ಲಿ ಕುರ್ಚಿಗೆ ತಗುಲಿಸಿ ಹೊರಗೆ ಹೋದ. ಆತ ಮುಖ ತೊಳೆದುಕೊಳ್ಳುವಾಗ ಡೇರೆಯಿಂದ ಗುಂಡು ಹಾರಿದ ಶಬ್ದ ಕೇಳಿ ಬಂತು. ಸರದಾರ ಓಡಿ ಬಂದು ನೋಡಿದಾಗ ರಾಜ ಸತ್ತು ಬಿದ್ದಿದ್ದ. ಗುಂಡು ರಾಜನ ಹೊಟ್ಟೆಯಲ್ಲಿ ಹೊಕ್ಕು ಬೆನ್ನಿಗೆ ತೂರಿ ಹೋಗಿತ್ತು. ಇದು ಆಕಸ್ಮಿಕವೋ ? ಆತ್ಮಹತ್ಯೆಯೋ ? ಅಥವಾ ಕೊಲೆಯೋ ? ಕೊನೆಗೂ ಸ್ಪಷ್ಟವಾಗಲಿಲ್ಲ. ಹಾಗೆಯೇ ಡಾ. ಎಲ್.ಎಸ್. ಶೇಷಗಿರಿರಾವ್ ಅವರು "ಮದ್ರಾಸ್ ಅಧಿಪತ್ಯದ ದುರ್ಗವೊಂದಕ್ಕೆ ಆತನನ್ನು ಬಂಧಿಸಿ ಕರೆದೊಯ್ಯುತ್ತಿದ್ದಾಗ ಗುಂಡೇಟಿನಿಂದ ಪ್ರಾಣಬಿಟ್ಟ ಇನ್ನೂ ೨೩ ಹರೆಯದ ಧೀರನಾಯಕ ವೆಂಕಟಪ್ಪನಾಯಕನ

ಮರಣ ಆತ್ಮಹತ್ಯೆಯೋ, ಕೊಲೆಯೋ ಎನ್ನುವುದು ಇಂದಿಗೂ ನಿಗೂಢವಾಗಿದೆ"[೭] ಎಂದಿದ್ದಾರೆ. ಆದರೆ ನನಗೆ ಮೆಡೋಸ್ ಟೇಲರ್‌ನ ಕೃತಿಯಲ್ಲಿಯ ಕೆಲವು ಹೇಳಿಕೆಗಳು ಹಾಗೂ ಕ್ಷೇತ್ರಕಾರ್ಯದ ಮೂಲಕ ಸಂಗ್ರಹಿಸಿದ ಜನಪದ ಸಾಹಿತ್ಯದ ಮೂಲಕ ವೆಂಕಟಪ್ಪನಾಯಕ ಆತ್ಮಹತ್ಯೆ ಮಾಡಿಕೊಂಡಿಲ್ಲ. ಆತನ ಕೊಲೆಯಾಗಿದೆ ಎಂಬುದಕ್ಕೆ ಪುಷ್ಟಿ ನೀಡುವ ಅಂಶಗಳು ಲಭ್ಯವಾಗಿವೆ.

ವೆಂಕಟಪ್ಪನಾಯಕನ ಸಾವಿನ ಕುರಿತಾಗಿ, ಮೆಡೋಸ್ ಟೇಲರ್‌ನು "Was the act intentional ? I think not. He had a trick always of taking up and examining everything lying near him, more especially if it were to him. More especially if it were new to him; and he had this habit from childhood, and I had often checked him for it. I do not think he could ever have seen a revolver and such a weapon would be too tempting to escape notice; he would be sure to snap it, or meddle with the lock, and the pistol may have exploded. Without his intending it at all. No one was with him - no one saw him, so that only conjectures could be raised about the event; but I who knew him well do not believe it was suicide"[8].



ವೆಂಕಟಪ್ಪನಾಯಕನು ಕುತೂಹಲದಿಂದ ರಿವಾಲ್ವರನ್ನು ತಿರುಗಿಸುತ್ತಾ ಕುದುರೆ ಏಳೆದುಕೊಂಡ, ಗುಂಡು ಹಾರಿತು, ಅಸುನೀಗಿದ ಎಂಬ ಮಾತು ಸತ್ಯಕ್ಕೆ ದೂರವಾದುದು. ಸುರಪುರ ಸಂಸ್ಥಾನದ ಸಂಸ್ಕಾರದಲ್ಲಿ ಬೆಳೆದ ಅರಸನಿಗೆ ರಿವಾಲ್ವರ್ ಪರಿಚಯವಿರಲಿಲ್ಲವೆ ? ಎಂಬ ಪ್ರಶ್ನೆ ಕಾಡುವುದು ಸಹಜ. ಮೆಡೋಸ್ ಟೇಲರ್ ವೆಂಕಟಪ್ಪನಾಯಕನ ಶಿಕ್ಷಣದ ಜವಾಬ್ದಾರಿಯನ್ನು ಹೊತ್ತು, ಡಾ. ಸೆಲ್ಲರ್ಸ್, ರಾಮರಾವ್ ಮುಂತಾದ ವಿದ್ವಾಂಸರಿಂದ ಶಿಕ್ಷಣದ ವ್ಯವಸ್ಥೆ ಕಲ್ಪಿಸಿದ. ಆ ಸಂದರ್ಭದಲ್ಲಿ ಕುದುರೆ ಸವಾರಿ, ನಾವಿ ಪ್ರಯಾಣ, ಗರಡಿ, ಕತ್ತಿವರಸೆ, ಬಂದೂಕು ವಿದ್ಯೆ, ಯುದ್ಧಕಲೆ ಮುಂತಾದವನ್ನು ಕಲಿಸಲಾಗುತ್ತಿತ್ತು[೯].

ಅಲ್ಲದೆ ಜನಪದ ಸಾಹಿತ್ಯ ಈತನ ಶಿಕ್ಷಣ ಕುರಿತಾಗಿ–

**ವೆಂಕಟಪ್ಪನಾಯಕ ಬಲುಚುತರ**
**ನಾನಾತರದ ವಿದ್ಯೆ ಕಲಿತು । ನಾಡಿಗೆ**

ಹೆಸರ ತಂದಾನೋ ॥[೧೦] ಎಂದು ವಿವರಣೆ ನೀಡುತ್ತದೆ.

ಆಧುನಿಕ ತಾಂತ್ರಿಕ ಯುದ್ಧ ಸಾಮಗ್ರಿಗಳು ಪರಿಚಯವಿರುವಾಗ ವೆಂಕಟಪ್ಪನಾಯಕನಿಗೆ ರಿವಾಲ್ವರ್ ಹೊಸದಾಗಿ ಕಂಡಿತೇ ? ಅಲ್ಲದೇ ಆ ಸಂದರ್ಭದಲ್ಲಿ ಹೈದರಾಬಾದ್, ಲಿಂಗಸೂಗೂರು, ದೇವದುರ್ಗ ಮುಂತಾದ ಸ್ಥಳಗಳಿಂದ ಬರುತ್ತಿದ್ದ ಮೇಲಾಧಿಕಾರಿಗಳ ಜೊತೆಗೆ ಸದಾ ಇರುತ್ತಿದ್ದ ವೆಂಕಟಪ್ಪನಾಯಕನಿಗೆ ಈ ರಿವಾಲ್ವರ್ ಕುತೂಹಲ ಹುಟ್ಟಿಸಿದ್ದೇಕೆ ?

ಈತನ ಸಾವಿನ ಕುರಿತಾದ ಟೇಲರ್‌ನ ಹೇಳಿಕೆಯಲ್ಲಿಯೂ ಸತ್ಯವನ್ನು ಮರೆಮಾಚುವ ಯತ್ನ ನಡೆದಿದೆ. ಶಿಕ್ಷೆಯನ್ನು ಹೊರತುಪಡಿಸಿ ಅರಸನ ಸ್ಥಳಾಂತರ, ಸಾವು, ಪಂಚನಾಮೆ ಮಾಡಿದ್ದು ಮುಂತಾದ ಘಟನೆಗಳಲ್ಲಿ ಪ್ರತ್ಯಕ್ಷದರ್ಶಿಯಾಗಿರದೇ ಇರಬಹುದಾದರು, ಅಲ್ಲಿ ನಡೆದ ಪ್ರತಿಯೊಂದೂ ಘಟನೆಗಳು ಈತನಿಗೆ ತಿಳಿಯುತ್ತಿರಲಿಲ್ಲವೆಂದಲ್ಲ. ಆದರೆ ಅವುಗಳ ಕುರಿತಾಗಿ ಈತ ಪ್ರಸ್ತಾಪವನ್ನೇ ಮಾಡಲಿಲ್ಲ.

ಆ ಸಂದರ್ಭದಲ್ಲಿ ಬ್ರಿಟೀಷರು ಅನೇಕ ಕುತಂತ್ರಗಳನ್ನು ಹೂಡಿದ್ದರು. ರಾಮಣ್ಣ ಮತ್ತು ಕೃಷ್ಣಪ್ಪರೆಂಬ ಸವಾರರು ವೆಂಕಟಪ್ಪನಾಯಕನ ಶುಶ್ರೂಷೆಯಲ್ಲಿದ್ದವರು : ಅರಸನ ಸೇವೆಗಾಗಿ ಅವರನ್ನು ಬಳಸಿಕೊಳ್ಳಲು ರೆಸಿಡೆಂಟನು ಆದೇಶಿಸಿದ್ದನು. ಆದರೆ ದಿವಾನ ಭೀಮರಾಯ ಅವರನ್ನು ಬದಲಾಯಿಸಿದನು. ಕಾರಣ ಈತನನ್ನು ಬ್ರಿಟೀಷರು ಈಗಾಗಲೇ ಹಣ ನೀಡಿ ತಮಗೆ ಸಹಕರಿಸಬೇಕೆಂದು ಕೋರಿಕೊಂಡಿದ್ದರು. ಹೀಗಾಗಿ ಈತ ಕನಕಗಿರಿಯ ಕನಕಪ್ಪನನ್ನು ನೇಮಕ ಮಾಡಿದ್ದನು.[೧೧] ಈತ ವೆಂಕಟಪ್ಪನಾಯಕನ ಹಿಂದೆಯೇ ಇದ್ದ, ಆದರೆ ವೆಂಕಟಪ್ಪನಾಯಕ ಗುಂಡು ಹಾಕಿಕೊಳ್ಳುವಾಗ ಈತ

ಎಲ್ಲಿಗೆ ಹೋಗಿದ್ದ ? ಅರಸ ಮಡಿದಾಗ ಶಿಬಿರದೊಳಕ್ಕೆ ಈತನನ್ನು ಬಿಡಲಿಲ್ಲವೇಕೆ ? ಆ ಸಂದರ್ಭದಲ್ಲಿ ಮುಜುಮದಾರ ಲಿಂಗಪ್ಪನು ನೀರು ತರಲು ಹೋದದ್ದು ಸತ್ಯವೇ ? ಆದರೆ ವೆಂಕಟಪ್ಪನಾಯಕನನ್ನು ನ್ಯಾಯಾಲಯದಲ್ಲಿ ವಿಚಾರಣೆಗೊಳಪಡಿಸಿದಾಗ ಬಂದ ಸಾಕ್ಷಿಗಳ ಜೊತೆಗೆ ತೀರ್ಪಿನ ಹಿಂದಿನ ದಿನ ಸುರಪುರಕ್ಕೆ ಬಂದಿದ್ದನು. ಬ್ರಿಟೀಷರು ಮಾಡಿದ ಈ ಮೋಸವನ್ನು ವಿವರಿಸುವ ಸುರಪುರದ ಲಾವಣಿಯ ನುಡಿಯೊಂದು ಇಂತಿದೆ :

**ಬಡೆಸಾಬಗ ಸುದ್ದಿಯ ಕಳಿಸಿ । ಆಗಳಿಗೆ ಸೋಲ್ಜರ ತರಿಸಿ**
**ವಳವಳಗ ಹೇಳಿ ಹಿಡಿತರಿಸಿ । ಮಾಡಿದರು ಫಾಸಿ**[೧೨]

ಇನ್ನೊಂದು ಜನಪದ ನುಡಿಯಲ್ಲಿ :

**ವೆಂಕಟಪ್ಪನ ಬಂಧಿಸಿ,**
**ಮಾಡ್ಯಾರೋ ಜೀವಕ್ಕ ಫಾಸಿ,**
**ಕತೆ-ಕಟ್ಟಿ ಹೇಳ್ಯಾರೋ**
**ಕೋತಿ ಮುಸುಡಿಯ ಮಂದಿ**[೧೩]

ಕೊಲೆಗಾರರೇ ವೆಂಕಟಪ್ಪ ನಾಯಕನ ಶವವನ್ನು ಪಂಚನಾಮೆ ಮಾಡಿದ್ದು[೧೪] ಅರಸನು ಹಾಕಿಕೊಂಡ ಗುಂಡು ಹೊಟ್ಟೆಯೊಳಗಿಂದ ಬೆನ್ನಲ್ಲಿ ತೇಲಿದೆ. ಇದು ಆತ್ಮಹತ್ಯೆ ಎಂದು ವರದಿ ನೀಡಿರುವುದು ಅನೇಕ ಸಂಶಯಗಳಿಗೆ ಎಡೆಮಾಡಿ ಕೊಡುವುದು. ಒಬ್ಬ ದಕ್ಷ ಅರಸ, ಆತ್ಮಹತ್ಯೆ ಮಾಡಿಕೊಳ್ಳ ಬೇಕಾದಾಗ ತಲೆ ಇಲ್ಲವೆ ಹೃದಯಕ್ಕೆ ಗುಂಡು ಹಾಕಿಕೊಂಡು ಆತ್ಮಹತ್ಯೆ ಮಾಡಿಕೊಳ್ಳುವ ಸಾಧ್ಯತೆ ಇದೆ. ಹೀಗಾಗಿ ಇದು ವ್ಯವಸ್ಥಿತ ಸಂಚಿನ ಕೊಲೆಯೇ ಹೊರತು ಆತ್ಮಹತ್ಯೆ ಅಲ್ಲ. ಇದಕ್ಕೆ ಅನೇಕ ಬ್ರಿಟೀಷ್ ಅಧಿಕಾರಿಗಳ ಹೇಳಿಕೆಗಳೇ ಇಂಬು ನೀಡುತ್ತವೆ. ಅವರು ಒಪ್ಪಿಕೊಂಡಿರುವ ಕುರಿತಾದ ದಾಖಲೆಗಳಿವೆ. ಬ್ರಿಟೀಷರು ವೆಂಕಟಪ್ಪನಾಯಕನನ್ನು ಮುಗಿಸಲೇ ಬೇಕೆಂಬ ದುರುದ್ದೇಶದಿಂದ ಸುರಪುರಕ್ಕೆ ಆಗಮಿಸಿದ್ದ ಬ್ರಿಟೀಷ್ ಅಧಿಕಾರಿ ಕ್ಯಾಂಬೆಲ್ ಹೈದರಾಬಾದ್ ರೆಸಿಡೆಂಟನಿಗೆ ವರದಿ ನೀಡಿದ್ದುದು ಹೀಗೆ: "ವೆಂಕಟಪ್ಪನಾಯಕನನ್ನು ನಾಶಗೊಳಿಸದೇ ಇದ್ದರೆ, ದಕ್ಷಿಣ ಭಾರತದಲ್ಲಿ ನಾವು ತಳವೂರಲು ಸಾಧ್ಯವಿಲ್ಲ. ಆತನನ್ನು ಕೊಂದಿದ್ದುದು ಗೊತ್ತಾದರೆ ಜನರು ಬಂಡೇಳುತ್ತಾರೆ", ಆದುದರಿಂದ ವಿಚಾರಣೆಯ ನಾಟಕವಾಡಿ, ಅರಸನನ್ನು ಕೊಲೆ ಮಾಡಿ, ಸಹಾನುಭೂತಿಗಾಗಿ ಆತ್ಮಹತ್ಯೆಯ ನಾಟಕವಾಡಿದರು. ಅಲ್ಲದೇ ಸುರಪುರದ ಪಂಚಾಂಗಕರ್ತೃ ರಾಮಾಶಾಸ್ತ್ರಿಯವರು ವೆಂಕಟಪ್ಪನಾಯಕ ಇಪ್ಪತ್ತು ನಾಲ್ಕನೇ ವರ್ಷದಲ್ಲಿ ಮರಣವನ್ನಪ್ಪುತ್ತಾನೆಂಬ ಜಾತಕದ ಭವಿಷ್ಯ ನಿಜವಾಯಿತೆಂದು ಸಾರಿದರು.

ಮೇಜರ್ ಜನರಲ್‌ನು "ವೆಂಕಟಪ್ಪನಾಯಕನು ಬ್ರಿಟೀಷರ ವಶವಾದೆನಲ್ಲ. ಅವರು ನನ್ನನ್ನು ವಿಚಾರಣೆಗೆ ಒಳಪಡಿಸಿದರಲ್ಲಾ ದೀರ್ಘಕಾಲದವರೆಗೆ ಬಂಧನದಲ್ಲಿರ ಬೇಕಲ್ಲಾ ಎಂಬ ನೋವಿನೊಂದಿಗೆ ತನ್ನ ಜೀವನವನ್ನು ಅಂತ್ಯಗೊಳಿಸಿಕೊಂಡ"[೧೫] ಎಂಬುದು ಈತನ ಆತ್ಮಹತ್ಯೆಯನ್ನು ಸಾಬೀತುಪಡಿಸುವಂತಿದೆ ಎಂಬ ಮಾತಿದೆ. ಆದರೆ ಇದಕ್ಕೆ ಕಾರಣ ಬೇರೆಯೇ ಇದೆ ಆ ಸಂದರ್ಭದಲ್ಲಿ ಬ್ರಿಟೀಷ್ ಆಡಳಿತ ಸತ್ಯವನ್ನು ಮರೆಮಾಚುತ್ತಿತ್ತು. ಸತ್ಯ ಘಟನೆಗಳನ್ನು ವಿಕೃತವಾಗಿ ಚಿತ್ರಿಸುವುದು ಪರಿಪಾಠವಾಗಿತ್ತು. ಅಂತಾಗಿ ರಿವಾಲ್ವರ್‌ನಿಂದ ಗುಂಡು ಹಾರಿಸಿಕೊಂಡ[೧೬] ಎಂಬ ಹೇಳಿಕೆಗಳೆಲ್ಲ ಸತ್ಯಕ್ಕೆ ದೂರವಾದವುಗಳು.

ವೆಂಕಟಪ್ಪನಾಯಕ ಸಂಘಟನ ಚತುರನೆಂಬುದು ಬ್ರಿಟೀಷರಿಗೆ ಸಂಪೂರ್ಣ ಮನವರಿಕೆಯಾಗಿತ್ತು. ಸುರಪುರದ ಬಂಡಾಯದ ಲಾವಣಿಯಲ್ಲಿ ಬರುವಂತೆ :

**ವೆಂಕಟಪ್ಪನಾಯಕ ರಣಶೂರ । ರಾಜಾಧಿರಾಜ ಗಂಭೀರ,**
**ಯಾರ‍್ಯಾರು ಇಲ್ಲ ಆತಗೆದರ । ದೇಶಕ್ಕೆ ಬಾಳ ಮಂಜೂರ**[೧೭]

ದಕ್ಷಿಣ ಮಹಾರಾಷ್ಟ್ರದಲ್ಲಿ ಮತ್ತು ಉತ್ತರ ಕರ್ನಾಟಕದಲ್ಲಿ ಬ್ರಿಟೀಷರ ವಿರುದ್ಧ ಬಂಡಾಯದ ಯೋಜನೆಗಳಿದ್ದವೆಂದು ಈತನ ವಿಚಾರಣೆಯಿಂದ ತಿಳಿಯುತ್ತದೆ[೧೮]. ಅಲ್ಲದೆ ಮೀರತ್, ಕೊಲ್ಲಾಪುರ, ನರಗುಂದ, ಕೊಪ್ಪಳ, ರಾಯಚೂರು, ಸುರಪುರ ಮುಂತಾದವು ಬಂಡಾಯದ ಕೇಂದ್ರಗಳಾಗಿದ್ದವೆಂಬುದು ಸತ್ಯ[೧೯]. ಜನಪದ ನುಡಿಯೊಂದು ಈತನ ಶೌರ್ಯ ಸಾಹಸಕ್ಕೆ ಹಿಡಿದ ಕನ್ನಡಿಯಂತಿದೆ :

**ರಣಶೂರಧೀರ, ವೆಂಕಟಪ್ಪನಾಯಕ**
**ಚೆಂಡಾಡ್ಯಾನೋ ವೈರಿಗಳ ರುಂಡ/ಹೊಡೆದಾನೋ ಗುಂಡ,**
**ಕೆಡಿವ್ಯಾನೋ ವೈರಿಗಳ ದಂಡ.**[೨೦]

ಝಾನ್ಸಿ, ಅವದ್, ಗ್ವಾಲಿಯರ್, ಕಾನ್ಪುರ ಮುಂತಾದ ಉತ್ತರ ಭಾರತದ ಪ್ರದೇಶಗಳಲ್ಲಿ ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮದ ಕಾವು ಏರಿತ್ತು. ಆಗ ಉತ್ತರ ಭಾರತದಲ್ಲಿ ನಾನಾಸಾಹೇಬ ಭಾರತದ ಸ್ವಾತಂತ್ರ್ಯ ಹೋರಾಟದ ಮುಖಂಡತ್ವ ವಹಿಸಿಕೊಂಡಂತೆ ದಕ್ಷಿಣ ಭಾರತದಲ್ಲಿ ಸುರಪುರದ ನಾಲ್ವಡಿ ವೆಂಕಟಪ್ಪನಾಯಕನೇ ತಮ್ಮ ಮುಖಂಡನೆಂಬುದು ಸಂಸ್ಥಾನಿಕರು ಭಾವಿಸಿಕೊಂಡ ಅಂಶ ಬ್ರಿಟೀಷರಿಗೆ ತಿಳಿದಿತ್ತು. ಈ ಭಾಗದಲ್ಲಿ ಮುಂದೊಂದು ದಿನ ಭಯಂಕರ ಸಂಗ್ರಾಮವಾಗಬಹುದು ಹೀಗಾಗಿ ಈಗಲೇ ಈತನನ್ನು ಕೊಲೆಗೈಯ್ದರೆ ಮುಂದಿನ ದಿನಗಳಲ್ಲಿ ತಮ್ಮ ಸ್ಥಾನ ಸುರಕ್ಷಿತವಾಗುತ್ತದೆಂಬ ಯೋಚನೆಯನ್ನು ಬ್ರಿಟೀಷರು ಮಾಡಿ ಕೊಲೆ ಮಾಡಿರಲೇಬೇಕು. ಗಲ್ಲು ಶಿಕ್ಷೆಯನ್ನು ಕಡಿಮೆಗೊಳಿಸಿ, ೪ ವರ್ಷ ಜೈಲು ಶಿಕ್ಷೆಯನ್ನು ವಿಧಿಸಲಾಗಿದೆ ಎಂದು ಸಹಾನುಭೂತಿಯನ್ನು ತೋರಿಸಿದ್ದುದು, ಕೇವಲ ಬ್ರಿಟೀಷರ ಕಪಟನಾಟಕವಷ್ಟೆ. ಏಕೆಂದರೆ ಅವರಿಗೆ ಮುಂದೆ ಈತನನ್ನು ಕೊಲೆ ಮಾಡುವ ತಂತ್ರ ಹೂಡಿದ ಯೋಜನೆ

ತಯಾರಾಗಿರುತ್ತಾದ್ದರಿಂದ ಇಂತಹ ನಾಟಕವನ್ನಾಡಿದರು ಅಷ್ಟೆ. ಈ ಕುರಿತಾಗಿ ಜನಪದ ನುಡಿಯೊಂದು :

> **ದಿಟ್ಟ ವೆಂಕಟಪ್ಪನಾಯಕ, ಅಟ್ಟಿದನು ವೈರಿಗಳ**
> **ಭದ್ರರಾಜ್ಯವಕಟ್ಟಿ ಗುಂಡಿಗೆ । ದೇಹಕೊಟ್ಟು**
> **ಮೋಸಕ್ಕೆ ಜೀವ ತೆತ್ತಾನು ।**[೨೦]

ನಾಲ್ವಡಿ ವೆಂಕಟಪ್ಪನಾಯಕ ಸಾವನ್ನಪ್ಪಿದ್ದು ಸಿಕಂದರಾಬಾದ್‌ನಿಂದ ಹುಸೇನಸಾಗರದಿಂದ ಪೂರ್ವಕ್ಕೆ ಆರು ಮೈಲಿ ದೂರದಲ್ಲಿದ್ದ ಅಂಬರಪೇಟೆಯಲ್ಲಿ; ಅಲ್ಲಿ ಈತನ ಸಮಾಧಿ ಇಲ್ಲ. ಇದರ ಕುರಿತಾಗಿ ಅಲ್ಲಿ ನೋಡಲು ಯಾವ ನಾಮಫಲಕವೂ ಇಲ್ಲ. ಅದನ್ನೇ ಬಾಗ (ತೋಟ) ಪ್ರದೇಶವೆಂದು ಹೇಳುತ್ತಾರೆ. ಈಗ ಇದು ಆಂಧ್ರ ಸರಕಾರದ ಪೋಲಿಸ್ ಟ್ರೇನಿಂಗ್ ಕ್ಯಾಂಪ್ ಆಗಿ ಮಾರ್ಪಾಡಾಗಿದೆ. ಸುರಪುರದಲ್ಲಿಯೂ ವೆಂಕಟಪ್ಪನಾಯಕನ ಸಮಾಧಿ ಇಲ್ಲ. ಆದರೆ ಸಂಸ್ಥಾನದ ಪದ್ಧತಿಯಂತೆ ಒಬ್ಬ ಸೈನಿಕ ಸತ್ತರೆ ಸಮಸ್ತ ರಾಜ ಗೌರಗಳಿಂದ ಅಂತಿಮ ಸಂಸ್ಕಾರ ನಡೆಯುತ್ತದೆ. ಅದರಂತೆ ಒಬ್ಬ ಅರಸನ ಅಂತ್ಯ ಸಂಸ್ಕಾರವು ಅನೇಕ ವಿಧಿ-ವಿಧಾನಗಳನ್ನು ಒಳಗೊಂಡಿದ್ದು, ಸಮಸ್ತ ರಾಜಗೌರವ ಗಳೊಂದಿಗೆ, ಅಂತ್ಯ ಸಂಸ್ಕಾರವಾಗಬೇಕಾಗಿದ್ದ ಅಂಶದ ಕುರಿತಾಗಿ ಬ್ರಿಟೀಷ್ ಆಡಳಿತಾಧಿಕಾರಿಗಳಾಗಲೀ, ಮೆಡೋಸ್ ಟೇಲರ್‌ನಾಗಲಿ ಮೌನಿಯಾಗಿರುವುದನ್ನು ನೋಡಿದರೆ, ಬ್ರಿಟೀಷರ ಕಪಟ ನಾಟಕ ಅರಿವಾಗದೇ ಇರದು. ಮೆಡೋಸ್ ಟೇಲರ್ ವೆಂಕಟಪ್ಪನಾಯಕನ ಚಿಕ್ಕಪ್ಪ ಪಿಡ್ಡನಾಯ ಕನ ಶವಸಂಸ್ಕಾರದ ಸಂಪೂರ್ಣ ಜವಾಬ್ದಾರಿಯನ್ನು ಹೊತ್ತಿದ್ದರೂ ವೆಂಕಟಪ್ಪನಾಯಕನ ಕುರಿತಾಗಿ ಮಾಹಿತಿ ನೀಡದೆ ಹೋಗಿರುವುದು ಅನೇಕ ಸಂಶಯಗಳಿಗೆ ಕಾರಣವಾಗಿದೆ. ಈತನ ಅಂತ್ಯಸಂಸ್ಕಾರವನ್ನು ಅಜ್ಞಾತ ರೀತಿಯಲ್ಲಿ ನೆರವೇರಿಸಿದುದೇಕೆ ? ಇಂಥ ಅನೇಕ ಪ್ರಶ್ನೆಗಳನ್ನು ನಮ್ಮನ್ನು ಕಾಡದೇ ಇರವು. ಈ ಎಲ್ಲಾ ಅಂಶಗಳ ಮೂಲಕ ಸುರಪುರದ ಸ್ವತಂತ್ರ ಸೇನಾನಿ ನಾಲ್ವಡಿ ವೆಂಕಟಪ್ಪನಾಯಕನ ವ್ಯಕ್ತಿತ್ವವನ್ನು ಕಾಯ್ದುಕೊಳ್ಳಬೇಕಿದೆ. ಆತ ಆತ್ಮಹತ್ಯೆಯನ್ನು ಮಾಡಿಕೊಳ್ಳು ವಂಥ ಹೇಡಿಯಾಗಿರಲಿಲ್ಲ. ಧೈರ್ಯದಿಂದ ಎದುರಿಸುವ ಶಕ್ತಿ ಆತನಲ್ಲಿದ್ದಿತ್ತು ಎನ್ನುವುದನ್ನು ಸಂಶೋಧಕರು ಸಾಧಿಸಿ ತೋರಿಸುವುದು ಇಂದಿನ ತುರ್ತು ಅಗತ್ಯವಾಗಿದೆ. ಅಲ್ಲದೆ ಕರ್ನಾಟಕ ಸರಕಾರ ಆಂಧ್ರಪ್ರದೇಶದ ಅಂಬರಪೇಟೆಯ ಮೈದಾನದಲ್ಲಿ ಸುರಪುರದ ನಾಲ್ವಡಿ ವೆಂಕಟಪ್ಪನಾಯಕನ ಸ್ಮಾರಕವನ್ನು ನಿರ್ಮಿಸುವ ಅವಶ್ಯಕತೆ ಇದೆ. ಕರ್ನಾಟಕ ದಲ್ಲಿಯೂ ಈತನ ಸ್ಮಾರಕವಿಲ್ಲದಿರುವುದು ಖೇದದ ಸಂಗತಿಯೇ ಸರಿ. ಇದಕ್ಕೆ ಇತಿಹಾಸಾಭಿಮಾನಿಗಳು ಪ್ರಯತ್ನಶೀಲರಾಗಬೇಕು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಭಾಸ್ಕರರಾವ್ ಮುಡಬೂಳ., **ಮರೆತು ಹೋದ ಸುರಪುರ ಇತಿಹಾಸ**, ೨೦೦೧, ಪುಟ ೪೮.
೨. ಬಿ. ಕೃಷ್ಣಮಾಚಾರ್ಯ, **ಮರೆಯಲಾಗದ ಸುರಪುರ ರಾಜರ ಚರಿತ್ರೆ**-೨೦೦೩, ಪುಟ ೨೨೩.
೩. Meadows Taylor - *The story of my life* - 1920 - p. 404.
೪. *The Freedom struggle in Hyderabad,* Vol-I, p. 99.
೫. *Western India before and during the mutinies,* Major General Sir George Le Grand Jacob, Second Edition-p. 218.
೬. **ಸುರಪುರದ ಶೂರನಾಯಕರು** – ಜಯತೀರ್ಥ ರಾಜಪುರೋಹಿತರು, ಐ.ಬಿ.ಹೆಚ್. ಪ್ರ. ಬೆಂ. ೧೯೭೩, ಪುಟ ೫೪-೫೫.
೭. ಡಾ. ಎಲ್.ಎಸ್. ಶೇಷಗಿರಿರಾವ್, **ಕಿರಿಯರ ಕರ್ನಾಟಕ, ಪುಟ ೬೧೯.**
೮. Meadows taylor-*The Story of my life* - 1920, p. 414.
೯. Foreign Political Proceedings A. Dec. 1869, No's 11-13.
೧೦. ಬಸಣ್ಣ ಜಾವೂರ, ಸಾ॥ ಗುಂತಗೋಳ, ತಾ. ಲಿಂಗಸೂಗೂರು ಜಿ. ರಾಯಚೂರು ಇವರಿಂದ.
೧೧. Krishnarao M.V. and Halappa G.S., Ed., *History of Freedom movement in Karnataka,* Vol. I, Bangalore-1962, pp. 503-505.
೧೨. ಹಾಲ್ಗೇರಿ ಚನ್ನಬಸವಯ್ಯ ಮಾರನೂರು, **ಸುರಪುರ ಬಂಡಾಯದ ಲಾವಣಿ,** ೧೯೫೩.
೧೩. ಟಿ. ಕೃಷ್ಣಮಾಚಾರ್ಯ, **ರಾಜಗುರುಗಳು,** ಸುರಪುರ ಸಂಸ್ಥಾನ.
೧೪. Letter No. 40 25th May, 1858.
೧೫. *Western India before and during the mutinies* by Major General Sir Ge Le Grand Jaceb Edn-II, P. 218.
೧೬. *The Freedom struggle in Hyderbad,* Vol-I, 1956, p. 99.
೧೭. ಹಾಲ್ಗೇರಿ ಚನ್ನಬಸವಯ್ಯ ಮಾಸನೂರು-**ಸುರಪುರ ಬಂಡಾಯದ ಲಾವಣಿ,** ೧೯೫೩.
೧೮. ತೀ.ತಾ. ಶರ್ಮ, 'ಸುರಪುರದ ಚಿಕ್ಕ ವೆಂಕಟಪ್ಪನಾಯಕ', **ವಾಲ್ಮೀಕಿ ಸ್ಮರಣ ಸಂಚಿಕೆ,** ೧೯೭೩. ಪುಟ ೧-೧೦.
೧೯. The Freedom struggle in Hyderabad Vol. I, P. 97.
೨೦. ವೆಂಕಟಪ್ಪಾಚಾರ್ಯರು, ಸುರಪುರ, ಜಿ. ಗುಲಬರ್ಗಾ, ೧೯೫೬ ಇವರಿಂದ.
೨೧. ಬಿ. ಕೃಷ್ಣಮಾಚಾರ್ಯ, ರಾಜಗುರುಗಳು, ಸುರಪುರ ಇವರಿಂದ.

ಕಲ್ಲನಗೌಡ ತಿ. ಪಾಟೀಲ*

# ಪ್ರಾಚೀನ ಕಾಲದಿಂದ ಬಂದ ಕಸುಬುದಾರರು

ಇವರು ಇಂದಿಗೂ ಹಳ್ಳಿ ಪಟ್ಟಣಗಳಲ್ಲಿ ಇರುವುದುಂಟು ಇವರ ಕಾಯಕಗಳು ಹೀಗೆ ಇರುತ್ತವೆ : ೧) ಹೀರೆಮಠ ಸ್ವಾಮಿಗಳು ಹಾಗೂ ಬಟ್ಟರು, ೨) ಹೂಗಾರ, ೩) ಪಂಡಿತ, ೪) ಕಮ್ಮಾರ, ೫) ಬಡಗಿ, ೬) ಅಕ್ಕಸಾಲಿಗ, ೭) ಕ್ಷೌರಿಕ, ೮) ಅಗಸ, ಪೂಜಾರ, ೯) ಜೋತಿಷಿ, ೧೦) ವೈದ್ಯರು, ೧೧) ವೇಷಗಾರ, ೧೨) ದಲಾಲಿ, ೧೩) ಜಾಬದಾರ, ೧೪) ಸುಮಂಗಲೀಯರು. ಹೀಗೆ ಇನ್ನೂ ಅನೇಕ ಕಾಯಕದವರು ತಮ್ಮ ತಮ್ಮ ಕೆಲಸಗಳಲ್ಲಿ ನಿರತರಾಗಿದ್ದಾರೆ.

ಇವರ ಕಾಯಕಗಳ ವಿವರಣೆ ಹೀಗೆ ಇರುತ್ತವೆ :

೧) **ಹೀರೆಮಠದ ಸ್ವಾಮಿಗಳ** ಕಾಯಕವೇನೆಂದರೆ ಇವರು ಹಬ್ಬಹರಿದಿನಗಳಲ್ಲಿ, ಮುಹೂರ್ತ ನಕ್ಷತ್ರತಿಥಿಗಳ ಬಗ್ಗೆ ಭಕ್ತರಿಗೆ ಮನವರಿಕೆ ಮಾಡಿಕೊಡುವರು. ಅಲ್ಲದೇ ಹೊಸಮನೆ ಕಟ್ಟಿ ಗೃಹಪ್ರವೇಶ ಮಾಡುವಾಗ್ಗೆ ಇವರ ಪಾತ್ರ ಹಿರಿದು. ಮದುವೆ ದಿಬ್ಬಣಗಳಲ್ಲಿ ಇವರು ಪ್ರಮುಖ ರಾಗಿರುತ್ತಾರೆ. ಇವರ ಒಪ್ಪಿಗೆಯೇ ಮುಖ್ಯ. ಕೂಸು ಹುಟ್ಟಿದ ಕೂಡಲೇ ಇವರು ಅದರ ನಾಮಕರಣ ಮಾಡಲು ಹಾಗೂ ಮದುವೆಯಲ್ಲಿ ಮಂತ್ರ ಹೇಳಲಿಕ್ಕೆ. ಮುಂದಿನ ಕಾರಣಗಳೇನಾದರೂ ಇದ್ದರೆ ಇವರು ಪ್ರಮುಖರಾಗಿರುತ್ತಾರೆ.

೨) **ಹೂಗಾರರು** : ಬೆಳಗ್ಗೆ ಎಲ್ಲರ ಮನೆಗೆ ಹೋಗಿ ಪೂಜೆಗೆ ಪತ್ರೆ ಹೂವುಗಳನ್ನು ಕೊಡುತ್ತಾ ಆಯಾ ಮನೆಯವರಿಂದ ದವಸದಾನ್ಯಗಳನ್ನು ತೆಗೆದುಕೊಳ್ಳುವದು ಇವರ ಕೆಲಸ. ಮದುವೆ ಮನೆಯಲ್ಲಿ ಹೀರೇಮಠಸ್ವಾಮಿಗಳ ಜೊತೆಗೆ ಇದ್ದು ಅವರ ಕೆಲಸಗಳಿಗೆ ಕೈಜೋಡಿಸುತ್ತಾರೆ ಸತ್ತವರ ಮನೆಯಲ್ಲಿ ಪೂಜೆಯ ವೇಳೆಗೆ ಪತ್ರಿ ಕೊಡುವ ಕೆಲಸ ಹಾಗೂ ಊರಿನ ಧಾರ್ಮಿಕ ಕೆಲಸಗಳಲ್ಲಿ ಮುಖ್ಯವಾಗಿ ಇವರು ಇರುತ್ತಾರೆ.

೩) **ಪಂಡಿತರು** : ಪುರಾಣ ಪುಣ್ಯಕೆಲಸಗಳಲ್ಲಿ ಶಾಸ್ತ್ರ ಹೇಳುವದಲ್ಲದೆ ಇನ್ನು ಅನೇಕ ಧಾರ್ಮಿಕ ಕೆಲಸಗಳಲ್ಲಿ ಭಾಗಿಗಳಾಗಿ ಊರಿನಲ್ಲಿ ಎಲ್ಲ ಜನರಿಗೆ ಬೇಕಾಗಿ ಇರುತ್ತಿದ್ದರು.

೪) **ಕಮ್ಮಾರರು** : ಇವರು ಊರಿನ ರೈತ ಜನರಿಗೆ ಬೇಕಾದವರು. ಇವರ ದಿನ ನಿತ್ಯ ಕೆಲಸ ತಮ್ಮದೆ ಆದಂತಾ ಕುಲುಮೆಯಲ್ಲಿ ಕಬ್ಬಿಣ ಕಾಸಿ ಅದನ್ನು ಯಾವ ಕೆಲಸಕ್ಕೆ ಬೇಕು ನೋಡಿಕೊಂಡು ಅವರ ಕೆಲಸಕ್ಕೆ ಊರಿನ ಗುಡಿಗಳ ಕೆಲಸಕ್ಕೆ ಬೇಕಾಗುವ ಸಾಮಗ್ರಿಗಳನ್ನು ಇವರು ಸದಾಕಾಲ ಮಾಡಿ ಕೊಡುತ್ತಿದ್ದರು.

೫) **ಬಡಿಗರು** : ಇವರು ಕೂಡಾ ಕಮ್ಮಾರರ ಹಾಗೆ. ಊರ ರೈತರ ಕೆಲಸ ಹಾಗೂ ಗುಡಿಕೈಗಾರಿಕೆ ತೇರು ಕಟ್ಟುವುದು ಮನೆಯ ಕೆಲಸ ಊರಲ್ಲಿ ಧಾರ್ಮಿಕ ಕೆಲಸಗಳಲ್ಲಿ ನಿರತರಾಗಿದ್ದಾರೆ.

೬) **ಅಕ್ಕಸಾಲಿಗರು** : ಇವರು ಕೂಡಾ ಆಚಾರಿಗಳು, ಇವರು ಬೆಳ್ಳಿ ಬಂಗಾರ ಕೆಲಸಗಳಲ್ಲಿ ನುರಿತವರಾಗಿದ್ದಾರೆ. ಇವರು ಕೈಕಸುಬುದಾರರು. ಒಕ್ಕಣ್ಣಚಾರಿಯ ವಂಶಿಕರು ಇವರು. ಗುಡಿ ಮೂರ್ತಿ ಕೆಲಸ ಇನ್ನೂ ಅನೇಕ ಧಾರ್ಮಿಕ ಕೆಲಸಗಳಲ್ಲಿ ನಿರತರಾಗಿರುತ್ತಾರೆ.

೭) **ಕ್ಷೌರಿಕರು** : ದಿನನಿತ್ಯ ಮನೆ ಮನೆಗೆ ಹೋಗಿ ಪುರುಷರಿಗೆ ಗಡ್ಡ ತೆಗೆಯುವುದು, ತಲೆ ಕೂದಲನ್ನು ತೆಗೆಯುವುದು ಇವರ ಕೆಲಸ. ಇನ್ನು ಇವರ ಪಾತ್ರ ದೊಡ್ಡ ದೊಡ್ಡ ದೇವಸ್ಥಾನಗಳಾದ ತಿರುಪತಿ, ಧರ್ಮಸ್ಥಳ, ನಾಯ್ಕನಹಟ್ಟಿ, ಶಿದ್ದಪರ್ವತ ಹೀಗೆ ಇನ್ನು ಅನೇಕ ಯಾತ್ರಾ ಸ್ಥಳಗಳಲ್ಲಿ ಇವರು ತಮ್ಮ ಕಾಯಕದಲ್ಲಿ ನಿರತರಾಗಿರುತ್ತಾರೆ ಹಾಗೂ ಪ್ರಥಮವಾಗಿ ಚಿಕ್ಕ ಮಕ್ಕಳ ಜವಳಕ್ಕೆ ಇವರು ಬೇಕಾಗುತ್ತಾರೆ.

೮) **ಅಗಸರು** : ಇವರಂತೂ ಪುರಾಣ ರಾಮಾಯಣ ಕಾಲದಿಂದ ಬಂದವರು ಇವರ ದಿನ ನಿತ್ಯ ಕೆಲಸ ಮನೆ ಮನೆಗೆ ಹೋಗಿ ಮೈಲಿಗೆ ಬಟ್ಟೆ ಮಾಸಿದ ಬಟ್ಟೆಗಳನ್ನೂ

* ತಾ॥ ಬೆಳಧಡಿ, ಜಿಲ್ಲಾ ಗದಗ.

ತೆಗೆದುಕೊಂಡು ಹೋಗಿ ಅವುಗಳನ್ನು ಅಂದವಾಗಿ ಸ್ವಚ್ಛವಾಗಿ ಮಾಡಿಕೊಡುವದು. ಬಳೆಗಾರರು ಹಾಗೂ ಇವರು ಮುಖ್ಯವಾಗಿ ಬೇಕೇಬೇಕು. ಇದು ಕಾರಣ ಮದುವೆ ದೇವರ ಕೆಲಸಗಳಿಗೆ ಇವರು ಸದಾ ಬೇಕಾಗುವಂಥವರೇ.

೯) **ಜೋತಿಷಿಗಳು :** ಎಲ್ಲರಿಗೂ ಬೇಕಾಗುವಂಥವರೇ ಮಗು ಹುಟ್ಟಿದೊಡನೆ ಇವರ ಬಳಿಗೆ ಹೋಗಬೇಕು. ಮನೆಗಳಲ್ಲಿ ಏನಾದರೂ ತೊಂದರೆಯಾದರೆ. ಇವರ ಹತ್ತಿರ ಹೋಗಿ ಪ್ರಶ್ನೆ ಕೇಳಿ ಸಮಸ್ಯೆಗಳನ್ನು ಬಗೆಹರಿಸಿಕೊಳ್ಳುತ್ತಾರೆ.

೧೦) **ವೈದ್ಯರು :** ಇವರು ಎಲ್ಲಾ ಜನರಿಗೆ ರೋಗಾದಿಗಳಿಗೆ ಔಷಧಿ ಉಪಚಾರ ಕೊಟ್ಟು ಕ್ಷೇಮವಾಗಿ ಇರಲು ಇವರು ಸದಾ ಕೆಲಸದಲ್ಲಿ ನಿರತರಾಗಿರುತ್ತಾರೆ.

೧೧) **ವೇಷಗಾರರು :** ಇವರು ಸದಾಕಾಲ ಊರಿನಲ್ಲಿ ಬಂದು ವೇಷ ಹಾಕಿಕೊಂಡು ನಾನಾ ಮೋಜು ಮಾಡುತ್ತಾ ಜನರನ್ನು ನಗಿಸುತ್ತಾ ಅವರು ದಿನನಿತ್ಯ ಒಂದಾನೊಂದು ವೇಷ ತೋಟ್ಟು ಜನರಿಗೆ ಸಂತೋಷ ಪಡಿಸುವದೇ ಇವರ ಕಾಯಕ.

೧೨) **ದಲಾಲರು :** ಊರಿನಲ್ಲಿ ಮನೆ ಜಮೀನು ದನಕರ ಆಡು, ಮೇಕೆ ಮಾರಾಟ-ಖರೀದಿ ವ್ಯವಹಾರದಲ್ಲಿ ಇವರು ಮಧ್ಯಸ್ತಿಕೆ ವಹಿಸಿ ವ್ಯವಹಾರ ವ್ಯಾಪಾರವನ್ನು ಮುಗಿಸಿ ಕೊಡುತ್ತಾರೆ.

೧೩) **ಬಾಬುದಾರರು :** ಇವರು ಊರಿನ ಏನೇ ಕೆಲಸಗಳು ಬಂದರೂ, ದೇವಸ್ಥಾನ ಕಾರಣ ಮದುವೆ ಮುಂಜಿಗಳಲ್ಲಿ ಮುಂದಾಗಿ ನಿಂತು ಸಾಂಗವಾಗಿ ನಡೆಸಿಕೊಂಡು ಹೋಗುವುದೇ ಇವರ ಕಾಯಕ? ಇವರಿಗೆ ವಿಳ್ಯೇದೆಲೆ ಅಡಕೆ, ಬಾಬಿನ ಪ್ರಕಾರ ದುಡ್ಡು ಕೊಡಬೇಕು. ಇದೇ ಇವರಿಗೆ ಇರತಕ್ಕ ಆದಾಯ. ಅದಕ್ಕೆ ಸಂತೃಪ್ತರಾಗುತ್ತಾರೆ.

೧೪) **ಸುಮಂಗಲಿಯರು :** ಮದುವೆ ಕಾರಣ, ಊರಿನ ದೇವಸ್ಥಾನ, ದೇವರ ಜಾತ್ರೆ ಹಬ್ಬ ಹರಿದಿನಗಳಲ್ಲಿ ಆರತಿ ಹಿಡಿದುಕೊಳ್ಳುವದು ಇವರ ಕೆಲಸ. ಇವರಿಗೆ ವೀಳ್ಯೆಕೊಟ್ಟರೆ ಅಂದು ಆ ಕೆಲಸ ಮುಗಿಯುವವರಿಗೆ ಎಲ್ಲೂ ಹೋಗದೇ ತಮ್ಮ ಕೆಲಸವನ್ನು ಸಾಂಗವಾಗಿ ನೇರವೇರಿಸಿ ಕೊಡುತ್ತಾರೆ. ಇವರಿಗೆ ಯಾವ ತರಹದ ಆದಾಯವಿರುದಿಲ್ಲ, ಎಲ್ಲ ಕೆಲಸಗಳಲ್ಲಿ ಇವರ ಕಾಯಕ ಪ್ರಾಮುಖ್ಯ ಇರುತ್ತದೆ. ಊರಿನ ಕೆಲಸಕ್ಕೆ ಈ ಮಂದಿ ಹೆಣ್ಣುಮಕ್ಕಳು ಮಾತ್ರ ಸೀಮಿತ ವಾಗಿರುತ್ತಾರೆ. ಇನ್ನು ಅನೇಕ ಕಾಯಕದವರು ಹಳ್ಳಿ ಶಹರಗಳಲ್ಲಿ ಇರವುದುಂಟು. ಇವು ಪ್ರಾಚೀನ ಕಾಲದಿಂದಲೂ ಇಂದಿನವರೆಗೂ ಸದಾಕಾಲ ಇರತಕ್ಕಂಥ ಪ್ರಮುಖ ಕಾಯಕಗಳು.



ಸಂತೋಷ ಸ. ಹಾನಗಲ್ಲ*

# ನಿಪ್ಪಾಣಿ ವಾಡೆಯ ಒಂದು ಅವಲೋಕನ

ದಕ್ಷಿಣದ ಐತಿಹಾಸಿಕ ಬದುಕಿನಲ್ಲಿ ಕರ್ನಾಟಕ ಹಾಗೂ ಮಹಾರಾಷ್ಟ್ರಗಳು ಮಹತ್ವದ ಕೊಡುಗೆ ನೀಡಿವೆ. ಆಧುನಿಕ ಯುಗದ ಪ್ರಾರಂಭದಲ್ಲಿ ಮಹಾರಾಷ್ಟ್ರದ ಪೇಶ್ವೆ ಮನೆತನ, ಹಾಗೂ ಕರ್ನಾಟಕದ ದೇಸಾಯಿ, ದೇಶಮುಖ- ದೇಶಪಾಂಡೆ ಮನೆತನಗಳು ತಮ್ಮ ಸೀಮಿತ ಜಹಗೀರುಗಳಲ್ಲಿ ಕಲೆ, ಸಂಸ್ಕೃತಿ, ನ್ಯಾಯ, ಆಡಳಿತ, ವಾಸ್ತು, ಶಿಕ್ಷಣ ಇತ್ಯಾದಿಗಳಿಗೂ ತಮ್ಮನ್ನು ತಾವೇ ಸಮರ್ಪಿಸಿಕೊಂಡಿವೆ. ಅಂಥ ಚಿಕ್ಕ ಪುಟ್ಟ ಹಾಗೂ ಮಧ್ಯಮ ಆಡಳಿತದ ಮೇರೆಗಳಲ್ಲಿ ನಿಪ್ಪಾಣಿಯ ಒಡೆಯರಾದ ನಿಂಬ್ಹಾಳಕರ್ ಮನೆತನವು ಹೆಸರುವಾಸಿಯಾಗಿವೆ.

ನಿಪ್ಪಾಣಿ ನಗರವು ಕರ್ನಾಟಕ ಹಾಗೂ ಮಹಾರಾಷ್ಟ್ರಗಳ ಈಗಿನ ರಾಜಕೀಯ ಸೀಮೆಗಳ ಗಡಿ ಪ್ರದೇಶವಾಗಿದ್ದು, ಕರ್ನಾಟಕದಲ್ಲಿ ಉಳಿದುಕೊಂಡಿದೆ. ಅದರ ಅಕ್ಷಾಂಶ ೧೬-೨೩' (ಉ) ಹಾಗೂ ರೇಖಾಂಶ ೭೪-೨೬'(ಪೂ) ದಲ್ಲಿ ಹಬ್ಬಿಕೊಂಡಿದ್ದು, ಸಮುದ್ರ ಸಪಾಟಿಯಿಂದ ೨,೮೦೦ ಫೂಟ (ಪು. ೮೦೦ ಮೀಟರ್) ಎತ್ತರದಲ್ಲಿದೆ. ಇದನ್ನು ಮರಾಠ, ಪೇಶ್ವೆ ಹಾಗೂ ಆದಿಲ್‌ಷಾಹರು ಆಳಿದ ಪರಿಣಾಮವಾಗಿ ಮರಾಠಿ, ಕನ್ನಡ ಹಾಗೂ ಉರ್ದು ಈ ಜನರ ಜನಭಾಷೆಯಾಗಿದೆ. ಈ ನಗರವು ಸಾಮಾನ್ಯವಾಗಿ ನೀರಿನ ಸಮಸ್ಯೆಯನ್ನು ಅನುಭಸುತ್ತಿರುವುದುದರಿಂದ ಇದಕ್ಕೆ ನಿಪ್ಪಾಣಿಯೆಂದು ಹೆಸರುಬಂದಿದೆ. ನಿಪ್ಪಾಣಿಯೆಂಬ ಶಬ್ದದ ಅರ್ಥವೇ 'ನೀರು' (ಕನ್ನಡ) ಹಾಗೂ 'ಪಾಣಿ' (ಮರಾಠಿ)ಯೆಂದು ನೀರಿಗಾಗಿಯೇ ಒತ್ತು ಕೊಡುವ ವ್ಯಾಕರಣದ ಶಬ್ದವಿದು. ಇದು ನೀರಿನ ಬಗ್ಗೆ ಇರುವ ಮಹತ್ವವನ್ನು ಒಂದು ಕಡೆ ಹೇಳುತ್ತಿದ್ದರೆ, ಕನ್ನಡ ಹಾಗೂ ಮರಾಠಿ ಭಾಷೆಗಳ ಸಂಗಮವನ್ನು ಮತ್ತೊಂದು ಕಡೆ ಸಂಕೇತಿಸುತ್ತದೆ. ನಿಪ್ಪಾಣಿ ನಗರದ ಸಂಸ್ಥಾಪಕ 'ಸರದಾರ ಶ್ರೀಮಂತ ಸಿದ್ದೋಜಿರಾವ್ ನಿಂಬ್ಹಾಳಕರ (ಕ್ರಿ.ಶ. ೧೭೯೯) ಈ ವಾಡೆ ಹಾಗೂ ಕಿಲ್ಲೆಗಳನ್ನು ಕಟ್ಟಿಸಿದನು. (ಕ್ರಿ.ಶ. ೧೮೦೩-೧೮೪೯) ಶ್ರೀಮಂತ ಸಿದ್ದೋಜಿರಾವ್ ನಿಂಬ್ಹಾಳಕರ ಸಮರ್ಥ ಯೋಧನಾಗಿದ್ದುದರಿಂದ ನಿಪ್ಪಾಣಿಯ ಘನತೆಯನ್ನು ಸುತ್ತಲಿನ ರಾಜ್ಯಗಳಾದ 'ಪೇಶ್ವೆ' ಹಾಗೂ 'ನಿಜಾಮ'ರ ಸಮಾಂತರವಾಗಿ ಬೆಳಸಿದ್ದನ್ನು ಕಾಣಬಹುದು. ಇಲ್ಲಿ ಕಟ್ಟಿಸಿದ ಕೋಟೆ ಹಾಗೂ ಅದರಲ್ಲಿಯ ವಾಡೆಯು, ವಾಡೆಗಳಲ್ಲಿ ರಾಜನೆಂದು ಕರೆಯಲ್ಪಡುವಂತಹ (King Among Wada's) ಪುಣೆಯ ಪೇಶ್ವೆಯರ 'ಶನಿವಾರ ವಾಡೆ'ಯನ್ನು ಹೋಲುತ್ತದೆ.

### ಪ್ರಾಕೃತಿಕ ಪರಿಸರ ಹಾಗೂ ಸ್ಥಳ ಆಯ್ಕೆ

ನಿಪ್ಪಾಣಿಯ ಭೌಗೋಳಿಕ ಪರಿಸರವು ವಿಶಿಷ್ಟವಾಗಿದೆ. ನಿಪ್ಪಾಣಿಯ ಹೃದಯಭಾಗದಂತಿರುವ ಇಡೀ ವಾಡೆಯು ಮಧ್ಯಭಾಗದಲ್ಲಿದೆ. ತಟ್ಟೆಯಾಕಾರದ ಇದರ ಭೂಪ್ರದೇಶವು ಎರಡು ಕೋಟೆಗಳ ಆವರಣದ ಹೊರಗೆ ಇಳಿಜಾರಾಗಿದ್ದು, ಒಳಪ್ರದೇಶವು ಈ ಎರಡು ಕೋಟೆಗಳ ಬದಿಗಳಿಂದ ಒಳಭಾಗದಲ್ಲಿ ಇಳಿಜಾರಾಗುತ್ತಾ ಅದರ ಮಧ್ಯ ಪ್ರದೇಶದಲ್ಲಿ ಈ ವಾಡೆಯು ವಾಸ್ತವ್ಯಗೊಂಡಿದೆ. ಇದನ್ನೇ ಇನ್ನಷ್ಟು ವಿಸ್ತೃತವಾಗಿ ಹೇಳಬೇಕೆಂದರೇ ತಟ್ಟೆಯ ಅಂಚಿನ ಸುತ್ತಲಿನ ಭಾಗವು ಎತ್ತರವಾಗಿದ್ದು (Ridgeline) ಆ ಎತ್ತರದ ರೇಖೆಯ ಒಳಬದಿಗೆ ಇಳಿಜಾರಿನಲ್ಲಿ ಸಾಮಾನ್ಯ ಪ್ರಜೆಗಳ ವಸತಿ ಗೃಹಗಳು ಹಾಗೂ ಇನ್ನೂ ಒಳಗಡೆಗೆ ಹೋದರೆ ಮಧ್ಯಪ್ರದೇಶದಲ್ಲಿ ಆಯಕಟ್ಟಿನ ಸ್ಥಳದಲ್ಲಿ ವಾಡೆಯನ್ನು ನಿರ್ಮಿಸಲಾಗಿದೆ. ಹಾಗೂ ನಿರ್ದಿಷ್ಟ ಅಂತರದಲ್ಲಿ ಸುತ್ತುವರೆದ ಕೋಟೆಯ ಗೋಡೆಗಳನ್ನು (ಎರಡು) ಕಟ್ಟಲಾಗಿದೆ. ಈ ಅಂಚಿನ ರೇಖೆಯು ಹೊರಬದಿಗೆ ಭೂಮಿಯು ಇಳಿಜಾರಾಗುತ್ತ ಹೋಗುವುದರಿಂದ ದೂರದಿಂದ ಬರುವ ವೈರಿಗಳಿಗೆ ಅಥವಾ ಹೊಸಬರಿಗೆ ಇದೊಂದು ಸಾಮಾನ್ಯವಾದ ದಿಬ್ಬವೋ, ಮರಡಿಯೋ ಇದೆಯೆಂದು ಭಾಸವಾಗುತ್ತದೆ. ದೂರದಿಂದ ಬರುವ ವ್ಯಕ್ತಿಗೆ ಈ ಏರಿಯನ್ನು ಏರಿಬಂದು ನಿಂತಾಗ ಮಾತ್ರ ಅದರ ಒಳಗಡೆಗೆ ಕೋಟೆ, ಜನವಸತಿ ಹಾಗೂ ವಾಡೆಯಿರುವುದು ಗೋಚರಿಸುತ್ತದೆ.

ಈ ತರಹದ ರಕ್ಷಣೆಗೆ ಸಂಬಂಧಿಸಿದಂತೆ ನಿಸರ್ಗ

* ಅತಿಥಿ ಉಪನ್ಯಾಸಕರು, ಇತಿಹಾಸ ಮತ್ತು ಪ್ರಾಚ್ಯಶಾಸ್ತ್ರ ವಿಭಾಗ, ಕರ್ನಾಟಕ ವಿಶ್ವವಿದ್ಯಾಲಯ, ಧಾರವಾಡ.

ನೀಡಿದ ಭೌಗೋಳಿಕ, ಭೂಪರಿಲಿತಗಳನ್ನು, ದಿಬ್ಬಗಳನ್ನು, ಇಳಿಜಾರುಗಳನ್ನು ಸಮೀಕ್ಷಿಸಿ ಕೋಟೆ ಹಾಗೂ ವಾಡೆಗಳನ್ನು ಕಟ್ಟುವ 'ಸ್ಥಳ ಆಯ್ಕೆ'ಯನ್ನು ಮಾಡಲಾಗುತ್ತದೆ. ಈ ವಾಡೆಯು ಸಾಮಾನ್ಯವಾಗಿ ಸ್ಥಳದುರ್ಗವಾದ್ದರೂ, ಗಿರಿದುರ್ಗದ ಸಣ್ಣ ಛಾಯೆಯನ್ನೂ ಹೊಂದಿದೆ.

ಬಾಹ್ಯಕೋಟೆಯು ಪೂರ್ವ, ಪಶ್ಚಿಮ ಹಾಗೂ ದಕ್ಷಿಣೋತ್ತರವಾಗಿ ಸುಮಾರು ೩/೪ ಕಿ.ಮೀ. (As the Crow files) ಇದೆ. ಹೊರಗಡೆ ಕೋಟೆಯು ಸಾಮಾನ್ಯವಾಗಿ ವೃತ್ತಾಕಾರವಾಗಿದ್ದು ಹತ್ತು ಭುಜಗಳಿಂದ ಹಾಗೂ ಆ ಹತ್ತು ಭುಜಗಳನ್ನು ಜೋಡಿಸುವ ಹತ್ತು ಬುರುಜುಗಳಿಂದ (ಅರ್ಧವೃತ್ತಾಕಾರದ) ಜೋಡಿಸಲ್ಪಟ್ಟಿದೆ. ಈ ಗೋಡೆಯಿಂದ ಮತ್ತೇ ಒಳಗಡೆಗೆ ಹೋದಂತೆ (೩೦೦ಮೀ) ಮತ್ತೊಂದು ದುಂಡನೆಯ ಅಷ್ಟಭುಜಾಕೃತಿಯ ಒಳಗಿನ ಕೋಟೆಯು (Inner Fort) ದೊರೆಯುತ್ತದೆ. ಇಲ್ಲಿಯೂ ಕೂಡ ಭುಜಗಳು ಕೂಡುವ ಬಿಂದುವಿನಲ್ಲಿ ಎಂಟು ದುಂಡನೆಯ ಬುರುಜುಗಳನ್ನು ಕಟ್ಟಲಾಗಿದೆ. ಒಳಕೋಟೆಯ ಮಧ್ಯದಲ್ಲಿ ಸುಭದ್ರವಾದ ವಾಡೆಯನ್ನು ನಿರ್ಮಿಸಲಾಗಿದೆ.

ಈ ವಾಡೆಯನ್ನು ತಲುಪಲು ಪೂರ್ವದಿಶೆಯಲ್ಲಿ ಮೂರು ಪ್ರವೇಶದ್ವಾರಗಳಲ್ಲಿ ಹಾಯ್ದು ಹೋಗಬೇಕಾಗುತ್ತದೆ. ಮೊದಲನೆ ಪ್ರವೇಶದ್ವಾರಕ್ಕೆ ಅನತಿ ದೂರದಲ್ಲಿ ಎರಡನೇ ಪ್ರವೇಶದ್ವಾರವಿದೆ. ಇದಕ್ಕೆ 'ಕಾಟೆದರವಾಜಾ'ವೆಂದು ಹೆಸರು. ಇದನ್ನು ಪ್ರವೇಶಿಸಿ ಎಡಗಡೆಗೆ ಹೊರಳಿ ಸುಮಾರು ಐವತ್ತು ಫೂಟ್ ಮುಂದುವರೆದಾಗ ಎದುರುಗಡೆ ಎಡ ಹಾಗೂ ಬಲಬದಿಗಳಲ್ಲಿ ತಡೆಗೋಡೆಗಳ ಮೇಲೆ ನಿರ್ಮಿಸಲ್ಪಟ್ಟ, ಕಮಾನುಳ್ಳ ಮಧ್ಯದ ಇನ್ನೊಂದು ಪ್ರವೇಶವಿದೆ. ತದನಂತರ ಬಲಕ್ಕೆ ತಿರುಗಿದಾಗ ಮುಂದೆ ಕಾಣುವುದೇ ಮೂರನೇ ಅತ್ಯಂತ ಒಳಗಿನ ಪ್ರವೇಶದ್ವಾರ. ಈ ಪ್ರಸ್ತುತ ದ್ವಾರಗಳೆಲ್ಲವೂ ರಕ್ಷಣಾವಾಸ್ತು ಶೈಲಿಯ ಅಂಗವಾದ ಚಾಕಚಕ್ಯತೆಯ ಹಾಗೂ ದಿಗ್ಭ್ರಮೆ ಗೊಳಿಸುವ ತಿರುವುಮುರುವಾದ ಅಂಗಣಗಳಿಂದ (Barbican) ರಚಿಸಲಾಗಿದೆ. ಇಂಥಹ ಚಾಕಚಕ್ಯತೆಯ ಹಾಗೂ ದಿಗ್ಭ್ರಮೆಗೊಳಿಸುವ ಅಂಗಣಗಳು ಮಧ್ಯಯುಗೀನ ಉತ್ತರಾರ್ಧದಲ್ಲಿ ವಿಶೇಷವಾಗಿ ಮುಸ್ಲಿಂ ಕೋಟೆಗಳಲ್ಲಿ ಬಹುಸಂಖ್ಯೆಯಲ್ಲಿ ಅಳವಡಿಸಿದುದು ಕಂಡು ಬರುತ್ತದೆ.

**ವಾಡೆಯ ರಚನೆ :** ಈ ವಾಡೆಯನ್ನು ಕಟ್ಟುವಾಗ, ಪೂರ್ವಭಾವಿಯಾಗಿ ಈ ಪ್ರದೇಶದ: ೧) ಹವಾಮಾನದ ನಿಯಂತ್ರಕಗಳು ಅಂದರೆ ಉಷ್ಣಾಂಶ, ತೇವಾಂಶ, ಶೀತಾಂಶ ಹಾಗೂ ವರ್ಷಾಂಶಗಳನ್ನು ಗಣನೆಗೆ ತೆಗೆದುಕೊಂಡು ಈ ವಾಡೆಗೆ ಬಾಧೆಬಾರದಂತೆ ಕಟ್ಟಲಾಗಿದೆ. ೨) ಗಾಳಿಬೀಸುವ ಪರಿ (Wind Flow), ಭೂತಳ (Topography) ಗಳನ್ನು ಗಣನೆಗೆ ತೆಗೆದುಕೊಳ್ಳಲಾಗಿದೆ. ಈ ಗಣನೆಯಿಂದ ವಾಡೆಯ ಎಲ್ಲ ಅಂಗಣಗಳಲ್ಲಿ ಹವಾಮಾನದ ಅನುಕೂಲಕರ ವಾತಾವರಣವನ್ನು ಉಂಟುಮಾಡಲು ಅವಕಾಶ ನೀಡುತ್ತದೆ. ೩) ಸಾಮಾನ್ಯವಾಗಿ ಪರಂಪರಾಗತವಾಗಿ ಉಪಯೋಗಿಸುವಂತ ಹಾಗೂ ಸುತ್ತಲೂ ದೊರೆಯುವಂತ ಕಟ್ಟಡದ (Building Materials) ಸಾಮಗ್ರಿಗಳ ಬಗ್ಗೆ ವಿಶೇಷವಾದ ಗುಣಮೌಲ್ಯಗಳನ್ನು ಕಾಯ್ದುಕೊಳ್ಳಲಾಗಿದೆ. ೪) ಕಟ್ಟಡ ನಿರ್ಮಾಣದ ಅಭಿಯಾಂತ್ರಿಕ ಕಲೆ (Engineering Skill) ರಚನಾ ವಿಧಾನ ಹಾಗೂ ಅವಶ್ಯಕ ವಿನ್ಯಾಸದ ಅಳವಡಿಕೆಗಳ ಬಗ್ಗೆ ವಿಶೇಷವಾಗಿ ಗಮನಹರಿಸಲಾಗಿದೆ.

**ವಾಡೆಯ ವಿನ್ಯಾಸ ಹಾಗೂ ವಾಸ್ತು :** ಐದು ಬುರುಜುಗಳುಳ್ಳ ಕಾಟೆದರವಾಜಾದಿಂದ ತಿರುವು ಮುರುವಾದ ಪಥದ ಮೂಲಕ ಒಳಗೆ ಹೋದರೆ ನಗಾರಖಾನ ದೊರೆಯುತ್ತದೆ. ಇದು ವಾಡೆಯ ಎರಡನೇ ಪ್ರವೇಶದ್ವಾರ. ಇಲ್ಲಿಂದಲೇ ವಾಡೆಯ ಒಡೆಯನು ಒಳಗೆ ಬರುವಾಗ ಅಥವಾ ಹೊರಗೆ ಹೋಗುವಾಗ ನಗಾರಿಗಳ ಸಪ್ಪಳದ ಮೂಲಕ ಸಂದೇಶ ಕಳುಹಿಸಲಾಗುತ್ತಿತ್ತು. ಈ ವ್ಯವಸ್ಥೆಯಿಂದ ವಾಡೆಯ ಒಳಗಡೆ ಇರುವ ಹಾಗೂ ವಾಡೆಯ ಹೊರಗಡೆ ಇರುವ ಜನರು ಜಾಗೃತರಾಗುತ್ತಿದ್ದರು.

**ತಳ ವಿನ್ಯಾಸ :** ವಾಡೆಯು ಸುಭದ್ರ ತಳಪಾಯದ ಮೇಲೆ ನಿಂತಿದ್ದು ಅದರ ತಳಪಾಯ ಹಾಗೂ ಮೇಲೆರುವ ಗೋಡೆಗಳಿಗೂ ಸುಲಭವಾಗಿ ದೊರೆಯುವ, ಪ್ರಕೃತಿದತ್ತವಾದ ಕರಿಕಲ್ಲುಗಳನ್ನು (Deccan Trap) ಉಪಯೋಗಿಸಲಾಗಿದೆ. ಈ ಕರಿಕಲ್ಲಿನ ಗುಣಮೌಲ್ಯವು ಅತ್ಯಂತ ಕಠಿಣದಾಯಕವಾಗಿದೆ. ಅಂಥ ಕಲ್ಲನ್ನು ಹೇರಳವಾಗಿ ಬಳಸಿರುವುದರಿಂದ ವಾಡೆಗೆ ಗಟ್ಟಿತನ ಬಂದಿದೆ.

ಈ ಪ್ರವೇಶದ್ವಾರಕ್ಕೆ 'ಲಖಿ' (Lakki) ದರವಾಜಾ ಯೆಂದು ಹೆಸರು. ಇದರಲ್ಲಿ ಅಳವಡಿಸಲಾದ ದ್ವಾರಬಂಧದಲ್ಲಿ ಎರಡು ಬದಿಗೆ ಸುಂದರವಾದ ಕಂಬಗಳನ್ನು ಜೋಡಿಸಲಾಗಿದ್ದು, ಅವುಗಳ ಮೇಲೆ ಕಮಲದ ಪಕಳಿಯ ದುಂಡನೆಯ ಸರಮಾಲೆಯಂತೆ ಕಾಣುವ ಕಮಾನನ್ನು ನಿರ್ಮಿಸಲಾಗಿದೆ. ಈ ಕಮಾನು ಮೊಘಲ ಹಾಗೂ ಮರಾಠಾ ವಾಸ್ತುಕಲೆಯ ಅಂಶವನ್ನು ಹೊಂದಿದೆ. ಹಾಗಾಗಿ ಬಾಗಿಲಿಗೆ ಒಂದು ತರಹದ ಸೌಂದರ್ಯವನ್ನು ತಂದಿದೆ. ಬಾಗಿಲಿನ ಎಡ ಹಾಗೂ ಬಲಬದಿಗಳ ಮುಂಬದಿಗಳಿಗೆ 'ಎರಡು' ಗೋಡೆಯಿಂದ ಹೊರಚಾಚಿದ ಮಂಟಪಗಳು ಜೋಡಿಸಲ್ಪಟ್ಟಿವೆ. ಇವು ಪ್ರವೇಶದ್ವಾರದಲ್ಲಿ ನಿಯಮಿಸಲ್ಪಟ್ಟ ಕಾವಲುಗಾರರ ಕೋಣೆ ಎಂದು ಪ್ರತೀತಿ. ಈ ಬಾಗಿಲಿಗೆ ಮತ್ತೊಂದು ಚಿಕ್ಕದಾದ 'ದಿಂಡಿ ದರವಾಜಾ' ವೆಂಬ ಬಾಗಿಲನ್ನು ಅಳವಡಿಸಲಾಗಿದೆ.

ಈ ಚಿಕ್ಕ ಬಾಗಿಲನ್ನು ದೊಡ್ಡ ಬಾಗಿಲು ಮುಚ್ಚಿದಾಗ ಮಾತ್ರ ಪ್ರವೇಶಕ್ಕೆ ಉಪಯೋಗಿಸಲಾಗುತ್ತಿತ್ತು. ಇದನ್ನು ಇಲ್ಲಿ ನಿಯಮಿಸಲ್ಪಟ್ಟ ಕಾವಲುಗಾರನು ನಿಯಂತ್ರಿಸುತ್ತಿದ್ದನು. ಈ ಬಾಗಿಲವಾಡದ ಮೇಲೆ ಹವೆ ನಿಯಂತ್ರಣಕ್ಕಾಗಿ 'ಝುರೊಖಾ' (ಬೆಳಕಿಂಡಿಗಳು) ಗಳನ್ನು ಅಳವಡಿಸಲಾಗಿದೆ.

**ಮೊದಲನೆಯ ಒಳಾಂಗಣ :** ಈ ಒಳಾಂಗಣವು ವಿನ್ಯಾಸದಲ್ಲಿ ಚೌಕಾಗಿದ್ದು, ಅದರ ಮಧ್ಯದಲ್ಲಿ ಕಮಾನಾಕಾರದ ಕಾರಂಜಿ ಇದೆ. ಈ ಕಾರಂಜಿಯ ಬದಿಯಲ್ಲಿ ಎತ್ತರದಲ್ಲಿರುವ ಹೌದುಗಳಿಂದ ನೀರಿನ ಇಳಿಜಾರಾದ ಹರಿವು (Syphonic Action) ಪದ್ಧತಿಯಿಂದ ನೀರನ್ನು ಕಾರಂಜಿಗೆ ಹರಿಬಿಡಲಾಗುತ್ತಿತ್ತು. ಈ ಅಂಗಣದ ಗೋಡೆಗಳು ಎತ್ತರವಾಗಿದ್ದು ಅಲ್ಲಲ್ಲಿ ಸಮಾನಂತರದಲ್ಲಿ ಕಟ್ಟಲಾದ ಮಾಡುಗಳು (Niches) ಇದ್ದು ಇವುಗಳನ್ನು ಹಬ್ಬ ಹುಣ್ಣಿಮೆಗಳಲ್ಲಿ ದೀಪಾಲಂಕಾರಕ್ಕಾಗಿ ಪಣತಿಗಳನ್ನು ಇರಿಸಿ ದೀಪೋತ್ಸವವವಾಗಿ ಬೆಳಗಿಸುತ್ತಿದ್ದರು. ಈ ಮೊದಲನೆಯ ಅಂಗಣದ ಎದುರಿಗೆ ಕಾಣುವುದೇ ವಿಶಾಲವಾದ 'ಸದರಹಾಲ್' (Judiciary Court).

**ಸದರಹಾಲ್ :** ಇದೊಂದು ಮುಖಭಾಗವನ್ನು ತೆರೆದಿಟ್ಟ ಮೊದಲನೇಯ ಅಂಗಣವನ್ನು ನೋಡುವ, ವಿನ್ಯಾಸದಲ್ಲಿ ಚೌಕಾದ, ಸುಂದರವಾದ ಕಂಬಗಳು ಹಾಗೂ ಬೋದುಗೆಗಳಿರುವ ವಾಡೆಯ ಮಹತ್ವದ ಅಂಗವಿದು. ಇದರ ಸುತ್ತಲೂ ಅತಿಥಿಗಳಿಗಾಗಿ ವಸತಿ ಸೌಕರ್ಯವನ್ನು ಒದಗಿಸುವ ಕೋಣೆಗಳಿವೆ. ಈ ಕೋಣೆಗಳನ್ನು ಹಾಗೂ ಮಧ್ಯದಲ್ಲಿರುವ 'ಸದರಹಾಲ್' ಅನ್ನು ಜೋಡಿಸುವ ಪಡಸಾಲೆ ಇದ್ದು, ಇದು ಬೇಸಿಗೆಯಲ್ಲಿ ತಂಪಾದ ಹವೆಯನ್ನು ನೀಡುವ ವಾತಾನುಕೂಲವಾಗಿ ಇದ್ದುದರಿಂದ ರಾತ್ರಿಯಲ್ಲಿ ಚಂದ್ರಮನ ಬೆಳದಿಂಗಳನ್ನು ಸವಿಯಲು ಹಾಗೂ ಮಲಗಿಕಕೊಳ್ಳಲು ಉಪಯೋಗಿಸಲ್ಪಡುತ್ತಿತ್ತು. ಈ ಅಂಗಣವು ಸುಂದರವಾಗಿ ಕೆತ್ತಲ್ಪಟ್ಟ ಕಲ್ಲುಗಳಿಂದ ರಚಿಸಿದ ಕಾರಂಜಿಯಿಂದ ಶೋಭಿಸಲ್ಪಟ್ಟಿದೆ. ಈ ಕಾರಂಜಿಯಿಂದ ಸುಗಂಧವು ಹರಡುವ ಏರ್ಪಾಡು ಮಾಡಿದ್ದರಿಂದ ಅಲ್ಲಿಯ ವಾಸಿಕರಿಗೆ ಹಾಗೂ ಅತಿಥಿಗಳಿಗೆ ಆಹ್ಲಾದವನ್ನು ಹಾಗೂ ದೈವಿಕಭಾವನೆಯನ್ನು ಉಂಟುಮಾಡುತ್ತಿತ್ತು. ದೇವರ ಕೋಣೆಯು ಈ ಅಂಗಣದ ಪಶ್ಚಿಮ ಭಾಗದ ಮಧ್ಯದಲ್ಲಿ ಪೂರ್ವಾಮುಖಿಯಾಗಿ ಕಟ್ಟಲ್ಪಟ್ಟಿದೆ. (ದೇವಘರ್) ಈ ದೇವಕೋಣೆಯ ಹಿಂದೆ ಸಂಗ್ರಹ ಕೋಣೆಯು (Storeroom) ಜೋಡಿಸಲ್ಪಟ್ಟಿದೆ. ರಾತ್ರಿಯ ಸಮಯದಲ್ಲಿ ಬೆಳಕಿನ ಸೌಂದರ್ಯವನ್ನು ಹೆಚ್ಚಿಸಲು ಪರಂಪರಾಗತವಾಗಿ ಬಂದ ಹಾಗೂ ನೇತಾಡುವ ತೂಗುದೀಪಗಳನ್ನು (ಗಾಜಿನ ಚೌಕಟ್ಟಿನಲ್ಲಿ ಕೂಡ್ರಿಸಿ) ಬಳಸಲಾಗುತ್ತಿತ್ತು.

ಈ ಎರಡನೆಯ ಅಂಗಣವನ್ನು ದಾಟಿದ ಮೇಲೆ ಅತ್ಯಂತ ಒಳಗಡೆಗೆ ಇರುವುದೇ ಮಹಿಳೆಯರ ವಸತಿ ತಾಣ (Private Zenana). ಈ ಝುನಾನಾದಲ್ಲಿ ಮಹಿಳೆಯರಿಗೆ ಪ್ರಿಯವಾಗುವಂತೆ ಹಾಗೂ ಆಕರ್ಷಕವಾಗುವಂತೆ, ಕಾಣುವಂತೆ ಅಂದವಾಗಿ ಕೊರೆದ ಕಾಷ್ಠಶಿಲ್ಪಗಳನ್ನು ಹಾಗೂ ಅಲಂಕಾರಿಕ ವಾಸ್ತು ಅಂಗಗಳನ್ನು ಅಳವಡಿಸಲಾಗಿದೆ. ಇಲ್ಲಿ ವೈಯಕ್ತಿಕವಾಗಿ ಆರಾಧನೆ ಮಾಡುವ ಪೂಜಾ ಕೋಣೆಯೊಂದು ಪೂರ್ವಕ್ಕೆ ಮುಖಮಾಡಿದ್ದು ಇವು ಈ ಮಹಿಳಾ ಪ್ರಾಂಗಣದಲ್ಲಿ ಧಾರ್ಮಿಕ ಹಾಗೂ ದೈವತ್ವದ ವಾತಾವರಣವನ್ನುಂಟು ಮಾಡುತ್ತವೆ. ಇಲ್ಲಿ ಕೇವಲ ಹೆರಿಗೆಗಾಗಿ (ಬಾಣಂತಿ ಕೋಣೆ) ಉಪಯೋಗಿಸುವ ಕೋಣೆಯೊಂದು ಇದೆ. ವಾಯವ್ಯ ದಿಕ್ಕಿನಲ್ಲಿ ಪಾಕಶಾಲೆ (ಅಡುಗೆ ಶಾಲೆ) ಇದೆ. ಈ ಪ್ರಾಂಗಣದ ಮಧ್ಯದಲ್ಲಿ ಸುಂದರವಾದ ಹಾಗೂ ಪಾರಂಪರ್ಯದ ಪಡಸಾಲೆಯು ಕೋಣೆಗಳ ಮುಂದುಗಡೆ ಅಲ್ಲಲ್ಲಿ ತೂಗುಮಂಚಗಳನ್ನು ಅಳವಡಿಸಲಾಗಿದೆ. ಇವುಗಳನ್ನು ವಾಡೆಯ ಮಹಿಳೆಯರು ಹಾಗೂ ಮಕ್ಕಳು ಉಪಯೋಗಿಸಿ ಆನಂದಿಸುತ್ತಿದ್ದರು.

ಸಂಕ್ಷಿಪ್ತವಾಗಿ ಹೇಳಬೇಕಾದರೆ ಈ ನೆಲಂತಸ್ತಿನ (Ground Floor) ವಿನ್ಯಾಸಕಾರರು ವಾಡೆಗಳಿಗೆ ಇರಬೇಕಾದ ಅವಶ್ಯಕ ಅಂಗಗಳನ್ನು ಜೋಡಿಸಲು ಸಾಕಷ್ಟು ಜಾಣತನವನ್ನು ಉಪಯೋಗಿಸಿದ್ದಾರೆ. ಈ ಭೂ-ಅಂತಸ್ತಿನ ಸಾಮಾನ್ಯವಾದ ರಕ್ಷಣೆಗಾಗಿ ಗಟ್ಟಿಮುಟ್ಟಾದ ಗೋಡೆಯನ್ನಂತು ಉಪಯೋಗಿಸಲಾಗಿದೆ. ನ್ಯಾಯ ಹಾಗೂ ಆಡಳಿತದ ದೃಷ್ಟಿಯನ್ನು ಇಟ್ಟುಕೊಂಡು ಸಾಮಾನ್ಯ ಪ್ರಜೆಗಳಿಗೂ ಒಡೆಯನ ದರ್ಶನವನ್ನು ಕೂಡಲೇ ದೊರೆಯುವಂತೆ ಮಾಡಲು ಸದರಹಾಲ್ (Judiciary court) ಅನ್ನು ನಿರ್ಮಿಸಲಾಗಿದೆಯಲ್ಲದೇ ವಾಡೆಯ ಒಡೆಯನಲ್ಲಿ ಸೌಹಾರ್ದ ಭೇಟಿಗಾಗಿ ಬರುವಂತಹ ಅತಿಥಿಗಳಿಗೆ ವಸತಿಗಾಗಿ ಒಳ್ಳೆಯ ಕೋಣೆಗಳನ್ನು ಕೂಡ ನಿರ್ಮಿಸಲಾಗಿದೆ. ಅಲ್ಲದೇ, ದೈವಭಾವವನ್ನು ಮೂಡಿಸಲು ದೇವರ ಕೋಣೆ, (ದೇವಘರ) ಪಾಕಶಾಲೆ, ದಿನಸೀ ಕೋಣೆ (Provision Room) ಹಾಗೂ ವಾಡೆಯ ಮಹಿಳೆಯರಿಗೆ ಮಕ್ಕಳಿಗೆ ಅವರ ಗೃಹಕಾರ್ಯಗಳಿಗೆ, ಧಾರ್ಮಿಕ ಕಾರ್ಯಗಳಿಗೆ, ಆಟಪಾಠಗಳಿಗೆ ಇನ್ನಿತರೆ ಚಟುವಟಿಕೆಗಳಿಗೆ ಅನುಕೂಲವಾಗಲೆಂದು ಇವೇ ಅಂಗಣಗಳನ್ನು ನಿರ್ಮಿಸಲಾಗಿದೆ. ಈ ಎಲ್ಲಾ ಗುಣಮೌಲ್ಯಗಳನ್ನು ಈ ಭೂ-ಅಂತಸ್ತನ್ನು ವಿನ್ಯಾಸಿಸುವ ಹಾಗೂ ರಚಿಸುವ ಪ್ರಕ್ರಿಯೆಗಳಲ್ಲಿ ಗಮನಹರಿಸಲಾಗಿದೆ. ಹಾಗಾಗಿ ಇಡೀ ವಾಡೆಯ ಬದುಕಿಗೆ ಹಾಗೂ ಅದರ

ಚಲನೆಗೆ ಅವಶ್ಯವಾದ ಹಾಗೂ ಅನುಕೂಲಕರವಾದ ವಿನ್ಯಾಸದ ಅಂಗಗಳನ್ನು ಚಾಚು ತಪ್ಪದಂತೆ ಪ್ರಯೋಗಿಸಲಾಗಿದೆ.

**ಮೊದಲನೆ ಅಂತಸ್ತು (First Floor)**

ಈ ಮೊದಲನೆಯ ಮಹಡಿಯ ವಿನ್ಯಾಸವು ಹೆಚ್ಚು ಕಡಿಮೆ ಭೂ-ಅಂತಸ್ತಿನಂತೆಯೇ ಇದೆ. ಇಲ್ಲಿಯೂ ಕೂಡ ಮಧ್ಯದಲ್ಲಿ 'ದರ್ಬಾರ್ ಹಾಲ್' ಎಂದು ಕರೆಯಲ್ಪಡುವ ಸ್ವಲ್ಪ ಎತ್ತರದ ಕಟ್ಟೆಯ ಮೇಲೆ 'ಹಜಾರ್' ಇದೆ. ಈ ಹಜಾರಿನ ಸುತ್ತಲೂ ಕೋಣೆಗಳಿವೆ. ಈ ಕೋಣೆಗಳು ಹಜಾರಿನ ಪಾತಳಿಗಿಂತ ಸ್ವಲ್ಪ ಕೆಳಮಟ್ಟದಲ್ಲಿವೆ. ಈ ಹಜಾರಿನಲ್ಲಿ ಒಡೆಯ ಹಾಗೂ ಆತನ ಮಂತ್ರಿ ಮಂಡಳದ ಸದಸ್ಯರ 'ಬೈಠಕ್' ಗಳಾಗುತ್ತಿದ್ದವು. ಈ ವ್ಯವಸ್ಥೆಯು ರಾಜ್ಯದಾಡಳಿತದ ಮಹತ್ವದ ವಿಷಯಗಳನ್ನು ಗೋಪ್ಯವಾಗಿ ಚರ್ಚಿಸಲು ಅನುಕೂಲ ವಾಗುತ್ತಿತ್ತು. ಗೋಡೆಗಳ ಕಮಾನು ಹಾಗೂ ಮಾಡುಗಳಲ್ಲಿ ಸುಂದರವಾದ ವರ್ಣಚಿತ್ರಗಳನ್ನು ಬಿಡಿಸಲಾಗಿದೆ. ಈ ಚಿತ್ರಗಳು ಒಡೆಯನ ವಿವಿಧ ಜೀವನ ಶೈಲಿಯನ್ನು ತೋರಿಸುತ್ತವೆ. ವಿವಿಧ ಕಮಾನು ಹಾಗೂ 'ಛತ್ತಿ'ನ ಒಳಗಡೆಯ ಭಾಗವು ಕಾಷ್ಠ್ಯ ವಾಸ್ತು ಅಂಗಗಳಿಂದ ಶೋಭಿಸುತ್ತಿದೆ. ಈ ದರ್ಬಾರ ಹಾಲ್ ಪೂರ್ವ ದಿಕ್ಕಿನಲ್ಲಿ ತನ್ನ ಮೈದೆರೆದಿರುವರಿಂದ ಬೆಳಕು ಹಾಗೂ ಶುದ್ಧ ಹವೆಗೆ ಅನುಕೂಲವಾಗಿದೆ.

ಇಲ್ಲಿ ಅಷ್ಟಕೋನಾಕೃತಿಯ (ರೇಲಿಂಗ್ಸ) ಕಬ್ಬಿಣದ ಕೊಳವೆಗಳ ಚೌಕಟ್ಟು ಇದ್ದು, ಇದು ದರ್ಬಾರ್ ಕಟ್ಟೆಯನ್ನು ಸುತ್ತುವರೆದಿದೆ. ವಾಯವ್ಯ ಹಾಗೂ ಆಗ್ನೇಯ ಮೂಲೆಗಳಲ್ಲಿ ಕೋಣೆಗಳಿದ್ದು ಅವುಗಳಲ್ಲಿ ಸೇವಕಿಯರು(ದಾಸಿಯರು) ವಾಸಿಸುತ್ತಿದ್ದರು. ಅಲ್ಲದೇ ಅತಿಥಿ ಕೋಣೆಗಳ ಎರಡನೇ ಹಾಗೂ ಮೂರನೆ ಅಂಗಣಗಳಲ್ಲಿ ರಚಿಸಲಾಗಿದೆ. ಮೂರನೆಯ ಅಂಗಣದ ಬಗ್ಗೆ ಹೇಳುವುದಾದರೆ, ಆಗ್ನೇಯ ಭಾಗದಲ್ಲಿ ಸ್ನಾನದ ಕೋಣೆಯಿದ್ದು, ಇದು ಕೇವಲ ರಾಣಿಯರಿಗೆ ಮಾತ್ರ ಉಪಯೊಗಿಸಲ್ಪಡುತ್ತಿತ್ತು. ರಾಣಿಯರ ವಸತಿ ಕೋಣೆಯನ್ನು ಕಣ್ಸೆಳೆಯುವ ವರ್ಣಚಿತ್ರಗಳೊಂದಿಗೆ ಸುಂದರ ಗೊಳಿಸಲಾಗಿತ್ತು. ಕಟ್ಟಿಗೆಯ ಜಾಲಂದ್ರಗಳಿಂದ ಬೆಳಕು ಹಾಗೂ ಶುದ್ಧ ಹವೆ ಈ ಕೋಣೆಗಳಲ್ಲಿ ಚೆನ್ನಾಗಿ ಪ್ರಸರಿಸು ತ್ತಿದ್ದವು.

ಇಡಿಯಾಗಿ ನೋಡಿದಲ್ಲಿ ಈ ಮೊದಲ ಅಂತಸ್ತು ಭೂ-ಅಂತಸ್ತಿಗಿಂತ ವೈಭವೋಪೇತವಾಗಿದ್ದು ವಾಡೆಯ ಸೌಂದರ್ಯವನ್ನು ಹೆಚ್ಚಿಸಿದೆ. ಇದು ಸೀಮಿತ ಹಾಗೂ ಮಹತ್ವದ ಆಡಳಿತದ ನಿರ್ಣಯಗಳನ್ನು ತೆಗೆದುಕೊಳ್ಳುವ ಗುಪ್ತಸ್ಥಾನವಾಗಿತ್ತು.

**ಎರಡನೇ ಅಂತಸ್ತು (Second Floor)**

ಈ ಎರಡನೇ ಅಂತಸ್ತಿನ ವಾಸಕ್ಷೇತ್ರವು ಕಡಿಮೆ ಇದೆ. ಏಕೆಂದರೆ ಇಲ್ಲಿ ಕೇವಲ ವಾಡೆಯ ಒಡೆಯರ ಕೋಣೆಮಾತ್ರ ಇದೆ. ಕೆಳಗಡೆಯ ಆಯುಧ ಕೋಣೆಯಿಂದ ಮೇಲೇರುವ ಕಟ್ಟೆಗಳಿಂದ ಈ ಎರಡನೆಯ ಅಂತಸ್ತಿನಲ್ಲಿರುವ ಒಡೆಯನ ಕೋಣೆಗೆ ಪ್ರವೇಶ ಮಾಡಲು ಅನುಕೂಲವಿದೆ. ಪುಟ್ಟ ಪುಟ್ಟ ಜಾಲಂಧ್ರಗಳು ಈ ಕೋಣೆಗೆ ಬೆಳಕು ಹಾಗೂ ಶುದ್ಧ ಹವೆ ಯನ್ನು ತರುತ್ತವೆ. ಈ ಕೋಣೆಯ ಮೇಲೆ ಇರುವ ಜಲಮಂದಿರದ ಛತ್ತು (slab) ಈ ಕೋಣೆಗೆ ಆಹ್ಲಾದಕರವಾದ ಹವೆಯ ನಿಯಂತ್ರಣವನ್ನು ನೀಡುತ್ತದೆ. ಹೀಗಾಗಿ ಒಡೆಯನ ಈ ಕೋಣೆಯು ಬೇಸಿಗೆಯಲ್ಲಿಯೂ ಕೂಡಾ ಹಿತಕರವಾದ ಹವೆಯ ವಾತಾವರಣವನ್ನು ಹರಡುತ್ತದೆ. (Good thermal Insulation) ರಾಜ ಅಥವಾ ಒಡೆಯನೆಂದರೆ ಆ ರಾಜ್ಯದ ಅಥವಾ ಆ ಪ್ರದೇಶದ ಹೃದಯವಿದ್ದಂತೆ. ಆ ಅಮೂಲ್ಯವಾದ ಹೃದಯವನ್ನು ರಕ್ಷಿಸಲು ಇಂಥ ಸರ್ವಾನುಕೂಲ ವ್ಯವಸ್ಥೆ ಅವಶ್ಯ.

**ಮೂರನೆಯ ಅಂತಸ್ತು (ಜಲಮಂದಿರ)**

ಇಲ್ಲಿ ಕೇವಲ ವಾಡೆಯ ಒಡೆಯನಿಗಾಗಿ ಸ್ನಾನ ಮಾಡುವ ನೀರಿನ ಕೊಳವಿದೆ (Bathing Tarnk). ಇದು ಒಡೆಯನ ಅತ್ಯಂತ ಏಕಾಂತತೆಯ ಸ್ಥಳವಾಗಿದ್ದು ಕೇವಲ ಒಡೆಯ, ಒಡತಿಗಾಗಿ ಉಪಯೋಗದಲ್ಲಿತ್ತು. ಇದು ಆಕಾಶಕ್ಕೆ ತೆರೆದಿಟ್ಟ ಸ್ನಾನದ ಕೊಳವಾಗಿತ್ತು. ಸುತ್ತಲಿನ ತಡೆಗೋಡೆ (Parpate Wall)ಯಲ್ಲಿ ಸಾಲಾಗಿ ಚಿಕ್ಕ ಚಿಕ್ಕ ತೆರೆದ ಮಾಡುಗಳಿದ್ದು ಅವುಗಳಿಂದ ತಂಪಾದ ಹವೆಯ ಸಿಂಚನವಾಗುತ್ತಿತ್ತು. ಈ ಅಂತಸ್ತಿನ ನಾಲ್ಕು ಮೂಲೆಗಳಲ್ಲಿ ದುಂಡನೆಯ ಛತ್ರಿಯಾಕಾರದ ಛತ್ತುಗಳನ್ನು ಹೊತ್ತ ಮಂಟಪಗಳಿದ್ದವು. ಈ ಸ್ನಾನದ ಕೊಳವು ನೀರು ಸೋರದಹಾಗೆ (Water Proofing) ಗಚ್ಚು ಗಾರೆಗಳಿಂದ ತೀಡಲಾಗಿದೆ. ಆದಾಗಲೇ ಮೇಲೆ ಹೇಳಿದಂತೆ ಈ ಸ್ನಾನ ಗೃಹದ ಛತ್ತು ಕೆಳಗಡೆ ಇರುವ ಅಂದರೆ ಎರಡನೆಯ ಅರಸನ ಕೋಣೆಯನ್ನು ತಂಪಾಗಿ ಇರಿಸುತ್ತದೆ.

**ವಾಸ್ತು ವಿಶೇಷತೆ ಹಾಗೂ ಕಟ್ಟಡಕ್ಕೆ ಬಳಸಿದ ಪದಾರ್ಥಗಳು**

ಡೆಕ್ಕನಿನಲ್ಲಿ (ದಕ್ಷಿಣ ಭಾರತ) ಉಷ್ಣತೆ ಹೆಚ್ಚು. ಅದರ ತೀಕ್ಷ್ಣತೆಯನ್ನು ಕಡಿಮೆಗೊಳಿಸಲು ಹಾಗೂ ಬದುಕಲು ಅನುಕೂಲತೆಯನ್ನು ಮಾಡಲು ಈ ಪ್ರದೇಶದ ಅರಮನೆಗಳಲ್ಲಿ ಹಾಗೂ ವಾಡೆಗಳಲ್ಲಿ ಪರಂಪರೆಯ ವಾಸ್ತುಶಾಸ್ತ್ರ ಅಧಿನಿಯಮಗಳನ್ನು ಅಳವಡಿಸಲಾಗಿದೆ. ಪ್ರಸ್ತುತ ನಿಪ್ಪಾಣಿಯ ವಾಡೆಯಲ್ಲಿಯೂ ಕೂಡ ಈ ನಿಯಮಗಳನ್ನು ಪಾಲಿಸಲಾಗಿದೆ. ಈ ವಾಡೆಯು ಚೌರಸ್ ಆಕಾರವಾಗಿದ್ದು, ಈ ಮುಖ್ಯ ಚೌರಸದಲ್ಲಿ ಮತ್ತೂ ಒಂಬತ್ತು ಪುಟ್ಟ

ಚೌರಸಗಳನ್ನು ಮಾಡಿ ವಿಭಾಗಿಸಲಾಗಿದೆ. ಪೂರ್ವ ದಿಕ್ಕಿನಲ್ಲಿ ಪ್ರವೇಶದ್ವಾರ, ಮಧ್ಯದಲ್ಲಿ ಆಕಾಶಕ್ಕೆ ತೆರದುಕೊಂಡಿರುವ (Open to Sky) ಭಾಗ ಅಂದರೆ ಬ್ರಹ್ಮಸ್ಥಾನ, ಪಶ್ಚಿಮಕ್ಕೆ ದೇವಗೃಹ ಹಾಗೂ ಪಾಕಶಾಲೆ, ಉತ್ತರಕ್ಕೆ ನೀರಿನ ಸಂಗ್ರಹ ಮತ್ತು ದಕ್ಷಿಣಕ್ಕೆ ಹೂದೋಟಗಳು ನಿರ್ಮಿತವಾಗಿದೆ. ಕಟ್ಟಡ ನಾಲ್ಕು ಬದಿಗೆ ಸುಲಭವಾಗಿ ತಿರುಗಾಡಲು ಪಥಗಳು ಹಾಗೂ ಪವಿತ್ರ ಸ್ಥಳಗಳಲ್ಲಿ (Auspicious Zones) ಪ್ರವೇಶಗಳನ್ನು ಬಿಡಲಾಗಿದೆ. ನೀರಿನ ವ್ಯವಸ್ಥೆಯಂತು ಆವರಣಗೊಂಡ ನಳಿಕೆಗಳಲ್ಲಿ (Conduct Pipes) ಎಲ್ಲ ಕಡೆಗೂ ನೀರು ಹರಿಯುವಂತೆ ಜೋಡಿಸಲಾಗಿದೆ. ಸಾಮಾನ್ಯವಾಗಿ ಗೋಡೆಯನ್ನು ಸಾಕಷ್ಟು ಅಗಲವಾಗಿ ಕಟ್ಟಿಸಿ ಅದರ ಮಧ್ಯದಲ್ಲಿ ಅಂತರವನ್ನು ಇಟ್ಟು ಮೇಲಿನ ಅಂತಸ್ತಿಗೆ ಹೋಗಲು ಕಟ್ಟೆಗಳನ್ನು ಕಟ್ಟಲಾಗಿದೆ. ಈ ರೀತಿ ಗೋಡೆಯ ಮಧ್ಯದಲ್ಲಿ ಅಂತರ ಬಿಡುವುದರಿಂದ ಇಡೀಯಾಗಿ ಆ ಕಟ್ಟಡದಲ್ಲಿ ಹವೆ ನಿಯಂತ್ರಣವಾಗುತ್ತದೆ. ವಿಶಿಷ್ಟ ಸ್ಥಳಗಳಲ್ಲಿ ಜಾಲಂಧ್ರಗಳನ್ನು ಅಳವಡಿಸಿರುವುದರಿಂದ ಬೆಳಕು ಹಾಗೂ ಶುದ್ಧ ಹವೆ ಒಳಸೇರುತ್ತದೆ.

ಕಟ್ಟಡಕ್ಕೆ ಬಳಸಿದ ಕಲ್ಲುಗಳು (ಕರಿಕಲ್ಲು, ಕೆಂಪುಕಲ್ಲು, ಸಂಗಮುರಿಕಲ್ಲು) ಇಟ್ಟಿಗೆಗಳು (ಸುಟ್ಟ ಹಾಗೂ ಮಣ್ಣಿನ) ಕಚ್ಚಾ ಇಟ್ಟಿಗೆ, ಋತುಮಾನಗಳಿಂದ ಗಟ್ಟಿಯಾದ ಕಟ್ಟಿಗೆ, (Seasonad Wood) ಒಳ್ಳೆಯ ಬಿದಿರು, ಕಬ್ಬಿಣದ ಸಲಾಕೆಗಳು, ಇತ್ಯಾದಿ. ನುರಿತ ಅಭಿಯಾಂತ್ರಿಕನ ಮಾರ್ಗದರ್ಶನ, ಗಾವಂಡಿಗಳು, ಸುತಾರರು, (carpenters) ಕಮ್ಮಾರರು, ವಡ್ಡರು, ಸಾರಿಗೆ ಚಕ್ಕಡಿಯುವರು ಬಣ್ಣಬಳೆಯುವರು, ಒಳ್ಳೆಯ ಕೆಲಸಗಾರರು (Meason's) ದಿನಗೂಲಿಗಳು, ಆಳುಗಳನ್ನು ಇತ್ಯಾದಿ ವರ್ಗದವರನ್ನು ಬಳಸಿಕೊಂಡು ನಿರ್ಮಿಸಲಾಗಿದೆ. ಅಲ್ಲದೇ ಇಲ್ಲಿಂದ ೧೭ ಕಿ.ಮೀ. ದೂರದ ಕೊಂಗೊಳ್ಳಿಯೆಂಬ ಸ್ಥಳದಿಂದ ಇದಕ್ಕೆ ಕಲ್ಲನ್ನು ಪೂರೈಸಿದ ಗಣಿಗಳಿವೆ. ಸುಣ್ಣ (ಬಿಳಿ, ಹಸಿರು, ಕೆಂಪು) ವನ್ನು ವಾಡೆಗೆ ಬಳಸಿದ್ದಾರೆ.

### ನೀರಿನ ಸರಬರಾಜು

ನಿಪ್ಪಾಣಿಯು ನಿಂಬಾಳಕರ್ ಅರಸು ಮನೆತನದ ಮುಖ್ಯ ಕೇಂದ್ರವಾಗಿರುದರಿಂದ ಇಲ್ಲಿಯ ಜನವಸತಿ ಹಾಗೂ ವಾಡೆಗೆ ನೀರಿನ ಸರಬರಾಜು ಅವಶ್ಯಕವಾಗಿತ್ತು. ಹೀಗಾಗಿ ನೀರನ್ನು ಹುಡುಕುವಲ್ಲಿ ಇಲ್ಲಿಯ ಧನಿ ಹಾಗೂ ಪ್ರಜೆಗಳು ಬುದ್ಧಿವಂತಿಕೆಯನ್ನು ಉಪಯೋಗಿಸಿದ್ದಾರೆ. ಈ ನಗರವು ಮಲೆನಾಡಿನ ಸೆರಗಿನಲ್ಲಿ ಬರುವುದರಿಂದ ಮಳೆಯ ಪ್ರಮಾಣವು ಅಗತ್ಯವಾಗಿ ಇರುತ್ತದೆ. ಈ ಸ್ವಾಭಾವಿಕವಾದ ಪ್ರಕೃತಿದತ್ತ ಕೊಡುಗೆಯನ್ನು ಪಡೆಯಲು. ವಾಡೆಯಿಂದ ೪ ಕಿ.ಮೀ, ದೂರವಿರುವ 'ಶಿರಗುಪ್ಪಿ' ಯಲ್ಲಿ ಒಂದು ಕೆರೆಯನ್ನು ಕಟ್ಟಿಸಿ ಅಲ್ಲಿಂದ ನೀರನ್ನು ವಾಡೆಗೆ ತಂದಿದ್ದಾರೆ. ಈ ನೀರಿನ ಹರಿವಿಗೆ ಅಭಿಯಾಂತ್ರಿಕ ನೈಪುಣ್ಯತೆಯನ್ನು ಉಪಯೋಗಿಸಿದ್ದಾರೆ. ಶಿರಗುಪ್ಪಿಯ ಕೆರೆಯಿಂದ ನಿಪ್ಪಾಣಿಯವರೆಗೆ ನಿರ್ದಿಷ್ಟ ಅಂತರಗಳಲ್ಲಿ ನೀರಿನ ಕಟ್ಟೆಗಳನ್ನು ಕಟ್ಟಿ (Water Towers) ಅವುಗಳನ್ನು 'ಸೈಫನ್' ಪದ್ಧತಿಯಿಂದ ನೀರಿನ ಕೊಳವೆಗಳನ್ನು ಜೋಡಿಸಿ ಅನಾಯಾಸವಾಗಿ ನೀರು ಹರಿಯುವಂತೆ ಮಾಡಲಾಗಿದೆ. ಈ ನೀರಿನ ಕೊಳವೆಗಳು ಸುಟ್ಟ ಮಣ್ಣಿನ ಕೊಳವೆಗಳು. ಅವು ಪ್ರಾರಂಭದಿಂದ ಮುಂದುವರೆದಂತೆ ಬೇರೆ ಬೇರೆ ವ್ಯಾಸಗಳನ್ನು ಹೊಂದಿದೆ. ಭೂಸಮಾಂತರವಾಗಿ ಇಳಿಜಾರಿನಿಂದ ಬರುವ ಕೊಳವೆಗಳು ೨೦೦ ಮೀ. ಅಗಲವಾಗಿದೆ. ಆಮೇಲೆ ಊರಕಡೆಗೆ ಬಂದಂತೆ ನೀರಿನ ಒತ್ತಡವನ್ನು ಹೆಚ್ಚಿಸಲು ಕೊಳವೆಗಳ ವ್ಯಾಸವು ಕಡಿಮೆಯಾಗುತ್ತ ಹೋಗುತ್ತದೆ. 'ಒಂದು ಮೀಟರ್' ನೀರನ್ನು ಏರಿಸಲು 'ಹದಿನೇಳು' ಸೆಂ.ಮೀ. ವ್ಯಾಸದ ಕೊಳವೆಯನ್ನು ಬಳಸಲಾಗಿದೆ 'ನಾಲ್ಕು ಮೀಟರ್' ಎತ್ತರಕ್ಕೆ ನೀರನ್ನು ಏರಿಸಲು '೧೫.೨ಸೆಂ.ಮಿ.' ವ್ಯಾಸ ಕೊಳವೆಯನ್ನು ಹಾಗೂ 'ಹನ್ನೆರಡು ಮೀಟರ್' ಎತ್ತರಕ್ಕೆ ಅಂದರೆ (Bathing Tank) ವಾಡೆಯ ತುಟ್ಟತುದಿಯ ಮೇಲಿರುವ ಸ್ನಾನದ ಕೊಳಕ್ಕೆ ಏರಿಸಲು ೫.೨ ಸೆಂ.ಮೀ. ವ್ಯಾಸದ ಕೊಳವೆಯನ್ನು ಉಪಯೋಗಿಸಲಾಗಿದೆ. ಈ ೫.೬ ಸೆಂ.ಮೀ. ವ್ಯಾಸದ ಕೊಳವೆಯ ಮೂಲಕ ಸ್ನಾನದ ಕೊಳದ ನಾಲ್ಕು ಕಡೆಗೆ ಕಟ್ಟಿದ ತಡೆಗೋಡೆಯ ಮಧ್ಯದಿಂದ ನೀರು ಬರುವಂತೆ ಮಾಡಲಾಗಿದೆ. ಇಡಿಯಾಗಿ ವಾಡೆಯ ನೀರನ್ನು ಪೂರೈಸಲು ಈ ತರಹದ ವಿವಿಧ ವ್ಯಾಸಗಳನ್ನು ನೀರಿನ ಕೊಳವೆಗಳನ್ನು ಬಳಸಲಾಗಿದೆ ಇದಲ್ಲದೇ ವಾಡೆಗೆ ಪ್ರಾಂಗಣದಲ್ಲಿ ನೀರಿನ ಭಾವಿಗಳನ್ನು ಕೂಡಾ ಕಟ್ಟಲಾಗಿದೆ. ಕೇವಲ ವಾಡೆಗೆ ಅಷ್ಟೇ ಅಲ್ಲದೇ ಶಿರಗುಪ್ಪಿಯಿಂದ ವಾಡೆಗೆ ಬರುವ ಕೊಳವೆ ಮಾರ್ಗದ ಎಡಬಲ ಬೀದಿಗಳಲ್ಲಿ ಇರುವ ಜನವಸತಿಗಳಿಗೂ ನೀರಿನ ಸರಬರಾಜು ಮಾಡಲಾಗಿದೆ.

### ವಾಡೆಯ ಕಟ್ಟಡದ ಪದ್ಧತಿ

ಸ್ಥೂಲವಾಗಿ ನೋಡಿದಲ್ಲಿ ವಾಡೆಯ ಕಟ್ಟಡವು ಗಟ್ಟಿಮುಟ್ಟಾಗಿದೆ. ತನ್ನ ಈವರೆಗಿನ ಅಸ್ತಿತ್ವದ 'ಎರಡು ನೂರುವರ್ಷ' ದ ಬಾಳಿಕೆಗೆ ಅದರ ಸರ್ವಾಂಗೀಣ ಕಠಿಣತವ ಹಾಗೂ ಗಟ್ಟಿತನದ ಅಸ್ತಿತ್ವವೇ ಸಾಕ್ಷಿ. ಭೂ–ಅಂತಸ್ತಿನ ಗೋಡೆಗಳು ಸಾಕಷ್ಟು ಅಗಲವಾಗಿದ್ದು, ಮೊದಲನೆಯ ಹಾಗೂ ಎರಡನೆಯ ಅಂತಸ್ತುಗಳ ಗೋಡೆಗಳ ಭಾರವನ್ನು ಸಹಿಸುವಷ್ಟು ದಷ್ಟಪುಷ್ಟವಾಗಿದೆ. ಈ ಭೂ–ಅಂತಸ್ತಿನ ಗೋಡೆಗಳು ಒರಟಾದ ಕಲ್ಲು ಹಾಗೂ ಇಟ್ಟಿಗೆಗಳಿಂದಲು



ನಿಪ್ಪಾಣಿ ವಾಡೆಯ ರಕ್ಷಣಾ ಗೋಡೆಯ ಪ್ರವೇಶದ್ವಾರದ ನೋಟ




ನಿಪ್ಪಾಣಿ ವಾಡೆಯ ವಾಸ್ತು ತಳವಿನ್ಯಾಸ ನಕ್ಷೆ




ವಾಡೆ ಪ್ರವೇಶ ಮಾಡುವ ರಸ್ತೆಯ ನೀರಿನ ಅಗಳಿಗಳು ಹಾಗೂ ದಿಗ್ಭ್ರಮೆಗೊಳಿಸುವ ದ್ವಾರಗಳ ನಕ್ಷೆ



ನಿಪ್ಪಾಣಿಯ ವಾಡೆಯ ಸ್ನಾನದ ಕೊಳದ ತಲನಕ್ಷೆ




ನಿಪ್ಪಾಣಿ ವಾಡೆಯ ಹವಾನಿಯಂತ್ರಗಳ ನಕ್ಷೆ



ನಿಪ್ಪಾಣಿ ವಾಡೆಯ ತಂಪಾಗಿ ಇರಿಸುವ ಕಟ್ಟಡದ ನಕ್ಷೆ



ನಿಪ್ಪಾಣಿ ವಾಡೆಯ [ಸ್ಥರವಿನ್ಯಾಸ] ಭೂಪಾತಳಿಯ ರೇಖಾನಕ್ಷೆ



ನಿಪ್ಪಾಣಿಯ ವಾಡೆಯ ರಾಜ–ರಾಣಿಯ ಸ್ನಾನ ಕೊಳಗಳ ರೇಖಾನಕ್ಷೆ

ಅಂತಿಮ ಅಂತಸ್ತು ಇಟ್ಟಿಗೆಗಳಿಂದಲೂ ಕಟ್ಟಲ್ಪಟ್ಟಿವೆ. ಗೋಡೆಗಳು ಮೇಲೇರಿದಂತೆ ಅವುಗಳ ಅಗಲಳತೆಯೂ ಕಡಿಮೆಯಾಗುತ್ತಾ ಹೋಗುತ್ತದೆ. ಹೀಗೆ ಮಾಡುವುದರಿಂದ ಮೇಲಿನ ಅಂತಸ್ತುಗಳ ಭಾರವು ಕಡಿಮೆಯಾಗುವುದಲ್ಲದೇ ದೀರ್ಘವಾದ ಬಾಳಿಕೆಯನ್ನು ನೀಡುತ್ತದೆ. ಇಲ್ಲಿ ಉಪಯೋಗಿಸಿದ ಕಟ್ಟಿಗೆಯ ಕಂಬ (Pillar), ಚೌಕಟ್ಟು, (Frames) ಛತ್ತು, (Slabs) ಜೋದುಗೆ (Bracket's) ಇತ್ಯಾದಿಗಳನ್ನು ಕಲಾತ್ಮಕವಾಗಿ ಅಳವಡಿಸಲಾಗಿದೆ. ಒಳಗೋಡೆಗಳ ಪಾತಳಿಗಳ ಮೇಲೆ ಜಿಗುಟಾದ ಹಾಗೂ ಗಟ್ಟಿಯಾದ ಗಚ್ಚಿನ ಗಚ್ಚನ್ನು ಉಪಯೋಗಿಸಲಾಗಿದೆ. ಈ ಗಚ್ಚಿನ ಮೇಲೆ ಜಿಗುಟು ಮಣ್ಣಿನ ಲೇಪನವನ್ನು ಮೃದುವಾಗಿ ಮಾಡಿ, ಅದರ ಮೈಮೇಲೆ ಸುಂದರ ವಾಗಿ ಕಲಾತ್ಮಕವಾಗಿ ವರ್ಣಚಿತ್ರಗಳನ್ನು ಬಿಡಿಸಲಾಗಿದೆ.

ಅಂತಹ ಈ ವಾಡೆಯ ವೀಕ್ಷಣೆಯಲ್ಲಿ ದಾಖಲಿಸುವುದಾದರೆ ಉಪಯುಕ್ತವಾದ ವಿನ್ಯಾಸ ಹಾಗೂ ರಚನೆಯನ್ನೂ ಅಳವಡಿಸುವುದರೊಂದಿಗೆ ಸುತ್ತಲಿನ ಪರಿಸರದಲ್ಲಿ ಕೊರೆಯುವ ಕಟ್ಟಡದ ಪದಾರ್ಥಗಳನ್ನು ವಿಪುಲವಾಗಿ ಉಪಯೋಗಿಸಲಾಗಿದೆ. ಸೌರಶಕ್ತಿ, ಗಾಳಿ, ನೀರು, ಬೆಳಕು ಹಾಗೂ ಪರಿಶುದ್ಧ ವಾತಾವರಣಗಳಿಗೆ ವಿಶೇಷವಾದ ಯಾವುದೇ ಯಾಂತ್ರಿಕ ಕಲೆಯನ್ನು ಉಪಯೋಗಿಸದೆಯೇ ಸರಳ ಹಾಗೂ ಸುಂದರ ಕಟ್ಟಡದ ಶೈಲಿಗೆ ಅಳವಡಿಸಲಾಗಿದೆ. ಇಂಥ ಕಾರ್ಯಕ್ಕೆ ಅನುಭವಿಕ ಅಭಿಯಾಂತ್ರಿಕತೆಯನ್ನು, ಕಟ್ಟಡ ರಚಿಸುವ ನೈಪುಣ್ಯತೆಯನ್ನು, ಪಾರಂಪರ್ಯದಲ್ಲಿ ಬಂದ ಬಳುವಳಿಯನ್ನು ಇಲ್ಲಿ ಉಪಯೋಗಿಸಲಾಗಿದೆ. ಇಂಥ ಆಸಕ್ತಿಕರ ಕಾರ್ಯಗಳು ಮುಂಬರುವ ಜನಾಂಗಗಳಿಗೂ ಕೂಡ ಉಪಯೋಗಿಸಲು ಪ್ರೇರೇಪಿಸುತ್ತದೆ.

ಪರಂಪರೆ, ಗುಣಮೌಲ್ಯ, ಆದರ್ಶ ಇವುಗಳೆಲ್ಲವೂ ಸದೃಢ ಸಮಾಜವನ್ನು ಹಾಗೂ ಕೌಶಲದ ಪ್ರಜೆಗಳನ್ನು ನಿರ್ಮಾಣ ಮಾಡುತ್ತವೆ. ಈ ಸಿದ್ಧಾಂತವನ್ನು ಸಾಧಿಸಲು ನಿಪ್ಪಾಣಿ ವಾಡೆಯು ಅಳತೆಗೋಲಾಗಿದೆ. ಪರಂಪರಾಗತವಾಗಿ ಬಂದ ಗುಣಾತ್ಮಕ ಕಲೆಗಳನ್ನು, ಸೌಧಗಳನ್ನು, ಅರಮನೆಗಳನ್ನು ವಾಡೆಗಳನ್ನು ಹಳೆಯವು ಎಂದು ಮರೆಯುವಂತಿಲ್ಲ ಹಾಗೂ ನಿಕೃಷ್ಟಮಾಡುವಂತಿಲ್ಲ. ಅವುಗಳ ಒಡಲಿನಲ್ಲಿ ಏನೋ ಜೀವನದ ಸಂದೇಶವಿದೆ, ಶಾಶ್ವತತೆಯು ಇದೆ.

## ಉಪಸಂಹಾರ

ನಮ್ಮ ನಾಡಿನ ಸಮ್ಮಿಶ್ರ ಸಂಸ್ಕೃತಿಯನ್ನು ನಿರ್ಮಿಸಲು ಅನೇಕ ರಾಜರು, ಸಾಮಂತರು, ಸಂಸ್ಥಾನಿಕರು, ಹಾಗೂ ವಾಡೆಗಳ ಒಡೆಯರು ನಟರಾಗಿ ಪಾತ್ರವಹಿಸಿದ್ದಾರೆ. ಅಂಥ ಜನಪ್ರಿಯ ಪ್ರಭುಗಳಲ್ಲಿ ನಿಪ್ಪಾಣಿಯ ಶ್ರೀಮಂತ ಸಿದ್ಧೋಜಿರಾವ್ ನಿಂಬ್ಹಾಳಕರ ಮನೆತನದವರು ಸಂಸ್ಮರಣೀಯರಾಗಿದ್ದಾರೆ.

ಈ ಮನೆತನದವರು ಸಿಮೀತವಾದ ತಮ್ಮ ಸಂಸ್ಥಾನದಲ್ಲಿ ಆಗಾಗ ಉದ್ಭವಿಸುವ ರಾಜಕೀಯ ಏಳುಬೀಳುಗಳನ್ನು, ಆಘಾತಗಳನ್ನು ತಡೆದು ಸಹಿಸಿ ಕಾಲಕ್ರಮೇಣ ವೈವಿಧ್ಯಪೂರ್ಣ ಸಂಸ್ಕೃತಿಯನ್ನು ಹಾಗೂ ವಾಸ್ತು ಕಲೆಯನ್ನು ಬೆಳಸಿದ್ದಾರೆ. ಇಡೀಯಾಗಿ ನೋಡಿದಲ್ಲಿ ಪುಟ್ಟ ಪುಟ್ಟ ಸಂಸ್ಥಾನಿಕರೆನಿಸಿಕೊಂಡ ವಾಡೆಗಳ ಒಡೆಯರುಗಳಲ್ಲಿ ನಿಪ್ಪಾಣಿ ಒಡೆಯರು ವಿವಿಧ ಕಲೆಗಳಲ್ಲಿ ಅಲ್ಲದೇ ವಾಸ್ತುಕಲೆಯಲ್ಲೂ ಕೂಡ ಅಂದದ, ಚಂದದ ತಮ್ಮ ಭವ್ಯ ವಾಸಸ್ಥಾನಗಳನ್ನು, ವಾಡೆಗಳನ್ನು ರಚಿಸಿದ್ದಾರೆ. ಇವು ಅವರ ಮಾನಸಿಕ ಔನ್ನತ್ಯ ಹಾಗೂ ಅಲ್ಲಿಯ ಜನರ ಉತ್ಸಾಹವನ್ನು ತೋರಿಸುತ್ತದೆ. ಈ ದಿಶೆಯಲ್ಲಿ ಮಹಾರಾಷ್ಟ್ರದಲ್ಲಿಯ ಪುನ್ಯಗಿರಿ(ಪುಣೆ)ಯಲ್ಲಿಯ ಪೇಶ್ವೆಯವರ 'ಶನಿವಾರವಾಡಾ'ವು 'ಮಹಾರಾಷ್ಟ್ರದ ವಾಡೆಗಳಲ್ಲಿ ರಾಜ'ನಿದ್ದಂತೆ (King Among the Maharashatra Wada's) ಕರ್ನಾಟಕದಲ್ಲಿ ನಿಪ್ಪಾಣಿ ವಾಡೆಯು, 'ಕರ್ನಾಟಕದ ವಾಡೆಗಳ ರಾಜ' (King Among the Maharashatra Wada's)ಯೆಂದು ಕೈಗೊಂಡ ಸಮೀಕ್ಷೆಯಿಂದ ಅಭಿಪ್ರಾಯ ಪಡಬಹುದು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ಲೂಯಿಸ್ ಐ. ಜೋನ್., Prophy 02 : Bhuikot - Fort at Nipani. P. 1

೨. ಸಂದರ್ಶನ – ಬಡಿಗೇರ, ಡಿ.ಬಿ. ಉಪನ್ಯಾಸಕರು, ಕೆ.ಎಲ್.ಇ. ಶಿಕ್ಷಣ ಮಹಾವಿದ್ಯಾಲಯ, ನಿಪ್ಪಾಣಿ.

೩. ಸಂದರ್ಶನ – ಡಾ. ಎಸ್.ಕೆ. ಜೋಶಿ ಅವರೊಡನೆ ಪುರಾತತ್ವವಿದ್ದ ಸ್ಥಳ ಸಮೀಕ್ಷೆ.

೪. ನಮ್ಮ ಸಮಕಾಲೀನ ನಿಪ್ಪಾಣಿ ವಾಡೆಯ ಒಡೆಯರೊಂದಿಗಿನ ಸಂದರ್ಶನ.

೫. ಲೇಖಕನ ನಾಲ್ಕಾರು ಬಾರಿಯ ಕ್ಷೇತ್ರಕಾರ್ಯ.

೬. ಚಿತ್ರ ಕೃಪೆ : ಲೂಯಿಸ್ ಐ. ಜಾನ್.

ಡಾ|| ಎಚ್.ಇ. ಬಸವರಾಜಪ್ಪ*

# ಮೈಸೂರು ಸಂಸ್ಥಾನದ ಭೂ ಸಂಬಂಧೀ ಮಸೂದೆಗಳು (ಕ್ರಿ.ಶ. ೧೮೮೧-೧೯೪೭)

ಈ ಪ್ರಬಂಧದಲ್ಲಿ ಮೈಸೂರು ಸಂಸ್ಥಾನದ ಭೂ ಸಂಬಂಧಿ ಮಸೂದೆಗಳನ್ನು ಕುರಿತು ವಿವೇಚಿಸಲಾಗಿದೆ. ಮೈಸೂರು ಸಂಸ್ಥಾನದಲ್ಲಿ ರೆವಿನ್ಯೂ ಕಾಯಿದೆಗಳಿಗೆ ಸಂಬಂಧಿಸಿದಂತೆ ವಿಶೇಷ ಗಮನ ಕೊಡಲಾಯಿತು ಮದ್ರಾಸ ಮತ್ತು ಮುಂಬಯಿ ಪ್ರಾಂತ್ಯಗಳಲ್ಲಿ ಜಾರಿಯಲ್ಲಿದ್ದ ಲ್ಯಾಂಡ ರೆವಿನ್ಯೂ ಕಾಯಿದೆಯನ್ನು ಅಧ್ಯಯನ ಮಾಡಲು ವಿಶೇಷ ಅಧಿಕಾರಿಗಳನ್ನು ಮೈಸೂರು ಸಂಸ್ಥಾನದಿಂದ ಕಳುಹಿಸಲಾಗಿತ್ತು. ಮೈಸೂರು ಸಂಸ್ಥಾನವು ಬಾಂಬೆ ಲ್ಯಾಂಡ್ ರೆವಿನ್ಯೂ ಕೋಡ್‌ಗೆ ಅನುಸಾರವಾಗಿ ಕಾಯಿದೆ ಕಾನೂನುಗಳನ್ನು ಇಲ್ಲಿಗೆ ಸರಿಹೊಂದುವಂತೆ ಮಾರ್ಪಡಿಸಿಕೊಂಡಿದ್ದರು. ಅದಕ್ಕಾಗಿ ಮೈಸೂರು ಪ್ರಜಾಪ್ರತಿನಿಧಿ ಸಭೆಯಲ್ಲಿ ೧೮೮೩-೮೪ರವರೆಗೂ ನಡೆದ ಅಧಿವೇಶನಗಳಲ್ಲಿ ಚರ್ಚೆಗಳು ನಡೆದಿದ್ದವು. ರೆವಿನ್ಯೂ ವಿಷಯಕ್ಕೆ ಸಂಬಂಧಿಸಿದ ನ್ಯಾಯಾಧಿಕಾರಿಗಳ ಒಪ್ಪಿಗೆ ಪಡೆದ ನಂತರ ಕೆಲವು ಅವಶ್ಯಕವಾದ ಕಾಯಿದೆಗಳನ್ನು ರಚಿಸಿ ೧೮೮೭ರಲ್ಲಿ ಭಾರತ ಸರಕಾರದಿಂದ ಒಪ್ಪಿಗೆ ಪಡೆಯಲಾಯಿತು. ನಂತರ ೧೮೮೮ರಲ್ಲಿ ಮೈಸೂರ್ ಲ್ಯಾಂಡ್ ರೆವಿನ್ಯೂ ಕೋಡ್ ಮೈಸೂರು ಸಂಸ್ಥಾನಾದ್ಯಂತ ಜಾರಿಗೆ ಬಂದಿತು. ಈ ಕಾಯಿದೆಯೂ ೧೮೯೧, ೧೮೯೨, ೧೯೦೫, ೧೯೦೯, ೧೯೧೨, ೧೯೧೬, ೧೯೧೯, ೧೯೨೨ ಹೀಗೆ ಹಲವು ಬಾರಿ ಪರಿಷ್ಕರಣೆಗೆ ಒಳಪಟ್ಟಿದೆ. ಇದರಲ್ಲಿ ಲ್ಯಾಂಡ್ ಇಂಪ್ರೂವ್‌ಮೆಂಟ್ಸ್ ಕಾಯಿದೆ, ಲೋನ್ ರೆಗ್ಯುಲೇಶನ್ ಕಾಯಿದೆ, ಲ್ಯಾಂಡ್ ಅಕ್ವಿಜಿಷನ್ಸ್ ಕಾಯಿದೆಗಳು ಸೇರಿದ್ದವು. ಮೈಸೂರು ಲ್ಯಾಂಡ್ ರೆವಿನ್ಯೂ ಕೋಡ್ ೧೮೯೦ರಲ್ಲಿ ಪ್ರಥಮ ಬಾರಿಗೆ ಪ್ರಕಟವಾಯಿತು. ಅದರ ಪರಿಷ್ಕರಣ ಕಾರ್ಯ ೧೯೦೧ರಲ್ಲಿ ಆಯಿತು. ೧೯೦೨ರ ನಂತರ ರೆವಿನ್ಯೂ ವಿಭಾಗಕ್ಕೆ ರೆವಿನ್ಯೂ ಕಮೀಷನರ್ ಎಂಬ ಮುಖ್ಯ ಅಧಿಕಾರಿಯನ್ನು ನೇಮಿಸಲಾಯಿತು. ೧೯೦೩, ೧೯೦೪ರ ನಂತರ ಇವರಿಗೆ ಹೆಚ್ಚಿನ ಅಧಿಕಾರಗಳನ್ನು ನೀಡುವುದರ ಜೊತೆಗೆ ವಿವಿಧ ಜವಾಬ್ದಾರಿಯನ್ನು ಕೊಡಲಾಯಿತು[೨]. ಇವರ ಕೆಳಗೆ ಜಿಲ್ಲೆಯಲ್ಲಿ ಡೆಪ್ಯೂಟಿ ಕಮೀಷನರ್ ಮತ್ತು ಅಸಿಸ್ಟೆಂಟ್ ಕಮೀಷನರ್‌ಗಳು ಮತ್ತು ತಾಲೂಕಿನ ಅಮಲ್ದಾರರು ರೆವಿನ್ಯೂ ಇಲಾಖೆಗೆ ಸಂಬಂಧಿಸಿದಂತೆ ವಿಶೇಷ ಅಧಿಕಾರ ಪಡೆದರು. ೧೮೮೮ರ ನಂತರ ಜಾರಿಗೆ ಬಂದ ಹಲವು ಕಾಯಿದೆಗಳು ಭೂ ಹಿಡುವಳಿದಾರರಿಗೆ ರಕ್ಷಣೆ ನೀಡುವುದರ ಜೊತೆಗೆ ಸಾಮಾಜಿಕ ಜವಾಬ್ದಾರಿಯನ್ನು ವಹಿಸಿದವು. ಅವುಗಳಲ್ಲಿ ಕೆಲಸವನ್ನು ಹೀಗೆ ಗಮನಿಸಬಹುದು. ಲ್ಯಾಂಡ್ ರೆವಿನ್ಯೂ ಕೋಡ್ ನ ೭೭ನೇ ವಿಧಿಯ ಪ್ರಕಾರ ಯಾವುದೇ ಭೂ ಹಿಡುವಳಿದಾರನು ತನ್ನ ಹಿಡುವಳಿಯನ್ನು ಪರಭಾರೆ ಮಾಡಿದಾಗ ಡೆಪ್ಯೂಟಿ ಕಮೀಷನರ್‌ರವರು ಪರಭಾರೆಯಾದ ಭೂಹಿಡುವಳಿಯ ಬಗ್ಗೆ ಸರಕಾರದ ವತಿಯಿಂದ ಸಂಬಂಧಿಸಿದ ಹಿಡುವಳಿದಾರನಿಗೆ ಮಾಹಿತಿ ನೀಡುವ ಕ್ರಮವೂ ಜಾರಿಗೆ ಬಂದಿತ್ತು[೩]. ಈ ವಿಧಾನಕ್ಕಾಗಿ ಪ್ರತಿ ತಾಲೂಕು ಕಛೇರಿಗಳಲ್ಲಿ ಒಂದು ದಾಖಲಾತಿ ಪುಸ್ತಕವನ್ನಿಡುತ್ತಿದ್ದರು. ಇಲ್ಲಿ ದಾಖಲಾತಿಯಾದ ಅರ್ಜಿಗೂ ಕೋರ್ಟ್ ಫೀ ಮತ್ತು ಸ್ಟಾಂಪು ಹಚ್ಚುವುದರ ಮೂಲಕ ಒಂದು ರೂ. ತೆರಿಗೆ ಪಾವತಿ ಮಾಡಬೇಕಾಗಿತ್ತು. ಈ ವಿಧಾನದಿಂದ ಪ್ರತಿಯೊಬ್ಬ ಭೂಹಿಡುವಳಿದಾರನ ಹೆಸರುಗಳು ದಾಖಲಾತಿ ಪುಸ್ತಕದಲ್ಲಿ ನೋಂದಾಯಿಸಲ್ಪಟ್ಟಿದ್ದವು. ತನ್ನ ಹಿಸ್ಸೆಗನುಗುಣವಾಗಿ ಕಂದಾಯ ಕಟ್ಟುವ ಮೂಲಕ ಪಟ್ಟವನ್ನು ನವೀಕರಿಸಿ ಕೊಳ್ಳುತ್ತಿದ್ದನು.

ಸ್ಥಳೀಯ ಕೃಷಿಕರು ತಾವು ವಾಸಮಾಡುವ ಗ್ರಾಮದಲ್ಲಿ ಹೊಸದಾಗಿ ಭೂಹಿಡುವಳಿಗಳನ್ನು ಕೃಷಿಗೊಳಪಡಿಸುವ ವೇಳೆಯಲ್ಲಿ ತಮ್ಮ ಗ್ರಾಮದಲ್ಲಿರುವ ಶ್ಯಾನುಭೋಗರ ಹತ್ತಿರ ದರಖಾಸ್ತು ಅರ್ಜಿಗಳನ್ನು ಯಾವ ರೀತಿಯಾದ ತೆರಿಗೆಯನ್ನು ನೀಡದೆ ಬರೆಸಿಕೊಳ್ಳಬಹುದಾಗಿತ್ತು. ಶ್ಯಾನುಭೋಗರು ತಾನು ಬರೆದುಕೊಟ್ಟ ಅರ್ಜಿಯ ಕೆಳಗಿನ ಎಡಭಾಗದಲ್ಲಿ ಸಹಿ ಮಾಡಬೇಕಾಗಿತ್ತು. ಏಕೆಂದರೆ ಇದು ದರಖಾಸ್ತುದಾರನನ್ನು ಗುರುತಿಸುವ ಉದ್ದೇಶವಾಗಿತ್ತು[೪]. ದರಖಾಸ್ತು ಮೂಲಕ ಭೂಹಿಡುವಳಿ ಹಂಚಿಕೆಯ ಸಂಪೂರ್ಣ ಜವಾಬ್ದಾರಿಯನ್ನು

* ಇತಿಹಾಸ ಉಪನ್ಯಾಸಕರು, ಎಸ್.ಕೆ. ಕಲಾ ಮಹಾವಿದ್ಯಾಲಯ ಮತ್ತು ಎಚ್.ಎಸ್.ಕೆ. ವಿಜ್ಞಾನ ಸಂಸ್ಥೆ, ಹುಬ್ಬಳ್ಳಿ.

ಜಿಲ್ಲೆಯಲ್ಲಿರುವ ಡೆಪ್ಯೂಟಿ ಕಮೀಷನರ್ ವಹಿಸಿಕೊಂಡಿದ್ದರು. ಇವರು ಎಕರೆವಾರು ಪ್ರತಿ ಹಿಡುವಳಿಗೆ ಒಂದು ನಿರ್ದಿಷ್ಟ ಬೆಲೆಯನ್ನು ನಿಗದಿಪಡಿಸಿದ್ದರು. ಈ ವೇಳೆಯಲ್ಲಿ ದರಖಾಸ್ತು ನೀಡುವ ಭೂಹಿಡುವಳಿಗಳ ವಿಸ್ತೀರ್ಣವು ಪ್ರತಿ ಹಿಡುವಳಿದಾರನಿಗೆ ಐದು ಎಕರೆಗಳಿಗಿಂತ ಹೆಚ್ಚಾಗಿರುವಂತಿರಲಿಲ್ಲ. ಈ ಹಿಡುವಳಿಗಳ ಮೌಲ್ಯವು ನೂರು ರೂ.ಗಳಿಗಿಂತ ಅಧಿಕವಾಗಿರುವಂತಿರಲಿಲ್ಲ. ಒಂದು ವೇಳೆ ಭೂ ಹಿಡುವಳಿಗಳ ವಿಸ್ತೀರ್ಣವು ಇಪ್ಪತ್ತು ಎಕರೆಗಳಿಗಿಂತ ಹೆಚ್ಚಾಗಿದ್ದರೆ ಇಲ್ಲವೇ ಮೌಲ್ಯವು ಐದುನೂರುಗಳಿಗಿಂತ ಅಧಿಕವಾಗಿದ್ದರೆ ರೆವಿನ್ಯೂ ಕಮೀಷನರ್ ಅನುಮತಿ ಪಡೆದು ಡೆಪ್ಯೂಟಿ ಕಮೀಷನರ್ ಅವರು ಮಂಜೂರಾತಿ ನೀಡಬಹುದಾಗಿತ್ತು[೪].

ಒಂದು ಭೂಹಿಡುವಳಿಯ ಖಾತೆದಾರನಿಗೆ ಸೇರಿದ ಸರ್ವೇ ನಂಬರಿನಲ್ಲಾಗಲಿ, ಅದರ ಕೋಡ್ ನಂಬರಿನಲ್ಲಾಗಲಿ ಒಬ್ಬ ಭೂಹಿಡುವಳಿದಾರನಿಗೆ ಯಾವ ಹಕ್ಕು ಇಲ್ಲವೆಂಬ ವಿಚಾರವನ್ನು ಅಮಲ್ದಾರರ ಗಮನಕ್ಕೆ ಬಂದರೆ ಜಮಾಬಂದಿ ಕಾಲದಲ್ಲಿಯೇ ಆ ವಿಚಾರವನ್ನು ಕುರಿತು ತನಿಖೆ ನಡೆಸುತ್ತಿದ್ದರು. ಒಬ್ಬ ವ್ಯಕ್ತಿಯು ಭೂಹಿಡುವಳಿದಾರನಿಗೆ ದಾಸ್ತಾವೇಜಿನ ಮೂಲಕವಾಗಿ ಅಥವಾ ಯಾವ ದಾಸ್ತಾವೇಜು ಇಲ್ಲದೆಯೂ ೧೨ ವರ್ಷಗಳವರೆಗೆ ಅಥವಾ ಅದಕ್ಕೂ ಹೆಚ್ಚಿನ ಕಾಲಾವಧಿಯವರೆಗೆ ಅವನು ಒಂದು ಭೂಹಿಡುವಳಿಯನ್ನು ಸಾಗುವಳಿ ಮಾಡಿದ್ದರೆ ಆ ವಿಚಾರವು ಸ್ಥಳೀಯ ಜನರ ಗಮನಕ್ಕೆ ಬಂದಿರಬೇಕಾಗಿತ್ತು. ಈ ಅವಧಿಯಲ್ಲಿ ಹಿಡುವಳಿದಾರರು ಕಂದಾಯವನ್ನು ಸಲ್ಲಿಸಿದ್ದರೆ ಈಗಾಗಲೆ ದಾಖಲಾದ ಖಾತೆದಾರನ ಬದಲಾಗಿ ತಮ್ಮ ಹೆಸರನ್ನು ದಾಖಲಿಸುವಂತೆ ಅಮಲ್ದಾರರನ್ನು ಕೇಳಿಕೊಳ್ಳಬಹುದಾಗಿತ್ತು. ಅದೇ ರೀತಿ ನಿಮ್ನವರ್ಗದ ಸಮುದಾಯದಿಂದ ಸಾಗುವಳಿಗಾಗಿ ದರಖಾಸ್ತು ಅರ್ಜಿಗಳು ಬಂದರೆ ಡೆಪ್ಯೂಟಿ ಕಮೀಷನರ್ ಅವರು ಸಂಬಂಧಿಸಿದ ಭೂಹಿಡುವಳಿಗಳನ್ನು ಹರಾಜು ಮಾಡದೇ ನಿರ್ದಿಷ್ಟಪಡಿಸಿದ ಹಣವನ್ನು ಕಟ್ಟಿಕೊಂಡು ಮೊದಲನೇ ದರಖಾಸ್ತುದಾರನಿಗೆ ಕೊಡಬಹುದಾಗಿತ್ತು. ಆದರೆ ಇಂತಹ ಹಿಡುವಳಿಗಳನ್ನು ಪಡೆದವರು ೧೫ ವರ್ಷಗಳವರೆಗೆ ಅವುಗಳನ್ನು ಬೇರೆಯವರಿಗೆ ಪರಭಾರೆ ಅಥವಾ ಗುತ್ತಿಗೆ ಕೊಡುವುದಿಲ್ಲವೆಂಬುದಾಗಿ ಮುಚ್ಚಳಿಕೆಯನ್ನು ಬರೆದುಕೊಡಬೇಕಾಗಿತ್ತು. ಈ ಷರತ್ತಿನ ಪ್ರಕಾರ ೧೫ ಎಕರೆಗಳಷ್ಟುಭೂಹಿಡುವಳಿಗಳನ್ನು ಮಾತ್ರ ಒಬ್ಬ ಭೂಹಿಡುವಳಿದಾರನಿಗೆ ಮಂಜೂರು ಮಾಡುತ್ತಿದ್ದರು. ಇಂತಹ ಸಂದರ್ಭದಲ್ಲಿ ಒಬ್ಬ ಹಿಡುವಳಿದಾರನು ಒಂದು ಭೂಹಿಡುವಳಿಯ ಅನುಭವವನ್ನು ಹೊಂದುವುದಕ್ಕೆ ಮೊದಲು ಲ್ಯಾಂಡ್ ರೆವಿನ್ಯೂ ಕೋಡ್‌ನ ೨೫ನೇ ವಿಧಿಯ ಪ್ರಕಾರ ಅಮಲ್ದಾರರಿಗೆ ಒಂದು ಅರ್ಜಿ ಸಲ್ಲಿಸಬೇಕಾಗಿತ್ತು.

ದಿವಾನರ ಕಾಲಾವಧಿಯಲ್ಲಿ ಬಂದ ಮತ್ತೊಂದು ಪ್ರಮುಖ ಕಾಯಿದೆಯಾದ ಲ್ಯಾಂಡ್ ರೆವಿನ್ಯೂ ಕೋಡ್‌ನ ೪೮ನೇ ವಿಧಿಯ ಪ್ರಕಾರ ಕೃಷಿಗೊಳಪಟ್ಟ ಭೂಹಿಡುವಳಿಗಳನ್ನು ಕೈಗಾರಿಕೆ, ವಾಣಿಜ್ಯೋದ್ಯಮ ಅಥವಾ ಇನ್ನಿತರ ಯಾವುದೇ ಉದ್ದೇಶಗಳಿಗಾಗಿ ಪರಿವರ್ತಿಸುವಾಗ ವಿಶೇಷ ರೀತಿಯ ಕಂದಾಯವನ್ನು ನೀಡಬೇಕಾಗಿತ್ತು. ಅಂದರೆ ಚಿತ್ರದುರ್ಗ ಜಿಲ್ಲೆ ದಾವಣಗೆರೆ ನಗರದಲ್ಲಿ ಎಕರೆ ಒಂದಕ್ಕೆ ಎಂಟು ರೂ.ಗಳಿತ್ತು. ಇತರ ಎಲ್ಲಾ ತಾಲೂಕುಗಳಲ್ಲಿಯೂ ಎಕರೆ ಒಂದಕ್ಕೆ ಆರು ರೂ. ಇತ್ತು. ಈ ಕಂದಾಯ ವಿಧಾನವು ಖುಷ್ಕಿ ಹಿಡುವಳಿಗಳಿಗೆ ಮಾತ್ರ ಅನ್ವಯಿಸುತ್ತಿತ್ತು. ತರಿ ಮತ್ತು ಬಾಗಾಯ್ತು ಭೂಹಿಡುವಳಿಗಳಾಗಿದ್ದರೆ ಆ ಹಿಡುವಳಿಗಿರುವ ಸ್ಥಳೀಯ ದರದ ಎರಡರಷ್ಟು ಹೆಚ್ಚಾಗಿರುತ್ತಿತ್ತು. ಇದೇ ರೀತಿ ಇಪ್ಪತ್ತೆಂಟನೇ ವಿಧಿಯ ಪ್ರಕಾರ ಕೃಷಿಗೋಸ್ಕರ ಉಪಯೋಗಿಸುವ ಭೂಹಿಡುವಳಿಗಳಲ್ಲಿ ಒಂದು ಸರ್ವೇನಂಬರಿನಲ್ಲಿ ಸಾಗುವಳಿಗೆ ಯೋಗ್ಯವಲ್ಲವೆಂದು ಬಿಟ್ಟಿರುವ ಹಿಡುವಳಿಗಳನ್ನು ಯಾರಾದರೂ ಕೃಷಿಗೊಳಪಡಿಸಬಹುದಾಗಿತ್ತು. ಇದಕ್ಕೆ ಯಾವುದೇ ರೀತಿಯ ಕಂದಾಯವನ್ನು ವಿಧಿಸುತ್ತಿರಲಿಲ್ಲ. ಆದರೆ ಈ ಪ್ರದೇಶವು ರಸ್ತೆ, ಕೆರೆ, ಸ್ಮಶಾನಕ್ಕಾಗಿ ಅಥವಾ ವಸತಿಗೃಹಗಳನ್ನು ಕಟ್ಟಲು ಉಪಯೋಗಿಸಲ್ಪಡುವ ಪ್ರದೇಶವಾಗಿದ್ದರೆ ಕೃಷಿಗೊಳಪಡಿಸಲು ಅವಕಾಶವಿರಲಿಲ್ಲ.

## ದರಖಾಸ್ತು ಭೂಹಿಡುವಳಿ

ಕಮೀಷನರ್ ಆಡಳಿತಾವಧಿಯಲ್ಲಿ (೧೮೩೧-೧೮೮೧) ಹೊಸದಾಗಿ ಭೂಹಿಡುವಳಿಗಳನ್ನು ಕೃಷಿಗೊಳಪಡಿಸುವಾಗ ದರಖಾಸ್ತು ಮೂಲಕ ಅರ್ಜಿ ಸಲ್ಲಿಸಿ ಭೂಹಿಡುವಳಿಗಳನ್ನು ಪಡೆಯಬೇಕಾಗಿತ್ತು. ಅವರು ದರಖಾಸ್ತು ಠೇವಣಿಯನ್ನು ನಿರ್ದಿಷ್ಟ ಮೊತ್ತದಲ್ಲಿ ಮುಂಗಡವಾಗಿ ಇಡಬೇಕಾಗಿತ್ತು. ಅದರ ಮೊತ್ತವು ನಾಲ್ಕನೇ ಒಂದಷ್ಟಾಗಿತ್ತು ಉಳಿದ ಮೊತ್ತವನ್ನು ಸಮಾನವಾದ ಆರು ಕಂತುಗಳಲ್ಲಿ ಪ್ರತಿ ತಿಂಗಳು ೨೦ನೇ ತಾರೀಖಿನೊಳಗೆ ತಾಲೂಕು ಕಚೇರಿಯಲ್ಲಿ ಪಾವತಿಸಬೇಕಾಗಿತ್ತು. ದರಖಾಸ್ತುದಾರನ ಪಾವತಿಸಿ ಹಣಕ್ಕೆ ರಸೀದಿ ಕೊಡುತ್ತಿದ್ದರು. ಈ ರೀತಿಯಾದ ವ್ಯವಸ್ಥೆ ಕಮೀಷನರ್ ಆಡಳಿತಾವಧಿಯಲ್ಲಿ ಜಾರಿಗೆ ಬಂದಿತು ಸಾಮಾನ್ಯವಾಗಿ ದರಖಾಸ್ತನ್ನು ಚೀಫ್‌ಕಮೀಷನರ್ ಮಂಜೂರು ಮಾಡುತ್ತಿದ್ದರು. ದರಖಾಸ್ತು ಭೂಹಿಡುವಳಿಗೆ ಅರ್ಜಿ ಸಲ್ಲಿಸಿದವರು ತಮಗೆ ಭೂಮಿ ಮಂಜೂರಾದ ವಿಷಯವು ತಿಳಿದ ಒಂದು ವಾರದ ಒಳಗಾಗಿ ಈ ಮೊದಲೇ

ಮುಂಗಡವಾಗಿ ಠೇವಣಿಯಾಗಿಟ್ಟಿರುವ ಹಣದ ಜೊತೆಗೆ ವಾರ್ಷಿಕವಾದ ಆದಾಯದಲ್ಲಿ ಕಾಲುಭಾಗದ ಠೇವಣಿಗೆ ಸರಿಯಾಗುವಂತೆ ನಗದಾಗಲಿ, ಸರಕಾರದ ಕ್ರಯಪತ್ರದ ಮೂಲಕವೇ ಆಗಲಿ ಜಿಲ್ಲಾಧಿಕಾರಿಯವರ ಕಛೇರಿಯಲ್ಲಿ ಠೇವಣಿ ಇಡಬೇಕಾಗಿತ್ತು. ನಂತರ ಸರಕಾರದ ಷರತ್ತುಗಳಿಗೆ ಒಪ್ಪಿಕೊಂಡು ಒಂದು ಕರಾರು ಪತ್ರ ಬರೆದುಕೊಡಬೇಕಾಗಿತ್ತು. ಯಾವುದೇ ದರಖಾಸ್ತುದಾರನು ಗೊತ್ತುಪಡಿಸಿದ ಠೇವಣಿಯನ್ನು ಕಟ್ಟದಿದ್ದಲ್ಲಿ ಅಥವಾ ಕರಾರಿಗೆ ರುಜು ಮಾಡಲು ನಿರಾಕರಿಸಿದರೆ ಅವನು ಮೊದಲಿಟ್ಟ ಠೇವಣಿಯು ರದ್ದಾಗುತ್ತಿತ್ತು. ಅಲ್ಲದೇ ಮಂಜೂರಾದ ದರಖಾಸ್ತು ಹಿಡುವಳಿಗಳನ್ನು ರದ್ದುಪಡಿಸುತ್ತಿದ್ದರು. ಕಮೀಷನರ್ ಕಾಲದಲ್ಲಾದ ಮತ್ತೊಂದು ಪ್ರಮುಖ ಅಂಶವೆಂದರೆ ಪ್ರತಿಯೊಬ್ಬ ದರಖಾಸ್ತುದಾರನು ಹೊಂದಿರುವ ಭೂಹಿಡುವಳಿಯ ವಿಧಾನವನ್ನು ಪಟ್ಟದಲ್ಲಿ ದಾಖಲಿಸುವ ಕ್ರಮ ಹೀಗಿತ್ತು[೬].

೧. ಭೂಹಿಡುವಳಿದಾರರಾಗಿದ್ದು ಸ್ವತಃ ಸಾಗುವಳಿ ಮಾಡದೇ ಇದ್ದರೆ ಸ್ವತಃ ಸಾಗುವಳಿ ಮಾಡದೆ ಇರುವ ಜಮೀನ್ದಾರ ಎಂದು ಗುರುತಿಸುತ್ತಿದ್ದರು.

೨. ಸ್ವತಃ ಸಾಗುವಳಿ ಮಾಡುವವರನ್ನು ಸಾಗುವಳಿ ಜಮಿನ್ದಾರ ಅಥವಾ ರೈತರೆಂದು ಕರೆಯುತ್ತಿದ್ದರು.

೩. ಭೂಮಿಯಲ್ಲಿ ಹಕ್ಕಿಲ್ಲದೆ ನಗದು ಅಥವಾ ಧಾನ್ಯ ಗುತ್ತಿಗೆಗೆ ಸಾಗುವಳಿ ಮಾಡುವವರನ್ನು ಗುತ್ತಿಗೆದಾರರೆಂದು ಕರೆಯುತ್ತಿದ್ದರು. ಕೃಷಿ ಕೆಲಸಕ್ಕೂ, ದನಗಳನ್ನು ಕಾಯುವುದಕ್ಕೂ ಇರುವ ವ್ಯಕ್ತಿಗಳನ್ನು ವ್ಯವಸಾಯ ಜೀತಗಾರರೆಂದು, ಸುಗ್ಗಿ ಮೊದಲಾದ ಕೆಲಸಗಳಲ್ಲಿ ತಾತ್ಕಾಲಿಕವಾಗಿ ಕೂಲಿ ಕೆಲಸ ಮಾಡುವವರನ್ನು ದಿನಗೂಲಿಗಳೆಂದು ಕರೆಯುತ್ತಿದ್ದರು.[೭]

ಇದರ ಜೊತೆಗೆ ಪ್ರತಿಯೊಬ್ಬ ದರಖಾಸ್ತುದಾರನು ಅವನ ಜಾತಿ, ಧರ್ಮದ ವಿವರಗಳನ್ನು ಸ್ಥಳೀಯವಾಗಿ ವಾಡಿಕೆಯಲ್ಲಿರುವಂತೆ ಬರೆಸಬೇಕಾಗಿತ್ತು. ಪ್ರತಿ ವ್ಯಕ್ತಿಯು ಯಾವ ಸಮುದಾಯದ ಅಥವಾ ಯಾವ ಧರ್ಮಕ್ಕೆ ಸೇರಿದವನು ಎಂಬುದನ್ನು ವಿವರವಾಗಿ ಗುರುತಿಸುವ ಕೆಲಸ ನಡೆಯಿತು. ಉದಾಹರಣೆಗೆ ಬ್ರಾಹ್ಮಣರಲ್ಲಿ ಬರುವ ಒಳಪಂಗಡಗಳನ್ನು ಗುರುತಿಸಲಾಗಿತ್ತು. ಹಾಗೆಯೇ ಇತರ ಸಮುದಾಯಗಳಲ್ಲಿ ಕುಂಚಿಟಿಗ, ಹಾಲುಕುರುಬ, ಕಮ್ಮ, ಗೌಡ, ಒಕ್ಕಲಿಗ ಹೀಗೆ ಇತರ ಸಮುದಾಯಗಳನ್ನು ಗುರುತಿಸಲಾಗಿತ್ತು. ಆದೇ ರೀತಿ ಕೆಳಸಮುದಾಯಗಳಲ್ಲಿಯೂ ಹೊಲೆಯ, ಮಾದಿಗರ ಭೇದವನ್ನು, ಮುಸ್ಲಿಂ ಸಮುದಾಯದಲ್ಲಿ ಸೈಯದ್, ಶೇಕ್, ಪಠಾನ್, ಸುನ್ನಿ, ಅದೇ ರೀತಿ ಕ್ರೈಸ್ತರಲ್ಲಿರುವ ರೋಮನ್, ಕ್ಯಾಥೋಲಿಕ್ ಮೊದಲಾದ ಸಮೂಹಗಳಿಗೆ ಸೇರಿದವರು ದರಖಾಸ್ತು ಅರ್ಜಿ ಸಲ್ಲಿಸುವಾಗಲೇ ತಮ್ಮ ಸಮುದಾಯದ ವಿವರವನ್ನು ನೀಡಬೇಕಾಗಿತ್ತು.[೮]

ದಿವಾನರ ಕಾಲಾವಧಿಯಲ್ಲಿಯೂ ೧೮೮೧ರ ನಂತರ ದರಖಾಸ್ತು ಭೂಹಿಡುವಳಿಗಳಿಗೆ ಹೆಚ್ಚು ಮಹತ್ವ ನೀಡಲಾಯಿತು. ಈ ಅವಧಿಯಲ್ಲಿ ಹೊಸದಾಗಿ ಭೂಹಿಡುವಳಿಗಳನ್ನು ಕೃಷಿಗೊಳಪಡಿಸುವಾಗ ದರಖಾಸ್ತು ಅರ್ಜಿ ಸಲ್ಲಿಸಿ ತಾಲೂಕಿನ ಅಮಲ್ದಾರರಿಂದ ಮಂಜೂರಾತಿ ಪಡೆದ ನಂತರವೇ ಹಿಡುವಳಿಗಳನ್ನು ಕೃಷಿಗೊಳಪಡಿಸ ಬೇಕಾಗಿತ್ತು. ಆ ಕ್ರಮವೆಂದರೆ ಒಬ್ಬ ವ್ಯಕ್ತಿಗೆ ದರಖಾಸ್ತು ಮಂಜೂರಾದ ತರುವಾಯ ಅದಕ್ಕೆ ಸಂಬಂಧಿಸಿದ ಕಾಗದ ಪತ್ರಗಳನ್ನು ಶ್ಯಾನುಭೋಗರು ತಯಾರಿಸುತ್ತಿದ್ದರು. ತನಗೆ ಮಂಜೂರಾದ ಭೂಮಿಯ ಬಗ್ಗೆ ಖಚಿತಪಡಿಸಿಕೊಳಲು ಮಂಜೂರಾತಿ ಪತ್ರವನ್ನು ಪಡೆಯುವ ವ್ಯವಸ್ಥೆ ದಿವಾನರ ಕಾಲದಲ್ಲಿತ್ತು. ಅಂದಿನ ದರಖಾಸ್ತು ಪತ್ರದಲ್ಲಿ ಒಂದು ಭೂಹಿಡುವಳಿಯ ನಂಬರ್, ಹಿಡುವಳಿದಾರರ ಹೆಸರು, ತಾರೀಖು ಮತ್ತು ಹಿಡುವಳಿಯು ತರಿ, ಖುಷ್ಕಿ ಮತ್ತು ಬಾಗಾಯ್ತು ಎಂಬ ಅದರ ಸ್ವಭಾವವನ್ನು ಸ್ಪಷ್ಟವಾಗಿ ನಮೂದಿಸಿದ್ದರು. ಚಿತ್ರದುರ್ಗ ಜಿಲ್ಲೆಯಲ್ಲಿ ೧೯೧೮ರಿಂದ ಸುಮಾರು ೧೦ ವರುಷಗಳಲ್ಲಿ ಮಂಜೂರಾದ ದರಖಾಸ್ತು ಭೂಹಿಡುವಳಿಗಳ ಅಂಕಿ-ಅಂಶಗಳನ್ನು ಈ ಕೆಳಗಿನಂತೆ ಗಮನಿಸಬಹುದು.[೯]

**ಮಂಜೂರಾದ ದರಖಾಸ್ತು ಭೂಹಿಡುವಳಿ[೧೦]**
**೧೯೧೮-೧೯೨೦**

| ವರ್ಷ | ದರಖಾಸ್ತು ಭೂಮಿ |
|---|---|
| ೧೯೧೮-೧೯ | ೨೩೪ |
| ೧೯೧೯-೨೦ | ೬೮೯ |
| ೧೯೨೦-೨೧ | ೫೬೨ |
| ೧೯೨೧-೨೨ | ೭೨೬ |
| ೧೯೨೨-೨೩ | ೧,೨೯೬ |
| ೧೯೨೩-೨೪ | ೧,೦೪೨ |
| ೧೯೨೪-೨೫ | ೧,೭೮೪ |
| ೧೯೨೫-೨೬ | ೧,೬೩೦ |
| ೧೯೨೬-೨೭ | ೨,೦೧೮ |
| ೧೯೨೭-೨೮ | ೨,೨೦೯ |
| ಒಟ್ಟು | ೧೨,೧೯೦ |
| ೧೦ ವರ್ಷದ ಶೇಕಡವಾರು | ೮.೩ |

ಈ ಮೇಲಿನ ಅಂಕಿ-ಅಂಶಗಳನ್ನು ಗಮನಿಸಿದರೆ ದಿವಾನರ ಕಾಲದಲ್ಲಿ ದರಖಾಸ್ತು, ಭೂಹಿಡುವಳಿಗಳಿಗಿದ್ದ ಮಹತ್ವ ಸ್ಪಷ್ಟವಾಗಿ ತಿಳಿಯುತ್ತದೆ. ಏಕೆಂದರೆ ಕೃಷಿ ಮಾಡಲ್ಪಟ್ಟ ಭೂಹಿಡುವಳಿಗಳು ಕಂದಾಯ ಪಾವತಿಯ ಆಡಳಿತ ವ್ಯವಸ್ಥೆಯಲ್ಲಿ ಬರಲು ಮತ್ತು ಸಮುದಾಯದಲ್ಲಿರುವ ಎಲ್ಲರಿಗೂ ಭೂಹಿಡುವಳಿಗಳನ್ನು ಸಮಾನವಾಗಿ ಹಂಚಿಕೆಯಾಗುವಲ್ಲಿ ದರಖಾಸ್ತು ಭೂಹಿಡುವಳಿಯ ಮಂಜೂರಾತಿ ಪ್ರಮುಖ ಪಾತ್ರವಹಿಸಿತ್ತು. ಇದರಿಂದ ಸರಕಾರಕ್ಕೆ ಠೇವಣಿ ಹಣ, ಸ್ಟಾಂಪ್ ಶುಲ್ಕ ಮತ್ತು ಭೂ ಕಂದಾಯದ ವಸೂಲಾತಿಯಲ್ಲಾಗುವ ದುರುಪಯೋಗವನ್ನು ಸುಲಭವಾಗಿ ತಡೆಯಬಹುದಾಗಿತ್ತು. ಈ ವ್ಯವಸ್ಥೆಯಿಂದಾಗಿ ಗ್ರಾಮಗಳಲ್ಲಿನ ಪಟೇಲರು ಮತ್ತು ಶ್ಯಾನುಭೋಗರು ಸರಕಾರದ ನೇರ ನಿಯಂತ್ರಣಕ್ಕೊಳಪಡುತ್ತಿದ್ದರು[11].

ಒಟ್ಟಿನಲ್ಲಿ ೧೮೮೧ರ ನಂತರ ಬಂದ ಭೂ ಸಂಬಂಧಿ ಮಸೂದೆಗಳು ಭೂ ಹಿಡುವಳಿದಾರರಿಗೆ ಕೃಷಿಯಲ್ಲಿ ಭದ್ರತೆ ನೀಡುವಲ್ಲಿ ಸ್ವಲ್ಪಮಟ್ಟಿಗೆ ಯಶಸ್ವಿಯಾಗಿರುವುದನ್ನು ಈ ಸಂದರ್ಭದಲ್ಲಿ ಗಮನಿಸಲಾಗಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ೧೯೦೫ನೇ ಮಾರ್ಚ್ ೭, ಹುಕುಂ ಆರ್ ೧೧೬೨೧, ಎಲ್.ಆರ್, ೫೨೩೦೫, ೧ನೇ ನಂಬರ್‌ನ ೪೦ನೇ ನಿಬಂಧನೆಯ (ಕೆ.ಎಸ್.ಎ)

೨. ೧೯೧೩ ಜುಲೈ ೨೮ನೇ ಹುಕುಂ ೯೬೮-೭೭, ಎಲ್.ಆರ್.೬೧೯,೧೨-೨ನೇ ನಂಬರಿನ ಸರಕಾರಿ ಹುಕುಂ (ಕೆ.ಎಸ್.ಎ).

೩. ೧೯೨೫ನೇ ಆಗಸ್ಟ್ ೧೮ನೇ ಹುಕುಂ ಆರ್ ೮೬೯-೭೫ ಎಲ್ ಆರ್, ೭೫-೭೫-೨ನೇ ನಂಬರಿನ ಸರಕಾರಿ ಹುಕುಂ (ಕೆ.ಎಸ್.ಎ)

೪. ೧೯೨೭ ಜುಲೈ ೯೦ನೇ ಹುಕುಂ ಆರ್ ೧೯೭-೨೧೩ ಎಲ್.ಆರ್. ೯೨-೨೬, ೮ನೇ ನಂಬರಿನ ಸರಕಾರಿ ಹುಕುಂ (ಕೆ.ಎಸ್.ಎ)

೫. ೧೯೩೨ ಏಪ್ರಿಲ್ ೧೨ನೇ ಹುಕುಂ ಆರ್ ೪೮೦೪ ಎಲ್. ಆರ್ ೯೧-೨೯-೯ನೇ ನಂಬರಿನ ಮತ್ತು ೧೯೩೩ನೇ ಮಾರ್ಚ್ ೧೪ನೇ ಹುಕುಂ (ಕೆ.ಎಸ್.ಎ)

೬. ಮೈಸೂರು ಲ್ಯಾಂಡ್ ರೆವಿನ್ಯೂ ಕೋಡ್‌ಗೆ ಅನುಸಾರವಾಗಿ ರಚಿಸಿದ ನಿಬಂಧನೆಗಳು, ಪು. ೧೨೫.

೭. ಎಚ್.ಈ.ಬಸವರಾಜಪ್ಪ, ಮೈಸೂರು ಸಂಸ್ಥಾನದ ಒಂದು ಭೂ ದಾಖಲೆ, ಎಂ.ಜಿ. ನಾಗರಾಜ್, ಪಿ.ವಿ.ಕೃಷ್ಣಮೂರ್ತಿ (ಸಂ) ಇತಿಹಾಸ ದರ್ಶನ, ಕರ್ನಾಟಕ ಇತಿಹಾಸ ಅಕಾದೆಮಿ, ಬೆಂಗಳೂರು, ಸಂಪುಟ-೧೫/೨೦೦೦, ಪು. ೧೬೯

೮. ಮೈಸೂರು ಲ್ಯಾಂಡ್ ರೆವಿನ್ಯೂ ಕೋಡ್‌ಗೆ ಅನುಸಾರವಾಗಿ ರಚಿಸಿದ ನಿಬಂಧನೆಗಳು, ಪು. ೧೨೦

೯. ಜಮೀನು ಹಕ್ಕುಗಳ ರೆವಿನ್ಯೂ ದಾಖಲಾತಿ ಸ್ಕೀಂ, ಗೌರ್ನಮೆಂಟ್ ಆರ್ಡರ್, ನಂ.೪೫೪೫, ಡೆವೆಲಪ್‌ಮೆಂಟ್ ಸೆಕ್ರಟರಿಯೇಟ್, ನಂ.ಆರ್.೪೫೪೫ ಎಲ್.ಎಸ್.೩೮/೩೨/೫ ಆರ್ ೯-೧೦ನೇ ಮಾರ್ಚ್, ೧೯೩೩, ಹೊಸದುರ್ಗ ತಾಲೂಕು ಅಧಿಕಾರಿಗಳ ದಾಖಲಾತಿ ವಿಭಾಗ ಚಿತ್ರದುರ್ಗ ಜಿಲ್ಲೆ.

೧೦. ಮೈಸೂರು ಗೆಜೆಟ್ ಮಾರ್ಚ್ ೫, ೧೮೮೧

೧೧. ಗೌರ್ನಮೆಂಟ್ ಆಫ್ ಹಿಸ್ ಹೈನೆಸ್ ದಿ ಮಹಾರಾಜ ಆಫ್ ಮೈಸೂರು, ಪ್ರೊಸೀಡಿಂಗ್ಸ್ ಆಫ್ ದಿ ಮೈಸೂರು, ರೆಪ್ರಜಂಟೇಟಿವ್ ಅಸೆಂಬ್ಲಿ (ದಸರಾ ಸೆಶನ್) ಅಕ್ಟೋಬರ್-ನವೆಂಬರ್ ೧೯೨೮, ಮೈಸೂರು ಗೌರ್ನಮೆಂಟ್ ಪ್ರೆಸ್, ೧೯೩೧, ಪು. ೧೨೨೧.

ಡಾ॥ ಹನುಮನಾಯಕ*

# ಹದಿನೆಂಟನೆ ಶತಮಾನದ ಕರ್ನಾಟಕದ ಕೆಲವು ಅಧಿಕಾರಿಗಳು

ಅಧಿಕಾರಿಗಳು ರಾಜನ ಮತ್ತು ರಾಜ್ಯದ ಬೆನ್ನೆಲುಬಾಗಿ ಕಾರ್ಯ ನಿರ್ವಹಿಸಿದ್ದುದನ್ನು ಹಾಗೂ ಅಂತಹ ಹುದ್ದೆಯ ಸ್ವರೂಪ ಮತ್ತು ಹೆಸರುಗಳು ಕಾಲದಿಂದ ಕಾಲಕ್ಕೆ, ಪ್ರದೇಶದಿಂದ ಪ್ರದೇಶಕ್ಕೆ ಭಿನ್ನವಾಗಿದ್ದನ್ನು ಇತಿಹಾಸದ ಪುಟಗಳಲ್ಲಿ ಪ್ರಾಚೀನ ಕಾಲದಿಂದ ಆಧುನಿಕ ಕಾಲದವರೆಗೆ ಕಾಣಬಹುದು. ಇದಕ್ಕೆ ಕಾರಣಗಳು ಭೌಗೋಳಿಕ, ಆರ್ಥಿಕ, ಸಾಮಾಜಿಕ ಮತ್ತು ರಾಜಕೀಯ ಹಿನ್ನೆಲೆಯಿರಬಹುದು. ಇಂತಹ ಬೆಳವಣಿಗೆಯನ್ನು ಮತ್ತು ಪ್ರಕ್ರಿಯೆಯನ್ನು ಗುರುತಿಸುವಲ್ಲಿ ಕನ್ನಡ ಶಾಸನಗಳು ಹೆಚ್ಚು ಮಹತ್ವದ್ದಾಗಿವೆ.

ವಿಜನಗರೋತ್ತರ ಕಾಲದ ಕನ್ನಡ ಶಾಸನಗಳಲ್ಲಿ ಪ್ರಥಮ ಬಾರಿಗೆ ಕೆಲವು ನವೀನ ಹುದ್ದೆಗಳ ಹೆಸರುಗಳು ಕಂಡು ಬರುತ್ತವೆ. ಅವುಗಳೆಂದರೆ ಸೇರ್ವೆಗಾರರು, ವಂಟಿಗಾರರು ಮತ್ತು ವಾಲೆಕಾರರು. ಇವುಗಳ ಉಲ್ಲೇಖಗಳು ಹಾಸನ ಜಿಲ್ಲೆಯ ಅರಸೀಕೆರೆ ಮತ್ತು ಹೊಳೆನರಸೀಪುರ ತಾಲ್ಲೋಕಿನ ಶಾಸನಗಳಲ್ಲಿ ಕಂಡುಬರುತ್ತದೆ.[೧] ಇವುಗಳನ್ನು ಹೊರತು ಪಡಿಸಿದರೆ ಕರ್ನಾಟಕದ ಯಾವುದೇ ಭಾಗದ ಶಾಸನಗಳಲ್ಲಿ ಇಂತಹ ಅಧಿಕಾರಿಗಳ ಉಲ್ಲೇಖ ಕಂಡುಬರುವುದಿಲ್ಲ. ಚಿತ್ರದುರ್ಗದ ಪಾಳೆಗಾರರ ಅವಧಿಯಲ್ಲಿ ಇಂತಹ ಅಧಿಕಾರಿಗಳು ಇದ್ದುದನ್ನು ಕೆಲವು ಸಂಶೋಧಕರು ಗುರುತಿಸಿದ್ದಾರೆ[೨]. ಆದರೆ ಅವುಗಳ ಉಲ್ಲೇಖ ಅಲ್ಲಿಯ ಶಾಸನಗಳಲ್ಲಿಲ್ಲ. ಆದ್ದರಿಂದ ಈ ಲೇಖನದಲ್ಲಿ ಈ ಅಧಿಕಾರಿಗಳು/ಹುದ್ದೆಗಳು ಏತಕ್ಕಾಗಿ ಹದಿನೆಂಟನೆ ಶತಮಾನದಲ್ಲಿಯೇ ಅಸ್ತಿತ್ವಕ್ಕೆ ಬಂದವು, ಇವು ಕೇವಲ ಸೀಮಿತ ಪ್ರದೇಶಗಳಲ್ಲಿ ಮಾತ್ರ ಏಕೆ ಕಾಣಿಸಿಕೊಂಡವು, ಹಾಗೂ ಅವುಗಳ ಸ್ಥಾನ–ಮಾನಗಳೇನು ಎಂಬುದನ್ನು ಕುರಿತು ಈ ಲೇಖನದಲ್ಲಿ ಚರ್ಚಿಸಲಾಗುವುದು.

ಈ ಹುದ್ದೆಗಳ/ಅಧಿಕಾರಿಗಳ ಉಲ್ಲೇಖಗಳಿರುವ ಶಾಸನಗಳೆಲ್ಲವೂ ಹದಿನೆಂಟನೆಯ ಶತಮಾನದ ಮಧ್ಯಭಾಗಕ್ಕೆ ಸೇರಿದವುಗಳಾಗಿವೆ. ವಿಜಯನಗರ ಸಾಮ್ರಾಜ್ಯವು ೧೫೬೫ರ ತಾಳಿಕೋಟೆ ಯುದ್ಧದಲ್ಲಿ ರಾಜಕೀಯವಾಗಿ ಸಂಪೂರ್ಣವಾಗಿ ಪತನವಾದನಂತರ ಅದರ ಜಾಗದಲ್ಲಿ ಹಲವಾರು ತುಂಡರಸರ ಆಳ್ವಿಕೆಯು ಅಸ್ತಿತ್ವಕ್ಕೆ ಬಂದಿತು. ಅವುಗಳಲ್ಲಿ ಮುಖ್ಯವಾದವುಗಳೆಂದರೆ ಇಕ್ಕೇರಿ ನಾಯಕರು, ಮೈಸೂರು ಒಡೆಯರು, ಚಿತ್ರದುರ್ಗದ ನಾಯಕರು, ಯಲಹಂಕ ಪ್ರಭುಗಳು ಇತ್ಯಾದಿ. ವಿಜಯನಗರ ಮತ್ತು ವಿಜಯನಗರ ಪೂರ್ವದಲ್ಲಿದ್ದ ಪ್ರಮುಖ ಅಧಿಕಾರಿಗಳೆಂದರೆ ಮಹಾಪ್ರಧಾನ, ದಂಡನಾಯಕ, ಮಹಾಸಾಮಂತ, ಪೆರ್ಗ್ಗಡೆ, ನಾಯಕ, ಸೇನಬೋವ, ಗಾವುಂಡ, ತಳವಾರ ಮತ್ತು ಅಮರನಾಯಕ, ಕ್ರಿ.ಶ. ೧೭೬೦ರ ನಂತರ ಮೈಸೂರಿನಲ್ಲಿ ಹೈದರಾಲಿಯ ಪ್ರವೇಶದನಂತರ ಇಂತಹ ಹುದ್ದೆಗಳ/ಅಧಿಕಾರಿಗಳ ಹೆಸರುಗಳನ್ನು ಕಾಣಲಾಗುವುದಿಲ್ಲ.

**ಹುದ್ದೆಗಳ ಅರ್ಥ : ವಾಲೆಕಾರ್ರು** ಎಂದರೆ ರಾಜನ ಓಲಗದಲ್ಲಿದ್ದವರು, ರಾಜನ ಸಂರಕ್ಷರು ಹಾಗೂ ಸುದ್ದಿ ಸಮಾಚಾರಗಳನ್ನು ಸಂಗ್ರಹಿಸುವವರು ಹಾಗೂ ಒಯ್ಯುವವರು ಎಂದು ತಿಳಿಯಬಹುದು[೩]. ಇನ್ನು **ವಂಟಿಗಾರರು** ಅಥವಾ ವಂಠಿಗಾರರು ಎಂದರೆ ಸೇವಕರು, ಭಾಗ/ಪಾಲು ಮಾಡುವವರು ಎಂದು ಅರ್ಥೈಸಿಲಾಗಿದೆ[೪]. **ಸೇರುವೆಗಾರರು** ಎಂಬುದಕ್ಕೆ ಸೇರು, ಅಳತೆಯ ಪ್ರಮಾಣ, ಮುಖ್ಯಸ್ಥ ಎಂಬ ಅರ್ಥಗಳಿವೆ[೫]. ಹಾಸನ ಜಿಲ್ಲೆಯ ಅರಸೀಕೆರೆ ಮತ್ತು ಹೊಳೆನರಸಿಪುರ ತಾಲ್ಲೋಕುಗಳ ಶಾಸನಗಳಲ್ಲಿ ಇವರನ್ನು ಕಂದಾಚಾರದ ಸೇರುಗಾರ್ರು, ಅಟ್ಟವಣೆ ಅಥವಾ ಅತವಣೆ ಸೇರುಗಾರ್ರು, ಮಣಿಹ್ಯದಾಳುಗಳು, ಗೊಲ್ಲರ ಸರ್ವೆಗಾರರೆಂದರೆ ಭೂಕಂದಾಯ ಲೆಕ್ಕ ಪತ್ರಗಳನ್ನಿಟ್ಟು ಅದರ ಕಾರ್ಯ ಭಾರವನ್ನು ನಿರ್ವಹಿಸುತ್ತಿದ್ದವರು. (ಪೊಲೀಸ್ ಮತ್ತು ಕಂದಾಯ ಇಲಾಖೆ)[೬] ಸಮುಖದ ಸೇರ್ವೆಗಾರರೆಂದರೆ ವಾಕ್ಪಟುತ್ವವುಳ್ಳವರು ಹಾಗೂ ರಾಜನ ಸನ್ನಿಧಾನದಲ್ಲಿದ್ದವರು ಎಂದರ್ಥ[೭]. ಮಣಿಹ್ಯದಾಳುಗಳು ಅಥವಾ ಮಣಿಹ್ಯದವರೆಂದರೆ ದೇವಾಲಯ, ಮಠ, ಅರಮನೆ, ಸುಂಕದಕಟ್ಟೆ ಮುಂತಾದವುಗಳ ಉಸ್ತುವಾರಿಯ ಅಧಿಕಾರಿಗಳಾಗಿದ್ದರು.[೮]

* ಇತಿಹಾಸ ವಿಭಾಗ, ಮಂಗಳೂರು ವಿಶ್ವವಿದ್ಯಾನಿಲಯ, ಮಂಗಳಗಂಗೋತ್ರಿ – ೫೭೪ ೧೯೯.

ಕೆ.ವಿ. ರಮೇಶ್‌ರವರು ದಕ್ಷಿಣ ಕನ್ನಡದ ಶಾಸನಗಳು ಸಹ ಅಠವಣೆ ಮತ್ತು ಓಲೆಯಕಾರ ಅಥವಾ ವಾಲೇಕಾರ ಎಂಬ ಅಧಿಕಾರಗಳನ್ನು ಉಲ್ಲೇಖಿಸುತ್ತವೆಂದು ತಿಳಿಸಿದ್ದಾರೆ[೧೦]. ಆದರೆ ಅಂಥ ಅಧಿಕಾರಿಗಳಿದ್ದ ಬಗ್ಗೆ ಅಲ್ಲಿಯ ಶಾಸನಗಳನ್ನು ಮತ್ತಷ್ಟು ನಿಖರವಾಗಿ ಪರಾಮರ್ಶಿಸಬೇಕೆನ್ನಿಸುತ್ತದೆ. ಈ ಶಾಸನಗಳ ಆಧಾರದ ಮೇಲೆ ಅವರ ವೈಶಿಷ್ಟ್ಯಗಳನ್ನು ಮತ್ತು ಸ್ಥಾನಮಾನಗಳನ್ನು ತಿಳಿಯಬಹುದು.

**ವೈಶಿಷ್ಟ್ಯಗಳು :** ೧) ಈ ಎಲ್ಲಾ ಶಾಸನಗಳು ಶಿಲಾಶಾಸನಗಳಾಗಿರದೇ ಲೋಹದ ಮೇಲೆ ಕೆತ್ತಿದವುಗಳಾಗಿವೆ. ಅರಸೀಕೆರೆ ಶಾಸನಗಳೆಲ್ಲವೂ ತಾಮ್ರಪಟಗಳು ಹಾಗೂ ಹೊಳೆನರಸೀಪುರದ ಶಾಸನಗಳು ಬೆಳ್ಳಿ ಬಟ್ಟಲಿನ ಮೇಲೆ ಬರೆಸಿದವುಗಳಾಗಿವೆ.

೨) ಈ ಶಾಸನೋಕ್ತ ಅಧಿಕಾರಿಗಳೆಲ್ಲರೂ ವೈಷ್ಣವ ಪಂಥಕ್ಕೆ ಸೇರಿದ ಹೊಳೆನರಸೀಪುರ ಲಕ್ಷ್ಮಿನರಸಿಂಹಸ್ವಾಮಿ ಮತ್ತು ಅರಸೀಕೆರೆ ತಿರುಪತಿ ವೆಂಕಟಾಚಲಸ್ವಾಮಿಗೆ ( ಈಗಿನ ಮಾಲೆಕಲ್ಲು ತಿರುಪತಿ ದೇವಸ್ಥಾನ) ನಡೆದುಕೊಂಡಿರುವುದು.

೩) ಹೊಳೆನರಸೀಪುರದ ಶಾಸನಗಳ ಕಾಲವನ್ನು ಎ.ಕ.ಸಂಪುಟಗಳಲ್ಲಿ ಕ್ರಿ.ಶ. ೧೯ನೆ ಶತಮಾನದವು ಎಂದು ಅಭಿಪ್ರಾಯಪಡಲಾಗಿದೆ[೧೧]. ಆ ಶಾಸನಗಳಲ್ಲಿ ಕಂಠಿರಾಯ ಹಣದ ಉಲ್ಲೇಖ ಬಂದಿರುವುದರಿಂದ ಅವು ಕ್ರಿ.ಶ. ೧೭ ಅಥವಾ ೧೮ನೇ ಶತಮಾನದವಾಗಿದ್ದು, ಅರಸೀಕೆರೆ ಶಾಸನಗಳ ಸಮಕಾಲದವು ಎಂದು ಹೇಳಬಹುದು. ಇದಕ್ಕೆ ಪುಷ್ಟಿಯೆಂಬಂತೆ ಚಿತ್ರದುರ್ಗದ ಪಾಳೆಯಗಾರರ ಕಾಲದಲ್ಲೂ ಇಂತಹ ಅಧಿಕಾರಿಗಳು ಕಂಡು ಬರುತ್ತಾರೆ. ಏಕೆಂದರೆ ಕಂಠೀರಾಯ ಹಣವೂ ಮೈಸೂರು ಒಡೆಯರ ಪ್ರಸಿದ್ಧ ದೊರೆ ರಣಧೀರ ಕಂಠೀರವ ನರಸರಾಜ ಒಡೆಯರ ಕಾಲದಲ್ಲಿ (೧೬೩೮–೧೬೫೯) ಟಂಕಿಸಿ ಅಸ್ತಿತ್ವಕ್ಕೆ ಬಂದವುಗಳಾದ್ದರಿಂದ ಅವುಗಳು ೧೭ನೆ ಶತಮಾನಕ್ಕೆ ಸೇರಿದವುಗಳಾಗಿವೆ[೧೨].

**ಶಾಸನಗಳ ವಿವರಗಳು :** ಕ್ರಿ.ಶ.೧೭೪೫ರ ತಿರುಪತಿ (ಅರಸೀಕೆರೆ) ತಾಮ್ರಶಾಸನದ ಪ್ರಕಾರ ಬಾಣಾವರ, ಜಾವಗಲ್ಲು ಕಂದಾಚಾರದಲ್ಲಿ ಸೇವೆ ಮಾಡಿಕೊಂಡಿದ್ದ ಸೇರುಗಾರ್ರು, ವಂಟಿಗಾರ್ರು ಮತ್ತು ವಾಲೆಕಾರ್ರು ಅರಸೀಕೆರೆ ತಿರುಪತಿ ದೇವಸ್ಥಾನದಲ್ಲಿ ನಡೆಯುವ ಪಡಿತರ ದೀಪಾರಾಧನೆಯ ಸೇವೆಗೆ ಪ್ರತಿಯೊಬ್ಬರು ವರ್ಷಕ್ಕೊಮ್ಮೆ ಒಂದು ಕಂಠೀರಾಯಿ ಹಣವನ್ನು ಅವರ ಸಂಬಳದಿಂದ ಅವರ ಮಕ್ಕಳು ಮರಿಮಕ್ಕಳು ಇರುವ ತನಕವೂ ಸಂದಾಯ ಮಾಡುವುದಾಗಿ ಸ್ವಇಚ್ಛೆಯಿಂದ ಒಪ್ಪಿ ಬರೆಸಿರುವುದು ಕಂಡು ಬರುತ್ತದೆ[೧೩]. ಅಲ್ಲಿಯ ಇನ್ನೊಂದು ಶಾಸನವು ಬಾಣಾವರದ ಅಟ್ಟವಣೆ ಸೇರುಗಾರ್ರು ಮತ್ತು ಮಣಿಹ್ಯದಾಳುಗಳು ವರ್ಷಕ್ಕೆ ಒಂದು ಕಂಠೀರಾಯಿ ಹಣವನ್ನು ಅದೇ ದೇವರ ಪಡಿತರ ದೀಪಾರಾಧನೆ ಸೇವೆಗೆ ದಾನ ಮಾಡುವುದಾಗಿ ಒಪ್ಪಿಕೊಂಡಿದ್ದನ್ನು ತಿಳಿಸುತ್ತದೆ[೧೪]. ಅಲ್ಲಿಯ ಇನ್ನೊಂದು ಶಾಸನವು ಗರುಡನಗಿರಿ, ಹಿರೇಕಲ್ಲುದುರ್ಗ, ಕಣಕಟ್ಟೆ, ಬೆಲಗೂರು, ಕಬ್ಬಳ ಮುಂತಾದ ಕಂದಾಚಾರದ ಸೇವೆಯಲ್ಲಿದ್ದ ಸೇರುಗಾರರು, ವಂಟಿಗಾರರು ಮತ್ತು ವಾಲೇಕಾರರು ಒಟ್ಟಿಗೆ ಸೇರಿ ಸಹಮತದಿಂದ ಅವರ ಸಂಬಳದಿಂದ ವರ್ಷಕ್ಕೆ ಒಂದು ಕಂಠೀರಾಯಿ ಹಣದಂತೆ ತಿರುಪತಿ ವೆಂಕಟಾಚಲಸ್ವಾಮಿ ದೇವಾಸ್ಥಾನದಲ್ಲಿ ನಡೆಯುವ ಪಡಿತರ ದೀಪಾರಾಧನೆ ಸೇವೆಗೆ ದಾನ ಮಾಡಿದ್ದು ಕಂಡುಬರುತ್ತದೆ[೧೫]. ಅಲ್ಲಿಯ ಮತ್ತೊಂದು (೧೭೪೫) ಶಾಸನವು ಗರುಡನಗಿರಿ ಅಠವಣೆ ಸೇರುಗಾರ ಮಣಿಹ್ಯದಾಳುಗಳು ವರ್ಷಕ್ಕೆ ಒಂದು ಕಂಠೀರಾಯಿ ಹಣದಂತೆ ಅವರ ಸಂಬಳದಿಂದ ತಿರುಪತಿ ವೆಂಕಟಾಚಲ ಸ್ವಾಮಿಯ ಪಡಿತರ ದೀಪಾರಾಧನೆ ಸೇವೆಗೆ ದಾನ ಮಾಡಿದ್ದನ್ನು ತಿಳಿಸುತ್ತದೆ[೧೬].

ಹೊಳೆನರಸೀಪುರದ ಲಕ್ಷ್ಮಿನರಸಿಂಹ ದೇವಾಸ್ಥಾನದ ತೀರ್ಥದಗುಂಡು ಬೆಳ್ಳಿಬಟ್ಟಲಿನ ಮೇಲಿನ ಶಾಸನವು ಸಮುಖದ ಸೇರವೆಗಾರ ದುರ್ಗೈಯನು ಶ್ರೀ ನರಸಿಂಹ ಸ್ವಾಮಿಗೆ ಮಾಡಿದ ಸೇವೆಯನ್ನು ತಿಳಿಸುತ್ತದೆ[೧೭]. ಇದೊಂದು ದಿನಾಂಕವಿಲ್ಲದ ಶಾಸನವಾಗಿದ್ದು, ಸೇರುವೆಗಾರ ದುರ್ಗೈಯನು ಮಾಡಿದ ಸೇವೆಗಳ ವಿವರಗಳು ತಿಳಿದುಬರುವುದಿಲ್ಲ. ಅಲ್ಲಿಯ ಇನ್ನೊಂದು ಶಾಸನವು ಹಜೂರ್ರು ಖಾಸಬೊಕ್ಕಸದ ಸೇರ್ವೆಗಾರ ಗೊಲ್ಲೆಯ ಗುರುವಯ್ಯನ ತಮ್ಮ ಸಿದ್ದಪ್ಪನು ಶ್ರೀ ಲಕ್ಷ್ಮಿನರಸಿಂಹ ದೇವರಿಗೆ ಮಾಡಿದ ಸೇವೆಯನ್ನು ತಿಳಿಸುತ್ತದೆ[೧೮]. ಇಲ್ಲಿಯೂ ಸಹ ಸೇವೆಯ ವಿವರ ತಿಳಿದು ಬರುವುದಿಲ್ಲ. ಇಲ್ಲಿಯ ಮತ್ತೊಂದು ಶಾಸನವು ಗೊಲ್ಲರ ಸೇರ್ವೆಗಾರ ಮೈಲಾರಯ್ಯನಿಗೆ ದೊರೆಯು (ಮುಮ್ಮಡಿ ಕೃಷ್ಣರಾಜ ಒಡೆಯರು?) ಭೂಮಿಯನ್ನು ನೀಡಿದ್ದನ್ನು ತಿಳಿಸುತ್ತದೆ[೧೯]. ಅಲ್ಲಿಯ ಮತ್ತೊಂದು ಶಾಸನವು ಗೊಲ್ಲರ ಸೇರ್ವೆಗಾರ ದುರ್ಗಯ್ಯನಿಗೆ ಅಲ್ಲಿಯ ದೊರೆಯು ಗದ್ದೆಯನ್ನು ಕೊಡುಗೆಯಾಗಿ ನೀಡಿದ್ದನ್ನು ತಿಳಿಸುತ್ತದೆ[೨೦].

ಈ ಶಾಸನಗಳಲ್ಲಿ ಕೆಲವು ಮುಖ್ಯ ವಿಷಯಗಳು ಕಂಡು ಬರುತ್ತವೆ. ಅವುಗಳೆಂದರೆ **ಮೊದಲನೆಯದಾಗಿ** ಅರಸೀಕೆರೆ ಶಾಸನಗಳಲ್ಲಿ ಸೇರ್ರುಗಾರ, ಸೇರುಗಾರ್ರು ಮತ್ತು ಸೇರುಗಾರ ಎಂಬುದಾಗಿ ಕಂಡು ಬಂದರೆ. ಹೊಳೆನರಸೀಪುರ ಶಾಸನಗಳಲ್ಲಿ ಸೇರವೆಗಾರ, ಸೇರ್ವೆಗಾರ ಮತ್ತು ಸೇರ್ವೆಗಾರ ಎಂದು ಕಂಡುಬರುತ್ತದೆ. **ಎರಡನೆಯದಾಗಿ** ಅರಸೀಕೆರೆ ಶಾಸನಗಳಲ್ಲಿ ಸೇರುವೆಗಾರರ ಜೊತೆಯಲ್ಲಿ ವಂಟಿಗಾರ್ರು ಮತ್ತು ವಾಲೇಕಾರರು ಕಾಣಿಸಿಕೊಳ್ಳುತ್ತಾರೆ.

ಆದರೆ ಹೊಳೆನರಸೀಪುರದ ಶಾಸನಗಳಲ್ಲಿ ವಂಟಿಗಾರರು ಮತ್ತು ವಾಲೇಕಾರರು ಕಾಣಿಸಿಕೊಳ್ಳುವುದಿಲ್ಲ. **ಮೂರನೆಯದಾಗಿ** ಇವರೆಲ್ಲರೂ ವೈಷ್ಣವ ದೇವಾಲಯಕ್ಕೆ ದಾನ ಮಾಡಿರುವುದು ಕಂಡು ಬರುತ್ತದೆ. **ನಾಲ್ಕನೆಯದಾಗಿ** ಅರಸೀಕೆರೆ ಶಾಸನಗಳಲ್ಲಿ ಸೇರುವೆಗಾರರಾಗಿ ಯಾರು ಯಾರು ಇದ್ದರು ಎಂಬುದಕ್ಕೆ ವ್ಯಕ್ತಿಯ ಹೆಸರುಗಳಿಲ್ಲ. ಆದರೆ ಹೊಳೆನರಸೀಪುರದ ಶಾಸನಗಳಲ್ಲಿ ಸೇರುವೆಗಾರ ರಾಗಿದ್ದ ವ್ಯಕ್ತಿಯ ಹೆಸರಿನ ಜೊತೆಗೆ ಅವನ ಜಾತಿಯ ಹೆಸರು ಸಹ ಉಲ್ಲೇಖಗೊಂಡಿದೆ. ಇವರೆಲ್ಲರೂ ಗೊಲ್ಲರ ಜಾತಿಗೆ ಸೇರಿದವರಾಗಿದ್ದಾರೆ. ಐದನೆಯದಾಗಿ ಅರಸೀಕೆರೆ ಶಾಸನಗಳಲ್ಲಿ ಅಠವಣೆಯ ಮತ್ತು ಕಂದಾಚಾರದ ಸೇರುವೆಗಾರ ರೆಂತಲೂ ಮತ್ತು ಹೊಳೆನರಸೀಪುರದ ಶಾಸನಗಳಲ್ಲಿ ಸಮುಖದ ಮತ್ತು ಖಾಸ ಬೊಕ್ಕಸದ ಸೇರುವೆಗಾರರೆಂತಲೂ ಉಲ್ಲೇಖಿಸಲ್ಪಟ್ಟಿದಾರೆ. ಆರನೆಯದಾಗಿ ಇವರು ರಾಜ್ಯದ ಅಧಿಕಾರಿಗಳಾಗಿದ್ದು, ಧಾರ್ಮಿಕ ಕ್ಷೇತ್ರಗಳ ಸಂರಕ್ಷಣೆ ಮತ್ತು ಬೆಳವಣಿಗೆಯಲ್ಲಿ ಪಾಲ್ಗೊಂಡಿರುವುದು.

ಇಂದು ಹಾಸನ ಜಿಲ್ಲೆಯಲ್ಲಾಗಲಿ ಅಥವಾ ಕರ್ನಾಟಕದ ಇತರೆ ಜಿಲ್ಲೆಗಳಲ್ಲಾಗಲಿ ಸೇರುವೆಗಾರ, ವಂಟಿಗಾರ ಎಂಬ ಉಪನಾಮದಿಂದ ಕೊನೆಗೊಳ್ಳುವ ಹೆಸರುಗಳು ಕಂಡುಬರುವುದಿಲ್ಲ. ಅರಸೀಕೆರೆ ತಾಲ್ಲೋಕು ಅಣಕಟ್ಟೆ ಹೋಬಳಿಯಲ್ಲಿ ವಾಲೇಹಳ್ಳಿ ಎಂಬ ಹೆಸರಿನ ಗ್ರಾಮವಿದೆ. ಇದನ್ನು ಹೊರತುಪಡಿಸಿದರೆ ವ್ಯಕ್ತಿ ಅಥವಾ ಗ್ರಾಮದ ಹೆಸರುಗಳು ಇಲ್ಲಿ ಕಂಡು ಬರುವುದಿಲ್ಲ. ಸಾಮಾನ್ಯವಾಗಿ ಈ ಪ್ರದೇಶದಲ್ಲಿ ಅಂದು ಪ್ರಚಲಿತದಲ್ಲಿದ್ದ ಹುದ್ದೆಗಳಾದ ಹೆಗ್ಗಡೆ, ಗೌಡ, ನಾಯಕ, ಪಟೇಲ, ಪಾಟೀಲ, ಶೆಟ್ಟಿ, ಪಟ್ಟಣಶೆಟ್ಟಿ, ಕೊರಿಶೆಟ್ಟಿ, ಕುಲಕರ್ಣಿ ಮುಂತಾದವು ಈಗಲೂ ಉಪನಾಮ ಗಳಾಗಿ ಕರ್ನಾಟಕದಾದ್ಯಂತ ಕಂಡು ಬರುತ್ತವೆ. ಆದರೆ ಸೇರುವೆಗಾರ, ವಂಟಿಗಾರ ಮತ್ತು ವಾಲೇಕಾರ ಎಂಬ ಹುದ್ದೆಗಳು/ಉಪನಾಮಗಳು ಏನಾದವು? ಇವರೇನಾದರೂ ಬೇರೆ ಸ್ಥಳಗಳಿಗೆ ವರ್ಗಾವಣೆಯಾಗಿ ಅಥವಾ ವಲಸೆ ಹೋದರೆ? ಅಥವಾ ಈ ಹುದ್ದೆಗಳ ಹೆಸರುಗಳನ್ನು ಈ ಪ್ರಾಂತ್ಯದ ಅಧಿಕಾರವು ಹೈದರಾಲಿಗೆ ವರ್ಗಾವಣೆಯಾದ ನಂತರ ತೆಗೆದು ಹಾಕಲಾಯಿತೇ? ಈ ಪ್ರಶ್ನೆಗಳಿಗೆ ಉತ್ತರ ಸಿಗುವುದು ದುಸ್ತರ. ಆದರೆ ಇವುಗಳಲ್ಲಿ ಒಂದನ್ನು ಅಂದರೆ ಸೇರುವೆಗಾರರನ್ನು ಕುರಿತು ಚರ್ಚಿಸುವುದಕ್ಕೆ ಆಸ್ಪದವಿದೆ. ಏಕೆಂದರೆ ಈ ಉಪನಾಮದಿಂದ ಕೊನೆಗೊಳ್ಳುವ ಹೆಸರುಗಳು/ವ್ಯಕ್ತಿಗಳು ಈಗಲೂ ದಕ್ಷಿಣ ಕನ್ನಡ ಜಿಲ್ಲೆಯಲ್ಲಿದ್ದಾರೆ. ಇವರ ಮನೆಮಾತು ಈಗಲೂ ಕನ್ನಡವಾಗಿರುವುದರಿಂದ ಇವರು ಕ್ರಿ.ಶ.೧೮ನೇ ಶತಮಾನದಲ್ಲಿ ರಾಜ್ಯ ವಿಸ್ತರಣೆ ಅಥವಾ ರಕ್ಷಣೆಯ ಕಾರ್ಯದಲ್ಲಿ ಕೆಳದಿ ನಾಯಕರ, ಮತ್ತು ಹೈದರಾಲಿ ಸೈನ್ಯದೊಡನೆ ದಕ್ಷಿಣ ಕನ್ನಡ ಜಿಲ್ಲೆಗೆ ಬಂದಿರುವ ಸಾಧ್ಯತೆಗಳು ಹೆಚ್ಚಿವೆ.

ಸೇರುವೆಗಾರರನ್ನು ಕೋಟೆಯವರು, ಕ್ಷತ್ರಿಯರು ಅಥವಾ ರಾಮಕ್ಷತ್ರಿಯರು ಎಂದು ಸ್ಟರಕ್ ಗುರುತಿಸಿದ್ದಾರೆ[೨೧].ಅವರ ಪ್ರಕಾರ ಇವರು ಗೋವಾದ ಕೊಂಕಣಿ ಮರಾಠರ ಒಂದು ಕವಲಾಗಿದ್ದು, ಕೆಳದಿ ನಾಯಕರ ಆಳ್ವಿಕೆಯಲ್ಲಿ ಸೈನಿಕರಾಗಿಯೂ ಮತ್ತು ಅವರ ಕೋಟೆಕೊತ್ತಲಗಳನ್ನು ಕಾಪಾಡುವುದಾಗಿದ್ದರಿಂದ ಅವರನ್ನು ಕೋಟೆಯವರೆಂದು ಕರೆಯಲಾಯಿತು. ಈಗ ಅವರ ವೃತ್ತಿಯು ಕೃಷಿ, ಮತ್ತು ಸರ್ಕಾರಿ ನೌಕರಿಯಾಗಿದೆ. ಸ್ಟರಕ್ ಪ್ರಕಾರ ಸೇರುವೆಗಾರ ಎಂಬ ಪದವು ಕನ್ನಡದ ಸೇವೆ/ಸೇರ್ವೆ ಎಂಬ ಪದದಿಂದ ಬಂದಿದ್ದು, ಅದು ಸೈನಿಕ ಸೇವೆಯಾಗಿತ್ತು. ಅವರ ಉಪನಾಮಗಳು ನಾಯಕ, ಅಯ್ಯ, ರಾವ್ ಮತ್ತು ಶೇರಿಗಾರ್ ಎಡ್ಗರ್ ಥರ್ಸ್ಟನ್‌ರವರು ಸ್ಟರಕ್‌ರವರ ಅಭಿಪ್ರಾಯವನ್ನು ಸಂಪೂರ್ಣವಾಗಿ ಒಪ್ಪಿಕೊಂಡಿರುವುದು ಕಂಡುಬರುತ್ತದೆ[೨೨]. ಅವರ ಪ್ರಕಾರ ಸೇರ್ವೆಗಾರರ ಇನ್ನೊಂದು ಹೆಸರು ರಾಮಕ್ಷತ್ರಿಯ. ೧೯೦೧ರ ಜನಗಣತಿ ಪ್ರಕಾರ ವಾಲೇಕಾರ ಅಥವಾ ವೀಳಯಕಾರರು ಸೇರ್ವೆಗಾರರ ಉಪಜಾತಿಗೆ ಸೇರಿದವರಾಗಿದ್ದಾರೆ. ಆದರೆ ಅನಂತಕೃಷ್ಣ ಅಯ್ಯರ್ ಪ್ರಕಾರ ಕರ್ನಾಟಕದ ಕೆಲವು ಭಾಗಗಳಲ್ಲಿ ಹಳ್ಳಿಕಾರರನ್ನು ಸೇರ್ವೆಗಾರರೆಂದು ಕರೆಯಲಾಗಿದೆ[೨೩]. ಅವರ ಪ್ರಕಾರ ಸೇರ್ವೆಗಾರರೆಂದರೆ ಅಮೃತ್ ಮಹಲ್ ಇಲಾಖೆಯಲ್ಲಿ ದನಗಳ ಮಂದೆಯನ್ನು ನೋಡಿಕೊಳ್ಳುವ ಮೇಲ್ವಿಚಾರಕರು. ಅವರು ಸಹ ಗೌಡ ಮತ್ತು ನಾಯಕ ಎಂಬ ಉಪನಾಮಗಳನ್ನು ಇಟ್ಟುಕೊಳ್ಳುತ್ತಾರೆ. ಅವರ ಮನೆ ಮಾತು ಕನ್ನಡವಾಗಿದ್ದು, ಕಾಡು ಗೊಲ್ಲರ ಸಂಸ್ಕೃತಿಗೆ ಹತ್ತಿರವಾದವರು.

ಇವರ ಉಲ್ಲೇಖ ದಕ್ಷಿಣ ಕನ್ನಡ ಜಿಲ್ಲೆಯ ಜನಪದವಾದ ಪಾಡ್ದನಗಳಲ್ಲಿ ಕಂಡುಬರುವುದಿಲ್ಲ. ಪಾಡ್ದನಗಳಲ್ಲಿ ಕೇವಲ ಎಂಟು ಸಾಮಾಜಿಕ ವರ್ಗಗಳು ಕಂಡು ಬಂದಿವೆ. ಅವುಗಳೆಂದರೆ ಬಿಲ್ಲವರು, ಬಂಟರು, ಬ್ರಾಹ್ಮಣರು, ಜೈನರು, ಮೊಗೇರರು, ಮಾಪಿಳ್ಳರು, ಪೂಂಬಡರು ಮತ್ತು ಹೊಲೆಯರು. ಇತರ ಸಮಾಜದವರೆಂದರೆ ಕೊರಗರು, ಕುಣಬಿಗಳು, ವಕ್ಕೆತರರು ಮತ್ತು ಕ್ರಿಶ್ಚಿಯನ್ನರು[೨೪]. ಪಾಡ್ದನಗಳು ಕ್ರಿ.ಶ.೧೫ ಮತ್ತು ೧೬ನೆ ಶತಮಾನಕ್ಕೆ ಸೇರಿದವುಗಳಾದ್ದರಿಂದಲೂ ಹಾಗೂ ಸೇರ್ವೆಗಾರರು ಕೆಳದಿಯವರ ಹಾಗೂ ಹೈದರಾಲಿಯ ಸಮಯದಲ್ಲಿ ದಕ್ಷಿಣ ಕನ್ನಡಕ್ಕೆ ಬಂದಿದ್ದರಿಂದಲೂ ಅವರ ಉಲ್ಲೇಖ ಇಲ್ಲದಿರುವುದು ಸ್ವಾಭಾವಿಕವಾಗಿದೆ. ಗುರುರಾಜ ಭಟ್ಟರ ಪ್ರಕಾರ ಶೇರಿಗಾರರನ್ನು ದೇವಾಡಿಗರೆಂತಲೂ

ಕರೆಯಲಾಗಿದ್ದು, ದೇವಾಲಯಗಳಲ್ಲಿ ವಾದ್ಯ ನುಡಿಸುವುದು ಮತ್ತಿತರ ದೇವಸ್ಥಾನದ ಕೆಲಸಗಳನ್ನು ಮಾಡುವುದು ಅವರ ವೃತ್ತಿಯಾಗಿದೆ[೨೫].

ಈ ಮೇಲಿನ ವಿವರಣೆಗಳಿಂದ ದಕ್ಷಿಣ ಕನ್ನಡದ ಸೇರುವೆಗಾರರು/ಶೇರಿಗಾರರು ಮೂಲತಃ ದಕ್ಷಿಣ ಕನ್ನಡದವರಾಗಿರದೇ ಹೊರಗಿನಿಂದ ಬಂದಿರುವುದು ಸ್ಪಷ್ಟವಾಗಿ ಕಂಡು ಬರುತ್ತದೆ. ಇವರಷ್ಟೇ ಅಲ್ಲ, ಅಳುಪರ ನಂತರ ದಕ್ಷಿಣ ಕನ್ನಡವನ್ನು ಆಳಿದ ಎಲ್ಲಾ ಸಾಮಂತರಸರು/ರಾಜಮನೆತನಗಳು ತಮ್ಮ ಮೂಲವನ್ನು ಘಟ್ಟದ ಮೇಲೆಯೇ ಗುರುತಿಸಿಕೊಳ್ಳುತ್ತವೆ[೨೬]. ಇವರ ರೀತಿಯಲ್ಲೇ ದಕ್ಷಿಣ ಕನ್ನಡದಲ್ಲಿರುವ ಮರಾಠಿ ಜನಾಂಗದವರೂ ಸಹ ಶಿವಾಜಿ ಕಾಲದಲ್ಲಿ ಕರ್ನಾಟಕಕ್ಕೆ ಮತ್ತು ಕೆಳದಿಯವರ ಕಾಲದಲ್ಲಿ ದಕ್ಷಿಣ ಕನ್ನಡಕ್ಕೆ ಬಂದವರೆಂದು ದಾಖಲೆಗಳಿಂದ ತಿಳಿದು ಬಂದಿದೆ[೨೭]. ಆದರೆ ಅವರ ಮನೆಮಾತು ಮರಾಠಿಯಾಗಿಯೇ ಇಂದಿಗೂ ಮುಂದುವರೆದಿದೆ. ಅದೇ ರೀತಿ ಗೌಡ ಸಾರಸ್ವತರ ಮನೆಮಾತು ಕೊಂಕಣಿಯಾಗಿಯೇ ಉಳಿದಿದೆ. ಸೇರುವೆಗಾರರು ಗೋವಾದಿಂದ ಬಂದವರಾಗಿದ್ದರೆ ಅವರ ಮನೆಮಾತು ಕೊಂಕಣಿಯಾಗಿರಬೇಕಾಗಿತ್ತು. ಆದ್ದರಿಂದ ಸೇರುವೆಗಾರರ ಮೂಲ ಗೋವಾ ಆಗಿರದೇ ಕರ್ನಾಟಕದ ಘಟ್ಟದ ಪ್ರದೇಶಕ್ಕೆ ಸೇರಿದವರೆಂದು ಹೇಳಬಹುದು. ಒಂದು ಪಕ್ಷ ಸ್ಟಾರಕ್ ಅಭಿಪ್ರಾಯವನ್ನು ಪುಷ್ಟೀಕರಿಸುವುದಾದರೆ ಗೋವಾ ಪ್ರದೇಶದಲ್ಲಿಯೂ ಸಹ ಕ್ರಿ.ಶ.೧೭ ಮತ್ತು ೧೮ ನೇ ಶತಮಾನದಲ್ಲಿ ಕನ್ನಡದವರ ಸಂಖ್ಯೆ ಅಧಿಕವಾಗಿತ್ತೆಂದು ಭಾವಿಸಬಹುದು. ಇದಲ್ಲದೇ ಗೋವಾ ಪ್ರಾಂತ್ಯವು ಪೋರ್ಚುಗೀಸರ ವಶವಾದ ಮೇಲೆ ಅಲ್ಲಿದ್ದ ಕನ್ನಡಿಗ ಹಿಂದೂಗಳನ್ನು ವಲಸೆ ಹೋಗುವಂತೆ ಮಾಡಿರಬಹುದು.

ದಕ್ಷಿಣ ಕನ್ನಡದಲ್ಲಿ ಇವರಲ್ಲಿ ಎರಡು ವರ್ಗದವರು ಇರುವುದನ್ನು ಸ್ಥಳೀಯ ವಿದ್ವಾಂಸರು ಗುರುತಿಸಿದ್ದಾರೆ[೨೮]. ಅವರೆಂದರೆ ಸೇರ್ವೆಗಾರರು ಮತ್ತು ಶೇರಿಗಾರರು. ಶೇರಿಗಾರರು ದೇವಾಲಯಗಳ ಕಾರ್ಯದಲ್ಲಿ ವಾದ್ಯ ನುಡಿಸುವವರು ಮತ್ತು ಭೂತಾರಾಧನೆ ಹಾಗೂ ಕೋಲ ಕಟ್ಟುವ ಸಂದರ್ಭಗಳಲ್ಲಿ ಇಂದಿಗೂ ಸಹ ಮಹತ್ವದ ಪಾತ್ರ ವಹಿಸುವ ವರ್ಗವಾಗಿದೆ. ಶೇರಿಗಾರರು, ಮೊಯಿಲಿಗಳು ಹಾಗೂ ದೇವಾಡಿಗರ ಮಧ್ಯೆ ಹೆಚ್ಚು ಸಾಮ್ಯವಿದೆ. ಸೇರ್ವೆಗಾರರು ಎಂದರೆ ಸಾಮಂತ, ಮುಖ್ಯಸ್ಥ, ಮುಖಂಡ ಕಟ್ಟಡ ನಿರ್ಮಾಣದ ಮೇಲ್ವಿಚಾರ, ಮೇಸ್ತ್ರಿ ಇತ್ಯಾದಿ ಅರ್ಥಗಳಿವೆ.

ವಿಜಯನಗರ ಪೂರ್ವಕಾಲದ ತುಳುನಾಡಿನ ಅಧಿಕಾರಿಗಳೆಂದರೆ ಹೆಗ್ಗಡೆ, ಪ್ರಧಾನಿ, ಸಂಧಿವಿಗ್ರಹಿ, ಸೇನಬೋವ, ಚೇರ್ಕಾಡಿಗರು (ಊರಿನ ಪ್ರಮುಖರು), ಪುರೋಹಿತರು, ಮಹಾಜನರು, ದೇಶಿಪುರುಷರು, ಬಾಹತ್ತರ ನಿಯೋಗಿಗಳು, ಎರಡು ಕೋಲ ಬಳಿಯವರು, ಸಾಹಣಿ, ದಣ್ಣಾಯಕ, ಹಲರು, ನಾಯಕ, ಹಂಜಮಾನ, ನಖರ, ಸೆಟ್ಟಿಕಾರರು ಮತ್ತು ಎಳಮೆಗಳು.[೨೯] ವಿಜಯನಗರ ಕಾಲದ ತುಳುನಾಡಿನ ಅಧಿಕಾರಿಗಳೆಂದರೆ ಮಹಾಪ್ರಧಾನ, ದಣ್ಣಾಯಕ, ರಾಜ್ಯಪಾಲ, ಒಡೆಯ, ಸಮಸ್ತ ಹಲರು, ಐವರು ಹಲರು, ಕರಣಿಕ, ಪಾರುಪತ್ಯದವರು, ಸ್ಥಾನಿಕರು, ಸೆಟ್ಟಿಕಾರರು, ಎಳಮೆಗಳು, ಗ್ರಾಮಿಣಿಗಳು, ಸೇನಬೋವ, ಆದಿವಾಸದವರು, ಮಧ್ಯಸ್ಥ ಮತ್ತು ಜನನಿಗಳು.[೩೦]

ಈ ಮೇಲಿನ ವಿವರಣೆಗಳಿಂದ ವಿಜಯನಗರ ಪೂರ್ವೋತ್ತರ ಕಾಲದಲ್ಲಿ ಕೆಲವು ಹುದ್ದೆಗಳ/ಅಧಿಕಾರಿಗಳ ಹೆಸರುಗಳು ರಾಜ್ಯದ ಅವಶ್ಯಕತೆಗೆ ಅನುಗುಣವಾಗಿ ಹುಟ್ಟಿಕೊಳ್ಳುವುದು, ಅವುಗಳು ಕೇವಲ ಸೀಮಿತ ಪ್ರದೇಶಕ್ಕೆ ಸೀಮಿತಗೊಳ್ಳುವುದು ಮತ್ತು ಅವುಗಳು ಕಾಲಕ್ರಮೇಣ ಉಪಯುಕ್ತತೆ ಇಲ್ಲದಿದ್ದಾಗ ಸಾಮಾಜಿಕ ಗುಂಪುಗಳಾಗಿ ಮಾರ್ಪಾಟಾಗಿರುವುದು ಕಂಡುಬರುತ್ತದೆ.



## ಆಧಾರಸೂಚಿ


೧. **ಎಪಿಗ್ರಾಫಿಯ ಕರ್ನಾಟಕ** (ಇನ್ನು ಮುಂದೆ ಎ.ಕ) ಸಂಪುಟಗಳು ೮ ಮತ್ತು ೯ (ಪರಿಷ್ಕರಿಸಲ್ಪಟ್ಟವು)

೨. ಎಂ.ಎಸ್. ಪುಟ್ಟಣ್ಣನವರು., ಚಿತ್ರದುರ್ಗ ಪಾಳೆಗಾರರ ಆಡಳಿತಾವಧಿಯಲ್ಲಿ ರಾಜಪ್ರಧಾನಿ, ದಳವಾಯಿ, ಗುರಿಕಾರ, ರಾಹುತ, ಸೇನಾಪತಿ, ವಕೀಲ, ಸೇರುವೆಗಾರರು, ಪಟ್ಟಣಶೆಟ್ಟಿ, ಖಿಲ್ಲೆದಾರರು, ಪಾಂಚಾಳರು, ಪಾರುಪತ್ಯೆದಾರರು, ಕಮಾಟಗರು, ಅಹಲೆಗಾರರು, ಶ್ಯಾನುಭೋಗರು, ಬೊಕ್ಕಸದವರು, ಚೋಕುದಾರರು, ಸರದಾರರು, ಸೈನಿಕರು, ಕಟ್ಟೆಗೆಯವರು ಮತ್ತು ಚಿನ್ನದಮನೆ ಗುರಿಕಾರರು ಇದ್ದರು. ಹೆಚ್ಚಿನ ವಿವರಗಳಿಗಾಗಿ ನೋಡಿ ಅವರ ಕೃತಿ **ಚಿತ್ರದುರ್ಗದ ಪಾಳೆಯಗಾರರು**, ಮರುಮುದ್ರಣ, (ಮೈಸೂರು, ೧೯೭೭), ಪು.೬೬ ಇದೇ ಅಭಿಪ್ರಾಯವನ್ನು ಚಿತ್ರದುರ್ಗದ ಬಗ್ಗೆ ಹೆಚ್ಚು ಕೆಲಸ ಮಾಡಿರುವ ಪ್ರೊ.ಲಕ್ಷ್ಮಣ್ ತೆಲಗಾವಿ ಮತ್ತು ಪ್ರೊ. ಬಿ.ರಾಜಶೇಖರಪ್ಪ ತಮ್ಮ ಕೃತಿಗಳಲ್ಲಿ ತಿಳಿದಿದ್ದಾರೆ.

೩. ಪ್ರೊ. ಬಸವರಾಧ್ಯ, ಎನ್. (ಸಂ.) **ಕನ್ನಡ-ಕನ್ನಡ ನಿಘಂಟು**, ಕನ್ನಡ ಸಾಹಿತ್ಯ ಪರಿಷತ್ತು, ಸಂಪುಟ.೮, (ಬೆಂಗಳೂರು, ೧೯೯೫), ಪುಟಗಳು, ೧೮೫೭-೫೮.

೪. ಅದೇ., ಪುಟ ೭೭೫೦

೫. ಅದೇ., ಪುಟ ೮೪೯೬.

೬ ಎ.ಕ. ಸಂ. ೮. ಕ್ರಿ.ಶ.೧೮ನೆ ಶತಮಾನದ ಶಾಸನ ಸಂಖ್ಯೆಗಳು ೨೩, ೨೫, ೩೭, ೪೬ ಮತ್ತು ಸಂಪುಟ ೧೦ ರಲ್ಲಿ ಕ್ರಿ.ಶ.೧೭೪೫ ರ ಶಾಸನ ಸಂಖ್ಯೆಗಳು ೧೩೫-೧೩೮.

೭. ನರಸಿಂಹಾಚಾರ್ ಡಿ.ಎಲ್., (ಸಂ) **ಕನ್ನಡ ಕನ್ನಡ ನಿಘಂಟು,** ಕನ್ನಡ ಸಾಹಿತ್ಯ ಪರಿಷತ್ತು, ಸಂ. ೧, (ಬೆಂಗಳೂರು, ೧೯೭೦), ಪುಟ. ೧೧೩.

೮. **ಪ್ರೊ.** ಬಸವರಾಧ್ಯ, ಎನ್. (ಸಂ) **ಕನ್ನಡ ಕನ್ನಡ ನಿಘಂಟು,** ಕನ್ನಡ ಸಾಹಿತ್ಯ ಪರಿಷತ್ತು, ಸಂಪುಟ ೮, (ಬೆಂಗಳೂರು, ೧೯೯೫), ಪುಟ. ೮೩೫೬.

೯. ಅದೇ ಕೆ.ವಿ., ಪುಟ. ೬೮೭೮.

೧೦. ರಮೇಶ್ ಕೆ.ವಿ., ಹಿಸ್ಟರಿ ಆಫ್ ಸೌಥ್ ಕೆನರಾ, (ಧಾರವಾಢ, ೧೯೭೦), ಪುಟ ೨೬೧.

೧೧. ಎ.ಕ. ಸಂಪುಟ ೮ ರ ಸಂಪಾದಕರಾದ ಬಾ.ರಾ.ಗೋಪಾಲ್ ರವರು ಈ ಶಾಸನಗಳಲ್ಲಿ ಕಾಲದ ಉಲ್ಲೇಖಗಳಿಲ್ಲದ ಕಾರಣ ಅವುಗಳನ್ನು ೧೯ನೆ ಶತಮಾನಕ್ಕೆ ಸೇರಿಸಿದ್ದಾರೆ.

೧೨. ದೇಸಾಯಿ ಪಿ.ಬಿ., ಎ ಹಿಸ್ಟರಿ ಆಫ್ ಕರ್ನಾಟಕ, (ಧಾರವಾಢ, ೧೯೭೦) ಪುಟಗಳು ೪೧೫-೧೬.

೧೩. ಎ.ಕ. ಸಂಪುಟ ೧೦, ಅರಸೀಕೆರೆ.೧೩೫

೧೪. ಅದೇ., ಸಂಖ್ಯೆ. ೧೩೬.

೧೫. ಅದೇ., ಸಂಖ್ಯೆ. ೧೩೭.

೧೬. ಅದೇ., ಸಂಖ್ಯೆ. ೧೩೮.

೧೭. ಅದೇ., ಸಂಪುಟ ೮, ಹೊಳೆನರಸೀಪುರ, ಸಂಖ್ಯೆ. ೨೩.

೧೮. ಅದೇ., ಸಂಖ್ಯೆ. ೨೫.

೧೯. ಅದೇ., ಸಂಖ್ಯೆ. ೩೭.

೨೦. ಅದೇ., ಸಂಖ್ಯೆ. ೪೬.

೨೧. ಸ್ಟರಕ್ ಜೆ., ಮದ್ರಾಸ್ ಡಿಸ್ಟ್ರಿಕ್ಟ್ ಮ್ಯಾನುಯಲ್. ಸೌಥ್ ಕೆನರಾ ಸಂ. ೧, (ಮದ್ರಾಸ್, ೧೮೯೪), ಪುಟಗಳು. ೧೬೩-೬೪.

೨೨. ಎಡ್ಗರ್ ಥರ್ಸ್ಟನ್., ಕಾಸ್ಟ್ಸ್ ಅಂಡ್ ಟ್ರೈಬ್ಸ್ ಸದರನ್ ಇಂಡಿಯಾ, ಸಂಪುಟ.೬. (ದೆಹಲಿ, ೧೯೭೫) ಪುಟಗಳು. ೨೪೨, ೩೬೨-೬೩.

೨೩. ಅನಂತಕೃಷ್ಣ ಅಯ್ಯರ್ ಎಲ್.ಕೆ., ಮೈಸೂರ್ ಟ್ರೈಬ್ಸ್ ಅಂಡ್ ಕಾಸ್ಟ್ಸ್, ಸಂಪುಟಗಳು ೩. (ನವದೆಹಲಿ, ೨೦೦೫), ಮರುಮುದ್ರಣ, ಪುಟ. ೨೭೦-೨೭೭.

೨೪. ಸಾಲೆತೂರ್ ಜಿ.ಎ., ಏನ್ಷಿಯೆಂಟ್ ಕರ್ನಾಟಕ, ಹಿಸ್ಟರಿ ಆಫ್ ತುಳುವ, (ಪೂನಾ, ೧೯೩೬), ಪು.೪೬೦.

೨೫. ಗುರುರಾಜ ಭಟ್, ಪಿ., ಸ್ಟಡೀಸ್ ಇನ್ ತುಳುವ ಹಿಸ್ಟರಿ ಅಂಡ್ ಕಲ್ಚರ್, (ಮನಿಪಾಲ್, ೧೯೭೫), ಪುಟಗಳು. ೨೫೫-೫೬.

೨೬ ಹೆಚ್ಚಿನ ಮಾಹಿತಿಗಾಗಿ ನೋಡಿ. ಹೆರಂಜೆ ಕೃಷ್ಣಭಟ್ಟ ಮತ್ತಿತರರು (ಸಂ) **ತುಳು ಕರ್ನಾಟಕದ ಅರಸು ಮನೆತನಗಳು,** (ಹಂಪಿ, ೨೦೦೦)

೨೭. ಹೆಚ್ಚಿನ ಮಾಹಿತಿಗಾಗಿ ನೋಡಿ, ಡಾ.ಸುಂದರ ನಾಯ್ಕ., ಮರಾಠಿ ಜನಾಂಗದ ಅಧ್ಯಯನ, ಅಪ್ರಕಟಿತ ಪಿ.ಎಚ್.ಡಿ ಪ್ರಬಂಧ, ಮಂಗಳೂರು ವಿಶ್ವವಿದ್ಯಾಲಯ ೨೦೦೭.

೨೮. ದಿನಾಂಕ ೦೮.೦೯.೨೦೦೭ ರಂದು ಹಗರಿಬೊಮ್ಮನಹಳ್ಳಿಯಲ್ಲಿ ನಡೆದ ೨೧ನೇ ವಾರ್ಷಿಕ ಸಮ್ಮೇಳನದಲ್ಲಿ ನಾನು ಈ ಲೇಖನ ಮಂಡಿಸಿದಾಗ ಮಿತ್ರರಾದ ಡಾ. ಜಗದೀಶ ಶೆಟ್ಟಿ, ಇಂದಿರಾ ಹೆಗ್ಗಡೆ ಮತ್ತಿತರು ದಕ್ಷಿಣ ಕನ್ನಡದಲ್ಲಿ ಈ ಎರಡು ಪಂಗಡಗಳಿರುವುದನ್ನು ನನ್ನ ಗಮನಕ್ಕೆ ತಂದರು. ಅದಕ್ಕಾಗಿ ಅವರಿಗೆ ನನ್ನ ಕೃತಜ್ಞತೆಗಳು.

೨೯. ವಸಂತ ಶೆಟ್ಟಿ ಬಿ., **ಉಡುಪಿ ತಾಲ್ಲೋಕಿನ ಶಾಸನಗಳು,** (ಬ್ರಹ್ಮಾವರ, ೧೯೯೫), ಪುಟ. ೧೭.

೩೦. ಅದೇ., ಪುಟಗಳು. ೨೦-೩೩.

ಡಾ. ಬಿ. ಲೀಲಾ*

# ಮಿರ್ಜಾ ಎಂ. ಇಸ್ಮೈಯಿಲ್ ಆಧುನಿಕ ಜಯಪುರದ ರೂವಾರಿ

ಆಧುನಿಕ ಮೈಸೂರಿನ ಚರಿತ್ರೆಯನ್ನು ಅಭ್ಯಾಸ ಮಾಡುವಾಗ ನಮಗೆ ಕಂಡು ಬರುವುದು ಹಲವಾರು ಮುತ್ಸದ್ದಿಗಳು ಮತ್ತು ರಾಜತಂತ್ರ ನಿಪುಣರು ದಿವಾನ್ ಶೇಷಾದ್ರಿ ಐಯ್ಯರ್, ಎಂ.ವಿಶ್ವೇಶ್ವರಯ್ಯರವರ ಹೆಸರುಗಳು ಎಲ್ಲರಿಗೂ ಪರಿಚಿತ. ೨೦೦೮ ಮಿರ್ಜಾರವರ ೧೨೫ನೇ ಜನ್ಮ ವರ್ಷ. ದಿವಾನ ಮಿರ್ಜಾ ಇಸ್ಮೈಯಿಲ್‌ರವರು ಹದಿನೈದು ವರುಷ ಮೈಸೂರಿನ ದಿವಾನರಾಗಿದ್ದು ರಾಜತಂತ್ರವನ್ನು ಚೆನ್ನಾಗಿ ತಿಳಿದವರಾದ್ದರು. ೧೯೨೬-೧೯೪೧ ರ ವರೆಗೆ ಮೈಸೂರಿನ ದಿವಾನರಾಗಿದ್ದ ಮಿರ್ಜಾ ಇಸ್ಮೈಯಿಲ್ ಮೈಸೂರಿನ ಮಹಾರಾಜ ನಾಲ್ವಡಿ ಕೃಷ್ಣರಾಜ ಒಡೆಯರ್ ಗತಿಸಿದ ನಂತರ ತಮ್ಮ ಕೆಲಸಕ್ಕೆ ರಾಜೀನಾಮೆ ಕೊಟ್ಟು (೧೯೪೧), ೧೯೪೨ರಲ್ಲಿ ಜಯಪುರ ಮಹಾರಾಜ ಮಾನ್‌ಸಿಂಗ್ ಆಹ್ವಾನದ ಮೇರೆ ಜಯಪುರದಲ್ಲಿ ದಿವಾನರಾಗಿ ನೇಮಕವಾದರು. ಮಿರ್ಜಾ ಇಸ್ಮೈಯಿಲ್‌ರವರು ಜಯಪುರದ ದಿವಾನರಾದಾಗ ಜಯಪುರದ ಪ್ರಗತಿ ಅಷ್ಟೇನೂ ಆಶಾದಾಯಕವಾಗಿರಲಿಲ್ಲ. ಮೊದಲು ಹೊರಗಿನಿಂದ ಬಂದ ಮಿರ್ಜಾ ಜನರ ಮನವನ್ನು ಗೆಲ್ಲಬೇಕಾಗಿತ್ತು. ಅದೂ ಅಲ್ಲದೆ ಆ ಸಮಯದಲ್ಲಿ ರಾಷ್ಟ್ರೀಯ ಅಂದೋಲನ ನಡೆದಿತ್ತು. ಮತ್ತು ಚಳುವಳಿ ಎಲ್ಲಾ ಕಡೆ ಹಬ್ಬಿತ್ತು. ಮಿರ್ಜಾರ ಮೇಲೆ ಬ್ರಿಟೀಷರ ಅನುಮಾನವಿತ್ತು. ಮಿರ್ಜಾರವರನ್ನು ಜಯಪುರಕ್ಕೆ ಮುಖ್ಯಮಂತ್ರಿಯಾಗಿ ಕರೆಸಿಕೊಳ್ಳಲು ಮಹಾರಾಜ ಮಾನ್‌ಸಿಂಗ್ ಜಿ.ಡಿ. ಬಿರ್ಲಾರವರ ಸಲಹೆ ಪಡೆದಿದ್ದರು. ಮಿರ್ಜಾ ಇಸ್ಮೈಯಿಲ್ ಮತ್ತು ಜಿ.ಡಿ. ಬಿರ್ಲಾರವರನ್ನು ಅವರು ಗೌರವಿಸುತ್ತಿದ್ದರು. ಇದು ಬ್ರಿಟೀಷರಿಗೆ ತಿಳಿದಿತ್ತು.[೧] ಮಿರ್ಜಾ ಇಸ್ಮೈಯಿಲ್ ಜಿ.ಡಿ. ಬಿರ್ಲಾರವರಿಗೆ ಪತ್ರದಿಂದ ಇದನ್ನು ಸ್ಪಷ್ಟೀಕರಿಸಬಹುದು.

I know how pleased you will be to hear that i have after all decided to go to Jaipur. His Highness so kind and insistant that I felt that I could not disappoint him. your +your brothers words too had their influence .......I look to your supports cooperation in my work in the state[೨]

ಮಿರ್ಜಾ ಇಸ್ಮೈಯಿಲ್ ಮತ್ತು ಗಾಂಧಿಜೀ ಅವರ ಮೇಲಿದ್ದ ಅಭಿಮಾನ ಕೂಡ ಬ್ರಿಟೀಷರಿಗೆ ಸವಾಲಾಗಿತ್ತು.[೩] ಗಾಂಧಿಜೀ ಅವರಿಗೆ ಮಿರ್ಜಾ ತಾವು ರಾಜಪುಟಾಣಕ್ಕೆ (ಜಯಪುರ) ದಿವಾನರಾಗಿ ಹೋಗುವುದಕ್ಕೆ ಮೊದಲು ಪತ್ರ ಬರೆದಿದ್ದು ಅದಕ್ಕೆ ಬಹಳ ಕಾಲದ ಮೇಲೆ ಉತ್ತರ ಬಂತು.

Dear Mirza

Sevagram, wardha
19-3-41

I was holding between two opinions whether to condole your congratulate you on your acceptance of the Dewanship of Jaipur I had pictured for you a position on a widerfield where you could have made an effective contribution to communa! unity. But your letter to Rajkumari Amritkaur(convinced me) enabled me to come to a decision though the field is narrow. you will render a great service if you succeed in helping the emancipation of the people of Rajastan.

ಮಿರ್ಜಾರವರು ರಾಜಸ್ಥಾನಕ್ಕೆ ತಮ್ಮ ನೂತನ ಅಧಿಕಾರವನ್ನು ಕೈಗೆ ತೆಗೆದುಕೊಂಡಾಗ ಜೇಸಾಯಿಗಾರರಿಗೆ ಜಹಗೀರುದಾರನ ಮೇಲೆ ಇರುವ ಅತೃಪ್ತಿ ಸ್ಫೋಟಗೊಂಡು ಅದು ಕ್ರಾಂತಿಯಾಗಿ ರಾಷ್ಟ್ರೀಯ ಅಂಧೋಲನದಲ್ಲಿ ಮಾರ್ಪಾಡಾಗುವ ಸಂಭವವಿತ್ತು. ಜಯಪುರ ರಾಜ್ಯ ಪ್ರಜಾಮಂಡಲಿ ೧೯೩೮ರಲ್ಲಿ ಆರಂಭವಾಗಿ ಹೀರಾಲಾಲ್ ಶಾಸ್ತ್ರಿಗಳ ನೇತೃತ್ವದಲ್ಲಿ ಮುಂದುವರೆದಿತ್ತು. ಹೀರಾಲಾಲ್ ಶಾಸ್ತ್ರಿಗಳು ಮೆಯೊ ಕಾಲೇಜಿನಿಂದ ಗೌರವ ಪಡೆದಿದ್ದರು. ಉನ್ನತ ಶಿಕ್ಷಣ ಪಡೆದು ಸರ್ಕಾರದ ಉತ್ತಮ ದರ್ಜೆಯಲ್ಲಿದ್ದರು. ಅದೂ ಅಲ್ಲದೆ ಗಾಂಧೀಜೀ ಅವರ ಆಪ್ತರಾಗಿ ಸಬರಮತಿ ಆಶ್ರಮದಲ್ಲಿದ್ದವರು. ಜಯಪುರದಲ್ಲಿ ಮುಖ್ಯವಾದ ಸಮಾಜ ಸೇವಕರೆಂದು ಹೆಸರು ಪಡೆದು, ಸ್ತ್ರೀ ವಿದ್ಯಾಭ್ಯಾಸಕ್ಕೆ ಪ್ರೋತ್ಸಾಹ ಕೊಟ್ಟು ಬನಸ್ಥಲಿ ವಿದ್ಯಾಪೀಠವೆಂಬ ಸಂಸ್ಥೆಯನ್ನು ಸ್ಥಾಪಿಸಿದರು (೧೯೩೫). ಇದು ಸ್ತ್ರೀ ವಿದ್ಯಾಭ್ಯಾಸದಲ್ಲೇ

* ತಾಮಲಾ, ಮುಂಬೈ.

ಮೈಲುಗಲ್ಲು. ಇವರು ದರ್ಬಾರ್‌ನಲ್ಲಿದ್ದ ಜನರಿಗೂ ಆಪ್ತರು. ಇದು ಬ್ರಿಟೀಷರ ಗಮನದಲ್ಲಿತ್ತು. "ಹೀರಾಲಾಲ್ ಶಾಸ್ತ್ರಿಗಳ ಪ್ರಜಾಮಂಡಲ ಜಯಪುರದಲ್ಲಿ ಕಾಂಗ್ರೆಸ್ಸಿನ ವಿಸ್ತರಣೆ ಎಂದು ಹೇಳಬಹುದು"[೪] ಜಿ.ಡಿ. ಬಿರ್ಲಾರವರ ಸಹಾಯ, ಹೀರಾ ಲಾಲ್ ಶಾಸ್ತ್ರಿಗಳಿಗೆ ಇದ್ದಿದ್ದರಿಂದ ಜಯಪುರ ರಾಜ್ಯ ಪ್ರಜಾ ಮಂಡಲಿ ಮುಖ್ಯ ಸಂಸ್ಥೆಯಾಗಿ ಇದಕ್ಕೆ ಇಂಬುಕೊಡುವ ಎಲ್ಲರ ಮೇಲೂ ಬ್ರಿಟೀಷರ ಗುಮಾನಿ ಇತ್ತು. ಸೇಟ ಬಜಾಜ್ ರವರ ನಿಕಟಸಂಪರ್ಕ, ಸಹಾಯ ಸದಾ ಹೀರಾಲಾಲ್ ಶಾಸ್ತ್ರಿಗಳದಾಗಿತ್ತಾದ್ದರಿಂದ ರಾಜ್ಯಪ್ರಜಾ ಮಂಡಳಿ ಒಂದು ನೋಂದಾಯಿಸಿದ ಸಂಸ್ಥೆಯೆಂದು ಗುರುತಿಸುವದು ಬ್ರಿಟೀಷರಿಗೆ ಸಮಸ್ಯೆಯಾಗಿ ಉಳಿದಿತ್ತು.

### ಮಿರ್ಜಾ ಇಸ್ಮೈಯಿಲ್ ಮತ್ತು ಜಯಪುರ

ಮಿರ್ಜಾ ಇಸ್ಮೈಯಿಲ್‌ರವರಿಗೆ ರಾಜಕೀಯ ಹೊಸದೇನು ಆಗಿರಲಿಲ್ಲ. ಮೈಸೂರು ದೂರದಲ್ಲಿದ್ದರೂ ಮಿರ್ಜಾ ಇಸ್ಮೆಯಿಲ್ ಎಲ್ಲರೊಡನೆ ಸಂಪರ್ಕವಿತ್ತಾದ್ದರಿಂದ ಮತ್ತು ಜಯಪುರದ ಮಹಾರಾಜ ತನ್ನ ಸ್ವಂತ ವಿವೇಚನೆ ಯಿಂದ ಅವರನ್ನು ದಿವಾನರನ್ನಾಗಿ ಮಾಡಿದ್ದು, ಅವರು ಮಾಡುವ ವ್ಯವಹಾರಕ್ಕೆ ಪ್ರೋತ್ಸಾಹ ಮತ್ತು ಸ್ವಾಂತಂತ್ರ ಕೊಟ್ಟಿದ್ದು ಅನೇಕ ಯೋಜನೆಗಳನ್ನು ಕಾರ್ಯಗತ ಮಾಡಲು ಸಹಾಯವಾಯ್ತು. ಮಿರ್ಜಾರವರ ನಾಲ್ಕು ವರುಷದ ಆಡಳಿತದಲ್ಲಿ ಮಹಾರಾಜ ಮಾನ್‌ಸಿಂಗ್ ದೈನಂದಿನ ವ್ಯವಹಾರದಲ್ಲಿ ತಲೆಹಾಕದಿದ್ದರೂ ಮಿರ್ಜಾರವರ ಕೆಲಸಗಳನ್ನು ಹೊರಗಿನಿಂದ ಗಮನಿಸಿ ಪ್ರೋತ್ಸಾಹಿಸಿದನು.

ಜಯಪುರದ ಮುಖ್ಯಮಂತ್ರಿಗಳ ಸ್ಥಾನವನ್ನು ವಹಿಸಿಕೊಂಡಾಗ ಮುಖ್ಯವಾದ ಪ್ರಶ್ನೆ ಥಾಕೂರ್ ಅಥವಾ ಚಿಕ್ಕ ಚಿಕ್ಕ ಜಮೀನುದಾರರ ಪ್ರಶ್ನೆ. ಇದು ಒಟ್ಟು ರಾಜಪುಟಾಣದ ಪ್ರಶ್ನೆಯೂ ಆಗಿತ್ತು. ಮೂರನೇ ಒಂದು ಭೂಮಿ ಭಾಗವನ್ನು ಆಕ್ರಮಿಸಿದ ಥಾಕೂರರು ರೈತಾಪಿ ಜನರೊಡನೆ ಅತ್ಯಂತ ಕೀಳಾಗಿ ವರ್ತಿಸುತ್ತಿದ್ದರು. ಇದರಲ್ಲಿ ರಾಜ ಬಂಧುಗಳು ಮತ್ತವರ ಪರಿವಾರದವರೂ ಇದ್ದು, ಅನೇಕ ವಿದ್ಯಾವಂತರೂ ರೈತ ಭಾಂದವರಿಂದ ಹಣ ವಸೂಲು ಮಾಡುವದಲ್ಲದೆ ಶೋಷಣೆಗೆ ವಳಗಾಗಿ ಕೊನೆಗೂ ರೈತಾಪಿ ಜನರು ಸಾಲಗಾರರಾಗಿ ಉಳಿದು ಥಾಕೂರರ ಜೀತದಾಳಾಗಿ ಉಳಿಯು ತ್ತಿದ್ದರು. ಜಾಗೀರದಾರನ್ನು ಮುಗಿಸಬೇಕಾದರೆ ಮಿರ್ಜಾಗೆ ಪ್ರಜಾಮಂಡಲಿಯ ಸಹಾಯ ಬೇಕಾಗಿತ್ತು. ಬ್ರಿಟೀಷ ಏಜಂಟನ ಕಣ್ಣು ಪ್ರಜಾಮಂಡಲಿ ಮೇಲೆ. ಪ್ರಜಾಮಂಡಲಿಯ ಮುಖ್ಯಸ್ಥರು ಜಿ.ಡಿ. ಬಿರ್ಲಾ, ಹೀರಾಲಾಲ್ ಶಾಸ್ತ್ರಿ ಬಿರ್ಲಾರವರ ನಿಕಟವರ್ತಿ. ಅಧಿಕಾರಿಗಳು ಮಿರ್ಜಾರವರ ಭೇಟಿ ಮಾಡಲು ಪರವಾನಗಿ ನಿಧಾನವಾಗುತ್ತಿತ್ತು. ಆದರೆ ಶಾಸ್ತ್ರಿಗಳ ಸ್ನೇಹಿತರಿಗೆ ಭೇಟಿ ಸುಲಭವಾಗಿತ್ತು.

ರಾಜ್ಯದ ಸಮಸ್ಯೆಯಾದ ಶಾಸನ ಸಭಾ ರಚಿತವಾದ ರೂಢಿಗಳು ನ್ಯಾಯಪದ್ಧತಿ ವ್ಯವಸ್ಥೆ, ಇವುಗಳ ಪೂರ್ಣಪರಿಶೀಲನೆ ಮತ್ತು ತಿದ್ದುಪಾಟು ಮತ್ತು ಶಾಸನಬದ್ಧವಾದ ಕಾನೂನು ವ್ಯವಸ್ಥೆಯನ್ನು ಪರಿಶೀಲಿಸಲು ಮಿರ್ಜಾರವರು ಮೊದಲು ಆದ್ಯತೆ ಕೊಟ್ಟರು. ಇದಕ್ಕೆ ಒಂದು ಸಮಿತಿಯನ್ನು ನೇಮಿಸಿ ಆಗ ಚಾಲನೆಯಲ್ಲಿದ ಕಾಯ್ದೆಗಳನ್ನು ಪರಿಶೀಲಿಸಿ, ಎಲ್ಲಿ ತಿದುಪಡಿ ಅಥವಾ ಹೊಸ ಕಾಯ್ದೆ ಬೇಕೋ ಹಾಗೆ ಮಾಡಿ ಒಂದು ಮೂಲರೂಪದ ಶಾಸನ ಪುಸ್ತಕ ರಚಿಸಲು ಒಂದು ಕಾಯ್ದೆ ಸಮಿತಿಯನ್ನು ರಚಿಸಿ ಎರಡು ಸ್ಥಳೀಯ ವಕೀಲರು ಮತ್ತು Bar-at-law ಪದವಿಯ ರಫಿ ಎಂಬುವರನ್ನು ಸಮಿತಿಗೆ ಮುಖ್ಯಸ್ತರನ್ನಾಗಿ ನೇಮಿಸಿದರು.[೫]

೧೯೩೦-೪೦ ರಾಜಾಸ್ಥಾನದ ಬೆಳವಣಿಗೆಯನ್ನುವೀಕ್ಷಿಸಿ ದಾಗ ೧೦ ವರುಷದಲ್ಲಿ ಸಾಕಷ್ಟು ರಾಜಕೀಯ ಜಾಗ್ರತೆ ಉಂಟಾಗಿತ್ತು. ಮಿರ್ಜಾರವರ ಜನಜಾಗ್ರತೆಯನ್ನು ಸ್ವಾಗತಿಸಿ, ಸರಕಾರ ಕೈಗೊಳ್ಳುವ ಕೆಲಸದಲ್ಲಿ, ಪ್ರಜೆಗಳ ಸಹಕಾರ ಪೂರ್ಣ ವಾಗಿರಬೇಕೆಂದು ಮತ್ತು ಜನರ ಮನಸ್ಸನ್ನು ಅರಿಯುವ ಪ್ರಯತ್ನ ಅವರ ಪ್ರತಿನಿಧಿಯ ಮೂಲಕ ಯತ್ನಿಸಿದ್ದು ಸೂಕ್ತವಾಗಿತ್ತು.

ರಾಜ್ಯ ವ್ಯವಸ್ಥೆಗನುಸಾರವಾದ ವರದಿಮಾಡಲು, ಮಿರ್ಜಾರವರು, ಒಂದು ಕಾರ್ಯಕಾರಿ ಸಮಿತಿಯನ್ನು ನೇಮಿಸಿ, ಮುಖ್ಯವಾಗಿ ವಿದ್ಯಾಭ್ಯಾಸ ಜನಜಾಗ್ರತೆ, ರಾಜಕೀಯ ಆಸಕ್ತಿ, ಮತ್ತಿತರ ಮುಖ್ಯ ವಿಷಯಗಳನ್ನು ಒಳಗೊಂಡು ದೇಶಪ್ರಗತಿಗೆ ಸಹಾಯವಾಗಬೇಕೆಂದು ಸಕ್ರಿಯವಾಗಿ ಕೆಲಸಮಾಡಿ ವರದಿ ಒಪ್ಪಿಸಲು ರಾಜಸೇವಾಸಕ್ತ ಹಿರಿಯಣ್ಣಯ್ಯನವರನ್ನು* ಮುಖ್ಯಸ್ಥರನ್ನಾಗಿ ನೇಮಿಸಿದರು. ಸಮಿತಿಯಲ್ಲಿ ಎರಡು ಸರಕಾರಿ ಅಧಿಕಾರಿಗಳೂ, ೧೪ ಬೇರೆ ಅಧಿಕಾರಿಗಳು, ಈಶ್ವರದತ್ತ ಸೆಂಟರಿಯಾಗಿಯೂ, ಮತ್ತಿತರು ನಾಲ್ಕು ಜನ (೧೯೪೩) ಸಮಿತಿ ಸೇರಿಸಿತು. ಸಮಿತಿಯು ತನ್ನ ಕೆಲಸಕ್ಕೆ ಅನುಕೂಲವಾಗುವ ಹಾಗೆ ಸೂಕ್ತವಾದ ಪ್ರಶ್ನಾವಳಿಯೊಂದನ್ನು ತಯಾರಿಸಿ, ಎಲ್ಲಾ ಸಮುದಾಯ ಪ್ರತಿನಿಧಿಗಳಿಂದ ಅಭಿಪ್ರಾಯ ಸಂಗ್ರಹಿಸಿ ಹೊಸ ವ್ಯವಸ್ಥಾ ಬದ್ಧ ಕಾನೂನಿಗೆ ನಾಂದಿ ಹಾಕಿತು. ಹದಿಮೂರು ಜನ ವರದಿಗೆ ಸಹಿಮಾಡಿದರು. ಸಮಿತಿಯು ಮುಖ್ಯವಾಗಿ ಮೂರು ಶಿಫಾರಸನ್ನು ಮಾಡಿತು.

(a) ಅಭಿಮತ ನೀಡುವವರಲ್ಲಿ ಚುನಾಯಿತ ಪ್ರತಿನಿಧಿಗಳು ಹೆಚ್ಚಿನ ಸಂಖ್ಯೆಯಲ್ಲಿ ಸಭೆಯಲ್ಲಿರಬೇಕು. (b) ಶಾಸನ ಸಭೆಗೆ ಹಣಕಾಸಿನ ಆಡಳಿತದ ಸ್ವಾತಂತ್ರ್ಯವಿರಬೇಕು. (೩) ಕಾರ್ಯನಿರ್ವಾಹಕ ಮಂಡಲಿಯು ಜನತೆಯ ಮೂಲಭೂತ ಹಿತವನ್ನು ರಕ್ಷಿಸಬೇಕು.

ಸುಧಾರಣ ಕ್ರಮ ಕೂಡಲೆ ಕಾರ್ಯಗತವಾಗುವಂತೆ ನೋಡಿಕೊಂಡರು. ಮತ್ತು ಕಾನೂನನ್ನು (ಅಧಿಕೃತವಾಗಿ ಸಾರಿ) ಸುಧಾರಣೆಯನ್ನು ಕಾನೂನಿನ ನಿಬಂಧಕ್ಕೆ ಒಳಪಡಿಸುವಂತೆ ಮಹಾರಾಜರ ಅಧಿಕೃತ ಪ್ರಕಟಣೆ ಮೂಲಕ ದೃಢವಾಯಿತು. ಹೀಗೆ ರಾಜ್ಯ ವ್ಯವಸ್ಥೆಯ ದೃಢತೆ, ರಾಜ್ಯ ಸುಧಾರಣೆಯಲ್ಲಿನ ಮೈಲಿಗಲ್ಲು. ಆಸ್ತಿ ಹಿಡುವಳಿ, ಮತ್ತು ಪರಕೀಯ ಜಮೀನು ಕಾಯ್ದೆಗಳಿಗೆ ಶಾಸಕಾಂಗ ರೂಪ ಕೊಟ್ಟದ್ದರಿಂದ ಜಾಗೀರದಾರ ವ್ಯವಸ್ಥೆಗೆ ಕೊನೆಯಾದಂತಾಯ್ತು.

ಮತ್ತೊಂದು, ಮುಖ್ಯ ವ್ಯವಸ್ಥೆ, ಚಿಕ್ಕ ರಾಜ್ಯಕ್ಷೇತ್ರವನ್ನು ಚಿಕ್ಕ ಜಿಲ್ಲೆಗಳನ್ನಾಗಿ ಪರಿವರ್ತಿಸಿ ಪ್ರತಿಯೊಂದು ಜಿಲ್ಲೆಗೂ, ನ್ಯಾಯಧೀಶರನ್ನು ನೇಮಿಸಿದ್ದು. ಮುಖ್ಯ ಕಚೇರಿಗಳನ್ನು ಹೊರಗಡೆ ಸರಹದ್ದಿನಿಂದ ಒಳಗಡೆ ತರುವುದು ಮತ್ತು ಭೂಮಿಯನ್ನು ಚಿಕ್ಕ ಚಿಕ್ಕ ಜಾಗವಾಗಿ ಪರಿವರ್ತಿಸಿ ಜನರಿಗೆ ಮಾರಾಟಮಾಡಿ, ಅತ್ಯಂತ ಸಣ್ಣ ಮೊತ್ತಕ್ಕೆ ಜನರಿಗೆ ನೀವೇಶನ ಒದಗಿಸಿದ ಕಾರಣ, ಹೊಸ ಬಡಾವಣೆಗಳು ವಿಸ್ತರಿಸಿದವು ಇದು ಹೊಸ ಬೆಳವಣಿಗೆಗೆ ಕಾರಣವಾಯ್ತು. ಆದರೆ ಒಂದು ಕೊರತೆ ಉಂಟಾಯಿತು. ವಿಸ್ತರಣಕ್ಕೆ ತಕ್ಕಂತೆ ಚರಂಡಿ ಮೋರಿ ವ್ಯವಸ್ಥೆ ಆಗಲಿಲ್ಲ.

**ಸಾಮಾಜಿಕ ಸುಧಾರಣೆಗಳು**

ಮಿರ್ಜಾರವರ ಹಲವಾರು ಭಾಷಣ[೬] ಮತ್ತು ಕಾಗದ ಪತ್ರಗಳಿಂದ ನಮಗೆ ಅವರ ಸಾಮಾಜಿಕ ಕಳಕಳಿ ಮತ್ತು ಸಾಮಾಜಿಕ ಸುಧಾರಣೆಗೆ ಚಾಲನೆ ಕೊಟ್ಟ ಕ್ರಮ ತಿಳಿಯಲ್ಪಡುತ್ತದೆ. ರಾಜಕೀಯ ಬೆಂಬಲ ಎಷ್ಟು ಮುಖ್ಯವೋ, ಜಯಪುರದ ಯುವಕ ಸಂಘಟನೆ ಬೆಳವಣಿಗೆ ಮುಖ್ಯ ಮತ್ತು ಸಾಮಾನ್ಯ ಜನರಿಗೆ ವಿದ್ಯೆಯ ಗುರಿ ಮುಟ್ಟುವದು ಸಾಧ್ಯವಾಗುವದು ವಿದ್ಯೆಯ ಸೌಲಭ್ಯದಿಂದ. ೧೯೩೦-೪೦ ತನಕ ರಾಜಾಸ್ಥಾನ ದಲ್ಲಿ ಹೆಚ್ಚಿನ ವಿದ್ಯೆಯ ವ್ಯಾಪ್ತಿಯು ಹಲವೇ ಜನರಿಗೆ ಲಭ್ಯವಿತ್ತು. *I was told that there was but little public opinion .....the people in general cared very little about what the government did ..........I want very soon to change it.*[೮] ಈ ಭಾಷಣದ ಮೂಲಕ ಜಯಪುರದಲ್ಲಿ ವಿಶ್ವವಿದ್ಯಾನಿಲಯ ಸ್ಥಾಪನೆ ಮಾಡುವ ತಮ್ಮ ಆಶಯವನ್ನು ಸೂಚಿಸಿದ್ದರು. ಮಿರ್ಜಾರವರ ಭಾಷಣ ರಾಜಪುಟಾಣ ವಿಶ್ವವಿದ್ಯಾನಿಲಯಕ್ಕೆ ನಾಂದಿಯಾಯಿತು. ೧೯೪೬ರಲ್ಲಿ ಮಿರ್ಜಾ ರವರು ತಮ್ಮ ವಿಶ್ವವಿದ್ಯಾನಿಲಯದ ಯೋಜನೆಗಳನ್ನು ಹಲವು ಪ್ರತಿನಿಧಿಗಳ ಸಂಗಡ ಚರ್ಚಿಸಿ, ವಿಶ್ವವಿದ್ಯಾನಿಲಯದ ಭೋಧನೆ ಮತ್ತು ಉತ್ತಮ ದರ್ಜೆಯ ವಿದ್ಯಾಭ್ಯಾಸವನ್ನು ಪ್ರೋತ್ಸಾಹಿಸ ಬೇಕೆಂದು ಮತ್ತು ಜಯಪುರದಲ್ಲಿರಬೇಕೆಂದು ತೀರ್ಮಾನಿಸಿದರು.

ಮಿರ್ಜಾ ತಾವು ಜಯಪುರಕ್ಕೆ ಹೋದಾಗ ಹಲವಾರು ಮೈಸೂರು ಮುತ್ಸದ್ದಿಗಳನ್ನು ತಮ್ಮ ಸಂಗಡ ಒಯ್ದರು. ಅವರಲ್ಲಿ ಪ್ರೊ॥ ರಾಲೊ ಮುಖ್ಯರು. ಮೈಸೂರು ಸಂಸ್ಥಾನದಲ್ಲಿ ವಿದ್ಯಾಭ್ಯಾಸ ಇಲಾಖೆಯಲ್ಲಿ ಮುಖ್ಯಹುದ್ದೆಯಲ್ಲಿದ್ದವರು ರಾಲೊ. ಮೊದಲು ಮದರಾಸಿನ ಪಾಚಿಯಪ್ಪ ಕಾಲೇಜಿನಲ್ಲಿ ಪ್ರಾಧ್ಯಾಪಕರಾಗಿ ನಂತರ ಮೈಸೂರಿನ ಮಹಾರಾಜ ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿ, ಸಾಹಿತ್ಯ ವಿದ್ಯಾರ್ಥಿಗಳಿಗೆ ಮೆಚ್ಚಿಗೆಯಾದರು 'ರಾಲೊ'. ತಮ್ಮ ಹೊಸ ವಿಶ್ವವಿದ್ಯಾನಿಲಯಕ್ಕೆ ಅನುಭವಸ್ಥರಾಗಿ ಸೂಕ್ತರೆಂದೂ ಮಿರ್ಜಾರವರು ರಾಲೊರವರನ್ನು ಜಯಪುರದ ವಿಶ್ವವಿದ್ಯಾನಿಲಯದ ಮುಖ್ಯ ವಿದ್ಯಾಧಿಕಾರಿಯನ್ನಾಗಿ ನೇಮಿಸಿದರು.

ಪ್ರೊ॥ ರಾಲೊ ಎಷ್ಟೇ ಸಮರ್ಥ ಅಧಿಕಾರಿಯಾದರೂ, ಆಗ ಬ್ರಿಟೀಷ್ ವಿರುದ್ಧ ಭಾರತದಲ್ಲಿ ವಿದ್ಯಾರ್ಥಿ ಚಳುವಳಿ ನಡೆಯುತ್ತಿದ್ದರಿಂದ ವಿದ್ಯಾರ್ಥಿಗಳಿಂದ ರಾಲೊ ಅವಹೇಳನಕ್ಕೆ ಗುರಿಯಾಗಬೇಕಾಯಿತು. ಮತ್ತೊಬ್ಬ ಆಂಗ್ಲ ಅಧಿಕಾರಿಯನ್ನು ಸಹಿಸಲು ವಿದ್ಯಾರ್ಥಿಗಳು ತಯಾರಿರಲಿಲ್ಲ. ಆದರೆ ವಿದ್ಯಾರ್ಥಿಗಳ ಮಧ್ಯದಲ್ಲೆ ಇದ್ದು ಅವರ ವಿಶ್ವಾಸವನ್ನು ಪ್ರೊ॥ ರಾಲೊ ಗಳಿಸಿದರು ಎಂಬುದಾಗಿ ಮಿರ್ಜಾ ತಮ್ಮ ನೆನಪಿನ ಚರಿತ್ರೆಯಲ್ಲಿ ದಾಖಲಿಸಿದ್ದಾರೆ. ಪ್ರೊ॥ ರಾಲೊರವರ ಹೆಸರು ರಾಜಸ್ಥಾನದಲ್ಲಿ ಚಿರಸ್ಥಾಯಿಯಾಗಿದೆ. ಆರು ವರ್ಷಗಳ ನಂತರ[೧೦] ರಾಜಪುಟಾಣ ವಿಶ್ವವಿದ್ಯಾನಿಲಯದ ಘಟಿಕೋತ್ಸವದಲ್ಲಿ ಮಾಡಿದ ಭಾಷಣದಲ್ಲಿ ಮಿರ್ಜಾ ಪ್ರೊ॥ ರಾಲೊ ಮತ್ತಿತರನ್ನು ವಿಶ್ವವಿದ್ಯಾನಿಲಯದ ಪ್ರಗತಿಗೆ ಸಾಧಕರು ಎಂದಿದ್ದಾರೆ.

ಜಿ.ಡಿ. ಬಿರ್ಲಾ ರಾಜಾಸ್ಥಾನದ ಅತ್ಯಂತ ಪ್ರಭಾವಿ ವಾಣಿಜ್ಯೋದ್ಯಮಿ ಅದೂ ಅಲ್ಲದೆ ಜಿ.ಡಿ. ಬಿರ್ಲಾರವರು ಹಲವಾರು ವಿದ್ಯಾಸಂಸ್ಥೆಗಳನ್ನು ನಡೆಸುತ್ತಿದ್ದು. ಕಲಾ ಕೈಗಾರಿಕೆಯಲ್ಲಿ ತರಬೇತಿ ಕೊಡುವ ಸ್ಕೂಲು ಕಾಲೇಜುಗಳನ್ನು ನಡೆಸುತ್ತಿದ್ದು ಅವರ ಆಶಯ ಪಿಲಾನಿಯಲ್ಲಿ ಒಂದು ಡಿಗ್ರಿ ಕೊಡುವ ವಿದ್ಯಾಸಂಸ್ಥೆಯನ್ನು ಆರಂಭಿಸಬೇಕೆಂದು ಆದರೆ ಇದಕ್ಕೆ ಬ್ರಿಟಿಷ್ ಏಜಂಟ್‌ನ ವಿರೋಧವಿತ್ತು. ಬಿರ್ಲಾ ತಮ್ಮ ರಾಜಕೀಯ ವಿಸ್ತರಣ ಮಾಡುತ್ತಿದ್ದಾರೆಂದು ಅವನ ಆರೋಪವಿತ್ತು. ಆದರೆ ಬಿರ್ಲಾರವರ ಕಾಲೇಜಿನ ಮಾನ್ಯತೆಗೆ ಇಂಡಿಯಾ ಆಫೀಸಿನಲ್ಲಿ ಸಹಾನುಭೂತಿ ಇತ್ತು. ರಾಜಪೂತ ಮನೆತನಕ್ಕೆ ಬಿರ್ಲಾ ಅವರು ಸಮೀಪವಿದ್ದರು. ಅದೂ ಅಲ್ಲದೆ ಹಿಂದೂಸ್ತಾನ ಪತ್ರಿಕೆಯ ಮಾಲೀಕತ್ವ ಇದ್ದ ಜಿ.ಡಿ. ಬಿರ್ಲಾ ಪ್ರಭಾವಶಾಲಿ. ಜಿ.ಡಿ.ಬಿರ್ಲಾ ಸ್ಥಾಪಿಸಬೇಕೆಂದಿದ್ದ ಇಂಜಿನಿಯರಿಂಗ್ ಕಾಲೇಜಿಗೆ ಮಿರ್ಜಾ ಇಸ್ಮೈಯಿಲ್ ಕೂಡಲೆ ಮಾನ್ಯತೆ ಕೊಟ್ಟರು. ಪಿಲಾನಿಯಲ್ಲಿ ಆರಂಭಿಸಿ ಮಾನ್ಯತೆ ಪಡೆದ ಇಂಜಿನಿಯರಿಂಗ್ ಕಾಲೇಜ್ ಇಂದಿಗೂ ಪ್ರತಿಷ್ಠೆಯ ಸಂಕೇತವಾಗಿದೆ.

ಮಿರ್ಜಾರವರ ಕಾಲದಲ್ಲಿ ನಡೆದ ಮತ್ತೊಂದು ಮುಖ್ಯ ಸುಧಾರಣೆ ಪರದೆಯೊಳಗಿನ ಹೆಂಗಸರಿಗೆ ಹೊರಬರುವ ಅವಕಾಶ, ಉತ್ತಮವಾದ ಸ್ಕೂಲು, ಮಹಾರಾಣಿ ಗಾಯಿತ್ರಿ ದೇವಿಯನ್ನು ಮದುವೆಯಾದ ಸವಾಯಿಮಾನ್‌ಸಿಂಗ್, ಹೆಂಗಸರು ಪರದೆಯಿಂದ ಹೊರಬರಲು ಸಾಧ್ಯವೆ ಎಂದು ಸವಾಲು ಹಾಕಿದ. ಇದನ್ನು ಒಂದು ಆಹ್ವಾನವಾಗಿ ತೆಗೆದುಕೊಂಡ ಮಹಾರಾಣಿ ಗಾಯತ್ರಿದೇವಿ ಮಿರ್ಜಾರವರ ಸಹಾಯ ಪಡೆದು ೧೯೪೩ರಲ್ಲಿ ಮಹಾರಾಣಿ ಗಾಯತ್ರಿದೇವಿ ಎಂಬ ಸ್ಕೂಲ್ ಸ್ಥಾಪಿಸಿದರು. ೨೪ ಜನರಿಂದ ಆರಂಭಿಸಿದ ಈ ಶಾಲೆ ಪರದೆಯಲ್ಲಿದ್ದ ಸ್ತ್ರೀಯರಿಗೆ ಉತ್ತಮ ವಿದ್ಯೆಯ ಅವಕಾಶವನ್ನು ಕಲ್ಪಿಸಿತು. ಲುಟರ್ ಎಂಬುವಳ ನೇತೃತ್ವದಲ್ಲಿ ಆರಂಭಿಸಿದ ಸಂಸ್ಥೆಗೆ ಈಗ ವಜ್ರಮಹೋತ್ಸವ ಆಚರಣೆ ನಡೆದು ಇಂದಿಗೂ ಹೆಗ್ಗಳಿಕೆಯಲ್ಲಿದೆ.

### ಪ್ರಜಾ ಕಾರ್ಯಗಳು

ರಾಜಾಸ್ಥಾನವು ಅಗ್ಗಾಗ್ಗೆ ಪ್ರವಾಹ ಪೀಡಿತವಾಗಿ ಅಸಂಖ್ಯಾತ ರೈತರು ಮನೆ, ವಸತಿ ಕಳೆದುಕೊಂಡು ನಿರ್ಗತಿಕರಾಗುತ್ತಿದ್ದರು. ರೈತಾಪಿ ಜನರ ಸುಧಾರಣೆ ಮತ್ತು ಸಾಮಾನ್ಯ ರೈತರ ಗುಣಮಟ್ಟ ಏರಿಸುವುದು ಮತ್ತು ಹಳ್ಳಿಯ ಸುಧಾರಣೆಗೆ ಪರಿಣಿತರ ಸಹಾಯಬೇಕು. ಮೈಸೂರು ಸರ್ಕಾರದಲ್ಲಿ ಮುಖ್ಯನಿರ್ವಾಹಕ ಅಧಿಕಾರಿ ಇಂಜಿನಿಯರ್ ಆಗಿದ್ದು ನಿವೃತ್ತಿ ಹೊಂದಿದ್ದ ಜಿ. ಶೇಷಗಿರಿರಾಯರನ್ನು ಜಯಪುರದ ಮುಖ್ಯ ಇಂಜಿನಿಯರ್ ಆಗಿ ನೀರಾವರಿ ಇಲಾಖೆಯನ್ನು ಉತ್ತಮ ಪಡಿಸಲು ಮಿರ್ಜಾ ನೇಮಿಸಿದರು. ಶೇಷಗಿರಿರಾಯರು(೧೯೪೨) ಈ ಹುದ್ದೆ ಒಪ್ಪಿ ಪ್ರವಾಹದಿಂದ ಹಾನಿಯಾಗಿದ್ದ ಪ್ರದೇಶಗಳ ಉಸ್ತುವಾರಿ ವಹಿಸಿ, ಮುರಿದ ಅಣೆಕಟ್ಟು, ಯಂತ್ರಗಳನ್ನು ಯಥಾಸ್ಥಿತಿಗೆ ತಂದು ಇದರ ಒಟ್ಟಿಗೆ ಹಲವಾರು ಕೆರೆ ಕಾಲುವೆಗಳನ್ನು ಸರಿಪಡಿಸಿದ್ದರಿಂದ ಕುಡಿಯುವ ನೀರಿನ ದುರಸ್ಥಿಯಾಯಿತು. ಇದಕ್ಕಾಗಿ ಸರ್ಕಾರ ೧,೨೨,೦೭೪ ಖರ್ಚು ಮಾಡಿತು.[೧೧]

ನೀರಾವರಿ ವ್ಯವಸಾಯದಿಂದ ರೈತಾಪಿ ಜನರಿಗೆ ಸಹಾಯವಾದದ್ದೇ ಅಲ್ಲದೆ ಕೃಷಿ ಬೆಳೆಯುವ ಉದ್ಯಮಿಗಳು ಉನ್ನತ ದರ್ಜೆಯ ಬೆಳೆಯನ್ನು ಬೆಳೆದರು. 'ಹೆಚ್ಚು ಬೆಳೆ ಬೆಳೆಯಿರಿ' (Grow more food crops) ಎಂಬ ಪ್ರಚಾರದಿಂದ ಹೆಚ್ಚು ಗೋಧಿ, ಬಾರ್ಲಿ ಮತ್ತು ಸಕ್ಕರೆ ಉತ್ಪಾದನೆ ೪೪% ಹೆಚ್ಚಿತು. ಸಕ್ಕರೆ ಉತ್ಪಾದನೆ ಕಾರ್ಖಾನೆ ಕೂಡ ಆರಂಭವಾಯ್ತು.

### ವೈದ್ಯಕೀಯ ವ್ಯವಸ್ಥೆ

೧೮೭೫ರ ತನಕ ರಾಜಪುಟಾಣದಲ್ಲಿ ಸರ್ಕಾರಿ ವೈದ್ಯಕೀಯ ವ್ಯವಸ್ಥೆ ಉತ್ತಮವಾಗಿರಲಿಲ್ಲ ೧೮೭೫ರಲ್ಲಿ ಮೇಯೊ ಸರ್ಕಾರಿ ಆಸ್ಪತ್ರೆ ಸ್ಥಾಪಿಸಿಸಲ್ಪಟ್ಟಿತು. ೧೯೩೭ರಲ್ಲಿ ಲೇಡಿ ವಿಲಿಂಗಡನ್ ಆಸ್ಪತ್ರೆ ಅಸ್ತಿಭಾರ ಹಾಕಲ್ಪಟ್ಟು ಶ್ರೀಮಂತ ವ್ಯಾಪಾರಸ್ಥರಿಂದ ಹಣ ಸಂಗ್ರಹಿಸಿ ಆಸ್ಪತ್ರೆಯು ೧೯೪೪ರಲ್ಲಿ ಕಾರ್ಯವನ್ನು ಆರಂಭಿಸಿತು. ಇದಕ್ಕೆ ಸೇಟ್ ಜಿರ್ಲಾರವರಿಂದ ೧ ಲಕ್ಷ ಸಂದಿತು. ಮಿರ್ಜಾ ಅವರು ಮೆಡಿಕಲ್ ಕಾಲೇಜಿನ ಅವಶ್ಯಕತೆಯನ್ನು ಮನಗಂಡಿದ್ದರು. ಮಿರ್ಜಾ ಜಯಪುರದಲ್ಲಿ ಮೆಡಿಕಲ್ ಕಾಲೇಜು ಆರಂಭಿಸಲು ಅನುಮತಿ ನೀಡಿದಲ್ಲದೆ, ವೈದ್ಯಕೀಯ ಇಲಾಖೆ ಮತ್ತು ಜನಾರೋಗ್ಯ ಅತ್ಯಂತ ಮುಖ್ಯವೆಂದು ತಿಳಿದಿದ್ದರಿಂದ, ವಿಧಾನ ಸಭೆಯಲ್ಲಿ ಡಾ॥ತಾರಾಶಂಕರ್ ಮಾಥೂರ್‌ರವರನ್ನು ಪ್ರತಿನಿಧಿಸಿದ್ದರು. ಅದೂ ಅಲ್ಲದೆ ಮೈಸೂರು ಸರ್ಕಾರದ ವೈದ್ಯಕೀಯ ಇಲಾಖೆಯಲ್ಲಿ ಪರಿಣಿತ ಶಸ್ತ್ರಚಿಕಿತ್ಸಾ ವೈದ್ಯರೆಂದೂ ಮತ್ತು ಜನರಲ್ ಆಸ್ಪತ್ರೆಯಲ್ಲಿ ಹದಿನೈದು ವರುಷ ಅನುಭವಪಿದ್ದ ಮತ್ತು ಮೈಸೂರು ಕಾಲೇಜಿನಲ್ಲಿ ಪ್ರಿನ್ಸಿಪಾಲರಾಗಿದ್ದ **ಡಾ॥ ಫ್ಲೆಚರ್ ರಾಬಿನ್‌ಸನ್** ಮತ್ತು ಅನುಭವಸ್ಥರಾದ **ಡಾ॥ ರಾಬರ್ಟ್ ಹೈಲಿಗ್** (ವಿಯನ್ನಾದವರು ಮತ್ತು ಮೈಸೂರು ಕಾಲೇಜಿನಲ್ಲಿದ್ದವರು)[೧೨]. ಅವರನ್ನು ಮಿರ್ಜಾ ಜಯಪುರದ ಮೆಡಿಕಲ್ ಕಾಲೇಜಿಗೆ ಕರೆಸಿಕೊಂಡರು. ಈ ಪರಿಣಿತ ಡಾಕ್ಟರ್‌ಗಳು ಎರಡನೇ ವರ್ಷದಲ್ಲಿ ಮೆಡಿಕಲ್ ಅಸೋಸಿಯೇಷನ್ ಆರಂಭಿಸಿ ಉತ್ತಮ ಭಾಷಣಕಾರರನ್ನು ಕರೆಸಿ ಸಂವಾದದ ಮೂಲಕ ವೈದ್ಯಕೀಯ ಜಾಗ್ರತಿ ಉಂಟು ಮಾಡಿದರು. ವೈದ್ಯಕೀಯ ಅಸೋಸಿಯೇಷನ್‌ನಲ್ಲಿ ಸರ್. ಸಿ.ವಿ. ರಾಮನ್ ಕೂಡ ಭಾಷಣ ಮಾಡಿದ್ದು ಮಿರ್ಜಾಗೆ ಹೆಚ್ಚಿನ ಸಂತಸ ತಂದಿತು. ಮತ್ತೊಬ್ಬರು ಡಾ॥ ಜಿ.ಎಸ್. ಸೇನ್ ಈ ಮೂರು ಡಾಕ್ಟರ್‌ಗಳು ಜಯಪುರದ ಹಾಸ್ಪಿಟಲ್‌ಗೆ ಉತ್ತಮ ಸೇವೆ ಸಲ್ಲಿಸಿದವರು.

### ಸಣ್ಣಕೈಗಾರಿಕೆ

ಕೈಯಲ್ಲಿ ಮಾಡಿದ ಕಾಗದ ಮೊಗಲರ ಕಾಲದಿಂದ ಇದ್ದಿತಾದರೂ ಬ್ರಿಟೀಷರ ಕಾಲದಲ್ಲಿ ಯಂತ್ರದಿಂದ ತಯಾರಿಸಿದ ಕಾಗದಕ್ಕೆ ಬೇಡಿಕೆ ಹೆಚ್ಚಾಗಿ, ಕೈಯಲ್ಲಿ ತಯಾರಿಸಿದ ಕಾಗದಕ್ಕೆ ಧಕ್ಕೆ ಉಂಟಾಯಿತು. ೧೯೩೦ರ ಹೊತ್ತಿಗೆ ಕೈಯಲ್ಲಿ ತಯಾರಿಸಿದ ಹಲವಾರು ವಸ್ತುಗಳು ಗ್ರಾಹಕರಿಲ್ಲದೆ ಸೊರಗಿದವು. ಮಹಾತ್ಮ ಗಾಂಧಿಜೀ ಕೈಕಾಗದ ತಯಾರಿಸುವ ಜನಾಂಗಕ್ಕೆ ಆಗುತ್ತಿರುವ ತೊಂದರೆಯನ್ನು ಗಮನಿಸಿ, ಕೈಕಾಗದ ಕೈಗಾರಿಕೆಯ ಮುಖ್ಯಸ್ತ ಅಲ್ಲಾ ಬಕ್ಸ ಕಾಗಜಿ (Alla Bux kaqzs)ವರಿಗೆ ೧೯೩೭ರಲ್ಲಿ ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ ಅಧಿವೇಶನದಲ್ಲಿ ಕೈಕಾಗದವನ್ನು ಮಾಡುವ ಸೂಕ್ಷ್ಮವನ್ನು ವಿವರಿಸುವಂತೆ ನಿವೇದಿಸಿದರು. ಇದರಿಂದ ಕೈ ಕಾಗದಕ್ಕೆ ಇರುವ ವಿಶೇಷತೆಯ ಅರಿವಾಯ್ತು.

ಮಿರ್ಜಾರವರು ಜಯಪುರದ ದಿವಾನರಾಗಿದ್ದಾಗ ಸಣ್ಣ ಕೈಗಾರಿಕೆಗಳಿಗೆ ವಿಶೇಷ ಗಮನ ಕೊಟ್ಟರು. ಕಾಗದವನ್ನು ಹೆಚ್ಚಾಗಿ ಖರೀದಿಸುತ್ತಿದ್ದ ಮುಂಬೈ, ಅಹಮದಾಬಾದಿಗೆ ಹೆಚ್ಚಿನ ಸಂಖ್ಯೆಯಲ್ಲಿ ಬೇಡಿಕೆಯನ್ನು ಪೂರೈಸಲು ಅನುಮತಿ ನೀಡಿದ್ದಲ್ಲದೆ, kagazis ಜನಾಂಗಕ್ಕೆ ಮೂಲ ಸೌಕರ್ಯವನ್ನು ಕೂಡಲೆ ಸರ್ಕಾರ ಒದಗಿಸಬೇಕೆಂದು ಆಣತಿ ಮಾಡಿದ್ದರಿಂದ ನಶಿಸಿ ಹೋಗುತ್ತಿದ್ದ ಕೈ ಕಾಗದವನ್ನು ತಯಾರಿಸುವ ಕಾಗಜಿಗಳು ತಮ್ಮ ವೃತ್ತಿಯನ್ನು ಮುಂದುವರಿಸುವಂತಾಯ್ತು. ಮಿರ್ಜಾರವರ ದೂರಾಲೋಚನೆಯಿಂದ ಮೊದಲನೆ ಕೈ ಕಾಗದದ **ಸಹಕಾರ ಸಂಸ್ಥೆ** ಜಯಪುರದಲ್ಲಿ ಆರಂಭಿಸಿತು (೧೯೪೪) ಈಗಲೂ ಕೈ ಕಾಗದ ತಯಾರಿಕೆಯಲ್ಲಿ ಜಯಪುರ ಮೊದನೆ ಸ್ಥಾನದಲ್ಲಿದೆ.

ಪರಿಣತಿ ಪಡೆದ ಯಾವ ವ್ಯಕ್ತಿ ಆದರೂ ಅವರ ಉಪಯೋಗವನ್ನು ದೇಶದ ಏಳಿತಿಗೆ ಬಳಸಬೇಕು ಎಂಬುದು ಮಿರ್ಜಾರವರ ಸಿದ್ಧಾಂತ. ಬಹಳ ಕಾಲದಿಂದ ಹಿಂದಿದ್ದ ಗಣಿ ವ್ಯವಸ್ಥೆಯನ್ನು ಸುಧಾರಿಸಲು ಕೈಗೊಂಡ ಪ್ರಯತ್ನ ಅಸಾಧಾರಣವಾದದ್ದು. ೧೯೪೨ರ ತನಕ ಸರ್ಕಾರದ ಗಣಿ ಕೈಗಾರಿಕೆ ಮತ್ತು ವ್ಯಾಪಾರದ ಶಾಖೆ ನಿರ್ದೇಶಕರ ಕೈಲಿತ್ತು. ೧೯೪೨ರಲ್ಲಿ ಡಾ॥ ಜಿ. ದೇಸು' ಅವರನ್ನು ಸರ್ಕಾರದ ಭೂವಿಜ್ಞಾನಿ ಮತ್ತು ಇಂಜಿನಿಯರ್ ಎಂದು ನೇಮಕ ಮಾಡಲಾಯ್ತು. ಡಾ॥ ಜಿ.ದೇಸ್ ಅವರು ಇಟಲಿಯ ಯುದ್ಧದಲ್ಲಿ ಕೈದಿಯಾಗಿದ್ದವರು ಆದರೆ ಅವರ ಪ್ರತಿಭೆಯನ್ನು ಗುರುತಿಸಿದವರು ಮಿರ್ಜಾ. ಗಣಿ ವಿಜ್ಞಾನಿಯಿಂದ ರಾಜ್ಯಕ್ಕೆ ಅಪಾರ ಲಾಭವಾಗಿದ್ದಲ್ಲದೆ, ಬೇರೆ ಬೇರೆ ನೂತನ ಪ್ರಯೋಗಗಳನ್ನು ಮಾಡಿ, ಡಾ॥ ಬಿ.ದೇಸು ಅವರು ಸರ್ಕಾರದ ಬೊಕ್ಕಸವನ್ನು ೧೦% ಹಿಗ್ಗಿಸಿದರು

ಸರ್ಕಾರದ ಮುದ್ರಣಾಲಯದ ಕೆಲಸ ಉತ್ತಮ ವಾಗಿರಲಿಲ್ಲ. ಇದನ್ನು ಗುರುತಿಸಿ ಪುನಃಸಂಘಟನೆ ಮಾಡಿದರು ಮೊದಲನೆ ಬಾರಿ ಒಬ್ಬ ಪ್ರಚಾರಕ ಅಧಿಕಾರಿ ಆಗಿ ಕೆ.ಈಶ್ವರದತ್ತರನ್ನು ನೇಮಿಸಿದರು. ಈಶ್ವರದತ್ತ ರಾಜ್ಯ ಪುನಃ ಸುಧಾರಣ ವ್ಯವಸ್ಥೆಯ ಸೆಕ್ರಿಟರಿ ಆಗಿದ್ದು ಸರಕಾರದ ರಾಜ್ಯವ್ಯವಸ್ತೆಯ ಸಮಿತಿ ವರದಿಯನ್ನು ಸರಕಾರಿ ಮುದ್ರಣಾಲಯದಿಂದ ಹೊರತಂದರು. ಇದಲ್ಲದೆ ಇವರು '೨೦ನೇ ಶತಮಾನ' [20th century] ಎಂಬ ನಿಯತ ಕಾಲಿಕೆಯನ್ನು ಹೊರತಂದರು. ಈ ನಿಯತಕಾಲಿಕೆ ಪತ್ರಿಕೆಗೆ ಸರಕಾರದ ಬೆಂಬಲವಿತ್ತು. ಹಲವಾರು ಪ್ರಮುಖರು ಇದರಲ್ಲಿ ನೆರವಾಗಿದ್ದರು. ಇದರಲ್ಲಿ ಮಿರ್ಜಾವರ ಆಡಳಿತ ಬಗ್ಗೆ ಲೇಖನ ವಿರುತ್ತಿತ್ತು. ಇದರ ಹಲವು ಪ್ರತಿಗಳು ಮುಂಬೈ ವಿಶ್ವವಿದ್ಯಾನಿಲಯದ ಗ್ರಂಥದಲ್ಲಿದೆ. ಇದಲ್ಲದೆ Jaipur news Letter ಇಂಗ್ಲೀಷ್, ಉರ್ದು, ಮತ್ತು ಹಿಂದಿಯಲ್ಲಿ ಪ್ರಕಟವಾಗುತ್ತಿತ್ತು.

ಹಲವಾರು ಸಮ್ಮೇಳನದಲ್ಲಿ ಮಿರ್ಜಾ ಉತ್ಸಾಹದಿಂದ ಭಾಗವಹಿಸುತ್ತಿದ್ದರು. ಮುಖ್ಯವಾಗಿ ಹೆಸರಿಸುವುದಾದರೆ ೧೯೪೪ರಲ್ಲಿ ನಡೆದ ಗ್ರಂಥಪಾಲಕರ ಸಮ್ಮೇಳನ ಉಪಾಧ್ಯಾಯರ ಸಮ್ಮೇಳನ, ಹಿಂದೀ ಸಾಹಿತ್ಯ ಸಮ್ಮೇಳನ ರಾಜಕೀಯ ಸಮ್ಮೇಳನ ಮತ್ತು P.E.N. (Poets Essayist Novelist) ಮತ್ತು ಅಖಿಲ ಭಾರತ ಸಂಸ್ಕೃತ ಸಮ್ಮೇಳನ. ಇವೆಲ್ಲದರಲ್ಲಿ ಮಾಡಿದ ಭಾಷಣಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದಾಗ ಮಿರ್ಜಾ ಒಬ್ಬ ಕೇವಲ ರಾಜಕಾರಣಿ ಅಲ್ಲ ಬಹುಮುಖ ಪ್ರತಿಭಾವಂತರಾಗಿದ್ದರು ಎಂದು ಅರ್ಥವಾಗುತ್ತದೆ. ಜಯಪುರವನ್ನು ಸುಂದರ ಪ್ರದೇಶವನ್ನಾಗಿ ಮಾಡಿ ಅದನ್ನು ಹೊರಗಿನವರಿಗೆ ಮಾದರಿ ಸಂಸ್ಥಾನವಾಗಿ ಮಾಡಿ ತೋರಿಸುವ ಹಂಬಲ ಅವರಿಗಿತ್ತು. ಅದನ್ನು ಸಾಕಷ್ಟು ಮಟ್ಟಿಗೆ ಸಾಕಾರ ಮಾಡಿದರು. ಕೊನೆಯದಾಗಿ **ಜಯಪುರದಲ್ಲಿ ಉದ್ದಿಮೆಯನ್ನು ಬೆಳಸುವುದಕ್ಕೆ ಹಲವಾರು** ಯೋಜನೆ ಮತ್ತು ಸರ್ಕಾರದ ವತಿಯಿಂದ ಹಣಸಹಾಯವನ್ನು ಸ್ಥಳೀಯ ಉದ್ಯಮಿಗಳಿಗೆ ಕಲ್ಪಿಸಿಕೊಟ್ಟರು. ಭೂಕಂದಾಯ ಮತ್ತು ವಿದ್ಯುಚ್ಛಕ್ತಿ, ಕಡಿಮೆ ದರದಲ್ಲಿ ಒದಗಿಸಿದರು.

ಜಯಪುರದ ಮಾರ್ವಾಡಿ ಜನಾಂಗದವರ ಬೆಂಬಲ ವಿತ್ತು. ಬೇರೆ ವಾಣಿಜ್ಯೋದ್ಯಮಿಗಳನ್ನುಕೂಡ ಪ್ರೋತ್ಸಾಹಿಸಿ ದರು. ವಾಣಿಜ್ಯೋದ್ಯಮಿಗಳು ಉತ್ತಮ ಬೆಂಬಲಿಗಳಾದರು. ಮಿರ್ಜಾ ಕೈಕೊಂಡ ಹಲವು ಮಾರ್ಪಾಡುಗಳಿಗೆ"" ಹಿಂದೂ ಮಹಾ ಸಭಾವು ಮಿರ್ಜಾರವನ್ನು ಹಿಂದೂ ವಿರೋಧಿಯೆಂದು ಗಲಾಟೆ ಮಾಡಿದಾಗ ಮಾರ್ವಾಡಿ ಜನಾಂಗ ಮತ್ತು ಹೀರಾಲಾಲ್ ಶಾಸ್ತ್ರಿ ಅವರುಗಳು ಮಿರ್ಜಾ ಅವರಿಗೆ ಬೆಂಬಲವಾಗಿ ನಿಂತರು. ಸ್ಥಳಿಯ ಶಾಂತಿಗೆ ಧಕ್ಕೆ ಬಾರದ ಹಾಗೆ ನೋಡಲು ಇವರೆಲ್ಲರ ಬೆಂಬಲ ಮಿರ್ಜಾ ಅವರಿಗಿತ್ತು. ಜಿ.ಡಿ. ಬಿರ್ಲಾ ಅವರ ತಮ್ಮ 'ಜುಗಲ್ ಕಿಶೋರ' ಪ್ರಜಾಮಂಡಳಿಯ ಆರ್ಥಿಕ ಸಲಹೆಗಾರ. ಜಿ.ಡಿ.ಬಿರ್ಲಾ ಉದ್ಯಮದಲ್ಲಿ ಶ್ರದ್ಧೆ ಮತ್ತು ಜಯಪುರದ ನವೀಕರಣದಲ್ಲಿ ಹೆಚ್ಚಿನ ಉತ್ಸಾಹ ಉಳ್ಳವರಾಗಿದ್ದರು ಬಿರ್ಲಾರವರ ಹಿಂದೂಸ್ತಾನ್ ಟೈಮ್ಸ್ ಪತ್ರಿಕೆ ಮಿರ್ಜಾರವರ ರಾಜಕೀಯ ಮತ್ತು ಸಾಮಾಜಿಕ ಸುಧಾರಣೆಗಳನ್ನು ಸಮರ್ಥಿಸಿತು. ಪೋದಾರ್‌ರವರ ಬೆಂಬಲ ಮಿರ್ಜಾಗಿತ್ತು.

೧೯೪೪ರಲ್ಲಿ ಬ್ಯಾಂಕ್ ಶಾಖೆ ತೆರೆದಾಗ ಮೊದಲು ಮುಂದೆ ಬಂದ ಸಂಸ್ಥೆ ಯುನೈಟೆಡ್ ಕಮರ್ಷಿಯಲ್ ಬ್ಯಾಂಕ್. ಇದರ ವ್ಯವಸ್ಥಾಪಕ ಜಿ.ಡಿ. ಬಿರ್ಲಾ. ಇದು ಉದ್ಯಮ ನವೀಕರಣಕ್ಕೆ ಸಹಾಯವಾಯ್ತು. ೧೯೪೭ರಲ್ಲಿ

ಬಾಲ್‌ಬೇರಿಂಗ್ ಕಂಪನಿ ಆರಂಭವಾಯಿತು. ಇದು ಕೂಡ ಜಿ.ಡಿ. ಬಿರ್ಲಾರವರು ಆರಂಭಿಸಿದ್ದು. ಆಧುನಿಕ ಉಪಕರಣದಿಂದ ನೂಲುವುದನ್ನು ಸ್ಥಾಪಿಸಿದ ಹೆಗ್ಗಳಿಕೆ ಅವರದಾಗಿತ್ತು. ಮತ್ತು ಮಿಶ್ರಲೋಹದಿಂದ ತಯಾರಿಸಿದ ವಸ್ತುಗಳು ಇವುಗಳಲ್ಲಿ ಆದ್ಯತೆ ಪಡೆಯಿತು. ಕಮಾನಿ ಅವರು Jaipur Metals & Electricals ಉದ್ಯಮಕಾರ. ಕಾಂಗ್ರೆಸ್ಸಿಗೆ ಹತ್ತಿರವಾದವರು. ಇವರ ಉದ್ಯಮ, ಮುನ್ನಡೆಯಲ್ಲಿತ್ತು. ಮತ್ತಿತರ ಉದ್ಯಮಿಗಳನ್ನು ಹೆಸರಿಸುವುದಾದರೆ ಟೆಂಟ್ ಉದ್ಯಮ, ಉಲ್ಲನ ಹಚ್ಚಡ ಸ್ವೆಟರ್ ಮಾಡುವಿಕೆ ಮುಂಚೂಣಿಯಲ್ಲಿತ್ತು. ಇವೆಲ್ಲಾ ಜನರ ಹಿತ ದೃಷ್ಟಿಯಿಂದ ಕೈಗೊಂಡಿದ್ದು.

ಇಷ್ಟೆಲ್ಲಾ ಬದಲಾವಣೆ ತಂದರೂ, ಮಿರ್ಜಾ ವಿಪರೀತ ಖರ್ಚು ಮಾಡುತ್ತಿದ್ದಾರೆಂದು ರಾಜಕೀಯ ಶಾಖೆ ಆರೋಪ ಹೊರಿಸಿತು. ಯುದ್ಧದ ಖರ್ಚಿಗೆ ಜಮಾನ ಮಾಡಬೇಕೆಂಬ ಏಜೆಂಟನ ಆಜ್ಞೆಗೆ ಮಿರ್ಜಾ ಒಪ್ಪಲಿಲ್ಲ. ಆದರೆ ವೈಸ್‌ರಾಯ್ ವೇವಲ್ ಇಂಡಿಯಾಕ್ಕೆ ಬಂದಾಗ, ಜಯಪುರಕ್ಕೆ ಸ್ಪೆಷಲ್ ಭೇಟಿ ಇತ್ತರು. ಜನರು ಭವ್ಯವಾದ ಸ್ವಾಗತ ನೀಡಿದ್ದರಿಂದ ಮಿರ್ಜಾ ಇಸ್ಮೈಯಿಲ್ ಪ್ರತಿಷ್ಠೆ ಹೆಚ್ಚಿತು.

ಜಯಪುರದ ಮಹಾರಾಜ ಮಾನ್‌ಸಿಂಗ್ ಮತ್ತು ಪ್ರಜೆಗಳಿಗೆ ಇನ್ನೂ ಮಿರ್ಜಾರವರ ಆಡಳಿತ ಸೇವಾ ಅವಧಿ ಬೇಕೆನ್ನುವಾಗಲೇ ಮೈಸೂರಿಗೆ ಹಿಂದಿರುಗಿ ಹೈದರಾಬಾದಿನಲ್ಲಿ ದಿವಾನರಾದರು.

ಅದು ಬದಲಾವಣೆಯ ಕಾಲ. ಊಳಿಗ ಮಾನ್ಯತೆಯಿಂದ ಮತ್ತು ಬ್ರಿಟೀಷ್ ಗುಲಾಮಗಿರಿಯಿಂದ ಸ್ವಾತಂತ್ರ್ಯಕ್ಕೆ ಮರಳ ಬೇಕೆನಿಸಿದ್ದ ಮಧ್ಯಮವರ್ಗದ ಜನರಿಗೆ ಒಂದು ನಿಯಮ ಬದ್ಧವಾದ ಸರ್ಕಾರ ಮತ್ತು ಸಂಸ್ಥೆ ಬೇಕಾಗಿತ್ತು. ಈ ಬದಲಾವಣೆ ಯಾವುದೊಂದು ತೊಂದರೆ ಇಲ್ಲದೆ ವಿರೋಧವಿಲ್ಲದೆ, ಇದನ್ನೆಲ್ಲಾ ವಿರೋಧಿಸಿದವರಿಗೂ ಗೊತ್ತಾಗದಂತೆ ಬದಲಾವಣೆಯನ್ನು ತಂದ ಶ್ರೇಯಸ್ಸು ಮಿರ್ಜಾ ಇಸ್ಮೈಯಿಲ್‌ರವರಿಗೆ ಸೇರುತ್ತದೆ.

I have admired your untiring energy, your great patience and your sweet reasonbleness. you seem to have cultivated the art of disarming opposition.[೧೩]

In another letter Mirza delineated the art, if not its motivating force. It all depends upon now to handle people.[೧೪]



## ಆಧಾರಸೂಚಿ ಮತ್ತು ಟಿಪ್ಪಣಿಗಳು

೧. Mirza Ismail, *My public life*, 1954, P. 72-95.
೨. *Hiralal Shastri Papers*, may 26, 1942.
೩. correspondence between Mirza Ismail and M.K.Gandhi letter, 19-3-1941 (Gandhi's letter from sevagram, wardha). see Mirza Ismail, *My Public Life*. p. 85. (Nehru Memoial & Muesum library New delhi)
೪. Stern Robert W. the cat and the lion Jaipur State in the British Raj p.290-291. 1988.
೫. *Report on the Administration of the Jaipur state*, 1942-43. P 06.
೬ ಸಮಿತಿಗೆ ೧೦೩೭, ಲಿಖಿತ ಉತ್ತರ ೩೭೫ ಸಹಿ ಹಾಕಿದ ಪತ್ರ, ೫೬ ರುಜುವಾತು, ೩೬ ಜನ ಹಾಜರಿದ್ದರು, (Jaipur Administration Report 1942-43.
ಸಮಿತಿಯು ೪ನೇ ನವೆಂಬರ್ ೧೯೪೨ ಆರಂಭಿಸಿ ೨ನೇ ಏಪ್ರಿಲ್ ೧೯೪೩, ಸರಕಾರಕ್ಕೆ ವರದಿ ಒಪ್ಪಿಸಿತು.
೭. Speeches by Amin-ul-Mulk sir Mirza Ismail. Prime Minister of Jaipur. Vol V. june 1942-july.1946 1947.
೮. Ibid P.13.
೯. Mirza Ismail, *My Public Life*. P. 93. [ಮಿರ್ಜಾ ಮತ್ತು 'ರಾಲೊ'ರವರ ಕಾಗದ ಪತ್ರಗಳು ಸಾಕ್ಷಿವೆ. ಅವುಗಳು ಈ ಅಂಶವನ್ನು ದೃಢಪಡಿಸಲ್ಪಡುತ್ತವೆ.]
೧೦. Mirza Ismail papers 9th sat 1954. 'Rajaslam University'
೧೧. *Jaipur Administration Report* For 1942-43.
೧೨. Address delivered by Dr.R.E.Helling president of Jaipur Medical Association Welcoming Mirza Ismail Prime Minister Jaipur to open the Jaipur Medical Association (in) Speeches by Amil-ul-Mulk sir Mirza Ismail vol-V june-1942-46. Jaipur 1947.
೧೩. No 183 undated letter, *Hiralal Sastri Papers*, delhi puoted (in) Stern Robert , the cat and the lion P. 323.
೧೪. *Ibid*, May 6th 1946.
* ಎಸ್. ಹಿರಿಯಣ್ಣನವರು ಮೈಸೂರು ರೆವಿನ್ಯೂ ಇಲಾಖೆಯಲ್ಲಿ ಮೊದಲು ಕಮೀಷನರ್, ಪ್ರಜಾಪ್ರತಿನಿಧಿ ಸಭೆಯಲ್ಲಿ ಕೆಲಸಮಾಡಿದವರು.
** ಅಮೇರಿಕಾದಿಂದ ಬಂದು ಮೈಸೂರು ಮೆಡಿಕಲ್ ಕಾಲೇಜಿನ ಪ್ರಿನ್ಸಿಪಾಲರಾಗಿದ್ದರು.
*** ಕೈಕಾಗದ ತಯಾರಿಸುವವರನ್ನು ಕಾಗಜಿ ಎಂದು ಕರೆಯುತ್ತಾರೆ.
**** Dr.G.Dessau
***** ಮಾರ್ಪಾಡೆಂದರೆ ದೇವಸ್ಥಾನಗಳ ಪುನರುತ್ಥಾನ ಅಥವಾ ದುರಸ್ತಿ.

ಗುರುಮೂರ್ತಿ ಪೆಂಡಕೂರು*

# ಬಳ್ಳಾರಿ ಜಿಲ್ಲೆಯ ಪ್ರಥಮ ಪಾಠಶಾಲೆ - ವಾರ್ಡ್ಲಾ ಪ್ರೌಢಶಾಲೆ

ವಿಜಯನಗರ ಸಾಮ್ರಾಜ್ಯದ ಭಾಗವಾಗಿದ್ದ ಬಳ್ಳಾರಿಯು ಅನಂತರ ಅನೇಕ ಪಾಳೇಗಾರರ ಪಾಲಾಯಿತು. ಅವರಲ್ಲಿ ಕ್ರಿ.ಶ. ೧೭೭೫ರ ಕಾಲದ ದೊಡ್ಡ ಹನುಮಪ್ಪನು ಆಳಿದ್ದನು. ಅವನೇ ಬಳ್ಳಾರಿಗೆ ಮೊದಲ ಮಣ್ಣಿನ ಕೋಟೆಯನ್ನು ನಿರ್ಮಿಸಿದನು. ಅನಂತರ ಹೈದರಾಲಿಯು ಬಳ್ಳಾರಿಯನ್ನು ವಶಪಡಿಸಿಕೊಂಡು ಭದ್ರವಾದ ಕಲ್ಲಿನ ಮೇಲಿನ ಕೋಟೆ ಮತ್ತು ಕೆಳಗಣ ಕೋಟೆಗಳನ್ನು ಕಟ್ಟಿದನು. ಈ ಕಟ್ಟಡದ ಉಸ್ತುವಾರಿಯನ್ನು ಫ್ರೆಂಚ್ ಇಂಜಿನಿಯರೊಬ್ಬರು ನಿರ್ವಹಿಸಿದರು. ಕ್ರಿ.ಶ. ೧೭೯೦ರಲ್ಲಿ ಭಾರತದ ಗವರ್ನರ್ ಜನರಲ್ ಆಗಿದ್ದ ಲಾರ್ಡ್ ಕಾರ್ನವಾಲೀಸನು ನಿಜಾಮ ಮತ್ತು ಮರಾಠರೊಂದಿಗೆ ಸಂಧಿ ಮಾಡಿಕೊಂಡು ಟೀಪು ಸುಲ್ತಾನನನ್ನು ಹಣಿಯಲು ತಯಾರಿ ನಡೆಸಿದನು. ಕ್ರಿ.ಶ. ೧೭೯೯ರ ನಿರ್ಣಾಯಕ ಯುದ್ಧಲ್ಲಿ ಟೀಪುವಿನ ವೀರಗತಿಯಿಂದ ಸಮಸ್ತವು ಆಂಗ್ಲೇಯರ ವಶವಾಯಿತು. ಆಗ ಅವರು ಸಂಡೂರನ್ನು ಮರಾಠರಿಗೂ ಉಳಿದ ಭಾಗವನ್ನು ನಿಜಾಮನಿಗೂ ನೀಡಿದರು. ಕ್ರಿ.ಶ. ೧೮೦೦ರಲ್ಲಿ ಬಳ್ಳಾರಿ, ಕಡಪ, ಅನಂತಪುರ ಮತ್ತು ಕರ್ನೂಲು ಜಿಲ್ಲೆಗಳು (ದತ್ತಕ ಮಂಡಲ) ನಿಜಾಮನಿಂದ ಇಂಗ್ಲೀಷರಿಗೆ ದೊರಕಿದವು. ಅಂದಿನಿಂದ ಈಸ್ಟ್ ಇಂಡಿಯಾ ಕಂಪೆನಿಯ ಸೇನೆಯು ಬಳ್ಳಾರಿ ಕೋಟೆಯಲ್ಲಿ ನೆಲೆಸಿತು. ಆಗ ಬಳ್ಳಾರಿಯ ನ್ಯಾಯಾಧೀಶರಾಗಿದ್ದ ಪೀಟರ ಬ್ರೂಸ್ ಅವರ ಹೆಸರಿನಲ್ಲಿ ಬ್ರೂಸ್‌ಪೇಟೆಯನ್ನು ರಚಿಸಿ ಕೋಟೆಯಲ್ಲಿ ವಾಸವಿದ್ದವರನ್ನೆಲ್ಲಾ ಅಲ್ಲಿ ನೆಲೆಗೊಳಿಸಲಾಯಿತು.

ಈಸ್ಟ್ ಇಂಡಿಯಾ ಕಂಪೆನಿಯು ವ್ಯಾಪಾರದಲ್ಲಿ, ಸಂಪತ್ತಿನ ಸಂಗ್ರಹಣೆಯಲ್ಲಿ ನಿರತವಾಗಿತ್ತು. ಕ್ರೈಸ್ತ ಮಿಷನರಿಗಳ ಕಾರ್ಯಕ್ಕೆ ಅವರು ನಿರ್ಬಂಧ ಹೇರಿದರು. ಆದರೆ ಅನೇಕ ಉತ್ಸುಕರು ಕ್ರಿಸ್ತಧರ್ಮ ಪ್ರಚಾರ ಮಾಡಲೆಂದು ಬೇರೆ ಬೇರೆ ಸಂಸ್ಥೆಗಳ ಮುಖಾಂತರ ತಲೆಮರೆಸಿಕೊಂಡು ಭಾರತಕ್ಕೆ ಬರುತ್ತಿದ್ದರು. ಕ್ರಿ.ಶ. ೧೮೧೩ರಲ್ಲಿ ಬ್ರಿಟಿಷ್ ಪಾರ್ಲಿಮೆಂಟ್ ಕಂಪೆನಿಯ ಶಾಸನವನ್ನು ಪುನಃ ಪರಿಶೀಲಿಸಿ ಮಿಷನರಿಗಳ




*ನೇತಾಜಿ ರಸ್ತೆ, ರಾಮನಗರ, ಹಗರಿಬೊಮ್ಮನಹಳ್ಳಿ, ಬಳ್ಳಾರಿ ಜಿಲ್ಲೆ.

ಬಗ್ಗೆ ಮುಕ್ತ ಅವಕಾಶ ನೀಡುವ ತಿದ್ದುಪಡಿ ಮಾಡಿತು. ಆಗ ಬ್ರಿಟನ್ನಿನ ಅನೇಕ ಮಿಷನರಿಗಳು ಭಾರತಕ್ಕೆ ಆಗಮಿಸಿದವು. ಜರ್ಮನಿ, ಸ್ವೀಡನ್, ಡೆನ್‌ಮಾರ್ಕ ಮತ್ತು ಅಮೇರಿಕೆಯಿಂದಲೂ ಅನೇಕ ಧರ್ಮಪ್ರಚಾರ ಸಂಸ್ಥೆಗಳು ಭಾರತಕ್ಕೆ ಬಂದವು.

ಕ್ರಿ.ಶ. ೧೮೧೦ರಲ್ಲಿಯೇ ಲಂಡನ್ ಮಿಷನ್‌ನವರೂ ವೆಸ್ಲಿಯನ್ ಮಿಷನ್‌ನವರೂ ಆಗಮಿಸಿದ್ದರು. ಕ್ರಿ.ಶ. ೧೮೨೧ರಲ್ಲಿ ಬಾಸೆಲ್ ಮಿಷನ್‌ನವರೂ, ಕ್ರಿ.ಶ. ೧೮೬೫ರಲ್ಲಿ ಅಮೆರಿಕನ್ ಮೆಥೊಡಿಸ್ಟ್ ಸೊಸೈಟಿಯವರೂ ಕರ್ನಾಟಕದ ಬೇರೆ ಬೇರೆ ಭಾಗಗಳಲ್ಲಿ ಧಾರ್ಮಿಕ, ಶೈಕ್ಷಣಿಕ ಮತ್ತು ಸಾಮಾಜಿಕ ಕಾರ್ಯದಲ್ಲಿ ತೊಡಗಿದರು.

ಬಳ್ಳಾರಿಯಲ್ಲಿ ಲಂಡನ್ ಮಿಷನ್ ಸಂಸ್ಥೆಯು ಕ್ರಿ.ಶ. ೧೮೦೦ ಸುಮಾರಿಗೇ ಶಾಖೆಯನ್ನು ಆರಂಭಿಸಿತ್ತು. ಕ್ರಿ.ಶ. ೧೭೮೦ರಲ್ಲಿ ಇಂಗ್ಲೆಂಡಿನ ನಾರ್ಥ್‌ಹ್ಯಾಂಪ್‌ಷಾಯರ್‌ನ ಜಾನ್ ಹ್ಯಾಂಡ್ಸ್ ಅವರು ಧರ್ಮಪ್ರಚಾರಕ್ಕಾಗಿ ಭಾರತದಲ್ಲಿ ಕೆಲಸ ಮಾಡಲು ರಂಗೂನ್ ಮೂಲಕ ಮದ್ರಾಸಿಗೆ ಬಂದರು. ಆದರೆ ಅವರು ಈಸ್ಟ್ ಇಂಡಿಯಾ ಕಂಪೆನಿಯ ಅನುಮತಿ ಪಡೆದಿರಲಿಲ್ಲವೆಂದು ಆಗಿನ ಮದ್ರಾಸ್ ಗವರ್ನರ್ ಜಾರ್ಜ್ ಬಾರ್ಲೊ ಅವರನ್ನು ಇಂಗ್ಲೆಂಡಿಗೆ ವಾಪಸಾಗಲು ಆಜ್ಞೆ ಮಾಡಿದರು. ಆದರೆ ಬ್ರಿಟಿಷ್ ಸೇನೆಯಲ್ಲಿ ಪಾದ್ರಿಗಳಾಗಿದ್ದ ವಿಲಿಯಂ ಥಾಂಸನ್ ಅವರ ಪ್ರಯತ್ನದಿಂದ ಹ್ಯಾಂಡ್ಸ್ ಅವರಿಗೆ ಭಾರತ ಪ್ರವೇಶದ ಅನುಮತಿ ದೊರೆಯಿತು. ಆದರೆ ಅವರು ಶ್ರೀರಂಗಪಟ್ಟಣದ ಬದಲು ಬಳ್ಳಾರಿಗೆ ತೆರಳಲು ತಿಳಿಸಲಾಯಿತು. ಸುಮಾರು ೪೫-೫೦ ದಿನಗಳ ಪಯಣ. ಬಂಡಿ, ಪಲ್ಲಕ್ಕಿ ಮುಂತಾದವುಗಳಲ್ಲಿ ಮೇ ತಿಂಗಳ ಬಿರುಬಿಸಿಲಿನಲ್ಲಿ ಪಯಣಿಸಿ ಹ್ಯಾಂಡ್ಸ್ ಬಳ್ಳಾರಿ ಸೇರಿದರು.

ಜಾನ್ ಹ್ಯಾಂಡ್ಸ್ ಅವರು ಬಳ್ಳಾರಿ ಸೇರಿದೊಡನೆಯೇ ದೇಶೀಯ ಪಂಡಿತರ ನೆರವಿನಿಂದ ಕನ್ನಡವನ್ನು ಕಲಿತು ಲೂಕ, ಮತ್ತಾಯ ಮತ್ತು ಮಾರ್ಕರ ಸುವಾರ್ತೆಗಳನ್ನು ಕನ್ನಡಾನುವಾದ ಮಾಡಿದರು. ಹೀಬ್ರೂ, ಗ್ರೀಕ್ ಮೂಲದಲ್ಲಿದ್ದ ಬೈಬಲ್ ಗ್ರಂಥವನ್ನು ಜನರಿಗೆ ಅರ್ಥವಾಗುವ ರೀತಿಯ ಸುಲಭ ಕನ್ನಡದಲ್ಲಿ 'ಸತ್ಯವೇದ' ವೆಂಬ ಹೆಸರಿನಲ್ಲಿ ಮುದ್ರಿಸಲು ಕನ್ನಡದ ಮೊದಲ ಮುದ್ರಣಾಲಯವನ್ನು ಬಳ್ಳಾರಿಯಲ್ಲಿ ಸ್ಥಾಪಿಸಿದರು. ಹ್ಯಾಂಡ್ಸ್ ಅವರು ಹೊಸ ಒಡಂಬಡಿಕೆಯನ್ನೂ, ವಿಲಿಯಂ ರೀವ್ ಅವರು ಹಳೆಯ ಒಡಂಬಡಿಕೆಯನ್ನೂ ಭಾಷಾಂತರ ಮಾಡಿದರು. ಈ ಗ್ರಂಥಗಳನ್ನು ಮುದ್ರಿಸಲು ಈಸ್ಟ್ ಇಂಡಿಯಾ ಕಂಪೆನಿಯು ಅನುದಾನ ನೀಡಲು ನಿರಾಕರಿಸಿತು ಕಲ್ಕತ್ತೆಯ ಬೈಬಲ್ ಸೊಸೈಟಿಯವರು ಒಂದು ಸಾವಿರ ರೂಪಾಯಿ ಅನುದಾನ ನೀಡಿದರು. ಜಾನ್ ಹ್ಯಾಂಡ್ಸ್ ಅವರು ಈ ಅನುದಾನದಿಂದ ಕನ್ನಡ ಅಚ್ಚಿನ ಮೊಳೆಗಳನ್ನು ತಯಾರಿಸಿದರು. ಕ್ರಿ.ಶ. ೧೮೨೦ರಲ್ಲಿ ಕೆಲ ಭಾಗಗಳನ್ನು ಮದ್ರಾಸಿನಲ್ಲಿ ಅಚ್ಚು ಮಾಡಿದರು. ಇದರಿಂದ ಉತ್ತೇಜಿತರಾದ ಲಂಡನ್ ಮಿಷನ್‌ನವರು ಬಳ್ಳಾರಿಯಲ್ಲಿಯೇ ಮುದ್ರಣಾಲಯ ಸ್ಥಾಪಿಸಲು ಮುಂದಾದರು. ತಾವೇ ತಯಾರಿಸಿದ ಅಚ್ಚಿನ ಮೊಳೆಗಳನ್ನು ಬಳಸಿ ಹ್ಯಾಂಡ್ಸ್ ಅವರು ಬೈಬಲ್ಲನ್ನು ಸತ್ಯವೇದವೆಂಬ ಹೆಸರಿನಲ್ಲಿ ಮುದ್ರಿಸಿದರು. ಇದಕ್ಕಾಗಿ ಕ್ರಿ.ಶ. ೧೮೨೬ರಲ್ಲಿ ಬಳ್ಳಾರಿಗೆ ಆಗಮಿಸಿದ ತರಬೇತಿ ಪಡೆದ ಮುದ್ರಣಕಾರ ಬಿ.ಎಚ್. ಪೆಯಿನ್ ಮುದ್ರಣಾಲಯವನ್ನು ನಿರ್ಮಿಸಿದರು. ಇದಕ್ಕಾಗಿ ಅವರು ನಿರ್ಮಿಸಿದ ಅರ್ಧ ಚಂದ್ರಾಕಾರದ ದುಂಡು ಮಾಳಿಗೆಯ ಕಟ್ಟಡವು ಇಂದಿಗೂ ಸುಭದ್ರವಾಗಿದೆ. ಮುದ್ರಿತವಾದ ಹಾಳೆಗಳನ್ನು ಒಣಗಿಸಲು ಬೊಂಬುಗಳನ್ನು ಒಳಮಾಳಿಗೆಯಲ್ಲಿ ಜೋಡಿಸಿದ್ದನ್ನು ಈಗಲೂ ಕಾಣಬಹುದು. ಕ್ರಿ.ಶ. ೧೮೨೮ರಲ್ಲಿ ಇಂಗ್ಲೆಂಡಿಗೆ ಹೋಗಿ ಕನ್ನಡ ಅಚ್ಚಿನ ಮೊಳೆಗಳನ್ನು ಟಂಕಿಸಿ ತರಲಾಯಿತು. ಕ್ರಿ.ಶ. ೧೮೩೧ರಲ್ಲಿ ಸತ್ಯವೇದವು ಕನ್ನಡದಲ್ಲಿ ಸಂಪೂರ್ಣವಾಗಿ ಭಾರತದಲ್ಲಿ ಮೊದಲ ಬಾರಿಗೆ ಬಳ್ಳಾರಿಯ ಈ ಮುದ್ರಣಾಲಯದಲ್ಲಿ ಪ್ರಕಟವಾಯಿತು.

ಹ್ಯಾಂಡ್ಸ್ ಅವರು ಈ ಮುದ್ರಣಾಲಯದಲ್ಲಿ ಕರಪತ್ರಗಳನ್ನೂ, ಬೋಧನಾ ಸೂತ್ರಗಳನ್ನೂ, ಶಾಲಾ ಪಠ್ಯಪುಸ್ತಕಗಳನ್ನೂ, ಸಂಗೀತ, ಕೀರ್ತನೆಯ ಪುಸ್ತಕಗಳನ್ನು ಕನ್ನಡವಲ್ಲದೇ, ತೆಲುಗಿನಲ್ಲೂ ಮುದ್ರಿಸಿದರು. ಹಳೆಯ ಮೈಸೂರು ಪ್ರಾಂತದ ಶಾಲೆಗಳಿಗಾಗಿಯೂ ಇಲ್ಲಿ ಮುದ್ರಣ ನಡೆಯಿತು. ಜಾನ್ ರೀಡ್ ಮತ್ತು ಗೋರ್ಡನ್ ಅವರು ಸಂಕಲಿಸಿದ ತೆಲಗು ಶಬ್ದಕೋಶ ಮತ್ತು ಕನ್ನಡ ಭೂಗೋಲಗಳೂ ಇಲ್ಲಿಯೇ ಅಚ್ಚಾದವು. ವಿಲಿಯಂ ರೀವ್ ಅವರು ಇಲ್ಲಿಯೇ ತಮ್ಮ ಕನ್ನಡ - ಇಂಗ್ಲಿಷ್ ನಿಘಂಟಿನ ಕೆಲಸ ಮಾಡಿ ಅನಂತರ ಮೂರು ಸಾವಿರ (೩೦೦೦) ಪುಟದ ಇಂಗ್ಲಿಷ್-ಕನ್ನಡ ಮತ್ತು ಕನ್ನಡ - ಇಂಗ್ಲಿಷ್ ನಿಘಂಟನ್ನು ಮದರಾಸ್ ಸರಕಾರದ ಸೇಂಟ್ ಜಾರ್ಜ್ ಮುದ್ರಣಾಲಯದಲ್ಲಿ ಮುದ್ರಿಸಿದರು.

ಈ ಸಾಹಿತ್ಯಕ, ಧಾರ್ಮಿಕ ವಾತಾವರಣಗಳು ವಾರ್ಡಲಾ ಗಾರ್ಡನ್ಸ್‌ನಲ್ಲಿ ನಡೆಯುತ್ತಿದ್ದವು. ಲಂಡನ್ ಮಿಷನ್ ಸೊಸೈಟಿಯು ಬಹುಮುಖಿಯಾಗಿ ತನ್ನ ಕಾರ್ಯಕ್ಷೇತ್ರವನ್ನು ವಿಸ್ತರಿಸಿ ಧರ್ಮಪಾಠಶಾಲೆ, ಪೌರಮಕ್ಕಳ ಶಾಲೆ, ಕನ್ನಡ ಶಾಲೆ, ಅನಾಥಾಶ್ರಮ ಸ್ಥಾಪಿಸಿದ್ದಲ್ಲದೇ ಮೋಗ್ಲಿಂಗ್‌ರ ಸಂಪಾದಕತ್ವದಲ್ಲಿ ನಾಲ್ಕು ಪುಟದ ಮೊಟ್ಟ ಮೊದಲ ಕನ್ನಡ ಪತ್ರಿಕೆ 'ಕನ್ನಡ ಸಮಾಚಾರ ಪತ್ರಿಕೆ'ಯನ್ನೂ ಪ್ರಕಟಿಸಿತು (ಕ್ರಿ.ಶ. ೧೮೪೪).

ಈಸ್ಟ್ ಇಂಡಿಯಾ ಕಂಪೆನಿಯು ಹ್ಯಾಂಡ್ಸ್ ಅವರ ಸೇವೆಯನ್ನು ಮೆಚ್ಚಿ ಗಿಡಮ್ಮನ ಬಾವಿಯಿದ್ದ ತೋಟದೊಂದಿಗೆ ೯ ಎಕರೆ ಭೂಮಿಯನ್ನು ದಾನವಾಗಿ ನೀಡಿತು. ಕ್ರಿ.ಶ. ೧೮೪೨ರಲ್ಲಿ ಜಾನ್‌ಸ್ಮಿತ್ ವಾರ್ಡ್‌ಲಾ ಮಿಷನರಿಯಾಗಿ ಬಳ್ಳಾರಿಗೆ ಬಂದರು. ೧೮೧೧ರಲ್ಲಿ ಇಂಗ್ಲೆಂಡಿನ ಗ್ಲಾಸ್‌ಗೋ ನಗರದಲ್ಲಿ ಜನಿಸಿದ ವಾರ್ಡ್ಲಾ ಎಡಿನ್‌ಬರೋದಲ್ಲಿ ಎಂ.ಎ. ಪದವಿಯನ್ನು ಹೀಬ್ರೂ ಮತ್ತು ಗ್ರೀಕ್ ಭಾಷಾ ಪಾಂಡಿತ್ಯವನ್ನೂ ಪಡೆದವರು. ಅವರು ೧೮೪೫ರಲ್ಲಿ ಅನ್ನಬೆಲ್ ಮೆಕೆಯಾಂಡ್ ಅವರನ್ನು ಮದುವೆಯಾದ ಮೇಲೆ ವಿದ್ಯಾಪ್ರಗತಿಗಾಗಿ ಬಾಲಕ–ಬಾಲಕಿಯರ ಶಾಲೆಗಳ ಸ್ಥಾಪನೆಯಲ್ಲಿ ತೊಡಗಿದರು. ಜಾನ್ ಹ್ಯಾಂಡ್ಸ್ ಸ್ಥಾಪಿಸಿದ ಸೆಂಟ್ರಲ್ ಇಂಗ್ಲಿಷ್ ಸ್ಕೂಲ್ ಮೂಲಾಧಾರದ ಮೇಲೆ ಸಹಯೋಗಿ ವಿಲಿಯಂ ಥಾಂಸನ್ ನೆರವಿನಿಂದ ಬಳ್ಳಾರಿಯ ಮಿಷನ್ ತೋಟದಲ್ಲಿ ೨೮ನೇ ಆಗಸ್ಟ್ ೧೮೪೬ರಂದು ವಾರ್ಡ್‌ಲಾ ಪ್ರೌಢ ವಿದ್ಯಾಪೀಠವನ್ನು ಪ್ರಾರಂಭಿಸಿ ತಮ್ಮ ಪ್ರಯತ್ನದಿಂದ ಅದ್ಭುತವಾದ ಕಲ್ಲಿನ ಕಟ್ಟಡವನ್ನು ಕಟ್ಟಿದರು. ಅವರು ನಿರ್ಮಿಸಿದ ಸುಂದರವಾದ ಕಲ್ಲಿನ ಕಟ್ಟಡವು ಇಂದಿಗೂ ಸುಭದ್ರವಾಗಿದೆ. ವಾರ್ಡ್‌ಲಾ ಅವರು ಬಳ್ಳಾರಿಯಲ್ಲಿ ಕೆಲವೇ ವರ್ಷಗಳಿದ್ದರು. ಅನಂತರ ಅವರನ್ನು ವಿಶಾಖಪಟ್ಟಣ ಮತ್ತು ಮಚಲೀಪಟ್ಟಣಕ್ಕೆ ವರ್ಗಾಯಿಸಿದರು. ಅಲ್ಲಿ ಅವರು ಬೈಬಲ್ಲನ್ನು ತೆಲುಗಿಗೆ ಅನುವಾದಿಸುವಲ್ಲಿ ನೆರವಾದರು.

ವಾರ್ಡ್‌ಲಾ ಅವರು ೧೬೨ ವರ್ಷ ಹಿಂದೆ ಕನಸು ಕಂಡು ರೂಪಿಸಿ, ನಿರ್ಮಿಸಿ ಬೆಳೆಸಿ ವರದಾನವಾಗಿ ನೀಡಿದ ಸಂಸ್ಥೆಯು ಜಿಲ್ಲೆಯ ಪ್ರಥಮ ಸಂಸ್ಥೆಯಾಗಿದೆ. ಈ ಶಾಲೆಯು ಉತ್ತಮ ವಿದ್ಯಾಭ್ಯಾಸ, ಶಿಸ್ತು ಮತ್ತು ಸಂಸ್ಕೃತಿ ವರ್ಧನೆಯ ಕೇಂದ್ರವಾಗಿದೆ. ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಮೊದಲ ವ್ಯವಸಾಯ ಮಾಡಿದ ಸಂಸ್ಥೆ ಕನ್ನಡ ಸಾಹಿತ್ಯ–ಸಂಸ್ಕೃತಿಯ ರಕ್ಷಣೆ ಪೋಷಣೆಗೆ ನಿರಂತರ ನೆರವಾಗಿದೆ. ಸನ್ಮಾನ್ಯ ಶ್ರೀ ಎಂ.ಪಿ. ಪ್ರಕಾಶ್, ಅಲ್ಲಂ ಮನೆತನದವರೂ, ಎಂ.ಜಿ. ಬ್ರದರ್ಸ್ ಮನೆತನದವರೂ, ಜಿಲ್ಲೆಯ ನಾನಾ ನಾಯಕರು, ಸಾಮಾಜಿಕ ಧುರೀಣರೂ, ಸಾಹಿತಿಗಳೂ, ಕಲಾವಿದರೂ ಈ ಶಾಲೆಯಲ್ಲಿ ಅಭ್ಯಾಸ ಮಾಡಿದ್ದಾರೆ. ನಾನು ಕೂಡಾ ಈ ಶಾಲೆಯ ವಿದ್ಯಾರ್ಥಿಯೆಂಬುದು ಅಭಿಮಾನದ ಸಂಗತಿ. ಆಟ, ಪಾಠ, ನಾಟಕ, ಸಂಗೀತ ಮುಂತಾದವಲ್ಲದೇ ಸ್ಕೌಟ್ ಚಳುವಳಿಯಲ್ಲೂ ಈ ಶಾಲೆ ಅಗ್ರ ಪಾತ್ರವಹಿಸಿದೆ. ಕರ್ನಾಟಕದ ನವೋದಯ ಸಾಹಿತಿಗಳಾದ ವಿ.ಕೃ. ಗೋಕಾಕ, ದ.ರಾ. ಬೇಂದ್ರೆ, ಅನಕೃ, ತರಾಸು, ಜಿ.ಪಿ. ರಾಜರತ್ನಂ, ವಿ. ಸೀತಾರಾಮಯ್ಯ ಮುಂತಾದ ಹಲವರು ಈ ಶಾಲೆಗೆ ಅತಿಥಿಗಳಾಗಿ ಆಗಮಿಸಿ ಮೆಚ್ಚಿದ್ದಾರೆ.

ಬಳ್ಳಾರಿ ಜಿಲ್ಲೆಯಲ್ಲಿ ಹರಪನಹಳ್ಳಿಯ ಸರಕಾರೀ ಪ್ರೌಢಶಾಲೆಯೂ, ವಾರ್ಡ್‌ಲಾ ಸಂಸ್ಥೆಯೂ ಜನವರ್ಗದಲ್ಲಿ ಅತ್ಯಂತ ಪ್ರೀತಿಯ ಸ್ಥಾನವನ್ನು ಪಡೆದು ವಿದ್ಯಾಕ್ಷೇತ್ರದಲ್ಲಿ ಮಾತೃಸಂಸ್ಥೆಗಳಾಗಿವೆ. ಇಲ್ಲಿಂದ ಪ್ರೇರಣೆ ಪಡೆದು ಮೈಸೂರು, ಶ್ರೀರಂಪಟ್ಟಣ, ಬೆಳಗಾವಿ, ಧಾರವಾಡ, ಹುಬ್ಬಳ್ಳಿ, ಮುದುಗಲ್, ಗುತ್ತಿ, ಅನಂತಪುರ, ಉರವಕೊಂಡ, ಕರ್ನೂಲು, ಕಡಪ ಮುಂತಾದ ಹಲವು ಕಡೆ ವಿದ್ಯಾಸಂಸ್ಥೆಗಳು ಪ್ರಾರಂಭವಾದವು. ಇವೆಲ್ಲವೂ ಬಳ್ಳಾರಿ ಮಿಷನ್ನಿನ ಉಪಕ್ಷೇತ್ರಗಳಾಗಿದ್ದವು. ಹೀಗೆ ಅಂದಿನ ಕಾಲದಲ್ಲಿ ವಾರ್ಡ್‌ಲಾ ಪ್ರೌಢಶಾಲೆಯು ಇಡೀ ಕರ್ನಾಟಕ ಮತ್ತು ರಾಯಲಸೀಮೆಯ ನಾಲ್ಕು ಜಿಲ್ಲೆಗಳಲ್ಲಿ ಅಗ್ರಗಣ್ಯ ಪ್ರೌಢಶಾಲೆಯಾಗಿಯೂ, ಪ್ರಥಮ ದರ್ಜೆಯ ಮಹಾವಿದ್ಯಾಲಯವಾಗಿಯೂ ಪ್ರಸಿದ್ಧಿ ಗಳಿಸಿತು. ವಾರ್ಡ್‌ಲಾ ಸಂಸ್ಥೆಯ ಆವರಣದಲ್ಲಿಯೇ ಡಾ. ಹಾವನೂರು ಅವರು ಹೇಳಿದಂತೆ ಆಧುನಿಕ ಕನ್ನಡ ಸಾಹಿತ್ಯದ ಅರುಣೋದಯ ವಾಯಿತು.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. ರೆವ ಯನ್. ಸಭಾಪತಿ, ಆಧುನಿಕ ಕನ್ನಡ ಸಾಹಿತ್ಯಾಭಿವೃದ್ಧಿಗೆ ಬಳ್ಳಾರಿ ಲಂಡನ್ ಮಿಷನ್ನಿನ ಪ್ರಥಮ ಕೊಡುಗೆ.

೨. Rev. N. Sabhapati, *Life and work of Rev. John Hands.*

೩. Rev. E.P. Rice, *A History of Kannada Literature.*

೪. Rev. C.B. Firth, *London Mission in Bellary.*

ಡಾ. ಎಸ್. ಹನುಮಂತ ಜೋಯಿಸ್*

# ಕರ್ನಾಟಕದ ಇತಿಹಾಸಕ್ಕೆ ಪ್ರವೃತ್ತಿಪರ ಛಾಯಾಚಿತ್ರಗ್ರಾಹಕರ ಕೊಡುಗೆ

ಎಲ್ಲಾ ಶಾಸ್ತ್ರಗಳಿಗೂ ತಮ್ಮದೇ ಆದ ಇತಿಹಾಸವಿದೆ. ಕನ್ನಡಕ್ಕೂ ತನ್ನದೇ ಆದ ವಿಪುಲ ಸಾಹಿತ್ಯವಿದೆ. ಸವಿಯಬಲ್ಲ ಸಹೃದಯರೂ ಕರ್ನಾಟಕದಾದ್ಯಂತ ಇದ್ದಾರೆ. ಅವರಿಬ್ಬರನ್ನು ಬೆಸೆಯುವ ಕಾರ್ಯವನ್ನು ಮೌನ ಜಗತ್ತಿನ ಸಮೃದ್ಧ ಭಾಷೆ, ದೃಶ್ಯಭಾಷೆ, ದೃಶ್ಯಕಾವ್ಯವೆನಿಸಿರುವ ಛಾಯಾಗ್ರಹಣ ಕ್ಷೇತ್ರವು ಯಶಸ್ವಿಯಾಗಿ ಈಗ ಮಾಡುತ್ತಿದೆ. ಇತ್ತೀಚೆಗೆ ಇದನ್ನು ಲಲಿತಕಲೆಗಳ ಗುಂಪಿನಲ್ಲಿ ಸೇರಿಸಲಾಗಿದೆ. ಈ ಕಲೆಯು ಛಾಯಾಗ್ರಹಣ ಪೆಟ್ಟಿಗೆ (ಕ್ಯಾಮರಾ)ಯಿಂದ ಸೃಷ್ಟಿಯಾಗುವ ಕಲೆಯೆಂದರೂ, ಇದಕ್ಕೆ ಕ್ರಿಸ್ತಪೂರ್ವದಿಂದಲೂ ಕಂಡುಹಿಡಿದ ಸಂಶೋಧಕರ ನೋವು-ನಲಿವಿನ ಇತಿಹಾಸವಿದೆ. ಈ ಕಲೆಯು ಜಗತ್ತಿನಲ್ಲಿ ಬಹಿರಂಗವಾಗಿ ಪ್ರಚಾರವಾಗುವ ಹೊತ್ತಿಗೆ ನವೀನ ಮುದ್ರಣ ಯಂತ್ರಗಳು, ಅದಕ್ಕೆ ಬೇಕಾದ ಆಧುನಿಕ ಪರಿಕರಗಳು ಮತ್ತು ಮುದ್ರಣ ಕಾಗದದ ಆವಿಷ್ಕಾರವಾಗಿತ್ತು.

ಈ ಕಲೆಯು ಫ್ರಾನ್ಸ್ ದೇಶದಿಂದ ೧೯ ಆಗಸ್ಟ್ ೧೮೩೯ ರಂದು ಆ ನಾಡಿನ ಎಲ್.ಜೆ.ಎಂ. ಡಾಗ್ಯೆರ್ ಎಂಬ ಸಂಶೋಧಕನಿಂದ ಸಿದ್ಧಪಡಿಸಲ್ಪಟ್ಟು, ಡಾಗ್ಯೆರ್ ಟೈಪ್ ಛಾಯಾಗ್ರಹಣ ಯಂತ್ರ ಮತ್ತು ಆತನು ಬರೆದ ೭೯ ಪುಟಗಳ ಚಿತ್ರನಿರ್ಮಾಣ ಮಾಡುವ ವಿಧಾನದ ವಿವರಗಳನ್ನೊಳಗೊಂಡ ಕಿರು ಹೊತ್ತಿಗೆಯು ಸಿದ್ಧವಾಗಿ ಅದನ್ನು ಜಗತ್ತಿನ ವಿವಿಧ ಭಾಷೆಗಳಿಗೆ ಅನುವಾದಿಸಿ ಮುದ್ರಿಸಿ ಹಂಚಿದ ಕೀರ್ತಿಯು ಪ್ರಥಮವಾಗಿ ಆಗಿನ ಫ್ರಾನ್ಸ್ ದೇಶದ ಸರ್ಕಾರಕ್ಕೆ ಸಲ್ಲುತ್ತದೆ. ಆದ್ದರಿಂದ ಪ್ರತಿವರ್ಷವೂ ಆಗಸ್ಟ್ ೧೯ನ್ನು ಈ ಕಲೆಯ ಜನ್ಮದಿನವನ್ನಾಗಿ ಆಚರಿಸುತ್ತಿದ್ದೇವೆ.

ಈ ಛಾಯಾಗ್ರಹಣ ಕಲೆಯು ಕ್ರಿ.ಶ. ೧೮೪೦ರಲ್ಲಿಯೇ ಭಾರತ ದೇಶಕ್ಕೆ ಬಂದ ದಾಖಲೆಗಳಿವೆ. ಭಾರತದಲ್ಲಿ ಪ್ರಕಟವಾಗುತ್ತಿದ್ದ ಫ್ರೆಂಡ್ಸ್ ಆಫ್ ಇಂಡಿಯಾ ದಿನಪತ್ರಿಕೆ (ದಿನಾಂಕ ೧೮-೧-೧೮೪೦)ಯಲ್ಲಿ ಡಾಗ್ಯೆರ್ ಟೈಪ್ ಮತ್ತು ಟಾಲ್‌ಬಟ್ ಟೈಪ್ ಸ್ಟುಡಿಯೋಗಳು ಮತ್ತು ಡಾಗ್ಯೆರ್ ಟೈಪ್ ಛಾಯಾಗ್ರಹಣ ಪೆಟ್ಟಿಗೆಗಳು ಪ್ರಕಟವಾದ ಜಾಹೀರಾತಿನ ದಾಖಲೆಗಳಿವೆ.

ಭಾರತಕ್ಕೆ ಆಂಗ್ಲರಿಂದ ಪ್ರಚಾರಕ್ಕೆ ಬಂದ ಈ ಕಲೆಯು ಕ್ರಿ.ಶ. ೧೮೫೦ರಲ್ಲಿ ಮೈಸೂರು ರಾಜ್ಯ (ಈಗಿನ ಕರ್ನಾಟಕ)ಕ್ಕೆ ಬಂದ ದಾಖಲೆಗಳಿವೆ. ಕರ್ನಾಟಕದಲ್ಲಿ ದಿನಾಂಕ : ೨೭ ಜನವರಿ ೧೯೫೩ರಲ್ಲಿ ಪ್ರವೃತ್ತಿ ಛಾಯಾಚಿತ್ರಗ್ರಾಹಕರಿಗಾಗಿ ಪ್ರತಿಷ್ಠಿತವಾದ ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಫಿಯು ಅಂತರರಾಷ್ಟ್ರೀಯ ಮಾನ್ಯತೆ (ಫೆಡರೇಷನ್ ಆಫ್ ಇಂಟರ್‌ನ್ಯಾಷನಲ್ ಆರ್ಟ್ ದಿ ಫೋಟೋಗ್ರಾಫಿಕ್) ಯನ್ನು ಪಡೆದಿದ್ದು ಅದರ ಜನರಲ್ ಸೆಕ್ರೆಟರಿಯಾಗಿ ಕೀರ್ತಿಶೇಷ ಡಾ. ಜಿ. ಥಾಮಸ್‌ರವರು ನೇಮಕರಾಗಿದ್ದರು. ಅವರು ಬರೆದಿರುವ *(History of Photography-India)* ಎಂಬ ಉದ್ಗ್ರಂಥದಲ್ಲಿ ತಮಗೆ ಲಭ್ಯವಾದ ವಿಷಯಗಳನ್ನು ಸಂಕ್ಷೇಪವಾಗಿ ಬರೆದಿರುತ್ತಾರೆ. ಇದು ಆಂಗ್ಲಭಾಷೆಯಲ್ಲಿದ್ದು ಈ ಕ್ಷೇತ್ರದಲ್ಲಿ ಭಾರತದಲ್ಲಿ ಛಾಯಾಗ್ರಹಣದ ಇತಿಹಾಸ ಬರೆದ ಏಕೈಕ ಗ್ರಂಥವಾಗಿದೆ. ಶ್ರೀಯುತರು ಈ ಗ್ರಂಥದ ಸಂಪಾದಕೀಯದಲ್ಲಿ ಈ ರೀತಿ ಉಲ್ಲೇಖಿಸಿರುತ್ತಾರೆ.

"History of Photography, is this story of Men, honest and true, who set themselves to bend their mastery over a medium in order that they might lead lasting image, that could communicate not only across borders and boundaries but also the passage of time and distance."

ಕ್ರಿ.ಶ. ೧೮೪೦ರಿಂದ ಕ್ರಿ.ಶ. ೧೮೮೦ರವರೆಗೆ ಈ ಕ್ಷೇತ್ರದಲ್ಲಿ ಕರ್ನಾಟಕ ಇತಿಹಾಸಕ್ಕೆ ಛಾಯಾಚಿತ್ರಗ್ರಾಹಕರ ಕೊಡುಗೆಯ ವಿಚಾರವಾಗಿ ಅವರ ಗ್ರಂಥದ ಆಧಾರದಿಂದ ಭಾರತದಲ್ಲಿ ಈ ಕಲೆಯು ಪ್ರಚಾರವಾದ ಸುಮಾರು ಹತ್ತು ವರ್ಷಗಳ ನಂತರ, ಅಂದರೆ ಕ್ರಿ.ಶ. ೧೮೫೦ರಿಂದ ಪ್ರಾರಂಭವಾಗಿರುವುದಾಗಿ ತಿಳಿದುಬರುತ್ತದೆ. ಪ್ರಾರಂಭದಲ್ಲಿ ಈ ಕಲೆಯಲ್ಲಿ ವ್ಯಕ್ತಿಚಿತ್ರಗಳನ್ನು ಹಗಲು ಹೊತ್ತಿನಲ್ಲಿ ದೊಡ್ಡ ಗಾತ್ರದ ಮರದಿಂದ ಮಾಡಿದ ಛಾಯಾಗ್ರಹಣ ಪೆಟ್ಟಿಗೆಯಿಂದ ಮಾಡುತ್ತಿದ್ದರು. ಇದೊಂದು ವಾಣಿಜ್ಯ ಉದ್ದಿಮೆಯಾಗಿತ್ತು.

* ವಿಭಾಗೀಯ ಕಾರ್ಯದರ್ಶಿ, ಎಫ್‌ಐಪಿ, ಎಂಎಂಸಿ ವಿಭಾಗ, ಕೊಲ್ಕತ್ತಾ.

ಈ ಗ್ರಂಥದಲ್ಲಿ ಶ್ರೀಯುತರು ಛಾಯಾಗ್ರಹಣದ ಚಿತ್ರಕಲೆ ಭಾರತದಲ್ಲಿ ಪ್ರಗತಿ ಯಾದುದನ್ನು ನಾಲ್ಕು ಮುಖ್ಯ ಹಂತಗಳಾಗಿ ವಿಂಗಡಿಸಿ ದ್ದಾರೆ.

ಕ್ರಿ.ಶ. ೧೮೪೦ರಿಂದ ಕ್ರಿ.ಶ. ೧೮೮೦ರವರೆಗೆ ಪ್ರಥಮ

ಕ್ರಿ.ಶ. ೧೮೮೦ರಿಂದ ಕ್ರಿ.ಶ. ೧೯೨೦ರವರೆಗೆ ದ್ವಿತೀಯ

ಕ್ರಿ.ಶ. ೧೯೨೦ರಿಂದ ಕ್ರಿ.ಶ. ೧೯೫೭ರವರೆಗೆ ತೃತೀಯ

ಕ್ರಿ.ಶ. ೧೯೫೭ರಿಂದ ಚತುರ್ಥ ಹಂತ

ಎಂದು ವಿಂಗಡಿಸಿ ಆಗ ಭಾರತದಲ್ಲಿ ಈ ಕಲೆಗಾಗಿ ದುಡಿದ ಬ್ರಿಟಿಷ್ ಕಂಪೆನಿಯವರಿಂದ ನೇಮಕವಾಗಿ ಸೇವೆ ಸಲ್ಲಿಸಿದ ಚಿತ್ರಗ್ರಾಹಕರು ಹಾಗೂ ಛಾಯಾಚಿತ್ರಣ ಸಂಸ್ಥೆಗಳನ್ನು ಮಾಹಿತಿಗಾಗಿ ಸಂಕ್ಷೇಪವಾಗಿ ಬರೆದಿರುತ್ತಾರೆ. ಅವರು ಸೆರೆಹಿಡಿದ ಹಲವು ಛಾಯಾಚಿತ್ರಗಳೂ ಆ ಗ್ರಂಥದಲ್ಲಿವೆ.

ಅವರ ಗ್ರಂಥದ ಪ್ರಕಾರ ಪ್ರಾರಂಭದಲ್ಲಿ ನಮ್ಮ ದೇಶದ ಕೊಲ್ಕತ್ತಾ, ಮುಂಬಯಿ, ಮದ್ರಾಸ್ (ಚೆನ್ನೈ), ಮೈಸೂರು ಮತ್ತು ಬೆಂಗಳೂರು ಪಟ್ಟಣಗಳಲ್ಲಿ ಈ ಕಲೆಯನ್ನು ಕಲಿತವರು ತಮ್ಮ ಸಂಸಾರ ನಿರ್ವಹಣೆಗಾಗಿ ಅದನ್ನು ಆಶ್ರಯಿಸಿದ್ದರು. ಇದು ವಿಶ್ವಮಾನ್ಯತೆಯನ್ನು ಹೊಂದಿದ್ದ ಕಲೆಯಾದುದರಿಂದ ಈ ಹಿಂದೆ ಕರ್ನಾಟಕದಲ್ಲಿ ಈ ಕಲೆ ಬೆಳೆದುಬಂದ ವಿಚಾರವಾಗಿ ಆಗಿನ ಹಿರಿಯ ವೃತ್ತಿಪರ ಮತ್ತು ಪ್ರವೃತ್ತಿಪರ ಛಾಯಾಚಿತ್ರಗ್ರಾಹಕರು ಗಮನವನ್ನು ಕೊಟ್ಟಹಾಗೆ ತೋರುತ್ತಿಲ್ಲ. ಈ ಕಲೆಯನ್ನು ಕಲಿತವರು ಯಾರೂ ಹೆಸರು ಮಾಡಿದ ಹಾಗೆ ಇಲ್ಲ. ಕೇವಲ ದುಡಿಮೆಗಾಗಿ ಈ ಕಲೆಯನ್ನು ಕಲಿತಿದ್ದುದಾಗಿ ಭಾಸವಾಗುತ್ತದೆ.

ಕ್ರಿ.ಶ. ೧೮೫೭ರಲ್ಲಿ ಭಾರತದಲ್ಲಿ 'ಭಾರತದ ಪ್ರಥಮ ಸ್ವಾತಂತ್ರ್ಯ ಸಂಗ್ರಾಮ' ಸಂದರ್ಭದಲ್ಲಿ ಚಿತ್ರಗಳಲ್ಲಿ ಸಂಗ್ರಾಮದ ಚಿತ್ರಗಳನ್ನು ಸೆರೆಹಿಡಿಯಲು ಬ್ರಿಟಿಷ್ ಸರ್ಕಾರದವರು ಅವರಿಂದ ನೇಮಕರಾದ ಛಾಯಾಚಿತ್ರಗ್ರಾಹಕರನ್ನು ಕಳುಹಿಸಿದ ದಾಖಲೆಗಳಿವೆ. ಅವರು ಸಂಗ್ರಾಮ ಹಾಗೂ ಅನಂತರದ ಚಿತ್ರಗಳನ್ನು ಛಾಯಾಗ್ರಹಣ ಪೆಟ್ಟಿಗೆಯಲ್ಲಿ ಸೆರೆಹಿಡಿದುದರ ಜತೆಯಲ್ಲಿ ನಮ್ಮ ದೇಶದ ಭವ್ಯ ಪರಂಪರೆಯನ್ನು ಬಿಂಬಿಸುವ ವಾಸ್ತುಶಿಲ್ಪಗಳನ್ನು ಸೆರೆಹಿಡಿದು ಈ ಕ್ಷೇತ್ರಕ್ಕೆ ಅಪಾರ ಸೇವೆಯನ್ನು ಸಲ್ಲಿಸಿದ್ದಾರೆ. ಆ ಸಮಯದಲ್ಲಿ ಭಾರತದ ವಿವಿಧ ಕ್ಷೇತ್ರಗಳಿಂದ ಈ ಕಲೆಯನ್ನು ಕಲಿಯಲು ಉತ್ಸಾಹಿಗಳಾದ ತರುಣರು ಅವರ ಸ್ನೇಹವನ್ನು ಬೆಳೆಸಿ ಈ ಕಲೆಯನ್ನು ಕಲಿತಿದ್ದಾರೆ. ನಮ್ಮ ದೇಶದ ಭವ್ಯ ಪರಂಪರೆಯನ್ನು, ವಾಸ್ತುಶಿಲ್ಪಗಳನ್ನು ಸೆರೆಹಿಡಿಲು ಛಾಯಾಗ್ರಹಣ ಪೆಟ್ಟಿಗೆಯ ತಂತ್ರವನ್ನು ಅರಿತ ಬ್ರಿಟಿಷ್ ದೇಶದವರಾದ ಚಿತ್ರಗ್ರಾಹಕ ಬೀಟೋ ಮತ್ತು ಆತನ ಸಂಗಡಿಗರನ್ನು ಭಾರತ ದೇಶಕ್ಕೆ ಕಳುಹಿಸಿದ ವಿಚಾರವು ಡಾ. ಜಿ. ಥಾಮಸ್‌ರವರ ಗ್ರಂಥದಲ್ಲಿ ಉಕ್ತವಾಗಿರುತ್ತದೆ. ಕ್ರಿ.ಶ. ೧೮೫೭ರಲ್ಲಿ ಮದ್ರಾಸ್ (ಚೆನ್ನೈ) ಪ್ರೆಸಿಡೆನ್ಸಿಯ ಅಧಿಕೃತ ಛಾಯಾಗ್ರಾಹಕನಾದ ಕ್ಯಾಪ್ಟನ್ ಲಿನ ಟ್ರೈಪ್ ಎಂಬಾತನು ಬೆಂಗಳೂರಿನಲ್ಲಿ ನೆಲೆಸಿದ್ದು, ಮೈಸೂರಿನ ಭವ್ಯ ಅರಮನೆಯ ವಾಸ್ತುಶಿಲ್ಪಗಳನ್ನೊಳಗೊಂಡಂತೆ ದಕ್ಷಿಣ ಭಾರತದಾದ್ಯಂತ ಸಂಚರಿಸಿ ಪ್ರಮುಖ ಸ್ಥಳಗಳ ಚಿತ್ರಗಳನ್ನು ಸೆರೆಹಿಡಿದನೆಂದು ತಿಳಿದುಬರುತ್ತದೆ. ಮುಂಬಯಿ ಸರ್ಕಾರದಿಂದ ನೇಮಕಗೊಂಡ ಕ್ಯಾಟಿಬಿನ್ಸ್ ಎಂಬ ಛಾಯಾಗ್ರಾಹಕನು ಧಾರವಾಡ, ಬಿಜಾಪುರ ಹಾಗೂ ಮೈಸೂರಿನಲ್ಲಿರುವ ಭವ್ಯವಾದ ವಾಸ್ತುಶಿಲ್ಪಗಳನ್ನು ತನ್ನ ಛಾಯಾಗ್ರಹಣ ಪೆಟ್ಟಿಗೆಯಿಂದ ಸೆರೆಹಿಡಿದಿಟ್ಟಿದ್ದಾನೆ. ಅದೇ ಸಮಯದಲ್ಲಿ ಕರ್ನಾಟಕದವರಾದ ಹವ್ಯಾಸಿ ಚಿತ್ರಗ್ರಾಹಕ ಪಿ. ಜಂಬುಲಿಂಗಮ್ ಎಂಬುವವರ ಹೆಸರು ಈ ಕ್ಷೇತ್ರದ ಇತಿಹಾಸದಲ್ಲಿ ದಾಖಲಾಗಿರುತ್ತದೆ. ಕ್ರಿ.ಶ. ೧೮೫೮ರಲ್ಲಿ ಮೈಸೂರು ಅರಸರ ದಿವಾನರಾಗಿದ್ದ ಶ್ರೀ ರಂಗಾಚಾರ್ಲು ರವರು ಮೈಸೂರು ಮುಮ್ಮಡಿ ಕೃಷ್ಣದೇವರಾಜ ಒಡೆಯರ್ ರವರ ಚಿತ್ರವನ್ನು ಸೆರೆಹಿಡಿದಿದ್ದುದಾಗಿಯೂ ತಿಳಿದುಬರುತ್ತದೆ. ಆ ಚಿತ್ರವನ್ನು ಪ್ರಥಮ ವ್ಯಕ್ತಿಚಿತ್ರವೆಂದು ಕರ್ನಾಟಕದ ಇತಿಹಾಸದಲ್ಲಿ ಈ ವಿಭಾಗದಲ್ಲಿ ಪರಿಗಣಿಸಲಾಗಿದೆ.

ಕ್ರಿ.ಶ. ೧೮೬೦ರಲ್ಲಿ ಭಾರತದ ಕೊಲ್ಕತ್ತಾ, ಮುಂಬಯಿ ಹಾಗೂ ಮದ್ರಾಸ್ (ಚೆನ್ನೈ) ಪಟ್ಟಣಗಳಲ್ಲಿ ಹಲವು ಛಾಯಾಗ್ರಹಣವನ್ನು ಸೆರೆಹಿಡಿಯುವ ಸ್ಟುಡಿಯೋಗಳು ಪ್ರಾರಂಭವಾಗಿ ಅಲ್ಲಿ ಕೇವಲ ವ್ಯಕ್ತಿಚಿತ್ರಗಳನ್ನು ಮಾತ್ರ ಸೆರೆಹಿಡಿಯುತ್ತಿದ್ದರು. ಹೆಣ್ಣುಮಕ್ಕಳು ಸ್ಟುಡಿಯೋಗಳಿಗೆ ಚಿತ್ರಗಳನ್ನು ತೆಗೆಸಿಕೊಳ್ಳಲು ಹೋಗುತ್ತಿದ್ದಿಲ್ಲ. ಇದಕ್ಕೆ ಆಗಿನ ಸಮಾಜವು ಒಪ್ಪುತ್ತಿದ್ದಿಲ್ಲ. ಆಗ ಹೆಣ್ಣುಮಕ್ಕಳ ಛಾಯಾಚಿತ್ರಗಳನ್ನು ಸೆರೆಹಿಡಿಯಲು ಹೆಣ್ಣುಮಕ್ಕಳೇ ಛಾಯಾಚಿತ್ರಗ್ರಾಹಕರಾಗಿದ್ದ ಹಲವು ಸ್ಟುಡಿಯೋಗಳು ಪ್ರಾರಂಭವಾದವು. ಇದೊಂದು ದುಡಿಮೆಯಾಗಿತ್ತು.

ಕ್ರಿ.ಶ. ೧೮೬೬ರಲ್ಲಿ ಛಾಯಾಗ್ರಹಣಕ್ಕೆ ಬಳಸುತ್ತಿದ್ದ ದೊಡ್ಡ ಗಾತ್ರದ, ಶ್ರೇಷ್ಠವಾದ ಮರದಿಂದ ಮಾಡಿದ ಚಿತ್ರಗಳನ್ನು ಸೆರೆಹಿಡಿಲು ತಾಂತ್ರಿಕ ಕುಶಲತೆಯನ್ನೊಳಗೊಂಡಿರುವ ಛಾಯಾಗ್ರಹಣ ಪೆಟ್ಟಿಗೆಗಳು ದೊರೆಯುತ್ತಿದ್ದವು. ಈ ರೀತಿ ಉತ್ತಮ ಮರದಿಂದ ತಯಾರಿಸಿದ ಛಾಯಾಗ್ರಹಣದ ಪೆಟ್ಟಿಗೆಗಳನ್ನು ಸಿದ್ಧಪಡಿಸಿ ಜಗತ್ತಿನ ಎಲ್ಲಾ ಕಡೆಗೂ ರವಾನಿಸು ತ್ತಿದ್ದ ಕೀರ್ತಿಯು ಬೆಳಗಾಂನ ವೇಲಂಗಿ ಮಹದೇವರಿಗೆ ಸಲ್ಲುತ್ತದೆ. ಶ್ರೀಯುತರು ಛಾಯಾಚಿತ್ರಗಳನ್ನು ಸೆರೆಹಿಡಿಯಲು ಅವಶ್ಯಕವಾದ ಪರಿಕರಗಳನ್ನು ಎತ್ತಿನಗಾಡಿಯಲ್ಲಿ ತುಂಬಿ ಕೊಂಡು ತಮ್ಮ ಪರಿವಾರ ಸಮೇತ ಸ್ಥಳದಿಂದ ಸ್ಥಳಕ್ಕೆ

ಪ್ರವಾಸ ಮಾಡುತ್ತಿದ್ದರು. ಆಗಿನ ರಾಜ-ಮಹಾರಾಜರುಗಳ ಹಾಗೂ ಶ್ರೀಮಂತರ ಛಾಯಾಚಿತ್ರಗಳನ್ನು ಸೆರೆಹಿಡಿದು ಛಾಯಾಚಿತ್ರಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಈಗ ಅವರ ಐದನೆಯ ತಲೆಮಾರಿನವರಾದ ಗಜಾನನ ಗೋವಿಂದ ವೇಲಂಗಿ (ಜಿ.ಜಿ. ವೆಲ್ಲಿಂಗ್) ಮತ್ತು ಎಸ್.ಜಿ. ವೇಲಂಗಿ ಬೆಂಗಳೂರಿನಲ್ಲಿ ಮಹಾತ್ಮಾಗಾಂಧಿ ರಸ್ತೆಯಲ್ಲಿ ವಾಣಿಜ್ಯ ಮಳಿಗೆಗಳನ್ನು ಸ್ಥಾಪನೆ ಮಾಡಿಕೊಂಡು ಕಲೆಯ ಸೇವೆಯನ್ನು ಮಾಡುತ್ತಿದ್ದಾರೆ.

ಕ್ರಿ.ಶ. ೧೮೬೯ರಲ್ಲಿ ಸೂಯೆಜ್ ಕಡಲ್ಗಾಲುವೆಯು ಸಮುದ್ರಯಾನಕ್ಕೆ ತೆರವಾದುದರಿಂದ ಬ್ರಿಟಿಷ್ ಹಾಗೂ ಪಾಶ್ಚಿಮಾತ್ಯ ದೇಶಗಳಿಂದ ನಮ್ಮ ದೇಶಕ್ಕೆ ಛಾಯಾಗ್ರಹಣಕ್ಕೆ ಸಂಬಂಧಪಟ್ಟ ಪರಿಕರಗಳು ಬಹಳ ಕಡಿಮೆ ಅವಧಿಯಲ್ಲಿ ಬರಲು ಉಪಕ್ರಮಿಸಿದವು. ಇದರಿಂದ ಈ ಕಲೆಯ ಅಭಿವೃದ್ಧಿಯು ಕುಂಠಿತವಾಗದೇ ಬೆಳೆಯತೊಡಗಿತು.

ಕ್ರಿ.ಶ. ೧೮೮೫ರಲಿ ಸಿ.ಜೆ. ಬ್ರೌನ್ ಕಂಪೆನಿಯೊಂದು ಬೆಂಗಳೂರಿನಲ್ಲಿ ಪ್ರಾರಂಭವಾಗಿ ಹೆಚ್ಚಿನ ಲಾಭವನ್ನು ಈ ಕ್ಷೇತ್ರದಲ್ಲಿ ಮಾಡಿತು. ಆಗ ಮದ್ರಾಸ್ (ಚೆನ್ನೈ)ನಲ್ಲಿ ಡೆಲ್‌ಟೋಪ್ಸ್ ಅಂಡ್ ಕಂಪೆನಿಯು ತನ್ನ ವಿಭಾಗವೊಂದನ್ನು ಉದ್ಯಾನನಗರಿ ಬೆಂಗಳೂರಿನಲ್ಲಿ ಪ್ರಾರಂಭಿಸಿತು. ಅವರು ತಮ್ಮ ವೃತ್ತಿಯೊಂದಿಗೆ ಪ್ರವೃತ್ತಿ ಛಾಯಾಚಿತ್ರಗ್ರಾಹಕರು ತಮ್ಮ ಛಾಯಾಗ್ರಹಣ ಪೆಟ್ಟಿಗೆಯಲ್ಲಿ ಸೆರೆಹಿಡಿದ ಪಟ್ಟಿಕೆ (Film) ಗಳನ್ನು ಸಂಸ್ಕರಿಸಿ, ಅವುಗಳ ಋಣಪಟ್ಟಿಕೆ (Negative)ಗಳು ಹಾಗೂ ಧನಚಿತ್ರಗಳನ್ನು ಅಂದರೆ ಅಂತಿಮ ಚಿತ್ರಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಪ್ರವೃತ್ತಿ ಛಾಯಾಚಿತ್ರಗ್ರಾಹಕರಿಗಾಗಿ ತಮ್ಮ ಕಂಪೆನಿಯಲ್ಲಿ ಸಂಸ್ಕರಣ ಕೊಠಡಿಗಳಲ್ಲಿ ಚಿತ್ರಗಳನ್ನು ಅವರೇ ಪ್ರತ್ಯೇಕವಾಗಿ ಸಿದ್ಧಪಡಿಸುವ ವಿಶೇಷ ವ್ಯವಸ್ಥೆಯನ್ನು ಮಾಡಿಕೊಟ್ಟಿದ್ದಲ್ಲದೆ ಅವರುಗಳಿಗೆ ಮಾರ್ಗದರ್ಶಕರಾಗಿ ಈ ಕಲೆಯು ಸರ್ವತೋಮುಖವಾಗಿ ಬೆಳೆಯಲು ಪ್ರೋತ್ಸಾಹ ವನ್ನು ಕೊಟ್ಟರು. ಇದರಿಂದ ಪ್ರವೃತ್ತಿ ಛಾಯಾಚಿತ್ರಗ್ರಾಹಕರ ಸಂಖ್ಯೆಯು ಕರ್ನಾಟಕದಲ್ಲಿ ಅಭಿವೃದ್ಧಿಯಾಯಿತು. ಆ ಕಂಪೆನಿಯವರು ವೃತ್ತಪತ್ರಿಕೆಗಳಲ್ಲಿ ಸಾರ್ವಜನಿಕರಿಗೆ ಗೊತ್ತಾಗಲು ಜಾಹೀರಾತುಗಳನ್ನು ಪ್ರಕಟಿಸಿದರು. ಇವರ ಪ್ರೋತ್ಸಾಹದಿಂದ ಛಾಯಾಗ್ರಹಣವನ್ನು ಕಲಿಯಲು ಉತ್ಸಾಹಿ ಯುವಕರು ಬರತೊಡಗಿದರು.

ಈ ವಿಚಾರವಾಗಿ ಕೀರ್ತಿಶೇಷ ಡಾ. ಜಿ. ಥಾಮಸ್ ರವರು ತಮ್ಮ ಗ್ರಂಥ History of Photography - India ನಲ್ಲಿ ಈ ರೀತಿ ಬರೆದಿರುತ್ತಾರೆ. 'They advertised that they were making copies printed and finished on albumenised paper, printing out paper, bromide paper, platino-type paper (cold and hot process) and platino bromide paper, they were offering to make, enlargements of all sizes from amateur negatives finished with pencil or water colours. A very significant announcement was only by them saying that they had a carpentry department for repairing and improving all photographic instruments that only goes to show the amount of wood and carpentry that had gone into the cameras of those days-Page. 31'.

ಕ್ರಿ.ಶ. ೧೮೯೦ರ ದಶಕದಲ್ಲಿ ಕೊಲ್ಕತ್ತಾ, ಮುಂಬಯಿ, ಮದ್ರಾಸ್ (ಚೆನ್ನೈ), ಪೂನಾ, ಆಗ್ರಾ, ಲಕ್ನೋ, ಸಿಕಂದರಾಬಾದ್, ಬೆಂಗಳೂರುಗಳಲ್ಲಿ ಛಾಯಾಗ್ರಹಣ ಪೆಟ್ಟಿಗೆಗಳನ್ನು, ಅದಕ್ಕೆ ಬೇಕಾದ ಛಾಯಾಗ್ರಹಣದ ಪರಿಕರಗಳನ್ನು ದೇಶದ ವಿವಿಧ ಭಾಗಗಳ ಹವಾಗುಣಕ್ಕೆ ಹೊಂದಿಕೊಳ್ಳುವಂತೆ ಸಿದ್ಧಪಡಿಸುತ್ತಿದ್ದರು. ಆ ಸಮಯದಲ್ಲಿ 'ಸಿಂಪ್ಲೆಕ್ಸ್' ಹೆಸರಿನ ಛಾಯಾಗ್ರಹಣ ಪೆಟ್ಟಿಗೆಯು (ಕೈಯಲ್ಲಿ ಹಿಡಿಯುವಂತಹುದು) ಮಾರಾಟ ಮಳಿಗೆಯಲ್ಲಿ ಮಾರಾಟ ವಾಗುತ್ತಿತ್ತು. ಅದರಲ್ಲಿ ಅರ್ಧಫಲಕ (Plate) ಮತ್ತು ಪೂರ್ಣಫಲಕಗಳ ಲವಣ ಲೇಪಿತ ಪಟ್ಟಿಕೆ (Film) ಗಳನ್ನು ಅಳವಡಿಸಿ ಚಿತ್ರಗಳನ್ನು ಸೆರೆಹಿಡಿಯಬಹುದಾಗಿತ್ತು. ಇದರ ವಿಚಾರವಾಗಿ ಆಗ ಪ್ರಕಟವಾಗುತ್ತಿದ್ದ ನಿಯತಕಾಲಿಕಗಳಲ್ಲಿ ಅದರ ಜಾಹೀರಾತನ್ನು ಪ್ರಕಟಿಸುತ್ತಿದ್ದರು. ಈ ಕಲೆಯನ್ನು ಕಲಿಯುವವರಿಗೆ ಸೂಕ್ತ ಮಾರ್ಗದರ್ಶನ ಮಾಡುತ್ತಾ ಈ ಕಲೆಯ ಅಭಿವೃದ್ಧಿಯಾಗಲು ಶ್ರಮಿಸುತ್ತಿದ್ದರು. ಆಗ ಅದು ರೂ. ೨೧೫/- ರಿಂದ ರೂ. ೨೯೫/-, ರೂ. ೨೮೪/- ರಿಂದ ರೂ. ೩೬೫/-ಗಳಿಗೆ ಮಾರಾಟವಾಗುತ್ತಿದ್ದಿತು. ಆಗ ವ್ರಾಟನ್ ಅಂಡ್ ವೈನ್‌ರೈಟ್ ಹಾಗೂ ಇಲ್‌ಫೋರ್ಡ್ ಕಂಪೆನಿಗಳು ಪ್ರಾರಂಭವಾದವು. ತಮ್ಮ ಕಂಪೆನಿಗಳಲ್ಲಿ ಸಿದ್ಧವಾದ ವಸ್ತುಗಳನ್ನು ಈ ಕಲಾಭ್ಯಾಸಿಗಳಿಗೆ ಸುಲಭವಾಗಿ ದೊರೆಯುವ ಏರ್ಪಾಡನ್ನು ಕಂಪೆನಿಯವರು ಮಾಡುತ್ತಿದ್ದರು. ಚಿತ್ರಸಂಸ್ಕರಣಕ್ಕೆ ಬೇಕಾದ ರಾಸಾಯನಿಕ ವಸ್ತುಗಳನ್ನು ಮಾರಾಟ ಮಾಡುತ್ತಿದ್ದರು. ಆ ಸಮಯದಲ್ಲಿ ಋಣಪಟ್ಟಿಕೆ ಯಿಂದ ಅಂತಿಮ ಚಿತ್ರಗಳನ್ನು ಮುದ್ರಿಸಲು ನೊವಿಟಾರವರ ಬ್ರೋಮೈಡ್ ಪೇಪರ್, ಛಾಯಾಗ್ರಹಣ ಪೆಟ್ಟಿಗೆಯಿಂದ ಸೆರೆಹಿಡಿದ ಪಟ್ಟಿಕೆಗಳಿಂದ ಋಣಪಟ್ಟಿಕೆಗಳನ್ನು ಪಡೆಯಲು ಟೈಲ್ಸ್‌ರವರ ಸಂಸ್ಕರಣ ತಟ್ಟೆ (Trays)ಗಳು, ಡೈಫೀನಾಲ್ ಎಂಬ ಹೆಸರಿನ ಚಿತ್ರಗಳನ್ನು ಸೆರೆಹಿಡಿದ ಪಟ್ಟಿಕೆಗಳಿಂದ ಸಂಸ್ಕರಿಸಿ ಋಣಪಟ್ಟಿಕೆಗಳನ್ನು ಪಡೆಯುವ ದ್ರಾವಣ ಟೋನಿಂಗ್ ಬಾತ್‌ಗಳು, ಥಾರ್ಟನ್ ಪಿಕಾರ್ಡ್‌ರವರ ಕವಾಟಗಳು ಹಾಗೂ ಛಾಯಾಗ್ರಹಣ ಪೆಟ್ಟಿಗೆಗೆ ಸೂಕ್ತವಾದ

ಮಸೂರಗಳು, ಹೊರಭಾಗದಿಂದ ಛಾಯಾಗ್ರಹಣ ಪೆಟ್ಟಿಗೆಗೆ ಅಳವಡಿಸುವ ಮಸೂರಗಳನ್ನು ಮುಚ್ಚುವ ಮುಚ್ಚಳಗಳು ಬಜಾರಿನಲ್ಲಿ ದೊರೆಯುತ್ತಿದ್ದವು. ಇವುಗಳ ವಿವರಣಾತ್ಮಕ ವಿಷಯಗಳನ್ನು ಆಯಾ ವಿಭಾಗದ ಹವ್ಯಾಸಿಗಳಿಗೆ ಹಾಗೂ ವೃತ್ತಿನಿರತರಿಗೆ ತಿಳಿಯುವಂತೆ ವೃತ್ತಪತ್ರಿಕೆಗಳಲ್ಲಿ ಪ್ರಕಟಿಸುತ್ತಿದ್ದರು. ಹೀಗೆ ಛಾಯಾಗ್ರಹಣಕ್ಕೆ ಸಂಬಂಧಪಟ್ಟ ವಸ್ತುಗಳನ್ನು ಮಾರಾಟ ಮಾಡುವ ಕಂಪನಿಗಳಲ್ಲಿ ಕ್ರಿ.ಶ. ೧೮೫೭–೯೭ರ ಸುಮಾರಿನಲ್ಲಿ ಬಳ್ಳಾರಿಯಲ್ಲಿ ಸ್ಥಾಪಿಸಲಾದ ಮೊಸೆಸ್ ಅಂಡ್ ಸನ್ಸ್ ಕಂಪೆನಿಯು ಪ್ರಸಿದ್ಧವಾದದ್ದು.

ಕ್ರಿ.ಶ. ೧೮೮೮ರಲ್ಲಿ ಮಂಗಳೂರಿನಲ್ಲಿ ಗಣಪತಿರಾವ್ ಮತ್ತು ಅವರ ಮಕ್ಕಳು ಆಭಾ, ಕಾಳೆ ಮತ್ತು ಶಿರ್ದಿ ಎಂಬುವವರು ಸ್ಥಿರ ಛಾಯಾಗ್ರಹಣದ ಸ್ಟುಡಿಯೋಗಳನ್ನು ಪ್ರಾರಂಭ ಮಾಡಿ ವ್ಯಕ್ತಿಚಿತ್ರಗಳನ್ನು ಜನತೆಗೆ ತೆಗೆದುಕೊಡುತ್ತಿದ್ದರು. ಇದೊಂದು ವೃತ್ತಿಯಾಗಿತ್ತು. ಆಗಿನ ಮೈಸೂರು ರಾಜ್ಯಕ್ಕೆ ಸೇರಿದ ಬೌರಿಂಗ್‌ಪೇಟೆಯಲ್ಲಿ ರೆವಿನ್ಯೂ ಇಲಾಖೆಯಲ್ಲಿ ಅಮಲ್ದಾರ್ ಆಗಿದ್ದ ಜೆ. ಚಿಕ್ಕಣ್ಣ ಎಂಬುವವರು ತಮ್ಮ ಮನೆಯಲ್ಲಿ ಛಾಯಾಗ್ರಹಣದ ಪೆಟ್ಟಿಗೆಯಿಂದ ಸೆರೆಹಿಡಿದ ಪಟ್ಟಿಕೆಗಳನ್ನು ಸಂಸ್ಕರಿಸಿ ಋಣಪಟ್ಟಿಕೆಯಿಂದ ಧನಚಿತ್ರಗಳನ್ನು ಸಿದ್ಧಪಡಿಸುವ ಪ್ರತ್ಯೇಕ ಕತ್ತಲಕೋಣೆಯನ್ನು ಮಾಡಿ ಕೊಂಡಿದ್ದರು. ಇವರು ತಮ್ಮ ಸುತ್ತಮುತ್ತಲಿನಲ್ಲಿರುವ ಆ ಕಲೆಯ ಹವ್ಯಾಸಿಗಳಿಗೆ ಸೆರೆಹಿಡಿದ ಚಿತ್ರಗಳ ಪಟ್ಟಿಕೆಗಳನ್ನು ಸಂಸ್ಕರಿಸಿ ಋಣಪಟ್ಟಿಕೆಗಳನ್ನು, ಅವುಗಳಿಂದ (ಚಿತ್ರವರ್ಧಕ ದಿಂದ) ಧನಚಿತ್ರಗಳನ್ನು ಸಿದ್ಧಪಡಿಸಿಕೊಡುತ್ತಿದ್ದರು. ಈ ಕಲೆಯನ್ನು ಕಲಿಯಲು ಇಚ್ಛೆಪಟ್ಟವರಿಗೆ ತಮ್ಮ ಕತ್ತಲಕೋಣೆಯನ್ನು ಬಿಟ್ಟುಕೊಡುತ್ತಿದ್ದರು ಹಾಗೂ ಅವರಿಗೆ ಮಾರ್ಗದರ್ಶಕರಾಗಿದ್ದರು.

ಕ್ರಿ.ಶ. ೧೮೯೫ರಲ್ಲಿ ಬೆಂಗಳೂರಿನಲ್ಲಿ ಅಂತಿಮ ಚಿತ್ರಗಳನ್ನು ಅಲ್ಬುಮಿ ನೈಸಡ್ ಪೇಪರ್‌ನಲ್ಲಿ ಮುದ್ರಿಸಲು ಆ ಪೇಪರ್ ಮಾರಾಟವು ಪ್ರಾರಂಭವಾಯಿತು. ಈ ಪೇಪರ್‌ನಿಂದ ಚಿತ್ರಗಳನ್ನು ಅತೀ ಶೀಘ್ರವಾಗಿ ಪಡೆಯಲು ಸಹಾಯವಾಯಿತು.

ಕರ್ನಾಟಕದಲ್ಲಿ ಕ್ರಿ.ಶ. ೧೯೨೦ರಿಂದ ಕ್ರಿ.ಶ. ೧೯೫೫ರಲ್ಲಿ ಕಾಲವನ್ನು ಪ್ರವೃತ್ತಿ ಛಾಯಾಚಿತ್ರ ಕಲೆಯ **ಸುವರ್ಣಯುಗ** ವೆಂದೇ ಹೇಳಬಹುದು. ಉತ್ತರಭಾರತದಲ್ಲಿ ಸರ್ವಶ್ರೀ ಬೆನುಸೇನ್, ಜಿ.ಎನ್. ಉನ್‌ವಾಲಾ, ಕೆ.ಎಲ್. ಸೈಯದ್, ಆರ್.ಆರ್. ಭಾರದ್ವಾಜ, ಕೆ.ಜಿ. ಮಹೇಶ್ವರಿ, ವಾಮನ ಥ್ಯಾಕರೆ, ಸುರೇಂದ್ರ ಆರ್. ಪಾಟೀಲ್ ದಕ್ಷಿಣ ಭಾರತದಲ್ಲಿ ಅದರಲ್ಲೂ ಕರ್ನಾಟಕದಲ್ಲಿ ಟಿ. ಕಾಶಿನಾಥ್, ಡಾ. ಜಿ. ಥಾಮಸ್. ಡಾ. ಡಿ.ವಿ. ರಾವ್, ಸಿ. ರಾಜ್‌ಗೋಪಾಲ್, ಟಿ.ಎನ್.ಎ. ಪೆರುಮಾಳ್, ಒ.ಸಿ. ಎಡ್ವರ್ಡ್, ಎಸ್. ತಿಪ್ಪೇಸ್ವಾಮಿ, ಎಸ್. ರಾಮಪ್ರಸಾದ್, ಬಿ.ಎಸ್. ಸುಂದರಂ, ಎನ್. ಸುಂದರರಾಜ್, ನಾಗಭೂಷಣ, ಬಿ. ಶ್ರೀನಿವಾಸ್ ಮುಂತಾದವರ ಪ್ರಯತ್ನದಿಂದ ಪ್ರವೃತ್ತಿ ಛಾಯಾಚಿತ್ರಣ ಕಲೆಯು ವೃತ್ತಿ ಛಾಯಾಚಿತ್ರಕ್ಕಿಂತ ಶೀಘ್ರಗತಿಯಲ್ಲಿ ಪ್ರಗತಿಪಥದತ್ತ ಸಾಗಿತು.

ಕ್ರಿ.ಶ. ೧೯೩೬ರಲ್ಲಿ ಕರ್ನಾಟಕದಲ್ಲಿ ಈ ಕಲೆಯ ಅಭಿವೃದ್ಧಿಗೆ ಶ್ರಮಿಸಿದವರಲ್ಲಿ ಬೆಂಗಳೂರಿನಲ್ಲಿ ನೆಲೆಸಿದ್ದ ವಕೀಲರಾದ ಶ್ರೀ ಎಸ್. ಲಕ್ಷ್ಮೀನರಸುರವರು ಪ್ರಸಿದ್ಧರು. ಇವರು ಬೆಂಗಳೂರಿನ ತಾಂತ್ರಿಕ ಮಹಾವಿದ್ಯಾಲಯದ ಫೋಟೋಗ್ರಫಿ ಮತ್ತು ಸಿನಿಮಾಟೋಗ್ರಫಿ ತಾಂತ್ರಿಕ ವಿದ್ಯಾರ್ಥಿಗಳಿಗೆ ಈ ಉಪನ್ಯಾಸವನ್ನು ಕೊಡುತ್ತಿದ್ದರು. ಆಗ ಅವರು ಫೋಟೋಗ್ರಾಫಿ ಅಂಡ್ ಸಿನಿಮಾಟೋಗ್ರಫಿ ಎಂಬ ಛಾಯಾಗ್ರಹಣದ ಮಾಸಪತ್ರಿಕೆಯನ್ನು ಪ್ರಕಟಿಸಿ ಜನತೆಗೆ ಈ ವಿಚಾರದಲ್ಲಿ ತಿಳುವಳಿಕೆ ಕೊಡುತ್ತಿದ್ದರು. ಇದರ ಪ್ರಕಟಣೆಯು ಹಲವು ವರ್ಷ ನಡೆದರೂ ಆರ್ಥಿಕ ಮುಗ್ಗಟ್ಟಿನಿಂದ ಕ್ರಮೇಣ ನಿಂತುಹೋಯಿತು. ಇದೇ ಹೆಸರಿನ ಪತ್ರಿಕೆಯನ್ನು ಕ್ರಿ.ಶ. ೧೯೭೯ರಿಂದ ಬೆಂಗಳೂರಿನ ಪ್ರಸಿದ್ಧ ವನ್ಯಜೀವಿ ಛಾಯಾಚಿತ್ರಗ್ರಾಹಕ ಎನ್. ಸುಂದರರಾಜ್‌ರವರು ಪುನಃ ಪ್ರಕಟಿಸಿದರು. ಆದರೆ ಅದೂ ಆರ್ಥಿಕ ಮುಗ್ಗಟ್ಟಿನಿಂದ ನಿಂತುಹೋಗುವ ಸಂದರ್ಭದಲ್ಲಿ ಆಗತಾನೇ ಭಾರತದಲ್ಲಿ ಪ್ರಾರಂಭವಾದ ಇಂಡಿಯಾ ಇಂಟರ್‌ನ್ಯಾಷನಲ್ ಫೋಟೋಗ್ರಾಫಿಕ್ ಕೌನ್ಸಿಲ್‌ನ ಅಧಿಕೃತ ಪತ್ರಿಕೆಯಾಗಿ ಮುಂದುವರೆಯಿತು. ಆಗ ಒ.ಪಿ. ಶರ್ಮಾರವರು ಆ ಸಂಸ್ಥೆಯ ಕಾರ್ಯದರ್ಶಿಯಾಗಿದ್ದರು. ಈಗ ಈ ಸಂಸ್ಥೆಯ ಅಧ್ಯಕ್ಷರಾಗಿ ಬೆಂಗಳೂರಿನ ಪ್ರಸಿದ್ಧ ಛಾಯಾಗ್ರಹಣ ಸಂಸ್ಕರಣ ಕೇಂದ್ರದ ಮುಖ್ಯಸ್ಥರಾದ ಹೆಚ್.ಹೆಚ್. ಗುಲ್‌ರಜನಿಯವರು ನಿಯುಕ್ತರಾಗಿದ್ದಾರೆ.

ಕ್ರಿ.ಶ. ೧೯೦೦ರಿಂದ ವನ್ಯಜೀವಿ ಛಾಯಾಗ್ರಹಣ ಕಲೆಯು ಪ್ರತ್ಯೇಕ ವಿಭಾಗವಾಗಿ ಪ್ರಾರಂಭವಾಯಿತು. ಈ ವಿಭಾಗದಲ್ಲಿ ಪ್ರಾತಃಸ್ಮರಣೀಯರು ಬೆಂಗಳೂರಿನ ಒ.ಸಿ. ಎಡ್ವರ್ಡ್. ಶ್ರೀಯುತರನ್ನು **ವನ್ಯಜೀವಿ ಛಾಯಾಗ್ರಹಣ ವಿಭಾಗದ ಪಿತಾಮಹನೆಂದು** ಗುರುತಿಸಲಾಗುತ್ತಿದೆ. ಅದೇ ಸಮಯದಲ್ಲಿ ಬೆಂಗಳೂರಿನಲ್ಲಿ ನೆಲೆಸಿದ್ದ ಇ.ಎನ್. ಐಸ್ಕಾಟ್ ಏರ್‌ಕ್ರಾಫ್ಟ್‌ನಲ್ಲಿ ಇಂಜಿನಿಯರ್ ಆಗಿದ್ದರು. ಇವರಿಂದ ಈ ಕಲೆಯು ಅಭಿವೃದ್ಧಿಯಾಯಿತು. ಇವರು ತಾವು ಸಿದ್ಧಪಡಿಸಿದ ಚಿತ್ರಗಳನ್ನು ಆಗ ನಡೆಯುತ್ತಿದ್ದ ಛಾಯಾಚಿತ್ರ ಸ್ಪರ್ಧೆಗೆ ಛಾಯಾಚಿತ್ರ ಪ್ರದರ್ಶನಕ್ಕೆ ಕಳುಹಿಸುತ್ತಿದ್ದು ಇವರೊಬ್ಬ ಛಾಯಾಚಿತ್ರ ಪ್ರದರ್ಶಕರಾಗಿದ್ದರು.

ಕ್ರಿ.ಶ. ೧೯೪೫ರಲ್ಲಿ ಅಸ್ತಿತ್ವಕ್ಕೆ ಬಂದ ಮೈಸೂರ್ ಫೋಟೋಗ್ರಾಫಿಕ್ ಸೊಸೈಟಿಯ ಸಂಸ್ಥಾಪಕ ಅಧ್ಯಕ್ಷ ಸ್ಥಾನವಾ

ಖ್ಯಾತ ವಿಜ್ಞಾನಿ ಸರ್ ಸಿ.ವಿ. ರಾಮನ್ ಅಲಂಕರಿಸಿದ್ದರು. ಆ ಸಂಸ್ಥೆ ನಂತರದ ದಿನಗಳಲ್ಲಿ ಭಾರತದಾದ್ಯಂತ ಖ್ಯಾತಿ ಪಡೆಯಿತು. ಬೆಂಗಳೂರಿನಿಂದ ಪ್ರತಿವರ್ಷ ಅಗಣಿತ ಸಂಖ್ಯೆಯ ಛಾಯಾಚಿತ್ರಗ್ರಾಹಕರು ತರಬೇತಿ ಕಾರ್ಯಾಗಾರ, ಪ್ರದರ್ಶನ ಮತ್ತು ವಿಚಾರಗೋಷ್ಠಿಗಳನ್ನು ನಡೆಸುತ್ತಾ ಈ ಕಲೆಯ ಸೇವೆಯನ್ನು ಮಾಡಿದ್ದಾರೆ. ಈ ಕಲೆಯಲ್ಲಿ ಪ್ರಾವೀಣ್ಯತೆಯನ್ನು ಪಡೆದ ಕನ್ನಡಿಗರು ಕರ್ನಾಟಕದಲ್ಲಿ ಹಾಗೂ ಹೊರ ರಾಜ್ಯದವರಿಗೆ ತರಬೇತಿಯನ್ನು ಕೊಡಲು ಪ್ರಾರಂಭಿಸಿದರು.

ಕ್ರಿ.ಶ. ೧೯೨೦ರಿಂದ ಕ್ರಿ.ಶ. ೧೯೫೪ರವರೆಗೆ ಭಾರತದ ವಿವಿಧ ನಗರಗಳಲ್ಲಿ ಸ್ವತಂತ್ರವಾಗಿ ಈ ಕಲೆಯನ್ನು ಬೋಧಿಸುವ ಕೇಂದ್ರಗಳು ಸ್ಥಾಪಿತವಾದವು. ಅದರಲ್ಲೂ ಕರ್ನಾಟಕವು ಈ ವಿಚಾರದಲ್ಲಿ ಮುಂಚೂಣಿಯಲ್ಲಿದ್ದು ಈ ಕಲೆಯನ್ನು ಅಭಿವೃದ್ಧಿಪಡಿಸುವ ವಿಚಾರದಲ್ಲಿ ಜಗತ್ತಿನಲ್ಲಿಯೇ ಹೆಸರುವಾಸಿಯಾಗತೊಡಗಿತು. ಮುಂಬಯಿ ನಗರದಿಂದ ಪ್ರಕಟವಾಗುತ್ತಿದ್ದ ಇಲ್‌ಸ್ಟ್ರೇಟೆಡ್ ವೀಕ್ಲಿ ಆಫ್ ಇಂಡಿಯಾ ಪತ್ರಿಕೆಯ ಸಂಪಾದಕರಾಗಿದ್ದ ಸ್ಟ್ಯಾನ್ಲಿ ಜೆಫ್‌ಸನ್‌ರವರು ಈ ಕಲೆಯ ಪ್ರಚಾರಕ್ಕಾಗಿ ಪತ್ರಿಕೆಯಲ್ಲಿ ಎರಡು ಪುಟಗಳನ್ನು ಪ್ರತ್ಯೇಕವಾಗಿಟ್ಟು ಅದರಲ್ಲಿ ಛಾಯಾಗ್ರಹಣ ಸ್ಪರ್ಧೆಯನ್ನು ಏರ್ಪಡಿಸಿ, ಛಾಯಾಚಿತ್ರಗ್ರಾಹಕರನ್ನು ಪ್ರೋತ್ಸಾಹಿಸುತ್ತಿದ್ದರು. ಆಕರ್ಷಕ ಬಹುಮಾನಗಳನ್ನು ಸ್ಪರ್ಧೆಯಲ್ಲಿ ವಿಜೇತರಾದವರಿಗೆ ಕೊಡುತ್ತಿದ್ದರು. ಈ ಪತ್ರಿಕೆಯಲ್ಲಿ ಕರ್ನಾಟಕದ ಹಲವು ಪ್ರವೃತ್ತಿ ಛಾಯಾಚಿತ್ರಗ್ರಾಹಕರ ಸಾಧನೆಯು ಅವರು ಸೆರೆಹಿಡಿದ ಚಿತ್ರಗಳೊಂದಿಗೆ ಪ್ರಕಟಗೊಂಡಿತ್ತು. ಆಗ ಕಪ್ಪು-ಬಿಳುಪು ಚಿತ್ರಗಳು ಹೆಚ್ಚಿನ ಪ್ರೋತ್ಸಾಹವಿತ್ತು.

ಕ್ರಿ.ಶ. ೧೯೪೭ರಲ್ಲಿ ಭಾರತವು ಸ್ವತಂತ್ರವಾದ ನಂತರ ಈ ಕಲೆಯು ಕರ್ನಾಟಕದ ಎಲ್ಲಾ ಪ್ರಮುಖ ನಗರಗಳಲ್ಲಿ ಪ್ರಾರಂಭವಾಯಿತು. ೧೯೫೪ರ ನಂತರ ಮಜಲುಗಳು ಹೀಗಿವೆ :

ದಿನಾಂಕ ೨೭ ಜನವರಿ ೧೯೫೪ರಂದು ಬೆಂಗಳೂರಿನಲ್ಲಿ ಡಾ. ಜಿ. ಥಾಮಸ್‌ರವರ ಮುಂದಾಳತ್ವದಲ್ಲಿ ಬೆಂಗಳೂರಿನ ಹಲವು ಸಮಾನಾಸಕ್ತ ಛಾಯಾಚಿತ್ರಗ್ರಾಹಕ ಮಿತ್ರರೊಂದಿಗೆ ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಾಫಿ ಎಂಬ ಸಂಸ್ಥೆ ಪ್ರವೃತ್ತಿ ಛಾಯಾಚಿತ್ರ ಗ್ರಾಹಕರಿಗಾಗಿ ಪ್ರಾರಂಭವಾಯಿತು. ಈ ಸಂಸ್ಥೆಗೆ ಪ್ರವೃತ್ತಿ ಚಿತ್ರಗ್ರಾಹಕರ ಜೊತೆಯಲ್ಲಿ ವೃತ್ತಿನಿರತರೂ ಸದಸ್ಯರಾಗಿ ಈ ಸಂಸ್ಥೆಯನ್ನು ಬೆಳೆಸತೊಡಗಿದರು. ಇದೊಂದು ಕಲಾ ಹವ್ಯಾಸಿಗಳ ಸಂಸ್ಥೆಯಾಗಿ ಜಗತ್ತಿನಲ್ಲಿ ಪ್ರಸಿದ್ಧವಾಗತೊಡಗಿತು. ಈ ಸಂಸ್ಥೆಯ ಕಾರ್ಯದಿಂದ ಆಕರ್ಷಿತರಾಗಿ ಕರ್ನಾಟಕದ ಹೊರಗಿನವರು ಸಂಸ್ಥೆಯಲ್ಲಿ ಸದಸ್ಯರಾಗತೊಡಗಿದರು. ಇದು ಪ್ರಾರಂಭದಲ್ಲಿ ತನ್ನ ಸದಸ್ಯರುಗಳಿಗೆ ಛಾಯಾಚಿತ್ರ ಸ್ಪರ್ಧೆಗಳನ್ನು ಏರ್ಪಾಡು ಮಾಡುತ್ತಾ ನಂತರ ರಾಷ್ಟ್ರಮಟ್ಟದ ಛಾಯಾಚಿತ್ರ ಸ್ಪರ್ಧೆಗಳನ್ನು ನಡೆಸುತ್ತಾ ಮುಂದುವರೆದು ಅಂತರರಾಷ್ಟ್ರೀಯ ಸ್ಪರ್ಧೆಯನ್ನು ನಡೆಸುತ್ತಾ ಬಂದಿದ್ದು, ಭಾರತದೇಶದಲ್ಲಿಯೇ ಬೆಂಗಳೂರಿನಲ್ಲಿ ಸ್ಥಾಪಿತವಾದ ಈ ಸಂಸ್ಥೆಯು ವಿಶ್ವವ್ಯಾಪಿ ಪ್ರಸಿದ್ಧಿಯನ್ನು ಪಡೆಯಿತು. ಈ ಸಂಸ್ಥೆಯು ತನ್ನ ಕಾರ್ಯವೈಖರಿಯಿಂದ ಆಗ ಅಂತರರಾಷ್ಟ್ರೀಯ ಖ್ಯಾತಿಯನ್ನು ಪಡೆದ ಫೆಡರೇಷನ್ ಆಫ್ ಇಂಟರ್‌ನ್ಯಾಷನಲ್, ದಿ ಆರ್ಟ್ ಫೋಟೋಗ್ರಾಫಿಕ್ ಎಂಬ ಸಂಸ್ಥೆಯಿಂದ ಮಾನ್ಯತೆಯನ್ನು ಪಡೆದು ಈ ಕ್ಷೇತ್ರದಲ್ಲಿ ಕಲಾಸೇವೆಯನ್ನು ಪ್ರಾರಂಭಿಸಿತು. ಯಾವುದೇ ವಿಧವಾದ ಹಣಕಾಸಿನ ಪ್ರಲೋಭನೆಗೆ ಒಳಗಾಗದೇ ಈ ಸಂಸ್ಥೆಯ ಪದಾಧಿಕಾರಿಗಳು ಈ ಕಲೆಯ ಅಭಿವೃದ್ಧಿಗಾಗಿ ತಮ್ಮನ್ನು ಆತ್ಮಸಂತೋಷದಿಂದ ತೊಡಗಿಸಿಕೊಂಡು ಸೇವೆ ಮಾಡುತ್ತಿದ್ದರು. ಈ ಸಂಸ್ಥೆಯು ವ್ಯೂ ಫೈಂಡರ್ (View Finder) ಎಂಬ ಸಂಸ್ಥೆಯ ಮುಖವಾಣಿಯನ್ನು ಪ್ರಕಟಿಸುತ್ತಾ ಅದರ ಮೂಲಕ ಛಾಯಾಗ್ರಹಣಕ್ಕೆ ಸಂಬಂಧಪಟ್ಟ ವಿಷಯಗಳನ್ನು ದೇಶದ ಮೂಲೆಮೂಲೆಗಳಲ್ಲಿರುವ ಎಲ್ಲಾ ಸದಸ್ಯರಿಗೆ ತಲುಪಿಸುವ ಏರ್ಪಾಡು ಮಾಡಿತು. ಇದರ ಸಹಾಯದಿಂದ ರಾಷ್ಟ್ರೀಯ ವಾಗಿ ಹಾಗೂ ಅಂತರರಾಷ್ಟ್ರೀಯ ಛಾಯಾಚಿತ್ರಸ್ಪರ್ಧೆಯ ವಿಚಾರವು ಎಲ್ಲಾ ಸದಸ್ಯರಿಗೂ ತಿಳಿಯುತ್ತಿದ್ದುದಲ್ಲದೆ ಅವರು ಭಾಗವಹಿಸಲು ಸಂಬಂಧಪಟ್ಟ ನಿಯಮಾವಳಿಯೊಂದಿಗೆ ಪ್ರವೇಶಪತ್ರಗಳನ್ನು ಆ ಸಂಚಿಕೆಯ ಮೂಲಕ ಸದಸ್ಯರುಗಳಿಗೆ ತಲುಪಿಸಲು ಏರ್ಪಾಡನ್ನು ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಫಿಯ ಸಂಸ್ಥಾಪಕರು ಮಾಡಿದ್ದರು. ಈ ಸಂಸ್ಥೆಯ ಆಶ್ರಯದಲ್ಲಿ ನಡೆಯುವ ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಮಟ್ಟದ ಛಾಯಾಚಿತ್ರ ಸ್ಪರ್ಧೆಗಳಲ್ಲಿ ಕರ್ನಾಟಕದ ಪ್ರವೃತ್ತಿ ಛಾಯಾಚಿತ್ರಗ್ರಾಹಕರು ಭಾಗವಹಿಸಿ ಅಗಣಿತ ಬಹುಮಾನಗಳನ್ನು, ಮನ್ನಣೆ, ಪ್ರಶಸ್ತಿಪತ್ರಗಳನ್ನು ಪಡೆದರು. ಅಮೇರಿಕಾ, ಬ್ರಿಟನ್, ಏಷ್ಯಾ, ಆಸ್ಟ್ರೇಲಿಯಾದ ಫೆಡರೇಷನ್ ಆಫ್ ಇಂಟರ್‌ನ್ಯಾಷನಲ್, ದಿ ಆರ್ಟ್ ಫೋಟೋಗ್ರಾಫಿಕ್ ಛಾಯಾಗ್ರಹಣ ಸಂಸ್ಥೆಗಳಿಂದ ಪ್ರತಿಭಾನ್ವಿತ ಛಾಯಾಚಿತ್ರಗ್ರಾಹಕರಿಗಾಗಿ ಕೊಡುತ್ತಿರುವ ಅಸೋಸಿಯೇಟ್, ಫೆಲೋಷಿಪ್ (ಮನ್ನಣೆ, ಗೌರವ ಸನ್ಮಾನ)ಗಳನ್ನು ಪ್ರಾರಂಭ ದಲ್ಲಿ ಪಡದ ಕರ್ನಾಟಕ ಹಿರಿಯ ಚಿತ್ರಗ್ರಾಹಕರು ಈ ರೀತಿ ಇದ್ದಾರೆ.

ಸರ್ವಶ್ರೀಗಳಾದ ಡಾ. ಜಿ. ಥಾಮಸ್, ಡಾ. ಡಿ.ವಿ. ರಾವ್, ಟಿ. ಕಾಶೀನಾಥ್, ಸಿ. ರಾಜಗೋಪಾಲ್, ಒ.ಸಿ. ಎಡ್ವರ್ಡ್, ಎಂ.ವೈ. ಘೋರ್ಪಡೆ, ಟಿ.ಎನ್.ಎ. ಪೆರುಮಾಳ್,

ಮುಂತಾದ ಕನ್ನಡಿಗರು ಕಪ್ಪು-ಬಿಳುಪು ಛಾಯಾಗ್ರಹಣ ಕ್ಷೇತ್ರದಲ್ಲಿ ಜಗತ್ತಿನಲ್ಲಿ ಅಗ್ರಸ್ಥಾನದಲ್ಲಿದ್ದಾರೆ.

ಡಾ. ಜಿ. ಥಾಮಸ್ ೪೦ ವರ್ಷಗಳ ಕಲಾ ಎಫ್ಐಪಿಯ ಜನರಲ್ ಸೆಕ್ರೆಟರಿಯಾಗಿ ಕರ್ತವ್ಯವನ್ನು ನಿರ್ವಹಿಸಿದ್ದರು. ಡಾ. ಡಿ.ವಿ. ರಾವ್ ಈ ಸಂಸ್ಥೆಯ ಉಪಾಧ್ಯಕ್ಷರಾಗಿ, ಅಧ್ಯಕ್ಷರಾಗಿ ಕಾರ್ಯವನ್ನು ನಿರ್ವಹಿಸಿದರು. ಅನಂತರ ಸಿ. ರಾಜ್‌ಗೋಪಾಲ್ ಈ ಸಂಸ್ಥೆಯ ಜನರಲ್ ಸೆಕ್ರೆಟರಿಯಾದರು. ಅವರ ಅನಾರೋಗ್ಯದ ನಿಮಿತ್ತ ಅವರಿಗೆ ಸಹಾಯಕರಾಗಿ ಬಿ.ಎಸ್. ಸುಂದರಮ್‌ರವರು ಈ ಕಾರ್ಯವನ್ನು ಮಾಡುತ್ತಿದ್ದರು. ಅನಂತರ ಕರ್ನಾಟಕದವರ ದೌರ್ಭಾಗ್ಯದಿಂದ ಈ ಸಂಸ್ಥೆಯು ಕೊಲ್ಕತ್ತಾ ನಗರವನ್ನು ಸೇರಿದ್ದು, ಈಗ ಮುಂಚೂಣಿಯಲ್ಲಿದೆ.

ಕರ್ನಾಟಕದಲ್ಲಿ ಕನ್ನಡದಲ್ಲಿ ಚಿತ್ರಸಾಹಿತ್ಯ ಹಾಗೂ ಛಾಯಾಗ್ರಹಣದ ವಿಚಾರವಾಗಿ ವಿಪುಲ ಲೇಖನಗಳನ್ನು ಬರೆದು ಈ ಕಲೆಯ ಸರ್ವತೋಮುಖ ಅಭಿವೃದ್ಧಿಗೆ ಶ್ರಮಿಸಿದವರಲ್ಲಿ ಕೀರ್ತಿಶೇಷ ಡಾ. ಡಿ.ವಿ. ರಾವ್ ಪ್ರಥಮರು ಮತ್ತು ಪ್ರಾತಃಸ್ಮರಣೀಯರು. ಇವರು ತಾವು ಬರೆದ ಹಲವು ಕಾದಂಬರಿಗಳಿಗೆ ತಾವೇ ಸೆರೆಹಿಡಿದ ಚಿತ್ರಗಳನ್ನುಪಯೋಗಿಸಿಕೊಂಡು ಪ್ರಕಟಿಸಿದರು. ನಂತರ ಕರ್ನಾಟಕದಲ್ಲಿ ಪ್ರಕಟವಾಗುತ್ತಿದ್ದ ವೃತ್ತಪತ್ರಿಕೆ, ಸಾಪ್ತಾಹಿಕ, ವಾರಪತ್ರಿಕೆ ಹಾಗೂ ಮಾಸಪತ್ರಿಕೆಗಳಲ್ಲಿ ಡಾ. ಡಿ.ವಿ. ರಾವ್‌ರವರ ಅಸಂಖ್ಯಾತ, ಸಾಂದರ್ಭಿಕ ಕಪ್ಪು-ಬಿಳುಪು ಚಿತ್ರಗಳು, ವರ್ಣಚಿತ್ರಗಳು ಹಾಗೂ ವರ್ಣಪಾರದರ್ಶಿಕೆಗಳು ಪ್ರಕಟವಾಗಿ ಜನಪ್ರಿಯವಾಗಿವೆ. ಕರ್ನಾಟಕ ರಾಜ್ಯದಲ್ಲಿ ತಾಯಿನಾಡು ಪತ್ರಿಕೆ ಮೊದಲುಗೊಂಡು ಜನವಾಣಿ, ಪ್ರಜಾವಾಣಿ, ಉದಯವಾಣಿ, ಸಂಯುಕ್ತ ಕರ್ನಾಟಕ, ವಿಶಾಲ ಕರ್ನಾಟಕ ಮುಂತಾದ ದಿನಪತ್ರಿಕೆಗಳಲ್ಲಿ ಪ್ರಜಾಮತ, ಕರ್ಮವೀರ, ಪ್ರಪಂಚ, ಜನಪ್ರಗತಿ ವಾರಪತ್ರಿಕೆಗಳಲ್ಲಿ ಮತ್ತು ಮಾಸಪತ್ರಿಕೆಗಳಲ್ಲಿ ಕರ್ನಾಟಕದ ಪ್ರವೃತ್ತಿಪರ ಛಾಯಾಚಿತ್ರಗ್ರಾಹಕರು ಸೆರೆಹಿಡಿದ ಚಿತ್ರಗಳು ಪ್ರಕಟವಾಗಿವೆ. ಮಾಸಪತ್ರಿಕೆಗಳಲ್ಲಿ ಮಯೂರ ಮತ್ತು ತುಷಾರ ಮಾಸಪತ್ರಿಕೆಗಳು ಚಿತ್ರಕವನ ಸ್ಪರ್ಧೆಗಳನ್ನು ಈ ಕಲೆಯ ಅಭಿವೃದ್ಧಿಗೆ ತುಂಬು ಹೃದಯದ ಸಹಕಾರವನ್ನು ಕೊಡುತ್ತಿವೆ. ಡಾ. ಡಿ.ವಿ. ರಾವ್ ಬರೆದ ಛಾಯಾಗ್ರಹಣದ ಲೇಖನಗಳು ಕ್ರಿ.ಶ. ೧೯೮೮ರಲ್ಲಿ ಉದಯವಾಣಿ ದಿನಪತ್ರಿಕೆಯಲ್ಲಿ ಲಲಿತ-ರಂಗ ವಿಭಾಗದ ಛಾಯಾರಂಗದಲ್ಲಿ ಪ್ರಕಟವಾಗಿ ಅಪಾರ ಜನಮನ್ನಣೆಯನ್ನು ಪಡೆಯಿತು. ಆ ಲೇಖನಗಳನ್ನು ಹಂಪಿಯ ಕರ್ನಾಟಕ ವಿಶ್ವವಿದ್ಯಾನಿಲಯವು **'ಭಾವಾಭಿವ್ಯಂಜಕ ಚಿತ್ರಣಕಲೆ'** ಎಂಬ ಶಿರೋನಾಮೆಗೆ ಗ್ರಂಥರೂಪದಲ್ಲಿ ಪ್ರಕಟ ಮಾಡಿತು. ಇದೊಂದು ಛಾಯಾಗ್ರಹಣ ಕ್ಷೇತ್ರದಲ್ಲಿ ಬರೆದ ಪ್ರಪ್ರಥಮ ಕನ್ನಡದ ಗ್ರಂಥವಾಗಿದ್ದು ಈ ಗ್ರಂಥಕ್ಕೆ ಲಲಿತಕಲಾ ಅಕಾಡೆಮಿಯ ಪುರಸ್ಕಾರ ದೊರೆತಿದೆ.

ಅನಂತರ ಕನ್ನಡದಲ್ಲಿ ಹುಬ್ಬಳ್ಳಿಯಿಂದ ಹೊರಡುವ ಕರ್ಮವೀರ ವಾರಪತ್ರಿಕೆಯ ಕ್ಯಾಮರಾ-ಕಣ್ಣು ಅಂಕಣ ವಿಭಾಗದಲ್ಲಿ, ಮಣಿಪಾಲದಿಂದ ಪ್ರಕಟವಾಗುವ ತುಷಾರ ಮತ್ತು ಬಿಸಿಲು-ಬದುಕು ಮಾಸಪತ್ರಿಕೆ, ಶಿವಮೊಗ್ಗ ನಗರದಿಂದ ಪ್ರಕಟವಾಗುವ ನಾವಿಕ ದಿನಪತ್ರಿಕೆಗಳಲ್ಲಿ ಡಾ. ಎಸ್. ಹನುಮಂತಜೋಯಿಸ್ ತಾವೇ ಸೆರೆಹಿಡಿದ ಚಿತ್ರಗಳೊಂದಿಗೆ ಛಾಯಾಗ್ರಹಣದ ಅಗ್ರಲೇಖನಗಳನ್ನು ಬರೆದು ಪ್ರಖ್ಯಾತರಾಗಿದ್ದಾರೆ. ಇವರು ಕನ್ನಡದಲ್ಲಿ ಚಿತ್ರ-ಲೇಖನಗಳನ್ನು ಬರೆದುದಲ್ಲದೆ ಛಾಯಾಗ್ರಹಣದ ಆಂಗ್ಲಪದಗಳಿಗೆ ಕನ್ನಡದಲ್ಲಿ ಸಮಾನಾರ್ಥಗಳನ್ನು ಕೊಡುವ ಪಾರಿಭಾಷಿಕ ಹೆಸರುಗಳ ಪಟ್ಟಿಯನ್ನು ಸಿದ್ಧಪಡಿಸಿದ್ದು ಅದು ಡಾ. ಡಿ.ವಿ. ರಾವ್‌ರವರು ಬರೆದ ಗ್ರಂಥದಲ್ಲಿ ಮುದ್ರಿತವಾಗಿದೆ. ಶ್ರೀಯುತ ಜೋಯಿಸ್‌ರವರು ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಫಿ, ಕೊಲ್ಕತ್ತಾದವರು ಸದಸ್ಯರಿಗಾಗಿ ನಡೆಸುತ್ತಿರುವ ಮಾಸಿಕ ವರ್ಣಚಿತ್ರಗಳು ಹಾಗೂ ತ್ರೈಮಾಸಿಕ ಕಪ್ಪು-ಬಿಳುಪು ವಿಭಾಗದ ಕಾರ್ಯದರ್ಶಿಯಾಗಿ ಕಳೆದ ಮೂರು ದಶಗಕಳಿಂದ ಸೇವೆ ಸಲ್ಲಿಸುತ್ತಿದ್ದಾರೆ.

ಡಾ. ರವೀಶ್ ಕಾಸರವಳ್ಳಿ, ಡಾ. ಹೆಚ್. ಚಂದ್ರಶೇಖರ್, ಕೆ.ಎಸ್. ರಾಜಾರಾಂ, ಎ.ಜಿ. ಲಕ್ಷ್ಮೀನಾರಾಯಣ ಹಾಗೂ ಕೆ. ಗುರುಮೂರ್ತಿ ಮತ್ತು ಹೆಚ್. ಮಂಜುನಾಥ ಇವರು ಕನ್ನಡದಲ್ಲಿ ಹಲವು ಲೇಖನಗಳನ್ನು ಬರೆದು ಪ್ರಸಿದ್ಧರಾಗಿದ್ದಾರೆ.

ಕರ್ನಾಟಕದ ರಾಜ್ಯದಲ್ಲಿ ಈ ಕೆಳಕಂಡ ಪ್ರವೃತ್ತಿಪರ ಛಾಯಾಚಿತ್ರಗ್ರಾಹಕರುಗಳು ಹಲವು ದಶಕಗಳಿಂದ ಛಾಯಾಗ್ರಹಣ ಕ್ಷೇತ್ರದ ವಿವಿಧ ಭಾಗಗಳಲ್ಲಿ ರಾಷ್ಟ್ರೀಯ ಮತ್ತು ಅಂತರರಾಷ್ಟ್ರೀಯ ಮನ್ನಣೆ, ಪುರಸ್ಕಾರ ಮತ್ತು ಸನ್ಮಾನಗಳನ್ನು ಪಡೆದು ವಿಶ್ವವಿಖ್ಯಾತರಾಗಿದ್ದಾರೆ. ಅವರುಗಳ ಪಟ್ಟಿ ಈ ರೀತಿಯಿದೆ.

**ಭಾವಾಭಿವ್ಯಂಜಕ (ಪಿಕ್ಟೋರಿಯಲ್) ಛಾಯಾಚಿತ್ರಣ ವಿಭಾಗದಲ್ಲಿ :** ಸರ್ವಶ್ರೀಗಳಾದ ಡಾ. ಜಿ. ಥಾಮಸ್, ಡಾ. ಡಿ.ವಿ. ರಾವ್, ಸಿ. ರಾಜಗೋಪಾಲ್, ಬಿ.ಎಸ್. ಸುಂದರಮ್, ಡಾ. ಎಸ್. ಹನುಮಂತ ಜೋಯಿಸ್, ಬಿ.ಎಲ್. ಸೀತಾರಾಂ, ರಾಘವೇಂದ್ರರಾವ್, ಟಿ. ಕೆಂಪಣ್ಣ, ಕೆ.ಎಸ್. ರಾಜಾರಾಂ, ಎ.ಜಿ. ಲಕ್ಷ್ಮೀನಾರಾಯಣ, ಬಿ. ಶ್ರೀನಿವಾಸ್, ಟಿ.ಆರ್. ಬಾಬು, ಪದ್ಮಶ್ರೀ ಟಿ. ಕಾಶೀನಾಥ್, ಇ.ಆರ್. ಸತ್ಯನಾರಾಯಣ, ಇತ್ಯಾದಿ.

**ವನ್ಯಜೀವಿ (ನೇಚರ್) ಛಾಯಾಚಿತ್ರಣ ವಿಭಾಗದಲ್ಲಿ:** ಸರ್ವಶ್ರೀ ಒ.ಸಿ. ಎಡ್ವರ್ಡ್, ಎಂ.ವೈ. ಘೋರ್ಪಡೆ, ಎನ್. ಸುಂದರರಾಜ, ಹೆಚ್.ಎನ್. ಅಲ್ಲಮಪ್ರಭು, ಹೆಚ್.ಹೆಚ್.

ಗುಲ್‌ರಜನಿ, ಹೆಚ್. ಸತೀಶ್, ಟಿ.ಎನ್.ಎ. ಪೆರುಮಾಳ್, ಜಿ.ಎಸ್. ಕೃಷ್ಣಮೂರ್ತಿ, ಎಸ್. ರಾಮಪ್ರಸಾದ್, ಎಸ್. ತಿಪ್ಪೇಸ್ವಾಮಿ, ಎಂ.ಎಸ್. ಹೆಬ್ಬಾರ್, ರಾಮಣ್ಣನವರ್, ಪ್ರವೀಣ್ ಕುಮಾರ್, ಡಾ. ಹರಿನಾರಾಯಣ್, ಹೆಚ್. ಮಂಜುನಾಥ್, ಡಾ. ಹೆಚ್. ಚಂದ್ರಶೇಖರ್, ಕೃಪಾಕರ ಸೇನಾನಿ, ಜಯಕುಮಾರ್, ಶ್ರೀಮತಿ ಜಯಕುಮಾರ್, ಶ್ರೀ ಡಾ. ವೀರೇಂದ್ರಹೆಗಡೆ, ಧರ್ಮಸ್ಥಳ, ಬಸಪ್ಪನವರ್ ಮುಂತಾದವರು.

**ವೃತ್ತಪತ್ರಿಕಾ ರಂಗ :** ಸರ್ವಶ್ರೀಗಳಾದ ಪದ್ಮಶ್ರೀ ಟಿ.ಎಸ್. ಸತ್ಯನ್, ಡಾ. ಡಿ.ವಿ. ರಾವ್, ಬಿ. ಕೇಸರ್‌ಸಿಂಗ್, ಟಿ.ಎಲ್. ರಾಮಸ್ವಾಮಿ, ಭಗವಾನ್, ತುಷಾರ ಎ. ಈಶ್ವರಯ್ಯ, ಡಾ. ಎಸ್. ಹನುಮಂತ ಜೋಯಿಸ್, ಪೂರ್ಣಚಂದ್ರ ತೇಜಸ್ವಿ, ಕೆ.ಎಸ್. ರಾಜಾರಾಂ, ಕೆ.ಜಿ. ಸೋಮಶೇಖರ್, ಆಸ್ಟ್ರೋ ಮೋಹನ್, ಕೆ. ಗುರುಮೂರ್ತಿ, ಎ.ಜಿ. ಲಕ್ಷ್ಮೀನಾರಾಯಣ, ಹೆಚ್. ಮಂಜುನಾಥ, ಡಾ. ಹೆಚ್. ಚಂದ್ರಶೇಖರ್, ಮುಂತಾದವರು ಪ್ರಸಿದ್ಧರಾಗಿದ್ದಾರೆ.

ಭಾರತ ದೇಶದಲ್ಲಿ ಕರ್ನಾಟಕದಲ್ಲಿ ಹೆಚ್ಚು ಪ್ರಶಸ್ತಿ ಮತ್ತು ಮನ್ನಣೆ, ಪುರಸ್ಕಾರ, ಸನ್ಮಾನಗಳನ್ನು ಪಡೆದವರಿದ್ದಾರೆ. ಭಾರತದ ಭೂಪಟದಲ್ಲಿ ಕರ್ನಾಟಕವು ವಿವಿಧ ಕ್ಷೇತ್ರಗಳ ಛಾಯಾಚಿತ್ರಗ್ರಾಹಕರ ತವರುಮನೆ ಎಂದು ಪ್ರಸಿದ್ಧವಾಗಿದೆ. ಈಗ ಫೋಟೋತಜ್ಞರ ದಂಡೇ ಇದ್ದು ವರ್ಷದಲ್ಲಿ ಸುಮಾರು ೯೫,೦೦೦ದವರೆಗೆ ಛಾಯಾಗ್ರಹಣದ ಪೆಟ್ಟಿಗೆಗಳು ಇಲ್ಲಿ ಮಾರಾಟವಾಗುತ್ತಿವೆ. ಈಗ ತಮ್ಮ ಮನೆಯ ವಿವಿಧ ಸಮಾರಂಭ, ಹೊರಸಂಚಾರ, ಸ್ನೇಹಕೂಟಗಳು ಇವುಗಳ ಛಾಂಯಾಗ್ರಹಣವನ್ನು ಶೇ. ೬೦ರಷ್ಟು ಪ್ರವೃತ್ತಿ ಛಾಯಾಚಿತ್ರಗ್ರಾಹಕರು ಮಾಡಿಕೊಳ್ಳುತ್ತಿದ್ದಾರೆ. ಈಗ ಕರ್ನಾಟಕದ ಎಲ್ಲಾ ಜಿಲ್ಲೆ, ತಾಲ್ಲೂಕು, ಹೋಬಳಿ ಕೇಂದ್ರಗಳಲ್ಲಿ ವೃತ್ತಿಪರ ಹಾಗೂ ಪ್ರವೃತ್ತಿಪರ ಸಂಘ-ಸಂಸ್ಥೆಗಳು ಸ್ಥಾಪಿತವಾಗಿದ್ದು ಅವರುಗಳು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಛಾಯಾಚಿತ್ರ ಸ್ಪರ್ಧೆಗಳನ್ನು ಏರ್ಪಡಿಸಿ, ತಜ್ಞರಿಂದ ಆಯ್ಕೆ ಮಾಡಿಸಿ ಆಯ್ಕೆಯಾದ ಪ್ರತಿಭಾನ್ವಿತ ಛಾಯಾಚಿತ್ರಗ್ರಾಹಕರಿಗೆ ಆಕರ್ಷಕ ಬಹುಮಾನಗಳನ್ನು, ಪ್ರಶಸ್ತಿ ಪತ್ರಗಳನ್ನು ಕೊಟ್ಟು ಸನ್ಮಾನಿಸುತ್ತಿದ್ದಾರೆ. ಎಲ್ಲಾ ಸ್ಪರ್ಧೆಗಳಲ್ಲಿ ಕರ್ನಾಟಕದ ಚಿತ್ರಗ್ರಾಹಕರು ಸಿಂಹಪಾಲು ಪ್ರಶಸ್ತಿಗಳನ್ನು ಪಡೆಯುತ್ತಿರುವುದು ಶ್ಲಾಘನೀಯವಾಗಿದೆ.

ಛಾಯಾಗ್ರಹಣ ಕ್ಷೇತ್ರದಲ್ಲಿ ಕರ್ನಾಟಕದಲ್ಲಿ ಆ ಕಲೆಯ ಪ್ರಚಾರಕ್ಕಾಗಿ ಹಾಗೂ ಛಾಯಾಚಿತ್ರಣಕ್ಕೆ ಸಂಬಂಧಪಟ್ಟ ಲೇಖನಗಳನ್ನು ಪ್ರಕಟಿಸಲು ಪ್ರತ್ಯೇಕವಾಗಿ ದರ್ಪಣ ಮತ್ತು ವೀಡಿಯೋ ಪ್ಲೇಟೋ ಪ್ರಪಂಚವೆಂಬ ಮಾಸಿಕಗಳು ಪ್ರಾರಂಭವಾಗಿ ಅವುಗಳಿಗೆ ಪ್ರೋತ್ಸಾಹ ಸಿಕ್ಕದೇ ಆರ್ಥಿಕ ಮುಗ್ಗಟ್ಟಿನಿಂದ ನಿಂತುಹೋದವು. ಈಗ ಕ್ರಿ.ಶ. ೨೦೦೬ರ ಜೂನ್ ತಿಂಗಳಿಂದ 'ಛಾಯಾ-ಚಂದನ'ವೆಂಬ ಸಚಿತ್ರ ಮಾಸಪತ್ರಿಕೆಯು ಪ್ರಾರಂಭವಾಗಿ ಅಧಿಕ ಪ್ರಚಾರದಲ್ಲಿದೆ. ಇದು ಬೆಳೆಯಲು ಸಹೃದಯರಾದ ಚಿತ್ರಗ್ರಾಹಕ ನಿರಂತರ ಆರ್ಥಿಕ ಸಹಾಯದ ಅವಶ್ಯಕತೆ ಇದೆ.

ಭಾರತದಲ್ಲಿ ಕ್ರಿ.ಶ. ೧೯೯೦ರಿಂದ ಡಿಜಿಟಲ್ ಛಾಯಾಗ್ರಹಣವು ಪ್ರಚಾರದಲ್ಲಿದ್ದು ಇದು ಈಗ ಕರ್ನಾಟಕದಲ್ಲಿ ಅತಿ ಹೆಚ್ಚಿನ ಪ್ರಚಾರದಲ್ಲಿದ್ದು ಈ ವಿಭಾಗದಲ್ಲೂ ಕರ್ನಾಟಕದ ಛಾಯಾಚಿತ್ರಗ್ರಾಹಕರು ಮುಂಚೂಣಿಯಲ್ಲಿದ್ದಾರೆ. ಅಧಿಕ ಸಂಖ್ಯೆಯಲ್ಲಿ ಈ ವಿಭಾಗದ ಛಾಯಾಗ್ರಹಣ ಪೆಟ್ಟಿಗೆಗಳು ಮಾರಾಟವಾಗುತ್ತಿವೆ. ಚಿತ್ರಗ್ರಾಹಕರು ಈಗ ಈ ವಿಭಾಗದಲ್ಲಿ ತುಂಬಾ ಆಸಕ್ತರಾಗಿದ್ದಾರೆ.

ಕರ್ನಾಟಕದಲ್ಲಿ ಡಾ. ಜಿ. ಥಾಮಸ್, ಡಾ. ಡಿ.ವಿ. ರಾವ್, ಸಿ. ರಾಜಗೋಪಾಲ್, ಒ.ಸಿ. ಎಡ್ವರ್ಡ್, ಎಂ.ವೈ. ಘೋರ್ಪಡೆ ಹಾಗೂ ಟಿ.ಎನ್.ಎ. ಪೆರುಮಾಳ್ ಇವರು ವಿಶ್ವವಿಖ್ಯಾತರ ಗುಂಪಿನಲ್ಲಿ ಪರಿಗಣಿಸಲಾಗಿದೆ. ಇವರನ್ನು ವಿಶ್ವದಲ್ಲಿ ಈ ಕ್ಷೇತ್ರದ ಕರ್ನಾಟಕದ ಛಾಯಾಗ್ರಹಣ ಕ್ಷೇತ್ರದಲ್ಲಿ ಪಿತಾಮಹರೆಂದು ಪರಿಗಣಿಸಲಾಗಿದೆ.

ಶ್ರೀಯುತ ಟಿ.ಎನ್.ಆರ್. ಪೆರುಮಾಳ್‌ರವರು ಕ್ರಿ.ಶ. ೧೯೬೫ರಲ್ಲಿ ಬೆಂಗಳೂರಿನಲ್ಲಿ ಡಾ. ಜಿ. ಥಾಮಸ್‌ರವರು ಜನರಲ್ ಸೆಕ್ರೆಟರಿಯಾಗಿದ್ದ ಫೆಡರೇಷನ್ ಆಫ್ ಇಂಡಿಯನ್ ಫೋಟೋಗ್ರಫಿ ಸಂಸ್ಥೆಯಲ್ಲಿ ವನ್ಯಜೀವಿ ವಿಭಾಗದ ಕಾರ್ಯದರ್ಶಿಯಾಗಿದ್ದು, ಈ ವಿಭಾಗದ ಅಭಿವೃದ್ಧಿಗೆ ಶ್ರಮಿಸಿದ್ದಾರೆ. ಅವರಿಂದ ಫೆಡರೇಷನ್ ಆಫ್ ಆರ್ಟ್ ಫೋಟೋಗ್ರಾಫಿಕ್‌ನವರು ಅಂತರರಾಷ್ಟ್ರೀಯ ಛಾಯಾಚಿತ್ರ ಸ್ಪರ್ಧೆಯಲ್ಲಿ ೧೯೮೧, ೧೯೮೩, ೧೯೮೫ ಹಾಗೂ ವಿಶ್ವಕಪ್ ಪಡೆದು ಕರ್ನಾಟಕದ ಕೀರ್ತಿಯನ್ನು ಜಗತ್ತಿನಲ್ಲಿ ಬೆಳಗಿಸಿದ್ದಾರೆ. ಇವರು ಆಂಗ್ಲಭಾಷೆಯಲ್ಲಿ ಬರೆದಿರುವ 'South Indian Butterflies', 'Encounters in the Forest', 'Photographing Wild Life in India' ಬರೆಹಗಳು ವಿಶ್ವಮಾನ್ಯತೆಯನ್ನು ಪಡೆದಿವೆ.

ಟಿ.ಎಂ.ಎ. ಪೆರುಮಾಳ್ ವನ್ಯಜೀವಿ ಛಾಯಾಗ್ರಹಣದ ವಿಚಾರದಲ್ಲಿ ಈ ರೀತಿ ಅಭಿಪ್ರಾಯಪಡುತ್ತಾರೆ – Besides the basic rules of pictorial composition It must be a sharp picture of an animal in its natural habitat, and ambience. In soft pictorial light, doing something interesting or in motion definitely well composed and in truthful colour. If it is monochrome, then it should have a good range of tones, and a good tonal separation of the

Dr. G. Thomas, Hon.EFIAP, Hon. FRPS., Hon. PSA, Hon. FIP, Founder, President of Honour, Hon. Member, Secretary General, Treasurer of FIP and Editor of Viewfinder of the Federation of Indian Photography, was born on 15th April 1907 who passed away on the 17th April 1993 is remembered by SPS through Photo Gallery of some of his works on the occasion of his Centenary Celebrations



1



2



4



3



5



6



*Captions : 1) A Whirl of Dust - 1945 ; 2) The Bull Temple - 1945 ; 3) In Old Saurashtra - 1941 ; 4) At Day Break - 1945 ; 5) For Men Must Work - 1949 ; 6) As The Fog Lifts - 1945*




The SPS Photo Contest - Exhibition is dedicated to
Late **Dr. D.V. Rao,** FPSA, Hon.EFIAP, ESFIAP, FNPAS, Past President of the National Body,"The Federation of Indian Photography (FIP)" and Founder Hon. President of Sagara Photographic Society.
Photo Gallery displays some of Dr. D.V. Rao's Pictorial works




1



2



6



3



5



4



*Captions : 1) Infinite fields-1959 ; 2) Bereaved-1959 ; 3) Bangles Bargain-1959 ; 4) Design Nature-1962 ; 5) On a Wintry Morning-1963 ; 6) An Idyll - 1957*



ಈ ಜೋಡಿ ಟಿ.ಎಸ್.ಎ. ಪೆರುಮಾಳ್

subject from the background. Of course all rules are only general principles and can be broken. In the picture has a graphic look.

ವನ್ಯಜೀವಿ ಛಾಯಾಚಿತ್ರಗಳು ಈಗ ಪ್ರದರ್ಶನಕ್ಕೆ ಆಯ್ಕೆಯಾಗುವ ವಿಚಾರದಲ್ಲಿ ಇತ್ತೀಚೆಗೆ ಆಗಿರುವ ಬದಲಾವಣೆಯ ವಿಚಾರದಲ್ಲಿ ಶ್ರೀಯುತರು ಹೀಗೆ ಹೇಳುತ್ತಾರೆ – Earlier picture of an animal that was very sharp was considered a great picture. Today these concepts changed, we have to include the habitat and significant natural history information of this species in photograph, 'animals in the environment is todays manthra'.

ಕನ್ನಡಿಗ ಡಾ. ಜಿ. ಥಾಮಸ್‌ರವರು ಇಂಗ್ಲಿಷ್‌ನಲ್ಲಿ ಬರೆದಿರುವ 'History of Photography-India, Landscape and Anatomy of a picture'. ಈ ಗ್ರಂಥಗಳು ವಿಶ್ವಮಾನ್ಯತೆಯನ್ನು ಪಡೆದಿವೆ. ಕನ್ನಡಿಗ ಸಿ. ರಾಜಗೋಪಾಲ್ ರವರ 'Line of Light' ಎಂಬ ಇಂಗ್ಲೀಷ್ ಗ್ರಂಥವು ೨೦೦೩ರಲ್ಲಿ ಪ್ರಕಟವಾಗಿದ್ದು ಛಾಯಾಗ್ರಹಣ ಕ್ಷೇತ್ರಕ್ಕೆ ಒಂದು ಅಪರೂಪದ ಕೊಡುಗೆಯಾಗಿದೆ.

ಧರ್ಮಸ್ಥಳದ ಶ್ರೀ ಡಾ. ವೀರೇಂದ್ರ ಹೆಗ್ಗಡೆಯವರು ಪುರಾತನ ವಸ್ತುಗಳನ್ನು ಸಂಗ್ರಹಿಸಲು ಸ್ಥಾಪಿಸಿರುವ ವಸ್ತು-ಸಂಗ್ರಹಾಲಯ 'ಮಂಜೂಷಾ'ದಲ್ಲಿ ಎಲ್ಲಾ ಹಳೆಯ ಮಾದರಿಯ ಛಾಯಾಗ್ರಹಣ ಪೆಟ್ಟಿಗೆಗಳನ್ನು ಸಂಗ್ರಹಿಸಿಟ್ಟಿದ್ದಾರೆ. ಶ್ರೀಯುತರು ಒಬ್ಬ ಶ್ರೇಷ್ಠ ವನ್ಯಜೀವಿ ಛಾಯಾಚಿತ್ರಗ್ರಾಹಕರಾಗಿ ಈ ಕ್ಷೇತ್ರದಲ್ಲಿ ಕಾರ್ಯನಿರತರಾಗಿದ್ದಾರೆ.

ಕರ್ನಾಟಕದಲ್ಲಿ ಡಾ. ಜಿ. ಥಾಮಸ್, ಡಾ. ಡಿ.ವಿ. ರಾವ್ ಮತ್ತು ಚಕ್ರವರ್ತಿ ರಾಜ್‌ಗೋಪಾಲ್‌ರವರನ್ನು 'ಛಾಯಾಗ್ರಹಣ ಕ್ಷೇತ್ರದ ತ್ರಿಮೂರ್ತಿ'ಗಳೆಂದು ಕರೆಯುತ್ತಿದ್ದರು. ಅವರಲ್ಲಿ ಅಪೂರ್ವವಾದ, ಅವಿನಾಭಾವ ಬಾಂಧವ್ಯವಿತ್ತು. ಡಾ. ಡಿ.ವಿ. ರಾವ್‌ರವರು ಕ್ರಿ.ಶ. ೨೦೦೪ರ ಮೇ ತಿಂಗಳಲ್ಲಿ ಸ್ವರ್ಗಸ್ಥರಾದಾಗ ಚಕ್ರವರ್ತಿ ರಾಜ್‌ಗೋಪಾಲ್ ಅವರ ಕುಟುಂಬವರ್ಗದವರಿಗೆ ದಿನಾಂಕ : ೨೭.೦೫.೨೦೦೪ರಂದು ಬರೆದ ಪತ್ರವು ಅವರ ಅಪೂರ್ವ ಗೆಳೆತನಕ್ಕೆ ದ್ಯೋತಕವಾಗಿದೆ.

ಆ ಪತ್ರದ ಕೆಲಭಾಗ ೨೭.೦೫.೨೦೦೪

ಬೆಂಗಳೂರು

I saw his organisational work, he had done in putting the Doddaballapur Photographic Society from unpromising raw materials and made it a success. Dr. Thoms entrusted him with tasks of



ಅಪ್ಪ ನಕ್ಕಾಗ ಡಾ. ಎಸ್. ಹನುಮಂತಜೋಯಿಸ್

importance in the Federation of Indian Photography and Dr. Rao acquainted himself with distinctions.

First he got his A.FIAP for his photography. Then ASPA for his services to photography. Later he won this FPSA for out-standing services to Photography and The Federation and still later was given the highest distinciton of the FIAP The Hon. Excellency by his own unaided efforts be won the 3 star distinctions of the Photographic Society of America against great odds. These all odds up to something very high in the field undoubtedly creditable. When achieved by someone resident in villages like Doddaballapur and Dodderi and not in a metropolis with its great advantages.

He had a large family members, admirers to mourn the loss and in photography. We lost a distinguished President of the Federation of Indian Photography. and we are all poorer for his passing.

Bangalore<br>27.5.2004

Sd/-<br>(C. Rajgopal)

ಡಾ. ಡಿ.ವಿ. ರಾವ್ ತಮ್ಮ ಸ್ವಗ್ರಾಮ ದೊಡ್ಡೇರಿಯಲ್ಲಿರುವ ತನಕ ಆ ಊರಿನ ಅಂಚೆ ಇಲಾಖೆಯು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪತ್ರಗಳನ್ನು ಪಡೆಯುವ  ಒಂದು ವಿಶೇಷ ಕಛೇರಿಯಾಗಿ ಪರಿವರ್ತಿತವಾಗಿತ್ತು.

ಕರ್ನಾಟಕದಲ್ಲಿ ಕ್ರಿ.ಶ. ೧೯೭೧ರಿಂದ ಪ್ರಾರಂಭವಾದ ದಿ ಯೂತ್ ಫೋಟೋಗ್ರಾಫಿಕ್ ಸೊಸೈಟಿಯವರ ಒಂದು ಹೆಸರಾಂತ ಛಾಯಾಗ್ರಹಣ ಸಂಸ್ಥೆಯಾಗಿದ್ದು ಇದರಲ್ಲಿ ಈಗ ಸುಮಾರು ೭೧ ಛಾಯಾಚಿತ್ರಗ್ರಾಹಕರು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ಮತ್ತು ಮನ್ನಣೆಯನ್ನು ಪಡೆದಿದ್ದು ಇದು ಭಾರತದಲ್ಲಿ ಮುಂಚೂಣಿಯಲ್ಲಿರುವ ಸಂಸ್ಥೆಯಾಗಿದೆ. ಮತ್ತು ಕ್ರಿ.ಶ. ೨೦೦೦ಯ ಜನವರಿ ತಿಂಗಳಲ್ಲಿ ಮ್ಯಾಗ್ಸೆಸೆ ಪ್ರಶಸ್ತಿ ವಿಜೇತ ನೀನಾಸಂನ ಸುಪ್ರಸಿದ್ಧ ರಂಗತಜ್ಞ ಡಾ. ಕೆ.ವಿ. ಸುಬ್ಬಣ್ಣರವರಿಂದ ಉದ್ಘಾಟಿತವಾದ ಸಾಗರ ಫೋಟೋಗ್ರಾಫಿಕ್ ಸೊಸೈಟಿಯು ಡಾ. ಡಿ.ವಿ. ರಾವ್‌ರವರ ಅಧ್ಯಕ್ಷತೆಯಲ್ಲಿ ಕರ್ನಾಟಕದ ೩೫ ವರ್ಷದೊಳಗಿನ ಗ್ರಾಮಾಂತರ ಯುವ ಛಾಯಾಚಿತ್ರಗ್ರಾಹಕರಿಗೆ ತರಬೇತಿಯನ್ನು ಕೊಡುವ ಏಕೈಕ ಸಂಸ್ಥೆಯಾಗಿ ಸ್ಥಾಪಿತವಾಗಿದ್ದು ಈಗಾಗಲೇ ಈ ಸಂಸ್ಥೆಯಿಂದ ನೂರಾರು ಯುವ ಚಿತ್ರಗ್ರಾಹಕರು ರಾಷ್ಟ್ರೀಯ ಹಾಗೂ ಅಂತರರಾಷ್ಟ್ರೀಯ ಪ್ರಶಸ್ತಿಗಳನ್ನು ಪಡೆದಿರುತ್ತಾರೆ. ಮೈಸೂರಿನಲ್ಲಿರುವ ಮೈಸೂರ್ ಫೋಟೋ ಸೊಸೈಟಿ ಹಾಗೂ ಬೆಳಗಾಂನಲ್ಲಿರುವ ಬೆಳಗಾಂ ಫೋಟೋ ಸೊಸೈಟಿಗಳು ಹಲವು ದಶಕಗಳಿಂದ ಈ ಕ್ಷೇತ್ರದಲ್ಲಿ ಗಣನೀಯವಾದ ಸೇವೆಯನ್ನು ಸಲ್ಲಿಸುತ್ತಿವೆ.

ಪ್ರಸ್ತುತ ಭಾರತದಲ್ಲಿ ಕರ್ನಾಟಕವು ಪ್ರಥಮ ಸ್ಥಾನದಲ್ಲಿದ್ದು ಜಗತ್ ಪ್ರಸಿದ್ಧಿ ಪಡೆದಿದೆ.



## ಆಧಾರಸೂಚಿ ಮತ್ತು ಟಿಪ್ಪಣಿಗಳು


೧. Rev. Dr. G. Thomas., *History of Photography,* India..

೨. Collected relevant matters from Rev. Dr. D.V. Rao, Rev. C. Rajgopal, Rev. T.N.A. Perumal.

೩. Photogrphas and Relevant Matters from Personal Dairy of Dr. S. Hanumantha Jois.

ಎಂ.ಬಿ. ಪಾಟೀಲ *

# ಆಡಳಿತ ವಿಕೇಂದ್ರಿಕರಣದ ಹರಿಕಾರ ದಿ|| ರಾಮಕೃಷ್ಣಹೆಗಡೆ (೧೯೨೬-೨೦೦೪)

ಭಾರತದ ಇಂದಿನ ಫೆಡರಲ್ (ಸಂಯುಕ್ತ) ಮಾದರಿಯ ಒಕ್ಕೂಟ ಆಡಳಿತ ವ್ಯವಸ್ಥೆಯಲ್ಲಿ ಕೇಂದ್ರ ಮತ್ತು ರಾಜ್ಯ ಸರ್ಕಾರಗಳಷ್ಟೇ ಪ್ರಾಮುಖ್ಯತೆಯನ್ನು ನಗರ / ಗ್ರಾಮೀಣ ಪ್ರದೇಶಗಳ ಸ್ಥಳೀಯ ಸಂಸ್ಥೆಗಳು (Local-Self-Govts) ಹೊಂದಿರುವವು. 'ಗ್ರಾಮ ಸ್ವರಾಜ್ಯ', 'ಸುರಾಜ್ಯ', 'ರಾಮರಾಜ್ಯ' ಮುಂತಾದ ಗಾಂಧೀಯುಗದ ಗ್ರಾಮೀಣ ಬದುಕಿನ ಸುಂದರ ಪರಿಕಲ್ಪನೆಗಳನ್ನು ಸಾಕಾರಗೊಳಿಸುವಲ್ಲಿ ಈ ಸಂಸ್ಥೆಗಳು ನಿರ್ವಹಿಸಬೇಕಾದ ಪಾತ್ರ ಹಿಂದೆಂದಿಗಿಂತಲೂ ಇಂದು ಮಹತ್ವದ್ದಾಗಿದೆ.

ಸಾರ್ವಜನಿಕ ಜೀವನದಲ್ಲಿ ತಮ್ಮನ್ನು ತೊಡಗಿಸಿಕೊಂಡ ವ್ಯಕ್ತಿಗಳಲ್ಲಿ ಅದರಲ್ಲಿಯೂ ವಿಶೇಷವಾಗಿ ರಾಜಕೀಯ ನಾಯಕರು ಅವರ ಅಧಿಕಾರದ ಅವಧಿಯಲ್ಲಿ ಸಮಷ್ಟಿಯ ಸಾಮಾಜಿಕ, ಆರ್ಥಿಕ ರಾಜಕೀಯ ಬದುಕಿನಲ್ಲಿ ತೀವ್ರತರ ಬದಲಾವಣೆಗಳನ್ನು ತರುವ ಯೋಜನೆಗಳನ್ನು ರೂಪಿಸಿ ಅವುಗಳನ್ನು ಕಾರ್ಯರೂಪದಲ್ಲಿ ತರುವ ಮೂಲಕ ಜನಮನದಲ್ಲಿ ಬಹಳ ಕಾಲ ನಿಲ್ಲುವ ಅವಿಸ್ಮರಣೀಯ ಗೌರವಕ್ಕೆ ಪಾತ್ರರಾಗುತ್ತಾರೆ. ಆ ಪೈಕಿ ಕರ್ನಾಟಕದ ೭ನೇ ಮುಖ್ಯಮಂತ್ರಿಗಳಾಗಿದ್ದ ದಿ|| ರಾಮಕೃಷ್ಣ ಹೆಗಡೆಯವರು ೧೯೭೦-೮೦ರ ದಶಕದಲ್ಲಿ ಆಡಳಿತದಲ್ಲಿ ವಿಕೇಂದ್ರಿಕರಣ ತರುವಲ್ಲಿ ಮಾಡಿದ ಆರಂಭಿಕ ಮತ್ತು ನಂತರದ ಪ್ರಯತ್ನಗಳು ರಾಜ್ಯದ ಪಂಚಾಯತ್ ರಾಜ್ಯ ಸಂಸ್ಥೆಗಳ ಇತಿಹಾಸದ ಪುಟಗಳಲ್ಲಿ ಒಂದು ಮೈಲುಗಲ್ಲು ಅಥವಾ ಪ್ರಮುಖ ಘಟ್ಟ ಎಂದು ಹೇಳಬಹುದು.

John Cook ಹೇಳುವಂತೆ "ಜನತೆ ಮತ್ತು ಸರ್ಕಾರದ ನಡುವೆ ವಿಶ್ವಾಸ ಮತ್ತು ನಿಕಟ ಸಂಬಂಧಗಳನ್ನು ಬಳಸುತ್ತ ಅವರನ್ನು ಹೆಚ್ಚು ಜಾಗೃತರನ್ನಾಗಿ ಮಾಡುವವನೇ ನಿಜವಾದ ಶ್ರೇಷ್ಠನಾಯಕ".

ದಿ|| ಡಿ. ದೇವರಾಜ ಅರಸು ಅವರ ನಂತರ ಹಿಂದುಳಿದ ವರ್ಗದವರನ್ನು ವಿಶ್ವಾಸಕ್ಕೆ ತೆಗೆದುಕೊಂಡು ಅವರಲ್ಲಿ ನಾಯಕರನ್ನು ಬೆಳೆಸಲು ಮನಸ್ಸು ಮಾಡಿದವರಲ್ಲಿ ಹೆಗಡೆಯವರು ಪ್ರಮುಖರು ಎಂಬುದು ಗಮನಾರ್ಹ.

**ಸರ್ಕಾರ ಮತ್ತು ಗ್ರಾಮೀಣ ಅಭಿವೃದ್ಧಿ ಮತ್ತು ಪರಂಪರೆ:** ಸರ್ಕಾರ ಯಾವ ಪಕ್ಷದ್ದಾದರೆ ಏನು ? ಗ್ರಾಮೀಣ ಅಭಿವೃದ್ಧಿ ಯೋಜನೆಗಳು ಪ್ರವಹಿಸುವದು ಮುಖ್ಯವಾಗಿ ಅವುಗಳ ಅನುಷ್ಠಾನ, ಅದರ ಫಲಶ್ರುತಿ, ಫಲಾನುಭವಿಗಳಿಗೆ ತಲುಪುವದು ಪಂಚಾಯತ್ ರಾಜ್ ಸಂಸ್ಥೆಗಳ ಮೂಲಕವೇ.

ಭಾರತದಲ್ಲಿ ಗ್ರಾಮೀಣ ಆಡಳಿತಕ್ಕೆ ಸಂಬಂಧ ಪಟ್ಟಂತೆ ಸುಮಾರು ೪,೦೦೦ ವರ್ಷಗಳ ಸುದೀರ್ಘ ಪರಂಪರೆ ಉಂಟು. ಕಾಲಕಾಲಕ್ಕೆ ಉಂಟಾದ ರಾಜಕೀಯ, ಸಾಮಾಜಿಕ ಬದಲಾವಣೆಗೆ ತಕ್ಕಂತೆ ಈ ಸಂಸ್ಥೆಗಳು ಸಮುದಾಯದ ಸಮಸ್ಯೆಯೊಂದಿಗೆ ಸ್ಪಂದಿಸುತ್ತ ಬಂದಿರುವವು.

ಕರ್ನಾಟಕದಲ್ಲಿ ಪ್ರಾಚೀನ ಕಾಲದಿಂದಲೂ ಉತ್ತಮವಾದ ಇಂದಿಗೂ ಮಾದರಿಯಾಗಬಲ್ಲ ಪಾರಂಪರಿಕ ಗ್ರಾಮೀಣ ಆಡಳಿತ ವ್ಯವಸ್ಥೆ ಇತ್ತು ಎಂಬುದು ಶಾಸನಗಳಿಂದ ತಿಳಿದುಬರುವದು. ಪ್ರಾಚೀನ ಮತ್ತು ಮಧ್ಯಕಾಲೀನ ಕರ್ನಾಟಕದಲ್ಲಿ ಕೇಂದ್ರೀಯ ಆಡಳಿತ ವ್ಯವಸ್ಥೆಯಲ್ಲಿ (Centralised Administration) ಈ ಸಂಸ್ಥೆಗಳು ಸ್ವತಂತ್ರವಾಗಿ ಸ್ವಾಯತ್ತತೆಯಿಂದ ಕಾರ್ಯನಿರ್ವಹಿಸುತ್ತಿದ್ದವು. ಕೇಂದ್ರ ಅಥವಾ ಪ್ರಾಂತೀಯ ಸರ್ಕಾರಗಳಿಂದ ಮೇಲಿನಿಂದ ಹೇರಲ್ಪಟ್ಟಿರಲಿಲ್ಲ. ಈ ಸಂಸ್ಥೆಗಳು ಗ್ರಾಮದ ಹತ್ತು ಹದಿನೆಂಟು ಜಾತಿಯ, ಸಮುದಾಯದ, ಒಕ್ಕಲುಗಳ ಪ್ರಮುಖರಿಂದ ಮೂಡಿಬಂದ ಗೌರವಯುತ, ಸರ್ವಮಾನ್ಯ, ಸ್ವತಂತ್ರ ಅಧಿಕಾರ ನಿರ್ವಹಣಾ ಸಂಸ್ಥೆಗಳಾಗಿದ್ದವು. ರಾಜಮನ್ನಣೆಯನ್ನು ಪಡೆದಿದ್ದವು.

**ಪಂಚಾಯತ್ ರಾಜ್ :** *Democratic De Centralisation* ಎಂಬ ಆಂಗ್ಲ ಪದದ ಸರಳ ಸುಂದರ ಭಾರತೀಯ ಹೆಸರೇ 'ಪಂಚಾಯತ್ ರಾಜ್' ಈ ಹೆಸರನ್ನು ಅಧಿಕೃತವಾಗಿ ಮೊದಲು ಸೂಚಿಸಿದವರೇ ಭಾರತದ ಪ್ರಥಮ

* # ೩೫೬, ಶ್ರೀ ರೇಣುಕಾ, ಸಿ.ಟಿ. ಬೆಡ್, ೬ನೇ ಕ್ರಾಸ್, ಬನಶಂಕರಿ ೨ನೇ ಹಂತ, ಬೆಂಗಳೂರು - ೭೦.

ಪ್ರಧಾನಿ ಪಂಡಿತ ಜವಾಹರಲಾಲ ನೆಹರುರವರು ಈ ವ್ಯವಸ್ಥೆಯನ್ನು ಪರಿಣಾಮಕಾರಿಯಾಗಿ ದೇಶಾದ್ಯಂತ ಕಾರ್ಯರೂಪದಲ್ಲಿ ತರಲು ಅವರಿಗೆ ಸಹಾಯಕರಾಗಿ ನಿಂತವರು ಅಂದಿನ ಕೇಂದ್ರ ಪಂಚಾಯತ್ ರಾಜ್ಯ ಮಂತ್ರಿ ಎಸ್.ಕೆ. ಡೇ ಅವರು.

***ಸ್ವಾತಂತ್ರ್ಯ ಪೂರ್ವದ ಪರಿಕಲ್ಪನೆ :*** ಬ್ರಿಟಿಷರ ಆಡಳಿತ ಕಾಲದಲ್ಲಿ ಜಮೀನುದಾರರು ಮತ್ತು ಶ್ರೀಮಂತರ ಹಿಡಿತದಲ್ಲಿದ್ದ ಗ್ರಾಮದ ಆಡಳಿತವನ್ನು ಸಮಾಜೀಕರಣ, ಸಾರ್ವತ್ರೀಕರಣ ಮಾಡಲು ಸಹಾಯಕವಾಗುವಂತೆ ಅಂದಿನ ರಾಜಕೀಯ ನಾಯಕರು ಒತ್ತಾಯ ಮಾಡುತ್ತಲೇ ಇದ್ದರು. ಈ ಬೇಡಿಕೆಗೆ ಪೂರಕವಾಗಿ, ೧೯೦೭ರಲ್ಲಿ De Centralisation Commission ನಂತರ ೧೯೧೨ರಲ್ಲಿ ಗೋಪಾಲಕೃಷ್ಣ ಗೋಖಲೆ ಕಮಿಟಿ, ಸ್ವಾತಂತ್ರ್ಯದ ನಂತರ ಯೋಜನಾ ಆಯೋಗ ಮುಂತಾದ ಸಮಿತಿಗಳು ಆಡಳಿತ ವಿಕೇಂದ್ರಿಕರಣಕ್ಕೆ ಶಿಫಾರಸ್ಸು ಮಾಡಿದ್ದವು.

**ಸ್ವಾತಂತ್ರ್ಯ ನಂತರ ಬಲವಂತರಾಯ ಮೆಹತಾ ಕಮಿಟಿ ವರದಿ ೧೯೫೮ :** ಸ್ವಾತಂತ್ರ್ಯ ಪೂರ್ವದಲ್ಲಿ ಸ್ಥಳೀಯ ಅರಸರ ಕಾಲದಲ್ಲಿ, ಪಾಳೇಗಾರರ ಆಳ್ವಿಕೆಯಲ್ಲಿ, ನಂತರದ ಬ್ರಿಟಿಷರ ಆಳ್ವಿಕೆಯಲ್ಲಿ ಒಂದು ರೀತಿಯ ಹಿಂಜರಿತ ಕಂಡಿದ್ದ ಈ ಸಂಸ್ಥೆಗಳನ್ನು ಸಾಮಾಜಿಕ ಅಭಿವೃದ್ಧಿಗೆ ಪೂರಕವಾಗುವಂತೆ, ಅಭಿವೃದ್ಧಿಯ ಪ್ರಕ್ರಿಯೆಯಲ್ಲಿ ಜನಪ್ರತಿನಿಧಿಗಳು ವ್ಯಾಪಕವಾಗಿ ಭಾಗವಹಿಸುವಂತೆ ಈ ಸಂಸ್ಥೆಗಳನ್ನು ಪುನರ್ ಜೀವಗೊಳಿಸುವಲ್ಲಿ ಮೆಹತಾ ಕಮಿಟಿಯ ವರದಿಯು ಒಂದು ಪ್ರಮುಖ ಹೆಜ್ಜೆಯಾಗಿತ್ತು. ವರದಿಯಲ್ಲಿ ಸೂಚಿಸಿರುವಂತೆ "ಎಲ್ಲಿಯವರೆಗೆ ನಾವು ಸ್ಥಳೀಯ ಸಮಸ್ಯೆಗಳ ಬೇಡಿಕೆಗಳನ್ನು ಪೂರೈಸಲು ಸಹಾಯಕವಾಗುವಂತೆ ಪ್ರಜಾಪ್ರಭುತ್ವ ತಳಹದಿಯ ಮೇಲೆ ಸ್ಥಳೀಯ ಸಂಸ್ಥೆಗಳನ್ನು ರಚಿಸದೇ ಹೋದರೆ ಮತ್ತು ಅವುಗಳಿಗೆ ಸಾಕಷ್ಟು ಸ್ವಯಂ ಅಧಿಕಾರ, ಹಣಕಾಸಿನ ಸೌಲಭ್ಯಗಳನ್ನು ಒದಗಿಸದೇ ಇದ್ದಲ್ಲಿ ನಾವು ಸ್ಥಳೀಯ ಹಿತಾಸಕ್ತಿಗಳನ್ನು ಉಂಟು ಮಾಡಲು ಆಗುವುದಿಲ್ಲ" ಎಂದು ತನ್ನ ವರದಿಯಲ್ಲಿ ಸೂಚಿಸಿತ್ತು. ಅಲ್ಲದೇ ಪಂಚಾಯತ್ ವ್ಯವಸ್ಥೆಯಲ್ಲಿ ಗ್ರಾಮ, ತಾಲ್ಲೂಕು, ಜಿಲ್ಲಾ ಹಂತದ ಮೂರು ಸಂಸ್ಥೆಗಳ ರಚನೆಯ ಬಗ್ಗೆ ಸೂಚಿಸಿತ್ತು. ಆದರೆ ಈ ಮೂರೂ ಸಂಸ್ಥೆಗಳ ರಚನೆ ಕಡ್ಡಾಯವಾಗಿರಲಿಲ್ಲ. ಆಯಾ ರಾಜ್ಯಗಳು ತಮ್ಮ ಅನುಕೂಲಕ್ಕೆ ತಕ್ಕಂತೆ ಸಂಸ್ಥೆಗಳನ್ನು ರೂಪಿಸಲು ಅವಕಾಶ ಮಾಡಿಕೊಡಲಾಗಿತ್ತು.

**Mysore VP and LB Act 1959**

**ಮೈಸೂರು ಗ್ರಾಮ ಪಂಚಾಯತಿ ಮತ್ತು ಲೋಕಲ್ ಬೋರ್ಡ್ ಕಾಯಿದೆ ೧೯೫೯ :** ರಾಜ್ಯ ಪುನರ್ ರಚನೆಯ ಪೂರ್ವದಲ್ಲಿ, ಕರ್ನಾಟಕದಲ್ಲಿ ವಿಲೀನಗೊಂಡ ಪ್ರದೇಶಗಳಲ್ಲಿ ಪ್ರತ್ಯೇಕವಾದ ಸ್ಥಳೀಯ ಸಂಸ್ಥೆಗಳ ಕಾಯಿದೆಗಳು ರೂಢಿಯಲ್ಲಿ ಇದ್ದವು. ಅವುಗಳಲ್ಲಿ ಏಕರೂಪತೆ, ಸಮನ್ವಯ ಇರಲಿಲ್ಲ.

ರಾಜ್ಯ ಪುನರ್ ರಚನೆಯ ನಂತರ ಇಡೀ ರಾಜ್ಯಕ್ಕೆ ಅನ್ವಯವಾಗುವ ಮತ್ತು ಸಮಗ್ರ ವಿಷಯಗಳನ್ನು ಒಳಗೊಂಡ ಏಕೀಕೃತ ಪ್ರಥಮ ಪಂಚಾಯತ್ ರಾಜ್ಯ ಕಾನೂನು ಇದಾಗಿತ್ತು. ಇದು ಕೇವಲ ಎರಡು ಹಂತಗಳ ಸಂಸ್ಥೆಗಳನ್ನು ಅಂದರೆ ಗ್ರಾಮ ಪಂಚಾಯತಿ ಮತ್ತು ತಾಲ್ಲೂಕು ಅಭಿವೃದ್ಧಿ ಮಂಡಳಿ (T.D.B) ಗಳನ್ನು ಹೊಂದಿತ್ತು. ಇವುಗಳು ಚುನಾಯಿತ ಪ್ರತಿನಿಧಿಗಳನ್ನು ಹೊಂದಿದ್ದವು. ಜಿಲ್ಲಾ ಮಟ್ಟದಲ್ಲಿ ಯಾವುದೇ ಚುನಾಯಿತ ಪ್ರಾತಿನಿಧಿಕ ಸಂಸ್ಥೆ ಇರಲಿಲ್ಲ. ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿ ಜಿಲ್ಲಾ ಮಟ್ಟದ ಅಧಿಕಾರಿಗಳನ್ನು ಮತ್ತು ಕೆಲವು ಸರ್ಕಾರದಿಂದ ನಾಮಕರಣಗೊಂಡ ಸದಸ್ಯರನ್ನು ಹೊಂದಿದ್ದ District Development Council 'ಜಿಲ್ಲಾ ಅಭಿವೃದ್ಧಿ ಸಮಿತಿ' ಕೇವಲ ಸಲಹಾ ಸಮಿತಿಯಂತೆ ಕಾರ್ಯನಿರ್ವಹಿಸುತ್ತಿತ್ತು.

**ಹೆಗಡೆ ಮಂಡಿಸಿದ ಪಂಚಾಯತ್ ರಾಜ್ ಮಸೂದೆ ೧೯೬೪ :** ೧೯೫೯ರ ಪ್ರಥಮ ಪಂಚಾಯತ್ ರಾಜ್ ಕಾನೂನು ಈ ಹಿಂದಿನ ಗ್ರಾಮಪಂಚಾಯತಿ ಮತ್ತು ತಾಲ್ಲೂಕು ಬೋರ್ಡು ವ್ಯವಸ್ಥೆಯು ಅಲ್ಪ ಸ್ವಲ್ಪ ಬದಲಾವಣೆಗಳೊಂದಿಗೆ ಮುಂದುವರೆದ ವ್ಯವಸ್ಥೆಯಾಗಿತ್ತು. ಈ ಕಾನೂನನ್ನು ರಚಿಸುವಲ್ಲಿಯೂ ಹೆಗಡೆಯವರು ಸಕ್ರಿಯವಾಗಿ ಭಾಗವಹಿಸಿದ್ದರು. ಸದರಿ ಕಾನೂನು ಯಾವುದೇ ಪುರೋಗಾಮಿ, ಸಂಪೂರ್ಣ ಸ್ವಾಯತ್ತತೆ, ವಿಕೇಂದ್ರಿಕರಣ ಮತ್ತು ಸಂಪನ್ಮೂಲ ಸಂಗ್ರಹಣೆಯ ವ್ಯಾಪಕ ಅಧಿಕಾರ, ವಿನಿಯೋಗ, ಹೊಂದಿರಲಿಲ್ಲ. ಪ್ರತಿ ಒಂದಕ್ಕೂ ಸರ್ಕಾರವನ್ನೇ ಅವಲಂಬಿಸಬೇಕಾಗಿತ್ತು. ಸರ್ಕಾರದ ಅನುದಾನದಿಂದ ನಡೆಯುವ ವ್ಯವಸ್ಥೆಯಾಗಿತ್ತು.

**ಸಕಾಲದಲ್ಲಿ ಹೊಸ ಕಾನೂನಿನ ಮಸೂದೆಯ ಮಂಡನೆ:** ೧೯೫೯ರ ಕಾನೂನು ಅನ್ವಯ ರಚನೆಗೊಂಡ ಸಂಸ್ಥೆಗಳ ಅಧಿಕಾರದ ಅವಧಿ ೫ ವರ್ಷ ಪೂರೈಸುವ ಸಮಯಕ್ಕೆ ಸರಿಯಾಗಿ ೧೯೬೪ ಜುಲೈನಲ್ಲಿ ಈ ಹೊಸ ಮಸೂದೆಯನ್ನು ಮಂಡಿಸಲಾಯಿತು. ದಿ॥ ನಿಜಲಿಂಗಪ್ಪನವರ ಮಂತ್ರಿಮಂಡಳದಲ್ಲಿ ಹೆಗಡೆಯವರು ಸಹಕಾರ ಅಭಿವೃದ್ಧಿ ಮತ್ತು ಪಂಚಾಯತ್ ರಾಜ್ ಮಂತ್ರಿಗಳಾಗಿದ್ದರು. ೧೯೫೯ರ ಕಾನೂನಿನ ರಚನೆಯಲ್ಲಿಯೂ ಅವರ ಪರಿಶ್ರಮ ಇತ್ತು. ೧೯೫೯ ರಿಂದ ೧೯೬೪ರ ಒಂದು ಅವಧಿಯಲ್ಲಿ ಹಿಂದಿನ ಕಾನೂನಿನಲ್ಲಿ ಕಂಡು ಬಂದ ಲೋಪ ದೋಷಗಳನ್ನು ಇತರೆ ಕುಂದು ಕೊರತೆಗಳನ್ನು ನಿವಾರಿಸುವ, ಜನಾಭಿಪ್ರಾಯಗಳನ್ನು

ಪ್ರತ್ಯಕ್ಷ ಕಂಡು ಅನುಭವಿಸಿದ ಸ್ವಯಂ ಅನುಭವಗಳನ್ನು ಈ ಕಾನೂನಿನಲ್ಲಿ ಅಳವಡಿಸುವ ಮೂಲಕ ಈ ಸಂಸ್ಥೆಗಳ ಅಂಗರಚನೆ, ಕಾರ್ಯವಿಧಾನಗಳಲ್ಲಿ ತೀವ್ರ ಬದಲಾವಣೆಗಳನ್ನು ಅನ್ವೇಷಿಸಿ ಮಸೂದೆಯಲ್ಲಿ ಅಳವಡಿಸಲಾಗಿತ್ತು.

ಸ್ವಭಾವತಃ ಪುರೋಗಾಮಿ ವಿಚಾರಗಳಿಂದ ಪ್ರಭಾವಿತರಾಗಿದ್ದ, ಗ್ರಾಮೀಣ ಬದುಕಿನ ಹಿನ್ನೆಲೆ, ಸಮಾಜವಾದಿ ವಿಚಾರಧಾರೆ ಮತ್ತು ಪ್ರಭಾವ ವಲಯದಲ್ಲಿ ಬೆಳೆದಿದ್ದ ಇದರೊಂದಿಗೆ ಮೋಜುಗಾರ, ಸೊಗಸುಗಾರ, ಸಭ್ಯ ರಾಜಕಾರಣಿ ಎಂದೇ ಜನಪ್ರಿಯರಾಗಿದ್ದ ಹೆಗಡೆಯವರು ಈ ಬದಲಾವಣೆಯ ರೂವಾರಿಯಾಗಿದ್ದರು.

**ಅಧ್ಯಯನ ಸಮಿತಿ :** ಈ ಹೊಸ ಮಸೂದೆಯನ್ನು ತರುವ ಪೂರ್ವದಲ್ಲಿ ಅಂದಿನ ಸಹಕಾರ ಇಲಾಖೆಯ ಉಪಮಂತ್ರಿಯವರ ಅಧ್ಯಕ್ಷತೆಯಲ್ಲಿ ಒಂದು ಅಧ್ಯಯನ ಉಪಸಮಿತಿಯನ್ನು ರಚಿಸಲಾಯಿತು. ಉಪಸಮಿತಿಯು ರಾಜ್ಯದಲ್ಲೆಲ್ಲಾ ಸಂಚರಿಸಿ, ಪಂಚಾಯತ್ ರಾಜ್ ಪರಿಕಲ್ಪನೆಯ ಮೂಲ ಉದ್ದೇಶ ಕುರಿತು ಅಧ್ಯಯನ ಮಾಡಿದ ತಜ್ಞರು, ಹಿಂದಿನ ತಾಲ್ಲೂಕು ಬೋರ್ಡ್ ಅಧ್ಯಕ್ಷರು, ಜಿಲ್ಲಾ ಬೋರ್ಡ್ ಅಧ್ಯಕ್ಷರು ಮುಂತಾದವರಿಂದ ಮಾಹಿತಿಯನ್ನು ಸಂಗ್ರಹಿಸಿತು. ಅಲ್ಲದೇ ಹೊರ ರಾಜ್ಯಗಳಲ್ಲಿ ಸಂಚರಿಸಿ (ಆಂಧ್ರ, ಮದ್ರಾಸ್, ಮುಂಬೈ) ಪಂಚಾಯತ್ ರಾಜ್ ಸಂಸ್ಥೆಗಳ ಕಾರ್ಯವಿಧಾನದ ಬಗ್ಗೆ ಮಾಹಿತಿ ಸಂಗ್ರಹಿಸಲಾಯಿತು. ಈಗಾಗಲೇ ಕಾರ್ಯನಿರ್ವಹಿಸುತ್ತಿದ್ದ ಪಂಚಾಯತ್ ರಾಜ್ ಸಂಸ್ಥೆಗಳ ಕಾರ್ಯವೈಖರಿಯ ಬಗ್ಗೆ ಶಾಸನಸಭೆಯ ಒಳಗೆ ಮತ್ತು ಹೊರಗೆ ವ್ಯಾಪಕ ಚರ್ಚೆ ನಡೆದಿತ್ತು ಅಲ್ಲದೇ ಈ ಮಸೂದೆ ಮಂಡಿಸುವ ಹಿಂದಿನ ವರ್ಷ (೧೯೮೨) ಕೇಂದ್ರದ ಪಂಚಾಯತ್ ರಾಜ್ ಸಚಿವರು (S.K. Day) ಈ ಸಂಸ್ಥೆಗಳ ಅಂದಿನ ಕಾರ್ಯವೈಖರಿ ಬಗ್ಗೆ ಅನುಮಾನ ವ್ಯಕ್ತಪಡಿಸಿದ್ದರು.

### ಹೆಗಡೆ ಮಂಡಿಸಿದ ಮಸೂದೆಯ ಮುಖ್ಯಾಂಶಗಳು

**ನಾಲ್ಕು ಹಂತದ ಸಂಯುಕ್ತ ಮಾದರಿಯ ಪಂಚಾಯತ್ ರಾಜ್ ಸಂಸ್ಥೆಗಳ ರಚನೆಗೆ ಪ್ರಸ್ತಾವನೆ :** ಮಸೂದೆಯ ಪ್ರಸ್ತಾವನೆಯಲ್ಲಿ "A Large and Diverse country like India can not servive as a democracy unless it adopts four tier federal system functioning untis of govt. of Mandal, District, State and National Level" ಎಂದು ವಿವರಿಸಲಾಗಿದೆ.

"ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ನಿಜವಾದ ಜೀವಂತಿಕೆಯನ್ನು ತುಂಬಬೇಕಾದಲ್ಲಿ ಅವುಗಳಿಗೆ ಸೂಕ್ತ ಪ್ರಜಾಸತ್ತಾತ್ಮಕ ಅಧಿಕಾರ ನೀಡಬೇಕು. ಇದರಿಂದ ಮಾತ್ರ ಈ ಸಂಸ್ಥೆಗಳು ಸಶಕ್ತವಾಗಿ, ಸಕ್ರಿಯವಾಗಿ, ಸಮರ್ಥಕವಾಗಿ ಕಾರ್ಯನಿರ್ವಹಿಸುವವು ಇಲ್ಲದಿದ್ದರೆ ನಾವು ಜನತಂತ್ರಕ್ಕೆ ಅಪಚಾರ ಮಾಡಿದಂತೆ" ಎಂದು ಈ ಸಂಸ್ಥೆಗಳ ಮಹತ್ವವನ್ನು ವಿವರಿಸಲಾಗಿದೆ.

**ಜಿಲ್ಲಾ ಪಂಚಾಯತ್ ರಚನೆ :** ಸಕ್ರಿಯವಾದ ಪರಿಣಾಮಕಾರಿಯಾದ, ಜಿಲ್ಲಾ ಮಟ್ಟದಲ್ಲಿ ಶೃಂಗ ಸಂಸ್ಥೆಯಾದ ಜಿಲ್ಲಾ ಪಂಚಾಯತ್ ರಚನೆಯ ಮಹತ್ವವನ್ನು ಕುರಿತಂತೆ ಹೆಗಡೆ ಈ ರೀತಿ ವಿವರಣೆ ನೀಡುತ್ತಾರೆ. "ಜಿಲ್ಲಾ ಮಟ್ಟದಲ್ಲಿ ಪ್ರಜಾಪ್ರಭುತ್ವ ವಿಧಾನದಿಂದ ಚುನಾಯಿತರಾದ ಸಂಪೂರ್ಣ ಅಧಿಕಾರ ಹೊಂದಿದ ಕಾನೂನುಬದ್ಧ ಸಂಸ್ಥೆ ಇರದೇ ಇದ್ದಲ್ಲಿ ಗ್ರಾಮಪಂಚಾಯತಿ, ತಾಲ್ಲೂಕು ಬೋರ್ಡ್ ಆಡಳಿತ ವ್ಯಾಪ್ತಿ ಕೇವಲ ಸೀಮಿತ ವಲಯಕ್ಕೆ ಅನ್ವಯವಾಗವದು. ಈ ಸಂಸ್ಥೆಗಳು ಮತ್ತು ರಾಜ್ಯ ಸರ್ಕಾರದ ನಡುವೆ ದೊಡ್ಡ ಅಂತರ ಇರುವುದು ಇದರಿಂದ ನಿಯಂತ್ರಣ ಸಾಧ್ಯವಾಗುವುದಿಲ್ಲ. ಕಾರಣ ಜಿಲ್ಲಾ ಮಟ್ಟದಲ್ಲಿ 'ಜಿಲ್ಲಾ ಸರ್ಕಾರದ' District Govt ಮಾದರಿಯಲ್ಲಿ ವ್ಯಾಪಕ ಅಧಿಕಾರದೊಂದಿಗೆ ಕನಿಷ್ಠ ಸರ್ಕಾರದ ನಿಯಂತ್ರಣದೊಂದಿಗೆ ಕಾರ್ಯನಿರ್ವಹಿಸುವ ಸಂಸ್ಥೆಯ ಅವಶ್ಯಕತೆಯನ್ನು ಕುರಿತಂತೆ ವಿವರಿಸುತ್ತಾರೆ. ಅದಕ್ಕೆ ಪೂರಕವಾಗಿ ಅನೇಕ ಉದಾಹರಣೆಗಳನ್ನು ನೀಡುತ್ತಾರೆ. ಮೊದಲಿನ ವ್ಯವಸ್ಥೆಯಲ್ಲಿ ತಾಲ್ಲೂಕು ಮಟ್ಟದ ದಿನನಿತ್ಯದ ವ್ಯವಹಾರ, ಅಭಿವೃದ್ಧಿ ಕೆಲಸ, ಕಛೇರಿ ಕೆಲಸ ಮುಂತಾದವುಗಳಿಗೆ ದೂರದ ವಿಧಾನಸೌಧದತ್ತ ಮುಖ ಮಾಡಬೇಕಾಗಿತ್ತು. ಇದರಿಂದ ಕಾಲ ವಿಳಂಬ, ಅನವಶ್ಯಕ ಖರ್ಚು ಆಗುತ್ತಿತ್ತು. ಆದ್ದರಿಂದ ಜಿಲ್ಲಾ ಪರಿಷತ್ ರಚನೆಯ ಮೂಲಕ ಈ ವ್ಯವಸ್ಥೆಯನ್ನು ಸರಿಪಡಿಸಬಹುದು ಎಂದು ಅನೇಕ ಉದಾಹರಣೆ ನೀಡುತ್ತಾರೆ. ಹೊಸ ಪಂಚಾಯತ್‌ರಾಜ್ ಮಸೂದೆಯಲ್ಲಿ ತಾಲ್ಲೂಕು ಬೋರ್ಡ್ ಗಳ ಮುಂದುವರಿಕೆಯ ಬಗ್ಗೆ ಒಪ್ಪಿಗೆ ಸೂಚಿಸಿದ್ದರೂ ಅವುಗಳ ಅಂಗರಚನೆಯ ಬಗ್ಗೆ ವ್ಯಾಪಕ ಬದಲಾವಣೆ ಸೂಚಿಸುವರು. ಮೊದಲಿಗೆ (೧೯೫೯ರ ಮಸೂದೆ) ಈ ಸಂಸ್ಥೆಗಳಿಗೆ ನೇರವಾದ ಚುನಾವಣೆ ಇತ್ತು. ಹೊಸ ಮಸೂದೆ ಯಲ್ಲಿ ಬಹುಪಾಲು ೨/೩ ನೇರ ಮತದಾನದಿಂದ, ೧/೩ ಅಪ್ರತ್ಯಕ್ಷ ಅಂದರೆ ಆಯಾ ತಾಲ್ಲೂಕಿನ ಗ್ರಾಮಪಂಚಾಯತಿಯ ಸದಸ್ಯರಿಂದ ಆಯ್ಕೆ ಆದವರು ಇರುವರು. ಇದರಿಂದ ಪಂಚಾಯತಿ ಮತ್ತು ತಾಲ್ಲೂಕು ಬೋರ್ಡ್ ಮಧ್ಯೆ ಆಡಳಿತಾತ್ಮಕ ಸಂಬಂಧ ಏರ್ಪಡಲು ಸಹಾಯಕವಾಗುವದು ಜನಸಂಖ್ಯೆಯ ಪ್ರಮಾಣದಲ್ಲಿ ಕನಿಷ್ಠ ೧೫, ಗರಿಷ್ಠ ೨೫ ಜನ ಪ್ರತಿನಿಧಿಗಳನ್ನು ತಾಲ್ಲೂಕು ಬೋರ್ಡ್ ಒಳಗೊಳ್ಳುವಂತೆ ನಿಯಮಗಳನ್ನು ರೂಪಿಸಲಾಗಿತ್ತು.

**ಸಹಕಾರ ಸಂಸ್ಥೆಗಳೊಂದಿಗೆ ಸಮನ್ವಯ :** ತಾಲ್ಲೂಕು

ಮಟ್ಟದ ಅಭಿವೃದ್ಧಿ ಕಾರ್ಯಕ್ರಮಗಳಲ್ಲಿ ಸಮನ್ವಯ ಸಾಧಿಸಲು ಸಹಕಾರಿಯಾಗುವಂತೆ ತಾಲೂಕು ಮಟ್ಟದ ಪ್ರಮುಖ ಸಹಕಾರಿ ಸಂಸ್ಥೆಗಳಾದ ಕೃಷಿ ಮತ್ತು ಗ್ರಾಮೀಣ ಅಭಿವೃದ್ಧಿ ಬ್ಯಾಂಕ್ ಮತ್ತು ವ್ಯವಸಾಯ ಉತ್ಪನ್ನ ಮಾರಾಟ ಸಹಕಾರ ಸಂಘ (TAPCMS) ಅಧ್ಯಕ್ಷರನ್ನು ನಾಮಕರಣ ಮಾಡಲು ಅವಕಾಶ ಮಾಡಲಾಗಿತ್ತು. ಇದೇ ವ್ಯವಸ್ಥೆಯನ್ನು ಜಿಲ್ಲಾ ಪರಿಷತ್ತಿನಲ್ಲಿ ಜಿಲ್ಲಾ ಮಟ್ಟದ ಸಹಕಾರಿ ಸಂಸ್ಥೆಗಳೊಂದಿಗೆ ಮಾಡಲು ಸೂಚಿಸಲಾಗಿತ್ತು. ಸಮರ್ಪಕ ಆಡಳಿತ ನಿರ್ವಹಣೆಗ ಜಿ.ಪ.ನಲ್ಲಿ ೯ ಸ್ಥಾಯಿ ಸಮಿತಿಗಳ ರಚನೆಗೆ ಅವಕಾಶ ಕಲ್ಪಿಸಲಾಗಿತ್ತು.

**ನ್ಯಾಯ ಪಂಚಾಯಿತಿಯ ರಚನೆ :** ಭಾರತ ಸರ್ಕಾರ ನೇಮಿಸಿದ್ದ ಅಧ್ಯಯನ ವರದಿಯ ಪ್ರಕಾರ ಈ ಹೊಸ ವ್ಯವಸ್ಥೆಯನ್ನು ಮಸೂದೆಯಲ್ಲಿ ಅಳವಡಿಸಲಾಗಿತ್ತು. ಗ್ರಾಮ ಪಂಚಾಯತಿಯ ಮಟ್ಟದಲ್ಲಿ ನ್ಯಾಯ ಪಂಚಾಯತಿ ವ್ಯವಸ್ಥೆ ಜಾರಿಯಲ್ಲಿ ಬಂದಿದ್ದರೆ ಕರ್ನಾಟಕವು ನ್ಯಾಯಾಂಗ ವ್ಯವಸ್ಥೆಯಲ್ಲಿ ದೇಶಕ್ಕೆ ಒಂದು ಮಾದರಿಯಾಗುತ್ತಿತ್ತು. ಪ್ರಾಥಮಿಕ ಹಂತದಲ್ಲಿ ಸ್ಥಳೀಯವಾಗಿ ಸಣ್ಣ ಪುಟ್ಟ ವ್ಯಾಜ್ಯಗಳನ್ನು ಶೀಘ್ರವಾಗಿ ಅತ್ಯಂತ ಕಡಿಮೆ ವೆಚ್ಚದಲ್ಲಿ ಪರಿಹರಿಸುವ ದಿಶೆಯಲ್ಲಿ ಈ ಪ್ರಯತ್ನ ಫಲಕಾರಿಯಾಗ ಬಹುದೆಂದು ಈ ಸಂಸ್ಥೆಯ ರಚನೆಯನ್ನು ಮಸೂದೆಯಲ್ಲಿ ಅಳವಡಿಸಲಾಗಿತ್ತು. ಆದರೆ ಇದಕ್ಕೆ ವ್ಯಾಪಕ ವಿರೋಧ ವ್ಯಕ್ತವಾಗಿದ್ದರಿಂದ ಜಾರಿಗೊಳಿಸಲಾಗಲಿಲ್ಲ. ಮೇಲಾಗಿ ನ್ಯಾಯ ಪಂಚಾಯತಿಯ ರಚನೆ ಕಡ್ಡಾಯವಾಗಿರಲಿಲ್ಲ. ಇದು ಒಂದು ಪ್ರಾಯೋಗಿಕ ವ್ಯವಸ್ಥೆಯಾಗಿತ್ತು. ಆರಂಭದಲ್ಲಿಯೇ ಕಮರಿಹೋಯಿತು. ನ್ಯಾಯ ಪಂಚಾಯತಿಯಲ್ಲಿ ಸಾಮಾಜಿಕ ನ್ಯಾಯ ಒದಗಿಸಲು ಸಹಾಯಕವಾಗುವಂತೆ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಎರಡಕ್ಕೆ ಹೆಚ್ಚಿಲ್ಲದಂತೆ ಮಹಿಳಾ ಸದಸ್ಯರನ್ನು ನಾಮಕರಣ ಮಾಡಿಕೊಳ್ಳಲು ಅವಕಾಶ ಇತ್ತು. ಸಿವಿಲ್ ಮತ್ತು ಕ್ರಿಮಿನಲ್ ಎರಡೂ ವಿಧವಾದ ಸ್ಥಳೀಯ ಸರಳ ವ್ಯಾಜ್ಯಗಳನ್ನು ನ್ಯಾಯ ಪಂಚಾಯತಿಗಳು ತೆಗೆದುಕೊಳ್ಳಬಹುದಾಗಿತ್ತು. ಸಿವಿಲ್ ವ್ಯಾಜ್ಯಗಳ ಮೌಲ್ಯ ರೂ. ೨೦೦ಕ್ಕಿಂತ ಹೆಚ್ಚಿರದ ಮತ್ತು ಸ್ಥಿರಾಸ್ತಿಯ ಮಾಲೀಕತ್ವಕ್ಕೆ ಸಂಬಂಧಪಡದ ವಿವಾದಗಳನ್ನು ಮಾತ್ರ ಪಂಚಾಯತಿಗೆ ಒಪ್ಪಿಸಬಹುದಾಗಿತ್ತು. ಗ್ರಾಮ ಪಂಚಾಯಿತಿಯ ಸದಸ್ಯರು ನ್ಯಾಯ ಮಂಡಳಿಯ ಸದಸ್ಯರಾಗಲು ಅವಕಾಶ ಇರಲಿಲ್ಲ. ಇಂದು ಯಾವುದೇ ರಾಜ್ಯದ ಪಂಚಾಯತ್ ವ್ಯವಸ್ಥೆಯಲ್ಲಿ ಗ್ರಾಮ ಪಂಚಾಯಿತಿಯ ವ್ಯವಸ್ಥೆ ಇರುವುದಿಲ್ಲ. ಆದರೆ ಇತ್ತೀಚಿನ ದಿನಗಳಲ್ಲಿ ಕೇಂದ್ರ ಸರ್ಕಾರವು ನ್ಯಾಯಾಂಗದ ಮೇಲಿನ ಒತ್ತಡ ಕಡಿಮೆ ಮಾಡಲು ಮತ್ತು ಶೀಘ್ರ ನ್ಯಾಯ ವಿಲೇವಾರಿ, ಕಡಿಮೆ ಖರ್ಚು, ಮುಂತಾದವುಗಳನ್ನು ಪರಿಗಣಿಸಿ ನ್ಯಾಯ ಪಂಚಾಯಿತಿಯ ಆರಂಭದ ಬಗ್ಗೆ ಮರುಚಿಂತನೆ ನಡೆಸಿದೆ.

**ಒಟ್ಟಾರೆ ನಿಯಂತ್ರಣ :** ರಾಜ್ಯಮಟ್ಟದಲ್ಲಿ ಪಂಚಾಯತ್ ರಾಜ್ ಸಮಿತಿಯ ರಚನೆ ಮತ್ತು ಸದರಿ ಸಮಿತಿಗೆ ರಾಜ್ಯಮಟ್ಟದಲ್ಲಿ ಪಂಚಾಯತ್ ರಾಜ್ ಮಂತ್ರಿಗಳು ಅಧ್ಯಕ್ಷರು, ಜಿಲ್ಲಾ ಪಂಚಾಯತ್ ಅಧ್ಯಕ್ಷರು ಸದಸ್ಯರಾಗಿರುವಂತೆ ಒಂದು ರಾಜ್ಯಮಟ್ಟದ ಪಂಚಾಯತ್ ರಾಜ್ ಪರಿಷತ್ತಿನ ರಚನೆಯ ಬಗ್ಗೆ ಮಸೂದೆಯಲ್ಲಿ ಸೂಚಿಸಲಾಗಿತ್ತು. ಪಂಚಾಯತ್ ರಾಜ್ ಸಂಸ್ಥೆಗಳ ವಿವಿಧ ಸಮಸ್ಯೆಗಳನ್ನು ಚರ್ಚಿಸಲು, ಆಡಳಿತ ಸುಧಾರಿಸಲು ಇದು ಸೂಕ್ತ ವೇದಿಕೆಯಾಗಬೇಕೆಂಬುದು ಹೆಗಡೆಯವರ ಬಯಕೆ ಆಗಿತ್ತು.

**ಅಧಿಕಾರ ವಿಕೇಂದ್ರಕ್ಕೆ ಮಾನಸಿಕ ಸಿದ್ಧತೆ ಮತ್ತು ರಾಜಕೀಯ ಬದ್ಧತೆ :** ಹೆಗಡೆಯವರ ಈ ವಿಕೇಂದ್ರಿಕರಣ ಯೋಜನೆಯನ್ನು ಸುಲಭವಾಗಿ ಅಂದಿನ ಶಾಸನ ಸಭೆಯ ಸದಸ್ಯರು ಒಪ್ಪಲು ಮಾನಸಿಕವಾಗಿ ಸಿದ್ಧರಿರಲಿಲ್ಲ. ಕೇಂದ್ರಿಕೃತ ಆಡಳಿತ ವ್ಯವಸ್ಥೆಯಲ್ಲಿನ ಸೌಲಭ್ಯ, ಸ್ವಯಂ ಹಿತಾಸಕ್ತಿ, ಅಧಿಕಾರದ ದಾಹ ಮುಂತಾದವುಗಳನ್ನು ಸ್ವಯಂ ಪ್ರೇರಣೆಯಿಂದ ಬಿಟ್ಟುಕೊಡಲು ಜನಪ್ರತಿನಿಧಿಗಳು ಮಾನಸಿಕವಾಗಿ ಸಿದ್ಧರಾಗಿರಲಿಲ್ಲ. ಶಾಸಕರು ಈ ಸಂಸ್ಥೆಗಳ ಭವಿಷ್ಯದ ಬಗ್ಗೆ ಅದಕ್ಕಿಂತಲೂ ಹೆಚ್ಚಾಗಿ ತಮ್ಮ ರಾಜಕೀಯ ಭವಿಷ್ಯದ ಬಗ್ಗೆ ಅನೇಕ ಅನುಮಾನಗಳನ್ನು, ಸಂಶಯಗಳನ್ನು ವ್ಯಕ್ತಪಡಿಸುತ್ತಾರೆ. ಅದಕ್ಕೆ ಹೆಗಡೆಯವರು ನೀಡಿದ ಸ್ಪಂದನ, ಸಮಯಸ್ಫೂರ್ತಿ ಅವರ ರಾಜಕೀಯ ಮುತ್ಸದ್ದಿತನಕ್ಕೆ, ಪ್ರೌಢಿಮೆಗೆ, ಮೌಲ್ಯವರ್ಧಿತ ರಾಜಕಾರಣ ನೀತಿಗೆ ಒಂದು ನಿದರ್ಶನವಾಗಿತ್ತು.

**ಅಧಿಕಾರದ ಸದುಪಯೋಗ – ದುರುಪಯೋಗ :** "ಅಧಿಕಾರ ಸದುಪಯೋಗವಾಗುವದೇ ದುರುಪಯೋಗ ವಾಗುವದೇ? ಎಂಬ ಅನುಮಾನ ಸಂಪ್ರದಾಯ ಶರಣರಾದ ನಿಮಗೆ (ಶಾಸಕರಿಗೆ) ಆಗಬಹುದು. ಆದರೆ ಪ್ರಜಾಪ್ರಭುತ್ವದಲ್ಲಿ ಪ್ರಜೆಗಳಿಗೆ ಸೇರಬೇಕಾದ ಅಧಿಕಾರ ನಿರಾಕರಿಸುವ ಅಧಿಕಾರ ನಮಗೆ ಇಲ್ಲ" ಎಂದು ಅತ್ಯಂತ ವಿನಮ್ರದಿಂದ ವಿವರಿಸುತ್ತಾರೆ. "ನಮ್ಮ ದೇಶದಲ್ಲಿ ಅಧಿಕಾರ ಮೇಲಿನಿಂದ ಕೆಳಗೆ ಪ್ರವಹಿಸುವದು ಪ್ರಜಾಪ್ರಭುತ್ವದ ಒಂದು ಅಣಕ. ಆದರೆ ನಿಜವಾದ ಪ್ರಜಾಪ್ರಭುತ್ವದಲ್ಲಿ ಅಧಿಕಾರ ಕೆಳಹಂತದಿಂದ ಮೂಡಿಬರಬೇಕು. ಹೊಸದಾಗಿ ಅಧಿಕಾರ ಪಡೆದವರು ಅಧಿಕಾರ ನೀಡುವವರಿಗಿಂತಲೂ ಗುಣಮಟ್ಟದಲ್ಲಿ ಉತ್ತಮವಾಗಿ ಅಲ್ಲದಿದ್ದರೂ ಸಮಾನ ಗುಣಮಟ್ಟದಲ್ಲಿ ಅಧಿಕಾರ ಚಲಾಯಿಸಬಹುದು. ಕೇಂದ್ರೀಕೃತ ಆಡಳಿತದ ಎರಡು ಪ್ರಮುಖ ಲೋಪದೋಷಗಳೆಂದರೆ ವಿಳಂಬನೀತಿ, ಅದಕ್ಷತೆ ಮತ್ತು ಭ್ರಷ್ಟಾಚಾರ "One who has power in

his hand always thinks that he is best suited to use it and gives hundred reasons as why others can not be trusted with same power"

**ವಿರೋಧ ಪಕ್ಷದ ನಾಯಕರು :** ಅಂದಿನ ವಿರೋಧ ಪಕ್ಷಗಳ ಪ್ರಮುಖ ನಾಯಕರಾಗಿದ್ದ ಶ್ರೀಯುತ ಎಸ್. ಶಿವಪ್ಪ, ಸಿ.ಜೆ. ಮುಕ್ಕಣ್ಣಪ್ಪ, ಕೆ.ಬಿ. ರೇವಣಸಿದ್ದಪ್ಪ, ಸಮಾಜವಾದಿ ಪಕ್ಷದ ಎಸ್. ಗೋಪಾಲಗೌಡ, ಕೆ. ದೇವಯ್ಯ ಮುಂತಾದವರು ಈ ಮಸೂದೆಯ ವಿವಿಧ ಮುಖಗಳ ಬಗ್ಗೆ ತಮ್ಮದೇ ಆದ ರೀತಿಯಲ್ಲಿ ಕಟುವಾಗಿ ಟೀಕಿಸುತ್ತಾರೆ. ಇದು ಪಂಚಾಯತಿ ರಾಜ್ಯವಲ್ಲ 'ಫಜೀತಿ ರಾಜ್ಯ' ಮಸೂದೆ (ಎಸ್. ಶಿವಪ್ಪ) ಪಂಚಾಯತಿ ರಾಜ್ಯವಲ್ಲ 'ಪಜಾಯತ್ ರಾಜ್ಯ' (ಸಿ.ಜೆ. ಮುಕ್ಕಣ್ಣಪ್ಪ) ಇತ್ಯಾದಿ ಅಲ್ಲದೇ ಮಸೂದೆಯ ಪ್ರತಿಯನ್ನು ಕನ್ನಡದಲ್ಲಿ ಕೊಡದೇ ಇರುವ ಬಗ್ಗೆಯೂ ಸದಸ್ಯರು ತೀವ್ರವಾಗಿ ವಿರೋಧ ವ್ಯಕ್ತಪಡಿಸುತ್ತಾರೆ. ಈಗಿರುವ ಪಂಚಾಯತ್ ರಾಜ್ ಸಂಸ್ಥೆಗಳನ್ನು ಸಹ ರದ್ದು ಮಾಡಲು ಕೆಲವು ಸದಸ್ಯರು ಬಲವಾಗಿ ಒತ್ತಾಯ ಮಾಡುತ್ತಾರೆ.

**ಹೆಗಡೆಯವರ ಮಾರ್ಮಿಕ ಉತ್ತರ :** ಮಸೂದೆಯ ಬಗ್ಗೆ ವಸ್ತುನಿಷ್ಠವಾಗಿ ಮಾತನಾಡಿದ ಮತ್ತು ಸೂಕ್ತ ಸಲಹೆಗಳನ್ನು ನೀಡಿದ ಎಸ್. ಗೋಪಾಲಗೌಡರಿಗೆ ಅಭಿನಂದಿಸುತ್ತ ಹೆಗಡೆ "ಈ ದೇಶದ ಪಾರ್ಲಿಮೆಂಟ್ ಮತ್ತು ವಿಧಾನ ಮಂಡಳದ ಸದಸ್ಯರನ್ನು ಆರಿಸುವ ಜನತೆಗೆ ಅನುಭವ, ವಿವೇಕ, ತಿಳುವಳಿಕೆ ಇದೆ ಎಂದು ತಿಳಿದುಕೊಂಡಿದ್ದೇವೆ. ಅದೇ ಜನತೆಗೆ ಅವರ ಊರು, ಗ್ರಾಮ, ತಾಲ್ಲೂಕು ಜಿಲ್ಲೆಗೆ ಸಂಬಂಧಪಟ್ಟ ವಿಚಾರಗಳಲ್ಲಿ ಆಡಳಿತ ನಡೆಸಿಕೊಂಡು ಹೋಗುವ ವಿವೇಕ, ಅನುಭವ, ಜ್ಞಾನ ಇಲ್ಲವೆಂದು ಹೇಳಿದರೆ ನಮ್ಮ ದೇಶದಲ್ಲಿ ಒಂದು ಪ್ರತಿರೋಧ ಇದೆ ಎಂದು ಸ್ಪಷ್ಟವಾಗುತ್ತದೆ. ಆದ್ದರಿಂದ ಇಂದು ಪ್ರಜಾಪ್ರಭುತ್ವ ಮತ್ತು ಪಂಚಾಯತಿ ರಾಜ್ ಇವು ಶಾಶ್ವತವಾಗಿರುವ ವಿಚಾರ ಹೊರತು ಒಂದು ತಾತ್ಕಾಲಿಕವಲ್ಲ. ಅಧಿಕಾರ ಯಾರ ಕೈಗೆ ನಿಜವಾಗಿ ಹೋಗಬೇಕೋ ಅವರಿಗೆ ಹಸ್ತಾಂತರ ಆಗಬೇಕು ಅದಕ್ಕಾಗಿ ಈ ಮಸೂದೆ."

**ಅಧಿಕಾರ ಮತ್ತು ಹಣದ ದುರುಪಯೋಗ :** ಕೆಲವು ಸದಸ್ಯರು ಪಂಚಾಯತ್ ರಾಜ್ ಸಂಸ್ಥೆಗಳಿಂದ ಅಧಿಕಾರ ಮತ್ತು ಹಣದ ದುರುಪಯೋಗವಾಗುತ್ತಿದೆ ಎಂಬ ವಿಚಾರವನ್ನು ಮಂಡಿಸಿದಾಗ ಹೆಗಡೆ ನೀಡಿದ ಉತ್ತರ ಬಹಳ ಮಾರ್ಮಿಕ, ಸಮಂಜಸವಾಗಿತ್ತು ಮತ್ತು ಪ್ರಾಮಾಣಿಕ ಅನುಭವದಿಂದ ಕೂಡಿತ್ತು.

"Are we free from these evils ?

"ಯಾವುದೇ ಸರ್ಕಾರ ಬಂದರೂ ಹೆಚ್ಚು ಹೆಚ್ಚು ಅಧಿಕಾರ ಉನ್ನತ ಮಟ್ಟದಲ್ಲಿ ಕೇಂದ್ರೀಕೃತವಾದರೆ ಈ ದೋಷಕ್ಕೆ ಹೆಚ್ಚು ಅವಕಾಶವಾಗುವದು. ಎಲ್ಲೆಲ್ಲಿ ದೊಡ್ಡ ಪ್ರಮಾಣದ ಕೆಲಸ ಮಾಡುತ್ತೇವೆ ಅಲ್ಲೆಲ್ಲಾ ದೊಡ್ಡ ಪ್ರಮಾಣದ ದೋಷ ಬರುವದು ಸ್ವಾಭಾವಿಕ ಆದ್ದರಿಂದ ನಮ್ಮ ಪ್ರಜಾಪ್ರಭುತ್ವದ ಅಂತರಿಷ್ಟದಲ್ಲಿ ಎಷ್ಟರಮಟ್ಟಿಗೆ ಸಾಧ್ಯವೋ ಅಷ್ಟರಮಟ್ಟಿಗೆ ಈ ಅಧಿಕಾರವನ್ನು ಹಂಚಿಕೊಡುವಲ್ಲಿ ಹಿತ ಇದೆಯೇ ಹೊರತು ಕೇಂದ್ರೀಕರಿಸುವಲ್ಲಿ ಇಲ್ಲ"

**ಶಾಸಕರ ಸ್ಥಾನಮಾನ :** ಆಡಳಿತ ವಿಕೇಂದ್ರೀಕರಣದ ಈ ಮಸೂದೆಯಲ್ಲಿ ಹೊಸ ಪಂಚಾಯತ್ ರಾಜ್ ಸಂಸ್ಥೆಗಳಲ್ಲಿ ಜಿಲ್ಲಾ ಮತ್ತು ತಾಲ್ಲೂಕು ಮಟ್ಟದಲ್ಲಿ ವಿಧಾನಸಭೆ, ವಿಧಾನಪರಿಷತ್ತಿನ, ಶಾಸಕರಿಗೆ ಯಾವುದೇ ವಿಶೇಷವಾದ ಅಧಿಕಾರವನ್ನು ಕಲ್ಪಿಸಲಾಗಿರಲಿಲ್ಲ. ಇದರಿಂದ ಬಹುಪಾಲು ಸದಸ್ಯರು ತಮ್ಮ ಅಸಮಾಧಾನ ವ್ಯಕ್ತಪಡಿಸಿದ್ದು ವಿಶೇಷವಾಗಿರಲಿಲ್ಲ. ಇದಕ್ಕೆ ಉತ್ತರವಾಗಿ ಹೆಗಡೆಯವರು ಆಡಳಿತ ಸಿದ್ಧಾಂತದ ಮೂಲಭೂತ ಪ್ರಶ್ನೆಯನ್ನು ಸದಸ್ಯರಿಗೆ ಈ ರೀತಿ ಮನವರಿಕೆ ಮಾಡುತ್ತಾರೆ" ಈ ಮಸೂದೆಯನ್ನು ಒಂದು ಮೂಲಭೂತ ಸಿದ್ಧಾಂತದ ಮೇಲೆ ಸಿದ್ಧಪಡಿಸಲಾಗಿದೆ.

ಆದರೆ ಅಧಿಕಾರದ ಮುಂದೆ ಸಿದ್ಧಾಂತ ನಿಲ್ಲುವುದಿಲ್ಲ. State activities ಗಳನ್ನು (ರಾಜ್ಯದಾಡಳಿತವನ್ನು) ಎರಡು ಭಾಗಗಳಾಗಿ ವಿಂಗಡಿಸಬಹುದು : 1) State Sector (ರಾಜ್ಯ ವಲಯ), 2) Local Sector (ಸ್ಥಳೀಯ ವಲಯ)ನಲ್ಲಿ ಯಾವ ಅಭಿವೃದ್ಧಿ ಕೆಲಸಗಳು ಆಗಬೇಕೋ ಅದರ ಜವಾಬ್ದಾರಿ ಸ್ಥಳೀಯ ಸಂಸ್ಥೆಗಳಿಗೆ ಸೇರಿದ್ದು ಶಾಸನಸಭಾ ಸದಸ್ಯರು ಹೆಚ್ಚಿನ ಗಮನ, ಆಸಕ್ತಿ, ಸಮಯವನ್ನು ಬಹು ಮುಖ್ಯವಾದಂತಹ State Sector ಯೋಜನೆಗಳಿಗೆ ಮೀಸಲಾಗಿಡಬೇಕು. ಸ್ಥಾನಿಕ ಸಂಸ್ಥೆಗಳು ಹೊಸದಾಗಿ ಬೆಳೆಯುತ್ತಿರುವ ಸಂಸ್ಥೆಗಳು ಇದರಲ್ಲಿ ಲೀಡರ್‌ಶಿಪ್ ಬೆಳೆಯಬೇಕಾದರೆ ಒಂದು ಚುನಾವಣೆಯಾಗಿ ಮತ್ತೊಂದು ಚುನಾವಣೆಗೆ ಹೊತ್ತಿಗೆ ಬೆಳದೇ ಬೆಳೆಯುತ್ತದೆ. ಹೊಸದಾಗಿ ಬೆಳೆಯುತ್ತಿರುವ ಸಂಸ್ಥೆಗಳು ಯಾವುದೇ ತರದ ಪ್ರಭಾವಕ್ಕೆ ಒಳಗಾಗದೇ ಬೆಳೆಯುವುದಕ್ಕೆ ಒಳ್ಳೆಯ ಪೂರ್ಣವಾದ ಅವಕಾಶ ಇರಬೇಕೆಂದು ಶಾಸನ ಸಭೆಯ ಸದಸ್ಯರನ್ನು ಈ ಸಂಸ್ಥೆಗಳಿಂದ ಹೊರಗಿಡಲಾಗಿದೆ."

**ನ್ಯಾಯ ಪಂಚಾಯಿತಿಗಳ ಸಮರ್ಥನೆ :** ಸ್ವತಃ ವಕೀಲರಾಗಿದ್ದ ಹೆಗಡೆಯವರು ಗ್ರಾಮೀಣ ಮಟ್ಟದಲ್ಲಿ ನ್ಯಾಯಾಂಗದಲ್ಲಿ ತೀವ್ರತರ ಬದಲಾವಣೆಗಳನ್ನು ತರಲು ಸಹಾಯಕವಾಗುವಂತೆ ರೂಪಿಸಲಾಗಿದ್ದ ಈ ಸಂಸ್ಥೆಗಳ ರಚನೆಯ ಮಹತ್ವವನ್ನು ಈ ಕುರಿತಂತೆ ಮಸೂದೆಯಲ್ಲಿ ಸಮರ್ಥಿಸುತ್ತಾರೆ.

ಈ ಸಂಸ್ಥೆಗಳನ್ನು ಪ್ರಪ್ರಥಮವಾಗಿ ಸ್ಥಾಪಿಸಲಾಗುತ್ತಿಲ್ಲ. ಹಿಂದಿನ ಮೈಸೂರು, ಮುಂಬೈ ರಾಜ್ಯಗಳಲ್ಲಿ ಕೆಲವು ಪ್ರದೇಶಗಳಲ್ಲಿ ಇವು ರೂಢಿಯಲ್ಲಿ ಇದ್ದವು. ೧೮೮೮ರಲ್ಲಿ ಮದ್ರಾಸಿನಲ್ಲಿ ಮೊಟ್ಟ ಮೊದಲನೆಯ ನ್ಯಾಯ ಪಂಚಾಯತಿ ಕಾಯಿದೆಯನ್ನು, ಬೊಂಬಾಯಿಯಲ್ಲಿ ೧೯೩೩ರಲ್ಲಿ ಈ ಕಾಯಿದೆಯನ್ನು ತರಲಾಯಿತು. ಸ್ವಾತಂತ್ರ್ಯ ಬಂದು ೧೮ ವರ್ಷದ ನಂತರ (೧೯೬೫) ಅಧಿಕಾರ ಕೊಡದೇ ಇರುವದು ಎಂದರೆ ಹೇಗೆ ?

ನ್ಯಾಯ ಪಂಚಾಯತಿಯ ರಚನೆ ಮಾಡದೇ ಇದ್ದರೆ "ನಮ್ಮವರು ಬಹಳ ಹಿಂದುಳಿದವರು ಅನುಭವ ಇಲ್ಲದವರು ಮತ್ತು ಜನರಿಗೆ ಅಧಿಕಾರ ನೀಡಲು ಒಪ್ಪದಿರುವವರು ಎಂದು ಆಡಿಕೊಳ್ಳಲು ಆಸ್ಪದವಾಗುತ್ತದೆ."

**ತಪ್ಪು ಮಾಡುವುದು ಮೂಲಭೂತ ಹಕ್ಕು** : ಪ್ರಜಾಪ್ರಭುತ್ವದಲ್ಲಿ ಎಲ್ಲಕ್ಕೂ ಮೂಲಭೂತ ಹಕ್ಕು ಎಂದರೆ ತಪ್ಪು ಮಾಡುವುದು. ಆ ಹಕ್ಕನ್ನು ಹಳ್ಳಿಯವರಿಗೆ ಕೊಡದೇ ಹೋದರೆ ಅವರು ಕಲಿಯುವದು ಹೇಗೆ ಸಾಧ್ಯ ?

ಎಲ್ಲದರಲ್ಲಿಯೂ ರಾಜಕೀಯ ಇದೆ ಎಂದು ಏನಾದರೂ ಒಂದು ದೋಷ ಹುಡುಕುತ್ತ ಹೋದರೆ ಎಂದು ಅವರು ನಿಜವಾಗಿ ನಾಗರಿಕರಾಗುವದು ? ಎಲ್ಲಾ ಕಡೆ ನ್ಯಾಯ ಪಂಚಾಯತಿ ಮಾಡಬೇಕೆಂದಿಲ್ಲ. ಜಗಳ ಇಲ್ಲದ ಕಡೆ ಜಗಳ ಹುಟ್ಟುವಂತೆ ಮಾಡುವುದು ಇದರ ಉದ್ದೇಶ ಅಲ್ಲ" ಎಂದು ಗ್ರಾಮ ಪಂಚಾಯತಿಯ ಅಳವಡಿಕೆಯನ್ನು ಸಮರ್ಥಿಸುತ್ತಾರೆ.

**ಮುಂದೇನಾಯ್ತು ?** : ಹೆಗಡೆಯವರು ಅಷ್ಟೊಂದು ಆಸಕ್ತಿಯಿಂದ ಮಂಡಿಸಿದ ಮಸೂದೆಯನ್ನು ಇನ್ನೂ ಹೆಚ್ಚಿನ ಪರಿಶೀಲನೆಗೆ joint select ಕಮಿಟಿಗೆ ಒಪ್ಪಿಸಲಾಯಿತು. ಜಂಟೀ ಸದನ ಸಮಿತಿಯಲ್ಲಿ ೧೫ ಜನ ವಿಧಾನಸಭೆಯ ಮತ್ತು ೫ ಜನ ವಿಧಾನಪರಿಷತ್ತಿನ ಸದಸ್ಯರು ಇದ್ದರು.

**೧೮ ವರ್ಷದ ಅಜ್ಞಾತವಾಸ** : ೧೯೬೫-೧೯೮೩ರ ಅವಧಿಯಲ್ಲಿ ರಾಜ್ಯ ಮತ್ತು ರಾಷ್ಟ್ರ ಮಟ್ಟದಲ್ಲಿ ಉಂಟಾದ ತೀವ್ರ ರಾಜಕೀಯ ಬದಲಾವಣೆಗಳಿಂದ ಹೆಗಡೆಯವರ ವಿಕೇಂದ್ರಿಕರಣದ ಕನಸು ನಿರೀಕ್ಷೆಯಂತೆ ಬೇಗ ನನಸಾಗಲಿಲ್ಲ ಈ ಅವಧಿಯಲ್ಲಿ (೧೯೬೭-೬೮) ವೀರೇಂದ್ರ ಪಾಟೀಲ ರಾಜ್ಯದ ಮುಖ್ಯಮಂತ್ರಿಯಾದರು. ೧೯೬೯ರಲ್ಲಿ ಕಾಂಗ್ರೆಸ್ ಇಬ್ಭಾಗವಾಯಿತು. ಹೆಗಡೆ ನಿಜಲಿಂಗಪ್ಪನವರಿಗೆ ನಿಷ್ಠರಾಗಿ ಹಲವು ವರ್ಷ ಯಾವುದೇ ಅಧಿಕಾರ ಇಲ್ಲದೇ ರಾಜಕೀಯದಲ್ಲಿ ಮುಂದುವರೆದರು. ಇಂದಿರಾ ಕಾಂಗ್ರೆಸ್ಸಿನಿಂದ ದೇವರಾಜ ಅರಸು ಅವರು ಮುಖ್ಯಮಂತ್ರಿಯಾದರು. ಅವರ ಕಾಲದಲ್ಲಿ ಅನೇಕ ಜನಹಿತ ಯೋಜನೆಗಳನ್ನು ರೂಪಿಸಲಾಯಿತು. ಆದರೆ ಸ್ಥಳೀಯ ಸಂಸ್ಥೆಗಳಿಗೆ ದೀರ್ಘ ಕಾಲ (೮ ವರ್ಷ) ಚುನಾವಣೆಗಳೇ ನಡೆಯಲಿಲ್ಲ. ೧೯೭೩-೭೭ರ ತುರ್ತು ಪರಿಸ್ಥಿತಿಯು ನಂತರ ೧೯೮೩-೧೯೮೫ರವರೆಗೆ (ಬಿಜೆಪಿಯವರ ಸಹಯೋಗದೊಂದಿಗೆ) ನಂತರ ೧೯೮೫ ರಿಂದ ೧೯೮೮ರವರೆಗೆ ಜನತಾ ಪಾರ್ಟಿ ಸರ್ಕಾರದ ಮುಖ್ಯಮಂತ್ರಿಯಾಗಿ ಹೆಗಡೆ ಕಾರ್ಯ ನಿರ್ವಹಿಸಿದರು. ಕರ್ನಾಟಕದ ಪ್ರಪ್ರಥಮ ಕಾಂಗ್ರೆಸ್ಸೇತರ ಮುಖ್ಯಮಂತ್ರಿ ಎಂಬ ಹೆಗ್ಗಳಿಕೆಗೆ ಪಾತ್ರರಾಗಿದ್ದರು. ೧೯೭೨ ರಿಂದ ೧೯೭೮ ರವರೆಗೆ ಹೆಗಡೆ ವಿಧಾನ ಪರಿಷತ್ತಿನಲ್ಲಿ ವಿರೋಧ ಪಕ್ಷದ ನಾಯಕರಾಗಿ ಕಾರ್ಯನಿರ್ವಹಿಸಿದರು. ಅವರು ಸದಾ ಕಾಲ ತಮ್ಮ ಪ್ರತಿಭೆಯಿಂದ ಸರ್ಕಾರವನ್ನು ತುದಿಗಾಲ ಮೇಲೆ ನಿಲ್ಲುವಂತೆ ಮಾಡುತ್ತಿದ್ದರು.

**ಹೆಗಡೆ ಕನಸು ನನಸು** : ೧೯೮೩ರ ಹೆಗಡೆಯವರ ಕನಸಿನ ಪಂಚಾಯತ್ ರಾಜ್ ಮಸೂದೆ ೧೯೮೫ ಆಗಸ್ಟ್ ನಲ್ಲಿ ಕಾನೂನಾಯಿತು. ಕಾನೂನಿನ ನಂತರ ೧೯೮೭ ಏಪ್ರಿಲ್ ನಲ್ಲಿ ಈ ಸಂಸ್ಥೆಗಳು ಸಂಪೂರ್ಣವಾಗಿ ಅಸ್ತಿತ್ವದಲ್ಲಿ ಬಂದವು. ಸುಮಾರು ೨ ವರ್ಷಗಳ ಕಾಲ ಈ ಮಸೂದೆಗೆ ರಾಷ್ಟ್ರಪತಿಗಳಿಂದ ಒಪ್ಪಿಗೆ ಪಡೆಯಲು ವಿಳಂಬವಾಯಿತು. ಕಾರಣ ಕೇಂದ್ರದಲ್ಲಿ ಇದ್ದ ಕಾಂಗ್ರೆಸ್ ಸರಕಾರ ಜನತಾ ಪಕ್ಷದ ರಾಜ್ಯ ಸರ್ಕಾರದೊಂದಿಗೆ ಸೂಕ್ತವಾಗಿ ಸ್ಪಂದಿಸಲಿಲ್ಲ. ೧೯೮೩ರ ಕಾನೂನಿನ ಅನ್ವಯ ಮೂರು ಹಂತದ ಚುನಾಯಿತ ಸಂಸ್ಥೆಗಳು ಮಂಡಳ ಪಂಚಾಯತಿ, ತಾಲೂಕು ಪಂಚಾಯತಿ ಸಮಿತಿ ಮತ್ತು ಜಿಲ್ಲಾ ಪಂಚಾಯತಿ ಅಸ್ತಿತ್ವದಲ್ಲಿ ಬಂದವು. ನ್ಯಾಯ ಪಂಚಾಯಿತಿಗಳ ರಚನೆಯನ್ನು ೫ ವರ್ಷ ಮುಂದೂಡಲಾಯಿತು. ಕೊನೆಗೂ ಇವು ಅಸ್ತಿತ್ವದಲ್ಲಿ ಬರಲೇ ಇಲ್ಲ. ಈ ಹಿಂದಿನ ತಾಲೂಕು ಬೋರ್ಡ್ ಬದಲಾಗಿ ಅಸ್ತಿತ್ವಕ್ಕೆ ಬಂದ ತಾಲೂಕು ಪಂಚಾಯತಿ ಸಮಿತಿಯು ಯಾವುದೇ ವಿಶೇಷ ಅಧಿಕಾರ ಹೊಂದಿರಲಿಲ್ಲ. ನಿಜವಾದ ಅಧಿಕಾರವು ಗ್ರಾಮ ಪಂಚಾಯತಿಯ ಬದಲಿಗೆ ಹಲವಾರು ಗ್ರಾಮಪಂಚಾಯತಿ ಸೇರಿ ರಚನೆಗೊಂಡ ಮಂಡಳ ಪಂಚಾಯತಿ ಮತ್ತು ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪಂಚಾಯತಿಗೆ ವರ್ಗಾವಣೆಗೊಂಡಿತ್ತು ಈ ಎರಡೂ ಸಂಸ್ಥೆಗಳು ಚುನಾಯಿತ ಪ್ರತಿನಿಧಿಗಳನ್ನು ಒಳಗೊಂಡಿದ್ದವು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡದವರಿಗೆ ಶೇ. ೧೮% ಮೀಸಲಾತಿ ಅಲ್ಲದೆ, ಎಲ್ಲಾ ವರ್ಗಗಳಲ್ಲಿ ಶೇ. ೨೫% ಮಹಿಳೆಯರಿಗೆ ಮೀಸಲಾತಿ ಕಲ್ಪಿಸಿದ್ದು ಈ ಮಸೂದೆಯ ವಿಶೇಷವಾಗಿತ್ತು. ಮಹಿಳೆಯರಿಗೆ ಸ್ಥಳೀಯ ಸಂಸ್ಥೆಗಳಲ್ಲಿ ಅತ್ಯಂತ ಹೆಚ್ಚಿನ ಮೀಸಲಾತಿಯನ್ನು ಒದಗಿಸಿದ ರಾಷ್ಟ್ರದ ಪ್ರಥಮ ರಾಜ್ಯ ಕರ್ನಾಟಕವಾಗಿತ್ತು.

**ವ್ಯಾಪಕ ಅಧಿಕಾರ ಮತ್ತು ಪ್ರಭಾವ ವಲಯ :** ಈ ಮಂಡಲ ಪಂಚಾಯಿತಿಗೆ ವಾರ್ಷಿಕ ರೂ. ೫ ಲಕ್ಷ ಅಭಿವೃದ್ಧಿ ಕಾರ್ಯಗಳಿಗಾಗಿ ಅನುದಾನ ಒದಗಿಸುವುದಲ್ಲದೇ ೨೭೭ ವಿವಿಧ ಅಭಿವೃದ್ಧಿ ಯೋಜನೆಗಳ ಅನುಷ್ಠಾನ ನಿರ್ವಹಣೆಯನ್ನು ಮಂಡಳ ಪಂಚಾಯಿತಿಗಳಿಗೆ ಒಪ್ಪಿಸಲಾಯಿತು. ಇದರಿಂದ ಸ್ಥಳೀಯವಾಗಿ ಮಂಡಳ ಪಂಚಾಯತಿಗಳ ಅಧ್ಯಕ್ಷರು, ಸದಸ್ಯರು ರಾಜಕೀಯವಾಗಿ ಬೆಳೆಯಲು ಅನುಕೂಲವಾಯಿತು. ಶಾಸಕರ ಪ್ರಭಾವ ವಲಯ ಮಸುಕಾಯಿತು. ಸುಮಾರು ೮೦೦೦ ದಷ್ಟು ಇದ್ದ ಗ್ರಾಮ ಪಂಚಾಯತಿಗಳ ಸಂಖ್ಯೆ ಪುನರ್ ರಚನೆಯಿಂದ ೨೫೩೬ ಮಂಡಳಗಳಾಗಿ ಪುನರ್ ರಚನೆಗೊಂಡವು. ಗ್ರಾಮ ಸಭೆಗಳು ಗ್ರಾಮದ ಅಭಿವೃದ್ಧಿಯಲ್ಲಿ ಪ್ರಮುಖ ಪಾತ್ರ ವಹಿಸುವಂತಾಯಿತು. ಯಾವ ಶಾಸನಬದ್ಧ ಅಧಿಕಾರ ಹೊಂದದ ತಾಲೂಕು ಪಂಚಾಯತಿ ಸಮಿತಿಗಳು ಜಿಲ್ಲಾ ಪಂಚಾಯತ್ ಅಧೀನ ಸಂಸ್ಥೆಗಳಾಗಿ ಮುಂದುವರೆದವು. ಅದರಂತೆ ಜಿಲ್ಲಾ ಮಟ್ಟದಲ್ಲಿ ಜಿಲ್ಲಾ ಪರಿಷತ್ತುಗಳು, ಜಿಲ್ಲಾ ಸರ್ಕಾರಗಳಂತೆ ಕಾರ್ಯನಿರ್ವಹಿಸುವಂತೆ ವ್ಯವಸ್ಥೆ ಮಾಡಲಾಯಿತು. ಜಿಲ್ಲಾ ಪರಿಷತ್ತಿನ ಅಧ್ಯಕ್ಷರಿಗೆ ರಾಜ್ಯಮಂತ್ರಿ State Minister ಮತ್ತು ಉಪಾಧ್ಯಕ್ಷರಿಗೆ Dy Minister ಉಪಮಂತ್ರಿ ಸ್ಥಾನಮಾನ ನೀಡಲಾಯಿತು. ಗೌರವ ಸಂಭಾವನೆ ನಿಗದಿಪಡಿಸಲಾಯಿತು.

ಜಿಲ್ಲಾ ಪರಿಷತ್ತಿನ ಮುಖ್ಯ ಕಾರ್ಯನಿರ್ವಹಣಾಧಿಕಾರಿಯನ್ನು Chief Secretary ಮುಖ್ಯ ಕಾರ್ಯದರ್ಶಿ ಎಂದು ಕರೆಯಲಾಯಿತು. ರಾಜ್ಯಸರ್ಕಾರ ನಿರ್ವಹಿಸುತ್ತಿದ್ದ ಳಳ ಪ್ರಮುಖ ಅಭಿವೃದ್ಧಿ ಯೋಜನೆಗಳನ್ನು ಅಂದರೆ ಶೇ. ೮೦% ರಾಜ್ಯವಲಯದ ಅಭಿವೃದ್ಧಿ ಯೋಜನೆಗಳನ್ನು ಜಿಲ್ಲಾ ಪರಿಷತ್ತಿಗೆ ವರ್ಗಾಯಿಸಲಾಯಿತು.

ಕೇಂದ್ರ ಸರ್ಕಾರ ಮತ್ತು ಒಂದಕ್ಕಿಂತ ಹೆಚ್ಚು ಜಿಲ್ಲೆಗೆ ವ್ಯಾಪಿಸಿದ ಯೋಜನೆಗಳು, ಮಧ್ಯಮ ಮತ್ತು ಬೃಹತ್ ನೀರಾವರಿ ಯೋಜನೆಗಳು ಮಾತ್ರ ರಾಜ್ಯ ಸರ್ಕಾರದ ನಿಯಂತ್ರಣ ದಲ್ಲಿ ಉಳಿದವು.

ಮೊದಲನೆಯ ಪಂಚಾಯತ್ ರಾಜ್ ಚುನಾವಣೆಯಲ್ಲಿ (೧೯೮೭) ೧೯ ಜಿಲ್ಲಾ ಪರಿಷತ್ತುಗಳ ಪೈಕಿ ೧೩ ಜಿಲ್ಲಾ ಪಂಚಾಯತ್ ಮತ್ತು ೨೫೩೬ ಮಂಡಳಗಳಲ್ಲಿ ಅರ್ಧದಷ್ಟು ಮಂಡಳಗಳಲ್ಲಿ ಜನತಾಪಾರ್ಟಿ ಅಧಿಕಾರಕ್ಕೆ ಬಂದಿತು. ಇದೇ ಕಾರಣದಿಂದ ೧೯೮೫ರ ರಾಜ್ಯ ಚುನಾವಣೆಯಲ್ಲಿ ಜನತಾ ಪಾರ್ಟಿ ರಾಜ್ಯದಲ್ಲಿ ವ್ಯಾಪಕವಾಗಿ ಬೇರೂರಲು ಸಹಾಯಕವಾಯಿತು. ಹೆಗಡೆಯವರ ನಾಯಕತ್ವದಲ್ಲಿ ಅವರ ಪಂಚಾಯತ್ ರಾಜ್ ಪರಿಕಲ್ಪನೆಯ ಕನಸನ್ನು ನನಸಾಗಿಸುವಲ್ಲಿ ತ್ರಿಕರಣಪೂರ್ವಕವಾಗಿ (ಕಾಯಾ ವಾಚಾ ಮನಸಾ) ಅವರಿಗೆ ಸಂಪೂರ್ಣ ಸಾಥ್ ನೀಡಿದವರಲ್ಲಿ ಅಂದಿನ ಪಂಚಾಯತ್ ರಾಜ್ ಮಂತ್ರಿ ದಿ। ಅಬ್ದುಲ್ ನಜೀರಸಾಹೇಬರ ಪಾತ್ರ ಅತ್ಯಂತ ಪ್ರಮುಖವಾಗಿತ್ತು. ಅವರು ಗ್ರಾಮೀಣರಲ್ಲಿ 'ನೀರಸಾಬ್' ಎಂದೇ ಜನಪ್ರಿಯರಾಗಿದ್ದರು.

**ಮತದಾನದ ವಯಸ್ಸು ಇಳಿಕೆ (೧೯೮೭) :** ಪಂಚಾಯತ್ ರಾಜ್ ಆಡಳಿತದಲ್ಲಿ ಯುವಶಕ್ತಿಯು ಪ್ರಮುಖ ಪಾತ್ರವಹಿಸಬೇಕು ಎಂಬ ಉದ್ದೇಶದಿಂದ ದೇಶದಲ್ಲಿಯೇ ಪ್ರಥಮ ಬಾರಿಗೆ ಸ್ಥಳೀಯ ಸಂಸ್ಥೆಗಳ ಮತದಾನದ ವಯಸ್ಸನ್ನು ೨೧ ರಿಂದ ೧೮ಕ್ಕೆ ಇಳಿಸಲಾಯಿತು. ಅಲ್ಲದೇ ಪಕ್ಷಾಂತರ ನಿಷೇಧ ಕಾಯಿದೆಯನ್ನು ಈ ಸಂಸ್ಥೆಗಳಿಗೂ ಅನ್ವಯಿಸುವ ಮೂಲಕ ಆಡಳಿತದಲ್ಲಿ ಸ್ಥಿರತೆಯನ್ನು ನೀಡಲಾಯಿತು. ಇದೇ ಕ್ರಮವನ್ನು ಅನುಸರಿಸಿ ೧೯೮೯ರಲ್ಲಿ ಕೇಂದ್ರ ಸರ್ಕಾರ ಸಾರ್ವತ್ರಿಕವಾಗಿ ಮತದಾನದ ವಯಸ್ಸನ್ನು ೧೮ಕ್ಕೆ ಇಳಿಸಿತು. ಇದು ಹೆಗಡೆಯವರು ಜಾರಿಯಲ್ಲಿ ತಂದ ಪ್ರಮುಖ ಬದಲಾವಣೆ, ಯುವಶಕ್ತಿಯ ರಾಜಕೀಯ ಮುನ್ನಡೆಗೆ ಅವಕಾಶವಾಯಿತು.

**ರಾಷ್ಟ್ರಮಟ್ಟದ ಚಿಂತಕರ ಸಲಹೆ :** ಅಭಿವೃದ್ಧಿ ಕಾರ್ಯಕ್ರಮಗಳನ್ನು ರೂಪಿಸುವಲ್ಲಿ ದೂರದರ್ಶಿಗಳಾಗಿದ್ದ ಹೆಗಡೆ ತಮ್ಮ ಚಿಂತನೆಗೆ ಸಹಕಾರಿಯಾಗುವಂತೆ ರಾಷ್ಟ್ರಮಟ್ಟದ ಚಿಂತಕರಾದ, ಮೇಧಾವಿಗಳಾದ ಶ್ರೀಯುತ ಎಸ್.ಕೆ. ಡೇ ರಜನಿ ಕೊಠಾರಿ, ಎಲ್.ಕೆ. ಜೈನ, ಪಿ.ಆರ್. ನಾಯಕ್, ಡಿ.ಎಂ. ನಂಜುಂಡಪ್ಪ ಮುಂತಾದ ತಜ್ಞರ ಸೇವೆಯನ್ನು, ಮಾರ್ಗದರ್ಶನವನ್ನು ಯಶಸ್ವಿಯಾಗಿ ಬಳಸಿಕೊಂಡರು.

**ಮೌಲ್ಯಮಾಪನ :** ಪಂಚಾಯತ್ ರಾಜ್ ಆಡಳಿತ ವಿಕೇಂದ್ರಿಕರಣ ಪ್ರಕ್ರಿಯೆಯಲ್ಲಿ ಈ ಹೊಸ ಪ್ರಯೋಗ ಹಲವು ರಂಗಗಳಲ್ಲಿ ಮಾಡಿದ ಪ್ರಯೋಗವನ್ನು ಜನ ಮೆಚ್ಚಿಕೊಂಡರು. ಹಣಕಾಸು ವ್ಯವಸ್ಥೆಗೆ ಆರಂಭದಲ್ಲಿ ಯಾವುದೇ ರೂಪುರೇಷೆ ರೂಪಿಸಿರಲಿಲ್ಲ. [ಸಂಪೂರ್ಣ ಭೂ ಕಂದಾಯ ಮತ್ತು ಹಲವು ಉಪಕರಗಳ ಆದಾಯವನ್ನು ಈ ಸಂಸ್ಥೆಗಳಿಗೆ ನೀಡುವಲ್ಲಿ ಹೆಗಡೆ ಆಸಕ್ತಿ ಹೊಂದಿದ್ದರು.] ಆದ್ದರಿಂದ ಜಿಲ್ಲಾ ಪಂಚಾಯತ್, ಮಂಡಳ ಪಂಚಾಯತ್ ನಿರೀಕ್ಷಿತ ಪ್ರಮಾಣದಲ್ಲಿ ಪ್ರಗತಿ ಸಾಧಿಸಲಿಲ್ಲ. ನಾಮಕರಣ ವ್ಯವಸ್ಥೆಯನ್ನು ರಾಜಕೀಯಕ್ಕಾಗಿ ದುರುಪಯೋಗ ಪಡಿಸಿಕೊಳ್ಳಲಾಯಿತು. ಇದೊಂದು ಪ್ರಾಯೋಗಿಕ ಪ್ರಯತ್ನ, ಹೆಚ್ಚಿಗೆ ಏನನ್ನೂ ಸಾಧಿಸದಿದ್ದರೂ ಹಿಂದಿನ ಅಧಿಕಾರ ವ್ಯವಸ್ಥೆಗಿಂತಲೂ ಮೇಲು ಎಂಬುದು ಸಾರ್ವತ್ರಿಕ ಅಭಿಪ್ರಾಯವಾಗಿತ್ತು (ಪ್ರಜಾವಾಣಿ ಸಮೀಕ್ಷೆ).

**ಬದಲಾದ ರಾಜಕೀಯ :** ಒಂದು ಅವಧಿ ಪೂರೈಸಿದ ನಂತರ (೧೯೮೭-೯೨) ಹೆಗಡೆ ಸರ್ಕಾರ ಬದಲಾಗಿತ್ತು.

ಕಾಂಗ್ರೆಸ್ ಅಧಿಕಾರ ಗದ್ದುಗೆ ಹಿಡಿಯಿತು. ೧೯೯೩ರಲ್ಲಿ (ಮೇ ೧೦ ರಿಂದ) ಕರ್ನಾಟಕ ಪಂಚಾಯತಿ ಕಾನೂನು ಜಾರಿಯಲ್ಲಿ ಬಂದಿತು. ಅಂದಿನ ಪಂಚಾಯತ್ ರಾಜ್ ಮಂತ್ರಿ ಎಂ.ವೈ. ಘೋರ್ಪಡೆಯವರು ಇನ್ನೂ ಹೆಚ್ಚು ಪ್ರಗತಿಪರವಾದ ಮಹಿಳೆಯರಿಗೆ ಶೇ. ೩೩% ಮೀಸಲಾತಿ, ಗ್ರಾಮ ಪಂಚಾಯತಿಗಳಿಗೆ ಪಕ್ಷಾತೀತ ಚುನಾವಣೆ, ತಾಲ್ಲೂಕು ಪಂಚಾಯತಿಗೆ ನೇರ ಚುನಾವಣೆ ಮುಂತಾದ ಬದಲಾವಣೆಗಳನ್ನು ತಂದರು. ಮುಂದಿನ ಯಾವುದೇ ಸರ್ಕಾರಗಳು ಏನೇ ಬದಲಾವಣೆ ತಂದರೂ ಅವುಗಳು ಹೆಗಡೆಯವರ ಹಾಕಿದ ಬುನಾದಿಯ ಮೇಲೆ ಮುಂದುವರೆದವುಗಳು ಬದಲಾವಣೆಗೊಂಡವುಗಳು ಆಗಿದ್ದವು ಎಂಬುದು ಪ್ರಮುಖವಾದ ಅಂಶ.

**ಹೆಗಡೆ ವ್ಯಕ್ತಿತ್ವ :** "೧೯೫೪ರಲ್ಲಿ ಸಾರ್ವಜನಿಕ ಕ್ಷೇತ್ರ ಪ್ರವೇಶಿಸಿದ ಹೆಗಡೆ ಅನೇಕ ವಿಕ್ರಮಗಳನ್ನು ಸಾಧಿಸಿದರು. ಕೇವಲ ರಾಜಕಾರಣಿಯಾಗಿರದೇ ಶ್ರೇಷ್ಠ ಚಿಂತಕರಾಗಿದ್ದರು. ರಾಜಕಾರಣದ ಎಲ್ಲಾ ವರಸೆಗಳನ್ನು ದಿನನಿತ್ಯದ ರಾಜಕಾರಣ ದಲ್ಲಿ ಪ್ರಯೋಗ ಮಾಡಿ ರಾಜ್ಯಶಾಸ್ತ್ರದ ವಿದ್ಯಾರ್ಥಿಗಳಿಗೆ ಬೋಧಕರಾಗಿದ್ದಾರೆ. ಜಾತ್ಯಾತೀತ ಪ್ರಜ್ಞೆಯು ಕೇವಲ ಉಪದೇಶಕ್ಕಲ್ಲ. ಆಚರಣೆಗೂ ಸಾಧ್ಯವೆಂದು ತಮ್ಮ ಬದುಕಿನಲ್ಲಿ ತೋರಿಸಿಕೊಟ್ಟಿದ್ದಾರೆ. ಹೆಗಡೆಯವರು ಎರಡು ವಿಚಾರಗಳಿಗೆ ಹೆಚ್ಚಿನ ಪ್ರಾಧಾನ್ಯತೆ ಕೊಟ್ಟರು. ಒಂದು ರಾಜಕೀಯ ಸಿದ್ಧಾಂತ ಮತ್ತು ಗಾಂಧೀಜಿ ಆಶಯದಂತೆ ಗ್ರಾಮದ ಕೊನೆಯ ವ್ಯಕ್ತಿಯ ತನಕ ಸರ್ಕಾರದ ಸತ್ಫಲಗಳು ತಲುಪಬೇಕು"



## ಗ್ರಂಥಋಣ


೧. **ಮೈಸೂರು ಲೋಕಲ್ ಬೋರ್ಡ್ ಮತ್ತು ಗ್ರಾಮ ಪಂಚಾಯತಿ ಕಾನೂನು** ೧೯೫೯.
೨. **ಮೈಸೂರು ಪಂಚಾಯತಿ ಬಿಲ್** ೧೯೬೪. (English.)
೩. **ಕರ್ನಾಟಕ ಜಿಲ್ಲಾ ಪರಿಷತ್, ತಾಲೂಕು ಪಂಚಾಯತಿ, ಮಂಡಳ ಪಂಚಾಯಿತಿ ಅಧಿನಿಯಮ,** ೧೯೮೩.
೪. **ಕರ್ನಾಟಕ ಪಂಚಾಯತಿ ಕಾನೂನು –** ೧೯೯೩.
೫. **ಕರ್ನಾಟಕ ಶಾಸನ ಸಭೆಯ ವರದಿಗಳು ಜುಲೈ ೧೩,** ೧೯೬೪.
೬ **ಸವಿನೆನಪು,** ಹೆಗಡೆ ಸಂಸ್ಮರಣೆ, ೨೦೦೫.
೭. **ಕರ್ನಾಟಕ ರಾಜ್ಯ ಗ್ಯಾಸೆಟಿಯರ್ ಸಂಪುಟಗಳು.**
೮. ಪತ್ರಿಕಾ ವರದಿಗಳು.

ಸಿ ಬಿ ಪಾಟೀಲ*

# ಭಾರತೀಯ ಸಾಂಸ್ಕೃತಿಕ ಸಂಪತ್ತಿನ ನಿಷಿದ್ಧ ವ್ಯಾಪಾರ : ಜಾಗತಿಕ ಚಿಂತನೆ

ಭಾರತದ ಸಾಂಸ್ಕೃತಿಕ ಸಂಪತ್ತು ಶರವೇಗದಲ್ಲಿ ಸಾಗುತ್ತಿರುವ ನಗರೀಕರಣ ಪ್ರವೃತ್ತಿ, ಹೆಚ್ಚುತ್ತಿರುವ ಪಾಶ್ಚಾತ್ಯ ಸಂಸ್ಕೃತಿಯ ಪ್ರಭಾವ, ಪರಿಸರ ಮಾಲಿನ್ಯ, ಇತಿಹಾಸ ಪ್ರಜ್ಞೆಯಿಲ್ಲದ ಜನರ ಉದಾಸೀನತೆ ಮುಂತಾದ ಅಪಾಯಕಾರಿ ಆತಂಕಗಳನ್ನು ಎದುರಿಸುತ್ತಿದೆ.

ಇತಿಹಾಸ, ಕಲೆ ಹಾಗೂ ನಿಸರ್ಗಪ್ರೇಮಿಗಳಲ್ಲಿ ಸಾಂಸ್ಕೃತಿಕ ಸಂಪತ್ತಿನ ಮೇಲೆ ವಿಶ್ವವ್ಯಾಪಿಯಾದ ಈ ಆಪತ್ತುಗಳಿಂದಾಗುವ ಪರಿಣಾಮ ಮತ್ತು ಅವುಗಳ ಅಳಿವು-ಉಳಿವು ಮುಂಚೂಣಿಯಲ್ಲಿರುವ ಗಮನಾರ್ಹ ಚರ್ಚೆಯ ವಿಷಯವಾಗಿದೆ. ಇತ್ತ ವಿಶ್ವ ಸಮುದಾಯಗಣದ ವಿಶ್ವಸಂಸ್ಥೆ (UNESCO), ಐಕ್ರಾಮ್ (ICCROM), ಐಕಮೊಸ್ (ICOMS) ಗಳು ಹಾಗೂ ಅವುಗಳ ಸದಸ್ಯ ರಾಷ್ಟ್ರಗಳು ಹಾಗೂ ಉಳಿದ ಸರ್ಕಾರಗಳು ಇಡೀ ಮಾನವ ಕುಲವನ್ನೆ ಸಾಂಸ್ಕೃತಿಕ ಸಂಪತ್ತಿನ ಸಂರಕ್ಷಣೆಗಾಗಿ ಕಳಕಳಿಯಿಂದ ಅವಿರತವಾಗಿ ಬಿನ್ನವಿಸಿಕೊಳ್ಳುತ್ತಿವೆ. ಇದರ ಉಳಿವಿಗಾಗಿ ನಿರಂತರ ಪ್ರಯತ್ನವನ್ನು ಮಾಡುತ್ತಲಿವೆ.

ಭಾರತೀಯ ಸಾಂಸ್ಕೃತಿಕ ಕಲಾತ್ಮಕ ವಸ್ತುಗಳ ವ್ಯಾಮೋಹ ಸ್ವಾತಂತ್ರಪೂರ್ವದಲ್ಲಿ ಪಾಶ್ಚಿಮಾತ್ಯ ದೇಶೀಯರಿಂದ ಪ್ರಾರಂಭವಾಯಿತು. ಕಾಲಾನುಕ್ರಮದಲ್ಲಿ ಈ ಪುರಾವಶೇಷಗಳ ಸಂಗ್ರಹಣೆ ವಿವಿಧ ರೂಪವನ್ನು ಪಡೆದುಕೊಂಡು ಅವುಗಳ ವ್ಯಾಪಾರೀಕರಣ ಅದರಲ್ಲೂ ವಿಶೇಷವಾಗಿ ಭಾರತದ ಸ್ವಾತಂತ್ರ್ಯೋತ್ತರದಲ್ಲಿ ಬೆಳೆದುಬಂದಿದೆ. ಇತ್ತೀಚಿನ ದಿನಗಳಲ್ಲಿ ಇದು ಅತ್ಯಂತ ಪ್ರಭಾವಶಾಲಿಯಾಗಿ ಭಾರತವೇ ಅಲ್ಲದೆ ಜಗತ್ತಿನ ಅನೇಕ ರಾಷ್ಟ್ರಗಳಲ್ಲಿ ಹೆಮ್ಮರವಾಗಿ ಬೇರೂರಿದೆ. ಇದೊಂದು ಅಪಾಯಕಾರಿಯಾದ ಬೆಳವಣಿಗೆಯಾಗಿದ್ದು ಸಾಂಸ್ಕೃತಿಕ ಸಂಪತ್ತಿನ ವಿನಾಶ, ನಿಷಿದ್ಧ ವ್ಯಾಪಾರ ಹಾಗೂ ಕಳ್ಳಸಾಗಾಣಿಕೆಗೆ ದಾರಿಯಾಗಿದೆ.

ಶಿವಪುರದ ನಟರಾಜ, ತಾಮ್ಲುಕ್‌ನ ಆವೆಮಣ್ಣಿನ ಯಕ್ಷಿಯ ಫಲಕ, ತಿರುವಲಕ್ಕುಡಿಯ ನಟರಾಜ, ನಳಂದ ಬೌದ್ಧ ವಿಹಾರದ ಗಾರೆಯಚ್ಚಿನ ಅಲಂಕೃತ ಬುದ್ಧನ ತಲೆ, ಅಮೀನಿನ ಠಾಕೂರ್ ದೇವಸ್ಥಾನದ ಕಂಬಗಳು, ಪಾತೂರಿನ ನಟರಾಜ, ಬೋಧಗಯಾದ ಬುದ್ಧ, ಅಲಮೋಡಾ ಜಾಗೇಶ್ವರ ದೇವಸ್ಥಾನದ ಲಕುಲೀಶ ಇತ್ಯಾದಿ ಭಾರತೀಯ ಪ್ರಾಚೀನ ಮೂರ್ತಿಗಳು ಕಳ್ಳಸಾಗಾಣಿಕೆಯಾದುದಕ್ಕೆ ಅತ್ಯುತ್ತಮ ಉದಾಹರಣೆಗಳು.

## ನಿಷಿದ್ಧ ವ್ಯಾಪಾರ ಮತ್ತು ಕಳ್ಳ ಸಾಗಾಣಿಕೆ

ಸಾಂಸ್ಕೃತಿಕ ಸಂಪತ್ತಿನ ವಿಧ್ವಂಸಕ ಕೃತ್ಯ ಹಾಗೂ ಕಳ್ಳತನ ತದನಂತರ ಅದರ ಸಾಗಾಣಿಕೆ ಮತ್ತು ನಿಷಿದ್ಧ ವ್ಯಾಪಾರ ಒಂದಕ್ಕೊಂದು ಅತ್ಯಂತ ನಿಕಟ ಸಂಪರ್ಕವನ್ನು ಹೊಂದಿವೆ. ಕಳ್ಳಸಾಗಾಣಿಕೆಯ ಕಲಾತ್ಮಕ ವಸ್ತುಗಳು ಭಾರತ ಹಾಗೂ ವಿದೇಶಗಳಲ್ಲಿ ವಿವಿಧ ವ್ಯಕ್ತಿ ಹಾಗೂ ಸ್ವರೂಪಗಳ ಮೂಲಕ ಉತ್ತಮವಾದ ಬೆಲೆಗೆ ಮಾರಾಟವಾಗುವ ಅಂತರ್‌ರಾಷ್ಟ್ರೀಯ ಮಾರುಕಟ್ಟೆಗಳನ್ನು ಪ್ರವೇಶಿಸುತ್ತವೆ. ಇದಕ್ಕಿರುವ ಕಳ್ಳಸಾಗಾಣಿಕೆಯ ಜಾಲವು ಚಾಣಾಕ್ಷ್ಯ ವ್ಯವಸ್ಥಿತ ಯೋಜನೆಯ ಮೂಲಕ ವಿವಿಧ ಹಂತಗಳಲ್ಲಿ ನಡೆಯುತ್ತ ಅನೇಕರನ್ನು ತನ್ನ ವ್ಯೂಹದಲ್ಲಿ ಸೆಳೆದುಕೊಂಡಿರುತ್ತದೆ. ಈ ಜಾಲ ಮುಖ್ಯವಾಗಿ ಸಂಪತ್ತಿನ ನಿಧಿ, ಸ್ಥಳೀಯರು, ಕಳ್ಳರು, ಮಧ್ಯವರ್ತಿಗಳು, ವ್ಯಾಪಾರಿಗಳು, ರಾಷ್ಟ್ರೀಯ ಹಾಗೂ ಅಂತರ್‌ರಾಷ್ಟ್ರೀಯ ಮಾರುಕಟ್ಟೆಗಳು ಮತ್ತು ಖರೀದಿದಾರರನ್ನು ಸೆಳೆದುಕೊಂಡಿರುತ್ತದೆ. ಈ ಕೆಳಗಿನ ರೇಖಾ ಚಿತ್ರವು ವ್ಯವಸ್ಥಿತ ಅವ್ಯವಹಾರದ ವಿಹಂಗಮ ದೃಶ್ಯವನ್ನು ವಿವರಿಸುತ್ತದೆ.

ನಿಷಿದ್ಧ ವ್ಯಾಪಾರ ಮತ್ತು ಕಳ್ಳಸಾಗಾಣಿಕೆಯ ವಸ್ತುಗಳಲ್ಲಿ ಎಲ್ಲಾ ತರಹದ ಮೂರ್ತಿಗಳು ಹಾಗೂ ಕಲಾತ್ಮಕ ವಸ್ತುಗಳು, ವರ್ಣಚಿತ್ರಗಳು, ವರ್ಣರಂಜಿತ ಹಸ್ತಪ್ರತಿಗಳು, ನಾಣ್ಯಗಳು,

* ಉಪ ಅಧೀಕ್ಷಕ ಪುರಾತತ್ವವಿದ, ಭಾರತೀಯ ಪುರಾತತ್ವ ಸರ್ವೇಕ್ಷಣ, ಬೆಂಗಳೂರು ವಲಯ, ಕೇಂದ್ರಿಯ ಸದನ, ಕೋರಮಂಗಲ, ಬೆಂಗಳೂರು – ೫೬೦ ೦೩೪.

**Stage-I – Planning**

- Mastermind
- Middleman
- Survey
- Informers-Local Persons/ Trained Personnel
- Planning–Date of theft
- Persons Required
- Transportation & Escort
- Temporary Destination

**Stage-II- Actual Operation**

- Man-in-charge
- Vandalism & Theft
- Transport
- Temporary Destination
- Receiver
- Cooling Period

**Cultural Wealth**

**Stage-III – Final Destination**

- Market Survey
- Prosperous Buyer
- Offer
- Photographs / Samples
- Deal
- Exchange - Several Hands
- Export
- Art Markets
- Final Purchaser

ಪದಕಗಳು, ಶಸ್ತ್ರಾಸ್ತ್ರಗಳು, ಗಡಿಯಾರಗಳು ಹಾಗೂ ಆಭರಣಗಳು ಪ್ರಮುಖವಾಗಿವೆ. ಇತ್ತೀಚಿಗೆ ಪುರಾತನ ಕಟ್ಟಡಗಳಿಗೆ ಅಳವಡಿಸಲಾದ ಹಳೆಯ ಮರದ ಅಲಂಕೃತ ಸ್ತಂಭಗಳು, ಮಾಡುಗಳಲ್ಲಿರುವ ತೊಲೆಗಳು, ಬೋದಿಗೆಗಳು, ಕಟಾಂಜನಗಳು ಹಾಗೂ ತೇರಿನ ಭಾಗಗಳು ಸಹ ಈ ಜಾಲದ ಆಕರ್ಷಕ ವಸ್ತುಗಳಾಗಿವೆ.

ಅತೀ ಸುಲಭವಾಗಿ ಸಿಗುವ ಹೇರಳ ಸಂಪತ್ತೇ ಮೊದಲನೆಯ ಅಪಾಯ. ಭಾರತದ ಉದ್ದಗಲಕ್ಕೂ ಹರಡಿರುವ ಅದರಲ್ಲೂ ವಿಶೇಷವಾಗಿ ಸಂಪರ್ಕರಹಿತ ಪ್ರದೇಶ, ಅರಣ್ಯ ಮತ್ತು ಗುಡ್ಡಗಾಡು ಪ್ರದೇಶದ ಅಸಂರಕ್ಷಿತ ಸ್ಮಾರಕಗಳು ಮತ್ತು ನೆಲೆಗಳು ಈ ನಿಷಿದ್ಧ ವ್ಯಾಪಾರದ ಬಂಗಾರದ ಗಣಿಗಳಾಗಿವೆ. ರಾಷ್ಟ್ರೀಯ ಹಾಗೂ ರಾಜ್ಯದ ರಕ್ಷಿತ ಸ್ಮಾರಕಗಳು ಸಹ ಕೆಲವೊಮ್ಮೆ ಈ ಜಾಲಕ್ಕೆ ಬಲಿಯಾಗುತ್ತವೆ. ಆದರೆ ಇವುಗಳ ಪ್ರಮಾಣ ಅತ್ಯಂತ ವಿರಳವಾಗಿದೆ.

ಭಾರತದ ಬಹಳಷ್ಟು ಜನರಲ್ಲಿ ತಮ್ಮ ಸಾಂಸ್ಕೃತಿಕ ಪರಂಪರೆಯ ಮಹತ್ವ, ಲವಲವಿಕೆ ಮತ್ತು ಅರಿವು ಸಂಪೂರ್ಣ ಹಾಗೂ ಸಮರ್ಪಕವಾಗಿ ಬೇರೂರದಿರುವಾಗ, ಸಾಂಸ್ಕೃತಿಕ ಸಂಪತ್ತಿನ ನ್ಯಾಯಾಂಗ ವ್ಯವಸ್ಥೆಯ ಮಾತಂತು ದೂರವೇ. ಪ್ರಾಚ್ಯವಸ್ತುಗಳ ವರ್ತಕರು ಈ ನ್ಯೂನ್ಯತೆಯ ದುರುಪಯೋಗದಿಂದ ಸ್ಥಳೀಯ ಜನರನ್ನು ಪುಸಲಾಯಿಸಿ ವ್ಯವಹಾರವನ್ನು ನಿರ್ಭಯವಾಗಿ ಚಾಕಚಕ್ಯತೆ ಯಿಂದ ನಿರ್ವಹಿಸುತ್ತಾರೆ. ಭಾರತದ ಬಹುತೇಕ ಜನರಲ್ಲಿ ಪ್ರಾಚೀನ ಸಂಸ್ಕೃತಿಯ ವಸ್ತುಗಳನ್ನು ತಮ್ಮ ಪ್ರತಿಷ್ಠೆಯ ಕುರುಹು ಗಳಾಗಿ ಸಂಗ್ರಹಿಸುವ ಅಥವಾ ಅವುಗಳಿಂದ ಮನೆಗಳನ್ನು ಅಲಂಕರಿಸುವ ಹವ್ಯಾಸ ಪ್ರಚಲಿತವಿಲ್ಲದ ಕಾರಣ ಸಾಂಸ್ಕೃತಿಕ ಸಂಪತ್ತಿನ ವ್ಯಾಪಾರ ಭಾರತ ದೇಶದಲ್ಲಿ ಅಷ್ಟೊಂದು ಲಾಭದಾಯಕವಾಗಿಲ್ಲ. ಹೀಗಾಗಿ ಈ ವ್ಯಾಪಾರಿಗಳಿಗೆ ಬಹು ಬೆಲೆಯ ಅಂತರ್‌ರಾಷ್ಟ್ರೀಯ ಮಾರುಕಟ್ಟೆಗಳನ್ನು ಪ್ರವೇಶಿಸುವುದು ಅನಿವಾರ್ಯವಾಗಿದೆ.

ಮೂಲ ಸ್ವರೂಪದ ಪ್ರಾಚ್ಯಾವಶೇಷಗಳ ಮಾದರಿ ತಯಾರಿಸುವದು ಸಾಂಸ್ಕೃತಿಕ ಸಂಪತ್ತು ಎದುರಿಸುತ್ತಿರುವ ಇನ್ನೊಂದು ಗಂಭೀರವಾದ ಸಮಸ್ಯೆ. ಈ ತರಹದ ಮಾದರಿ ಗಳನ್ನು ತಯಾರಿಸಿ ಅವುಗಳನ್ನು ನಿಜವಾದ ಪ್ರಾಚ್ಯಾವಶೇಷಗಳ ಸ್ಥಾನದಲ್ಲಿರಿಸಿ, ಕಳ್ಳಸಾಗಾಣಿಕೆ ಮಾಡಿ ಮಾರಾಟ

ಮಾಡಲಾಗುತ್ತದೆ. ಈ ಮೇಲೆ ಹೇಳಿದ ಶಿವಪುರಂನ ನಟರಾಜಮೂರ್ತಿ ಮತ್ತು ಅಮೀನಿನ ಸ್ಥಂಭಗಳು ಈ ತರಹದ ನಕಲಿಗೆ ಅತ್ಯುತ್ತಮ ಉದಾಹರಣೆಗಳಾಗಿವೆ. ಈ ಅಮೂಲ್ಯವಾದ ಪ್ರಾಚ್ಯಾವಶೇಷಗಳ ಸ್ಥಾನಗಳಲ್ಲಿ ಅದೇ ರೀತಿಯ ಮಾದರಿಗಳನ್ನು ಮಾಡಿರಿಸಿ, ಮೂಲ ಮೂರ್ತಿಗಳು ನಿಷಿದ್ಧ ವ್ಯಾಪಾರಕ್ಕೆ ಬಲಿಯಾಗಿ ಅವುಗಳು ಲಂಡನ್ ನಗರದ ಮಾರುಕಟ್ಟೆಯಲ್ಲಿ ಕಾಣಿಸಿಕೊಂಡವು. ಅದೃಷ್ಟವಶಾತ್, ಅವುಗಳನ್ನು ಪುನಃ ಸ್ವಾಧೀನಪಡಿಸಿಕೊಂಡು ಭಾರತ ದೇಶಕ್ಕೆ ತರಲಾಗಿದೆ.

ಅತ್ಯಮೂಲ್ಯವಾದ ಪ್ರಾಚ್ಯಾವಶೇಷಗಳನ್ನು ಪ್ರದರ್ಶಿಸುವ ವಸ್ತು ಸಂಗ್ರಹಾಲಯಗಳು ಮತ್ತು ಕಲಾಲಂಕರಣಗಳು ಸಹ ದರೋಡೆ ಹಾಗೂ ಕಳ್ಳತನಕ್ಕೆ ಒಳಪಡುತ್ತವೆ. ಆದರೆ ಈ ಕೃತ್ಯಗಳು ಭಾರತ ದೇಶದ ವಸ್ತು ಸಂಗ್ರಹಾಲಯಗಳಲ್ಲಿ ಅತೀ ವಿರಳವಾಗಿವೆ.

ಪುರಾವಶೇಷಗಳಿಗಾಗಿ ನಿಧಿ ಹುಡುಕುವುದು, ಪುರಾತನ ನೆಲೆಗಳನ್ನು ಅಗೆಯುವುದು ಮತ್ತು ಆಕಸ್ಮಿಕವಾಗಿ ದೊರೆತ ನಿಧಿಗಳನ್ನು ನಾಶಪಡಿಸುವುದು ಮುಂತಾದವುಗಳು ಸಾಂಸ್ಕೃತಿಕ ಸಂಪತ್ತನ್ನು ಹಾಳು ಮಾಡುವ ಇನ್ನೊಂದು ವಿಧಾನ. ಬೃಹತ್ ಶಿಲಾಯುಗದ ಗೋರಿಗಳು ಹಾಗೂ ದೇವಸ್ಥಾನದ ಗರ್ಭಗುಡಿಯಲ್ಲಿ ಅಮೂಲ್ಯವಾದ ಬಂಗಾರದ ನಾಣ್ಯ ಮತ್ತು ಮುತ್ತು-ರತ್ನಗಳ ಭಂಡಾರವಿರುವುದಾಗಿ ಕೆಲವೊಂದು ಜನ ನಂಬಿದ್ದಾರೆ. ಇಂತಹ ನಿಧಿಯನ್ನು ಹುಡುಕುವವರು ಈ ಸ್ಥಳಗಳನ್ನು ಅಗೆದು ಸಾಂಸ್ಕೃತಿಕ ಸಂಪತ್ತನ್ನು ನಾಶ ಪಡಿಸುತ್ತಾರೆ. ಇನ್ನು ಕೆಲವರು ಆಕಸ್ಮಿಕವಾಗಿ ದೊರೆತ ನಿಧಿಯನ್ನು ನ್ಯಾಯಬದ್ಧವಾಗಿ ಸರ್ಕಾರಕ್ಕೆ ಒಪ್ಪಿಸದಯೇ ಅವುಗಳನ್ನು ಕರಗಿಸುವುದು, ಇಲ್ಲವೇ ಕೇವಲ ಕೆಲವೇ ಕೆಲವು ಭಾಗ ದೊರೆತಿದೆ ಎಂದು ಹೇಳಿ ಮಾರಾಟಮಾಡಲು ಪ್ರಯತ್ನಿಸುತ್ತಾರೆ.

ಇನ್ನೊಂದು ಗುಂಪಿನ ಜನ, ಈ ಸಂಪತ್ತಿನ ಬಗ್ಗೆ ಚೆನ್ನಾಗಿ ತಿಳುವಳಿಕೆಯುಳ್ಳವರಾಗಿರುತ್ತಾರೆ. ಅವರಿಗೆ ಪ್ರಾಚ್ಯಾವಶೇಷಗಳು ಎಲ್ಲಿ, ಯಾವಾಗ ಮತ್ತು ಹೇಗೆ ಪಡೆಯಬೇಕೆಂದು ಗೊತ್ತಿದ್ದು ಅವುಗಳ ನಿಷಿದ್ಧ ವ್ಯಾಪಾರದ ಪ್ರಕ್ರಿಯೆಯನ್ನು ಸಹ ತಿಳಿದಿರುತ್ತಾರೆ. ಅದ್ದರಿಂದ ಈ ಜನರು ಅತೀ ಪ್ರಮುಖವಾದ ಪ್ರಾಚ್ಯಾವಶೇಷಗಳನ್ನು ಹೊಂದಿರುವ ಪುರಾತನ ನೆಲೆಗಳನ್ನು ಅಗೆದು ಅವುಗಳನ್ನು ಸಂಗ್ರಹಿಸಿ ಮಾರಾಟ ಮಾಡುತ್ತಾರೆ. ಇವುಗಳಲ್ಲಿ ಅತಿ ಸುಲಭವಾಗಿ ಸಾಗಿಸಬಹುದಾದ ಸುಟ್ಟ ಆವೆಮಣ್ಣಿನ ಮೂರ್ತಿ ಹಾಗೂ ಫಲಕಗಳು ಪ್ರಾಮುಖ್ಯತೆಯನ್ನು ಹೊಂದಿವೆ.

## ಭಾರತದ ಸಾಂಸ್ಕೃತಿಕ ಸಂಪತ್ತು ಮತ್ತು ಕಾನೂನು ವ್ಯವಸ್ಥೆ

ಭಾರತೀಯ ಸಾಂಸ್ಕೃತಿಕ ಸಂಪತ್ತನ್ನು ಈ ಮೇಲೆ ಹೇಳಿದ ಅನೇಕ ಅಪಾಯಗಳಿಂದ ಸುರಕ್ಷಿತವಾಗಿಡಲು ಕೆಲವು ವಿಶೇಷ ಕಾನೂನುಗಳನ್ನು ಜಾರಿಗೆ ತರಲಾಗಿದೆ. ಸೂಕ್ತ ನಿರ್ವಹಣೆ ಮತ್ತು ರಕ್ಷಣೆಯ ಉದ್ದೇಶದಿಂದ ಇವುಗಳನ್ನು ಆಗಿಂದಾಗ್ಗೆ ಪರಿಷ್ಕರಿಸಲಾಗುತ್ತದೆ. ಭಾರತ ಸರ್ಕಾರ ಪ್ರಸ್ತುತ ಮೂರು ವಿಧ ಕಾನೂನುಗಳನ್ನು ಜಾರಿಗೊಳಿಸಿದೆ. ಅವುಗಳು: ಏನ್ಶಿಯಂಟ್ ಮಾನ್ಯುಮೆಂಟ್ಸ್ ಅಂಡ್ ಆರ್ಕಿಯಲಾಜಿಕಲ್ ಸೈಟ್ಸ್ ಅಂಡ್ ರಿಮೇನ್ಸ್ ಆಕ್ಟ್, ೧೯೫೮ (Ancient Monuments and Archaeological Sites & Remains Act, 1958); ಇಂಡಿಯನ್ ಟ್ರಜರ್ ಟ್ರೋವ್ ಆಕ್ಟ್, ೧೮೭೮ (Indian Treasure Trove Act, 1878) ಮತ್ತು ಆಂಟಿಕ್ವಿಟೀಸ್ ಅಂಡ್ ಆರ್ಟ್ ಟ್ರಷರ್ಸ್ ಆಕ್ಟ್, ೧೯೭೨ (Antiquities and Art Treasures Act, 1972). ಇವುಗಳಲ್ಲಿ ಮೊದಲನೆಯದು ಸ್ಥಿರ ಸಂಪತ್ತನ್ನು, ಉಳಿದೆರಡು ಚರ ಸಂಪತ್ತನ್ನು ರಕ್ಷಿಸುತ್ತವೆ. ಇದಲ್ಲದೆ ಪ್ರತೀ ರಾಜ್ಯ ಮತ್ತು ಕೇಂದ್ರಾಡಳಿತ ಪ್ರದೇಶಗಳು ತಮ್ಮದೇ ಆದ ಈ ರೀತಿಯ ನಿಯಮಗಳನ್ನು ಹೊಂದಿವೆ.

ಪ್ರಸ್ತುತ ಚರ್ಚೆಯಲ್ಲಿ, ಆಂಟಿಕ್ವಿಟೀಸ್ ಅಂಡ್ ಆರ್ಟ್ ಟ್ರಷರ್ಸ್ ಆಕ್ಟ್, ೧೯೭೨ ಪ್ರಮುಖವಾಗಿದೆ. ಪುರಾವಶೇಷ, ಹಸ್ತಪ್ರತಿ ಹಾಗೂ ಕಲಾವಸ್ತುಗಳ ರಕ್ಷಣೆಯ ಉದ್ದೇಶದ ಈ ಕಾನೂನನ್ನು ಕ್ರಿ.ಶ. ೧೯೭೨ರಲ್ಲಿ ತರಲಾಗಿದೆ. ಈ ಆಕ್ಟ್ ಹಾಗು ಆಂಟಿಕ್ವಿಟೀಸ್ ಅಂಡ್ ಆರ್ಟ್ ಟ್ರಷರ್ಸ್ ರೂಲ್ಸ್ (Antiquities and Art Treasures Rules, 1973) ೧೯೭೩ಗಳು ೫.೪ ೧೯೭೬ರಿಂದ ಜಾರಿಯಲ್ಲಿವೆ. ಪುರಾವಶೇಷ ಹಾಗೂ ಹಸ್ತಪ್ರತಿಗಳ ಕಡ್ಡಾಯವಾದ ಪಂಜೀಕರಣ; ಪುರಾವಶೇಷ ಹಾಗೂ ಕಲಾವಸ್ತುಗಳ ಸಕ್ರಮವಾದ ವ್ಯಾಪಾರ; ನಿಷಿದ್ಧ ವ್ಯಾಪಾರ, ರಫ್ತು ಮತ್ತು ಕಳ್ಳಸಾಗಾಣಿಕೆಯ ನಿಯಂತ್ರಣ ಹಾಗೂ ಅತ್ಯಮೂಲ್ಯವಾದ ಕಲಾತ್ಮಕ ವಸ್ತುಗಳನ್ನು ಸಾರ್ವಜನಿಕ ಹಿತದೃಷ್ಟಿಯಿಂದ ರಕ್ಷಿಸಲು ಅವುಗಳ ಸ್ವಾಧೀನಕ್ಕೆ ಈ ಕಾನೂನಲ್ಲಿ ಆದ್ಯತೆ ನೀಡಲಾಗಿದೆ.

ಕಲಂ ೩ರ ೧ನೆಯ ಉಪ-ಕಲಂನ ಪ್ರಕಾರ ಯಾವುದೇ ಪುರಾವಶೇಷ ಹಾಗೂ ಕಲಾವಸ್ತುಗಳನ್ನು ರಫ್ತು ಮಾಡುವಂತಿಲ್ಲ. ಆದರೆ ಇದೇ ಕಲಂನ ೨ನೆಯ ಉಪ-ಕಲಂನಂತೆ ಅವುಗಳನ್ನು ಕೇಂದ್ರ ಸರ್ಕಾರದ ಅಧಿಕೃತ ಪರವಾನಿಗೆಯಿಂದ ರಫ್ತು ಮಾಡಬಹುದು. ಆಂಟಿಕ್ವಿಟೀಸ್ ಅಂಡ್ ಆರ್ಟ್ ಟ್ರಜರ್ಸ್ ರೂಲ್ಸ್ ೧೯೭೩ರ ೩ನೆಯ ನಿಯಮದಂತೆ ಭಾರತೀಯ ಪುರಾತತ್ವ ಸರ್ವೇಕ್ಷಣಾ ಮಹಾ ನಿರ್ದೇಶಕರು ಇಂಥಹ ಪರವಾನಿಗೆಯನ್ನು ನೀಡುತ್ತಾರೆ.

ಪುರಾವಶೇಷ ಹಾಗೂ ಕಲಾವಸ್ತುಗಳ ವ್ಯಾಪಾರದ ಅಧಿಕೃತ ಪರವಾನಿಗೆಯನ್ನು ಪಡೆದವರೇ ಅವುಗಳನ್ನು ಮಾರಾಟ ಮಾಡಬೇಕೆಂದು ೫ನೆಯ ಕಲಂನಲ್ಲಿ ಹೇಳಲಾಗಿದೆ. ಭಾರತಾದ್ಯಂತ ಇರುವ ಅನೇಕ ಭಾರತೀಯ ಪುರಾತತ್ವ ಸರ್ವೇಕ್ಷಣದ ಪುರಾತತ್ವ ಅಧೀಕ್ಷಕರು ಪರವಾನಿಗೆ ಅಧಿಕಾರಿಗಳೆಂದು ಘೋಷಿಸಲ್ಪಟ್ಟಿದ್ದು, ಅವರು ತಮಗೆ ಸಮಂಜಸವೆನಿಸಿದ ವಿಚಾರಣೆ ಮಾಡಿ, ಪುರಾವಶೇಷಗಳ ವ್ಯಾಪಾರದಲ್ಲಿ ಅರ್ಜಿದಾರನ ಅನುಭವ; ವ್ಯಾಪಾರದ ಸ್ಥಳ; ಅಂಥಹ ಸ್ಥಳದಲ್ಲಿರುವ ಇತರೆ ಪುರಾವಶೇಷಗಳ ವ್ಯಾಪಾರಿಗಳು ಹಾಗೂ ಸಮಂಜಸವೆನಿಸಿದ ಮತ್ತಿತರ ವಿಷಯಗಳನ್ನು ಗಮನದಲ್ಲಿಟ್ಟುಕೊಂಡು ಪರವಾನಿಗೆಯನ್ನು ೮ನೆಯ ಕಲಂನಡಿ ನೀಡುತ್ತಾರೆ.

೧೪ನೆಯ ಕಲಂನ ೧ನೆಯ ಉಪ–ಕಲಂವು ಕೇಂದ್ರ ಸರ್ಕಾರ ಆಗಿಂದಾಗ್ಗೆ ನೋಂದಾಯಿಸುವ ಪುರಾವಶೇಷ ಗಳನ್ನು ನಿರ್ಧರಿಸಿ ಪ್ರಕಟಗೊಳಿಸಬೇಕೆಂದು ತಿಳಿಸುತ್ತದೆ. ಜಿಎಸ್‌ಆರ್ ೨೮೮೧(ಇ) ದಿನಾಂಕ ೫.೪. ೧೯೭೬, ಜಿಎಸ್‌ಆರ್ ೪೪೪೮(ಇ) ದಿನಾಂಕ ೨.೭. ೧೯೭೬ ಮತ್ತು ಎಸ್‌ಒ ೩೯೭(ಇ) ದಿನಾಂಕ ೧೫.೫. ೧೯೮೦ರ ಅಧಿಸೂಚನೆಗಳಂತೆ ಕಲ್ಲು, ಸುಟ್ಟಆವೆಮಣ್ಣು, ಲೋಹ, ಆನೆದಂತ ಹಾಗೂ ಎಲುಬಿನಲ್ಲಿ ಮಾಡಿದ ಯಾವುದೇ ಮೂರ್ತಿಗಳು; ಕಾಗದ, ಮರ, ಬಟ್ಟೆ, ಚರ್ಮ, ರೇಷ್ಮೆ ಹಾಗೂ ಅಂಥಹವುಗಳಲ್ಲಿ ಮಾಡಿದ ವರ್ಣಚಿತ್ರಗಳು; ವರ್ಣಚಿತ್ರ, ರೇಖಾಚಿತ್ರ ಹಾಗೂ ಕಾಂತಿಯುತ ಹಸ್ತಪ್ರತಿಗಳು ಮತ್ತು ಮರದಲ್ಲಿ ಮಾಡಿದ ಮೂರ್ತಿಯ ಆಕೃತಿಗಳನ್ನು ಕಡ್ಡಾಯವಾಗಿ ನೊಂದಾಯಿಸಬೇಕು.

ಇದೇ ೧೪ನೆಯ ಕಲಂನ ೩ನೆಯ ಉಪ–ಕಲಂನಂತೆ ಪುರಾವಶೇಷಗಳ ಸ್ವಾಮ್ಯವನ್ನು ಹೊಂದಿರುವ ಅಥವಾ ತಮ್ಮ ವಶದಲ್ಲಿರುವ ಪ್ರತಿಯೊಬ್ಬರು ಅಧಿಸೂಚನೆ ಪ್ರಕಟಗೊಂಡ ಮೂರು ತಿಂಗಳೊಳಗೆ ಹಾಗೂ ಬೇರೊಬ್ಬರ ಪುರಾವಶೇಷ ಗಳು ತಮ್ಮ ವಶಕ್ಕೆ ಬಂದ ಹದಿನೈದು ದಿನಗಳೊಳಗೆ ಕಡ್ಡಾಯವಾಗಿ ನೋಂದಾಯಿಸಬೇಕೆಂದು ಹೇಳಲಾಗಿದೆ. ಭಾರತದ ಪ್ರತೀ ರಾಜ್ಯ ಹಾಗೂ ಕೇಂದ್ರಾಡಳಿತ ಪ್ರದೇಶದ ಪುರಾತತ್ವ ಇಲಾಖೆಯ ಆಧೀನದಲ್ಲಿರುವ ನೋಂದಣಿ ಅಧಿಕಾರಿಗಳು ಭಾರತ ಸರ್ಕಾರ ನಿರ್ಧರಿಸಿದ ಪುರಾವಶೇಷ ಗಳನ್ನು ನೋಂದಾಯಿಸುತ್ತಾರೆ. ೧೭ನೆಯ ಕಲಂನಂತೆ ಯಾರಾದರೂ ನೋಂದಾಯಿಸಿದ ಪುರಾವಶೇಷ ಗಳನ್ನು ಬೇರೊಬ್ಬರಿಗೆ ಹಸ್ತಾಂತರಿಸಿದರೆ ಅಂಥಹವರು ನಿರ್ದಿಷ್ಟ ಸಮಯದಲ್ಲಿ ನೋಂದಣಿ ಅಧಿಕಾರಿಯ ಗಮನಕ್ಕೆ ತರಬೇಕೆಂದು ತಿಳಿಸಿದೆ. ೧೮ನೆಯ ಕಲಂನಂತೆ ವಸ್ತು ಸಂಗ್ರಹಾಲಯ, ಕಾರ್ಯಾಲಯ, ವಿದ್ಯಾಸಂಸ್ಥೆಗಳ ಅಥವಾ ಸಾಂಸ್ಕೃತಿಕ ಸಂಸ್ಥೆಗಳ ಸ್ವಾಮ್ಯ, ಸ್ವಾಧೀನ, ಸರ್ಕಾರದ ನಿರ್ವಹಣೆಯಲ್ಲಿರುವ ಪುರಾವಶೇಷಗಳನ್ನು ನೋಂದಣಿಯಿಂದ ಮುಕ್ತವಿಡಲಾಗಿದೆ.

ಯಾವುದೇ ಪುರಾವಶೇಷ ಅಥವಾ ಕಲಾವಸ್ತುಗಳನ್ನು ಸಾರ್ವಜನಿಕ ಸ್ಥಳದಲ್ಲಿ ಸುರಕ್ಷಿತವಾಗಿಡಲು ಕೇಂದ್ರ ಸರ್ಕಾರ ಅವುಗಳನ್ನು ಕಡ್ಡಾಯವಾಗಿ ಸ್ವಾಧೀನ ಪಡಿಸಿಕೊಳ್ಳಬಹುದೆಂದು ಹಾಗೂ ಸ್ವಾಧೀನಪಡಿಸಿಕೊಳ್ಳುವ ವಿಧಾನಗಳನ್ನು ೧೯ನೆಯ ಕಲಂ ತಿಳಿಸುತ್ತದೆ. ೨೦ನೆಯ ಕಲಂ ಯಾವುದೇ ಪುರಾವಶೇಷ ಅಥವಾ ಕಲಾವಸ್ತುವನ್ನು ಕಡ್ಡಾಯವಾಗಿ ಸ್ವಾಧೀನ ಮಾಡಿಕೊಂಡಾಗ ಸೂಕ್ತವಾದ ಪರಿಹಾರವನ್ನು ಹಾಗೂ ಅದರ ಮೊತ್ತವನ್ನು ನಿರ್ಧರಿಸುವ ವಿವರಗಳನ್ನು ಸೂಚಿಸುತ್ತದೆ. ಯಾವುದೇ ವಸ್ತು ಅಥವಾ ಹಸ್ತಪ್ರತಿ ಅಥವಾ ದಾಖಲೆ ಅಥವಾ ಕಲಾವಸ್ತು ಪುರಾವಶೇಷವಾಗಿದೆಯೇ ಎಂಬ ಪ್ರಶ್ನೆ ಉದ್ಭವಿಸಿದಾಗ ಅದನ್ನು ಭಾರತೀಯ ಪುರಾತತ್ವ ಸರ್ವೇಕ್ಷಣದ ಮಹಾ ನಿರ್ದೇಶಕರು ನಿರ್ಧರಿಸುವರೆಂದು ಹಾಗೂ ಅವರ ನಿರ್ಣಯವೇ ಅಂತಿಮವೆಂದು ೨೪ನೆಯ ಕಲಂ ಹೇಳುತ್ತದೆ.

## ಸಾಂಸ್ಕೃತಿಕ ಸಂಪತ್ತಿನ ರಕ್ಷಣೋಪಾಯಗಳು

ಭಾರತದ ವಿದ್ಯಾವಂತ ಪ್ರಜೆಗಳೇ ನಮ್ಮ ದೇಶದ ಸಾಂಸ್ಕೃತಿಕ ಸಂಪತ್ತನ್ನು ವಿಧ್ವಂಸಕ ಕೃತ್ಯ ಹಾಗೂ ನಿಷಿದ್ಧ ವ್ಯಾಪಾರಗಳಿಂದ ಯಶಸ್ವಿಯಾಗಿ ನಿಯಂತ್ರಿಸಬಲ್ಲರು. ಕೇಂದ್ರ ಹಾಗೂ ರಾಜ್ಯ ಸರ್ಕಾರಗಳ ಈ ನಿಟ್ಟಿನ ಅವಿರತ ಪ್ರಯತ್ನಗಳಿಗೆ ನಮ್ಮ ಜನರು ಇನ್ನೂ ಮನಃಪೂರ್ವಕವಾಗಿ ಸ್ಪಂದಿಸುತ್ತಿಲ್ಲ.

ಪುರಾವಶೇಷಗಳನ್ನು ಪಂಜೀಕರಣ ಮಾಡಿಸುವುದು ಹಾಗೂ ಭವ್ಯ ಪರಂಪರೆಯ ಬಗ್ಗೆ ಯಾವುದೇ ತರಹದ ಲವಲವಿಕೆಯನ್ನು ಬಹುತೇಕ ಜನರು ಸಮರ್ಪಕವಾಗಿ ವ್ಯಕ್ತಗೊಳಿಸುತ್ತಿಲ್ಲ. ಆದ್ದರಿಂದ ಈ ಸಂದಿಗ್ಧ ಪರಿಸ್ಥಿತಿಯಲ್ಲಿ ಸಾಂಸ್ಕೃತಿಕ ಪರಂಪರೆಯ ಅರಿವು, ಅಭಿಮಾನ, ಪ್ರೀತಿ ಹಾಗೂ ಲವಲವಿಕೆಯನ್ನು ಪ್ರೇರೇಪಿಸುವುದು ಅತ್ಯಂತ ಅವಶ್ಯಕವಾಗಿದೆ. ಇಂತಹ ಸಂಘಟನೆಯಲ್ಲಿ ಭಾರತದಾದ್ಯಂತ ನಮ್ಮ ಭವ್ಯ ಸಂಸ್ಕೃತಿಯ ಅಳಿವು–ಉಳಿವು, ಅದರ ಮಹತ್ವ, ನ್ಯಾಯಂಗ ವ್ಯವಸ್ಥೆ, ಪುರಾವಶೇಷಗಳ ಪಂಜೀಕರಣ ಹಾಗೂ ಅವುಗಳಿಂದ ಆಗುವ ಉತ್ತಮ ಪರಿಣಾಮಗಳನ್ನು ವಿವರವಾಗಿ ಜನಸಾಮಾನ್ಯರಿಗೆ ತಲುಪುವಂತೆ ವಿಶೇಷ ಕಾರ್ಯಕ್ರಮಗಳನ್ನು ರೂಪಿಸಬೇಕು.

ಸಾಂಸ್ಕೃತಿಕ ಪರಂಪರೆಯ ಪ್ರಾಮುಖ್ಯತೆಯನ್ನು ಬಿಂಬಿಸುವ ನುಡಿಮುತ್ತುಗಳ ಕರಪತ್ರಗಳನ್ನು ಹಾಗೂ ವಿಶೇಷ ಶಿಬಿರಗಳನ್ನು ಆಯೋಜಿಸಿ ಜನ ಸಾಮಾನ್ಯರಿಗೆ ತಲುಪುವಂತೆ

ಮಾಡಬೇಕು. ಪ್ರಚಾರ ಮಾಧ್ಯಮದ ಅಂಗಗಳಾದ ದೂರದರ್ಶನ ಹಾಗೂ ಪತ್ರಿಕೆಗಳ ಮೂಲಕ.

ಕೇಂದ್ರ ಹಾಗೂ ರಾಜ್ಯ ರಕ್ಷಿತ ಸ್ಮಾರಕಗಳು ಮತ್ತು ಕೆಲವೊಂದು ಸಂಘಟನೆಗಳ ಮೇಲ್ವಿಚಾರಣೆಯಲ್ಲಿರುವ ಸ್ಮಾರಕಗಳಿಗಿಂತಲೂ ಹೆಚ್ಚಾಗಿ ಅರಕ್ಷಿತ ಸ್ಮಾರಕಗಳು ಭಾರತದಾದ್ಯಂತ ಹರಡಿಕೊಂಡಿವೆ. ಇವುಗಳು ನಿಷಿದ್ಧ ವ್ಯಾಪಾರ ಹಾಗೂ ಕಳ್ಳಸಾಗಾಣಿಕೆದಾರರ ಕೇಂದ್ರ ಬಿಂದುಗಳಾಗಿವೆ. ಈ ಸ್ಮಾರಕಗಳ ಸವಿಸ್ತಾರವಾದ ವಿವರಣೆ, ಅವುಗಳ ವಿಶೇಷ ಲಕ್ಷಣಗಳನ್ನು ಛಾಯಾ ಚಿತ್ರ ಸಮೇತ ದಾಖಲಿಸಬೇಕು. ಈ ರೀತಿಯ ವಿವರಣೆಗಳು ಕಳ್ಳಸಾಗಾಣಿಕೆಗೆ ಒಳಪಟ್ಟ ಅಮೂಲ್ಯ ಪುರಾವಶೇಷಗಳ ದೃಢೀಕರಣಕ್ಕೆ ಹಾಗೂ ಅವುಗಳು ನಮ್ಮ ದೇಶದ ಸಂಪತ್ತೆಂದೇ ನಿರ್ಧರಿಸಲು ಅತ್ಯಂತ ಮಹತ್ವದ ಆಧಾರಗಳಾಗುತ್ತವೆ.

ಈ ದಿಶೆಯಲ್ಲಿ, ಭಾರತ ಸರ್ಕಾರವು ಇತ್ತೀಚೆಗೆ ನ್ಯಾಷನಲ್ ಮಿಷನ್ ಫಾರ್ ಡಾಕ್ಯುಮೆಂಟೇಷನ್ ಆಫ್ ಮ್ಯಾನುಸ್ಕ್ರಿಪ್ಟ್ಸ್ ( National Mission for Documentation of Manuscripts) ಹಾಗೂ ನ್ಯಾಷನಲ್ ಮಿಷನ್ ಆನ್ ಮಾನ್ಯುಮೆಂಟ್ಸ್ ಅಂಡ್ ಆಂಟಿಕ್ವಿಟೀಸ್ (National Mission on Monuments and Antiquities) ಗಳನ್ನು ಸ್ಥಾಪಿಸಿದೆ. ಇವುಗಳಲ್ಲಿ ಮೊದಲನೆಯದು ಹಸ್ತಪ್ರತಿಗಳ ಹಾಗೂ ಎರಡನೆಯದು ಅರಕ್ಷಿತ ಸ್ಮಾರಕ ಹಾಗೂ ಪ್ರಾಚ್ಯಾವಶೇಷಗಳ ದಾಖಲಾತಿಗಳನ್ನು ತಯಾರಿಸುತ್ತವೆ. ಸಾಂಸ್ಕೃತಿಕ ಸಂಪತ್ತಿನ ರಕ್ಷಣೆಯಲ್ಲಿ ಇದೊಂದು ಮಹತ್ವವಾದ ಬೆಳವಣಿಗೆ.

ಭಾರತದ ಉದ್ದಗಲಕ್ಕೂ ವಿವಿಧ ರೀತಿಯ ಅಂದರೆ ಜನಪದ, ಗುಡ್ಡಗಾಡು ಪ್ರದೇಶದ ಕಲೆ, ಹಸ್ತಪ್ರತಿ, ಶಸ್ತ್ರಾಸ್ತ್ರ, ಔದ್ಯೋಗಿಕ, ವ್ಯವಸಾಯಿಕ, ನಾಣ್ಯಗಳ, ವಿಜ್ಞಾನದ ದೃಕ್-ಶ್ರವಣ ವ್ಯವಸ್ಥೆಯುಳ್ಳ ವಸ್ತು ಸಂಗ್ರಹಾಲಯಗಳನ್ನು ಗ್ರಾಮಾಂತರ ಹಾಗೂ ಜಿಲ್ಲಾ ಕೇಂದ್ರಗಳಲ್ಲಿ ಸ್ಥಾಪಿಸಿ ಸುತ್ತಮುತ್ತಲಿನ ಪ್ರಾಚ್ಯಾವಶೇಷಗಳನ್ನು ಪ್ರದರ್ಶಿಸಿದರೆ ಸಾಂಸ್ಕೃತಿಕ ಸಂಪತ್ತಿನ ಸುರಕ್ಷತೆಯಾಗುತ್ತದೆ ಹಾಗೂ ನಿಷಿದ್ಧ ವ್ಯಾಪಾರದ ಪ್ರಮಾಣ ಗಣನೀಯವಾಗಿ ಕಡಿಮೆಯಾಗುತ್ತದೆ.

ಮೂಲ ಸ್ವರೂಪದ ಪ್ರಾಚ್ಯಾವಶೇಷಗಳ ಮಾದರಿ ತಯಾರಿಸುವುದು ಇನ್ನೊಂದು ಆಪತ್ತು. ಇದು ಅಮೂಲ್ಯವಾದ ಪುರಾತನ ವಸ್ತುಗಳ ಸ್ಥಾನಪಲ್ಲಟಕ್ಕೆ ಸಹಾಯ ಮಾಡುತ್ತದೆ. ಮೊದಲೇ ತಿಳಿಸಿದಂತೆ, ಮೂಲ ಮೂರ್ತಿಯ ಪ್ರತಿರೂಪವನ್ನು ಅದರ ಸ್ಥಳದಲ್ಲಿರಿಸಿ, ಅವುಗಳನ್ನು ಕಳ್ಳಸಾಗಾಣಿಕೆ ಮಾಡಿ ನಂತರ ಮಾರಾಟ ಮಾಡಲಾಗುತ್ತದೆ. ಈಗಿನ ಕಾನೂನು ವ್ಯವಸ್ಥೆಯಲ್ಲಿ ಇಂತಹ ಮಾದರಿಗಳನ್ನು ತಯಾರಿಸುವ ನಿರ್ಬಂಧವಿಲ್ಲ. ಪುರಾವಶೇಷಗಳ ಕಳ್ಳಸಾಗಾಣಿಕೆಯು ಗುಡಿ ಕೈಗಾರಿಕಾ ವಸ್ತುಗಳ ನೆಪದಲ್ಲಿ ವಿದೇಶಗಳಿಗೆ ರಫ್ತು ಮಾಡುವುದು ಇನ್ನೊಂದು ನಿಷಿದ್ಧ ವ್ಯಾಪಾರದ ರೂಪ. ಸುಂಕದ ನಿಯಮಾವಳಿ (Customs Act)ಗಳಲ್ಲಿ ಇಂತಹ ಕೃತ್ಯಗಳು ನಡೆಯದಂತೆ ಸೂಕ್ತ ಬದಲಾವಣೆಗಳನ್ನು ಮಾಡಿ ಇವುಗಳನ್ನು ಉಲ್ಲಂಘಿಸುವವರ ವಿರುದ್ಧ ಕಠಿಣ ಕ್ರಮಗಳನ್ನು ತೆಗೆದುಕೊಳ್ಳುವ ವ್ಯವಸ್ಥೆ ಮಾಡಬೇಕು.

ಇದೇ ರೀತಿ, ವಿವಿಧ ಕಾನೂನಿನ ಸಂಸ್ಥೆಗಳಾದ ಪೊಲೀಸ್, ಡೈರೆಕ್ಟೊರೇಟ್ ಆಫ್ ರೆವಿನ್ಯೂ ಇಂಟೆಲಿಜನ್ಸ್ (Directorate of Revenue Intelligence=DRI) ಹಾಗೂ ಸೆಂಟ್ರಲ್ ಬ್ಯೂರೋ ಆಫ್ ಇನ್ವೆಸ್ಟಿಗೇಷನ್ (Central Bureau of Investigation=CBI)ಗಳೂ ಸಹ ತಮ್ಮ ತಮ್ಮ ಕಾನೂನಿನ ವ್ಯವಸ್ಥೆಯಲ್ಲಿ ಸಾಧ್ಯವಾದಷ್ಟು ಮಟ್ಟಿಗೆ ಇರುವ ವ್ಯವಸ್ಥೆಯನ್ನು ಮತ್ತಷ್ಟು ಪರಿಣಾಮಕಾರಿಯಾಗಿ ಮಾಡುವುದಲ್ಲದೆ ಹೊಸ ನಿಯಮಾವಳಿಗಳನ್ನು ಸಹ ಜಾರಿಗೊಳಿಸಬೇಕು. ಈ ಎಲ್ಲಾ ವಿಭಾಗಗಳು ಸಾಂಸ್ಕೃತಿಕ ಸಂಪತ್ತಿನ ಕಳ್ಳಸಾಗಾಣಿಕೆಯಲ್ಲಿ ತೊಡಗಿರುವ ವ್ಯಕ್ತಿಯ ವಿರುದ್ಧ ಅತ್ಯಂತ ಕಠಿಣ ಕ್ರಮ, ಶಿಕ್ಷೆ ಹಾಗೂ ಭಾರಿ ಮೊತ್ತದ ದಂಡವನ್ನು ವಿಧಿಸಲು ಏರ್ಪಾಟು ಮಾಡಬೇಕು. ಇಂತಹ ಕಾನೂನುಗಳನ್ನು ಪದೇ ಪದೇ ಉಲ್ಲಂಘಿಸುವವರ ಸಂಪೂರ್ಣ ವಿವರಗಳನ್ನು ಜಾಗತಿಕ ಮಟ್ಟದಲ್ಲಿ ಪ್ರಚಾರ ಪಡಿಸಿ, ಸಭ್ಯ ಹಾಗೂ ಕಲಾ ಪ್ರೇಮಿಗಳು ಇವರಿಂದ ದೂರವಿರಲು ಕರೆ ನೀಡಬೇಕು. ಇದೇ ರೀತಿ ಸಾಂಸ್ಕೃತಿಕ ಸಂಪತ್ತಿನ ಕಳ್ಳತನದ ಸಂಪೂರ್ಣ ವಿವರಗಳನ್ನು ಜಗತ್ತಿನಾದ್ಯಂತ ಪ್ರಚಾರ ಪಡಿಸಿದಲ್ಲಿ ಮುಗ್ಧ ಪ್ರಜೆ ಹಾಗೂ ಮಧ್ಯವರ್ತಿಗಳು ಇಂತಹ ಪ್ರಾಚ್ಯಾವಶೇಷಗಳನ್ನು ಖರೀದಿಸುವಾಗ ಜಾಗರೂಕರಾಗಿರುತ್ತಾರೆ.

ರಾಷ್ಟ್ರೀಯ ಹಾಗೂ ರಾಜ್ಯ ಮಟ್ಟದಲ್ಲಿ ಕಳ್ಳಸಾಗಾಣಿಕೆ ಮತ್ತು ನಿಷಿದ್ಧ ವ್ಯಾಪಾರದ ನಿರ್ಮೂಲನಾ ಜವಾಬ್ದಾರಿಯನ್ನು ನಿರ್ವಹಿಸಲು ವಿಶೇಷವಾದ ಘಟಕಗಳನ್ನು ಸ್ಥಾಪಿಸಬೇಕು. ಪ್ರಾಚ್ಯವಸ್ತುಗಳ ಕಳ್ಳತನದಿಂದ ಅವುಗಳ ಪುನಃ ಸ್ವಾಧೀನ ಪಡಿಸಿಕೊಳ್ಳುವವರೆಗೆ ಬೇರೆ ಬೇರೆ ವಿಭಾಗಗಳಾದ ಡಿಆರ್‌ಐ (DRI), ಸಿಬಿಐ (CBI) ಹಾಗೂ ಪೋಲೀಸ್‌ಗಳ ಜೊತೆಗೆ ನಿಕಟ ಸಂಪರ್ಕವನ್ನು ಹೊಂದಿ ಯಶಸ್ವಿಯಾಗಿ ಕಾರ್ಯನಿರ್ವಹಿಸಿದರೆ ಸಾಂಸ್ಕೃತಿಕ ಸಂಪತ್ತಿನ ಪುನಃ ಸ್ವಾಧೀನ ಅತ್ಯಂತ ಪರಿಣಾಮಕಾರಿಯಾಗಿರುತ್ತದೆ.

ಕೇಂದ್ರ ಮತ್ತು ರಾಜ್ಯ ಸರ್ಕಾರ ಒಡೆತನದ ಪ್ರಾಚ್ಯವಸ್ತುಗಳ ಮಾರಾಟ ಕೇಂದ್ರಗಳಲ್ಲಿ ಯಾವುದೇ ರೀತಿಯ ಮೋಸ ಮಾಡಲು ಅವಕಾಶವಿಲ್ಲದಿರುವುದರಿಂದ ನಿಜವಾದ ಹಾಗೂ ಮುಗ್ಧ ಜನರು ಮತ್ತು ಯಾತ್ರಾರ್ಥಿಗಳಿಗೆ ಪ್ರಾಚ್ಯ

ಮತ್ತು ಕಲಾತ್ಮಕ ವಸ್ತುಗಳನ್ನು ಖರೀದಿಸಲು ತುಂಬಾ ಸಹಾಯವಾಗುತ್ತದೆ.

ಕಳ್ಳಸಾಗಾಣಿಕೆಯ ಅವ್ಯವಹಾರದ ಬಗ್ಗೆ ಸೂಕ್ಷ್ಮ ಮಾಹಿತಿಯನ್ನು ಕಾನೂನು ರಕ್ಷಣಾ ವಿಭಾಗಗಳಿಗೆ ನೀಡಲು ಪ್ರೇರೇಪಿಸಿ ಅವರ ಪರಿಚಯವನ್ನು ಗೌಪ್ಯವಾಗಿಟ್ಟು ಅಂಥವರಿಗೆ ಸೂಕ್ತ ಬಹುಮಾನವನ್ನು ನೀಡುವ ವ್ಯವಸ್ಥೆಯೂ ಸಹ ಇಂತಹ ವಿಧ್ವಂಸಕ ಕೃತ್ಯಗಳಿಗೆ ಕಡಿವಾಣ ಹಾಕುತ್ತವೆ.

**ಜಾಗತಿಕ ಚಿಂತನೆ**

ಇತ್ತೀಚಿನ ದಿನಗಳಲ್ಲಿ ವಿಶ್ವಸಂಸ್ಥೆ (UNESCO), ಐಕ್ರಾಮ್ (ICCROM) ಹಾಗೂ ಐಕೊಮ್ಸ್ (ICOMS) ಮುಂತಾದ ಅಂತರ್‌ರಾಷ್ಟ್ರೀಯ ಸಮುದಾಯಗಳು ಅತ್ಯಂತ ಕಾಳಜಿಯಿಂದ ಮಾನವ ಕುಲಕ್ಕೆ ಸಾಂಸ್ಕೃತಿಕ ಸಂಪತ್ತನ್ನು ರಕ್ಷಿಸಲು ಮನವಿ ಮಾಡುತ್ತ, ಇಂತಹ ದಿಶೆಯಲ್ಲಿ ದಿಟ್ಟ ಹೆಜ್ಜೆ ಹಾಕಿರುವ ವಿಶ್ವದ ಪ್ರಮುಖ ಕೇಂದ್ರಗಳಾಗಿವೆ. ಈ ಸಂಘಟನೆಗಳು ವಿವಿಧ ರೀತಿಯ ಸಲಹೆ ಮತ್ತು ಮಾರ್ಗದರ್ಶನಗಳನ್ನು ಸಹ ನೀಡುತ್ತಲಿವೆ. ಆದಾಗ್ಯೂ ಸಾಂಸ್ಕೃತಿಕ ಸಂಪತ್ತಿನ ನಿಷಿದ್ಧ ವ್ಯಾಪಾರ ಹಾಗೂ ಕಳ್ಳಸಾಗಾಣಿಕೆ ಅವಿರತವಾಗಿ ನಡೆಯುತ್ತಲೇ ಇದೆ. ಇಡೀ ಮಾನವ ಜನಾಂಗ ಈ ನಿಟ್ಟಿನಲ್ಲಿ ಜಾಗತಿಕ ಚಿಂತನೆ ನಡೆಸಿದ್ದು ಇದಕ್ಕೆ ಸೂಕ್ತ ಪರಿಹಾರವನ್ನೂ ಸಹ ನಿರಂತರವಾಗಿ ಯೋಚಿಸುತ್ತಿದೆ. ಮೊದಲನೆಯದಾಗಿ, ಅಂತರ್‌ರಾಷ್ಟ್ರೀಯ ಮಾರುಕಟ್ಟೆಯಲ್ಲಿ ಮಾರಾಟವಾಗುವ ಪ್ರಾಚ್ಯಾವಶೇಷಗಳನ್ನು ರಕ್ಷಿಸಬೇಕಾದುದು ತೀರ ಅಗತ್ಯವಾಗಿದೆ. ಈ ಬಗ್ಗೆ ವ್ಯಾಪಾರಿಗಳು ಮಾರಾಟಕ್ಕಿರುವ ಕಲಾತ್ಮಕ ವಸ್ತುಗಳ ವಿಶೇಷವಾದ ಕೈಪಿಡಿಗಳನ್ನು ಹೊರತರುತ್ತಾರೆ. ಇವುಗಳಲ್ಲಿ ಈ ವಸ್ತುಗಳ ವಿವರಣೆ ಹಾಗೂ ಅವುಗಳ ವಿಶೇಷ ಗುಣ ಲಕ್ಷಣಗಳನ್ನು ಸಹ ವಿವರಿಸಲಾಗುತ್ತದೆ. ಆದರೆ ಅವುಗಳು ಯಾವ ದೇಶದ ಮೂಲಗಳಿಂದ ಹಾಗೂ ಯಾರಿಂದ ಕ್ರೋಢಿಕರಿಸ ಲಾಯಿತೆಂದು ಪ್ರಕಟಿಸುವುದಿಲ್ಲ. ಇದನ್ನು ವಿಚಾರಿಸಿದಾಗ, ವ್ಯಾಪಾರದ ಧರ್ಮದ ಸೋಗಿನ ನೆಪದಲ್ಲಿ ಈ ಮಾಹಿತಿಯನ್ನು ನೀಡುವುದಿಲ್ಲ. ಪ್ರತಿಯೊಂದು ರಾಷ್ಟ್ರಗಳು, ಇಲ್ಲಿ ಮಾರಾಟಕ್ಕಿರುವ ವಸ್ತುಗಳು ತಮ್ಮದೇ ಎಂದು ಗುರುತಿಸಿದರೂ ಸಹ ಇಂತಹ ಕೆಲವು ಕಾರಣಗಳಿಂದ ಅವುಗಳನ್ನು ಪುನಃ ಸ್ವಾಧೀನಪಡಿಸಿಕೊಳ್ಳದೆ ಕೇವಲ ಮೂಕ ಪ್ರೇಕ್ಷಕರಾಗಿರುತ್ತಾರೆ. ಇದು ಸಾಂಸ್ಕೃತಿಕ ಸಂಪತ್ತನ್ನು ರಕ್ಷಿಸುವ ನಿಟ್ಟಿನಲ್ಲಿ ಹಿನ್ನಡೆ ಎಂದೇ ಹೇಳಬಹುದು. ಇಂತಹ ಸನ್ನಿವೇಶದಲ್ಲಿ ಅಂತರ್‌ರಾಷ್ಟ್ರೀಯ ಸಮುದಾಯಗಳು ಒಕ್ಕೊರಲಿನಿಂದ ಈ ಮಾರಾಟ ಕೇಂದ್ರಗಳ ಮನವೊಲಿಸಿ, ಇಲ್ಲವೇ ಒತ್ತಡ ಹೇರಿ ಈ ರೀತಿಯ ವಿವರಗಳನ್ನು ಬಹಿರಂಗ ಪಡಿಸಲು ಪ್ರಯತ್ನಿಸಬೇಕು. ಇಂತಹ ವಿವರಗಳು ಲಭ್ಯವಾದಲ್ಲಿ, ಸಾಂಸ್ಕೃತಿಕ ಸಂಪತ್ತಿನ ಪ್ರಾಚ್ಯಾವಶೇಷಗಳು ಯಾವಾಗ, ಯಾರಿಂದ, ಯಾವ ದೇಶದಿಂದ ಅಂತರ್‌ರಾಷ್ಟ್ರೀಯ ಮಾರುಕಟ್ಟೆಗಳನ್ನು ಪ್ರವೇಶಿಸುತ್ತವೆ ಎಂಬುದು ಖಚಿತವಾಗಿ ತಿಳಿಯುತ್ತದೆ ಹಾಗೂ ಕಳ್ಳಸಾಗಾಣಿಕೆಗೆ ಒಳಪಟ್ಟ ವಸ್ತುಗಳ ಪುನಃ ಸ್ವಾಧೀನ ಕೂಡ ಅಷ್ಟೇ ಸುಲಭವಾಗುತ್ತದೆ. ಇಂತಹ ವಿವರಗಳು ಖರೀದಿದಾರರನ್ನು ಸಹ ಎಚ್ಚರಿಸುತ್ತವೆ. ಈ ಪ್ರಯತ್ನಗಳಿಂದ ನಿಷಿದ್ಧ ವ್ಯಾಪಾರದ ಮೇಲೆ ಕಡಿವಾಣವನ್ನು ಹಾಕಬಹುದು.

ಸಾಂಸ್ಕೃತಿಕ ಸಂಪತ್ತಿನ ಪುನಃ ಸ್ವಾಧೀನ ಕೂಡ ಜಾಗತಿಕ ಮಟ್ಟದ ವಿಮರ್ಷೆ ಹಾಗೂ ಚಿಂತನೆಯನ್ನು ಒಳಗೊಂಡಿದೆ. ವಿದೇಶದಲ್ಲಿರುವ ಭಾರತೀಯ ಸಂಸ್ಕೃತಿಯ ಕುರುಹುಗಳು ಸ್ವಾತಂತ್ರಪೂರ್ವ ಹಾಗೂ ಸ್ವಾತಂತ್ರೋತ್ತರದಲ್ಲಿ ಕ್ರೋಢಿಕರಿಸ ಲಾಗಿದೆ. ಮೊದಲನೆಯ ಗುಂಪಿನ ಕಲಾತ್ಮಕ ವಸ್ತುಗಳ ಪುನಃ ಸ್ವಾಧೀನ ಆಯಾ ದೇಶಗಳ ಉದಾರತೆಯನ್ನು ಅವಲಂಬಿಸು ತ್ತದೆ; ಆದರೆ ಎರಡನೆಯ ಗುಂಪಿನ ವಸ್ತುಗಳು ಬಹುತೇಕ ಕಳ್ಳಸಾಗಾಣಿಕೆಗೆ ಒಳಪಟ್ಟಿದ್ದು ಅವುಗಳನ್ನು ದೇಶೀಯ ಹಾಗೂ ಅಂತರ್‌ರಾಷ್ಟ್ರೀಯ ನಿಯಮಾವಳಿಗಳ ಪರಿವಿಧಿಯಲ್ಲಿ ಪನಃ ಸ್ವಾಧೀನಪಡಿಸಿಕೊಳ್ಳಲಾಗುತ್ತದೆ.

ಭಾರತ ದೇಶವು ನಿಷಿದ್ಧ ವ್ಯಾಪಾರ ಹಾಗೂ ಕಳ್ಳಸಾಗಾಣಿಕೆಗೆ ಒಳಪಟ್ಟು ವಿದೇಶದಲ್ಲಿರುವ ಪ್ರಾಚ್ಯಾವಶೇಷ ಗಳ ಪುನರ್ ಸ್ವಾಧೀನಕ್ಕೆ ಅವಿರತವಾಗಿ ಪ್ರಯತ್ನಿಸುತ್ತಿದೆ. ವಿವಿಧ ದೇಶಗಳಲ್ಲಿ ಯಾವುದೇ ಕಡಿವಾಣವಿಲ್ಲದೆ ಸಾಂಸ್ಕೃತಿಕ ಸಂಪತ್ತಿನ ಆಮದು ಮತ್ತು ರಫ್ತುಗಳನ್ನು ನಿಯಂತ್ರಿಸಲು ಕರೆ ನೀಡುತ್ತಲಿದೆ. ಯಾವ ಯಾವ ದೇಶಗಳು ೧೯೭೦ರ ಯುನೆಸ್ಕೊ ಪ್ಯಾರೀಸ್ ಒಡಂಬಡಿಕೆ (Convention on the Means of Prohibiting and Preventing the Illicit Import, Export and Transfer of Ownership of Cultural Property)ಯ ನಿರ್ಣಯಗಳನ್ನು ಅಂಗಿಕರಿಸಿ ಲ್ಲವೋ ಆ ರಾಷ್ಟ್ರಗಳು ಆದಷ್ಟು ಬೇಗ ಕಾರ್ಯಪ್ರವೃತ್ತರಾಗಲೂ ಮನವಿ ಮಾಡುತ್ತಲಿದೆ. ಇದೇ ೧೯೭೦ರ ಪ್ಯಾರೀಸ್ ಒಡಂಬಡಿಕೆಯ ೭(ಬಿ) (೨) ನಿಯಮಾವಳಿಯಲ್ಲಿ ನಿಷಿದ್ಧ ವ್ಯಾಪಾರದಿಂದ ಪ್ರಾಚ್ಯವಸ್ತುಗಳನ್ನು ಖರೀದಿಸಿ ಅವುಗಳ ಒಡೆತನ ಹೊಂದಿರುವವರಿಗೆ ಸೂಕ್ತವಾದ ಪರಿಹಾರ ಕೊಡುವುದನ್ನು ಪುನಃ ಪರಿಶೀಲಿಸಲು ಪ್ರಯತ್ನವನ್ನು ಮಾಡುತ್ತಲಿದೆ. ಇವುಗಳೆಲ್ಲರ ಜೊತೆಗೆ, ಆಯಾ ದೇಶಗಳ ನ್ಯಾಯಾಂಗದಲ್ಲಿರುವ ಕಾನೂನಿನ ಸಮರಗಳು ಎಲ್ಲರಿಗೂ ತಿಳಿದಿರುವಂತೆ ವಿಳಂಬ ಹಾಗೂ ಅತ್ಯಂತ ದುಬಾರಿಯಾಗಿವೆ. ಇವೆಲ್ಲವೂ ಭಾರತೀಯ ಸಾಂಸ್ಕೃತಿಕ ಸಂಪತ್ತಿನ ಪುನರ್ ಸ್ವಾಧೀನದ ಪ್ರಯತ್ನದಲ್ಲಿ ತೀವ್ರ ಸ್ವರೂಪದ ವಿಘ್ನಗಳಾಗಿವೆ

ಆದರೂ ಭಾರತ ದೇಶ ತನ್ನ ಪ್ರಯತ್ನಗಳನ್ನು ಅವಿರತವಾಗಿ ಮುಂದುವರಿಸಿದೆ.

ಈ ಜಾಗತಿಕ ಮಟ್ಟದ ಚಿಂತನೆ ಹಾಗೂ ವಿಮರ್ಶೆ, ಸಾಂಸ್ಕೃತಿಕ ಸಂಪತ್ತು ಸಂಪದ್ಭರಿತ ದೇಶಗಳಿಂದ ಇಂಥ ಸಂಪತ್ತಿಲ್ಲದ ದೇಶಗಳ ಕಡೆಗೆ ಸಾಗುತ್ತಲೇ ಇದೆ ಎಂದು ಪ್ರತಿಪಾದಿಸಲಾಗಿದೆ. ಪ್ರತಿಯೊಂದು ರಾಷ್ಟ್ರವು ತನ್ನದೇ ಆದ ಕಾನೂನುಗಳ ವ್ಯವಸ್ಥೆಯನ್ನು ಹೊಂದಿವೆ. ಇದರ ಜೊತೆಗೆ ಅಂತರ್‌ರಾಷ್ಟ್ರೀಯ ಸಮುದಾಯದ ಸಲಹೆ ಮತ್ತು ಮಾರ್ಗದರ್ಶನಗಳೂ ಕೂಡ ಸಾಂದರ್ಭಿಕವಾಗಿ ಪ್ರಕಟವಾಗುತ್ತವೆ. ಹೀಗಿದ್ದಾಗ್ಯೂ ಸಹ ಸಾಂಸ್ಕೃತಿಕ ಸಂಪತ್ತಿನ ವಿನಾಶ ಹಾಗೂ ವಿಧ್ವಂಸಕ ಕೃತ್ಯಗಳು, ನಿಷಿದ್ಧ ವ್ಯಾಪಾರ ಹಾಗೂ ಕಳ್ಳಸಾಗಾಣಿಕೆ ಅವಿರತವಾಗಿ ನಡೆಯುತ್ತಲೇ ಇದ್ದು, ಕಡಿಮೆಯಾಗುವ ಲಕ್ಷಣಗಳು ನಿರೀಕ್ಷಿಸಿದಷ್ಟು ಪರಿಣಾಮಕಾರಿ ಯಾಗಿಲ್ಲ. ಆದ್ದರಿಂದ ಈ ಸಂದಿಗ್ಧ ಸಮಯದಲ್ಲಿ ಇಡೀ ಮಾನವ ಜನಾಂಗ ಒಟ್ಟಾಗಿ ಏಕಮೇವ ದೃಷ್ಟಿಯಿಂದ ಸಾಂಸ್ಕೃತಿಕ ಸಂಪತ್ತಿನ ರಕ್ಷಣೆಯತ್ತ ಗಮನಹರಿಸಬೇಕು. ಇದೊಂದು ಅಭಿಮಾನದ ಹಾಗೂ ಪವಿತ್ರವಾದ ಕರ್ತವ್ಯ.

## ಉಪಸಂಹಾರ

ಈ ಲೇಖನದ ಪ್ರಸ್ತುತ ವಿಚಾರಗಳು ಲೇಖಕರ ಸ್ವಂತ ಅಭಿಪ್ರಾಯಗಳಾಗಿದ್ದು, ಅವುಗಳು ತಾನು ಸೇವೆ ಸಲ್ಲಿಸುತ್ತಿರುವ ಭಾರತೀಯ ಪುರಾತತ್ವ ಸರ್ವೇಕ್ಷಣಾ ಹಾಗೂ ದೇಶ ವಿದೇಶಗಳ ಯಾವುದೇ ಸರ್ಕಾರ ಮತ್ತು ಸಂಘ ಸಂಸ್ಥೆಗಳ ಅಭಿಪ್ರಾಯ ಗಳನ್ನು ವ್ಯಕ್ತಪಡಿಸುವುದಿಲ್ಲ.

(ಭಾರತೀಯ ಪುರಾತತ್ವ ಸರ್ವೇಕ್ಷಣ ಹಾಗೂ ಅದರ ಮಹಾ ನಿರ್ದೇಶಕರಾದ ಡಾ. ಎಸ್.ವಿ.ಪಿ. ಹಳಕಟ್ಟಿ, ಟಿ. ಎಂ. ಕೇಶವ ಹಾಗೂ ಎಂ.ವಿ. ವಿಶ್ವೇಶ್ವರ ಅವರುಗಳು ಹಸ್ತಪ್ರತಿಯನ್ನು ಓದಿ ಅನೇಕ ಸಲಹೆಗಳನ್ನಿತ್ತಿದ್ದಾರೆ ಹಾಗೂ ಕೃಷ್ಣ ಅವರು ಅನೇಕ ರೀತಿಯಲ್ಲಿ ನೆರವಾಗಿದ್ದಾರೆ. ಈ ಎಲ್ಲರಿಗೂ ಕೃತಜ್ಞತಾಪೂರ್ವಕ ಧನ್ಯವಾದಗಳು.)



## ಆಧಾರಸೂಚಿ ಮತ್ತು ಟಿಪ್ಪಣಿಗಳು

1. Manjhi, Hari and Patil., C.B. 2002, *Commercialization and Illicit Trafficking of Antiquities in Maragabnandhu*. C. et (ed) Puraratna : *Emerging Trends in Archaeology. Art, Anthropology*, Conservation and History (In Honour of Shri Pagat Patil Joshi), Vol. III. Delhi, Agam Kala Prakashan: 738-41.
2. Patil. C B., 2006 · *Protection of Cultural Property via-a-vis Antiquarian Legislation's and People in India*. Banerji. Arundhati (ed.). *Hari Smriti . Studies Art. Architecture and Indology*. New Delhi Kaveri Books.
3. Misra. C B 1996-97 · *Illlcit Trafficking in Indian Antiquities* : Problems and Challenges. *Puratattva*. 27 67-73

## HIGHLIGHTS

### Presidential Speech

*Prof. Lakshman Telagavi*

***Historical Evolution and Vijayanagara***

Prof. Lakshman Telagavi opines history is study of organised thinking of human ideas. The civilised society which had its earliesd dark ages, has not been either analysed or viewed by earlier studies. Unless the uncivilised period is understood, evolution of the history of human society can not be properly understood. The history of civilised and uncivilised period has to be study in the present day of disciplines. It is interpreted that the uncivilised age is one of hard labour or mechanical labour, while the historical age is one of cultural development. But it should be understood that this cultural development owes it self to this ancient hard labour age.

Starting from Mourya period upto Vijayanagara, the history has expendend in various and numerous ways. But the neglected history of the common man has to be taken care in order to construct the integral history. It is also true that the historical facts hither to recorded is again and again is being repeated inspite of new facts have been discovered and putforth. Any how some historians in the modern period are attempting in this direction, is a wellcome feature. Even the folk factors and records are playing in important role now a days parallel to the written history records.

Prof. Lakshman Telagavi also techs the history of vijayanagara period and is letter historical developments, especially with reference to Nayankar system (Paleyagar system), which had its culmination in reign of Krishnadevaraya . After the fall of vijayanagara this system found is declin The cultural facetes in all aspects in the system has to be taken note of, so that our common man history will impart its own cultural contribution, which is afterall a required welcoming aspect.

*

Dr. B.R. Gopal Award Special Lecture

*by Dr. H.S. Gopala Rao*

**The study of Epigraphical record and its dimesions**

Dr. Gopala Rao says the inscriptions grab our attention not becaus there supply information political history but they help us to know ancient social life. Whether it is Pulikeshi of Badami Chalukyas or Krishnadevaraya of Vijayanagara may not be verymuch impartent compare to the life of the people of ther times. Even today we now the history of Karnataka only above seventy percent from literary and other sources. But the inscriptions furnishes almost a correct historical informations. As a result the study of cultural and social history would be enriched with the help inscriptions. To know the state of Kannada literature before kaviraja marga. A best example will be from the Shravanabelagola inscription (700 A.D.-Surachapambole. .). That means, the India has history, Karnataka also has history. Karnataka now has sufficient number epigraphists who can take care of epigraphical studies, and contribute to the future evolution of history and social life.

## 1. Cave Paintings and Pre-historic Materials at Burudekatte

*Burudekatte Manjappa*

The author has described in the cave paintings like hunters, sun and bird figures at Burudekatte area. On the basis of the style of the paintings he fixes them to historic period. in addition to this he has presented the list of caves vogue in the area, the bone pots found in the respective places.

## 2. Pre-historic relies at Harthikote

*Dr. S.G. Ramadasa Reddy*

Dr. Reddy has given a comparitive descriptions of the relics found at Harthikote. He has categorised the availability of the relics since neo-lithic age and described the features of the potsheds, shivalinga, bricks Etc., found there and campare them with the available information of other sites in the country.

## 3. The old relies discovered in Bangalore city and Ramanagaram Districts.

*Muthuraju*

Sri Muthuraju has described the features of pre historic cists, tombs, hero stones and masti gals of 12-14th Century, discovered by him in the village and city area of the two districts. Some of them are quite interesting and present the special features, indicating the historical incidents thas might have taken place in the area.

## 4. Newly Discovered Megalthic Sites of Nerenalu in Chitradurga Tq.

*Dr. S.Y. Somashekhar*
*Dr. S. Thippeswamy*

The authors have recently discovered the remnanants of Neolithic culture, along with Megathic culture at Neranalu and Dodda Marodi villages in chitradurga district. It is very interesting to note, two habitation sites and three bural aites of Megatic period where the stone circles are found in ptenty. it is very interesting to note that they are found in adjascent places., The social aspects connected with the relics have also been furnished.

## 5. The relics of Bevur village

*Ashok Kandagalla*

Sri Ashok has described the historical antiquities like heros stones temples, Sculptures like Ganapathi, Naga Shilpa, Lingam, Mahisha Mardini, Bhairawa and old well etc, in a simple expression, found at Bevur.

## 6. The archaeological and historical study of Konasagar area

*Dr. Virupaksha Poojarahalli*

Dr. Virupakshi has explained the tribal residences, conflictis of the by gone days and relics found in the konsagara area. The megalithic and neolithic relics found also have been brought to the notice. The conflict occured between two groups of modern period have also been presented.

## 7. Antiquities of Burudekatte Village

*Dr. B. Suresh*

Dr. Suresh has described the architecture of Ramalingeshwara temple, and sculptures available in the temple. He has furnished the texts of newly noticed inscriptions belonging to the a 11th century AD.

## 8. Antiquities of Bhairavapada in Harihara temple

*Rakesh B.C.*

Bhairavapada, now a Bechirak village in Harihara tq. has only a temple and few modern irrigation structures. People throng in good numbers during sankramana, as the place is stuated on the banks of Tungabadra, The temple facing west has the Bhairavapada, the sacred foot prints wound with a serpant hood is also seen lying here an inscription of 12th century on is base. Vishnu sculture is also found near the temple.

## 9. Sun worship in Shimoga Region

*Dr. Channaka Pavate*

Dr. Channaka explains : Sun worship is a very old tradition in India. There are reference to solar cult and worship in folklore & classical literature, and also in epigraphs, sculpture and religious striptures. The inscriptions found at Nagavanda Baher, Mugur, Belagutti, Tilavalli, Santeshivara, Kaujageri, Narendra etc., are the typical examples. Devotees enters fire on the occassion of solar eclipse to attain salvation-a common belief held in those days by the religious minded people of solar cult. Besides there are Kirana sthambas, erected in front of the temple by the devotees. This reflects the popularity of this cult in ancient and medieval Karnataka.

## 10. Sujeru inscription of Alupa Bamkideva

*Dr. P.N. Narasimamurthy*

Rarely inscriptions speak of natural calamities. Here is an inscription which inforsus of a calamity of this type. It hails from sujeru, a place in Buntwal taluk of D.K. District. Costal Karnataka ruled over by the Alupas in ancient times, is a land rarely withnessed by the falure of rains. But it happened once and made both the people

and animals suffer. The king Alupa Bankideva prayed for the mercy of God. The rains came and the sufferings came to an end immediately. The king fulfilled his vow by making land grants to the God Timiresvara The sujeru inscription dated AD 1305 august 15, Sunday speaks of this.

### 11. Jaina Inscriptions of Chalukya Vikramaditya VI

***D.M. Nagaraju***

One of the oustanding rulers of Karnataka, was Vikramaditya VI of the later chalukyas of Kalyana. During his long reign he has issued more than 1000 inscriptions. He, his harem and his ministers patronised Jainism. According Inscriptions of his period the patronag was extended by the socitety to the various subsecs of this religion vividly with minute details. A thorough study of his eipgraphs do throw welcome light on the conditions that prevailed during the period.

### 12. A new inscription of Chikkabangere, Sira Tq.

***Dr. N. Nandishwara***

The inscription discovered on the panipeetha by the author belongs to vijayanagara period (A.D. 1508). It mentions that while Rolleya Kamayanayaka ruling chikkabanagere, Devaranagaiah, had the gowdike and gopnna constructed keshava temple. The author indicates that Kamayanayaka was the chieftain of Nidugal.

### 13. Unpublished inscription of Mallata village

***Dr. Channabasappa. B.***

Dr. Channabasappa has described the historical geographical and cultural importence of the text of the inscriptions of Mallata village. He has also described the reign of Hyhaya dynasty in the area. The temples found in the area also have been brought to the notice.

### 14. Two Unpublished inscriptions of Kalakaleshwara

***Dr. Mallikarjuna Kambara***

The author has furnished a brief note of the inscription already published and in this background, the purport of the new inscription discovered has also been given. Accordingly one Mallik saheb and his subordinate officer yakoob is said to have constructed a 'mantap' of kalakaleshwar. The yati couple sculpture has also been found and the author says that name of the yati is Baharasi Bhatar.

### 15. A copy of the unpublished inscription of Hoysala Veeraballala-II

***Santhebennur Sumathindra Nadig***

Sri Nadig has presented the details of a copied unpublished inscription in the reign of Veeraballala-II, Which purports to say about endowed Agrahara of suragiri to the God Siddeshwara. He wishes to prove the similarity of Siddeshawara of sannabetta on the bank of sulekere and Siddeshwara mentioned in the inscription. The inscriptions kaifiath and architecture have been used as sources for his presentation.

### 16. The unpublished Gullada Mane inscriptions

***Dr. D.V. Paramashivamurthy***

The author has presented an unpublished inscription namely, 'Gullada Mane of Shivaistic inscription' and explains the reign of Hoysala Narasimha. The place name also has been derived and the author brings to our attention 'Gangana Gale', a measuring scale hither to not furnished in any other inscription.

### 17. An unpublished inscription from Chadachana

***Dr. S. K. Melakara***
***Dr. R.M. Shadaksharaiah***

The authors have putforth that, a new inscription has been discovered and added to the series of new 5 inscriptions already published at Chadachana. On the hasis of these inscriptions the title of kannamarasa the father of Mahamandaleshwara of Jogamarasa, the areas he won, the sub capital ruled have been indicated and the fresh light an this royal family have been shed. The hero stones, Jaina & Shaiva sculptures explained also attracts our intellectual attention.

### 18. One more unpublished bronze inscription from Bhishtappaiah's house

***Harihara Srinivasan***

Srinivasarao says that the inscription has five lines which says the two Kanduga paddy has to be donated to one Panibhatta every year. He forther furnishes that the Rayagoupara of Virupaksha temple was constructed by Bhishtappaiah alone and not by Krishnadevaraya as informed in a recent nowel.

### 19. A new inscription related of chitradurga palegars and Guthi Kings

***Dr. B. Rajashekharappa***

Dr. Rajashekharappa has shown the relative importance of the hormany existed between the king Murahari Rao Gorpade of Guthi in Andrapradesh and Kasturi Rangapha Nayaka of Chitradurga. The inscription discovered is a testimony for this cordial relationship. The historical events occurred between the two chieftains, ups

and downs in their relationships have also been well referred in this essay.

**20. A Chudike inscription of Chitradurga Chieftains' period**

*Dr. M. Girijapathi*

The author has presented a new chaudike inscription pertaining to the period of Bharamappa Naika the chieftain of Chitradurga form A.D. 1699-1721. It is a donated choudike to one varada parasuramaiah to offer the service to Ucchangamma and Guthiamma the village dieties.

**21. A land donated record by Mumadi Krishnaraja Odyar to Uravakonda Gavimutth Swamiji**

*Dr. B. Nanjundaswami*

The author says tradition of donating villages and lands to Virashaiva guru (preceptors) and Jangamas by kings for the sacred of their parents was in vouge. One such donation offered by Mumadi Krishnaraja Odeyar to Channabasava Swami of Oravakonda Gavimutth has been furnished in this essay duly giving the complete text of the donation.

**22. Relics and records of Hulimanappa Mutt, Ramagad**

*Dr. Girija*

The author has presented the inscriptions pertaining to the Hulimanappa mutt. She has explained in particular about Murujavideva,Chikkeshwaraswamy and Hulimanappa, and records pertaining to them. The sculpture of Hulimanappa has been briefly explained along with the myth attached to him and the placename attrihbuted in this connection.

**23. The Hero Stones and Nisidi inscription of Uttangi**

*N.S. Verash Uttangi*

The author has described the sculptural characteristics of the hero stones and Nisadi gals found at uttangi. The migration and conversions of jains to other faiths have been analyses and continuence of the practices vougue in their times.

**24. The Hero Stone inscription and sculpture of Dodda Palanahalli**

*Dr. P.V. Krishnamurthy*

Dr. Krishnamurhty has discovered an inscription in the area where Kumaraswami temple is present. The purport of inscription is that five heros of the village have fought in a war and died. The inscription probably belongs to early of the years of 14th century, lithographiclly (1343 A.D.) which is the period of Hakka and Bukka. (lithographiclly this period even can be preponed to the end of 13th century.)

This hero stone has three stages of sculpture as found in the normal course. But the special feature is that a yati is worshipping linga and a dwarf figure is blowing a conch standing behind him.

**25. Two unpublished hero-stone inscriptions of Hosanagar Tq**

*Jayadevappa Jainakeri*

Sri Jayadevappa along with Dr. Jagadesh has discovered two new hero-stone inscriptions at Hugudi and Herejeni villages. Hugadi hero-stone inscription indicates a death of a hero fighting againist cattle raid. The second one deals with and endowment by permadi shantaradeva to Heggades of Hirejeni and different kinds of taxes vouge in the area.

**26. Newly discovered memorial inscriptions of Hosur**

*Prof. M.S. Naregal*

Hosur, in Gadag taluk has yielded five newly discovered memorials duly inscribed. The tiger hunting hero stone with inscription, standing near the ruined shiva temple of 13th AD; If the Naga stone inscription refer to the instalation of naga stone by Hemmadi Dandanayak the nisidige inscription also of 13th century AD records the demise of a merchant by observing sallekhana ritual. The other two memorial stone's are significant, for one refer to a certain peasant's demise, another having the caruns of two peacock with chauri bearers indicating the attainment of heaven by the peacoks. But the reason for their death is not known. But still it is a unique example as for peacocks memoral.

**27. A Hero inscription from Madalur (Srirangapura)**

*Dr. Kareppagowda C. Patil*

This Hero stone inscription, already reported, yet unpublished, is standing in front of the siddeshwara temple at madaluru (Srirangapura) a village situated 10 km form savasdatty in Belgaum district. It refers to the 16th year of Chalukya Tribhuvanamala Vikramaditya VI's rule-29th February 1092. It states that certain kuremba galiga attacked Jakkiwada. Somagaunda of Jakkiwada forght bravely like aruna, Rama and Parasurama, fell in the battle field after kiling reveral soldiers and attained the Indra Lokha.

**28. An inscription at Eranna Devara gudda at Devadurga- A Study**

*Dr. H. Chandrashekhara*

Dr. Chandrashekar has analysed the contents of the inscription verymuch to the text of the inscription and shows the concurrencenes to the temple, tanks, wells,

sculptures, tombs, palace relics etc., existing till the date. He has also ellicited the history of keshalaya gowda the founder of devadurga and duly furnishing his dynasty tree.

**29. The religious conflicts in inscriptions**

***Dr. J.M. Nagaiah***

Dr. Nagaiah has explained the reasons behind religious conflicts from time immemorial. It was common among Hindus, Veerashaivas, Buddists and Muslims. Still the Indian culture the author opines has sustained all these conflicts and led the harmonious life. The author has cited profusely from inscriptions and pictured the nature and extent of the conflicts.

**30. Copper plate of Belmannu - A cultural view**

***Indira Heggade***

Smt. Heggade has presented the cultural affiliations that Belmannu has in folk practices, and diety's devotional aspects. The alades being the original spots of diety's locations worshipped by the respctive devotees according to their beliefs since a long period. The author has furnished the inscriptional applications from which regime of Nandalike and Belmannu chieftaincy have been highlighted. She has interwoven the folk aspects and historical aspects with cultural practices vogue in the area.

**31. Tax concession on backward classes found in inscriptions**

***K.M. Shivalingaiah***

The author deals with inscriptional evidences regarding the tax concessions given to the backwards clases of the period like Nayindas, Washermen, Carpenters, Kurubas Etc., in Ballari and Koppala District. The author has used the source form the Epigraphia Volums I of Kannada vishwavidyala for his essay.

**32. Ilakal Hill of Batavadi inscription**

***Dr. B.S. Shamala Ratnakumari***

The author has identified the location of the Ilakal Hill (which is already in vogue among folk) as mentioned in the choudeshwari temple inscription of Batavadi, a village now an extenson in Tumkur town. The relics of the Rameshwara temple found on the hill and myths attached to the cave and puranic story attached of the and black stretch here, the kalyani there has been furnished in this essay.

**33. The coins of Santaras, ViraNolamba and other karnataka chieftains**

***Mandarke Nityananda Pai***

The author has fully furnished the pictorial details of the coins belonging to santaras, vira nolamba, Belur and Channapatna chieftains. The histrocial events based on the coins have been presented. The legend and symbols carved on the coins have also been explained. He firmly argues about the existence of the coin of Jagadevaraya the chieftain of Channapatna.

**34. Tax collecting officials in Belagavi area**

***Dr. Smitha Surebhankar***

Dr. Smitha Surebankar has described the different types of taxes levied and officials appointed who war collecting the same as noted in inscriptions at Belagavi area. Even lady tax collecting officials were existing during kadamba period. The author has also furnished the troubles encountered during tax collection by the officials.

**35. The Shaiva sub-temples and dieties**

***Dr. K.S. Aparna***

Dr. Aparna as concentrated har eassy on the architecturl and sculptural aspects of the sub temples and dieties found in the cultural phenomenon of our land duly extactraing the same from authorised sculptural-shilpa texts like kamikagama, karanagama, ajithagma etc., She also furnishas the inception and evolution of these sculptural representation of our culturel.

**36. The ancient temples of Ingaleshwara**

***Adappa Pasodi***

Sri Pasodi has described the architectural and sculptural dieties of the temples at Ingaleswara with a historical background. Expecially he has described the Tripursha temple with due technical details.

**37. The architecture of Ramalingeshwara of kota and Sangameshwara of Hirehesarur**

***Dr. Ramu Hasanappa Sajjan***

Dr. Sajjana has explained the architectural characteristics of Ramalingehwara and Sangameshwara temples of kota and Herehesarur repectively. especialy the pillar architeture described in is essay is interesting.

**38. The temples of Talikote**

***Shivappa N. Niralgi***

Sri Niralagi presents an itroductory review of the temples existing at Talikote since the reign of Badami Chalukyas, Rastrakotas, Kalyana Chalukyas, Nolambas, etc., up to Bijapur sultans and peshwas. In particular Ramalingeshwara, Siddalingeshwara, Virabhaiseshwara temples; sculptures like kalamukha, Ganesha, Naga have been explained. A curious note an pancha peera shahida durga has been furnished. The role of veera maheshwaras has also been acknowldge.

